# ಪುರಸ್ಕಾರ



“ಗುರುಚರಿತ್ರ” ವು ಕಲಿಯುಗದೊಳಗಿನ “ಕಾಮಧೇನು” ವಾಗಿದೆಯೆಂದರೆ ಅತಿಶಯೋಕ್ತಿಯಾಗಲಾರದು. “ಸಕಾಮ ಭಕ್ತ” ರು ಇದರ ಪಾರಾಯಣದಿಂದ ಧರ್ಮ, ಅರ್ಥ, ಕಾಮ ಎಂಬ ತ್ರಿವಿಧ ಪುರುಷಾರ್ಥಗಳನ್ನು ಪಡೆಯುತ್ತಿರುವದು ಅನುಭವಸಿದ್ಧವಾಗಿದೆ. “ನಿಷ್ಕಾಮ ಭಕ್ತ” ರು ಇದರ ಸರಿಯಾದ ಅನುಷ್ಠಾನದಿಂದ ಮೋಕ್ಷ ಸುಖವನ್ನು ಹೊಂದಬಹುದಾಗಿದೆ. ಈ ಮಾತನ್ನು ಗುರುಚರಿತ್ರೆಯಲ್ಲಿಯೇ ಸ್ಪಷ್ಟವಾಗಿ ವಿವರಿಸಲಾಗಿದೆ.

ಗುರುಚರಿತ್ರ ಪಠಣವು ಬಹಳ ಸುಲಭವಾದ ಸಾಧನವಾಗಿದೆ ಹೃದಯ–ಭಾವವಿದ್ದ ಯಾವ ಸಾಧಕರೂ ಇದನ್ನು ಅನುಸರಿಸಬಹುದಾಗಿದೆ. ಗುರುಗಳ ಚರಿತ್ರೆಯನ್ನೋದಿದ ಹೊರತು ಗುರುಗಳ ಬಗ್ಗೆ ಪ್ರೀತಿ, ಆದರ, ಭಕ್ತಿಭಾವಗಳು ಹುಟ್ಟಲಾರವು ಗುರುಭಕ್ತಿಯಿಲ್ಲದವನಿಗೆ ಗುರುಗಳ ಮಾರ್ಗದರ್ಶನ ಸಿಕ್ಕಲಾರದು. ಸರಿಯಾದ ಮಾರ್ಗದರ್ಶನವಿಲ್ಲದವನು ತನ್ನ ಇಚ್ಛಿತ ವಸ್ತುಗಳನ್ನು ಪಡೆಯುವದು ಅಶಕ್ಯಪ್ರಾಯವೇ ಸರಿ.

ಮೂಲ ಗುರುಚರಿತ್ರೆಯು ಮರಾಠೀ ಭಾಷೆಯಲ್ಲಿದೆ ಅದನ್ನು ಬರೆದ ಸರಸ್ವತೀ ಗಂಗಾಧರನು ಶುದ್ಧ ಕನ್ನಡಿಗನು. ಆದರೆ ಶ್ರೀ ಗುರು ಪ್ರೇರಣೆಯಿಂದ ಅವನು ಮರಾಠಿಯಲ್ಲಿ ಬರೆದನು. ಅವರಿಂದಾಗಿ ಆದರ ಸರಿಯಾದ ಲಾಭವು ಕನ್ನಡವನ್ನು ಮಾತ್ರ ಬಲ್ಲ ಭಕ್ತರಿಗೆ ಸಿಕ್ಕದಂತಾಗಿತ್ತು. ಈ ಕೊರತೆಯನ್ನು ಈ ಪುಸ್ತಕವು ದೂರ ಮಾಡುತ್ತದೆ. ಕನ್ನಡ ಭಕ್ತರು ಈ ಪುಸ್ತಕವನ್ನು' ಬರೆದವರಿಗೂ ಪ್ರಕಾಶಕರಿಗೂ ಕೃತಜ್ಞರಾಗಬೇಕಾಗಿದೆ.

ಇಲ್ಲಿ ಪ್ರಕಟಿಸಲಾದ ಗುರು ಚರಿತ್ರೆಯು ಕನ್ನಡ ಭಾಷಾಂತರ ಮಾಡಿದವರು ಸ್ವತಃ ಶ್ರೇಷ್ಠ ತರಗತಿಯ ಗುರುಭಕ್ತರಾಗಿದ್ದರು. ಅವರ ಹೆಸರು ಶ್ರೀ ದತ್ತಾತ್ರಯ ಕೇಶವ ರಂಗಾಪೂರ ಅವರು ಕನ್ನಡ ಶಾಲೆಯಲ್ಲಿಯ "ಗುರೂಜಿ" ಯಾಗಿದ್ದರು. ಅವರು ಗುರುಪ್ರೇರಣೆಯಿಂದ ಶ್ರೀಕ್ಷೇತ್ರ ಗಾಣಗಾಪುರದಲ್ಲಿ ಇದರ ಪಾರಾಯಣವನ್ನು ಅನೇಕ ಸಲ ಮಾಡಿದರು. ಅಲ್ಲಿಯೇ ಅವರಿಗೆ ಈ ಅನುವಾದ ಮಾಡುವ ಸೂಚನೆಯೂ ಆಯಿತು. ಅದಕ್ಕನುಗುಣವಾಗಿ ಅವರು ಇದನ್ನು ಬರೆದು ಗುರುಗಳಿಗೆ ಒಪ್ಪಿಸಿದರು ಗುರುಗಳು ಅವರಿಗೆ ದೃಷ್ಟಾಂತ ಕೊಟ್ಟು "ಮರಾಠಿಯನ್ನರಿಯದವರು ನಿನ್ನ ಅನುವಾದವನ್ನು ಓದಿ ಕೃತಾರ್ಥರಾಗುವರು" ಎಂದು ಅನುಗ್ರಹಿಸಿದರು.

ಅನುವಾದವನ್ನು ಬರೆದವರು ಇಂದು ಇದರ ಪ್ರಕಟನೆಯನ್ನು ನೋಡಿ ಸಂತೋಷಪಡಲಿಕ್ಕೆ ಜೀವಿಸಿಲ್ಲವೆಂಬುದು ವಿಷಾದದ ಸಂಗತಿ. ಆದರೆ ಅವರ ಚಿರಂಜೀವರಾದ ಶ್ರೀ ಕೇಶವ ಜೀವುಬಾಳಭಟ್ಟ ರಂಗಾಪೂರ ವ ಶ್ರೀ ರಾಮಚಂದ್ರ ದತ್ತಾತ್ರೇಯ ರಂಗಾಪೂರ ಅವರು ಈ ಬಗ್ಗೆ ಆಸ್ಥೆವಹಿಸಿ ಇವರ ಪ್ರಕಟನೆಗೆ ಅನುಮತಿ ಕೊಟ್ಟಿದ್ದಕ್ಕಾಗಿ ಅಭಿನಂದನಾರ್ಹರಾಗಿದ್ದಾರೆ

ಅವರು ಅನುವಾದವನ್ನು ಬರೆದು ಸುಮಾರು ೧೫ ವರುಷಗಳಾದವು. ಆದರೂ ಅದನ್ನು ಅಚ್ಚುಹಾಕಿಸಿ ಪ್ರಕಟಪಡಿಸುವ ಯೋಗವು ಬಂದಿರಲಿಲ್ಲ ಇಷ್ಟು ದೊಡ್ಡ ಪುಸ್ತಕವನ್ನು ಈಗಿನ ದಿನಗಳಲ್ಲಿ ಅಚ್ಚು ಹಾಕಿಸುವದೆಂದರೆ ಸಾಹಸದ ಕೆಲಸವೇ ಸರಿ. ಈಗ ಈ ಕೆಲಸವನ್ನು ಕೈಕೊಂಡ ಶ್ರೀ ಚಿ. ಶ್ರೀ. ಕುಲಕರ್ಣಿಯವರೂ ಗುರುಭಕ್ತರಾದುದರಿಂದ, ಕೇವಲ ಗುರುಸೇವೆ ಮಾಡಬೇಕೆಂಬ ಬಾವನೆಯಿಂದಲೇ ಬಹಳ ಹಣ ಖರ್ಚುಮಾಡಿ ಕನ್ನಡಿಗರ ಮೇಲೆ ಉಪಕಾರ ಮಾಡಿದ್ದಾರೆ. ಇದರ ಪೂರ್ಣ ಲಾಭವನ್ನು ಕನ್ನಡಿಗರು ತಕ್ಕೊಳ್ಳಬೇಕೆಂದು ನಾವು ಶಿಫಾರಸು ಮಾಡುತ್ತೇವೆ. ದೇವರು ಶ್ರೀ ಚಿ. ಶ್ರೀ. ಕುಲಕರ್ಣಿಯವರಿಗೆ ಆಯುರಾರೋಗ್ಯಗಳನ್ನು

ಬೆಳಗಾಂವ

† ದಿಗಂಬರಾ ದಿಗಂಬರಾ †

† ಶ್ರೀಪಾದವಲ್ಲಭ ದಿಗಂಬರಾ †

ಕೊಟ್ಟು, ಅವರ ಕಡೆಯಿಂದ ಇನ್ನೂ ಹೆಚ್ಚಾಗಿ ಗುರುಸೇವೆಯು ಆಗುವಂತೆ ಅನುಗ್ರಹಿಸಲೆಂದು ದೇವರಿಗೆ ಬೇಡಿಕೊಳ್ಳುತ್ತೇವೆ.

**ನಾರಾಯಣರಾವ ರಾಮಚಂದ್ರ ಕುಲಕರ್ಣಿ**
ಪ್ರಿನ್ಸಿಪಾಲ,
ಜೆ. ಎಸ್. ಎಸ್. ಲಾ ಕಾಲೇಜ, ಧಾರವಾಡ.

**ಭಾಲಚಂದ್ರಶಾಸ್ತ್ರಿ ನಾಗೇಶಶಾಸ್ತ್ರಿ**
ಮುಖ್ಯಾಧ್ಯಾಪಕ,
ಶ್ರೀ. ಜ. ಶಂ. ಸಂಸ್ಕೃತ ಪಾಠಶಾಳಾ, ಧಾರವಾಡ.

ಶಕೆ ೧೮೭೯
ಹೇಮಲಂಬಿ ಸಂವತ್ಸರ
ಮಾರ್ಗಶಿರ್ಷ, ಶು ೧೫
ತಾ ೬-೧೨-೧೯೫೭

---

+ ದಿ ಗಂ ಬ ರಾ ದಿ ಗಂ ಬ ರಾ +

+ ಶ್ರೀ ಪಾ ದ ವ ಲ್ಲ ಭ ದಿ ಗಂ ಬ ರಾ +

# ಪ್ರಕಾಶಕರ ನಿವೇದನೆ

ಶ್ರೀ ಗುರುಚರಿತ್ರೆಯು ಪ್ರಾಕೃತದಲ್ಲಿ ಪ್ರಾಸಾದಿಕ ಗ್ರಂಥವು. ಕನ್ನಡ ಭಕ್ತವೃಂದಕ್ಕೂ ಅಂಥ ಗ್ರಂಥ ವನ್ನು ಸಮರ್ಪಿಸಬೇಕೆಂದು ಎನ್ನ ಬಹುದಿನದ ಹಂಬಲು ಇಂದು ಈಡೇರಿತು ಪ್ರಿನ್ಸಿಪಾಲ್ ಕುಲಕರ್ಣಿ ನಾರಾಯಣರಾಯರು, ಲಾ ಕಾಲೇಜ ಧಾರವಾಡ, ಹಾಗೂ ಬ್ರಹ್ಮಶ್ರೀ ಭಾಲಚಂದ್ರ ಶಾಸ್ತ್ರಿ ಉಪ್ಪಿನಬೆಟಗೇರಿ ಯವರ ಕೃಪಾಪ್ರಸಾದದಿಂದ ಈ ಗ್ರಂಥವು ಶ್ರೀ ರಾಮರಾವ ದತ್ತಾತ್ರಯ ರಂಗಾಪೂರ, ಇವರಿಂದ ಎನ್ನ ಕೈಸೇರಿತು. ಇದನ್ನು ದತ್ತಭಕ್ತರಾದ ಗು. ಭ. ಕೈ। ವಾ। ದತ್ತಾತ್ರಯ ಕೇಶವ ರಂಗಾಪೂರ ಮಾಸ್ತರರು ಗಾಣಗಾಪುರದಲ್ಲಿ ಕುಳಿತು ದತ್ತಾಜ್ಞೆಯಂತೆ ಕನ್ನಡಿಸಿರುವರು. ಆದರಿಂದ ಇದು ಮರಾಠಿಯಷ್ಟೇ ಪ್ರಾಸಾದಿಕ ಗ್ರಂಥ ವಾಗಿದೆ. ಆದಕಾರಣ ಈ ವರೆಗೆ ಕನ್ನಡದಲ್ಲಿ ಅನೇಕ ಗುರುಚರಿತ್ರೆಯ ಗ್ರಂಥಗಳಿದ್ದರೂ ಇದನ್ನು ಅಚ್ಚು ಹಾಕಿಸುವ ಹವ್ಯಾಸಕ್ಕೆ ಬಿದ್ದೆವು. ಮರಾಠಿಯಲ್ಲಿಯ ಪ್ರತಿ ಶ್ಲೋಕಕ್ಕೂ ಕನ್ನಡದಲ್ಲಿ ಪ್ರತ್ಯೇಕ ಶ್ಲೋಕ ನಂಬರು ಹಾಕಲಾಗಿದೆ.

ಈ ಗ್ರಂಥ ಮುದ್ರಣ ಕಾರ್ಯದಲ್ಲಿ ನೆರವಾದ ಶ್ರೀಯುತ ಎಮ್ ಜಿ. ವಾಲೇಕರ, ವಸಂತ ಮುದ್ರಣಾಲಯ ಧಾರವಾಡ ಹಾಗೂ ಪ್ರೂಫ ತಿದ್ದುವ ಕೆಲಸದಲ್ಲಿ ನೆರವಾದ ಶ್ರೀಯುತ ಕೇಶವರಾವ ರಂಗಾಪೂರ, ವ. ಬ್ರ॥ ಶ್ರೀ॥ ಶಂಕರ ದೀಕ್ಷಿತ ಕರ್ಮರ, ಬಂಕಾಪೂರ ಇವರಿಗೆ ನನ್ನ ಅನಂತ ಅಭಿನಂದನೆಗಳು. ಶ್ರೀಯುತ ಕುಲಕರ್ಣಿ ನಾರಾಯಣರಾಯರಿಗೂ, ಬ್ರಹ್ಮಶ್ರೀ ಭಾಲಚಂದ್ರ ಶಾಸ್ತ್ರಿಗಳಿಗೂ ನಾನು ಚಿರಋಣಿಯಾಗಿರುವೆನು. ಈ ಆವೃತ್ತಿಯ ಪ್ರಕಟನೆಯ ಅಧಿಕಾರ ಮಾತ್ರ ನಮಗೆ ಸೇರಿದ್ದು. ಉಳಿದ ಎಲ್ಲ ಹಕ್ಕು-ಬಾಧ್ಯತೆಗಳು ಶ್ರೀ. ರಾಮರಾವ ದತ್ತಾತ್ರಯ ರಂಗಾಪೂರ ಇವರಿಗೆ ಸೇರಿವೆ.

ಸಜ್ಜನರ ಊಳಿಗದಾಳು,

ದತ್ತ ಜಯಂತಿ
ತಾ. ೬-೧೨-೧೯೫೭

ಚಿ. ಶ್ರೀ. ಕುಲಕರ್ಣಿ

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

# ಪ್ರಾರ್ಥನಾ



ಶ್ರೀ ಗಣೇಶಾಯ ನಮಃ । ಆಚಮ್ಯ ಪ್ರಾಣಾನಾಯಮ್ಯ । ದೇಶಕಾಲೌ ಸಂಕೀರ್ತ್ಯ । ಶುಭ ತಿಥೌ । ಮಮ ಆತ್ಮನಃ । ಶ್ರೀ ಗುರು ದತ್ತಾತ್ರೇಯ ಪ್ರೇರಣಯಾ । ಶ್ರೀ ಗುರು ದತ್ತಾತ್ರೇಯ ಪ್ರೀತ್ಯರ್ಥ । ಶ್ರೀ ಗುರು ಚರಿತ್ರ ಸಪ್ತಾಹ ಪಾರಾಯಣಮಹಂ ಕರಿಷ್ಯೇ । ಅಥ ಧ್ಯಾನಂ । ಅಖಂಡ ಮಂಡಲಾಕಾರಂ । ವ್ಯಾಪ್ತಂ ಯೇನ ಚರಾಚರಂ । ತತ್ಪದಂ ದರ್ಶಿತಂ ಯೇನ । ತಸ್ಮೈ ಶ್ರೀ ಗುರವೇ ನಮಃ ।

ಅಸ್ಯ ಶ್ರೀ ಗುರುಚರಿತ್ರ ಸಪ್ತಾಹ ಪಾರಾಯಣ ಮಹಾ ಮಂತ್ರಸ್ಯ । ಶ್ರೀ ಮಹಾವಿಷ್ಣು ಋಷಿಃ । ಪಕ್ತಿಃ ಛಂದಃ । ಶ್ರೀ ದತ್ತಾತ್ರೇಯೋ ದೇವತಾ । ಓಂ ಹ್ರಾಂ ಬೀಜಂ । ಓಂ ಹ್ರೀಂ ಶಕ್ತಿಃ । ಓಂ ಹ್ರೂಂ ಕೀಲಕಂ । ಮಮ ಶ್ರೀ ಗುರು ದತ್ತಾತ್ರೇಯ ಪ್ರೀತ್ಯರ್ಥಂ ಜಪೇ ವಿನಿಯೋಗಃ । ಅಥನ್ಯಾಸಃ । ಓಂ ಹ್ರಾಂ ಅಂಗುಷ್ಟಾಭ್ಯಾಂ ನಮಃ । ಓಂ ಹೃದಯಾಯ ನಮಃ । ಓಂ ಹ್ರೀಂ ತರ್ಜನೀಭ್ಯಾಂ ನಮಃ । ಓಂ ಶಿರಸೇ ಸ್ವಾಹಾ । ಓಂ ಹ್ರೂಂ ಮಧ್ಯಮಾಭ್ಯಾಂ ನಮಃ । ಓಂ ಶಿಖಾಯೈ ವೌಷಟ್ । ಓಂ ಹ್ರೈಂ ಅನಾಮಿಕಾಭ್ಯಾಂ ನಮಃ । ಓಂ ಕವಚಾಯ ಹುಂ । ಓಂ ಹ್ರೌಂ ಕನಿಷ್ಟಿಕಾಭ್ಯಾಂ ನಮಃ । ಓಂ ನೇತ್ರತ್ರಯಾಯ ವೌಷಟ್ । ಓಂ ಹ್ರಃ ಕರತಲಕರಪೃಷ್ಟಾಭ್ಯಾಂ ನಮಃ । ಓಂ ಅಸ್ತ್ರಾಯ ಫಟ । ಓಂ ಭೂರ್ಭುವಃ ಸ್ವರೋಂ ಇತಿ ದಿಗ್ಬಂಧಃ । ಅಥ ಧ್ಯಾನಂ । ದತ್ತಾತ್ರೇಯೋ ಮಹಾದೇವೋ । ದತ್ತಾತ್ರೇಯೋ ಮಹಾ ಗುರುಃ । ದತ್ತಾತ್ರೇಯಾದಿ ವೈಕುಂಠ ।

ದಿಗಂಬರಾ ದಿಗಂಬರಾ

ಶ್ರೀ ಪಾದವಲ್ಲಭ ದಿಗಂಬರಾ

ನಾರಾಯಣ ಮಹಂಭಜೆ ॥ ೧ ॥ ಲಮಿತ್ಯಾದಿ ಪಂಚ ಪೂಜಾ । ಓಂ ಲಂ ಪೃಥಿವ್ಯಾತ್ಮನೆ ಶ್ರೀ ದತ್ತಾತ್ರೇಯಾಯ ನಮಃ ಗಂಧಂ ಪರಿಕಲ್ಪಯಾಮಿ । ಓಂ ಹಂ ಆಕಾಶಾತ್ಮನೇ ಶ್ರೀ ದಿಗಂಬರಾಯ ನಮಃ ಪುಷ್ಪಂ ಪರಿಕಲ್ಪಯಾಮಿ । ಓಂ ಯಂ ವಾಯುವಾತ್ಮನೇ ಶ್ರೀ ಅತ್ರಿ ಪುತ್ರಾಯ ನಮಃ ಧೂಪಂ ಪರಿಕಲ್ಪಯಾಮಿ । ಓಂ ರಂ ತೇಜಾತ್ಮನೇ ಅನಸೂಯಾ ನಂದನಾಯ ನಮಃ ದೀಪಂ ಪರಿಕಲ್ಪಯಾಮಿ । ಓಂ ವಂ ಅಮೃತಾತ್ಮನೇ ಶ್ರೀ ದತ್ತಾತ್ರೇಯಾಯ ನಮಃ ಅಮೃತ ನೈವೇದ್ಯಂ ಪರಿಕಲ್ಪಯಾಮಿ । ಓಂ ಸಂ ಸರ್ವಾತ್ಮನೇ ಗುರುನಾಥಾಯ ನಮಃ ತಾಂಬೂಲಾದಿ ಸರ್ವೋಪಚಾರಕಂ ಪರಿಕಲ್ಪಯಾಮಿ ಅನೇನ ಮಾನಸ ಪೂಜನೇನ ಶ್ರೀದತ್ತಾತ್ರೇಯ ಪ್ರಿಯತಾಂ।

ಅಥ ಜಪಃ । ಓಂ ಹ್ರಾಂ ಹ್ರೀಂ ಹ್ರೂಂ ಶ್ರೀ ಗುರು ದತ್ತಾತ್ರೇಯಾಯ ನಮಃ । ೧೦೮ । ಅಥ ಪ್ರಾರ್ಥನಾ । ಆನಂದಮಾನಂದಕರ ಪ್ರಸನ್ನಂ । ಜ್ಞಾನ ಸ್ವರೂಪಂ ನಿಜ ಬೋಧಯುಕ್ತಂ । ಯೋಗೀಂದ್ರ ಮೀಡ್ಯಂ ಭವರೋಗ ವೈದ್ಯಂ । ಶ್ರೀ ಸದ್ಗುರುಂ ನಿತ್ಯಮಹಂ ನಮಾಮಿ । ಪಾರಾಯಣಮಹಂ ಕರಿಷ್ಯೇ ।

---

|| ಶ್ರೀ ||



# ಗುರುಚರಿತ್ರ ಪ್ರಾರಂಭಃ

## ೧ನೆಯ ಅಧ್ಯಾಯ

### ಮಂಗಳಾಚರಣ

**(ಗಣಪತಿ, ಸರಸ್ವತಿ, ತ್ರಿಮೂರ್ತಿ, ಕವಿ, ಗುರು, ತಾಯಿ-ತಂದೆಗಳ ಸ್ತುತಿಯು)**

ಶ್ರೀ ಗಣೇಶಾಯನಮಃ || ಶ್ರೀ ಸರಸ್ವತ್ಯೈನಮಃ || ಶ್ರೀ ಗುರುಭ್ಯೋನಮಃ || ಶ್ರೀ ಕುಲದೇವತಾಯೈ ನಮಃ || ಶ್ರೀ ದತ್ತಾತ್ರೇಯ ಶ್ರೀಪಾದ ಶ್ರೀವಲ್ಲಭ ಶ್ರೀನರಸಿಂಹ ಸರಸ್ವತಿ ಗುರುಭ್ಯೋನಮಃ ||

# ಗಣಪತಿಸ್ತುತಿ



ಓಂ ವಿಘ್ನಹರನೇ, ಗಜಾನನನೇ, ಗಿರಿಜಾಕುಮಾರನೇ, ಜಯ ಜಯ ಲಂಬೋದರನೇ, ಏಕದಂತನೇ, ಶೂರ್ಪಕರ್ಣನೇ ನಿನಗೆ ನಮಸ್ಕಾರ ॥ ೧ ॥ ನೀನು ನಿನ್ನ ಎರಡೂ ಕಿವಿಗಳನ್ನು ಅಗಲಾಡಿಸುತ್ತೀ ಆದರಿಂದ ಹುಟ್ಟಿದ ಗಾಳಿಯಿಂದ ವಿಘ್ನಗಳು ದೂರವಾಗುತ್ತವೆ. ಅದರಿಂದ ನಿನಗೆ ವಿಘ್ನಾಂತಕನೆನ್ನುವರು ॥ ೨ ॥ ನಿನ್ನ ಸುಂದರವಾದ ಮುಖವು ಕಾದ ಬಂಗಾರದ ಒಣ್ಣದಂತೆ ಅಥವಾ ಉದಯಕಾಲದ ಸೂರ್ಯನ ಕಾಂತಿಯಂತೆ ಪ್ರಕಾಶಮಾನವಾಗಿ ಶೋಭಿಸುತ್ತದೆ ॥ ೩ ॥ ನೀನು ವಿಘ್ನವೆಂಬ ಅರಣ್ಯವನ್ನು ನಾಶಮಾಡಲಿಕ್ಕೆ ಕೈಯಲಿ ಪರಶುವನ್ನು ಧರಿಸಿರುತ್ತೀ, ಉಡುದಾರದ ಸಲುವಾಗಿ ಟೊಂಕಕ್ಕೆ ಒಂದು ಹಾವನ್ನು ಕಟ್ಟಿಕೊಂಡು, ಜನಿವಾರದ ಸಲುವಾಗಿ ಕೊರಳಲ್ಲಿ ಒಂದು ಹಾವನ್ನು ಹಾಕಿಕೊಂಡಿರುತ್ತೀ ॥ ೪ ॥ ಚತುರ್ಭುಜಗಳಿಂದೊಪ್ಪುವ ಗಜಾನನನೇ ವಿಶಾಲಾಕ್ಷನಾದ ವಿನಾಯಕನೇ ನೀನು ನಿರ್ವಿಘ್ನದಿಂದ ಎಲ್ಲ ಲೋಕಗಳನ್ನು ಪ್ರತಿಪಾಲಿಸುತ್ತೀ ॥ ೫ ॥ ನಿನ್ನ ಸ್ಮರಣೆಯನ್ನು ಮಾಡಿದವರಿಗೆ ವಿಘ್ನಗಳು ಬಾಧಿಸುವದಿಲ್ಲ ಅವರ ಅಭೀಷ್ಟಗಳು ತೀವ್ರವಾಗಿ ಸಿದ್ಧಿಸುವವು ॥ ೬ ॥ ಎಲ್ಲ ಮಂಗಲಕಾರ್ಯಗಳಲ್ಲಿ ಪ್ರತಿಯೊಬ್ಬರು ಮೊದಲು ನಿನ್ನನ್ನೇ ವಂದಿಸುತ್ತಾರೆ. ಹೇ ಲಂಬೋದರನೇ ನೀನು ಹದಿನಾಲ್ಕು ವಿದ್ಯೆಗಳಿಗೆ ಒಡೆಯನಾಗಿರುತ್ತೀ ॥ ೭ ॥ ವೇದ ಶಾಸ್ತ್ರ ಪುರಾಣಗಳನ್ನು ನೀನೇ ಹೇಳಿರುತ್ತೀ. ಆದ್ದರಿಂದ ಬ್ರಹ್ಮನೇ ಮೊದಲಾದ ಯಾವತ್ತು ದೇವತೆಗಳು ನಿನ್ನನ್ನು ಸ್ತುತಿಸುತ್ತಾರೆ ॥ ೮ ॥ ತ್ರಿಪುರರನ್ನು ಸಂಹಾರಮಾಡುವ ಕಾಲದಲ್ಲಿ ಈಶ್ವರನು ಮೊದಲು ನಿನ್ನನ್ನೇ ಪೂಜಿಸಿದನು, ಮತ್ತು ಅನೇಕ ದೈತ್ಯರನ್ನು ಸಂಹಾರ ಮಾಡುವ ಕಾಲದಲ್ಲಿ ಮೊದಲು ನಿನ್ನನ್ನೇ ಸ್ತುತಿಸಿದನು ॥ ೯ ॥ ಎಲೈ ಗಣಪತಿಯೇ, ಹರಿ-ಹರ-ಬ್ರಹ್ಮಾದಿಕರು ಸಹ ತಾವು ಮಾಡುವ ಕಾರ್ಯಾರಂಭದಲ್ಲಿ ಮೊದಲು ನಿನಗೆ ನಮಸ್ಕರಿಸಿ, ನಿನ್ನ ಅನುಗ್ರಹದಿಂದ ಸಕಲಾಭೀಷ್ಟಗಳನ್ನು ಹೊಂದುವರು ॥ ೧೦ ॥ ಹೇ ಕೃಪಾನಿಧಿ ಗಣನಾಥನೇ ಓಂಕಾರನೇ, ದೇವತೆಗಳು ಮೊದಲಾದವರ

ವಿಘ್ನಹರ್ತನೇ, ವಿನಾಯಕನೇ, ಅಭಯದಾತನೇ, ನನ್ನ ಬುದ್ಧಿಯನ್ನು ಪ್ರಕಾಶವಾಗಿ ಮಾಡು ॥ ೧೧ ॥ ಸಮಸ್ತ ವಿಘ್ನಗಳ ನಾಯಕನೇ, ನೀನೇ ವಿಘ್ನಗಳನ್ನು ನಾಶಮಾಡುತ್ತೀ, ನಿನಗೆ ಯಾರು ವಂದಿಸುತ್ತಾರೋ ಅವರ ಕಾರ್ಯಗಳು ಸಾಧಿಸುವವು ॥ ೧೨ ॥ ನೀನೇ ಎಲ್ಲ ಕಾರ್ಯಗಳಿಗೆ ಆಧಾರನೂ, ಕರುಣಾನಿಧಿಯೂ, ಕೃಪಾಸಾಗರನೂ, ಗೌರೀಪುತ್ರನೂ ಇದ್ದು ನನ್ನ ಬುದ್ಧಿಯನ್ನು ಹೆಚ್ಚುಮಾಡು ॥ ೧೩ ॥ ಹೇ ಗಜಾನನನೇ ನಿನಗೆ ನಾನು ಸಾ। ನ। ಮಾಡುವೆನು. ಈಗ ನೀನು ನನಗೆ ಜ್ಞಾನವನ್ನು ಕೊಟ್ಟು ನನ್ನ ಮನಸ್ಸಿನ ಬಯಕೆಯನ್ನು ಪೂರ್ಣಮಾಡು ॥೧೪॥ ನಾನು ಬುದ್ಧಿಹೀನನೂ ಅಜ್ಞಾನಿಯೂ ಆಗಿ ಏನೂ ತಿಳಿಯದವನಿದ್ದದರಿಂದ ೧೪ ವಿದ್ಯೆಗಳಿಗೆ ಒಡೆಯನೂ ಶರಣಾಗತರಿಗೆ ವರದಾಯಕನೂ ಆದಂಥ ನಿನ್ನ ಚರಣಕ್ಕೆ ಶರಣು ಬಂದಿರುವೆನು ॥ ೧೫ ॥ ನನ್ನ ಮನಸ್ಸಿನಲ್ಲಿ ಶ್ರೀಗುರುಚರಿತ್ರೆಯನ್ನು ಹೇಳಬೇಕೆಂಬ ಇಚ್ಛೆಯದೆ ಆದ್ದರಿಂದ ಎಲೈ ದಯಾನಿಧಿಯೇ ನನಗೆ ಪ್ರಸನ್ನನಾಗಿ ನನ್ನ ಕಡೆಗೆ ಪೂರ್ಣ ಕೃಪಾದೃಷ್ಟಿಯಿಂದ ನೋಡಿ, ನನ್ನ ಅಭೀಷ್ಟವಾದ ಈ ಗ್ರಂಥ ಲೇಖನವನ್ನು ಸಿದ್ಧಿಗೊಳಿಸು ॥ ೧೬ ॥

---

## ಶಾರದಾಸ್ತುತಿ

ಎಲೈ ಶ್ರೋತೃಗಳೇ, ಇನ್ನು ನಾನು ಬ್ರಹ್ಮಕುಮಾರಿಯೂ ವಾಗೀಶ್ವರಿ ಎಂಬ ಹೆಸರುಳ್ಳವಳೂ ಕೈಗಳಲ್ಲಿ ಪುಸ್ತಕ ಮತ್ತು ವೀಣಾಗಳನ್ನು ಧರಿಸಿದವಳೂ ಹಂಸಾರೂಢಳೂ ಆದ ಸರಸ್ವತೀದೇವಿಯೇ ನಿನಗೆ ವಂದಿಸುವೆನು. ॥ ೧೭ ॥ ಹೇ ಒಡೆಯಳೇ, ನೀನು ನನಗೆ ಪ್ರಸನ್ನಳಾಗಿ, ನನ್ನ ವಾಣಿಯಲ್ಲಿ ಪ್ರವೇಶಿಸಿ, ನನ್ನ ಈ ಗ್ರಂಥವನ್ನು ಸಿದ್ಧಿಗೊಯ್ಯುಬೇಕೆಂದು ನಾನು ನಿನ್ನ ಚರಣಕ್ಕೆ ವಿನಯದಿಂದ ವಂದಿಸುತ್ತೇನೆ ॥ ೧೮ ॥ ಹೇ ಶಾರದಾದೇವಿಯೇ ವಿದ್ಯಾ-ವೇದ-ಶಾಸ್ತ್ರಗಳಮೇಲೆ ನಿನ್ನ ಅಧಿಕಾರವಿರುತ್ತದೆ. ನಿನ್ನನ್ನು ಭಕ್ತಿ ವಿಶ್ವಾಸಗಳಿಂದ ನಮಿಸುವವರಿಗೆ

ಜ್ಞಾನಪ್ರಾಪ್ತಿಯಾಗುವದು ॥ ೧೯ ॥ ಹೇ ತಾಯಿಯೇ ನನ್ನ ವಿನಂತಿಯನ್ನು ಕೇಳು, ಶ್ರೀಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಲಿಕ್ಕೆ ನನಗೆ ಸಾಕಷ್ಟು ಒಳ್ಳೇ ಬುದ್ಧಿಯನ್ನು ಕೊಡು ॥ ೨೦ ॥ ಜಯ ಜಯ ಜಗನ್ಮಾತೇ, ಸಮಸ್ತ ವಿಶ್ವದ ವಾಗ್ದೇವತೆಯೇ ವೇದಶಾಸ್ತ್ರಗಳನ್ನು ನೀನೇ ಬರೆದಿರುವಿಯೆಂದು ನೀನು ಈ ಪ್ರಕಾರ ಆನಂದ ದಿಂದಿರುವಿ ॥ ೨೧ ॥ ಎಲೈ ತಾಯಿಯೇ, ನಿನ್ನ ವಾಗ್ಬಾಣದಿಂದಲೇ ವೇದ-ಶಾಸ್ತ್ರ-ಪುರಾಣಗಳು ಹುಟ್ಟಿರುತ್ತವೆ. ಆದರಿಂದ ನಿನ್ನನ್ನು ಆರಾಧಿಸುವವರಿಗೆ ಶಾಸ್ತ್ರ ಕಲಿಯಲಿಕ್ಕೆ ನೀನು ಸಹಾಯಮಾಡುತ್ತೀ ॥ ೨೨ ॥ ಆದ್ದರಿಂದ ಹೇ ಸರಸ್ವತಿದೇವಿಯೇ, ನನ್ನ ಗುರುಗಳ ಹೆಸರಿನಲ್ಲಿ ನಿನ್ನ ಹೆಸರು ಕೂಡಿ ಅವರು "ನರಸಿಂಹ ಸರಸ್ವತಿ" ಎಂಬ ಹೆಸರುಳ್ಳವರಾಗಿರುವರು. ಮತ್ತು ನನ್ನ ಹೆಸರಾದರೂ ನಿನ್ನ ಹೆಸರಿನಂತೆಯೇ "ಸರಸ್ವತಿ" ಎಂಬದಾಗಿರುತ್ತದೆಂದು ನೀನು ನನ್ನ ಮೇಲೆ ಪ್ರೀತಿಮಾಡು ॥ ೨೩ ॥ ಸ್ವತಂತ್ರ ಶಕ್ತಿಯಿಲ್ಲದ ಸೂತ್ರದ ಗೊಂಬೆಗಳು ಸೂತ್ರಧಾರನು ಕುಣಿಸಿದಂತೆ ಹ್ಯಾಗೆ ಕುಣಿಯುತ್ತವೆಯೋ, ಮತ್ತು ಸ್ವಂತ ಬುದ್ಧಿ ಇಲ್ಲದವರಿಗೆ ಎರಡನೇಯವರ ಹೇಳಿಕೆಯಿಂದ ಯಾವ ಪ್ರಕಾರ ಬುದ್ಧಿ ಬರುತ್ತದೋ ॥ ೨೪ ॥ ಆದರಂತೆ ಕೃಪಾನಿಧಿಯಾದ ವಾಗ್ದೇವತೆಯೇ ನೀನು ಪ್ರೀತಿ ಯಿಂದ ನನ್ನ ನಾಲಿಗೆಯಲ್ಲಿ ಕೂತು ನನ್ನನ್ನು ಪ್ರೇರಿಸೆಂದು ನಿನಗೆ ವಿನಂತೀಮಾಡಿಕೊಂಡು, ॥ ೨೫ ॥ ಬಾಲಕ ನಾದ ನಾನು ನಿನ್ನ ಚರಣಕ್ಕೆ ವಂದಿಸುತ್ತೇನೆ ನನ್ನ ಒಡೆಯಳಾದ ನೀನು ನನಗೆ ಪ್ರಸನ್ನಳಾಗಿ ವರವನ್ನು ಕೊಟ್ಟು ಈಗ ನೀನು ಈ ಗ್ರಂಥದಲ್ಲಿ ಪ್ರವೇಶಮಾಡು, ಅಥವಾ ನನಗೆ ಈ ಗ್ರಂಥವನ್ನು ಪೂರ್ಣಮಾಡುವ ಬುದ್ಧಿಯನ್ನು ಕೊಡು ॥ ೨೬ ॥

---

# ತ್ರೈಮೂರ್ತಿಗಳ ಪ್ರಾರ್ಥನೆ



ಇನ್ನು ನಾನು ತ್ರೈಮೂರ್ತಿಗಳಾದ ಬ್ರಹ್ಮ-ವಿಷ್ಣು-ಮಹೇಶ್ವರರಿಗೆ ಅನುಕ್ರಮವಾಗಿ ನಮಸ್ಕರಿಸಿ, ನನಗೆ ಜ್ಞಾನವನ್ನು ಕೊಟ್ಟು ಅನುಗ್ರಹಿಸಿರೆಂದು ಅವರನ್ನು ಬೇಡಿಕೊಳ್ಳುವೆನು ॥ ೨೭ ॥ ಸೃಷ್ಟಿಕರ್ತನಾದಂಥ ನಾಲ್ಕು ಮುಖಗಳುಳ್ಳಂಥ ಆ ನಾಲ್ಕೂ ಮುಖಗಳಿಂದ ನಾಲ್ಕು ವೇದಗಳನ್ನು ಅಂದಂಥ ಆ ಬ್ರಹ್ಮನ ಪಾದಗಳಿಗೆ ವಂದಿಸುತ್ತೇನೆ ॥ ೨೮ ॥

ಇನ್ನು ನಾನು ವಿಷ್ಣುವನ್ನು ವಂದಿಸುವೆನು. ಯಾವನು ವಿಶ್ವದ ನಾಯಕನೋ, ಅಹೋರಾತ್ರಿ ಲಕ್ಷ್ಮೀ ಸಹಿತ ಕ್ಷೀರಸಾಗರದಲ್ಲಿ ವಾಸಿಸುವನೋ ॥ ೨೯ ॥ ಯಾವನು ಚತುರ್ಬಾಹುಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿರುವನೋ, ಯಾವನು ನರಹರಿ ರೂಪನೋ, ಮುರಾರಿಯೋ, ಪದ್ಮನಾಭನೋ ॥ ೩೦ ॥ ಯಾವನು ಪೀತಾಂಬರಧಾರಿಯೋ, ವೈಜಯಂತೀಮಾಲಾ ಧರನೋ, ಶರಣಾಗತರ ಅಭೀಷ್ಟಗಳನ್ನೆಲ್ಲ ಪೂರ್ಣಮಾಡುವನೋ, ಯಾವನು ಕೃಪಾಳುವೋ ಅಂಥ ವಿಷ್ಣುವಿಗೆ ನಮಸ್ಕರಿಸುತ್ತೇನೆ ॥ ೩೧ ॥

ಇನ್ನು ನಾನು ಶ್ರೀ ಶಂಕರನಿಗೆ ವಂದಿಸುತ್ತೇನೆ. ಯಾವನು ಮಸ್ತಕದಲ್ಲಿ ಗಂಗೆಯನ್ನು ಧರಿಸಿರುವನೋ, ಯಾವನು ಚಂದ್ರಮೌಳಿಯಾಗಿ ಪಂಚಮುಖ-ದಶಭುಜಗಳಿಂದ ಶೋಭಿಸುವನೋ ಯಾವನು ವಾಮಾಂಕದಲ್ಲಿ ಜಗನ್ಮಾತೆಯಾದ ಪಾರ್ವತಿಯನ್ನು ಕೂಡ್ರಿಸಿಕೊಂಡಿರುವನೋ ಯಾವನು ಸಮಯಾನುಸಾರ ಸೃಷ್ಟಿಯನ್ನು ಸಂಹರಿಸುವನೋ, ಸ್ಮಶಾನವಾಸಿಯೋ, ಯಾವನು ವ್ಯಾಘ್ರ ಮತ್ತು ಗಜಚರ್ಮಗಳನ್ನು ಧರಿಸಿ, ಸರ್ವಾಂಗಗಳಲ್ಲಿ ಸರ್ಪಗಳನ್ನು ಸುತ್ತಿಕೊಂಡು ಪಾರ್ವತೀಪತಿಯಾಗಿರುವನೋ ಅಂಥ ಶಂಭುವಿನ ಚರಣಕ್ಕೆ ನಮಸ್ಕರಿಸುತ್ತೇನೆ ॥ ೩೨ ॥

ಇನ್ನು ನಾನು ಯಾವತ್ತೂ ಸುರವರರಿಗೂ ಸಿದ್ಧ–ಸಾಧ್ಯ–ಯಕ್ಷ–ಕಿನ್ನರರಿಗೂ, ಯಾವತ್ತೂ ಋಷಿಗಳಿಗೂ, ॥ ೩೨ ॥ ಪರಾಶರ–ವ್ಯಾಸ–ವಾಲ್ಮೀಕಿ ಮೊದಲಾದ ಕವಿಕುಲಕ್ಕೂ ನಮಸ್ಕರಿಸುತ್ತೇನೆ. ॥ ೩೩ ॥ ನಿಮ್ಮ ದಾಸನಾದ ನನಗೆ ಜ್ಞಾನವನ್ನು ದಯಪಾಲಿಸಿರಿ ಎಂದು ನಿಮಗೆ ವಿನಂತೀ ಮಾಡಿಕೊಳ್ಳುತ್ತೇನೆ. ॥ ೩೪ ॥ ಯಾಕಂದರೆ ನನಗೆ ಕವಿತ್ವದ ಪದ್ಧತಿ, ಗ್ರಂಥರಚನೆಯರೀತಿ, ಶಾಸ್ತ್ರವಿಚಾರ, ಮಹಾರಾಷ್ಟ್ರ ಭಾಷಾಜ್ಞಾನಗಳು ಇಲ್ಲ ॥ ೩೫ ॥ ಕಾರಣ ನೀವು ಯಾವತ್ತರೂ ನನ್ನಮೇಲೆ ಕೃಪಾಮಾಡಿ ಈ ಗುರುಚರಿತ್ರೆಯನ್ನು ಹೇಳಲಿಕ್ಕೆ ನನಗೆ ಸಹಾಯಮಾಡಿರಿ. ಶಬ್ದೋತ್ಪತ್ತಿ, ಶಬ್ದ ಮಾಧುರ್ಯಗಳು ನನಗೆ ಗೊತ್ತಿಲ್ಲ. ಆದ್ದರಿಂದ ಸಮಸ್ತ ಕವಿಗಳಾದ ನೀವು ನನ್ನನ್ನು ಪ್ರತಿಪಾಲಿಸಿರಿ. ॥ ೩೬ ॥ ಮತ್ತು ಶ್ರೀ ಗುರುಚರಿತ್ರೆಯನ್ನು ಹೇಳಲಿಕ್ಕೆ ನನಗೆ ಸ್ಫೂರ್ತಿಯನ್ನು ಕೊಡಿರಿ ಎಂದು ನಿಮಗೆ ವಿನಂತೀಮಾಡಿಕೊಳ್ಳುವೆನು ಇನ್ನುಮೇಲೆ ಮಹಾತ್ಮರೂ ಪುಣ್ಯವಂತರೂ ಆದ ನನ್ನ ಉಭಯಕುಲದ ಪೂರ್ವಜರನ್ನು ಮನಸಿನಲ್ಲಿ ಧ್ಯಾನಿಸಿ, ಅವರಿಗೆ ನಮಸ್ಕರಿಸಿ ನನ್ನ ತಾಯಿ–ತಂದೆಗಳನ್ನು ಕೊಂಡಾಡುವೆನು. ॥ ೩೭ ॥ ಆಪಸ್ತಂಬ ಶಾಖೆಯ ಕೌಂಡಿಣ್ಯಗೋತ್ರದ “ಸಾಖರೆ” ಎಂಬ ಅಡ್ಡಹೆಸರಿನ ಸಾಯಂದೇವನೆಂಬವನು ನಮ್ಮಕುಲದ ಮೂಲಪುರುಷನು. ॥ ೩೮ ॥ ಅವನ ಮಗನು ನಾಗನಾಥನು, ಆ ನಾಗನಾಥನ ಮಗನು ದೇವರಾವನು, ಆ ದೇವರಾವನ ಮಗನೂ ಸದಾ ಶ್ರೀ ಸದ್ಗುರುಗಳನ್ನು ಧ್ಯಾನಿಸುವವನೂ ಆದ “ಗಂಗಾಧರ”ನೆಂಬವನು ನಮ್ಮ ತಂದೆಯು, ॥ ೩೯ ॥ ಆದ್ದರಿಂದ ಆತನಿಗೆ ನಮಸ್ಕರಿಸುತ್ತೇನೆ. ಇನ್ನು ನಾನು ಮನಸಿನಲ್ಲಿ ನನ್ನ ತಾಯಿಯ ಪೂರ್ವಜರನ್ನು ಸ್ಮರಿಸುತ್ತೇನೆ. ಆಶ್ವಲಾಯನ ಶಾಖೆಯ ॥ ೪೦ ॥ ಕಾಶ್ಯಪ ಗೋತ್ರದಲ್ಲಿ ಹುಟ್ಟಿ ಗಂಗೆಯ ಜನಕನಾದ “ಜನ್ಹುಋಷಿ”ಯಂತೆ ಹೆಸರಾದ ಚೌಡೇಶ್ವರ ॥ ೪೧ ॥ ಎಂಬವನ ಮಗಳೂ ಮಹಾ ಪುಣ್ಯವಂತೆಯೂ ನಿಶ್ಚಯವಾಗಿ ಭವಾನೀ ಸಮಾನಳೂ ಆದ “ಚಂಪಾ” ಎಂಬವಳು ನಮ್ಮ ತಾಯಿಯು, ಆದ್ದರಿಂದ ಆಕೆಗೆ ವಂದಿಸುವೆನು. ॥ ೪೨ ॥ ಹೀಗೆ ನಾನು ಮೊದಲು ನನ್ನ ತಾಯಿ–ತಂದೆಗಳನ್ನು ನಮಸ್ಕರಿಸಿದ್ದರಿಂದ ಈಗ ನನ್ನ ಮನಸ್ಸಿನಲ್ಲಿ ಶ್ರೀಗುರುಚರಣಗಳನ್ನು ಸ್ಮರಿಸುವ ಬುದ್ಧಿಯು ಉತ್ಪನ್ನವಾಯಿತು.

ಆದ್ದರಿಂದ ಈಗ ಗುರುಗಳನ್ನು ನಮಸ್ಕರಿಸುತ್ತೇನೆ ॥ ೪೩ ॥ ನಾನು ಗುರುಭಕ್ತನಾದ ಗಂಗಾಧರನ ಉದರದಿಂದ ಹುಟ್ಟಿದ್ದರಿಂದ ನನಗೆ "ಸರಸ್ವತಿ" ಎಂದು ಹೆಸರಿಟ್ಟರು ಆದರಿಂದ ನನಗೆ ಸದಾ ಏಕಭಕ್ತಿಯಿಂದ ಶ್ರೀಗುರು-ಗಳನ್ನು ಧ್ಯಾನಿಸುವ ಇಚ್ಛೆಯಾಯಿತು ॥ ೪೪ ॥ ಆಮೇಲೆ ನನಗೆ " ಸರಸ್ವತೀ ಗಂಗಾಧರ " ನೆನ್ನಹತ್ತಿದರು. ಬಾಲಕನಾದ ನನ್ನಮೇಲೆ ಕೃಪಾ ಮಾಡಿರೆಂದು ಸಾಧುಗಳಿಗೆ ವಂದಿಸಿ, ಕ್ಷಮಾ ಮಾಡಿರೆಂದು ಶ್ರೋತೃಗಳಿಗೆ ಮೇಲಿಂದಮೇಲೆ ವಿನಂತೀ ಮಾಡಿಕೊಳ್ಳುವೆನು. ॥ ೪೫ ॥ ವೇದಾಧ್ಯಾಯಿಗಳೂ, ಸನ್ಯಾಸಿಗಳೂ, ಯತಿಗಳೂ, ಯೋಗಿಗಳೂ, ತಪಸ್ವಿಗಳೂ ಸದಾ ಶ್ರೀಗುರುಗಳನ್ನು ಧ್ಯಾನಿಸುತ್ತಿರುವರು. ಆದ್ದರಿಂದ ಅವರೆಲ್ಲರಿಗೂ ನಮಿಸಿ ॥ ೪೬ ॥ ಅಲ್ಪಮತಿಯಾದ ನಾನು ಬಾಲಭಾಷೆಯಿಂದ ಹೇಳುವ ಗುರುಚರಿತ್ರೆಯನ್ನು ಕೇಳಬೇಕೆಂದು ವಿನಂತೀ ಮಾಡಿಕೊಳ್ಳುವೆನು ॥ ೪೭ ॥ ನಾನು ಅಲ್ಪಮತಿಯುವನೂ ಕಾವ್ಯವ್ಯುತ್ಪತ್ತಿಯನ್ನು ತಿಳಿಯದವನೂ ಆದ್ದರಿಂದ ಶ್ರೀಗುರುಗಳು ನನಗೆ ಪ್ರೇರಿಸಿದಂತೆ ನಾನು ಈ ಗುರುಚರಿತ್ರೆಯನ್ನು ಹೇಳುವೆನು. ॥ ೪೮ ॥ ಶ್ರೀ ನರಸಿಂಹಸರಸ್ವತಿ ಗುರುಗಳು ನಮ್ಮ ವಂಶಸ್ಥರಿಗೆ ಮೊದಲಿನಿಂದ ಸದಾ ಪ್ರಸನ್ನರಾಗಿರುವರು ಈಗ ಆ ಶ್ರೀಗುರುಗಳು ತಮ್ಮ ಚರಿತ್ರೆಯನ್ನು ನೀನೇ ವಿಸ್ತಾರವಾಗಿ ಹೇಳಬೇಕೆಂದು ನನಗೆ ಆಜ್ಞೆ ಮಾಡಿರುವರು ॥ ೪೯ ॥ ಮತ್ತು— ಎಲೈ ಸರಸ್ವತೀಗಂಗಾಧರನೇ, ನಿನಗೆ ಗುರುಚರಿತ್ರೆ ಎಂಬ ಅಮೃತಕಲಶವನ್ನು ಕೊಟ್ಟಿರುವೆನು, ಅದನ್ನು ಸ್ವೀಕರಿಸು. ಇದರಿಂದ ನಿನ್ನ ವಂಶದವರೆಲ್ಲರೂ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವರು. ಆದ್ದರಿಂದ ನೀನೇ ಗುರುಚರಿತ್ರೆಯನ್ನು ಹೇಳೆಂದು ನನಗೆ ಹೇಳಿರುವರು. ॥ ೫೦ ॥ ಗುರುವಾಕ್ಯವು ಬೇಕಾದದ್ದನ್ನು ಕೊಡುವ ಕಾಮಧೇನುವಾಗಿರುವದು, ಆದ್ದರಿಂದ ನನ್ನ ಮನಸ್ಸಿನಲ್ಲಿ ಏನೂ ಅನುಮಾನವಿಲ್ಲ. ಶ್ರೀಗುರು ನರಸಿಂಹ ಸರಸ್ವತಿಗಳು ಸ್ವತಃ ನನಗೆ ಸಿದ್ಧಿಯನ್ನುಂಟುಮಾಡಿ, ಶ್ರೇಯಸ್ಸನ್ನು ಒದಗಿಸಿ ಕೊಡುವರು. ॥ ೫೧ ॥ ತ್ರೈಮೂರ್ತಿಗಳೇ ಈಗ ನರಸಿಂಹಸರಸ್ವತಿಗಳೆಂಬ ಹೆಸರಿನಿಂದ ನರರೂಪವನ್ನು ಧರಿಸಿರುವರು, ಅವರ ಆದ್ಯಂತ ತಿಳಿಯುವದೂ, ಅವರ ಮಹಿಮೆಯನ್ನು ವರ್ಣಿಸುವದೂ ಯಾರಿಗೂ ಶಕ್ಯವಿಲ್ಲ. ॥ ೫೨ ॥ ಈ ಪ್ರಕಾರವಾಗಿರುವ ಗುರುಚರಿತ್ರೆ

ಯನ್ನು ಮಾತಿನಿಂದ ಪೂರ್ಣ ವರ್ಣಿಸಲಿಕ್ಕೆ ನನಗೂ ಶಕ್ಯವಿಲ್ಲ, ಆದರೆ ನೀನೇ ಹೇಳಬೇಕೆಂದು ಶ್ರೀಗುರುಗಳು ನನಗೆ ಆಜ್ಞೆ ಮಾಡಿರುವದರಿಂದ ನಾನು ಹೇಳುವೆನು. ॥ ೫೩ ॥ ಯಾರಿಗೆ ತಮ್ಮ ಮನೆಯಲ್ಲಿ ಪುತ್ರ-ಪೌತ್ರರು, ಮತ್ತು ಅಖಂಡ ಲಕ್ಷ್ಮೀಪ್ರಾಪ್ತಿಯು ಆಗಬೇಕೆಂಬ ಇಚ್ಛೆ ಇರುತ್ತದೋ ಅವರಿಗೆ ಈ ಗುರುಚರಿತ್ರೆಯು ಒಳ್ಳೇ ರುಚಿಕರವೆನಿಸುತ್ತದೆ. ॥ ೫೪ ॥ ಈಪ್ರಕಾರವಾಗಿರುವ ಗುರುಚರಿತೆಯನ್ನು ಯಾರು ನಿತ್ಯ ತಮ್ಮ ಮನೆಯಲ್ಲಿ ಭಕ್ತಿಯಿಂದಲೂ ಪ್ರೇಮಭರದಿಂದಲೂ ಓದುತ್ತಾರೋ ಅವರು ನಿರಂತರ ಐಶ್ವರ್ಯದಿಂದಲೂ ಹೆಂಡಿರು ಮಕ್ಕಳಿಂದಲೂ ಕೂಡಿ ಆನಂದದಿಂದಿರುವರು. ॥ ೫೫ ॥ ಶ್ರೀಗುರುಗಳ ಕೃಪೆಯಿಂದ ಅವರ ಮನೆಯಲ್ಲಿ ರೋಗಗಳು ಬರುವದಿಲ್ಲ. ಅವರು ಸದಾ ಸಂತುಷ್ಟರಾಗಿರುತ್ತಾರೆ. ಯಾರು ಏಳು ದಿವಸಗಳಲ್ಲಿ ಸಪ್ತಾಹಕ್ರಮದಂತೆ ಈ ಗುರುಚರಿತ್ರೆಯನ್ನು ಓದಿ ಅಥವಾ ಕೇಳಿ ಮುಗಿಸುವರೋ, ಏನೂ ಸಂಶಯವಿಲ್ಲದೆ ಅವರ ಭವಬಂಧವು ಪರಿಹಾರವಾಗುವದೆಂದು ತಿಳಿಯಿರಿ ॥ ೫೬ ॥ ಇಂಥ ಪುಣ್ಯಪಾವನವಾದ ಕಥೆಯನ್ನು ವಿಸ್ತಾರವಾಗಿ ಹೇಳುವೆನು ಕೇಳಿರಿ, ಆದರಿಂದ ಏನೂ ಆಯಾಸವಿಲ್ಲದೆ ಎಲ್ಲವೂ ಸಾಧ್ಯವಾಗಿ ಕೂಡಲೆ ಇಚ್ಛಿತ ಫಲವುಂಟಾಗುವದು ॥ ೫೭ ॥ ಮತ್ತು ಪ್ರಯಾಸವಿಲ್ಲದೆ ದ್ರವ್ಯವು ಕೂಡಿಬೀಳುವದು, ಅಂದಮೇಲೆ ಮನುಷ್ಯನು ಬೇರೆ ಸಾಹಸ ಮಾಡಿ ಕಷ್ಟಪಡುವ ಕಾರಣವೇನು? ಎಲೈ ಶ್ರೋತೃಗಳಿರಾ ನನ್ನ ಮಾತಿನಲ್ಲಿ ವಿಶ್ವಾಸವಿಟ್ಟು ಭಕ್ತಿಯಿಂದ ಗುರುಚರಿತ್ರೆಯನ್ನು ಕೇಳಿರಿ. ॥ ೫೮ ॥ ಈ ಗುರುಚರಿತ್ರೆಯನ್ನು ಓದುವ ಹಾಗು ಕೇಳುವದರಿಂದ ಏನು ಫಲವಾಗುತ್ತದೆಂಬದು ನನಗೆ ಪ್ರತ್ಯಕ್ಷ ಅನುಭವ ಬಂದಿದೆ. ಶ್ರೀಗುರುಸ್ಮರಣವು ಅತ್ಯಂತ ಶ್ರೇಷ್ಠವಾಗಿರುತ್ತದೆ. ಆದಕಾರಣ ನೀವೆಲ್ಲರೂ ಅದನ್ನು ಓದಿ ಅಥವಾ ಕೇಳಿ ಅನುಭವ ಪಡೆಯಿರಿ ಎಂದು ನಿಮಗೆ ಒಳ್ಳೇ ಆಗ್ರಹದಿಂದ ವಿನಂತೀ ಮಾಡಿಕೊಳ್ಳುವೆನು. ॥ ೫೯ ॥ ನಿಮಗೆ ಒಂದು ಅನುಭವದ ಮಾತು ಹೇಳುವೆನು ಕೇಳಿರಿ ಊಟಕ್ಕೆ ಕೂತವನು ತನ್ನ ಹೊಟ್ಟೆ ತುಂಬಿ ತೃಪ್ತಿಯಾಯಿತೆಂದು ತೇಗಿನಿಂದ ಅನುಭವ ಹೊಂದುವಂತೆ ನಾನೂ ಗುರುಮಹಿಮೆಯ (ಉದ್ಗಾರ) ಮಹತ್ವವನ್ನು ಅನುಭವ ತಕ್ಕೊಂಡು ನಿಮಗೆ ಹೇಳುವೆನು. ॥ ೬೦ ॥ ಒಂದುವೇಳೆ ನೀವು ನನ್ನನ್ನು ಸಾಮಾನ್ಯ

ಮನುಷ್ಯನೆಂದು ತಿಳಿದು ನನ್ನ ಮಾತಿನಲ್ಲಿ ಮಾತ್ರ ಉದಾಶೀನ ಮಾಡಬೇಡಿರಿ, ಯಾಕಂದರೆ ಜೇನುಹುಳದ ಬಾಯಿಯಿಂದ ಬಂದ ಎಂಜಲ ತುಪ್ಪವನ್ನು ನೀವು ಪವಿತ್ರವೆಂದು ಸ್ವೀಕರಿಸುವದಿಲ್ಲವೇ ? ॥ ೬೧ ॥ ಮತ್ತು ಸಿಂಪಿನಲ್ಲಿ ಹುಳಗಳಿಂದ ಮುತ್ತುಗಳು ಹುಟ್ಟುತ್ತವೆ. ಕರ್ದಳದಿಂದ ಪಚ್ಚಕರ್ಪೂರವು ಹುಟ್ಟುತ್ತದೆ. ಅಶ್ವತ್ಥ ಮೂಲದ ಉತ್ಪತ್ತಿಯನ್ನು ವಿಚಾರಿಸಿದರೆ ಅದು ಕಾಗೆಯ ವಿಷ್ಟಾದಲ್ಲಿ ಬಿದ್ದ ಬೀಜದಿಂದ ಹುಟ್ಟುತ್ತದೆ ಹೀಗಿದ್ದು ಅವುಗಳನ್ನು ಮುಟ್ಟಬಾರದು. ಆದರೆ ನೀವು ಅವುಗಳನ್ನು ಪವಿತ್ರವೆಂದು ಸ್ವೀಕರಿಸುವದಿಲ್ಲವೇ ? ॥ ೬೨ ॥ ಒಂದುವೇಳೆ ನೀವು ಈ ಗ್ರಂಥವನ್ನು ಉದಾಶೀನ ಮಾಡಿದರೆ ಅದಕ್ಕೆ ಹೇಳುವೆನು ಕೇಳಿರಿ ಕರೇಕಬ್ಬು ಡೊಂಕಾಗಿದ್ದರೂ ಅದರೊಳಗಿನ ರಸವು ಅಮೃತಕ್ಕೆ ಸರಿಯಾಗಿರುವದಿಲ್ಲವೇ ? ಆದಕಾರಣ ನೀವು ಅದರ ಡೊಂಕದ ಕಡೆಗೆ ಲಕ್ಷ್ಯಕೊಡದೆ ಅದರೊಳಗಿನ ರಸದ ಕಡೆಗೆ ಲಕ್ಷ್ಯಕೊಡಿರಿ. ॥ ೬೩ ॥ ಅದರಂತೆ ನನ್ನ ಕಡೆಗೆ ಲಕ್ಷ್ಯಗೊಡದೆ ನಾನು ಹೇಳುವ ಗುರುಚರಿತ್ರೆಯ ಸ್ವಾದದ ಕಡೆಗೆ ಲಕ್ಷ್ಯಕೊಡಿರಿ. ಪ್ರೀತಿಯಿಂದ ಗುರುಸ್ಮರಣೆ ಮಾಡುವ ತಿಳುವಳಿಕೆಯುಳ್ಳ ಜನರು ಏಕಚಿತ್ತದಿಂದ ಗುರುಚರಿತ್ರೆಯನ್ನು ಕೇಳಿ ಅನುಭವ ಹೊಂದುವರು. ॥ ೬೪ ॥ ಬ್ರಹ್ಮರಸದ ರುಚಿಯನ್ನು ಅನುಭವಿಸಿದರೆ ನಿಶ್ಚಯವಾಗಿ ಫಲವಾಗುವದು ಯಾರಿಗೆ ಈ ಬ್ರಹ್ಮರಸದ ಅನುಭವ ಬರುವದೋ ಅವರಿಗೆ ಈ ಮಾತಿನಲ್ಲಿ ಪ್ರೀತಿಯುಂಟಾಗುವದು ॥ ೬೫ ॥ ಗುರುಚರಿತ್ರೆಯು ಪ್ರತ್ಯಕ್ಷ ಕಾಮಧೇನು ವಾಗಿರುವದು. ಅದನ್ನು ಕೇಳುತ್ತ ಹೋದರೆ ಜ್ಞಾನಪ್ರಾಪ್ತಿಯಾಗುವದು. ಆದ್ದರಿಂದ ಶ್ರೋತೃಗಳು ಎಚ್ಚರಿಕೆ ಯಿಂದ ಕೂತು ಏಕಚಿತ್ತದಿಂದ ಕೇಳಬೇಕು ॥ ೬೬ ॥ ಶ್ರೀಗುರು ನರಸಿಂಹಸರಸ್ವತಿ ಸ್ವಾಮಿಗಳು ಗಾಣಗಾಪುರ ದಲ್ಲಿದ್ದಾಗ ಅವರ ಅತ್ಯದ್ಭುತ ಖ್ಯಾತಿ ಹಾಗು ಮಹಿಮೆಗಳನ್ನು ಹೇಳುವೆನು ಏಕಚಿತ್ತದಿಂತ ಕೇಳಿರಿ. ॥ ೬೭ ॥ ಶ್ರೀಗುರುಗಳು ಗಾಣಗಾಪುರದಲ್ಲಿ ವಾಸಮಾಡುತ್ತಿದ್ದುದರಿಂದಲೇ ಅಲ್ಲಿ ಅವರ ಅತಿಶಯ ಮಹಿಮೆಗಳಾಗುತ್ತವೆ. ನಾಲ್ಕೂ ರಾಷ್ಟ್ರಗಳ ಜನರು ಅದನ್ನು ತಿಳಿದು ಎಲ್ಲರೂ ಯಾತ್ರೆಯಸಲುವಾಗಿ ಅಲ್ಲಿಗೆ ಹೋಗುತ್ತಾರೆ. ॥ ೬೮ ॥ ಮತ್ತು ಅವರು ಕೆಲವು ದಿವಸ ಅಲ್ಲಿಯೇ ಇದ್ದು ಶ್ರೀಗುರುಗಳನ್ನು ಭಕ್ತಿಯಿಂದ ಆರಾಧಿಸಿ ಪುತ್ರ-ಕಲತ್ರ-ಧನ-

ಧಾನ್ಯ ಸಂಪತ್ತುಗಳಲ್ಲಿ ತಮ್ಮ ಇಚ್ಛೆಗೆ ಬಂದ ಫಲವನ್ನು ಶೀಘ್ರವಾಗಿ ಹೊಂದುತ್ತಾರೆ ॥ ೧೯ ॥ ಸಂತಾನವಿಲ್ಲದವರು ಸಂತಾನವನ್ನು ಹೊಂದಿ, ಆ ಸಂತಾನಕ್ಕೆ ಶ್ರೀಗುರುಗಳ ಹೆಸರನ್ನಿಟ್ಟು, ಮತ್ತೆ ಸಂತೋಷದಿಂದ ಬಂದು ನಾಲ್ಕೂ ಪುರುಷಾರ್ಥಗಳನ್ನು ಹೊಂದುತ್ತಾರೆ. ॥ ೨೦ ॥ ಈ ಪ್ರಕಾರ ಗಾಣಗಾಪುರದಲ್ಲಿ ಶ್ರೀಗುರುಗಳ ಮಹಿಮೆಯು ನಡೆದಿರಲು ನಾಮಧಾರಕನೆಂಬ ಒಬ್ಬ ಭಕ್ತನು ಶ್ರೀಗುರುಗಳನ್ನು ಹ್ಯಾಗೆ ಕಂಡೇನೆಂದು ಬಹಳ ಕಷ್ಟಬಡುತ್ತ ಸದಾ ಶ್ರೀಗುರುಗಳನ್ನು ಧ್ಯಾನಿಸುತ್ತಿದ್ದನು ॥ ೨೧ ॥ ಆ ಶಿಷ್ಯಶಿರೋಮಣಿಯು ಈ ಪ್ರಕಾರ ಮನಸ್ಸಿನ ಅತಿಶಯ ಚಿಂತೆಯಿಂದ ವ್ಯಾಕುಲನಾಗಿ ಶ್ರೀಗುರುದರ್ಶನಕ್ಕೆ ಗಾಣಗಾಪುರಕ್ಕೆ ಹೋಗಬೇಕೆಂದು ಶ್ರೀಗುರುಚರಣದಲ್ಲಿಯೇ ಏಕನಿಷ್ಠ ಮನಸ್ಸನ್ನಿಟ್ಟು ಹೊರಟು ಹಸಿವೆ ನೀರಡಿಕೆಗಳನ್ನು ಸಹ ಬಿಟ್ಟು ಮನಸ್ಸಿನಲ್ಲಿ— ॥ ೨೨-೨೩ ॥ ನಾನು ಗಾಣಗಾಪುರಕ್ಕೆ ಹೋಗಿ ಶ್ರೀಗುರುಗಳನ್ನು ನೋಡುವೆನು. ಅಲ್ಲಿ ಅವರ ದರ್ಶನವಾಗದಿದ್ದರೆ ಈ ದೇಹವನ್ನೇ ಬಿಡುವೆನು. ಈ ಜಡರೂಪ ದೇಹದಿಂದೇನಾಗುವದು? ಎಂದು ಮನಸ್ಸಿನಲ್ಲಿ ನಿಶ್ಚಯ ಮಾಡಿ ॥ ೨೪ ॥ ಮತ್ತೆ— ಹೇ ಗುರುನಾಥನೇ, ನಿನ್ನ ನಾಮಸ್ಮರಣ ಮಾಡುವವರ ದೈನ್ಯವು ದೂರವಾಗುತ್ತದೆಂದು ಕೇಳುತ್ತೇನೆ. ಆದರಂತೆ ನಾನೂ ನಿನ್ನ ನಾಮಸ್ಮರಣೆ ಮಾಡುವ ಸೇವಕನಿರುತ್ತೇನೆ. ॥ ೨೫ ॥ ದೇವಾ, ನಾನು ದೈವಹೀನನಿದ್ದರೂ ಶ್ರೀಗುರುಚರಣವನ್ನು ಯಾಕೆ ಸೇವಿಸಬೇಕೆಂದರೆ ಪರಿಸಗಲ್ಲು ತಾಕಿದಕೂಡಲೇ ಲೋಹವು ಹ್ಯಾಗೆ ಸುವರ್ಣವಾಗುತ್ತದೋ ॥ ೨೬ ॥ ಹಾಗೆ ನಿನ್ನ ನಾಮವೆಂಬ ಪರಿಸವು ಸದಾ ನನ್ನ ಹೃದಯದಲ್ಲಿರಲು ಇನ್ನೂವರೆಗೆ ನನ್ನನ್ನು ಅತಿ ಕಷ್ಟದಲ್ಲಿಟ್ಟಿರುವಿ ಅಂದಮೇಲೆ ಆ ನಾಚಿಕೆಯು ಯಾರಿಗೆ? ॥ ೨೭ ॥ ಈ ನನ್ನ ಮಾತಿನ ಉದ್ದೇಶವನ್ನು ನೀನು ಮನಸ್ಸಿನಲ್ಲಿ ವಿಚಾರ ಮಾಡಿ ನೋಡಿ, ಸರ್ವಪ್ರಾಣಿಗಳಲ್ಲಿ ದಯ ತೋರಿಸುವಂಥ ಗುರುವೇ ನನಗೆ ಪ್ರಸನ್ನನಾಗಿ ನಿನ್ನ ಮೂರ್ತಿಯನ್ನು ತೋರಿಸು ॥ ೨೮ ॥ ಭಕ್ತನಾದ ನಾಮಧಾರಕನು ಕಷ್ಟಬಟ್ಟು ಮನಸ್ಸಿನಲ್ಲಿ ಅತ್ಯಂತ ವ್ಯಾಕುಲನಾಗಿ ತನ್ನಷ್ಟಕ್ಕೆ ತಾನೇ ನಿಂದಾಸ್ತುತಿಗಳನ್ನು ಮಾಡುತ್ತಿದ್ದನು. ॥ ೨೯ ॥ ಮತ್ತು ಸ್ವೇಚ್ಛೆಯಿಂದ ಓವೀಬದ್ಧವಾಗಿ ಅನೇಕತರದ ರಾಗ ಮಾಡುತ್ತ— ಈ ದಿವಸ ಪಂಢರೀನಾಥನನ್ನು ನೋಡುವೆನು.

ಭಕ್ತಿಯಿಂದ ವಿಘ್ನಹರ ಗಣಪತಿಯನ್ನು ವಂದಿಸುತ್ತೇನೆ. ಎಲೈ, ಸುಂದರ ಶಾರದಾದೇವೀ ನಿನಗೂ ನಮಿಸುತ್ತೇನೆ. ॥೮೦॥ ಶ್ರೀಗುರುವೇ ತ್ರೈಮೂರ್ತಿ ಸ್ವರೂಪವೆಂದು ವೇದಶಾಸ್ತ್ರಗಳು ಹೇಳುತ್ತವೆ ಆ ಬಗ್ಗೆ ಈ ಕಲಿಯುಗದಲ್ಲಿ ದೃಷ್ಟಾಂತಗಳನ್ನು ಹೇಳುತ್ತಾರೆ. ॥೮೧॥ ಈ ಕಲಿಯುಗದಲ್ಲಿ ಆ ತ್ರೈಮೂರ್ತಿಗಳೇ ನರಸಿಂಹ ಸರಸ್ವತಿ ಎಂಬ ಹೆಸರಿನಿಂದ ಅವತಾರ ಮಾಡಿ ಕೃಪಾಸಿಂಧುಗಳೂ ಭಕ್ತರ ಸಾರಥಿಗಳೂ ಆಗಿ ಗಾಣಗಾಪುರದಲ್ಲಿ ಈಗ ಖ್ಯಾತಿವಂತರಾಗಿದ್ದಾರೆ ॥೮೨॥ ತ್ರೈಮೂರ್ತಿ ಅವತಾರವೇ ಶ್ರೀಗುರುನಾಥನು ಮತ್ತು ಆತನೇ ಭಕ್ತರ ಕೃಪಾಸಿಂಧುವೆಂದು ವೇದಗಳು ಹೊಗಳುತ್ತವೆ ॥೮೩॥ ಗುರುವರ್ಯನೇ, ತ್ರೈಮೂರ್ತಿಗಳ ಗುಣಗಳುಳ್ಳಂಥವನು, ಭಕ್ತರನ್ನು ರಕ್ಷಣಮಾಡುವ ದಯಾನಿಧಿಯು ನಿಶ್ಚಯವಾಗಿ ನೀನೊಬ್ಬನೇ ಇರುತ್ತೀ ॥೮೪॥ ದಯಾನಿಧಿಯಾದ ಯತಿವರ್ಯನೇ ಶ್ರೀಪತಿಯೇ ನಾನು ನಿನಗೆ ವಿನಂತೀ ಮಾಡಿಕೊಳ್ಳುತ್ತೇನೆ. ಏನಂದರೆ ನನ್ನ ಅಂತಃಕರಣದಲ್ಲಿ ಭಾವಭಕ್ತಿಗಳಿಲ್ಲ ॥೮೫॥ ಆದ್ದರಿಂದ ಸ್ವಾಮೀ ಶ್ರೀಗುರುವೇ ನನ್ನ ಮನಸ್ಸು ಸ್ಥಿರವಿಲ್ಲ ನೀನು ಕೃಪಾಸಾಗರ ನಿದ್ದು ತೀವ್ರವಾಗಿ ಬಾ. ॥೮೬॥ ಎಲೈ ನರಹರಿಯೇ, ಅನಂತನೇ, ಕೂಸಿನ ಸಲುವಾಗಿ ತಾಯಿಯು ಓಡಿ ಬರುವಂತೆ ನನ್ನ ಸಲುವಾಗಿ ನೀನು ತೀವ್ರವಾಗಿ ಬಾ. ॥೮೭॥ ಸದ್ಗುರುವೇ, ನನಗೆ ನೀನೇ ತಾಯಿ, ನೀನೇ ತಂದೆ, ನೀನೇ ಬಂಧು ಮತ್ತು ಗೆಳೆಯ ಹಾಗು ನೀನೇ ವಂಶಪರಂಪರೆಯಾದ ನಮ್ಮ ಕುಲದೇವರೂ ಆಗಿರುತ್ತೀ. ॥೮೮॥ ಶ್ರೀನರಸಿಂಹಸರಸ್ವತಿ ಸ್ವಾಮಿಯೇ, ನೀನು ನಮ್ಮ ವಂಶಪರಂಪರೆಯಾದ ಕುಲದೇವರೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು ನಿನ್ನನ್ನು ಸೇವಿಸುವೆನು. ॥೮೯॥ ಸದಾ ಕಷ್ಟಬಡುತ್ತಿರುವ ನನ್ನ ದೈನ್ಯವನ್ನು ಪರಿಹರಿಸೆಂದು ನಿರಂತರ ನಿನ್ನನ್ನು ಬೇಡಿಕೊಳ್ಳುವೆನು. ॥೯೦॥ ನಿನ್ನ ಭಕ್ತನಾದ ನಾನು ಸದಾ ಕಷ್ಟಬಡುತ್ತ ಈಗ ಪರದೇಶಿಯಂತೆ ಯಾಕಾಗಬೇಕು ? (ಅಂದಮೇಲೆ ನೀನು ಭಕ್ತರ ಕೃಪಾಸಿಂಧು ಎಂದು ಯಾವಾಗ ಆಗುತ್ತೀ) ನನ್ನಮೇಲೆ ಎಂದು ಕೃಪಾಮಾಡುತ್ತೀ ? ॥೯೧॥ ಭಕ್ತರ ಕೃಪಾಸಿಂಧುವೇ, ಕೃಪಾಳುವೇ, ಅನಂತನೇ, ತ್ರಯಮೂರ್ತಿ ಜಗನ್ನಾಥನೇ, ದಯಾನಿಧಿಯೇ ॥೯೨॥ ಶ್ರೀಗುರುವೇ ನೀನು ತ್ರೈಮೂರ್ತಿಯೇ

ಆಗಿದ್ದು, ವಿಶ್ವವನ್ನು ಪಾಲಿಸುತ್ತೀ, ಯಾವತ್ತು ದೇವತೆಗಳು ಬೇಡಿದ್ದನ್ನು ಕೊಡುವವನು ನೀನೇ, ॥ ೯೩ ॥ ಅಂದಮೇಲೆ ನಾನು ನಿನ್ನನ್ನು ಬಿಟ್ಟು ಯಾರಿಗೆ ಹೇಳಿಕೊಳ್ಳಲಿ ? ॥ ೯೪ ॥ ಸರ್ವಜ್ಞನಾದ ನೀನು ವಿಶ್ವವನ್ನು ರಕ್ಷಿಸುತ್ತೀ ಅಂದಮೇಲೆ ನಿನ್ನ ಹೊರತು ನನ್ನ ಇಚ್ಛೆಯನ್ನು ಪೂರ್ಣ ಮಾಡುವವರಾರು ? ನಾನು ಬೇಡಿದ್ದನ್ನು ಕೊಡುವವರಾರು ? ॥ ೯೫ ॥ ಮತ್ತು ಸಮಸ್ತರ ಮನಸ್ಸಿನಲ್ಲಿದ್ದದ್ದನ್ನು ನಿನ್ನಂತೆ ಯಾರು ತಿಳಿಯುವರು ? ಈ ಪ್ರಕಾರವಾದ ಲಕ್ಷಣಗಳು ನಿನ್ನಲ್ಲಿರುವ ಸರ್ವಜ್ಞತ್ವದ ಗುರುತುಗಳಾಗಿವೆ. ॥ ೯೬ ॥ ನೀನು ಸರ್ವಜ್ಞನೆಂದು ಪುರಾಣಗಳು ಹೊಗಳುವವು ಆದರೆ ದೇವಾ, ನನ್ನ ಅಂತಃಕರಣದಲ್ಲಿ ಮಾತ್ರ ಇದರ ಅನುಭವವು ಬರ-ಲೊಲ್ಲದು. ॥ ೯೭ ॥ ಭೂಮಿಯ ಮೇಲಿನ ಯಾವ ಪ್ರಾಣಿಗಳು ಯಾವ ರೀತಿಯಿಂದ ಇರುತ್ತವೆಂಬುದನ್ನು ತಿಳಿಯುವವನೇ ಸರ್ವಜ್ಞನು. ಅದರಂತೆ ನೀನು ಸಮಸ್ತ ಪ್ರಾಣಿಗಳ ಮನಸ್ಸಿನಲ್ಲಿದ್ದದ್ದನ್ನು ತಿಳಿಯುತ್ತೀ. ॥ ೯೮ ॥ ಪ್ರಾಕೃತ ತಾಯಿ-ತಂದೆಗಳಿಗೆ ತಮ್ಮ ಕೂಸಿಗಾಗುವ ಕಷ್ಟವು ತಿಳಿಯುವದಿಲ್ಲ. ಆದರೆ ಜಗತ್ತಿನ ತಾಯಿ-ತಂದೆಯಾದ ನಿನಗೆ ನನ್ನ ತಾಪಗಳು ತಿಳಿಯುತ್ತವೆ ಆದ್ದರಿಂದ ನೀನು ತಾಯಿ-ತಂದೆಯಂತೆ ನನ್ನಮೇಲೆ ಯಾವಾಗ ಕೃಪಾಮಾಡುತ್ತೀ ? ॥ ೯೯ ॥ ನಿನ್ನನ್ನು ಬೇಡುವವರು ಮೊದಲು ನಿನಗೆ ಏನಾದರೂ ಕೊಟ್ಟಹೊರ್ತು ಅವರಿಗೆ ಏನೂ ಕೊಡಬಾರದೆಂದು ನಿನ್ನ ಮನಸ್ಸಿನಲ್ಲಿದ್ದರೆ ಅದರಂತೆ ನನಗೆ ಹೇಳು. ॥ ೧೦೦ ॥ ನಿನಗೆ ಮೊದಲು ಏನನ್ನಾದರೂ ಕೊಟ್ಟಂಥವರಿಗೆ ಏನು ಕೊಟ್ಟೆ ? ಏನೂ ಕೊಡದಿದ್ದವರಗೆ ಏನು ಬಿಟ್ಟೆ ? ಬಲಿಚಕ್ರವರ್ತಿಯು ತನ್ನ ಐಶ್ವರ್ಯ ಸಹಿತ ಎಲ್ಲ ಭೂಮಿಯನ್ನು ನಿನಗೆ ದಾನ ಕೊಟ್ಟರೆ, ನೀನು ಅವನನ್ನು ಪಾತಾಳಕ್ಕೆ ಮೆಟ್ಟಿಬಿಟ್ಟಿ-ಯಲ್ಲಾ ! ॥ ೧೦೧ ॥ ನೀನು ವಿಭೀಷಣನಿಗೆ ಸುವರ್ಣ ಲಂಕಾದಾನ ಮಾಡಿದಿ. ಆದರೆ ಅವನು ಪೂರ್ವದಲ್ಲಿ ನಿನಗೆ ಆ ಲಂಕೆಯನ್ನು ಯಾವಾಗ ಕೊಟ್ಟಿದ್ದನು ? ॥ ೧೦೨ ॥ ಎಲೈ ಹೃಷೀಕೇಶನೇ, ನೀನು ಧ್ರುವನಿಗೆ ಅಢಳ ಪದವಿಯನ್ನು ಕೊಟ್ಟಿಲ್ಲಾ ! ಆದರೆ ಆ ಐದು ವರ್ಷದ ಕೂಸು ಮೊದಲು ನಿನಗೇನು ಕೊಟ್ಟಿತ್ತು ? ॥ ೧೦೩ ॥ ಶ್ರೀಗುರುವೇ ನೀನು ಪರಶುರಾಮಾವತಾರದಲ್ಲಿ ಈ ಭೂಮಿಯನ್ನೆಲ್ಲ ಗೆದ್ದು ಬ್ರಾಹ್ಮಣರಿಗೆ ದಾನ ಮಾಡಿದಿ, ಆದರೆ

ನಿನಗೆ ಯಾರು ಏನು ಕೊಟ್ಟರು ? || ೧೦೪ || ಸೃಷ್ಟಿಯನ್ನು ಪ್ರೋಷಿಸುವ ದೇವರು ನೀನೊಬ್ಬನೇ ಇರುತ್ತೀ. ನಾನು ಮಶಕನು, ಆದ್ದರಿಂದ ನಾನು ನಿನಗೇನು ಕೊಡಲಿ ? || ೧೦೫ || ಎಲೈ ಶ್ರೀಮಂತನಾದ ನರಹರಿಯೇ ನಾನು ಒಂದುವೇಳೆ ನಿನಗೇನೂ ಕೊಡದಿದ್ದರೆ, ನಿನಗೇನು ಕಡಿಮೆಯಾಗಿದೆ ? ಲಕ್ಷ್ಮಿಯು ನಿನ್ನ ಮನೆಯಲ್ಲಿ ಆನಂದದಿಂದಿರುವಳು || ೧೦೬ || ಎಲೈ ಹೃಷಿಕೇಶನೇ ಇದರ ಹೊರತು ನೀನು ನನ್ನನ್ನೇನು ಕೇಳುತ್ತೀ ? ನಾನೇನು ಕೊಡಲಿ ಹೇಳು. || ೧೦೭ || ಸಣ್ಣ ಬಾಲಕನು ಓಡಿ ಬಂದು ತಾಯಿಯ ತೊಡೆಯ ಮೇಲೆ ಕೂತು ಸ್ತನಪಾನ ಮಾಡುವ ಅಪೇಕ್ಷೆಯಿಂದ ಆನಂದದಿಂದ ಬಾಯಿ ತೆಗೆದಾಗ || ೧೦೮ || ಆ ತಾಯಿಯು ಆ ಕೂಸಿಗೆ ಏನಾದರೂ ಕೊಡೆಂದು ಕೇಳುವಳೇನು ? ಅದರಂತೆ ಶ್ರೀಗುರುನಾಥನೇ ಕೇಳು, ನಾನು ನಿನಗೇನು ಕೊಡಲಿ ? || ೧೦೯ || ಗುರುನಾಥನೇ, ನೀನು ಮೊದಲು ಭಕ್ತರಿಂದ ಏನಾದರೂ ತಕ್ಕೊಂಡು ಆಮೇಲೆ ಅವರಿಗೆ ನೀನು ಏನಾದರೂ ಕೊಟ್ಟರೆ, ನಿನಗೆ ದಾತಾ, ದಯಾನಿಧಿ ಎಂಬ ಹೆಸರು ಉಳಿಯುವದಿಲ್ಲ. || ೧೧೦ || ನಿನ್ನ ಭಕ್ತರಿಗೆ ನೀನೇ ಮೊದಲು ಕೊಡುವದು ಶಕ್ಯವಿಲ್ಲವೆಂದು ನಾನು ಮನಸಿನಲ್ಲಿ ಅಂದರೆ ಅದು ಸತ್ಯವಲ್ಲ. ಯಾಕಂದರೆ ೧೪ ಲೋಕಗಳಿಗೆ ನೀನೇ ದಾತಾ ಇರುತ್ತೀ. || ೧೧೧ || ನೀನು ನನ್ನ ಸೇವಾ ಏನೂ ಮಾಡಿಲ್ಲ, ನಿನಗೇನೂ ಕೊಡುವದಿಲ್ಲವೆಂದು ಮತ್ತೊಂದು ಮಾತು ನಿನ್ನ ಮನಸ್ಸಿನಲ್ಲಿರುವದೆಂದರೆ || ೧೧೨ || ಸೇವಾ ತಕ್ಕೊಂಡು ಕೊಡುವದು ಇದು ಸಾಮಾನ್ಯವಾದದ್ದು. ಆದರಿಂದ (ದಾತೃತ್ವದ ಹೆಸರು ಉಳಿಯುವದಿಲ್ಲ) ನಿನ್ನ ದಾತೃತ್ವಕ್ಕೆ ಭೂಷಣ ಬರುವದಿಲ್ಲ. || ೧೧೩ || ಕೆರೆ, ಭಾವಿ, ಹೊಂಡಗಳು ಭೂಮಿಯಲ್ಲಿರುತ್ತವೆ. ಆಕಾಶದಲ್ಲಿದ್ದ ಮೋಡಗಳು ಮಳೆಯನ್ನು ಸುರಿಸುತ್ತವೆ || ೧೧೪ || ಆ ಕೆರೆ-ಹೊಂಡಗಳು ಆ ಮೋಘದ ಸೇವಾ ಏನೂ ಮಾಡದಿದ್ದರೂ ಸ್ವಾಭಾವಿಕವಾಗಿ ಅವೆಲ್ಲವನ್ನು ನೀರಿನಿಂದ ಪೂರ್ಣ ತುಂಬಿ ಬಿಡುವದಿಲ್ಲವೇ ? || ೧೧೫ || ಹೀಗಿದ್ದು ನೀನು ನನ್ನ ಕಡೆಯಿಂದ ಸೇವೆಯನ್ನು ಅಪೇಕ್ಷಿಸಿದರೆ ಆದರಿಂದ ನಿನಗೆ ದೋಷ ಬಂದು ನಿನಗೆ ದಾತಾ-ದಯಾನಿಧಿ ಎಂಬ ಮಾತು ಹ್ಯಾಗೆ ಶೋಭಿಸುವದು ? || ೧೧೬ || ಎಲೈ ಗುರುನಾಥನೇ ನಿನ್ನ ಸೇವೆ ಮಾಡ

ಬೇಕೆಂಬುದು ನನ್ನ ಮನಸಿನಲ್ಲಿ ಸ್ಥಿರವಾಗಲೊಲ್ಲದು. ನಮ್ಮ ವಂಶಜರೆಲ್ಲರೂ ನಿನ್ನ ಸೇವಾ ಮಾಡುತ್ತ ಬಂದಿದ್ದಾರೆ. ॥ ೧೧೭ ॥ ನಮ್ಮ ವಂಶದ ಪೂರ್ವಜರು ನಿನ್ನ ಚರಣಶೇವೆಯನ್ನು ಮಾಡಿದ ಋಣಸಂಗ್ರಹವು ನಿನ್ನಲ್ಲಿ ಬಹಳವಾಗಿ ಉಳಿದಿದೆ. ॥ ೧೧೮ ॥ ಸಜ್ಜನರು ತಮ್ಮಲ್ಲಿ ಒಬ್ಬನು ಶೇವೆ ಮಾಡಿದ್ದಕ್ಕೆ ಮೆಚ್ಚಿ ಅವನ ಮಕ್ಕಳನ್ನು ಪಾಲಿಸುವಂತೆ ನೀನಾದರೂ ನಮ್ಮ ಹಿರಿಯರ ಪುಣ್ಯದ ಫಲಕ್ಕಾಗಿ ನನ್ನನ್ನು ಪ್ರತಿಪಾಲಿಸು. ॥ ೧೧೯ ॥ ಎಲೈ ಕೃಪಾಸಿಂಧುವೇ, ನನ್ನ ಪೂರ್ವಜರ ಧನದ ಋಣವನ್ನು ನನಗೆ ಕೊಡಲಿಕ್ಕೆ ನಿನಗೆ ಕರುಣಾ ಯಾಕೆ ಬರಲೊಲ್ಲದು ? ॥ ೧೨೦ ॥ ನಮ್ಮದನ್ನು ನಾವು ತಕ್ಕೊಳ್ಳಲಿಕ್ಕೆ ನಿನ್ನ ಮನಸ್ಸು ಯಾಕೆ ಇಲ್ಲ ? ಈಗ ನಿನ್ನನ್ನು ಕೇಳಿ ನಾನು ಸತ್ತಾದಿಂದ ನನ್ನದನ್ನು ತಕ್ಕೊತ್ತೃತ್ತೇನೆ ॥ ೧೨೧ ॥ ಎಲೈ ನರಹರಿಯೇ, ಈಗ ನೀನು ಒಂದು ವೇಳೆ ನನ್ನದನ್ನು ನನಗೆ ಕೊಡದಿದ್ದರೆ ಸಾಧುಸಂತರ ಮುಂದೆ ಹೇಳಿ ಆ ಪಂಚಾಯತಿಯಲ್ಲಿ ನಿನ್ನನ್ನು ಸೋಲಿಸಿ ತಕ್ಕೊಳ್ಳುವೆನು ಎಂದು ತಿಳಿ ॥ ೧೨೨ ॥ ಗುರುನಾಥನೇ ಈಗ ನೀನು ನನ್ನಮೇಲೆ ಸಿಟ್ಟಾದಂತೆ ತೋರುತ್ತದೆ. ನಾನು ಬಹುದಿವಸದಿಂದ ನಿನ್ನ ಅಂಕಿತನಾದ ಸೇವಕನಲ್ಲವೇ ? ॥ ೧೨೩ ॥ ಈ ಭೂಮಿಯಲ್ಲಿ ನಿನ್ನ ಸಮಾನರು ಯಾರಿದ್ದಾರೋ ಅವರ ಮೇಲೆ ನೀನು ಸಿಟ್ಟಾಗುವದು ಯೋಗ್ಯವು ॥ ೧೨೪ ॥ ಶ್ರೀಹರಿಯೇ ಭಕ್ತನಾದ ಪ್ರಲ್ಹಾದನನ್ನು ರಕ್ಷಿಸಲಿಕ್ಕೆ ನೀನು ದೈತ್ಯರ ಮೇಲೆ ಸಿಟ್ಟಾದದ್ದು ಯೋಗ್ಯವು ॥ ೧೨೫ ॥ ಆದರೆ ನೀನು ಬಾಲ ಸೇವಕನಾದ ನನ್ನಮೇಲೆ ಈ ರೀತಿ ಸಿಟ್ಟಾಗುವದು ಯೋಗ್ಯ ಕಾಣುವದಿಲ್ಲ. ಆದ್ದರಿಂದ ನನ್ನಮೇಲೆ ಸಿಟ್ಟಾಗಬೇಡ. ॥ ೧೨೬ ॥ ದೇವಾ, ನನ್ನದೇನಾದರೂ ಅಪರಾದವನ್ನು ಕಂಡು ನೀನು ಒಂದುವೇಳೆ ನನ್ನಮೇಲೆ ಸಿಟ್ಟು ಮಾಡುತ್ತಿದ್ದರೆ ॥ ೧೨೭ ॥ ಸಣ್ಣ ಬಾಲಕನು ತನ್ನ ತಾಯಿಗೆ ನಿಷ್ಠುರತನದಿಂದ ಬೈದರೂ, ಒಂದು ವೇಳೆ ಅಜ್ಞಾನದಿಂದ ಹೊಡೆದರೂ ॥ ೧೨೮ ॥ ಆ ತಾಯಿಯು ಆ ಕೂಸಿನಮೇಲೆ ಸಿಟ್ಟಾಗದೆ ಹರ್ಷದಿಂದ ಆ ಬಾಲಕನನ್ನು ಅಪ್ಪಿಕೊಂಡು ಚಲೋ ಮಾತಿನಿಂದ ಸಮಾಧಾನಪಡಿಸುವದಿಲ್ಲವೇ ? ॥ ೧೨೯ ॥ ಎಲೈ ಹೃಷಿಕೇಶನೇ ನನ್ನಮೇಲೆ ಯಾವ ಅಪರಾಧವನ್ನು ಹೊರಿಸಿ ನನಗೆ ದರ್ಶನ ಕೊಡುವದಿಲ್ಲವೆಂಬದನ್ನು ನನಗೆ ಹೇಳು ॥ ೧೩೦ ॥

ಒಂದುವೇಳೆ ತಾಯಿಯು ಸಿಟ್ಟು ಮಾಡಿದರೆ ಆ ಬಾಲಕನು ತಂದೆಯ ಕಡೆಗೆ ಹೋಗಿ ಹೇಳುವನು. ॥ ೩೧ ॥ ಒಂದುವೇಳೆ ತಂದೆಯು ಸಿಟ್ಟುಮಾಡಿದಾಗ ಆ ಬಾಲಕನು ತಾಯಿಯ ಕಡೆಗೆ ಹೋಗುವನು ಆಗ ಆ ತಾಯಿಯು ಕೃಪಾ ಮಾಡಿ ಅವನನ್ನು ಸಮಾಧಾನ ಮಾಡುವದಿಲ್ಲವೇ? ॥ ೩೨ ॥ ಶ್ರೀಗುರುವೇ, ನನಗೆ ನೀನೇ ತಂದೆ, ನೀನೇ ತಾಯಿಯಾಗಿರಲು ನೀನು ನನ್ನಮೇಲೆ ಸಿಟ್ಟಾದರೆ ಈಗ ನಾನು ಯಾರಿಗೆ ಹೇಳಿಕೊಳ್ಳಲಿ? ನೀನೇ ನನ್ನನ್ನು ಕ್ಷಮಿಸು. ॥ ೩೩ ॥ ಎಲೈ ಗುರುನಾಥನೇ, ನೀನೇ ಜಗತ್ತಿಗೆ ಸ್ವಾಮಿಯೆಂದು ಪ್ರಖ್ಯಾತಿ ಇದ್ದು, ನಿನ್ನ ಆಜ್ಞಾನಿಯಾದ ಮತ್ತು ದಾಸನಾದ ನನ್ನನ್ನು ರಕ್ಷಿಸು. ॥ ೩೪ ॥ ಲೋಕದ ಜನರೆಲ್ಲರೂ ನಿನಗೆ ಅನಾಥರಕ್ಷಕನೆನ್ನುವರು. ನಾನು ನಿನ್ನ ಬಾಲಕನಿರುತ್ತೇನೆ ಕಾರಣ ನನ್ನನ್ನು ರಕ್ಷಿಸು. ॥ ೩೫ ॥ ದೇವಾ, ಪುರಾಣದಲ್ಲಿ ನಿನಗೆ ಕೃಪಾಳುವೆಂದು (ಹೆಸರಿದೆ.) ವರ್ಣನವದೆ. ಹೀಗಿದ್ದು ನಾನು ಹೇಳುವದನ್ನು ನೀನು ಕಿವಿಯಮೇಲೆ ಯಾಕೆ ಹಾಕಿ-ಕೊಳ್ಳುವದಿಲ್ಲ? ॥ ೩೬ ॥ ಗುರುರಾಯಾ ನನ್ನ ದೀನ ವಚನವನ್ನು ಕೇಳಿಕೊಳ್ಳದಂತೆ ನನ್ನದೆಶೆಯಿಂದ ನಿನ್ನ ಮನಸಿನಲ್ಲಿ ಏನು ದ್ವೇಷವಿರುತ್ತದೆ? ॥ ೩೭ ॥ ದೇವಾ, ನಿನು ನನ್ನ ಕರುಣಾವಚನವನ್ನು ಕೇಳಿಕೊಳ್ಳಲೊಲ್ಲೆ ಎಂಬುದನ್ನು ಕೇಳಿ ಕಲ್ಲುಗಳು ಸಹ ಕರಗುತ್ತವೆ. ॥ ೩೮ ॥ ನನ್ನಮೇಲೆ ಅಂತಃಕರಣ ಮಾಡೆಂದು ಹುಚ್ಚನಂತೆ ನಾನು ನಿನಗೆ ಪ್ರಾರ್ಥನಾ ಮಾಡಿಕೊಂಡರೂ ಇನ್ನೂವರೆಗೂ ನನ್ನಮೇಲೆ ನಿನಗೆ ಕರುಣಾ ಯಾಕೆ ಬರಲೊಲ್ಲದು? ॥ ೩೯ ॥ ಎಂದು ಈ ಪ್ರಕಾರ ನಾಮಾಂಕಿತನು ದೀನವಾಣಿಯಿಂದ ವಿನಂತೀ ಮಾಡಿಕೊಳ್ಳುತ್ತಿರಲು ಆಗ ಕೃಪಾಳುವಾದ ಗುರುನಾಥನು (ಅವನ ಸ್ವಪ್ನದಲ್ಲಿ) ಕರುವಿನ ಸಲುವಾಗಿ ಆಕಳು ಅತಿ ತೀವ್ರದಿಂದ ಓಡಿ ಬರುವಂತೆ ತಾನೂ ತೀವ್ರವಾಗಿ ನಾಮಧಾರಕನ ಹತ್ತರ ಬಂದನು ॥ ೪೦-೪೧ ॥ ಆ ಗುರುಮುನಿಯು ಬಂದ ಕೂಡಲೆ ನಾಮಧಾರಕನು ನಮಸ್ಕಾರ ಮಾಡಿ ಅವರ ಪಾದಗಳ ಮೇಲೆ ತನ್ನ ತಲೆಯನ್ನಿಟ್ಟನು. ॥ ೪೨ ॥ ಆಮೇಲೆ ತನ್ನ ಜಂಡಿಕೆಯನ್ನು ಉಚ್ಚಿ ಆ ಕೂದಲುಗಳಿಂದ ಅವರ ಪಾದಧೂಳಿಯನ್ನು ಝಾಡಿಸಿ, ಆನಂದಾಶ್ರುಗಳಿಂದ ಅವರ ಪಾದಗಳನ್ನು ತೊಳೆದನು ॥ ೪೩ ॥ ಆಮೇಲೆ ತನ್ನ ಹೃದಯಮಂದಿರದಲ್ಲಿ ಆ ಗುರುಮೂರ್ತಿ

ಯನ್ನು ಸ್ಪಷ್ಟವಾಗಿ ಸ್ಥಾಪಿಸಿ ಷೋಡಶೋಪಚಾರ ವಿಧಿಯಿಂದ ಪೂಜಿಸುತ್ತ ॥೧೪೪॥ ತನ್ನ ಹೃದಯದಲ್ಲಿ ಶ್ರೀಗುರುನಾಥನು ಸ್ಥಿರವಾಗಿ ಕೂತನೆಂದು ನಾಮಾಂಕಿತನು ಆನಂದಭರಿತನಾದನು. ॥೧೪೫॥ ಭಕ್ತರ ಹೃದಯದಲ್ಲಿ ಶ್ರೀಗುರುನಾಥನು ನಿಜವಾಗಿ ವಾಸವಾಗುತ್ತಾನೆಂದು ಸರಸ್ವತೀಗಂಗಾಧರನಿಗೆ ಅತ್ಯಂತ ಆನಂದ ವಾಯಿತು. ॥೧೪೬॥

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಗ್ರಂಥಕರ್ತಸ್ಯ ಮಂಗಳಾಚರಣಂ ಶ್ರೀ ಗುರುದರ್ಶನಾತ್ ನಾಮಧಾರಕಸ್ಯ ಪ್ರಾರ್ಥನಂ ನಾಮ ಪ್ರಥಮೋಧ್ಯಾಯಃ ॥೧॥ ಶ್ರೀ ಗುರುದೇವದತ್ತ ॥

— ೧ನೇ ಅಧ್ಯಾಯ ಸಮಾಪ್ತ —

---

# ೨ನೆಯ ಅಧ್ಯಾಯ

## (ನಾಲ್ಕು ಯುಗಗಳ ಲಕ್ಷಣ, ಕಲಿಯು ಗುರುಮಹಿಮೆ ಕೇಳಲು ದೀಪಕಾಖ್ಯಾನವನ್ನು ಹೇಳಿದೆ)

ಶ್ರೀ ಗಣೇಶಾಯನಮಃ । ಆಮೇಲೆ ನಾಮಧಾರಕನು ಮನಸಿನಲ್ಲಿ–ದೇವಾ, ತ್ರೈಮೂರ್ತಿರಾಜನಾದ ನೀನೇ ನನ್ನ ಗುರುವು. ನೀನು ಕೃಷ್ಣಾತೀರದಲ್ಲಿ ಉತ್ತಮ ರೀತಿಯಿಂದ ವಾಸಮಾಡಿ ಅಲ್ಲಿ ಬಂದ ಭಕ್ತರಿಗೆ ಆನಂದವನ್ನುಂಟುಮಾಡುವಿ; ಆ ವಿನೋದವನ್ನು ಸ್ವರ್ಗವಾಸಿ ದೇವತೆಗಳು ನೋಡುತ್ತಿರುವರು ॥ ೧ ॥ ಎಂದು ಆ ವಿಷ್ಣುನಾಮಾಂಕಿತನು ಶ್ರೀ ಗುರುಚರಣಗಳನ್ನು ಧ್ಯಾನಿಸುತ್ತ ಬಹಳ ಕಷ್ಟದಿಂದ ದಾರೀ ನಡೆದು ಶ್ರಮಬಟ್ಟು ಒಂದು ಗಿಡದ ಬುಡದಲ್ಲಿ ವಿಶ್ರಮಿಸಿದನು ॥ ೨ ॥ ಆಮೇಲೆ ಶ್ರೀ ಗುರುಮೂರ್ತಿಯನ್ನು ನೆನಿಸುತ್ತ ಒಂದು ಕ್ಷಣ ಹೊತ್ತು ಮಲಗಿಕೊಳ್ಳಲಾಗಿ ಅವನಿಗೆ ನಿದ್ರೆಬಂದು ಆಗ ಒಂದು ಸ್ವಪ್ನ ಬಿತ್ತು, ಆ ಸ್ವಪ್ನದಲ್ಲಿ ಕೃಪಾನಿಧಿಯಾದ ಅನಂತನು ॥ ೩ ॥ ಜಟಾಧಾರಿಯೂ ಭಸ್ಮಾಂಕಿತನೂ ವ್ಯಾಘ್ರಚರ್ಮವನ್ನು ಪರಿಧಾನ ಮಾಡಿದವನೂ ಪೀತಾಂಬರ ಧಾರಿಯೂ ಆಗಿ ಬಂದದ್ದನ್ನು ಕಂಡನು. ॥ ೪ ॥ ಆಮೇಲೆ ಆ ಯೋಗೀಶ್ವರನ ಮೂರ್ತಿಯು ಆ ನಾಮಾಂಕಿತನ ಹತ್ತರ ಬಂದು, ಅವನ ಹಣೆಗೆ ವಿಭೂತಿಯನ್ನು ಹಚ್ಚಿ, ಅಭಯಕೊಟ್ಟು ಅವನ ತಲೆಯಮೇಲೆ ತನ್ನ ವರದ ಹಸ್ತವನ್ನಿಟ್ಟನು. ॥ ೫ ॥ ಆ ನಾಮಧಾರಕನು ಇದೆಲ್ಲವನ್ನು ಸ್ವಪ್ನದಲ್ಲಿಯೇ ಕಂಡು ಎಚ್ಚರಾಗಿ ವಿಸ್ಮಯದಿಂದ ನಾಲ್ಕೂಕಡೆಗೆ ನೋಡುತ್ತಿದ್ದನು. ॥ ೬ ॥ ಆಮೇಲೆ ಸ್ವಪ್ನದಲ್ಲಿಕಂಡ ಆ ಮೂರ್ತಿಯನ್ನೇ ಮನಸಿನಲ್ಲಿ ಧ್ಯಾನಿಸುತ್ತ ಮುಂದೆ ಮಾರ್ಗವನ್ನು ಕ್ರಮಿಸುತ್ತಿರಲು ಸ್ವಲ್ಪ ದೂರದಲ್ಲಿ ಸ್ವಪ್ನದಲ್ಲಿಕಂಡ ಮೂರ್ತಿಯೇ ಪ್ರತ್ಯಕ್ಷವಾಗಿ ಬರುವದನ್ನು ಕಂಡನು. ॥ ೭ ॥ ಕೂಡಲೆ ಅವರಿಗೆ ನಾ। ನ। ಮಾಡಿ ದೀನವಾಣಿಯಿಂದ— ಶ್ರೀ ಗುರುಯೋಗಿಶ್ವರನೇ, ನನಗೆ ನೀನೇ ತಾಯಿ-ತಂದೆಯು, ನನ್ನಮೇಲೆ ಕೃಪಾಮಾಡು ಎಂದು ಬೇಡಿಕೊಂಡು— ॥ ೮ ॥ ಜಯ

ಜಯ ಯೋಗಾಧೀಶಾ, ಕೃಪಾನಿಧಿ ಸಿದ್ಧಮುನಿಯೇ ನೀನು ಅಜ್ಞಾನವೆಂಬ ಕತ್ತಲೆಯನ್ನು ದೂರ ಮಾಡಲಿಕ್ಕೆ ಸೂರ್ಯಜ್ಯೋತಿಯಂತೆ ಪ್ರಕಾಶಿಸುವವನು ಆಗಿರುತ್ತೀ ॥ ೯ ॥ ಸ್ವಾಮೀ, ನಿಮ್ಮ ದರ್ಶನ ಮಾತ್ರದಿಂದಲೇ ನನ್ನ ಯಾವತ್ತು ಪಾಪರೂಪ ದೋಷಗಳು ಹೋದವು, ನೀವು ನನ್ನ ಉದ್ಧಾರಕರ್ತರೆಂದೇ ತಿಳಿದು ಈಗ ಇಲ್ಲಿಗೆ ಬಂದು ನನಗೆ ದರ್ಶನ ಕೊಟ್ಟಿರಿ ॥ ೧೦ ॥ ಈಗ ಭಕ್ತನಾದ ನನ್ನಮೇಲೆ ಕೃಪಾಮಾಡಿ ಈದಿನ ತಾವು ಎಲ್ಲಿಂದ ಬರೋಣ ವಾಯಿತು? ತಮಗೆ ಎಂಥ ಮುನಿಯೆಂದು ಕರೆಯುತ್ತಾರೆ? ತಮ್ಮ ವಸತಿ ಸ್ಥಾನವು ಯಾವದು? ಎಂಬದನ್ನು ಹೇಳಿರಿ ಎಂದು ಕೇಳಿದನು. ॥ ೧೧ ॥ ಆಗ ಆ ಸಿದ್ಧಮುನಿಗಳು—ತಮ್ಮಾ, ನಾವು ಯೋಗಿಗಳು, ಭೂಲೋಕ ಸ್ವರ್ಗಲೋಕಗಳಲ್ಲಿರುವ ಪ್ರಸಿದ್ಧ ತೀರ್ಥಗಳನ್ನು ನೋಡುತ್ತ ಆಡ್ಡಾಡುತ್ತೇವೆ. 'ಶ್ರೀನರಸಿಂಹ ಸರಸ್ವತಿ" ಗಳೆಂಬ ನಮ್ಮ ಗುರುಗಳು ಈ ಜಗತ್ತಿನಲ್ಲಿ ಬಹಳ ಪ್ರಖ್ಯಾತರಾಗಿರುವರು. ॥ ೧೨ ॥ ಅವರು ಪ್ರತ್ಯಕ್ಷ ತ್ರಿಮೂರ್ತಿ ಅವ ತಾರಿಗಳು. ಅವರು ಈ ಭೂಮಿಯಲ್ಲಿ ಭೀಮಾ–ಅಮರಜಾ ನದಿಗಳ ಸಂಗಮದಲ್ಲಿರುವ ಗಾಣಗಾಪುರ ಕ್ಷೇತ್ರದಲ್ಲಿ ವಾಸಮಾಡಿರುವರು. ॥ ೧೩ ॥ ಭಕ್ತೋದ್ಧಾರಕ್ಕಾಗಿ ಆ ತ್ರೈಮೂರ್ತಿಗಳೇ ಈ ಪ್ರಕಾರ ಅವತರಿಸಿರುವರು. ಆದ್ದರಿಂದ ಎಲ್ಲ ಯೋಗಾಭ್ಯಾಸಿಗಳು ತಾವು ಈ ಭವಸಾಗರದಿಂದ ಪಾರಾಗುವದಕ್ಕಾಗಿ ಆ ಗುರುಮೂರ್ತಿಯನ್ನು ಸದಾ ಧ್ಯಾನಿಸುತ್ತಿರುವರು. ॥ ೧೪ ॥ ಕೃಪಾನಿಧಿಗಳಾದ ಆ ಶ್ರೀ ಗುರುಗಳು ತಮ್ಮ ಭಕ್ತ ಶಿಷ್ಯರಿಗೆ ಸಕಲ ಸುಖ–ಐಶ್ವರ್ಯ, ಆನಂದಗಳುಂಟಾಗುವಂತೆ ಸದಾ ವರಗಳನ್ನು ಕೊಡುತ್ತಿರುವರು. ॥ ೧೫ ॥ ಅಂದಮೇಲೆ ಅವರ ಭಕ್ತರಿಗೆ ದೈನ್ಯವು ಹ್ಯಾಗೆ ಬರಬೇಕು? ಆ ಭಕ್ತರು ಅಖಂಡ ಲಕ್ಷ್ಮಿಯಿಂದಲೂ ಧನ, ಧಾನ್ಯ, ಗೋಗಳಿಂದಲೂ ಅಷ್ಟೈಶ್ವರ್ಯದಿಂದಲೂ ಪರಿಪೂರ್ಣರಾಗಿ ಆನಂದಪಡುತ್ತಿರುವರು ಎಂದು ಹೇಳಿದರು, ॥ ೧೬ ॥ ಸಿದ್ಧಮುನಿಗಳು ಈ ಪ್ರಕಾರ ತಮ್ಮ ಗುರುಗಳನ್ನು ವರ್ಣಿಸಿದ್ದು ಕೇಳಿ ನಾಮಧಾರಕನು ಅವರಿಗೆ ವಿನಯದಿಂದ ಕೈ ಮುಗಿದು—ಸ್ವಾಮೀ, ನಾನೂ ಸದಾಯತಿಗಳಾದ ಶ್ರೀ ಗುರುಗಳನ್ನೇ ಧ್ಯಾನಿಸುತ್ತಿರುವೆನು. ॥ ೧೭ ॥ ಸ್ವಾಮೀ, ಸಿದ್ಧಮುನಿ ಗಳೇ, ನೀವು ಈ ಪ್ರಕಾರ ಶ್ರೀ ಗುರುಗಳ ಕೀರ್ತಿಯ ಹಾಗು ಖ್ಯಾತಿಗಳ ಬಿರುದನ್ನು ವರ್ಣಿಸಿ ಹೇಳಿದಿರಿ. ಆದರೆ

ನಾವೂ ವಂಶಪರಂಪರೆಯಾಗಿ ಭಕ್ತಿಯಿಂದ ಶ್ರೀ ಗುರುಗಳನ್ನು ಸದಾ ಸೇವಿಸಿ ಧ್ಯಾನಿಸುತ್ತಿದ್ದರೂ ನನಗೆ ಕಷ್ಟವು ಯಾಕಾಗಬೇಕು ? ॥ ೧೮ ॥ ನೀವು ನನ್ನ ಉದ್ಧಾರಕರೆಂದೇ ನನ್ನ ಕಷ್ಟವನ್ನು ದೂರ ಮಾಡುವದಕ್ಕಾಗಿ ಖರೇ ಅಂತಃಕರಣದಿಂದ ಬಂದು ಈಗ ನನಗೆ ದರ್ಶನ ಕೊಟ್ಟಿರಿ. ಸ್ವಾಮೀ, ಈಗ ತಾವು ನನ್ನ ಸಂಶಯವನ್ನು ಕಳೆದು ನನಗೆ ನಿರೋಪ ಕೊಡಬೇಕು ಎಂದು ಅಂದನು ॥ ೧೯ ॥ ಆಗ ಸಿದ್ಧಮುನಿಗಳು:-- ಎಲೈ ಜಟಿಧಾರಿ ಶಿಷ್ಯನೇ ಕೇಳು. ಭಕ್ತವತ್ಸಲರಾದ ನಮ್ಮ ಗುರುಗಳು ಇವರು ಸಣ್ಣವರು ದೊಡ್ಡವರು ಎನ್ನದೆ ಎಲ್ಲರಮೇಲೆ ಕೃಪಾ ಮಾಡುವರು. ॥ ೨೦ ॥ ಗುರುಗಳ ಕೃಪೆಯಾದವರಿಗೆ ದೈನ್ಯವೆಲ್ಲಿಂದಬರಬೇಕು ? ಸಮಸ್ತ ದೇವತೆಗಳು ವಂಶ ಪರಂಪರೆಯಾಗಿ ಆ ಗುರುಭಕ್ತನ ವಶರಾಗುವರು ಅವನು ಕಲಿಯನ್ನೂ ಕಾಲನನ್ನೂ ಸಹ ಗೆದೆಯುವನು. ॥ ೨೧ ॥ ಎಲೈ ನಾಮಧಾರಕಾ ನೀನು ಇಂಥ ಮಹತ್ವವಾದ ವಸ್ತುವನ್ನು ಪೂಜಿಸಿದರೂ ಇನ್ನೂ ನೀನು ಒಳ್ಳೇ ದೈನ್ಯದಿಂದ ಮಾತಾಡುತ್ತೀ, ಅಂದಮೇಲೆ ಶ್ರೀ ಗುರುಗಳ ವಿಷಯದಲ್ಲಿ ನಿನ್ನ ಮನಸ್ಸು ಇನ್ನೂ ದೃಢವಿಲ್ಲದ್ದರಿಂದ ನೀ ಇನ್ನೂ ಕಷ್ಟವನ್ನು ಅನುಭವಿಸುತ್ತೀ. ॥ ೨೨ ॥ ಶ್ರೀ ಗುರುವು ತ್ರೈಮೂರ್ತಿ ಸ್ವರೂಪವೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಏಕಭಾವದಿಂದ ಸೇವಿಸಬೇಕು, ಅಂದರೆ ಅವರು ಸಕಲ ವರಗಳನ್ನು ಕೊಡುವರು. ॥ ೨೩ ॥ ಒಂದುವೇಳೆ ಹರಿಯಾಗಲಿ, ತ್ರಿಪುರಾರಿಯಾಗಲೀ ಗುರುಭಕ್ತರಮೇಲೆ ಸಿಟ್ಟಾದರೆ ಅವರ ಗುರುಗಳು ತಮ್ಮ ಭಕ್ತರನ್ನು ನಿಶ್ಚಯವಾಗಿ ಕಾಯುವರು. ॥ ೨೪ ॥ ಗುರುವು ಸಿಟ್ಟಾದರೆಮಾತ್ರ ಆ ಶಿಷ್ಯನನ್ನು ಹರಿ-ಹರರು ಕಾಯಲಾರರೆಂದು ನಿಶ್ಚಯವಾಗಿ ನಂಬು ಎಂದು ಹೇಳಿದರು. ॥ ೨೫ ॥ ಈ ಪ್ರಕಾರ ಸಿದ್ಧಮುನಿಗಳ ಮಾತು ಕೇಳಿ ನಾಮಧಾರಕನು ಅವರ ಚರಣಗಳಿಗೆ ನಮಸ್ಕರಿಸಿ, ಒಳ್ಳೇ ಭಕ್ತಿ ವಿನಯಗಳಿಂದ ಕೈಮುಗಿದು— ॥ ೨೬ ॥ ಸ್ವಾಮೀ, ನೀವು ಈ ಪ್ರಕಾರವಾಗಿ ಹೇಳಿದಿರಿ, ಆದರೆ ಶ್ರೀ ಗುರುಗಳು ತ್ರೈಮೂರ್ತಿಸ್ವರೂಪರು ಹ್ಯಾಗಾದರೆಂಬ ಬಗ್ಗೆ ನನ್ನ ಮನಸ್ಸಿನಲ್ಲಿ ಸಂಶಯ ಇತ್ತು. ॥ ೨೭ ॥ ಆದರೆ ನೀವು ಹರಿ-ಹರರು ಸಿಟ್ಟಿಗೆದ್ದರೆ ಶ್ರೀ ಗುರುವು ನಿಶ್ಚಯವಾಗಿ ಕಾಯುತ್ತಾನೆ. ಶ್ರೀ ಗುರುವು ಸಿಟ್ಟಾದರೆ ಮಾತ್ರ ಯಾರೂ ಕಾಯುವದಿಲ್ಲವೆಂದು ಹೇಳಿದಿರಿ. ॥ ೨೮ ॥ ಈ ಪ್ರಕಾರ ಯಾವ

ಶಾಸ್ತ್ರ–ಪುರಾಣಗಳಲ್ಲಿ ಹೇಳಿರುತ್ತದೆಂಬದನ್ನು ಹೇಳಿ ನನ್ನ ಸಂಶಯವನ್ನು ದೂರಮಾಡಿರಿ, ಅಂದರೆ ನನ್ನ ಮನಸ್ಸು ಸ್ಥಿರವಾಗುವದು. ‖ ೨೯ ‖ ಎಂದು ನಾಮಧಾರಕನು ಸಿದ್ಧರಿಗೆ ವಂದಿಸಿ ಕೇಳಿದನು. ಅವನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು ಕೃಪೆಯಿಂದ ಅವನಿಗೆ ಹೇಳಹತ್ತಿದರು ‖ ೩೦ ‖ ಎಲೈ ನಾಮಧಾರಕನೇ ಕೇಳು, ನೀನು ಕೇಳಿದ ಪ್ರಶ್ನೆಗೆ ನಾನು ವೇದವಾಕ್ಯಗಳ ಸಾಕ್ಷಿಯಿಂದ ನಿನಗೆ ಉತ್ತರ ಹೇಳುವೆನು, ಏಕಚಿತ್ತದಿಂದ ಕೇಳು. ‖ ೩೧ ‖ ಮೊದಲು ಬ್ರಹ್ಮನ ಮುಖದಿಂದ ನಾಲ್ಕು ವೇದಗಳು ಉತ್ಪನ್ನವಾದವು, ಅವುಗಳಿಂದ ವಿಖ್ಯಾತ ವಾದ ೧೮ ಪುರಾಣಗಳುಂಟಾದವು. ‖ ೩೨ ‖ ಅವುಗಳಲ್ಲಿ ಬ್ರಹ್ಮನ ವಾಣಿಯಿಂದ ಪ್ರಖ್ಯಾತವಾಗಿ ಬಂದ ಬ್ರಹ್ಮ ವೈವರ್ತವೆಂಬುವದು ತ್ರಿಲೋಕಗಳಲ್ಲಿ ಪ್ರಸಿದ್ಧವಾಗಿರುವದು. ‖ ೩೩ ‖ ದ್ವಾಪರ ಯುಗಾಂತ್ಯದಲ್ಲಿ ವಿಷ್ಣು ಮೂರ್ತಿಯಾದ ನಾರಾಯಣನೇ ವ್ಯಾಸರಾಗಿ ಹುಟ್ಟಿ, ಆ ಬ್ರಹ್ಮವೈವರ್ತ ಪುರಾಣವನ್ನು ಬ್ರಹ್ಮಸೂತ್ರ ಭಾಷ್ಯಾರ್ಥ ಗಳಿಂದ ವಿಸ್ತಾರವಾಗಿ ಈ ಭೂಲೋಕದಲ್ಲಿ ಪ್ರಸಿದ್ಧ ಮಾಡಿದರು. ‖ ೩೪ ‖ ಸಮಸ್ತ ಋಷಿಗಳು ಆ ವ್ಯಾಸರ ಮುಖದಿಂದ ಆ ಪುರಾಣವನ್ನು ಕೇಳಿದರು. ಎಲೈ ನಾಮಧಾರಕಾ, ಆ ಕಥೆಯನ್ನು ನಿನಗೆ ವಿಸ್ತಾರವಾಗಿ ಹೇಳು ವೆನು, ಏಕಚಿತ್ತದಿಂದ ಕೇಳು. ‖ ೩೫ ‖ ಒಂದಾನೊಂದುದಿವಸ ಕಲಿಯುಗವು ಹರ್ಷದಿಂದ ಬಂದು ಬ್ರಹ್ಮನನ್ನು ಕುರಿತು— ಸ್ವಾಮೀ, ಗುರುಮಹಿಮೆಯು ಯಾವ ಪ್ರಕಾರವಾಗಿರುವದು ? ಎಂದು ಕೇಳಿದನು. ಆಗ ಬ್ರಹ್ಮನು ಅವನಿಗೆ ಗುರುಮಹಿಮೆಯನ್ನು ವಿಸ್ತಾರವಾಗಿ ಹೇಳಿದನು, ಎಂದು ಹೇಳಿದರು. ‖ ೩೬ ‖ ಈ ಪ್ರಕಾರವಾದ ಸಿದ್ಧರ ಮಾತುಕೇಳಿ ನಾಮಧಾರಕನು ಪುನಃ ಸಿದ್ಧರಿಗೆ ವಂದಿಸಿ, ಭಕ್ತಿಭಾವದಿಂದ ಕೈಮುಗಿದು–– ‖ ೩೭ ‖ ಸಿದ್ಧಯೋಗೀಶ್ವರನೇ, ಅಜ್ಞಾನವೆಂಬ ಕತ್ತಲೆಗೆ ಸೂರ್ಯನಂತಿದ್ದವನೇ, ಕೃಪಾಸಿಂಧುವೇ, ನೀನು ಭವಸಾಗರ ತಾರಕನಿದ್ದು ನನಗೆ ದರ್ಶನಕೊಟ್ಟೆ. ‖ ೩೮ ‖ ಸ್ವಾಮೀ, ಬ್ರಹ್ಮದೇವನು ಕಲಿಯುಗಕ್ಕೆ ಗುರುಮಹಿಮೆಯನ್ನು ಯಾವ ಕಾರ್ಯಕ್ಕಾಗಿ ಹೇಳಿದನು ಎಂಬದನ್ನು ಆದ್ಯಂತ ವಿಸ್ತಾರವಾಗಿ ನನಗೆ ಹೇಳಿರಿ ಎಂದನು. ‖ ೩೯ ‖ ಆಗ ಸಿದ್ಧರು— ಎಲೈ ಶಿಷ್ಯಾ, ಏಕಚಿತ್ತದಿಂದ ಕೇಳು. ಹಿಂದಕ್ಕೆ ಪ್ರಳಯವಾದಾಗ ಆದಿ ಮೂರ್ತಿಯಾದ

ನಾರಾಯಣನು ಸ್ವಸ್ಥ ವಟಪತ್ರದಮೇಲೆ ಶಯನ ಮಾಡಿದ್ದನು. ॥ ೪೦ ॥ ಅವ್ಯಕ್ತ ಮೂರ್ತಿಯಾದ ನಾರಾಯಣನು ಈ ಪ್ರಕಾರ ವಟಪತ್ರದಮೇಲೆ ಶಯನ ಮಾಡಿದಾಗ ಆತನಿಗೆ ಮತ್ತೊಂದು ಸೃಷ್ಟಿಯನ್ನು ರಚಿಸುವ ಇಚ್ಛೆಯಾಯಿತು. ॥ ೪೧ ॥ ಆಗ ಆದಿಪುರುಷನಾದ ನಾರಾಯಣನು ತನ್ನ ಮನಸ್ಸಿನಲ್ಲಿ— ಪ್ರಪಂಚ ಅಂದರೆ ಸೃಷ್ಟಿ ರಚನೆಯು ಎಂದು ತಿಳಿದು ಹಾಗೆ ಮಾಡಬೇಕೆಂದು ಮನಸ್ಸು ಬಂತು ಆ ಕಾರಣಕ್ಕಾಗಿ ಎಚ್ಚರಾದನು. ॥ ೪೨ ॥ ಈ ಪ್ರಕಾರ ನಾರಾಯಣನು ಎಚ್ಚರಾಗಿ, ತನ್ನ ಮಾನಸಿನಂತೆ ಮಾಡಲಿಕ್ಕೆ ಬುದ್ಧಿಯುಳ್ಳವನಾಗಿ ತನ್ನ ನಾಭಿಯಿಂದ ತ್ರೈಲೋಕ್ಯದ ರಚನೆಯ ಮನೆಯಾದ ಒಂದು ಕಮಲವನ್ನು ಉತ್ಪನ್ನಮಾಡಿದನು. ॥ ೪೩ ॥ ಆ ಕಮಲ ಮಧ್ಯದಿಂದ ಬ್ರಹ್ಮನು ಹುಟ್ಟಿ ಅವನು ನಾಲ್ಕೂ ದಿಕ್ಕಿಗೆ ನೋಡಿದ್ದರಿಂದ ನಾಲ್ಕು ಮುಖಗಳುಳ್ಳವನಾದನು. ॥ ೪೪ ॥ ಆಗ ಆ ಬ್ರಹ್ಮದೇವನು ಎಲ್ಲರಕಿಂತಲೂ ನಾನೇ ಬಲಿಷ್ಠನು. ನನ್ನಹೊರತು ಬೇರೆ ಯಾರೂ ಬಲಿಷ್ಠರಿಲ್ಲ ಎಂದು ಅನ್ನಹತ್ತಿದನು. ॥ ೪೫ ॥ ಅದನ್ನು ಕೇಳಿ ನಾರಾಯಣನು ನಕ್ಕು ಗಾಂಭೀರ್ಯದಿಂದ— ಎಲೈ ಬ್ರಹ್ಮನೇ, ನಾನು ಮಹಾ ವಿಷ್ಣುವು, ನನ್ನನ್ನು ಸೇವಿಸು ಎಂದನು. ॥ ೪೬ ॥ ಆಗ ಬ್ರಹ್ಮನು ವಿಷ್ಣುವನ್ನು ಕಂಡು, ಆತನಿಗೆ ಹರ್ಷದಿಂದ ನಮುಸ್ಕರಿಸಿ, ಅನೇಕ ವೇಳೆಯುವರೆಗೆ ನಾನಾಪ್ರಕಾರವಾಗಿ ಆತನನ್ನು ಸ್ತುತಿಸಿದನು. ॥ ೪೭ ॥ ಆ ಸ್ತುತಿಗೆ ಮೆಚ್ಚಿ ನಾರಾಯಣನು ಸಂತೋಷದಿಂದ— ಎಲೈ ಬ್ರಹ್ಮನೇ, ನೀನು ಸೃಷ್ಟಿಯನ್ನು ರಚಿಸು, ಎಂದು ಕಠಿಣ ರೀತಿಯಿಂದ ಆಜ್ಞೆ ಮಾಡಿದನು. ॥ ೪೮ ॥ ಆಗ ಬ್ರಹ್ಮನು— ಹೇ ಮಹಾವಿಷ್ಣುವೇ, ಸೃಷ್ಟಿಯನ್ನು ರಚಿಸಲಿಕ್ಕೆ ನನಗೆ ಗೊತ್ತಿಲ್ಲ ಮತ್ತು ಅದರ ರಚನೆಯು ಹ್ಯಾಗೆ ಅದೆ ಎಂಬದನ್ನು ಕಣ್ಣಿನಿಂದಸಹ ನೋಡಿಲ್ಲ ಅಂದಮೇಲೆ ನಾನು ಸೃಷ್ಟಿಯನ್ನು ಹ್ಯಾಗೆ ರಚಿಸಲಿ ? ಎಂದನು ॥ ೪೯ ॥ ಬ್ರಹ್ಮನ ಮಾತು ಕೇಳಿ ಮಹಾವಿಷ್ಣುವು ಅವನಿಗೆ— ಎಲೈ ಬ್ರಹ್ಮನೇ ಈ ವೇದಗಳನ್ನು ತೆಗೆದುಕೋ ಎಂದು ಅವುಗಳನ್ನು ಕೊಟ್ಟು ॥ ೫೦ ॥ ಈ ವೇದಗಳಲ್ಲಿ ಸೃಷ್ಟಿಯನ್ನು ರಚಿಸುವ ವಿಚಾರವು ವಿಸ್ತಾರವಾಗಿ ಹೇಳಿರುವದು. ಅದರಂತೆ ನೀನು ಸ್ಥಿರ ಸೃಷ್ಟಿಯನ್ನು ರಚಿಸಿ ಪ್ರಸಿದ್ಧಮಾಡು. ॥ ೫೧ ॥ ಈ ವೇದಗಳು ಅನಾದಿಯಾಗಿರುತ್ತವೆಂದು ತಿಳಿ. ಈ ವೇದಗಳಲ್ಲಿ ಕೈಯೊಳಗಿನ

ಕನ್ನಡಿಯಂತೆ ಸೃಷ್ಟಿ ರಚನೆಯ ರೀತಿಯನ್ನು ಹೇಳಿರುವದು, ಆ ಕ್ರಮದಂತೆ ನೀನು ಸೃಷ್ಟಿಯನ್ನಂಟು ಮಾಡು. ॥ ೫೨ ॥ ಎಂದು ವಿಷ್ಣುವು ಹೇಳಲು ಅವನ ಮಾತು ಕೇಳಿ ಬ್ರಹ್ಮನು ಆ ವೇದಮಾರ್ಗದಂತೆ ಯಾವಾಗಲೂ ಸೃಷ್ಟಿಯನ್ನು ರಚಿಸಹತ್ತಿದನು. ॥ ೫೩ ॥ ಎಲೈ ನಾಮಧಾರಕನೇ, ಆ ಪ್ರಕಾರ ಬ್ರಹ್ಮದೇವನು ಮೊದಲು ಮನುಷ್ಯರನ್ನು ಹುಟ್ಟಿಸಿ ಆಮೇಲೆ ಕ್ರಮವಾಗಿ ನಾನಾತರದ ಸ್ಥಾವರ ಜಂಗಮ ಪದಾರ್ಥಗಳನ್ನೂ ಸ್ವೇದಜ-ಅಂಡಜ-ಜಾರಜ-ಉದ್ಭಿಜ ಮೊದಲಾದವುಗಳನ್ನು ನಿರ್ಮಿಸಿದನು. ॥ ೫೪ ॥ ಆಮೇಲೆ ಬ್ರಹ್ಮನು ವಿಷ್ಣುವಿನ ಆಜ್ಞೆ ಹಾಗು ಸೃಷ್ಟಿ ರಚನೆಯ ಕ್ರಮಗಳಂತೆ ಮೂರು ಲೋಕಗಳನ್ನು ಹುಟ್ಟಿಸಿದನೆಂದು ವ್ಯಾಸರು ತಮ್ಮ ಅಷ್ಟಾದಶ ಪುರಾಣಗಳಲ್ಲಿ ವಿಸ್ತಾರವಾಗಿ ಹೇಳಿರುವರು. ॥ ೫೫-೫೬ ॥ ಅವುಗಳಲ್ಲಿ ಬ್ರಹ್ಮ ವೈವರ್ತವೆಂಬ ಪುರಾಣವು ಪ್ರಸಿದ್ಧವಾಗಿರುವದು. ಅದನ್ನು ಸೂತನು ಶೌನಕಾದಿ ಋಷಿಗಳಿಗೆ ಹೇಳಿದನು. ಎಲೈ ನಾಮಧಾರಕಾ ಅದನ್ನು ನಾನು ನಿನಗೆ ವಿಸ್ತಾರವಾಗಿ ಹೇಳುತ್ತೇನೆ ಕೇಳು ॥ ೫೭ ॥ ಬ್ರಹ್ಮನು ಮೊದಲು ಬ್ರಹ್ಮನಿಷ್ಠರೂ ನಿರ್ಗುಣರೂ ಆದ ಸನಕಾದಿ ಋಷಿಗಳನ್ನೂ ಸಗುಣರಾದ ಮರೀಚಾದಿ ೧೦ ಮಂದಿ ಪ್ರಜಾಪತಿಗಳನ್ನೂ ಹುಟ್ಟಿಸಿದನು. ॥ ೫೮ ॥ ಆಮೇಲೆ ದೇವ-ದೈತ್ಯರನ್ನು ಹುಟ್ಟಿಸಿದನು. ಎಲೈ ಶಿಷ್ಯೋತ್ತಮನೇ, ಆ ಕಥೆಯನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು. ॥ ೫೯ ॥ ಆಮೇಲೆ ಬ್ರಹ್ಮನು ಕ್ರಮವಾಗಿ ಕೃತ, ತ್ರೇತಾ, ದ್ವಾಪರ, ಕಲಿಗಳೆಂಬ ನಾಲ್ಕು ಯುಗಗಳನ್ನು ಹುಟ್ಟಿಸಿ, ಅವರು ಭೂಲೋಕದಲ್ಲಿ ಹ್ಯಾಗೆ ನಡೆಯಬೇಕೆಂಬದನ್ನು ಹೇಳಿದನು. ॥ ೬೦ ॥ ಅವನ್ನು ನಿನಗೆ ಹೇಳುತ್ತೇನೆ ಕೇಳು. ಬ್ರಹ್ಮನು ಮೊದಲು ಕೃತ ಯುಗವನ್ನು ಕರೆದು— ಎಲೈ ಕೃತಯುಗನೇ, ನೀನು ಭೂಲೋಕಕ್ಕೆ ಹೋಗಿ ಅಲ್ಲಿ ನಿನ್ನ ಪ್ರಸಿದ್ಧಿಯನ್ನು ಮಾಡು ಎಂದನು. ॥ ೬೧ ॥ ಆ ಬ್ರಹ್ಮನ ಮಾತುಕೇಳಿ ಕೃತಯುಗನು ಸಂತೋಷದಿಂದ ಬಂದನು. ಎಲೈ ಶ್ರೋತೃಗಳೇ ಅವನ ಲಕ್ಷಣಗಳನ್ನು ಹೇಳುವೆನು ಕೇಳಿರಿ. ॥ ೬೨ ॥ ಅವನು ಕೊರಳಲ್ಲಿ ಯಜ್ಞೋಪವೀತವನ್ನೂ, ಕೊರಳು ಮತ್ತು ಕರಕಂಕಣಗಳಲ್ಲಿ ರುದ್ರಾಕ್ಷ ಮಾಲೆಗಳನ್ನೂ ಧರಿಸಿ, ಅಸತ್ಯವನ್ನೆಂದೂ ಆಡದೆ ಪೂರ್ಣ ವೈರಾಗ್ಯಶಾಲಿಯಾಗಿ. ॥ ೬೩ ॥ ಬ್ರಹ್ಮನ

ಹತ್ತರ ಬಹು ವಿನಯದಿಂದ ಬಂದು ಕೈಮುಗಿದು— ಸ್ವಾಮೀ, ನೀವು ನನಗೆ ಭೂಲೋಕಕ್ಕೆ ಹೋಗೆನ್ನುತ್ತೀರಿ, ಅಲ್ಲಿ ನಾನು ಯಾವ ರೀತಿಯಿಂದ ಹೋಗಲಿ ‖ ೧೪ ‖ ಯಾಕಂದರೆ ಅಲ್ಲಿಯ ಜನರಲ್ಲಿ ಅಸತ್ಯ, ನಿಂದಾ, ಅಪವಾದ ಮುಂತಾದ ದೋಷಯುಕ್ತ ಕರ್ಮಗಳು ನಡೆಯುತ್ತವೆ. ಅವು ನನಗೆ ಸಹಿಸುವದಿಲ್ಲ. ಆದ್ದರಿಂದ ನಾನು ಅಲ್ಲಿ ಹ್ಯಾಗೆ ನಡೆಯಬೇಕು ? ಎಂದನು. ‖ ೧೫ ‖ ಆ ಕೃತಯುಗನ ಮಾತುಕೇಳಿ ಬ್ರಹ್ಮನು— ಎಲೈ ಕೃತಯುಗನೇ, ನೀನು ಸತ್ವಗುಣದಿಂದ ಕೆಲವುದಿವಸ ಅಲ್ಲಿ ವಾಸಮಾಡಿಕೊಂಡಿರು. ‖ ೧೬ ‖ ಅದು ನಿನಗೆ ಜಡವಾಗುವದಿಲ್ಲವೆಂದು ತಿಳಿ, ಆಮೇಲೆ ಮತ್ತೊಂದು ಯುಗವನ್ನು ಕಳಿಸುವೆನು. ಅಲ್ಲಿಯುವರೆಗೆ ನೀನು ಎಚ್ಚರದಿಂದಿರು ಎಂದು ಹೇಳಿ ಅವನನ್ನು ಭೂಮಿಗೆ ಕಳಿಸಿದನು. ‖ ೧೭ ‖ ಆದರಂತೆ ಕೃತಯುಗನು ಭೂಲೋಕಕ್ಕೆ ಬಂದು ತನ್ನ ಅವಧಿ ಮುಗಿಯುವವರೆಗೆ ಸತ್ವಗುಣದಿಂದಲೇ ಇದ್ದನು ಆಮೇಲೆ ಬ್ರಹ್ಮನು ತ್ರೇತಾಯುಗನನ್ನು ಕರೆದು ಹೇಳಿದನು. ‖ ೧೮ ‖ ಆ ತ್ರೇತಾಯುಗನ ಲಕ್ಷಣಗಳನ್ನು ಹೇಳುವೆನು ಕೇಳು. ಅವನು ಸ್ಥೂಲಶರೀರದವನಿದ್ದು ಕೈಗಳಲ್ಲಿ ಯಜ್ಞ ಸಾಮಗ್ರಿಗಳನ್ನು ಹಿಡಿದಿದ್ದನು ‖ ೧೯ ‖ ಆ ಕಾರಣದಿಂದ ತ್ರೇತಾಯುಗದ ಬ್ರಾಹ್ಮಣರು ಕರ್ಮನಿಷ್ಠರಾಗಿ, ಧರ್ಮಶಾಸ್ತ್ರಕ್ಕನುಸರಿಸಿ ಯಜ್ಞಯಾಗಾದಿಗಳನ್ನು ಮಾಡುತ್ತಿದ್ದರು. ‖ ೨೦ ‖ ಮತ್ತು ಆ ತ್ರೇತಾಯುಗವು ಕೈಯಲ್ಲಿ ಕುಶ, ಸಮಿತ್ತುಗಳನ್ನು ಹಿಡಿದು, ಯಾವಾಗಲೂ ಧರ್ಮಪ್ರವರ್ತಕನಾಗಿದ್ದು, ಹರ್ಷದಿಂದ ಬ್ರಹ್ಮನ ಅಪ್ಪಣೆಯನ್ನು ತಕ್ಕೊಂಡು ಭೂಮಿಗೆ ಹೋದನು ‖ ೨೧ ‖ ಆಮೇಲೆ ಬ್ರಹ್ಮನು ಆನಂದದಿಂದ ದ್ವಾಪರ ಯುಗವನ್ನು ಕರೆದು ಅವನಿಗೆ ನಿರೋಪಕೊಟ್ಟನು ಅವನ ರೂಪವನ್ನು ಹೇಳುತ್ತೇನೆ, ಶ್ರೋತೃಗಳೇ ಏಕಚಿತ್ತದಿಂದ ಕೇಳಿರಿ ‖ ೨೨ ‖ ಅವನು ಒಂದು ಕೈಯಲ್ಲಿ ಖಡ್ಗ-ಖಟ್ವಾಂಗಗಳನ್ನೂ ಮತ್ತೊಂದು ಕೈಯಲ್ಲಿ ಧನುಷ್ಯ-ಬಾಣಗಳನ್ನೂ ಧರಿಸಿ, ಉಗ್ರ ಮತ್ತು ಶಾಂತ, ನಿಷ್ಠುರ ಮತ್ತು ದಯಾ ‖ ೨೩ ‖ ಪುಣ್ಯ ಮತ್ತು ಪಾಪ ಇವುಗಳನ್ನು ಸಮಾನವಾಗಿ ಇಟ್ಟುಕೊಂಡು, ಈ ಪ್ರಕಾರ ನಿಶ್ಚಯದ ಸ್ವರೂಪವುಳ್ಳವನಾಗಿ ಬ್ರಹ್ಮನ ಅಪ್ಪಣೆ ಪಡೆದು ಕೌತುಕದಿಂದ ಭೂಮಿಗೆ ಬಂದನು. ‖ ೨೪ ‖ ಅವನ ದಿವಸಗಳು ಮುಗಿದಮೇಲೆ

ಬ್ರಹ್ಮನು ಕಲಿಯುಗನನ್ನು ಕರೆದು— ಎಲೈ ಕಲಿಯೇ ನೀನು ತೀವ್ರವಾಗಿ ಭೂಲೋಕಕ್ಕೆ ಹೋಗಬೇಕು ಎಂದು ಹೇಳಿದನು. ॥ ೭೫ ॥ ಅದನ್ನು ಕೇಳಿ ಕಲಿಯುಗನು ಬ್ರಹ್ಮನ ಎದುರಿಗೆ ಹ್ಯಾಗೆ ಹೋದನೆಂಬ ಅವನ ಲಕ್ಷಣ ಗಳನ್ನು ಹೇಳುತ್ತೇನೆ ಕೇಳಿರಿ. ॥ ೭೬ ॥ ಅವನು ವಿಚಾರವಿಲ್ಲದ ಅಂತಃಕರುಣವುಳ್ಳವನಾಗಿ; ಪಿಶಾಚಿಯಂತೆ ಮುಖವುಳ್ಳವನಾಗಿ, ಕೆಳಗೆ ಮೋರೆಮಾಡಿಕೊಂಡು ಅಲ್ಲಲ್ಲಿಗೆ ಬೀಳುತ್ತ ॥ ೭೭ ॥ ವೃದ್ಧನೂ ವೈರಾಗ್ಯಹೀನನೂ ಆಗಿ, ತನ್ನ ಸಂಗಡ ಕಲಹ ಮತ್ತು ದ್ವೇಷ ಎಂಬವರನ್ನು ಕರಕೊಂಡು ಎಡಗೈಯಿಂದ ಶಿಶ್ನವನ್ನು ಹಿಡಿದು ಬ್ರಹ್ಮನ ಎದುರಿಗೆ ಬರುತ್ತ ॥ ೭೮ ॥ ಬಲಗೈಯಿಂದ ನಾಲಿಗೆಯನ್ನು ಹಿಡಿದು ಅತಿ ಪ್ರೀತಿಯಿಂದ ಕುಣಿಯುತ್ತ, ದೋಷಗಳಿಂದ ಕೂಡಿದ ಸ್ತುತಿ ಮಾಡುತ್ತ, ಪಾಪ ಪುಣ್ಯಗಳ ಮಿಶ್ರವುಳ್ಳವನಾಗಿ ॥ ೭೯ ॥ ನಗುತ್ತ ಅಳುತ್ತ ಅಣಕಿಸುತ್ತ, ಕೆಟ್ಟಮೋರೆ ಮಾಡಿ ಬೈಯುತ್ತ ಬ್ರಹ್ಮನೆದುರಿಗೆ ಬಂದು ನಿಂತು— ದೇವಾ, ನನಗೇನು ಅಪ್ಪಣೆ ಕೊಡುತ್ತೀ ? ಎಂದನು. ॥ ೮೦ ॥ ಆ ಕಲಿಯ ಲಕ್ಷಣವನ್ನು ಬ್ರಹ್ಮನು ನೋಡಿ ದೊಡ್ಡ ದನಿಯಿಂದ ನಕ್ಕು— ಎಲೈ ಕಲಿಯೇ, ಲಿಂಗ ಮತ್ತು ನಾಲಿಗೆಯನ್ನು ಯಾಕೆ ಹಿಡಿದಿರುತ್ತೀ ? ಎಂದು ಕೇಳಿದನು ॥ ೮೧ ॥ ಆಗ ಕಲಿಯುಗನು— ಇದರಿಂದ ನಾನು ಸಮಸ್ತಜನರನ್ನು ಗೆಲ್ಲುವೆನು. ಆದರೆ ತಮ್ಮ ನಾಲಿಗೆ ಮತ್ತು ಲಿಂಗಗಳನ್ನು ತಮ್ಮ ಸ್ವಾಧೀನ ಇಟ್ಟುಕೊಂಡವರಮೇಲೆ ನನ್ನ ಆಟ ನಡೆಯುವದಿಲ್ಲ. ॥ ೮೨ ॥ ಆದರಿಂದ ಬ್ರಹ್ಮದೇವನೆ ನಾನು ಲಿಂಗ-ನಾಲಿಗೆಗಳನ್ನು ಹಿಡಿದು ಕುಣಿಯುತ್ತಿರುವೆನು ಈ ಪ್ರಕಾರ ನಾನು ಸಹಜವಾಗಿ ಹೋದಹೋದಲ್ಲಿ ಯಾರಿಗೂ ಅಂಜುವದಿಲ್ಲ ಎಂದನು. ॥ ೮೩ ॥ ಅವನ ಮಾತು ಕೇಳಿ ಬ್ರಹ್ಮನು— ಎಲೈ ಕಲಿಯೇ, ನೀನು ಭೂಮಿಗೆ ಹೋಗಿ ನಿನ್ನ ಗುಣಗಳ ಪ್ರಸಿದ್ಧಿ ಮಾಡು ಎಂದು ಹೇಳಿ ಅಪ್ಪಣೆ ಕೊಟ್ಟನು ॥ ೮೪ ॥ ಆಗ ಕಲಿಯು— ಸ್ವಾಮೀ ಬ್ರಹ್ಮದೇವನೇ, ನನ್ನನ್ನು ಭೂಮಿಯಮೇಲೆ ಕಳಿಸಬೇಕೆನ್ನುತ್ತೀರಿ. ಆದರೆ ನಿಮಗೆ ನನ್ನ ಗುಣಗಳನ್ನು ಹೇಳುತ್ತೇನೆ ಕೇಳಿರಿ. ॥ ೮೫ ॥ ನಾನು ಸ್ವಚ್ಛಂದವೃತ್ತಿಯವನೂ ಆನಂದವಿಲ್ಲದವನೂ ಆಗಿ, ನಿಂದಾ-ಕಲಹ ರನ್ನು ಕರಕೊಂಡು ಹೋಗಿ ಧರ್ಮವನ್ನೇ ನಾಶಮಾಡುವೆನು. ॥ ೮೬ ॥ ಪರದ್ರವ್ಯಾಪಹಾರಕರೂ ಪರಸ್ತ್ರೀರತರೂ

ನನ್ನ ಸಹೋದರರು. ಪಕ್ಷಪಾತ, ಮತ್ಸರ, ದಂಭ, ದ್ವೇಷ ಎಂಬವರು ನನ್ನ ಜೀವದ ಗೆಳೆಯರು. ॥೮೭॥ ಬಕನಂತೆ ಸನ್ಯಾಸಿಯಾಗಿದ್ದವರು ನನ್ನ ಪ್ರಾಣವೆಂದು ತಿಳಿಯಿರಿ. ಮತ್ತು ಭೋಳೀಜನರನ್ನು ಠಕ್ಕಿಸುತ್ತ ತಮ್ಮ ಹೊಟ್ಟೆ ತುಂಬಿಕೊಳ್ಳುವವರು ॥ ೮೮ ॥ ನನ್ನ ಗೆಳೆಯರು. ಇವರ ಹೊರತು ಪುಣ್ಯ ಮಾಡುವವರು ಕೆಲವರಿರುತ್ತಾರೆ. ಅವರೇ ನನ್ನ ವೈರಿಗಳೆಂದು ತಿಳಿ ಎಂದು ಬ್ರಹ್ಮನಿಗೆ ವಿನಂತೀ ಮಾಡಿಕೊಂಡನು. ॥ ೮೯ ॥ ಆಗ ಬ್ರಹ್ಮನು— ಎಲೈ ಕಲಿಯೇ, ನಾನು ನಿನಗೆ ಕೆಲವು ಮಾತು ಹೇಳುತ್ತೇನೆ ಕೇಳು ಕಲಿಯುಗದಲ್ಲಿ ಮನುಷ್ಯರಿಗೆ ಸ್ವಲ್ಪ ಆಯುಷ್ಯವಿರುವದು ಅಂದರೆ ಒಂದೇನೂರು ವರುಷವಿರುವದು. ॥ ೯೦ ॥ ಪೂರ್ವ ಯುಗಗಳಲ್ಲಿ ಭೂಲೋಕದ ಜನರಿಗೆ ಬಹು ಆಯುಷ್ಯವಿತ್ತು. ಮತ್ತೂ ಕೇಳಿರಿ ಅದರಿಂದ ಅವರು ಅನೇಕ ದಿವಸಗಳವರೆಗೆ ತಪಾನುಷ್ಠಾನಗಳನ್ನು ಮಾಡುತ್ತಿದ್ದರು. ॥ ೯೧ ॥ ಮತ್ತು ಆ ಕಾಲದ ಜನರಿಗೆ ಉತ್ತಮವಾದ ಬುದ್ಧಿಯೂ ಇತ್ತು. ಅಖಂಡವಾದ ಆಯುಷ್ಯವೂ ಇತ್ತು. ಈ ಕಾರಣದಿಂದ ಭೂಮಿಯಲ್ಲಿ ಬಹುದಿವಸಗಳವರೆಗೆ ಕಷ್ಟಬಡುತ್ತಿದ್ದರು. ॥ ೯೨ ॥ ಕಲಿಯುಗದಲ್ಲಿ ಹಾಗೆ ಇಲ್ಲವೆಂದು ತಿಳಿ. ಕಲಿಯುಗದಲ್ಲಿಯ ಮನುಷ್ಯರಿಗೆ ಸ್ವಲ್ಪ ಆಯುಷ್ಯವಿದ್ದು ಅವರು ತಪ ಅನುಷ್ಠಾನಗಳನ್ನು ಯೋಗ್ಯರೀತಿ ಸ್ವಲ್ಪದಿವಸ ಮಾಡಿದರೆ ತೀವ್ರವಾಗಿ ಪಾರಮಾರ್ಥವನ್ನು ಹೊಂದುವರು. ॥ ೯೩ ॥ ಎಲೈ ಕಲಿಯೇ, ಬ್ರಹ್ಮಜ್ಞಾನಿಗಳಾದಂಥವರಿಗೆ ಮತ್ತು ತಿಳಿದು ಪುಣ್ಯಕರ್ಮಗಳನ್ನು ಮಾಡುವಂಥವರಿಗೆ ನೀನು ಸಹಾಯ ಮಾಡುತ್ತಿರು ಎಂದು ಹೇಳಿದನು. ॥ ೯೪ ॥ ಬ್ರಹ್ಮನ ಮಾತುಕೇಳಿ ಕಲಿಯು ಆತನಿಗೆ ನಮಿಸಿ— ಸ್ವಾಮೀ, ನೀವು ಹೇಳಿದಂಥ ಜನರೇ ನನ್ನ ವೈರಿಗಳಿರುತ್ತಾರೆ ॥ ೯೫ ॥ ಇಂಥ ವೈರಿಗಳಿದ್ದಂಥ ಭೂಮಿಗೆ ನಾನು ಹ್ಯಾಗೆ ಹೋಗಲಿ ? ಅವರ ಹೆಸರು ಕೇಳಿದರೆ ನನಗೆ ಅಂಜಿಕೆ ಬರುತ್ತದೆ ಅಂದಮೇಲೆ ಅವರನ್ನು ಹ್ಯಾಗೆ ನೋಡಲಿ ? ॥ ೯೬ ॥ ೫೦೦ ಭೂಮಂಡಲಗಳಲ್ಲಿ ಭರತಖಂಡದಲ್ಲಿ ಪುಣ್ಯವು (ಪುಣ್ಯವಂತರು) ಬಹುಪಾಗಿರುವದು. ನನ್ನನ್ನು ನೋಡಿದಕೂಡಲೆ ಹೊಡೆದುಬಿಡುವರು. ಆದ್ದರಿಂದ ಅಲ್ಲಿಗೆ ನಾನು ಹ್ಯಾಗೆ ಹೋಗಲಿ ಎಂದನು. ॥ ೯೭ ॥ ಕಲಿಯ ಮಾತು ಕೇಳಿ ಬ್ರಹ್ಮನು ನಕ್ಕು— ದುರ್ಬುದ್ಧಿಯುಳ್ಳ ಕಾಲಪುರುಷನನು,

ಸಂಗಡ ಕರಕೊಂಡು ನೀನು ಭೂಮಿಗೆ ಹೋಗು. ॥ ೯೮ ॥ ಆ ಕಾಲಪುರುಷನ ಗುಣಗಳು ಈ ಪ್ರಕಾರ ಇರುತ್ತವಲ್ಲಾ ! ಅವನು ಜನರ ಮನಸಿನಲ್ಲಿರುವ ಧರ್ಮ ಮಾಡುವ ವಾಸನಾವನ್ನೇ ಕಡಿದುಬಿಡುವನು. ಮತ್ತು ಪುಣ್ಯವಂತರ ಮನಸ್ಸಿನಲ್ಲಿ ಪಾಪ ಮಾಡುವ ಬುದ್ಧಿಯನ್ನು ಹುಟ್ಟಿಸುವನು ಎಂದು ಹೇಳಿದನು. ॥ ೯೯ ॥ ಆಗ ಕಲಿಯು— ಸ್ವಾಮೀ, ಬ್ರಹ್ಮದೇವನೇ, ಭೂಮಂಡಲದಲ್ಲಿ ನನಗೆ ಅನೇಕ ವೈರಿಗಳಿರುತ್ತಾರೆ ಕೇಳಿರಿ. ॥ ೧೦೦ ॥ ಹರಿ-ಹರರನ್ನು ಧ್ಯಾನಿಸುವವರೂ ಧರ್ಮರತರಾದವರೂ ನನ್ನನ್ನು ಕಂಡರೆ ಕೃಪಾ ಮಾಡುವದಿಲ್ಲ. ಬಹುರೀತಿಯಿಂದ ಉಪದ್ರವ ಕೊಡುತ್ತಾರೆ. ॥ ೧೦೧ ॥ ಬೇರೆ ಕೆಲವು ನನ್ನ ವೈರಿಗಳು ಗಂಗಾತೀರದಲ್ಲಿ ವಾಸಮಾಡುತ್ತಾರೆ. ಮತ್ತೆ ಕೆಲವರು ಕಾಶಿಗೆ ಹೋಗಿ ಧರ್ಮ ಮಾಡುತ್ತಾರೆ. ॥ ೧೦೨ ॥ ಕೆಲವರು ಕಾಲಿನಿಂದ ನಡೆದು ತೀರ್ಥಯಾತ್ರೆ ಮಾಡುತ್ತಾರೆ. ಕೆಲವರು ಪುರಾಣ ಪುಣ್ಯ ಕಥೆಗಳನ್ನು ಕೇಳುತ್ತಾರೆ. ಕೆಲವರು ಸದಾ ದಾನ ಧರ್ಮ ಮಾಡುತ್ತಾರೆ ಅವರೇ ನನ್ನ ವೈರಿಗಳು ॥ ೧೦೩ ॥ ಮತ್ತು ಸದಾ ಶಾಂತಚಿತ್ತರಾಗಿರುವ ಜನರೇ ನನ್ನ ಪ್ರಖ್ಯಾತ ವೈರಿಗಳು ಡಂಭಾಚಾರವಿಲ್ಲವೆ ಪುಣ್ಯ ಮಾಡುವವರನ್ನು ಕಂಡಕೂಡಲೆ ನನಗೆ ಅಂಜಿಕೆ ಬರುತ್ತದೆ. ॥ ೧೦೪ ॥ ನಾಸಾಗ್ರವಲ್ಲಿ ದೃಷ್ಟಿಯನ್ನಿಟ್ಟು ಜಪ-ಅನುಷ್ಠಾನಗಳನ್ನು ಮಾಡುವವರನ್ನು ಕಂಡಕೂಡಲೆ ನನ್ನ ಜೀವ ಹೋಗುತ್ತದೆ. ॥ ೧೦೫ ॥ ಹೆಂಡರು-ಮಕ್ಕಳಮೇಲೆ ಕೇವಲ ಪ್ರೀತಿ ಮಾಡುತ್ತ ತಮ್ಮ ತಂದೆ-ತಾಯಿಗಳನ್ನು ಹೀಯಾಳಿಸುವವರಮೇಲೆ ನನ್ನ ಪ್ರೀತಿ ಬಹಳ ಅವರು ನನಗೆ ಪರಮ ಇಷ್ಟರು. ॥ ೧೦೬ ॥ ಮತ್ತು ವೇದ ಶಾಸ್ತ್ರಗಳನ್ನು ನಿಂದಿಸುವವರೂ ಹರಿ-ಹರರಲ್ಲಿ ಭೇದ ಮಾಡುವವರೂ ಅಥವಾ ಶಿವ-ವಿಷ್ಣು ಇವರನ್ನು ದೂಷಿಸುವವರೂ ನನ್ನ ಪರಮ ಆಪ್ತರೆಂದು ತಿಳಿಯಿರಿ. ॥ ೧೦೭ ॥ ಜಿತೇಂದ್ರಿಯರಾದವರನ್ನೂ ಸದಾ ಹರಿ-ಹರರನ್ನು ಸೇವಿಸುವವರನ್ನೂ ರಾಗ-ದ್ವೇಷರಹಿತರಾದ ಧೀರರನ್ನೂ ನೋಡಿದರೆ ನನಗೆ ಭಯಬರುತ್ತದೆ ಎಂದು ಹೇಳಿದನು. ॥ ೧೦೮ ॥ ಅವನ ಮಾತು ಕೇಳಿ ಬ್ರಹ್ಮನು— ಎಲೈ ಕಲಿಯೇ, ನೀನು ಭೂಮಿಯಮೇಲೆ ಹೋದಮೇಲೆ ನಿನ್ನ ಇಚ್ಛೆಯಪ್ರಕಾರ ಎಲ್ಲರೂ ನಡೆಯುವರು, ಆಗ ನಿನ್ನ ಪ್ರಸಿದ್ಧಿಯು ಬಹಳವಾಗುವದು. ॥ ೧೦೯ ॥

ಎಲ್ಲಿಯೋ ಯಾವನಾದರೊಬ್ಬನು ವಿರಳವಾಗಿ ಪುಣ್ಯವಂತನಿರುವನು. ಅವನಿಗೆ ನೀನು ಸಹಾಯ ಮಾಡುತ್ತಿರು ಎಂದನು. ॥ ೧೧೦ ॥ ಈ ಪ್ರಕಾರವಾದ ಬ್ರಹ್ಮನ ಮಾತು ಕೇಳಿ ಕಲಿಯು ನಮಸ್ಕರಿಸಿ ಕೈಮುಗಿದು ವಿನಯದಿಂದ. ॥ ೧೧೧ ॥ ಸ್ವಾಮೀ, ನನ್ನ ದುಷ್ಟ ಸ್ವಭಾವದಿಂದ ಧರ್ಮವಂತರಿಗೆ ಹ್ಯಾಗೆ ಸಹಾಯವಾದೀತು? ಆದ್ದರಿಂದ ನಾನು ಭೂಮಿಯಮೇಲೆ ಯಾವ ರೀತಿಯಿಂದ ನಡೆಯಬೇಕೆಂಬದನ್ನು ಹೇಳಿರಿ ಎಂದನು. ॥ ೧೧೨ ॥ ಕಲಿಯ ಮಾತು ಕೇಳಿ ಬ್ರಹ್ಮನು ಅತಿಶಯವಾಗಿ ನಕ್ಕು, ಭೂಮಿಯಲ್ಲಿ ಕಲಿಯು ಯಾವ ರೀತಿಯಿಂದ ನಡೆಯಬೇಕೆಂಬ ಉಪಾಯವನ್ನು ವಿಸ್ತಾರವಾಗಿ ಹೇಳುತ್ತಾನೆ. ॥ ೧೧೩ ॥ ಎಲೈ ಕಲಿಯೇ, ಕಾಲ ಮತ್ತು ವೇಳೆ ಎಂಬವರಿಬ್ಬರೂ ನಿನಗೆ ಸಹಾಯವಾಗುವದಕ್ಕಾಗಿ ನಿರ್ಗುಣ ರೂಪದಿಂದ ಬರುತ್ತಿರುತ್ತಾರೆ. ನೀನು ಹ್ಯಾಗೆ ನಡೆಯಬೇಕೆಂಬ ರೀತಿಯನ್ನು ಅವರು ತೋರಿಸುತ್ತಾರೆ ॥ ೧೧೪ ॥ ನಿರ್ಮಲವಾಗಿದ್ದವರೇ ನಿನ್ನ ವೈರಿಗಳೆಂದು ತಿಳಿ. ಮಲಮೂತ್ರಗಳಿಂದ ವೇಷ್ಟನ ಹೊಂದಿದವರು ನಿನಗೆ ನಿಷ್ಟರಾದವರು ॥ ೧೧೫ ॥ ಈ ಕಾರಣದಿಂದ ಪಾಪ–ಪುಣ್ಯಗಳಿಗೆ ಇಷ್ಟು ಹೆಚ್ಚುಕಡಿಮೆ ಇರುತ್ತದೆ. ಹೆಚ್ಚಿನ ಪುಣ್ಯವಂತರಾದವರು ನಿನ್ನನ್ನು ಗೆಲ್ಲುತ್ತಾರೆ. ॥ ೧೧೬ ॥ ಈ ಕಾರಣದಿಂದ ಪುಣ್ಯವಂತ ಜನರು ಅತಿ ವಿರಳವಾಗಿರುವರು ಅವರೇ ನಿನ್ನನ್ನು ನಿಶ್ಚಯವಾಗಿ ಗೆಲ್ಲುವರು ಬಹುತೇಕ ಜನರು ನಿನ್ನ ವಶರಾಗುವರು ॥ ೧೧೭ ॥ ಎಲ್ಲ್ಯಾದರೂ ಒಬ್ಬಾನೊಬ್ಬ ವಿವೇಕಿಯಾದ ಮನುಷ್ಯನು ನಿನ್ನ ಉಪದ್ರವವನ್ನು ಸಹಿಸಿಕೊಂಡಿರುವನು. ನಿನ್ನ ದಾರುಣವಾದ ಉಪದ್ರವವನ್ನು ಸಹಿಸದವರು ನಿನ್ನ ವಶರಾಗುವರು ॥ ೧೧೮ ॥ ಈ ಕಾರಣದಿಂದ ಕಲಿಯುಗದಲ್ಲಿ ಹುಟ್ಟಿ ಈ ರೀತಿ ನಿನ್ನ ಕೈಯಲ್ಲಿ ಸಿಕ್ಕು ನಿನ್ನ ಇಚ್ಛೆಯಂತೆ ನಡೆದವರಿಗೆ ಈಶ್ವರ ಪ್ರಾಪ್ತಿಯಾಗುವದಿಲ್ಲ ಎಂದನು. ॥ ೧೧೯ ॥ ಈ ಪ್ರಕಾರ ಬ್ರಹ್ಮನ ಮಾತು ಕೇಳಿ ಕಲಿಯು— ಸ್ವಾಮೀ, ಸಾಧುಗಳ ಅಂತಃಕರಣವು ಯಾವ ಪ್ರಕಾರವಾಗಿರುತ್ತದೆಂಬದನ್ನು ನನಗೆ ಹೇಳಬೇಕು ಎಂದನು. ॥ ೧೨೦ ॥ ಆಗ ಬ್ರಹ್ಮನು— ಎಲೈ ಕಲಿಯೇ ಏಕಚಿತ್ತದಿಂದ ಕೇಳೆಂದನು. ಎಂದು ಸಿದ್ಧರು ಶಿಷ್ಯನಿಗೆ ಹೇಳಿದಂತೆ ಎಲೈ ಶ್ರೋತೃಗಳೇ ನಿಮಗೆ ಎಲ್ಲವನ್ನೂ ಹೇಳುತ್ತೇನೆ ಕೇಳಿರಿ. ॥ ೧೨೧ ॥

೨೮

ಎಲೈ ಕಲಿಯೇ ಕೇಳು, ಮನಸಿನಲ್ಲಿ ಧೈರ್ಯವನ್ನು ಹಿಡಿದು ಶುದ್ಧ ರೀತಿಯಿಂದಲೂ ಜ್ಞಾನದಿಂದಲೂ ನಿರ್ಲೋಭದಿಂದಲೂ ನಡೆಯುವಂಥ ಜನರಿಗೆ ದೋಷವು ಎಂದೂ ಬರುವದಿಲ್ಲ ॥ ೧೨೨ ॥ ಮತ್ತು ಹರಿ-ಹರರನ್ನು ಸೇವಿಸುವವರಿಗೆ ಅಥವಾ ಕಾಶಿಯಲ್ಲಿ ವಾಸಮಾಡುವವರಿಗೆ ಮತ್ತು ನಿರಂತರ ಗುರುಸೇವೆ ಮಾಡುವಂಥವರಿಗೆ ನಿನ್ನಿಂದ ದೋಷ ಹತ್ತುವದಿಲ್ಲ. ॥ ೧೨೩ ॥ ಮತ್ತು ಮಾತಾ-ಪಿತೃಗಳನ್ನು ಸೇವಿಸುವವರಿಗೆ ಅಥವಾ ಬ್ರಾಹ್ಮಣರನ್ನು ಸೇವಿಸುವವರಿಗೆ ಹಾಗು ಗಾಯತ್ರಿಯನ್ನೂ ಕಪಿಲಾಧೇನುವನ್ನೂ ಸೇವಿಸುವವರಿಗೆ ದೋಷವು ಹತ್ತುವದಿಲ್ಲ. ॥ ೧೨೪ ॥ ವಿಷ್ಣು ಭಕ್ತರನ್ನೂ ಅಥವಾ ಶಿವಭಕ್ತರನ್ನೂ ನಿತ್ಯ ತುಳಸೀಪೂಜೆ ಮಾಡುವಂಥವರನ್ನೂ ನೀನು ಬಾಧಿಸಬಾರದೆಂದು ನಿನಗೆ ನನ್ನ ಆಜ್ಞೆಯಿದೆ. ॥ ೧೨೫ ॥ ಮತ್ತು ಗುರುಸೇವಕರನ್ನೂ ಪುರಾಣಗಳನ್ನು ಕೇಳುವವರನ್ನೂ ಸರ್ವ ಸಾಧನದಿಂದ ಧರ್ಮಪರರಾದವರನ್ನೂ ನೀನು ಬಾಧಿಸಬಾರದು. ॥ ೧೨೬ ॥ ಮತ್ತು ಪುಣ್ಯಶೀಲರನ್ನೂ ಶಾಸ್ತ್ರಪರಾಯಣರನ್ನೂ ವಂಶ ಪರಂಪರೆಯಾಗಿ ಗುರುವನ್ನು ಸೇವಿಸುವವರನ್ನೂ ವಿವೇಕದಿಂದ ಧರ್ಮ ಮಾಡುವಂಥವರನ್ನೂ ನೀನು ಬಾಧಿಸಬಾರದು ಎಂದನು. ॥ ೧೨೭ ॥ ಆಗ ಕಲಿಯು-- ಸ್ವಾಮೀ ಬ್ರಹ್ಮದೇವನೇ, ಗುರುವು ಎಂದು ಯಾರಿಗೆ ಅನ್ನಬೇಕು ? ಅವರ ಸ್ವರೂಪ ಎಂಥಾದ್ದು ? ಅವರ ಮಹಿಮೆಯು ಹ್ಯಾಗಿರುತ್ತದೆ ಎಂಬದನ್ನು ವಿಸ್ತಾರವಾಗಿ ನನಗೆ ಹೇಳಬೇಕು ಎಂದನು. ॥ ೧೨೮ ॥ ಆ ಕಲಿಯ ಮಾತು ಕೇಳಿ ಬ್ರಹ್ಮನು— ಎಲೈ ಕಲಿಯೇ, ಗುಕಾರ ಅಂದರೆ ಸಿದ್ಧ ಎಂದು ತಿಳಿ. ರೇಫವು ಪಾಪವನ್ನು ಸುಡುವಂಥಾದ್ದು, ॥ ೧೨೯ ॥ ಉಕಾರವು ಅವ್ಯಕ್ತವಾದ ವಿಷ್ಣುಸ್ವರೂಪವು. ಆದ್ದರಿಂದ ಶ್ರೀ ಗುರುವೇ ಸತ್ಯವಾಗಿ ತ್ರೈಮೂರ್ತಿ ಅವತಾರನೂ ನಿಶ್ಚಿತವಾಗಿ ಪರಬ್ರಹ್ಮನೂ ಆಗಿರುವನೆಂದು ತಿಳಿ ಮತ್ತೂ ಕೇಳು. ॥ ೧೩೦ ॥

**ಶ್ಲೋಕ— ಗಣೇಶೋವಾಽಗ್ನಿನಾಯುಕ್ತೋ ವಿಷ್ಣುನಾಮ ಸಮನ್ವಿತಃ ॥**
**ವರ್ಣದ್ವಯಾತ್ಮಕೋ ಮಂತ್ರಶ್ಚತುರ್ಮುಕ್ತಿಪ್ರದಾಯಕಃ ॥ ೧೩೧ ॥**

**ಅರ್ಥ—** ಗಣೇಶನಿಗೂ ಅಗ್ನಿಗೂ ಮತ್ತು ವಿಷ್ಣುವಿಗೂ ಗುರು ಎಂಬ ಹೆಸರು. ಗುರು ಎಂಬ ಎರಡಕ್ಷರ ಶಬ್ದವೇ ನಾಲ್ಕೂ ಮುಕ್ತಿಗಳನ್ನು ಕೊಡುವಂಥಾದ್ದಾಗಿರುತ್ತದೆ. ॥ ೧೩೨ ॥

**ಶ್ಲೋಕ—** ಗುರುಃ ಪಿತಾ ಗುರುರ್ಮಾತಾ ಗುರುದೇವ ಪರಃ ಶಿವಃ ।
ಶಿವೇರುಷ್ಟೇ ಗುರುಸ್ತ್ರಾತಾ ಗುರೌರುಷ್ಟೇನ ಕಶ್ಚನ ॥ ೧೩೩ ॥

**ಅರ್ಥ—** ಗುರುವೇ ನಮ್ಮ ಮಾತಾಪಿತೃಗಳಾಗಿರುವರು, ಮತ್ತು ಶ್ರೀಗುರುವೇ ನಿಶ್ಚಯವಾಗಿ ಪರಶಿವನೂ ಆಗಿರುವನು. ಒಂದು ವೇಳೆ ಶಿವನು ಸಿಟ್ಟಾದರೆ ಗುರು ರಕ್ಷಿಸುವನು. ॥ ೧೩೪ ॥ ಆದರೆ ಒಬ್ಬನ ಮೇಲೆ ಗುರುವು ಸಿಟ್ಟಾದರೆ ಮಾತ್ರ ಈಶ್ವರನು ಅವನನ್ನು ರಕ್ಷಿಸುವದಿಲ್ಲ. ಈಶ್ವರನು ಸಿಟ್ಟಾದರೆ ಮಾತ್ರ ಆ ಮನುಷ್ಯನನ್ನು ಗುರುವು ನಿಶ್ಚಯವಾಗಿ ರಕ್ಷಿಸುವನು. ॥ ೧೩೫ ॥ ಮತ್ತೂ ಹೇಳುತ್ತೇನೆ ಕೇಳು

**ಶ್ಲೋಕ—** ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ ॥
ಗುರುರೇಕಃ ಪರಂ ಬ್ರಹ್ಮತಸ್ಮಾದ್ಗುರು ಮುಪಾಶ್ರಯೇತ್ ॥ ೧೩೬ ॥

**ಅರ್ಥ—** ಸತ್ಯವಾಗಿ ಶ್ರೀಗುರುವೇ ಬ್ರಹ್ಮ-ವಿಷ್ಣು-ಮಹೇಶ್ವರರ ಸ್ವರೂಪನಾಗಿರುವನು. ಇವಲ್ಲದೆ ಗುರುವೇ ಪರಬ್ರಹ್ಮನೂ ಆಗಿರುವನು. ಆದ್ದರಿಂದ ಎಲ್ಲರೂ ಗುರುವನ್ನು ಆಶ್ರಯಿಸಬೇಕು ॥ ೧೩೭ ॥

**ಶ್ಲೋಕ—** ಹರೌ ಪ್ರಸನ್ನೇಽಪಿ ಚ ವೈಷ್ಣವಾ ಜನಾಃ ಸಂಪ್ರಾರ್ಥಯಂತೋ ಗುರುಭಕ್ತಿ ಮವ್ಯಯಾನ್ ॥
ಗುರೌ ಪ್ರಸನ್ನೇ ಜಗದೀಶ್ವರಃ ಸದಾ ಜನಾರ್ಧನಸ್ತುಷ್ಯತಿ ಸರ್ವ ಸಿದ್ಧಿದಃ ॥ ೧೩೮ ॥

**ಅರ್ಥ—** ಒಂದುವೇಳೆ ಈಶ್ವರ ಪ್ರಸನ್ನನಾದವನಿಗೆ ಗುರುವು ತಾನೇ ಸಿಗುವನು. ಗುರುವನ್ನು ಪ್ರಸನ್ನ ಮಾಡಿಕೊಂಡವನಿಗೆ ಈಶ್ವರನು ಅವನ ಅಧೀನನಾಗುವನು. ॥ ೧೩೯ ॥

ಶ್ಲೋಕ— ಗುರುಸ್ಸದಾ ದರ್ಶಯಿತಾ ಪ್ರವರ್ತಿಂ ತೀರ್ಥಂ ವ್ರತಂ ಯೋಗತಪಾದಿ ಧರ್ಮಾನ್ ॥
ಆಚಾರ ವರ್ಣಾದಿ ವಿವೇಕಯಜ್ಞಾನ್ ಜ್ಞಾನಂ ಪರಂ ಭಕ್ತಿ ವಿವೇಕಯುಕ್ತಂ ॥ ೧೪೦ ॥

ಅರ್ಥ— ಶಾಸ್ತ್ರರೀತಿಯಾಗಿ ಗುರುವನ್ನು ಸೇವಿಸಿ ಪ್ರಸನ್ನ ಮಾಡಿಕೊಂಡರೆ ಅವರು ತೀರ್ಥ, ವ್ರತ, ಯೋಗ, ಯಾಗ, ತಪಸ್ಸು, ಧರ್ಮ ಮುಂತಾದವುಗಳಲ್ಲಿ ಜ್ಯೋತಿಸ್ವರೂಪರಾಗಿದ್ದು ತಮ್ಮ ಶಿಷ್ಯರಿಗೆ ಆಚಾರ, ವರ್ಣ, ವಿವೇಕ, ಯಜ್ಞಗಳನ್ನೂ, ಭಕ್ತಿ, ವಿವೇಕ, ವೈರಾಗ್ಯಗಳಿಂದ ಕೂಡಿದ ಪರಮತತ್ವವನ್ನೂ ಶಾಸ್ತ್ರರೀತಿ ಯಾಗಿ ತಿಳಿಸುವರು. ಎಂದು ಬ್ರಹ್ಮನು ಹೇಳಿದನು. ॥ ೧೪೧-೧೪೨-೧೪೩ ॥ ಇಷ್ಟೆಲ್ಲವನ್ನು ಕೇಳಿ ಕಲಿಯು ವಿನಯದಿಂದ ಕೈಮುಗಿದು— ಸ್ವಾಮೀ, ಗುರುವು ಸರ್ವದೇವ ಸಮಾನನು ಹ್ಯಾಗಾದನೆಂಬದನ್ನು ನನಗೆ ಹೇಳಿರಿ ಎಂದನು. ॥ ೧೪೪ ॥ ಆಗ ಬ್ರಹ್ಮನು— ಎಲೈ ಕಲಿಯೇ, ಗುರುವಿನ ಹೊರತು ಯಾರಿಗೂ ಗತಿಯಿಲ್ಲ. ಗುರು ಮಹಿಮೆಯನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು. ॥ ೧೪೫ ॥

ಶ್ಲೋಕ— ಗುರುಂ ವಿನಾ ನ ಶ್ರವಣಂ ಭವೇತ್ ಕಸ್ಯಾಪಿ ಕಸ್ಯಚಿತ್ ॥
ವಿನಾಕರ್ಣೇನ ಶಾಸ್ತ್ರಸ್ಯ ಶ್ರವಣಂ ತತ್ಕುತೋ ಭವೇತ್ ॥ ೧೪೬ ॥

ಅರ್ಥ— ಗುರುಮುಖದಿಂದಲ್ಲದೆ ಸರ್ವರಿಗು ಶ್ರವಣವು ಹೇಗಾದೀತು ? ಮನುಷ್ಯನಿಗೆ ಕಿವಿಗಳಿದ್ದರೆ ಅವನು ಸಮಸ್ತ ಶಾಸ್ತ್ರಗಳನ್ನು ಕೇಳುವನು ॥ ೧೪೭ ॥ ಆದಕಾರಣ ಗುರುಮುಖದಿಂದ ಶಾಸ್ತ್ರವನ್ನು ಕೇಳಿದರೆ ಈ ಸಂಸಾರಸಾಗರದಿಂದ ಮುಕ್ತನಾಗುವನು. ಆದಕಾರಣ ಶ್ರೀಗುರುವೇ, ಜ್ಯೋತಿಸ್ವರೂಪನಾಗಿ ಪ್ರಕಾಶಿಸುವ ನೆಂದು ತಿಳಿಯಬೇಕು. ॥ ೧೪೮ ॥ ಎಲೈ ಕಲಿಯೇ, ತ್ರಿಕರಣಪೂರ್ವಕವಾಗಿ ಗುರುವನ್ನುಸೇವಿಸಿದರೆ ಸರ್ವ ಸಿದ್ಧಿ ಯಾಗುವದು. ಈ ವಿಷಯದಲ್ಲಿ ಬಹು ಪೂರ್ವದಲ್ಲಿ ಆದ ಒಂದು ಅಪೂರ್ವ ಕಥೆಯನ್ನು ನಿನಗೆ ಹೇಳುವೆನು ಕೇಳು. ॥ ೧೪೯ ॥

ಪೂರ್ವ ಕಾಲದೊಳಗೆ ಗೋದಾವರೀ ತೀರದಲ್ಲಿ ಆಂಗಿರಸನೆಂಬ ಋಷಿಯ ದೊಡ್ಡ ಆಶ್ರಮವಿತ್ತು. ಆ ಆಶ್ರಮದಲ್ಲಿ ಪುಣ್ಯತಮಗಳಾದ ನಾನಾತರದ ವೃಕ್ಷಗಳೂ ಮೃಗಗಳೂ ಇದ್ದವು. ॥ ೧೫೦ ॥ ಅಲ್ಲಿ ಬ್ರಹ್ಮಋಷಿ ಮೊದಲಾದವರು ತಪಸ್ಸು ಮಾಡುತ್ತಿದ್ದರು. ಅವರಲ್ಲಿ ಪೈಲ ಋಷಿಯ ಪುತ್ರನಾದ "ವೇದಧರ್ಮ"ನೆಂಬ ಮುನಿಯು ಒಬ್ಬನಾಗಿದ್ದನು. ॥ ೧೫೧ ॥ ಅವನಿಗೆ ಬಹುಮಂದಿ ಶಿಷ್ಯರಿದ್ದು ಅವರೆಲ್ಲರೂ ವೇದಶಾಸ್ತ್ರಗಳನ್ನು ಅಭ್ಯಾಸಿಸುತ್ತಿದ್ದರು. ಅವರಲ್ಲಿ ದೀಪಕನೆಂಬ ಶಿಷ್ಯನು ಒಳ್ಳೇ ಪ್ರಖ್ಯಾತನಾಗಿದ್ದನು. ॥ ೧೫೨ ॥ ಅವನು ಗುರು ಪರಾಯಣನಾಗಿ ಒಳ್ಳೇ ಭಕ್ತಿಯಿಂದ ಶ್ರೀ ಗುರುವನ್ನು ಸೇವಿಸುತ್ತ ಶಾಸ್ತ್ರ ಪುರಾಣಗಳನ್ನು ಅಭ್ಯಾಸಿಸಿ ಅತಿ ನಿಪುಣನಾದನು ॥ ೧೫೩ ॥ ಎಲೈ ಶ್ರೋತೃಗಳೇ, ಕೇಳಿರಿ ಒಂದು ದಿವಸ ವೇದಧರ್ಮ ಮುನಿಯು ಸಂತೋಷ ದಿಂದ ಎಲ್ಲ ಶಿಷ್ಯರನ್ನು ಕರೆದು— ॥ ೧೫೪ ॥ ಎಲೈ ಶಿಷ್ಯರೇ, ನನ್ನ ಮೇಲೆ ನಿಮ್ಮ ಸತ್ಯವಾದ ಪ್ರೀತಿಯಿದ್ದರೆ ಈಗ ನೀವು ನನ್ನ ಮಾತನ್ನು ಕೇಳಬೇಕು ಎಂದನು. ॥ ೧೫೫ ॥ ಆ ಗುರುಗಳ ಮಾತು ಕೇಳಿ ಎಲ್ಲ ಶಿಷ್ಯರು— ಸ್ವಾಮೀ, ಗುರುಗಳೇ ನೀವು ನಮ್ಮನ್ನು ಉದ್ಧರಿಸುವಂಥವರಾದ್ದರಿಂದ ತಾವು ಹೇಳಿದ್ದೆಲ್ಲವನ್ನೂ ನಾವು ಸತ್ಯವಾಗಿ ಮಾಡುತ್ತೇವೆ. ॥ ೧೫೬ ॥ ಗುರು ವಾಕ್ಯವನ್ನು ಯಾರು ಮೀರುವರೋ ಅವರು ಘೋರವಾದ ನರಕದಲ್ಲಿ ಬೀಳುವರಲ್ಲದೆ ಅವಿದ್ಯಾರೂಪ ಮಾಯಾಸಾಗರದಲ್ಲಿ ಮುಳುಗಿ ಹೋಗುವರು. ॥ ೧೫೭ ॥ ಅಂದಮೇಲೆ ಅವರಿಗೆ ಸದ್ಗತಿಯು ಹ್ಯಾಗೆ ಉಂಟಾದೀತು ? ಅವರು ಯಾವಾಗಲೂ ನರಕದಲ್ಲಿ ಬಿದ್ದು ಹೊರಳಾಡುವರು ಗುರುವು ತಮ್ಮ ಶಿಷ್ಯರನ್ನು ಈ ಸಂಸಾರಸಾಗರ ತಾಪದಿಂದ ಉದ್ಧರಿಸುವನೆಂಬ ಖ್ಯಾತಿಯು ವೇದ ಪುರಾಣಗಳಲ್ಲಿ ಹೇಳಿರು ವದು ಎಂದು ಅಂದರು ॥ ೧೫೮ ॥ ಶಿಷ್ಯರು ಆಡಿದ ಈ ಪ್ರಕಾರವಾದ ಮಾತು ಕೇಳಿ ವೇದಧರ್ಮ ಮುನಿಯು ಸಂತೋಷದಿಂದ ಸಂದೀಪಕನನ್ನು ಮುಂದೆ ಕರೆದು ಎಲ್ಲರನ್ನು ಕುರಿತು ॥ ೧೫೯ ॥ ಎಲೈ ಶಿಷ್ಯರೇ ಕೇಳಿರಿ, ನನ್ನದೊಂದು ಪೂರ್ವಾರ್ಜಿತ ಪಾಪವದೆ ನಾನು ಜನ್ಮಾಂತರದಲ್ಲಿ ಒಂದು ಸಹಸ್ರಕ್ಕಿಂತಲೂ ಹೆಚ್ಚಾಗಿ ಮಹಾ ಪಾಪಗಳನ್ನು ಮಾಡಿರುವೆನು. ॥ ೧೬೦ ॥ ಆದರೆ ಈಗ ನಾನು ಮಾಡುವ ತಪಾನುಷ್ಠಾನಗಳಿಂದ ಅವುಗಳಲ್ಲಿ

ಅನೇಕ ಪೂರ್ವಾರ್ಜಿತ ಪಾಪಗಳು ನಾಶವಾಗಿ ಹೋಗಿರುತ್ತವೆ. ಈಗ ಸ್ವಲ್ಪ ಮಾತ್ರ ಶೇಷ ಉಳಿದದೆ. ಅದನ್ನು ನಾನು ಭೋಗಿಸದ ಹೊರತು ಬಿಡುಗಡೆಯಿಲ್ಲವೆಂದು ನೀವು ನಿಶ್ಚಯವಾಗಿ ತಿಳಿಯಿರಿ. ॥ ೧೬೧ ॥ ಈಗ ನಾನು ನನ್ನ ತಪಸ್ಸಾಮರ್ಥ್ಯದಿಂದ ಅದನ್ನು ಉಪೇಕ್ಷೆ ಮಾಡಿಬಿಟ್ಟರೆ, ಅದು ಪಾಪದಿಂದ ಮುಕ್ತನಾಗಲಿಕ್ಕೆ ನನಗೆ ಅಡ್ಡಿ ಮಾಡುತ್ತದೆ. ಆದ್ದರಿಂದ ಈಗ ನಾನು ಆ ಘೋರವಾದ ಪಾಪದಿಂದ ಮುಕ್ತನಾಗುವ ಉಪಾಯವನ್ನು ಮಾಡಿಕೊಳ್ಳುತ್ತೇನೆ. ॥ ೧೬೨ ॥ ನನ್ನ ದೇಹದಿಂದಲೇ ಆ ಪಾಪವನ್ನು ಭೋಗಿಸದಿದ್ದರೆ, ಆ ನನ್ನ ಪಾಪವು ಕ್ಷಾಲನವಾಗುವದಿಲ್ಲವೆಂದು ನಾನು ನಿಶ್ಚಯವಾಗಿ ತಿಳಿದು ನೋಡಿದ್ದರಿಂದಲೇ ಅದನ್ನು ನಾನೇ ಅನುಭವಿಸಬೇಕಾಗಿದೆ. ॥ ೧೬೩ ॥ ಮತ್ತು ಆ ಪಾಪವನ್ನು ಕಳಕೊಳ್ಳುವದಕ್ಕೆ ನಾನು ಈಗ ಕಾಶೀ ಕ್ಷೇತ್ರಕ್ಕೆ ಹೋಗುವದು ಅವಶ್ಯವದೆ. ಆ ಕಾಶಿಯಲ್ಲಿ ಎಲ್ಲ ಪಾಪಗಳು ತೀವ್ರವಾಗಿ ಹೋಗುತ್ತವೆಂದು ಯಾವತ್ತೂ ಶಾಸ್ತ್ರಗಳಲ್ಲಿ ಪ್ರಸಿದ್ಧವಾಗಿರುತ್ತದೆ. ॥ ೧೬೪ ॥ ಆದ್ದರಿಂದ ಈಗ ನನ್ನನ್ನು ಕಾಶೀ ಪಟ್ಟಣಕ್ಕೆ ಕರಕೊಂಡು ಹೋಗಿರಿ. ಅಲ್ಲಿ ನಾನು ನನ್ನ ದೇಹದಿಂದಲೇ ನನ್ನ ಪಾಪಶೇಷದ ಫಲವನ್ನು ಅನುಭೋಗಿಸುವೆನು. ಆಗ ನೀವು ಒಳ್ಳೇ ರೀತಿಯಿಂದ ನನ್ನನ್ನು ರಕ್ಷಿಸಬೇಕು. ॥ ೧೬೫ ॥ ಈ ಪ್ರಕಾರ ನನ್ನ ದೇಹವನ್ನು ರಕ್ಷಣ ಮಾಡಲಿಕ್ಕೆ ನಿಮ್ಮಲ್ಲಿ ಯಾರು ಸಮರ್ಥರಿದ್ದೀರಿ ಎಂಬದನ್ನೂ ಮತ್ತು ನನ್ನ ಮಾತನ್ನು ಯಾರು ತೀವ್ರವಾಗಿ ಸ್ವೀಕರಿಸುತ್ತೀರಿ ಎಂಬದನ್ನೂ ಹೇಳಿರಿ ಎಂದು ಕೇಳಿದರು. ॥ ೧೬೬ ॥ ಆಗ ಆ ಶಿಷ್ಯರಲ್ಲಿ ಒಬ್ಬನಾದ ಸಂದೀಪಕನೆಂಬವನು ವಿವೇಕದಿಂದ ಶ್ರೀಗುರುಗಳಿಗೆ ಹೇಳುತ್ತಾನೆ, ಕೇಳಿರಿ. ॥ ೧೬೭ ॥ ಅವನು— ಸ್ವಾಮೀ, ಗುರುಗಳೇ, ಪಾಪ ಮಾಡುವದರಿಂದ ದೇಹವು ನಾಶವಾಗುತ್ತದೆ. ಆದ್ದರಿಂದ ತಾವು ದುಃಖಗಳ ಸಂಗ್ರಹ ಮಾಡಿಕೊಳ್ಳಬಾರದು ಅದಕ್ಕೆ ತೀವ್ರವಾಗಿ ಏನಾದರೂ ಪ್ರತೀಕಾರ ಮಾಡಿಕೊಳ್ಳಬೇಕು ಎಂದನು. ॥ ೧೬೮ ॥ ಅವನ ಮಾತು ಕೇಳಿ ವೇದಧರ್ಮ ಮುನಿಯು— ಎಲೈ ದೀಪಕನೇ, ಮನುಷ್ಯನು ತನ್ನ ದೇಹವು ದೃಢವಾಗಿರುವಾಗಲೇ ಏನಾದರೂ ಉಪಾಯದಿಂದ ತನ್ನ ಪಾಪವನ್ನು ಕಳಕೊಳ್ಳಬೇಕು. ಇಲ್ಲದಿದ್ದರೆ ಅದು ವಿಷದಂತೆ ಬೆಳೆಯುತ್ತ ಹೋಗುವದು. ॥ ೧೬೯ ॥ ಅಥವಾ ಯಾವದಾದರೂ

ತೀರ್ಥಕ್ಕೆ ಹೋಗಿ ಪ್ರಾಯಶ್ಚಿತ್ತ ಮಾಡಿಕೊಂಡು ತಮ್ಮ ದೇಹದಿಂದ ಆ ಪಾಪವನ್ನು ಭೋಗಿಸಿ ತೀವ್ರವಾಗಿ ಕಳಕೊಳ್ಳಬೇಕು. ಆದ್ದರಿಂದ ನನ್ನ ಪಾಪ ಹೋಗದ ಹೊರತು ನನಗೆ ಮುಕ್ತಿಯು ಇಲ್ಲ. ॥ ೧೨೦ ॥ ದೇವತೆಗಳಾಗಲಿ, ಋಷಿಗಳಾಗಲಿ, ಜ್ಞಾನವಂತ ಮನುಷ್ಯರಾಗಲಿ ತಮ್ಮ ಪಾಪದ ಫಲವನ್ನು ತಾವೇ ತಮ್ಮ ದೇಹದಿಂದ ಅನುಭೋಗಿಸದ ಹೊರತು ಅದು ಹೋಗುವದಿಲ್ಲ ಎಂದು ಹೇಳಿದರು ॥ ೧೨೧ ॥ ಆಗ ದೀಪಕನು— ಸ್ವಾಮೀ, ಗುರುಗಳೇ, ನಾನು ನನ್ನ ಸ್ವಂತ ಶಕ್ತಿಯಿಂದ ತಮ್ಮ ಸೇವೆಯನ್ನು ಚನ್ನಾಗಿ ಮಾಡುವೆನು. ತಾವು ಏನೂ ಅನುಮಾನ ಮಾಡದೆ ನನಗೆ ನಿಮ್ಮ ಪಾಪದ ಲಕ್ಷಣವನ್ನು ಹೇಳಿರಿ ಎಂದು ಅಂದನು. ॥ ೧೨೨ ॥ ಅವನ ಮಾತು ಕೇಳಿ ವೇದಧರ್ಮ ಮುನಿಯು— ಎಲೈ ಶಿಷ್ಯನಾದ ದೀಪಕನೇ ಕೇಳು. ನಾನು ಕುಷ್ಠಿಯೂ ಅಂಗಹೀನನೂ ಕುರುಡನೂ ಹೆಳವನೂ ಆಗಿ ॥ ೧೨೩ ॥ ೨೧ ವರ್ಷಗಳ ವರೆಗೆ ಇರುವೆನು. ಅಷ್ಟು ದಿವಸ ನೀನು ಬಹು ಒಳ್ಳೇ ರೀತಿಯಿಂದ ನನ್ನನ್ನು ಸಂಬಾಳಿಸಿ ಸೇವಿಸಬೇಕು. ಹೀಗೆ ಮಾಡುವದಕ್ಕೆ ಒಂದು ವೇಳೆ ನಿನ್ನ ಧೃಡ ಮನಸ್ಸಿದ್ದರೆ ನೀನು ನನ್ನ ಸೇವೆಯನ್ನು ಮಾಡುವದಕ್ಕೆ ಒಪ್ಪಿಕೋ ಎಂದು ಅಂದನು. ॥ ೧೨೪ ॥ ಗುರುವಿನ ಮಾತು ಕೇಳಿ ದೀಪಕನು— ಸ್ವಾಮೀ, ಗುರುಗಳೇ, ನಾನು ಸಂತೋಷದಿಂದ ೨೧ ವರುಷಗಳ ವರೆಗೆ ಕುಷ್ಠಿಯೂ ಅಂಧನೂ ಆಗಿ, ತಮ್ಮ ಪಾಪದ ಫಲವನ್ನು ನಾನೇ ಅನುಭೋಗಿಸಿ ನಿಶ್ಚಯವಾಗಿ ತಮ್ಮ ಪಾಪದ ಪ್ರತೀಕಾರ ಮಾಡುವೆನು ಆದಕಾರಣ ಬೇಗನೇ ನನಗೆ ಆಜ್ಞೆ ಮಾಡಿರಿ ಎಂದು ಅವರ ಚರಣಕ್ಕೆ ನಮಸ್ಕರಿಸಿದನು ॥ ೧೨೫–೧೨೬ ॥ ಆ ಶಿಷ್ಯನ ಮಾತು ಕೇಳಿ ವೇದಧರ್ಮ ಮುನಿಯು ಸಂತೋಷಬಟ್ಟು ತಮ್ಮ ಪಾಪದ ಲಕ್ಷಣವನ್ನು ವಿಸ್ತಾರವಾಗಿ ಹೇಳಹತ್ತಿದರು ಕೇಳಿರಿ. ॥ ೧೨೭ ॥ ಅವರು— ಎಲೈ ಶಿಷ್ಯನೇ, ನಾನು ಮಾಡಿದ ಪಾಪದ ಫಲವನ್ನು ನಾನೇ ಅನುಭೋಗಿಸಲಿಕ್ಕೆಬೇಕು. ಯಾಕಂದರೆ ನನ್ನ ಪಾಪವು ನನಗೆ ಸೇರಿದ್ದಿರುತ್ತದೆ. ಅದನ್ನು ಮಕ್ಕಳು ಮತ್ತು ಶಿಷ್ಯರು ಮುಂತಾದವರು ಸ್ವೀಕರಿಸತಕ್ಕದ್ದಲ್ಲ ನನ್ನ ದೇಹದಿಂದಲೇ ನಾನು ಅವನ್ನು ಅನುಭೋಗಿಸದಿದ್ದರೆ ಅದು ಹೋಗುವದಿಲ್ಲ. ॥ ೧೨೮ ॥ ಆದ್ದರಿಂದ ನನ್ನ ಪಾಪದಿಂದ ಆಗುವ ದುಃಖವನ್ನು ನಾನೇ

ಅನುಭವಿಸುವೆನು. ಆದಕಾರಣ ಎಲೈ ದೀಪಕನೇ ಈಗ ಮಾತ್ರ ನೀನು ೨೧ ವರುಷಗಳವರೆಗೆ ನನ್ನನ್ನು ಸಂಬಾಳಿಸಿ ರಕ್ಷಿಸಬೇಕು. || ೧೪೯ || ಎಲೈ ದೀಪಕಾ ರೋಗಪೀಡಿತರಾದಂಥವರನ್ನು ಸಂರಕ್ಷಿಸುವವರಿಗೆ ಆರೋಗ್ಯ ಪೀಡಿತರಗಿಂತಲೂ ಬಹಳ ಕಷ್ಟವಾಗುವದು. ಅದರಂತೆ ನನಗೆ ರೋಗ ಬಂದಾಗ ನನ್ನಕಿಂತ ನಿನಗೆ ಬಹಳ ಕಷ್ಟವಾಗುವದು ಎಂದು ತಿಳಿ. || ೧೫೦ || ಆದ್ದರಿಂದ ನಾನು ನಿಶ್ಚಯವಾಗಿ ನನ್ನ ದೇಹದಿಂದಲೇ ನನ್ನ ಪಾಪವನ್ನು ಭೋಗಿಸುವೆನು. ಆದ ಕಾರಣ ಈಗ ನೀನು ನನ್ನನ್ನು ಕಾಶೀಪಟ್ಟಣಕ್ಕೆ ಒಯ್ದು ರಕ್ಷಿಸು. || ೧೫೧ || ಎಲೈ ಶಿಷ್ಯೋತ್ತಮಾ ನಿನ್ನ ಸೇವೆಯಿಂದ ನಾನು ಆ ಕಾಶೀಪಟ್ಟಣದಲ್ಲಿ ಪಾಪದಿಂದ ಮುಕ್ತನಾಗಿ ಮೋಕ್ಷವನ್ನು ಹೊಂದುವೆನು ಎಂದನು. || ೧೫೨ || ಗುರುಗಳ ಮಾತು ಕೇಳಿ ದೀಪಕನು— ಗುರುಗಳೇ, ನಾನು ಅವಶ್ಯವಾಗಿ ತಮ್ಮನ್ನು ಕಾಶೀಪಟ್ಟಣಕ್ಕೆ ಕರಕೊಂಡು ಹೋಗಿ, ತಾವು ಆ ಕಾಶೀ ವಿಶ್ವನಾಥನ ಸಮಾನವೆಂದು ತಿಳಿದು, ೨೧ ವರುಷಗಳವರೆಗೆ ತಮ್ಮ ಸೇವೆಯನ್ನು ಚೆನ್ನಾಗಿ ಮಾಡುವೆನು ಎಂದನು. || ೧೫೩ ||

ಇತ್ತ ಬ್ರಹ್ಮನು ಕಲಿಯನ್ನು ಕುರಿತು—ಎಲೈ ಕಲಿಯೇ, ಆ ಗುರುವಿನ ಶಿಷ್ಯನು ಹ್ಯಾಗಿದ್ದನು ನೋಡು! ಆಮೇಲೆ ಆ ದೀಪಕನು ಕುಷ್ಠರೋಗಿಯಾದ ಗುರುವನ್ನು ಕಾಶಿಗೆ ಕರಕೊಂಡು ಹೋದನು. || ೧೫೪ || ಅಲ್ಲಿ ಮಣಿಕರ್ಣಿಕಾ ಘಾಟಿನ ಉತ್ತರಭಾಗದಲ್ಲಿರುವ ಕಂಬಳೇಶ್ವರ ಸ್ವಾಮಿಯ ಸನ್ನಿಧಾನದಲ್ಲಿ ಗುರುಶಿಷ್ಯರಿಬ್ಬರೂ ವಾಸವಾಗಿದ್ದರು. || ೧೫೫ || ಆಮೇಲೆ ಆ ಸಂದೀಪಕನು ದಿನಾಲು ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ಶ್ರೀ ವಿಶ್ವನಾಥನನ್ನು ಪೂಜಿಸುತ್ತ, ಬಹು ಕುಷ್ಠರೋಗದಿಂದ ಕುರುಡರಾಗಿ ಅತಿ ದುಃಖದಿಂದ ತಮ್ಮ ಪ್ರಾರಬ್ಧಭೋಗವನ್ನು ಅನುಭವಿಸುತ್ತಿರುವ ತಮ್ಮ ಗುರುಗಳನ್ನು ಒಳ್ಳೇ ಭಕ್ತಿಯಿಂದ ಸೇವಿಸುತ್ತಿದ್ದನು. || ೧೫೬-೧೫೭ || ಮುಂದೆ ಕುಷ್ಠರೋಗವು ಪ್ರಬಲವಾಗಿ ಆ ಗುರುವಿನ ದೇಹದಲ್ಲಿ ಹುಳಗಳಾಗಿ ಕೀವು-ರಕ್ತಗಳು ಸೋರಹತ್ತಿ ಅವರು ಅತಿ ದುಃಖವನ್ನು ಅನುಭವಿಸುತ್ತ ಮೇಲಿಂದಮೇಲೆ ಅಪಸ್ಮಾರ ಬಂದು ಎಚ್ಚರದಪ್ಪಿ ಬೀಳುತ್ತಿದ್ದರು. || ೧೫೮ || ಆ ದೀಪಕನು ತನ್ನ ಗುರುಗಳು ಶ್ರೀ ಕಾಶೀವಿಶ್ವನಾಥನ ಸಮಾನವೆಂದು ತಿಳಿದು ಅವರನ್ನು ಒಳ್ಳೇ ಭಕ್ತಿಯಿಂದ

ಪೂಜಿಸುತ್ತ, ನಿತ್ಯ ಭಿಕ್ಷೆ ಬೇಡಿ ಅವರಿಗೆ ಅನ್ನವನ್ನು ತಂದುಕೊಡುತ್ತಿದ್ದನು. ॥ ೧೮೯ ॥ ಎಲೈ ನಾಮಧಾರಕನೇ ಕೇಳು, ಮೊದಲು ಸಜ್ಜನನೂ ಸಾಧುವೂ ಆದ ಮನುಷ್ಯನು ರೋಗಪೀಡಿತನಾದರೆ ಆ ದುಃಖದ ವೇಳೆಯಲ್ಲಿ ಕ್ರೂರನಾಗುತ್ತಾನೆ. ಆದರಂತೆ ಬ್ರಾಹ್ಮಣ ಶ್ರೇಷ್ಠನಾದ ವೇದಧರ್ಮ ಮುನಿಯ ಸ್ಥಿತಿಯೂ ಒಮ್ಮೊಮ್ಮೆ ಹಾಗೇ ಆಗುತ್ತಿತ್ತು. ॥ ೧೯೦ ॥ ಒಂದಾನೊಂದುದಿವಸ ದುಃಖಿತನಾದ ಆ ವೇದಧರ್ಮ ಮುನಿಯು ದೀಪಕನು ತಂದ ಅನ್ನವನ್ನು ನೋಡಿ— ಎಲೈ ದೀಪಕನೇ, ಸ್ವಲ್ಪೇ ಅನ್ನವನ್ನು ಯಾಕೆ ತಂದೆ? ಎಂದು ದುಃಖಿಸಟ್ಟು ಅದನ್ನು ಉಣ್ಣದೆ ಸಿಟ್ಟಿನಿಂದ ಭೂಮಿಯಮೇಲೆ ಚೆಲ್ಲಿಬಿಟ್ಟನು. ॥ ೧೯೧ ॥ ಮತ್ತೊಂದುದಿವಸ ಆ ಶಿಷ್ಯನು ಬಹಳ ಅನ್ನವನ್ನು ತರಲು ಆ ಗುರುವು— ನಾನಾತರದ ಪಕ್ವಾನ್ನಗಳನ್ನೇಕೆ ತರಲಿಲ್ಲ? ಎಂದು ದುಃಖಿಸುತ್ತ ॥ ೧೯೨ ॥ ಕಾಯಿ-ಪಲ್ಯೆಗಳನ್ನು ಯಾಕೆ ತರಲಿಲ್ಲ? ಎಂದು ಆ ಶಿಷ್ಯನನ್ನು ಹೊಡೆಯಲಿಕ್ಕೆ ಹೋಗುತ್ತಿದ್ದನು ॥ ೧೯೩ ॥ ಮತ್ತೆ ಅವರು ಅವನು ಬೇಕಾದಷ್ಟು ತಂದುಕೊಟ್ಟರೂ ಅವನ್ನೆಲ್ಲ ಕೆಡಿಸಿ ವ್ಯರ್ಥಮಾಡಿ ಸಿಟ್ಟಿನಿಂದ ಅವನಿಗೆ ಅನೇಕರೀತಿಯಾಗಿ ಬೈಯ್ಯುತ್ತಿದ್ದರು. ॥ ೧೯೪ ॥ ಮತ್ತೊಂದು ಸಮಯದಲ್ಲಿ ಆ ಗುರುವು ಸಂತೋಷದಿಂದಿದ್ದಾಗ ಆ ಶಿಷ್ಯನನ್ನು ಕುರಿತು— ಅಪ್ಪಾ, ಜ್ಞಾನವಂತ ಶಿಷ್ಯ ಶಿರೋಮಣಿಯೇ, ಶಿಷ್ಯರಾಯಾ, ನೀನು ನನ್ನದೆಸೆಯಿಂದ ಬಹಳ ಕಷ್ಟಬಡುತ್ತೀ ॥ ೧೯೫ ॥ ಎಂದೆನ್ನುತ್ತ ಒಮ್ಮೊಂದೊಮ್ಮೆ, ಸಿಟ್ಟಿಗೆದ್ದು ಕ್ರೂರ ಮಾತಿನಿಂದ— ಎಲೈ ನಾನು ಬಹಳ ಕಷ್ಟಪಡುತ್ತಿದ್ದೇನೆ. ನೀನು ಮೇಲಿಂದಮೇಲೆ ನನ್ನ ಮಲ-ಮೂತ್ರಗಳನ್ನು ತೆಗೆದು ಸ್ವಚ್ಛ ಮಾಡುವದಿಲ್ಲ. ॥ ೧೯೬ ॥ ನೊಣಗಳು ಮೈಗೆ ಮುಕುರಿ ನನ್ನನ್ನು ಕಡಿದು ತಿಂದು ಗೋಳಾಡಿಸುತ್ತವೆ. ನೀನು ಅವುಗಳನ್ನು ಯಾಕೆ ಹೊಡೆಯುವದಿಲ್ಲ? ಭಿಕ್ಷಾ ಯಾಕೆ ತರುವದಿಲ್ಲ? ಎಲೈ ದೀಪಕಾ ಸೇವಾ ಮಾಡುತ್ತೇನೆಂದು ಅನ್ನುತ್ತೀ ಹೀಗೇಏನು ಸೇವಾ ಮಾಡುವದು? ಎಂದೆನ್ನುತ್ತಿದ್ದರು. ॥ ೧೯೭ ॥ ಆದ್ದರಿಂದ ಎಲೈ ನಾಮಧಾರಕನೇ ಪಾಪದ ಗುಣವು ಹೀಗೆ ಇರುತ್ತದೆಂದು ತಿಳಿ. ಬಾಯಿಂದ ಕೆಟ್ಟ ಮಾತುಗಳು ಬರುವದು ನಿರ್ಗುಣ ಪಾಪವೆಂದು ತಿಳಿಯಬೇಕು. ॥ ೧೯೮ ॥ ಬಹುಪಾಪ ಸಂಗ್ರಹವಿದ್ದಲ್ಲಿ ದೈನ್ಯವೂ ಮತ್ಸರವೂ ಇರುವವು. ಆಗ ಕೆಲ

ವರಿಗೆ ಸ್ವಲ್ಪಾದರೂ ಶುಭಾಶುಭಗಳು ತಿಳಿಯುವದಿಲ್ಲ ಇದೂ ಪಾಪವೆಂದೇ ತಿಳಿಯಬೇಕು. ॥ ೧೯೯ ॥ ಪಾಪಿಷ್ಠನಿಗೆ ದುಃಖವು ಹ್ಯಾಗೆ ಬರುತ್ತದೆ ನೋಡು! ಅಪಸ್ಮಾರವಾದರೂ, ಪಾಪದಿಂದಲೇ ಬರುವದೆಂದು ತಿಳಿ. ॥ ೨೦೦ ॥ ಕುಷ್ಠರೋಗವು ಬಹಳ ಕಷ್ಟದಾಯಕವಾದದ್ದು. ಉಳಿದ ರೋಗಗಳೆಲ್ಲ ಕೂಡಿದರೂ ಕುಷ್ಠರೋಗದ ೧೬ನೇ ಪಾಲಿನ ದುಃಖಕ್ಕೆ ಸರಿಯಾಗುವದಿಲ್ಲ. ಈ ರೀತಿ ವೇದಧರ್ಮ ಮುನಿಯು ಕಷ್ಟಪಡುತ್ತಿದ್ದನು. ॥ ೨೦೧ ॥ ಆ ದೀಪಕನು ಈ ಪ್ರಕಾರವಾದ ಗುಣದೋಷಗಳನ್ನು ಮನಸಿನಲ್ಲಿ ತಾರದೆ ಗುರುಗಳೇ ಈಶ್ವರ ಸ್ವರೂಪರೆಂದು ತಿಳಿದು ಮನಮುಟ್ಟಿ ಸೇವಿಸುತ್ತಿದ್ದನು. ॥ ೨೦೨ ॥ ಮತ್ತು ತನ್ನ ಗುರುಗಳು ಪೂರ್ಣ ಈಶ್ವರಿ ಅವತಾರವೆಂದು ತಿಳಿದು ಅವರು ಬೇಡಿಬೇಡಿದಾಗ ಭಿಕ್ಷಾನ್ನವನ್ನು ತಂದುಕೊಟ್ಟು— ನನ್ನ ಗುರುಗಳು ಶ್ರೀ ಕಾಶೀ ವಿಶ್ವೇಶ್ವರನಿಗೂ ನಾರಾಯಣನಿಗೂ ಸಮಾನವೆಂದು ಹೇಳುತ್ತಿದ್ದನು. ॥ ೨೦೩ ॥ ಆ ಕಾಶೀ ಕ್ಷೇತ್ರ ಇಷ್ಟು ಶ್ರೇಷ್ಠವಾಗಿದ್ದರೂ ದೀಪಕನು ಗುರುಸೇವೆಯನ್ನು ಬಿಟ್ಟು ಎಂದೂ ತೀರ್ಥಯಾತ್ರೆಗೂ ದೇವ ದರ್ಶನಕ್ಕೂ ಹೋಗುತ್ತಿದ್ದಿಲ್ಲ. ॥ ೨೦೪ ॥

**ಶ್ಲೋಕ—** ನ ತೀರ್ಥಯಾತ್ರಾ ನಚ ದೇವ ಯಾತ್ರಾ ನ ದೇಹ ಯಾತ್ರಾ ನಚ ಗೇಹ ಯಾತ್ರಾ ॥
ಅಹರ್ನಿಶಂ ಬ್ರಹ್ಮಹರೀಃ ಸುಬುದ್ಧ್ಯೋ ಗುರುಃ ಪ್ರಸೇವ್ಯೋ ನ ಹಿ ಸೇವ್ಯಮನ್ಯತ ॥ ೨೦೫ ॥

**ಅರ್ಥ—** ತೀರ್ಥ, ದೇವ, ದೇಹ, ಗೇಹ, ಯಾತ್ರೆಗಳನ್ನು ಮಾಡದಿದ್ದರೂ ಶ್ರೀಗುರುವು ತ್ರೈಮೂರ್ತಿ ಸ್ವರೂಪನೆಂದು ತಿಳಿದು ಅಹೋರಾತ್ರಿ ಉತ್ತಮ ರೀತಿಯಿಂದ ಅವರ ಸೇವೆ ಮಾಡಬೇಕು. ಅಂದರೆ ಮನುಷ್ಯನು ಉದ್ಧಾರವಾಗುವನು. ಎಂದು ತಿಳಿದು ಆ ದೀಪಕನು ತನ್ನ ದೇಹಸಂರಕ್ಷಣೆಯನ್ನು ಎಂದೂ ಮಾಡಿಕೊಳ್ಳದೆ ಗುರುಚರಣದಲ್ಲಿಯೇ ಮನಸ್ಸನ್ನಿಟ್ಟು ಮನಮುಟ್ಟಿ ಅವರ ಸೇವೆಯನ್ನು ಮಾಡುತ್ತ ಯಾರ ಸಂಗಡಲೂ ಮಾತಾಡುತ್ತಿದ್ದಿಲ್ಲವೆಂದು ತಿಳಿ. ॥ ೨೦೬ ॥ ಮತ್ತು ಶ್ರೀಗುರುವೇ ತ್ರೈಮೂರ್ತಿ ಸಮಾನನೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು ಅಹೋರಾತ್ರಿ ಒಂದೇ ರೀತಿಯಾಗಿ ಅವರ ಸೇವೆ ಮಾಡುತ್ತಿದ್ದನು. ॥ ೨೦೭ ॥ ಗುರುಗಳು

ಒಮ್ಮೊಮ್ಮೆ ನಿಷ್ಠುರ ಮಾತಾಡಿದರೂ ಅವನು ಸಂತೋಷದಿಂದಿದ್ದು ಅವರ ಮನಸ್ಸಿಗೆ ಹ್ಯಾಗೆ ಹ್ಯಾಗೆ ಸೇರುತ್ತದೋ ಅದರಂತೆ ನಡೆಯುತ್ತಿದ್ದನು. ॥ ೨೦೮ ॥ ಈ ಪ್ರಕಾರ ನಡೆದಿರಲು ಒಂದು ದಿವಸ ಅವನ ಗುರುಭಕ್ತಿಗೆ ಮೆಚ್ಚಿ ಕಾಶೀವಿಶ್ವನಾಥನು ಪ್ರತ್ಯಕ್ಷವಾಗಿ ಬಂದು ಆ ದೀಪಕನ ಎದುರಿಗೆ ನಿಂತು— ॥ ೨೦೯ ॥ ಎಲೈ ಗುರುಭಕ್ತನಾದ ದೀಪಕನೇ, ಮಹಾ ಜ್ಞಾನಿಯಾದ ಕುಲದೀಪಕನೇ ಕೇಳು, ನಾನು ನಿನ್ನ ಗುರುಭಕ್ತಿಗೆ ಮೆಚ್ಚಿ, ಈಗ ನಿನಗೆ ಪ್ರಸನ್ನನಾಗಿ ಬಂದಿರುವೆನು. ಈಗ ನೀನು ಬೇಕಾದ ವರವನ್ನು ಕೇಳು ಎಂದನು ॥ ೨೧೦ ॥ ಆಗ ದೀಪಕನು— ಹೇ ಮೃತ್ಯುಂಜಯನೇ, ಹೇ ವ್ಯೋಮಕೇಶನೇ ನಾನು ನನ್ನ ಗುರುವನ್ನು ಕೇಳದೆ ತಮ್ಮಲ್ಲಿ ನಾನು ಎಂದೂ ವರವನ್ನು ತಕ್ಕೊಳ್ಳುವದಿಲ್ಲ. ॥ ೨೧೧ ॥ ಎಂದು ಹೇಳಿ ಹಾಗೇ ಗುರುಗಳ ಹತ್ತರ ಹೋಗಿ ವಿನಯದಿಂದ— ಸ್ವಾಮೀ, ಗುರುಗಳೇ ಶ್ರೀವಿಶ್ವನಾಥನು ನನಗೆ ಪ್ರಸನ್ನನಾಗಿ ಬಂದು ಬೇಕಾದ ವರವನ್ನು ಬೇಡೆಂದು ಅನ್ನುತ್ತಾನೆ. ॥ ೨೧೨ ॥ ಸ್ವಾಮೀ, ತಮ್ಮ ಅಪ್ಪಣೆಯಾದರೆ ತಮ್ಮ ಬೇನೆಯ ಉಪಶಮನಾರ್ಥವಾಗಿ ವರವನ್ನು ಕೇಳುವೆನು. ಸದಾಶಿವನ ವರವಾಯಿತೆಂದರೆ ತಮ್ಮ ಬೇನೆಯು ತೀವ್ರ ಗುಣವಾಗುತ್ತದೆ ಎಂದನು. ॥ ೨೧೩ ॥ ಶಿಷ್ಯನ ಮಾತು ಕೇಳಿ ಆ ಗುರುಗಳು ಅತ್ಯಂತ ಸಿಟ್ಟಾಗಿ— ಎಲೈ ದೀಪಕನೇ, ನನ್ನ ವ್ಯಾಧಿಯ ಒಗ್ಗೆ ನೀನು ಈಶ್ವರನಿಗೆ ಪ್ರಾರ್ಥಿಸಬೇಡ. ॥ ೨೧೪ ॥ ನಮ್ಮ ಪಾಪದ ಫಲವನ್ನು ನಾವೇ ಅನುಭೋಗಿಸಿದ ಮೇಲೆ ಅದು ಹೋಗುತ್ತದೆ ಆ ಪಾಪವು ಹಾಗೇ ಉಳಿದರೆ ಅದು ಜನ್ಮಾಂತರದಲ್ಲಾದರೂ ನಿಶ್ಚಯವಾಗಿ ಬಾಧಿಸುವದೆಂದು ಧರ್ಮಶಾಸ್ತ್ರದಲ್ಲಿ ಹೇಳಿದ್ದದನ್ನು ನೀನು ತಿಳಿ ॥ ೨೧೫ ॥ ಮುಕ್ತಿಯ ಅಪೇಕ್ಷೆಯುಳ್ಳವರು ತಮ್ಮ ಪಾಪವನ್ನು ತಾವೇ ಅನುಭವಿಸಿ ಕಳಕೊಳ್ಳಬೇಕು. ಅದು ಗುಪ್ತವಾಗಿ ಶೇಷ ಉಳಿದರೆ ಮೋಕ್ಷಕ್ಕೆ ವಿಘ್ನವನ್ನುಂಟು ಮಾಡುವದು ॥ ೨೧೬ ॥ ಎಂದು ಆ ವೇದಧರ್ಮಮುನಿಯು ದೀಪಕನಿಗೆ ಹೇಳಲು ಅವನು ಅವರ ಅಪ್ಪಣೆ ಪಡೆದು ಗುರುಗಳು ಅಂದದ್ದನ್ನು ತಿಳಿಸಲಿಕ್ಕೆ ಈಶ್ವರನ ಹತ್ತರ ಹೋಗಿ ॥ ೨೧೭ ॥ ಸ್ವಾಮೀ, ವಿಶ್ವನಾಥನೇ ನನಗೆ ನಿಮ್ಮ ವರವು ಬೇಡ, ಯಾಕಂದರೆ ನಮ್ಮ ಗುರುಗಳ ಮನಸ್ಸಿನಲ್ಲಿ ತಮ್ಮಿಂದ ವರವನ್ನು ಕೇಳಿಕೊಳ್ಳಬೇಕೆಂದಿಲ್ಲ. ಅಂದ

ಮೇಲೆ ನಾನು ನಿಮ್ಮಿಂದ ವರವನ್ನು ಹ್ಯಾಗೆ ತಕ್ಕೊಳ್ಳಲಿ ? ಎಂದನು. ‖ ೨೧೮ ‖ ಆದನ್ನು ಕೇಳಿ ಪರಮೇಶ್ವರನು ಆಶ್ಚರ್ಯಬಟ್ಟು, ಅಲ್ಲಿಂದ ಹೊರಟು ಯಾವತ್ತೂ ದೇವತೆಗಳನ್ನು ಸಂಗಡ ಕರಕೊಂಡು, ವೈಕುಂಠಕ್ಕೆ ಹೋಗಿ ವಿಷ್ಣುವಿಗೆ ಎಲ್ಲ ಸಂಗತಿಯನ್ನು ಹೇಳಿದನು. ‖ ೨೧೯ ‖ ಆದನ್ನು ಕೇಳಿ ವಿಷ್ಣುವು— ಶ್ರೀಶಂಕರನೇ, ಅಹಾ ! ಆ ಗುರು ಎಂಥವನು ? ಆ ಶಿಷ್ಯನು ಎಂಥವನು ? ಈಗ ಅವರು ಎಲ್ಲಿ ಇರುತ್ತಾರೆ ? ಎಂಬದನ್ನು ನನಗೆ ನಿಶ್ಚಯವಾಗಿ ಹೇಳು ಎಂದನು. ‖ ೨೨೦ ‖ ಆಗ ಶ್ರೀಶಂಕರನು— ವಿಷ್ಣುವೇ ಅವರು ಇದೇ ಕಾಶಿಯಲ್ಲಿಯೇ ಮಣಿಕರ್ಣಿಕೆಯ ಉತ್ತರವಲ್ಲಿ ಕಂಬಳೇಶ್ವರನ ಸನ್ನಿಧಾನದಲ್ಲಿರುವರು. ನನಗೆ ಆಶ್ಚರ್ಯವಾಯಿತು ಆ ದೀಪಕನು ನಿಜವಾದ ಗುರುಭಕ್ತನೆಂದು ತಿಳಿ. ‖ ೨೨೧ ‖ ಆ ದೀಪಕನು ಗೋದಾವರೀತೀರವಾಸಿಯಾದ ವೇದಧರ್ಮನೆಂಬ ಮುನಿಯ ಸೇವೆಯನ್ನು ಯಾವಾಗಲೂ ಭಕ್ತಿಯಿಂದಲೂ ಏಕಚಿತ್ತದಿಂದಲೂ ಮಾಡುತ್ತಿರುವನು. ‖ ೨೨೨ ‖ ಈ ಪ್ರಕಾರ ಒಳ್ಳೇ ನಿಕಟದಿಂದ ಗುರುಭಕ್ತಿಯನ್ನು ಮಾಡುವಂಥ ಶಿಷ್ಯನು ಇವನೊಬ್ಬನೇ. ಇವನ ಹೊರತು ನಾನು ಮೂರು ಲೋಕದಲ್ಲಿ ಬೇರೆ ಯಾರನ್ನೂ ಕಾಣಲಿಲ್ಲ. ಅವನನ್ನು ಕಂಡು ನನ್ನ ಮನಸ್ಸಿನಲ್ಲಿ ಅತ್ಯಂತ ಪ್ರೀತಿ ಯುಂಟಾಗುತ್ತದೆ. ‖ ೨೨೩ ‖ ಆಮೇಲೆ ನಾನು ಅವನ ಹತ್ತರ ಹೋಗಿ ವರವನ್ನು ಕೊಡುತ್ತೇನೆ ಕೇಳೆಂದು ಹೇಳಿದೆನು. ಆದರೆ ಅವನು ತನ್ನ ಗುರುಗಳ ಹತ್ತರ ಹೋಗಿ ಬಂದು— ಸ್ವಾಮೀ ವಿಶ್ವನಾಥನೇ, ನಿಮ್ಮಿಂದ ವರವನ್ನು ಪಡೆಯಲಿಕ್ಕೆ ನಮ್ಮ ಗುರುಗಳ ಅಪ್ಪಣೆ ಇಲ್ಲವೆಂದು ಹೇಳಿ ಅವನು ನನಗೆ ವರವನ್ನು ಕೇಳಲಿಲ್ಲ ‖ ೨೨೪ ‖ ಮಹಾನ್ ಮಹಾನ್ ಯೋಗಿಗಳೂ ಋಷಿಗಳೂ ಅನೇಕ ದಿವ್ಯ ಸಹಸ್ರ ವರ್ಷಗಟ್ಲೆ ಹಗಲಿರುಳು ನಾನಾತರದ ಕಷ್ಟಪಟ್ಟು ತಪಸ್ಸು ಮಾಡುತ್ತ ವರವನ್ನು ಬೇಡುತ್ತಾರೆ. ‖ ೨೨೫ ‖ ಅಂಥ ತಪಸ್ವಿಗಳಿಗೆ ಯೋಗಿಗಳಿಗೆ ನಾನು ವರವನ್ನು ಕೊಡುವದಿಲ್ಲ. ಆದರೆ ದೀಪಕನಿಗೆ ನಾನು ಜುಲುಮೆಯಿಂದ ವರವನ್ನು ಕೊಡಲಿಕ್ಕೆ ಹೋದರೆ ಅವನು ತಕ್ಕೊಳ್ಳಲಿಲ್ಲ. ‖ ೨೨೬ ‖ ಅವನು ತನ್ನ ಗುರುವು ತ್ರೈಮೂರ್ತಿ ಅವತಾರವೆಂದು ನಿಶ್ಚಯವಾಗಿ ತಿಳಿದು ತನು-ಮನ-ಧನವನ್ನವರಿಗೆ ಅರ್ಪಿಸಿ ಸಂತೋಷದಿಂದ ಅವರನ್ನು ಧೃಡವಾಗಿ ಸೇವಿಸುತ್ತಿರುವನು. ‖ ೨೨೭ ‖ ಅವನು

ಮನಸಿನಲ್ಲಿ ಶ್ರೀಗುರುವೇ ಸರ್ವ ದೇವತೆಗಳೂ, ತನ್ನ ತಾಯಿ-ತಂದೆಗಳೂ, ಪರಮಾತ್ಮನೂ ಆಗಿರುವರೆಂದು ನಿಶ್ಚಯಿಸಿರುವನು. ॥ ೨೨೮ ॥ ಅವಿದ್ಯೆಯೆಂಬ ಕತ್ತಲೆಯನ್ನು ನಾಶಮಾಡುವಂಥ ದೀಪಕನನ್ನು ಎಷ್ಟೆಂದು ವರ್ಣಿಸಲಿ ? ಅವನಿಗೆ ಕುಲದೀಪಕನೆಂಬ ಹೆಸರು ಯೋಗ್ಯವಾಗಿರುವದು. ॥ ೨೨೯ ॥ ಆ ಕುಲದೀಪಕನು ಧರ್ಮ-ಜ್ಞಾನ ಸರ್ವವನ್ನೂ ತನ್ನ ಗುರು ಒಬ್ಬನೇ ಕೊಡತಕ್ಕವನೆಂದು ತಿಳಿದು ಒಳ್ಳೇ ಭಕ್ತಿಯಿಂದ ಮನಃಪೂರ್ವಕ ವಾಗಿ ಗುರುಚರಣ ಸೇವೆಯನ್ನು ಮಾಡುತ್ತಿರುವನು ॥ ೨೩೦ ॥ ಎಂದು ಶಂಕರನು ಹೇಳಿದ್ದನ್ನು ಕೇಳಿ, ವಿಷ್ಣುವು ಆ ಗುರು-ಶಿಷ್ಯರನ್ನೂ, ಅವರ ಭಕ್ತಿ ಪ್ರಕಾರವನ್ನೂ ನೋಡಲಿಕ್ಕೆ ಕೂಡಲೆ ಕಾಶಿಗೆ ಹೋಗಿ ನೋಡಿದನು. ॥೨೩೧॥ ಅಲ್ಲಿ ಶ್ರೀಶಂಕರನು ಹೇಳಿದ್ದರಕಿಂತಲೂ ಮತ್ತಿಷ್ಟು ಹೆಚ್ಚಾಗಿ ಆ ದೀಪಕನು ಸಂತೋಷದಿಂದ ಗುರುಸೇವೆ ಮಾಡು ತ್ತಿರುವದನ್ನು ಕಂಡು ವಿಷ್ಣುವು ಸಂತೋಷಬಟ್ಟು ಆ ದೀಪಕನನ್ನು ಕರೆದು— ॥ ೨೩೨ ॥ ಎಲೈ ದೀಪಕನೇ, ನಾನು ನಿನ್ನ ಗುರುಭಕ್ತಿಗೆ ಮೆಚ್ಚಿ ಬಂದೆನು. ಈಗ ನೀನು ಬೇಕಾದ ವರವನ್ನು ಬೇಡು ಎಂದನು. ॥ ೨೩೩ ॥ ಆಗ ದೀಪಕನು— ಶ್ರೀಹರಿಯೇ ನೀನು ನನ್ನಲ್ಲಿ ಯಾವ ಭಕ್ತಿಯನ್ನು ನೋಡಿ ನನಗೆ ವರವನ್ನು ಕೊಡಲಿಕ್ಕೆ ಬಂದಿರುತ್ತೀ ? ನನ್ನ ಹತ್ತರ ಮತ್ತೇನು ಕಾರ್ಯವದೆ ? ಹೇಳು. ॥ ೨೩೪ ॥ ನಾರಾಯಣಾ, ಸಹಸ್ರ, ಲಕ್ಷ, ಕೋಟಿ ವರ್ಷಗಟ್ಲೆ ಅಡವಿಯಲ್ಲಿದ್ದು ತಪಸ್ಸು ಮಾಡುವಂಥವರಿಗೆ ನೀನು ನಿರಾಶೆ ಮಾಡಿ ಅವರಿಗೆ ವರವನ್ನು ಕೊಡುವದಿಲ್ಲ ॥ ೨೩೫ ॥ ಆದರೆ ನಾನು ನಿನ್ನನ್ನು ಸೇವಿಸುವದಿಲ್ಲ, ಮತ್ತು ನಿನ್ನ ನಾಮಸ್ಮರಣೆ ಮಾಡುವದಿಲ್ಲ. ಜುಲುಮೆಯಿಂದ ನನಗ್ಯಾಕೆ ವರವನ್ನು ಕೊಡಲಿಕ್ಕೆ ಬಂದೆ ? ಹೇಳು ? ಎಂದನು. ॥ ೨೩೬ ॥ ಅವನ ಮಾತು ಕೇಳಿ ನಾರಾಯಣನು ಸಂತೋಷಬಟ್ಟು ಆ ದೀಪಕನನ್ನು ಕುರಿತು ವಿಸ್ತಾರವಾಗಿ ಹೇಳುತ್ತಾನೆ— ॥ ೨೩೭ ॥ ಎಲೈ ದೀಪಕನೇ, ನೀನು ಏಕಾಗ್ರಚಿತ್ತನಾಗಿ ಭಕ್ತಿಯಿಂದ ಗುರುಸೇವೆಯನ್ನು ಮಾಡುತ್ತೀ ಎಂದು ನಾನು ಸಂತೋಷಬಟ್ಟೆನು. ನೀನು ಮಾಡಿದ ಗುರುಭಕ್ತಿಯು ನಮಗೆ ಮುಟ್ಟಿತು. ॥ ೨೩೮ ॥ ಯಾವನು ಒಳ್ಳೇ ಗುರುಭಕ್ತನಿರುತ್ತಾನೋ ಅವನು ನನಗೆ ಜೀವಪ್ರಾಣನೆಂದು ತಿಳಿ, ನಾನು ಅವನ ವಶನಾಗಿ ಅವನು ಕೇಳಿದ್ದನ್ನು

ಕೊಡುವೆನು. ॥ ೨೩೯ ॥ ತಾಯಿ-ತಂದೆಗಳನ್ನು ಸೇವಿಸುವವರೂ ಪತಿಸೇವೆಯನ್ನು ಮಾಡುವ ಸ್ತ್ರೀಯರೂ ನನಗೆ ಒಳ್ಳೆ ಪ್ರಿಯರು. ॥ ೨೪೦ ॥ ಮತ್ತು ಉತ್ತಮ ಬ್ರಾಹ್ಮಣರಿಗೂ, ಯತಿಗಳಿಗೂ ತಪಸ್ವಿಗಳಿಗೂ ಯಾರು ಭಕ್ತಿಯಿಂದ ನಮಿಸುತ್ತಾರೋ ಅವರೂ ನನಗೆ ಪ್ರಿಯರೆಂದು ತಿಳಿ ಎಂದು ಹೇಳಿದನು. ॥ ೨೪೧ ॥ ಸಿದ್ಧರು— ಎಲೈ ನಾಮಧಾರಕನೇ, ಆ ದೀಪಕನು ಈ ಪ್ರಕಾರ ಆ ವಿಷ್ಣುವಿನ ಮಾತು ಕೇಳಿ ಮತ್ತೆ ಕೈಮುಗಿದು ವಿನಂತೀ ಮಾಡಿಕೊಳ್ಳುತ್ತಾನೆ ಕೇಳು. ॥ ೨೪೨ ॥ ಆವನು— ದೇವಾ, ವಿಷ್ಣುವೇ, ಹೃಷೀಕೇಶನೇ ಕೇಳು, ನನಗೆ ವೇದ-ಶಾಸ್ತ್ರ-ಪುರಾಣ-ಮೀಮಾಂಸಾದಿಗಳನ್ನು ಶ್ರೀಗುರುವೇ ಕೊಡತಕ್ಕವನೆಂದು ನಾನು ಮನಸ್ಸಿನಲ್ಲಿ ನಿಶ್ಚೈಸಿರುವೆನು. ॥ ೨೪೩ ॥ ಗುರುಗಳಿಂದಲೇ ನನಗೆ ಸರ್ವಜ್ಞಾನವಾಗುವದು ಮತ್ತು ನಿಕಟವಾದ ಗುರುಸೇವೆ ಯಿಂದ ತ್ರೈಮೂರ್ತಿಗಳು ನಮ್ಮ ವಶರಾಗುವರು. ನಮ್ಮ ಗುರುವೇ ನಮಗೆ ದೇವರು. ಬೇರೆ ದೇವರಿಲ್ಲವೆಂದು ತಿಳಿ. ॥ ೨೪೪ ॥ ಸತ್ಯವಾಗಿ ನನ್ನ ಗುರುವೇ ಸರ್ವ ದೇವರೂ, ಸರ್ವ ತೀರ್ಥಗಳೂ ಆಗಿರುವರು. ಗುರುವಿನ ಸೇವೆ ಯಿಂದಲೇ ಮುಖ್ಯವಾಗಿ ಪರಮಾರ್ಥವು ಸಾಧಿಸುವದು. ಎಂದಮೇಲೆ ನನಗೆ ಗುರುವಿನ ಹೊರತು ಪರಮಾರ್ಥವು ಯಾಕೆ ದೂರ ಅದೆ ಹೇಳು ? ॥ ೨೪೫ ॥ ಸಮಸ್ತ ಸಿದ್ಧರೂ ಯೋಗಿಗಳೂ ಗುರುವಿಲ್ಲದೆ ಜ್ಞಾನವನ್ನು ಹೊಂದುವ ದಿಲ್ಲ. ಜ್ಞಾನವಾದಬಳಿಕ ಶಂಕರನು ದೂರದಲ್ಲಿರುವನೇ ? ದೂರ ಹ್ಯಾಗೆ ಇರುತ್ತಾನೆ ಹೇಳು ! ॥ ೨೪೬ ॥ ನೀವು ನನಗೆ ಯಾವ ವರವನ್ನು ಕೊಡಲಿಕ್ಕೆ ಸಿದ್ಧರಿರುವಿರೋ, ಆ ವರವನ್ನು ನನ್ನ ಗುರುವು ನನಗೆ ಕೊಡುವ ದೇನಾಶ್ಚರ್ಯವು ? ಆದ್ದರಿಂದ ನಾನು ಗುರುಗಳನ್ನು ಸೇವಿಸುವೆನು ಎಂದನು. ॥ ೨೪೭ ॥ ಆವನ ಮಾತು ಕೇಳಿ ನಾರಾಯಣನು ಸಂತೋಷಬಟ್ಟು— ಎಲೈ ಸಂದೀಪಕಾ, ನೀನು ಧನ್ಯ ! ಧನ್ಯ ! ನೀನು ನನ್ನ ಪ್ರಾಣ ದಂತಿರುವ ಶಿಷ್ಯಶಿರೋಮಣಿಯು ಹಾಗೂ ನನ್ನ ಬಾಲಕನು. ॥ ೨೪೮ ॥ ಈಗ ನೀನು ಏನಾದರೂ ವರವನ್ನು ಬೇಡು ಕೂಡಲೇ ಕೊಡುವೆನು. ಈ ಮೊದಲು ನಿನಗೆ ವರ ಕೊಡಲಿಕ್ಕೆ ಶ್ರೀವಿಶ್ವನಾಥನು ಬಂದಿದ್ದನು. ಈಗ ಎರಡನೇ ಸಾರೆ ವರ ಕೊಡಲಿಕ್ಕೆ ನಾನು ಬಂದಿರುವೆನು. ॥ ೨೪೯ ॥ ಎಲೈ ಕುಲದೀಪಕಾ, ನಮ್ಮ ಮನಸ್ಸಿಗೆ

ಸಂತೋಷವಾಗುವಂತೆ ನೀನು ನಿನ್ನ ಮನಸಿಗೆ ಬಂದ ಬೇಕಾದ ವರವನ್ನು ಬೇಡು. ನಾನು ನಿಶ್ಚಯವಾಗಿ ನಿನ್ನ ವಶನಾಗಿರುವೆನು. ಈಗ ನೀನು ಬೇಡಿದ್ದನ್ನು ಕೊಡುವೆನು ಎಂದನು. ‖ ೩೫೦ ‖ ಆಗ ದೀಪಕನು— ಶ್ರೀಹರಿಯೇ, ಒಂದುವೇಳೆ ನೀನು ನನಗೆ ವರವನ್ನು ಕೊಡುತ್ತಿದ್ದರೆ, ನನ್ನ ಮನಸಿನಲ್ಲಿ ಈಗಿನಕಿಂತಲೂ ನನ್ನ ಗುರುಗಳಲ್ಲಿ ಹೆಚ್ಚು ಭಕ್ತಿಯುಂಟಾಗುವಂತೆ ಮಾತ್ರ ಜ್ಞಾನವನ್ನು ಕೊಡು ‖ ೩೫೧ ‖ ನನ್ನ ಗುರುವಿನ ಸ್ವರೂಪವು ನನಗೆ ಸುಖವಾಗಿ ತಿಳಿಯುವಂತೆ ನೀನು ನನಗೆ ಜ್ಞಾನವನ್ನು ಕೊಡು. ಇದರ ಹೊರತು ನನಗೆ ಬೇರೆ ಏನೂ ಬೇಡ ಎಂದು ಆವನ ಚರಣಕ್ಕೆ ವಂದಿಸಿದನು. ‖ ೩೫೨ ‖ ಆಗ ಶ್ರೀಹರಿಯು ಸಂತೋಷದಿಂದ ಅವನು ಕೇಳಿದ ವರವನ್ನು ಕೊಟ್ಟು— ಎಲೈ ದೀಪಕಶಿರೋಮಣಿಯೇ ನೀನು ನನ್ನ ಪ್ರಾಣಸಖಿಸಿರುತ್ತೀ ‖ ೩೫೩ ‖ ನೀನು ನಿನ್ನ ಗುರುವನ್ನು ಗುರ್ತಿಸಿ, ಅವರನ್ನು ಪರಬ್ರಹ್ಮ ದೃಷ್ಟಿಯಿಂದ ನೋಡಿ ಆಮೇಲೆ ಮತ್ತೊಮ್ಮೆ, ನನ್ನನ್ನು ಕೇಳುತ್ತೀ ಅಂದಮೇಲೆ ಹೇಳುತ್ತೇನೆ ಕೇಳು. ‖ ೩೫೪ ‖ ನೀನು ಧರ್ಮಾಧರ್ಮಗಳನ್ನು ತಿಳಕೊಂಡು ಶುದ್ಧ ಅಂತಃಕರಣದಿಂದ ಲೌಕಿಕ ಬುದ್ಧಿಯುಳ್ಳವನಾಗಿ ಅತ್ಯಂತ ಉತ್ಕೃಷ್ಟ ರೀತಿಯಿಂದ ಯಾವಾಗಲೂ ನಿನ್ನ ಗುರುವನ್ನು ಸ್ತುತಿ ಮಾಡು. ‖ ೩೫೫ ‖ ಎಲೈ ದೀಪಕನೇ ನೀನು ಯಾವ ಯಾವ ವೇಳೆಯಲ್ಲಿ ಶ್ರೀಗುರುವನ್ನು ಭಕ್ತಿಯಿಂದ ಸ್ತುತಿಸುತ್ತೀಯೋ ಅದೇ ನನ್ನ ಸ್ತುತಿಯೆಂದು ತಿಳಿದು ಅದರಿಂದ ನಾನು ಸಂತೋಷಹೊಂದುವೆನು ‖ ೩೫೬ ‖ ವೇದಗಳನ್ನೂ ವೇದಾಂತ ಭಾಷ್ಯವನ್ನೂ ಉತ್ತಮ ರೀತಿಯಿಂದ ಸದಾ ಓದುವವರೂ ಹೇಳುವವರೂ ನಿಶ್ಚಯವಾಗಿ ನನ್ನನ್ನು ಸೇರುವರು. ‖ ೩೫೭ ‖ ಗುರುವೇ ಪರಬ್ರಹ್ಮನೆಂದು ವೇದದಲ್ಲಿ ಪ್ರಸಿದ್ಧವಾಗಿ ಹೇಳಿರುವದು. ಆದಕಾರಣ ಗುರುಗಳನ್ನು ಭಕ್ತಿಯಿಂದ ಸೇವೆ ಮಾಡಿದರೆ ಸರ್ವ ದೇವತೆಗಳೂ ನಿನ್ನ ವಶರಾಗುವರು. ‖ ೩೫೮ ‖ ಗುರು ಎಂಬ ಎರಡು ಅಕ್ಷರಗಳು ಅಮೃತದ ಸಮುದ್ರವೆಂದು ತಿಳಿ. ಆದರಲ್ಲಿ ಒಂದು ಕ್ಷಣಹೊತ್ತು ಮುಳುಗಿದರೆ ಏನಾಗುತ್ತದೆ ಕೇಳು. ‖ ೩೫೯ ‖ ಯಾವನ ಹೃದಯದಲ್ಲಿ ಸದಾ ಗುರುಸ್ಮರಣ

ವುಂಟಾಗುವದೋ ಅವನು ತ್ರೈಲೋಕ್ಯದಲ್ಲಿ ಪೂಜ್ಯನಾಗಿ ಸದಾ ಪ್ರತ್ಯಕ್ಷವಾಗಿ ಅಮೃತಪಾನ ಮಾಡಿದಂತೆ ಆ ಶಿಷ್ಯನು ಅಮರನಾಗುವನು. ‖ ೨೬೦ ‖ ಹೇಳುವೆನು ಕೇಳು.

**ಶ್ಲೋಕ—** ಯದಾ ಮಮಶಿವಸ್ಯಾಪಿ ಬ್ರಹ್ಮಣೋ ಬ್ರಾಹ್ಮಣಸ್ಯಹಿ ‖
ಅನುಗ್ರಹೋ ಭವೇ ಸ್ಸೂಕ್ಷ್ಮಾ ಸೇವ್ಯತೇ ಸದ್ಗುರುಸ್ತದಾ ‖ ೨೬೧ ‖

**ಅರ್ಥ—** ಯಾವನು ನನ್ನನ್ನಾಗಲಿ ಶಿವನನ್ನಾಗಲಿ ಬ್ರಹ್ಮನನ್ನಾಗಲಿ ಕುರಿತು ತಪಸ್ಸು ಮಾಡಿ ಯಾವ ಫಲವನ್ನು ಹೊಂದುತ್ತಾನೋ ಸದ್ಗುರುವನ್ನು ಭಕ್ತಿಯಿಂದ ಸೇವಿಸಿದವನೂ ಅದೇ ಫಲವನ್ನು ಹೊಂದುತ್ತಾನೆ. ಆದ್ದರಿಂದ ಗುರುವು ತ್ರೈಮೂರ್ತಿ ಸ್ವರೂಪವೆಂದು ತಿಳಿ ‖ ೨೬೨ ‖ ಎಂದು ವಿಷ್ಣುವು ದೀಪಕನಿಗೆ ಹೇಳಿ ಅವನಿಗೆ ವರವನ್ನು ಕೊಟ್ಟು ಹೋದನೆಂದು ಬ್ರಹ್ಮನು ಕಲಿಗೆ ಹೇಳಿ ಮತ್ತೆ— ಎಲೈ ಕಲಿಯೇ ಮುಂದೆ ಹೇಳುವೆನು ಕೇಳು. ‖ ೨೬೩ ‖ ಈ ಪ್ರಕಾರ ದೀಪಕನು ವಿಷ್ಣುವಿನಿಂದ ವರವನ್ನು ಸಂಪಾದಿಸಿ ತನ್ನ ಗುರುಗಳ ಸಮೀಪಕ್ಕೆ ಹೋದನು. ಆಗ ಆ ಗುರುಗಳು ಆ ದೀಪಕನನ್ನು ಕೇಳುತ್ತಾರೆ ಕೇಳು ‖ ೨೬೪ ‖ ಎಲೈ ಶಿಷ್ಯನಾದ ಕುಲ ದೀಪಕನೇ, ಕೇಳು ವೈಕುಂಠ ನಾಯಕನಾದ ನಾರಾಯಣನು ನಿನಗೆ ಯಾವ ವರವನ್ನು ಕೊಟ್ಟನೆಂಬದನ್ನು ಸತ್ಯವಾಗಿಯೂ ವಿಸ್ತಾರವಾಗಿಯೂ ನನಗೆ ಹೇಳು, ಅದರಿಂದ ನನ್ನ ಮನಸ್ಸು ಸ್ಥಿರವಾಗುವದು ಎಂದನು. ‖ ೨೬೫ ‖ ಆಗ ದೀಪಕನು— ಗುರುಗಳೇ ನಾನು ವಿಷ್ಣುವನ್ನು ಕುರಿತು ಈಗಿನಕಿಂತಲೂ ನನ್ನಲ್ಲಿ ಗುರುಭಕ್ತಿಯು ಮತ್ತಿಷ್ಟು ಹೆಚ್ಚಾಗಲೆಂದು ವರವನ್ನು ಕೇಳಿದನು. ಅವನು ವರವನ್ನು ಕೊಟ್ಟನು ಏನಂದರೆ ‖ ೨೬೬ ‖ ಎಲೈ ದೀಪಕನೇ ನೀನು ದೃಢವಾದ ಅಂತಃಕರಣದಿಂದ ಗುರುಸೇವೆಯಲ್ಲಿ ಮತ್ತಿಷ್ಟು ತತ್ಪರನಾಗು. ಎಂದು ವರವನ್ನು ಕೊಟ್ಟು ಹೋದನು. ಸ್ವಾಮೀ ತಮ್ಮ ಚರಣದಲ್ಲಿ ನನ್ನ ಭಕ್ತಿಯು ದೃಢವಾಗಿರಲಿ ಎಂದನು. ‖ ೨೬೭ ‖ ಅದನ್ನು ಕೇಳಿ ಗುರುವಾದ ವೇದಧರ್ಮ ಮುನಿಯು ಅತ್ಯಂತ ಸಂತೋಷಪಟ್ಟು ಕೂಡಲೆ ನಿರ್ಮಲ ದೇಹವುಳ್ಳವನಾಗಿ

ಪ್ರಸನ್ನತೆಯನ್ನು ಹೊಂದಿ— ಎಲೈ ಶಿಷ್ಯ ಶಿಖಾಮಣಿಯಾದ ದೀಪಕನೇ ನೀನು ಸ್ಥಿರ ಜೀವಿಯಾಗಿ ಕಾಶಿಯಲ್ಲಿ ವಾಸಿಸು. ॥ ೨೧೮ ॥ ನಿನಗೆ ಸರ್ವವಾಕ್ ಸಿದ್ಧಿಯುಂಟಾಗಲಿ. ನಿನ್ನ ಮನೆಯಲ್ಲಿ ನವನಿಧಿಗಳು ಸ್ಥಿರವಾಗಿರಲಿ, ಕಾಶೀ ವಿಶ್ವನಾಥನು ನಿನಗೆ ವಶನಾಗಲಿ. ॥ ೨೧೯ ॥ ಮತ್ತು ನಿನ್ನ ಸ್ಮರಣೆ ಮಾಡಿದವರ ಕಷ್ಟಗಳು ಕೂಡಲೆ ದೂರವಾಗುವವು ಮತ್ತು ನಿನ್ನ ಸ್ಮರಣ ಮಾತ್ರದಿಂದಲೇ ಅವರು ಸಕಲೈಶ್ವರ್ಯದಿಂದ ಯುಕ್ತರಾಗಿ ಬಾಳುವರು ॥ ೨೨೦ ॥ ಈ ರೀತಿ ವೇದಧರ್ಮ ಮುನಿಯು ಪ್ರಸನ್ನನಾಗಿ ಸಂತೋಷದಿಂದ ಆ ಶಿಷ್ಯನಾದ ದೀಪಕನಿಗೆ ವರವನ್ನು ಕೊಟ್ಟು ಆ ಕ್ಷಣದಲ್ಲಿ ದಿವ್ಯ ದೇಹವನ್ನು ಧರಿಸಿದನು ॥ ೨೨೧ ॥ ಶಿಷ್ಯನ ದೃಢ ಮನಸ್ಸನ್ನು ಪರೀಕ್ಷಿಸುವದಕ್ಕಾಗಿಯೇ ಆ ಮುನಿಯು ಈ ರೀತಿ ಕುಷ್ಠರೋಗಿಯಾಗಿ ಅತಿಶಯ ಕಷ್ಟಪಟ್ಟನು. ಎಲೈ ಕಲಿಯೇ, ಅವನು ಶ್ರೇಷ್ಠ ತಪಸ್ವಿಯಾದ್ದರಿಂದ ಅವನಲ್ಲಿ ಪಾಪವು ಹ್ಯಾಗೆ ಉಳಿಯಬೇಕು ? ॥ ೨೨೨ ॥ ಅವನು ಲೋಕಾನುಗ್ರಹಕ್ಕಾಗಿ ಕಾಶಿಗೆ ಹೋಗಿದ್ದನು ಆ ಕಾಶಿಯಲ್ಲಿ ವಾಸ ಮಾಡಿದವರ ಸಹಸ್ರ ಜನ್ಮಗಳ ಪಾಪಗಳು ನಾಶವಾಗುತ್ತವೆ. ಈ ಪ್ರಕಾರ ಕಾಶೀ ಕ್ಷೇತ್ರದ ಮಹಿಮೆಯಿರುತ್ತದೆ. ॥ ೨೨೩ ॥ ಆ ಕಾಶಿಯಲ್ಲಿ ಧರ್ಮವಂತನಾಗಲಿ ಅಧರ್ಮವಂತನಾಗಲಿ ಸ್ವಲ್ಪಕಾಲ ವಾಸಮಾಡಿದರೆ ಸಾಕು, ಅವನಿಗೆ ಪುನರ್ಜನ್ಮವಿಲ್ಲೆಂದು ತಿಳಿ. ॥ ೨೨೪ ॥ ಎಂದು ಸೂತನು— ಶೌನಕಾದಿ ಮುನಿಗಳಿಗೆ ಹೇಳಿದನು ಅದರಂತೆ ಬ್ರಹ್ಮನು ಕಲಿಗೆ ದೀಪಕಾಖ್ಯಾನವನ್ನು ಹೇಳಿದನು ॥ ೨೨೫ ॥ ಸಿದ್ಧರು— ಎಲೈ ನಾಮಧಾರಕನೇ ಯಾರ ಮನಸ್ಸು ಗುರುಭಕ್ತಿಯಲ್ಲಿ ದೃಢವಾಗಿರುತ್ತದೋ ಅವರು ಈ ಭವಸಾಗರವನ್ನು ದಾಟುವರು ಗುರುಭಕ್ತಿಯು ಈ ಪ್ರಕಾರವಾಗಿರುತ್ತದೆ. ॥ ೨೨೬ ॥

**ಶ್ಲೋಕ**— ಯತ್ರ ಯತ್ರ ದೃಢಾಭಕ್ತಿಃ ಯದಾ ಕಸ್ಯ ಮಹಾತ್ಮನಃ ॥
ತತ್ರ ತತ್ರ ಮಹಾದೇವಃ ಪ್ರಕಾಶ ಮುಪಗಚ್ಛತಿ ॥ ॥ ೨೨೭ ॥

**ಅರ್ಥ**— ತ್ರಿಕರಣ ಶುದ್ಧಿಯಾದ ಮನಸಿನಿಂದ ಗುರುವಿನಲ್ಲಿ ದೃಢಭಕ್ತಿಯನ್ನು ಮಾಡಿದವರಿಗೆ ಈಶ್ವರನು

ಪ್ರಸನ್ನನಾಗಿ ಅವರ ವಶನಾಗುವನು ಎಂದು ಹೇಳಿದರು. ‖ ೨೭೮ ‖ ಇತ್ತ ಗಂಗಾಧರ ನಂದನನು ಶ್ರೋತೃಗಳಿಗೆ ವಂದಿಸಿ—- ಎಲೈ ಶ್ರೋತೃಗಳೇ, ನಾನು ತೊದಲುನುಡಿಯಿಂದ ಹೇಳುವ ಈ ಗುರುಚರಿತ್ರೆಯು ಪೂರ್ಣವಾಗಿದೆ, ಕಡಿಮೆಯಾಯಿತೆಂದು ಮಾತ್ರ ಅನ್ನಬೇಡಿರಿ ಎಂದು ಹೇಳಿದನು. ‖ ೨೭೯ ‖

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಗುರುಭಕ್ತ್ಯರ್ಥಂ ಶಿಷ್ಯ ದೀಪಕಾಖ್ಯಾನಂ ನಾಮ ದ್ವಿತೀಯೋಽಧ್ಯಾಯಃ ‖ ೨ ‖ ಶ್ರೀ ಗುರುದೇವದತ್ತ ‖

— ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು .—

**— ೨ನೇ ಅಧ್ಯಾಯ ಸಮಾಪ್ತ —**

# ೩ನೆಯ ಅಧ್ಯಾಯ





## ಅಂಬರೀಷನ ಏಕಾದಶಿ ವ್ರತ, ದೂರ್ವಾಸರ ಆಗಮನ ವಿಷ್ಣುವು ಶಾಪಹೊಂದಿದ್ದು

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಕುಲದೇವತಾಯೈನಮಃ । ಶ್ರೀ ನರಸಿಂಹ ಸರಸ್ವತಿ ಗುರುಭ್ಯೋನಮಃ । ಈ ಪ್ರಕಾರ ಸಿದ್ಧಮುನಿಗಳು ದೀಪಕಾಖ್ಯಾನವನ್ನು ವಿಸ್ತಾರವಾಗಿ ಹೇಳಲು ನಾಮ ಧಾರಕನು ಸಂತೋಷಬಟ್ಟು, ಪುನಃ ವಿನಯದಿಂದ ಕೈಮುಗಿದು ॥ ೧ ॥— ಜಯ ಜಯ ಸಿದ್ಧಮುನಿಗಳೇ ನೀವು ನನ್ನ ಉದ್ಧಾರಕರಿದ್ದು, ಈ ದಿವಸ ತಾವು ನನ್ನ ಮನಸಿನಲ್ಲಿದ್ದ ಸಂದೇಹವನ್ನು ಕಳೆದಿರಿ ॥ ೨ ॥ ದಯಾನಿಧಿಯೇ, ನಿಮ್ಮಿಂದ ನಾನು ದೀಪಕಾಖ್ಯಾನವನ್ನು ಕೇಳಿ, ಸರ್ವಸ್ವವನ್ನು ಹೊಂದಿ ಆನಂದ ಸಮುದ್ರದಲ್ಲಿ ಮುಳುಗಿ ಇವತ್ತಿನಿಂದ ನಾನು ಪರಮ ತತ್ವವನ್ನು ತಿಳಿದೆನು ॥ ೩ ॥ ಸ್ವಾಮೀ ನೀವು ನನಗೆ ಈ ಪ್ರಕಾರವಾದ ಗುರು ಮಹಿಮೆಯ ಜ್ಞಾನವನ್ನು ವಿಸ್ತಾರವಾಗಿ ಹೇಳಿದಿರಿ ನಿಮ್ಮ ಧರ್ಮದಿಂದ ನನ್ನ ಮನಸ್ಸು ಆನಂದವನ್ನು ಹೊಂದಿ ನನಗೆ ಜ್ಞಾನೋದಯವಾಯಿತು ॥ ೪ ॥ ಸ್ವಾಮೀ ಈಗ ನಾನು ತಮ್ಮ ದಾಸನಾಗಿರುವೆನು. ನಿಮ್ಮ ವಾಸಸ್ಥಳವು ಯಾವದು ? ನೀವು ನಿತ್ಯ ಎಲ್ಲಿ ಊಟ ಮಾಡುತ್ತೀರಿ ಎಂಬದನ್ನು ಹೇಳಬೇಕು, ಎಂದು ಅವರ ಚರಣಕ್ಕೆ ವಂದಿಸಿದನು. ॥ ೫ ॥ ಆಗ ಕೃಪಾನಿಧಿಯಾದ ಸಿದ್ಧರು ಆ ಶಿಷ್ಯನನ್ನು ಆಲಂಗಿಸಿ, ಆಶೀರ್ವಾದ ಮಾಡಿ ತಮ್ಮ ಎಲ್ಲ ವೃತ್ತಾಂತವನ್ನು ಹೇಳಹತ್ತಿದರು. ॥ ೬ ॥ ಎಲೈ ಶಿಷ್ಯನೇ ಕೇಳು, ಯಾವ ಯಾವ ಸ್ಥಳದಲ್ಲಿ ಶ್ರೀ ಗುರುಗಳು ಇರುವರೋ ಆ ಸ್ಥಾನದಲ್ಲಿ ನಾನು ಚಮತ್ಕಾರ ರೂಪದಿಂದ ಇರುವೆನು. ನೀನು ನನ್ನ ಆಹಾರವನ್ನೂ ಆಶ್ರಮವನ್ನೂ ಕೇಳುತ್ತೀ, ಹೇಳುತ್ತೇನೆ ಕೇಳು. ನಿತ್ಯ ಗುರುಸ್ಮರಣೆ ಮಾಡುವದೇ ನನ್ನ ಆಹಾರವು. ॥ ೭ ॥ ಶ್ರೀ ಗುರುಚರಿತ್ರೆಯ ಮಹಿಮೆಯೇ ನನಗೆ ಅಮೃತಪಾನವು. ಸದಾ ಅವರ ಗುಣವನ್ನೇ ವರ್ಣಿ

ಸುವೆನು ಎಂದು ಗುರುಚರಿತ್ರೆಯ ಪುಸ್ತಕವನ್ನು ತೋರಿಸಿದರು. ‖ ೮ ‖ ಎಲೈ ನಾಮಧಾರಕನೇ ಗುರುಚರಿತ್ರೆಯನ್ನು ಕೇಳಿದರೆ ಮನಸಿನಲ್ಲಿ ಅಪೇಕ್ಷಿಸಿದ ಭುಕ್ತಿ-ಮುಕ್ತಿ-ಪರಮಾರ್ಥಗಳಲ್ಲಿ ಬೇಕಾದದ್ದು ತೀವ್ರವಾಗಿ ಸಾಧ್ಯವಾಗುವದು ‖ ೯ ‖ ಮತ್ತು ಗುರುಚರಿತ್ರೆಯನ್ನು ಕೇಳುವದರಿಂದ ಧನಾಪೇಕ್ಷೆಯುಳ್ಳವರ ಧನವು ಅಕ್ಷಯವಾಗುವದು. ಮತ್ತು ಅವರ ಮನೆಯಲ್ಲಿ ಪುತ್ರ-ಪೌತ್ರರೂ ಗೋಧನಗಳೂ ಆಗುವವಲ್ಲದೆ, ಅವರಿಗೆ ತತ್ಕಾಲದಲ್ಲಿ ಜ್ಞಾನ ಸಿದ್ಧಿಯೂ ಉಂಟಾಗುವದು. ‖ ೧೦ ‖ ಯಾರು ಭಕ್ತಿಯಿಂದಲೂ ಏಕಚಿತ್ತದಿಂದಲೂ ಗುರುಚರಿತ್ರೆಯನ್ನು ಪೂರ್ಣ ಓದುತ್ತಾರೋ ಹಾಗೂ ಕೇಳುತ್ತಾರೋ ಅವರು ತತ್ಕಾಲದಲ್ಲಿಯೇ ತಮ್ಮ ಇಚ್ಛಿತ ಫಲವನ್ನು ಹೊಂದುತ್ತಾರೆ ಅಪುತ್ರರು ಪುತ್ರವಂತರಾಗುತ್ತಾರೆ. ‖ ೧೧ ‖ ಅವರಿಗೆ ಗ್ರಹ, ರೋಗ, ವ್ಯಾಧಿಗಳ ಪೀಡೆಯು ಎಂದೂ ಆಗುವದಿಲ್ಲ. ಒಂದುವೇಳೆ ಬಂಧನದಲ್ಲಿದ್ದವರು ಕೇಳಿದರೆ ತೀವ್ರ ಬಂಧನದಿಂದ ನಿವೃತ್ತರಾಗಿರುವರು. ‖ ೧೨ ‖ ಗುರುಚರಿತ್ರೆಯನ್ನು ಕೇಳುವವರು ಏಕಚಿತ್ತದಿಂದ ನಿಶ್ಚಯವಾಗಿ ಜ್ಞಾನವಂತರೂ ಶತಾಯುಷಿಗಳೂ ಆಗುವರು ಅವರ ಬ್ರಹ್ಮ ಹತ್ಯಾಪಾತಕವು ನಾಶವಾಗುವದು ಎಂದು ಹೇಳಿದರು. ‖ ೧೩ ‖

ಇಷ್ಟೆಲ್ಲವನ್ನು ಕೇಳಿದಕೂಡಲೆ ನಾಮಧಾರಕನು ಅವರಿಗೆ ನಮಸ್ಕಾರಮಾಡಿ— ಸ್ವಾಮೀ ಕೃಪಾನಿಧಿ ಸಿದ್ಧಮುನಿಯೇ, ನನ್ನನ್ನು ಈ ಭವಸಾಗರದಿಂದ ದಾಟಿಸಿ ಉದ್ಧಾರ ಮಾಡಿರಿ. ‖ ೧೪ ‖ ಜಗತ್ತನ್ನು ಪ್ರಕಾಶಿಸುವಂಥ ಜ್ಯೋತಿ ಸ್ವರೂಪರೂ ಗುರುಮೂರ್ತಿಗಳೂ ಆದ ತಾವು ನನಗೆ ಪ್ರತ್ಯಕ್ಷ ದರ್ಶನ ಕೊಟ್ಟಿರಿ, ಸ್ವಾಮೀ ಗುರುವರ್ಯರೇ ಗುರುಚರಿತ್ರೆಯನ್ನು ಸಂಪೂರ್ಣವಾಗಿ ಕೇಳಬೇಕೆಂದು ನನ್ನ ಇಚ್ಛೆ ಇರುವದು. ‖ ೧೫ ‖ ಒಳ್ಳೇ ನೀರಡಿಕೆಯಿಂದ ಪೀಡಿತನಾಗಿ ದಾರಿ ನಡೆಯುವವನಿಗೆ ಅಮೃತವನ್ನು ತಂದುಕೊಟ್ಟಂತೆ ತಾವು ನನಗೆ ದರ್ಶನ ಕೊಟ್ಟಿರಿ. ‖ ೧೬ ‖ ರಾತ್ರಿಯನ್ನು ಕಳೆಯುವದಕ್ಕೆ ಸೂರ್ಯೋದಯವಾಗುವಂತೆ ನನ್ನ ಅಜ್ಞಾನವನ್ನು ಕಳೆಯುವದಕ್ಕಾಗಿ ತಾವು ಶ್ರೀ ಗುರು ಮಹಿಮೆಯು ನನ್ನ ಕಿವಿಗಳಿಗೆ ಬೀಳುವಂತೆ ವಿಸ್ತಾರವಾಗಿ ಹೇಳಿದಿರಿ ಎಂದನು. ‖ ೧೭ ‖ ಆ ಕೂಡಲೆ ಸಿದ್ಧಮುನಿಯು ಅವನಿಗೆ ಅಭಯ ವಚನವನ್ನು ಕೊಟ್ಟು, ಅವನ ಬಲಗೈ

ಯನ್ನು ಹಿಡಿದು ಅಮರಜಾ—ಭೀಮಾನದಿಗಳ ಸಂಗಮದಲ್ಲಿರುವ ತಮ್ಮ ಸ್ಥಾನಕ್ಕೆ ಕರಕೊಂಡು ಹೋಗಿ ॥ ೧೮ ॥
ಅಲ್ಲಿ ಕಲ್ಪವೃಕ್ಷದಂತೆ ಇದ್ದ ಅಶ್ವತ್ಥದ ಬುಡದಲ್ಲಿ ಜ್ಞಾನ ಮಾರ್ಗವನ್ನು ತೋರಿಸುವ ಒಂದು ಆಶ್ರಮವಿತ್ತು, ಅಲ್ಲಿ
ಆ ಸಿದ್ಧರು ಜ್ಞಾನಪ್ರಕಾಶರಾಗಿ ಕುಳಿತು— ಎಲೈ ಶಿಷ್ಯನಾದ ನಾಮಧಾರಕನೇ ಕೇಳು. ॥ ೧೯ ॥ ಗುರು
ಸೇವೆಯ ದಾರಿಯು ನಿನಗೆ ತಿಳಿದಿಲ್ಲ. ಆದ್ದರಿಂದ ನಿನಗೆ ಚಿಂತೆ ಮತ್ತು ಕ್ಲೇಶಗಳು ಉಂಟಾಗುವವಲ್ಲದೆ
ಬೇರೆ ಅನೇಕ ಬಾಧೆಗಳೂ ಆಗುವವು. ॥ ೨೦ ॥ ಗುರುವಿನ ಸ್ವರೂಪವು ತಿಳಿಯಬೇಕಾದರೆ ಯಾವ
ಆಚಾರದಿಂದ ಇರಬೇಕೆಂಬದನ್ನು ಹೇಳುವೆನು ಕೇಳು. ಮನಸಿನಲ್ಲಿ ದೃಢ ಭಕ್ತಿಯುಳ್ಳಂಥ ಜನರಿಗೆ ಮಾತ್ರ
ಗುರುಗಳ ಸ್ವರೂಪವು ತಿಳಿಯುವದು ಎಂದರು. ॥ ೨೧ ॥ ಈ ಪ್ರಕಾರವಾದ ಸಿದ್ಧರ ವಚನವನ್ನು ಕೇಳಿ
ನಾಮಧಾರಕನು ಭಕ್ತಿ ಸಂತೋಷಗಳಿಂದ ಪುನಃ ಪುನಃ ಅವರಿಗೆ ನಮಸ್ಕರಿಸುತ್ತ ಕರುಣಾ ಸ್ವರದಿಂದ— ॥ ೨೨ ॥
ಸ್ವಾಮೀ, ನಾನು ತಾಪತ್ರಯಾಗ್ನಿಯಲ್ಲಿ ಬೆಂದು, ಸಂಸಾರಸಾಗರದಲ್ಲಿ ಮುಳುಗಿ ಅಜ್ಞಾನವೆಂಬ ಜಾಲದಲ್ಲಿ ಸಿಕ್ಕು,
ಕ್ರೋಧಾದಿ ಜಲಚರಗಳಿಂದ ಗಟ್ಟಿಯಾಗಿ ಸುತ್ತುಗಟ್ಟಲ್ಪಟ್ಟಿದ್ದೇನೆ. ॥ ೨೩ ॥ ಆದ್ದರಿಂದ ಸ್ವಾಮೀ, ತಾವು
ನನ್ನನ್ನು ಜ್ಞಾನವೆಂಬ ನಾವೆಯಲ್ಲಿ ಕೂಡ್ರಿಸಿ, ಕೃಪಾ ಎಂಬ ವಾಯುವನ್ನು ಬೀಸಿ, ನನ್ನ ದೇಹವನ್ನು ಪವಿತ್ರ
ಮಾಡಿ, ಈ ಸಂಸಾರಸಾಗರದಿಂದ ಉದ್ಧರಿಸಬೇಕು ಎಂದನು ॥ ೨೪ ॥ ಈ ಪ್ರಕಾರ ನಾಮಧಾರಕನು
ವಿನಂತೀ ಮಾಡಿಕೊಂಡು ಪ್ರೇಮದಿಂದ ಮೇಲೆ ಆ ಸಿದ್ಧರ ಚರಣಗಳಮೇಲೆ ತಲೆ ಇಟ್ಟು ವಂದಿಸುತ್ತಿದ್ದನು ॥ ೨೫ ॥
ಆಗ ಸಿದ್ಧರು— ಎಲೈ ಶಿಷ್ಯನೇ, ನೀನು ಮನಸಿನಲ್ಲಿ ಏನೂ ಚಿಂತೆ ಮಾಡಬೇಡ ಏಳು, ಎಂದು ಅಭಯಕೊಟ್ಟು
ಅವನನ್ನು ಎಬ್ಬಿಸಿ— ಈಗ ನಾನು ನಿನ್ನ ಸಂಕಟವನ್ನು ಪರಿಹಾರ ಮಾಡುವೆನು. ॥ ೨೬ ॥ ಅನೇಕ ಜನರು
ಮನಸಿನಲ್ಲಿ ದೃಢ ಭಕ್ತಿಯಿಲ್ಲದೆ ಸದಾ ದೀನತನದಿಂದ ಕಷ್ಟಬಡುತ್ತ ಅವಿದ್ಯಾ ಮಾಯೆಯಲ್ಲಿ ಸಿಕ್ಕು, ಮನಸಿನಲ್ಲಿ
ಸಂಶಯ ಇಟ್ಟುಕೊಂಡು, ಡಂಭಾಚಾರದಿಂದ ಗುರುಸೇವೆ ಮಾಡುತ್ತ ಬೇಸತ್ತು ಗುರುವು ನಮಗೇನು ಕೊಡು
ವನು ? ಎಂದು ಗುರುವಿನ ಮೇಲೆ ಆರೋಪ ಹೊರಿಸುತ್ತ ನಾನಾತರದ ಕಷ್ಟಗಳನ್ನು ಅನುಭವಿಸುವರು. ॥ ೨೭ ॥

ಎಲೈ ನಾಮಧಾರಕಾ ಅದರಂತೆ ನೀನು ಮನಸಿನಲ್ಲಿ ಸಂಶಯನ್ನಿಟ್ಟುಕೊಂಡು, ಗುರುವು ನಮಗೇನು ಕೊಡುತ್ತಾನೆಂದು ಅನ್ನುತ್ತೀ, ಆದ್ದರಿಂದ ನೀನು ಈ ಭೋಗವನ್ನು ಭೋಗಿಸುತ್ತ ನಾನಾ ಕಷ್ಟಗಳಿಗೆ ಗುರಿಯಾಗಿರುವಿ. ॥ ೨೮ ॥ ಆದ್ದರಿಂದ ಈಗ ನೀನು ಮನಸಿನ ಸಂಶಯ ಬಿಟ್ಟು ನಿಶ್ಚಲ ಭಕ್ತಿಯಿಂದ ಸೇವಿಸು, ಅಂದರೆ ಕೃಪಾಸಾಗರ ಗುರುಗಳು ನಿನ್ನನ್ನು ಎಂದೂ ಉಪೇಕ್ಷಿಸದೆ ಸದಾ ನಿನಗೆ ಅಪಾರ ಸುಖವನ್ನು ಕೊಡುವರು. ॥ ೨೯ ॥ ಶ್ರೀ ಗುರುಗಳು ಕೃಪಾಸಾಗರರಿದ್ದಾರೆಂದು ವೇದ ಶಾಸ್ತ್ರಗಳು ಪ್ರಸಿದ್ಧವಾಗಿ ಹೇಳುವವು ಆದ್ದರಿಂದ ನೀನು ಮನಸಿನಲ್ಲಿ ದೃಢಭಕ್ತಿಯನ್ನಿಟ್ಟುಕೊಂಡು, ಗುರುಚರಣಗಳಲ್ಲಿ ಸಂಪೂರ್ಣ ಮನಸ್ಸನ್ನಿಡು ಅಂದರೆ ಅವರು ನಿನ್ನ ಸಂಶಯವನ್ನು ಪರಿಹರಿಸುವರು. ॥ ೩೦ ॥ ಮೇಘರಾಜನ ಗುಣವನ್ನು ನೋಡು, ಅವನು ಇದು ಹೆಚ್ಚು ಇದು ಕಡಿಮೆ ಎನ್ನದೆ ಎಲ್ಲ ಭೂಮಿಯಮೇಲೆ ಸಹಜ ಒಂದೇ ರೀತಿಯಾಗಿ ಮಳೆಯನ್ನು ಕೊಡುತ್ತಾನೆ. ಅದರಂತೆ ಗುರುಗಳು ಕೃಪಾಸಾಗರರಿರುತ್ತಾರೆ. ಆದರಲ್ಲಿಯೂ ಪಾತ್ರಾನುಸಾರ ಕೃಪೆಯನ್ನು ಮಾಡುವರು. ಅದಕ್ಕೆ ನಿನಗೊಂದು ದೃಷ್ಟಾಂತವನ್ನು ಹೇಳುವೆನು ಕೇಳು. ॥ ೩೧ ॥ ಮೇಘರಾಜನು ಒಂದೇಸವನೆ ಮಳೆಯನ್ನು ಸುರಿಸಿದರೂ ಎತ್ತರವಾದ ಸ್ಥಳದಲ್ಲಿ ಹೆಚ್ಚು ನೀರು ನಿಲ್ಲುವದಿಲ್ಲ, ತಗ್ಗಾದ ಸ್ಥಳದಲ್ಲಿ ಹೆಚ್ಚು ನೀರು ನಿಲ್ಲುತ್ತದೆ. ॥ ೩೨ ॥ ಇದಕ್ಕೆ ಸಾಕ್ಷಿ ಏನಂದರೆ ದೃಢಭಕ್ತಿ ಇದ್ದವರೇ ತಗ್ಗು ಭೂಮಿ ಇದ್ದಂತೆ, ದಾಂಭಿಕರೇ ಎತ್ತರ ಭೂಮಿ ಇದ್ದಂತೆ ಎಂದು ತಿಳಿ. ಆದ್ದರಿಂದ ಎಲೈ ನಾಮಧಾರಕಾ, ನೀನು ಶುದ್ಧಾಚರಣೆಯಿಂದಲೂ ದೃಢಭಕ್ತಿಯಿಂದಲೂ ನಿನ್ನ ಮನಸಿನಲ್ಲಿ ಗುರುವನ್ನು ನಿಶ್ಚಯ ಮಾಡಿಕೋ ಅಂದರೆ ಗುರುಚರಣದಲ್ಲಿ ನಿಶ್ಚಲವಾದ ಮನಸ್ಸನ್ನಿಡು. ॥ ೩೩ ॥ ಗುರುಮಹಿಮೆಗೆ ಸರಿಯಾದ ಯಾವ ಉಪಮೆ ಅದೆ? ಎಂದು ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟು— ಪ್ರಪಂಚವೇ ಪರಬ್ರಹ್ಮವೆಂದು ತಿಳಿ. ॥ ೩೪ ॥ ಮತ್ತೆ ಕೇಳು, ಗುರುವಿಗೆ ಕಲ್ಪವೃಕ್ಷದ ಉಪಮಾ ಕೊಟ್ಟರೆ, ಕಲ್ಪಿಸಿದ್ದನ್ನು ಕೊಡುವದು ಆ ಕಲ್ಪವೃಕ್ಷದ ಧರ್ಮವಾಗಿರುವದು, ಆದರೆ ಗುರು ಕಾಮಧೇನವು ನಾವು ಕಲ್ಪಿಸದೆ ಇದ್ದರೂ ನಮ್ಮ ಮನಸ್ಸಿನೊಳಗಿನ ಇಚ್ಛೆಯನ್ನು ತಾನೇ ತಿಳಿದು ಪೂರ್ಣ ಮಾಡುವನು. ಮತ್ತು ಶ್ರೀ ಗುರು

ಗಳು ತಮ್ಮ ನಿಜ ಭಕ್ತರ ಮನಸ್ಸಿನ ಇಚ್ಛೆಯನ್ನು ಪೂರ್ಣ ಮಾಡುವರು ಇದರಲ್ಲಿ ಏನೂ ಸಂಶಯವಿಲ್ಲ. ॥ ೩೫ ॥ ಈ ಪ್ರಕಾರವಾಗಿರುವ ಗುರುವು ಪರಬ್ರಹ್ಮನೇ ಇರುವನೆಂದು ಶ್ರುತಿ ಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವದು ಆದ್ದರಿಂದ ನಾಮಧಾರಕನೇ ನೀನು ಸಂಶಯವನ್ನು ಬಿಟ್ಟು ಶ್ರೀ ಗುರುಗಳ ಪಾದ ಕಮಲಗಳನ್ನು ಏಕಚಿತ್ತದಿಂದ ಧ್ಯಾನಿಸು ಎಂದು ಹೇಳಿದರು ॥ ೩೬ ॥ ಇಷ್ಟೆಲ್ಲವನ್ನು ಕೇಳಿ ನಾಮಧಾರಕನು ಕೂಡಲೆ ಕೈಮುಗಿದು ವಿನಯದಿಂದ ಅವರಿಗೆ ನಮಿಸಿ ॥ ೩೭ ॥ ಸ್ವಾಮೀ, ಶ್ರೀ ಸಿದ್ಧಯೋಗೀಶ್ವರನೇ ಕಾಮಧೇನು ಸ್ವರೂಪನೇ, ಕೃಪಾಸಾಗರನೇ ನಾನು ನಿಮ್ಮ ಸೇವಕನು ನನ್ನ ವಿನಂತಿಯನ್ನು ಕೇಳಿರಿ ॥ ೩೮ ॥ ತಾವು ಇಷ್ಟು ಹೊತ್ತಿನವರೆಗೆ ಹೇಳಿದ್ದನ್ನು ಕೇಳಿ ನನ್ನ ಮನಸ್ಸು ನಿರ್ಮಲವಾಗಿ ತಮ್ಮ ಮುಖದಿಂದ ಶ್ರೀ ಗುರುಚರಿತ್ರೆಯನ್ನು ಸಂಪೂರ್ಣವಾಗಿ ಕೇಳಬೇಕೆಂದು ನನಗೆ ಅತ್ಯಂತ ಉತ್ಕಂಠವಾಗಿದೆ ॥ ೩೯ ॥ ಸ್ವಾಮೀ ಶ್ರೀ ಗುರುಗಳು ತ್ರೈಮೂರ್ತಿ ಸ್ವರೂಪರೆಂದು ಕೇಳಿರುವೆನು. ಹಾಗಾದರೆ ಅವರು ಮನುಷ್ಯರಾಗಿ ಯಾಕೆ ಅವತರಿಸಿದರು ? ಎಂಬ ಸರ್ವ ಸಂಗತಿಯನ್ನು ನನಗೆ ವಿಸ್ತಾರವಾಗಿ ಹೇಳಬೇಕೆಂದು ವಿನಯದಿಂದ ಅವರ ಚರಣಕ್ಕೆ ನಮಸ್ಕರಿಸಿದನು. ॥ ೪೦ ॥ ಆಗ ಸಿದ್ಧರು— ಎಲೈ ಶಿಷ್ಯನೇ ನೀನು ನನ್ನ ಬೋಧವೆಂಬ ಸಮುದ್ರಕ್ಕೆ ಪೂರ್ಣ ಚಂದ್ರನಂತೆ ನನ್ನನ್ನು ಉತ್ಸಾಹವುಳ್ಳವನನ್ನಾಗಿ ಮಾಡಿ, ॥ ೪೧ ॥ ನೀನು ಸರ್ವ ಸುಖವನ್ನು ಹೊಂದಿದಿ ಗುರುಸೇವೆಯು ನಿನಗೆ ಫಲಿಸಿತು. ಇವತ್ತಿನಿಂದ ನೀನು ಬ್ರಹ್ಮಜ್ಞಾನವನ್ನು ಅನುಭವಿಸಿದಿ. ॥ ೪೧-೪೨ ॥ ನಾನು ಇವತ್ತಿನವರೆಗೆ ಯಾವತ್ತು ಭೂಮಿಯನ್ನು ಸಂಚಾರ ಮಾಡುತ್ತ ಬಂದರೂ ಗುರುಚರಿತ್ರೆಯನ್ನು ಕೇಳಬೇಕೆಂಬ ಇಚ್ಛೆ ಇದ್ದವರನ್ನು ಕಾಣಲಿಲ್ಲ ಇವತ್ತಿನ ದಿವಸ ನಾನು ನಿನ್ನೊಬ್ಬನನ್ನು ಮಾತ್ರ ನೋಡಿದೆ. ॥ ೪೩ ॥ ಯಾರಿಗೆ ಇಹಪರಗಳಲ್ಲಿ ಸುಖವಾಗಬೇಕೆಂಬ ಆಶೆ ಇರುವದೋ ಅವರಿಗೆ ಗುರುಚರಿತ್ರೆಯು ರುಚಿಸುವದು ಆದ್ದರಿಂದ ನೀನು ತ್ರಿಕರಣಗಳನ್ನು ದೃಢ ಮಾಡಿಕೊಂಡು ಏಕಚಿತ್ತದಿಂದ ಗುರುಚರಿತ್ರೆಯನ್ನು ಕೇಳು. ॥ ೪೪ ॥ ಎಲೈ ನಾಮಧಾರಕಾ, ನೀನು ಕೇವಲ ಗುರುಭಕ್ತನಾದ್ದರಿಂದ ನಿನಗೆ ಗುರುವಿನಲ್ಲಿ ಉತ್ತಮ ಭಕ್ತಿಯುಂಟಾಗಿದೆ ನಿಶ್ಚಯವಾಗಿ ನೀನು ನನ್ನ ಮಾತಿನಲ್ಲಿ

ವಿಶ್ವಾಸವಿಟ್ಟು ಶ್ರೀ ಗುರುಚರಿತ್ರೆಯನ್ನು ಕೇಳಿದರೆ ನಾಲ್ಕು ಪುರುಷಾರ್ಥಗಳನ್ನೂ ॥ ೪೫ ॥ ಧನ-ಧಾನ್ಯಾದಿ ಸಂಪತ್ತಿಯನ್ನೂ, ಪುತ್ರ-ಪೌತ್ರರನ್ನೂ, ಶ್ರುತಿ-ಸ್ಮೃತಿಗಳ ಜ್ಞಾನವನ್ನೂ, ಅನೇಕ ದಿವಸಗಳವರೆಗೆ ಇಹ ಸೌಖ್ಯ ವನ್ನೂ ಹೊಂದಿ, ಅಂತ್ಯದಲ್ಲಿ ಉತ್ತಮ ಗತಿಯನ್ನು ಪಡೆಯುವಿ ಎಂದು ತಿಳಿ. ॥ ೪೬ ॥ ಈ ಗುರುಚರಿತ್ರೆಯು ಕಾಮಧೇನು ಸ್ವರೂಪವೆಂದು ವೇದ ಶಾಸ್ತ್ರಗಳು ಹೇಳುತ್ತವೆ ತ್ರೈಮೂರ್ತಿಗಳೇ ಈ ಕಲಿಯುಗದಲ್ಲಿ "ನರ ಸಿಂಹ ಸರಸ್ವತಿ" ಎಂಬ ಹೆಸರಿನಿಂದ ನರಜನ್ಮವನ್ನು ಹೊಂದಿದ್ದಾರೆ ॥ ೪೭ ॥ ಭೂ ಭಾರವನ್ನಿಳಿಸಿ ಭಕ್ತರನ್ನು ಉದ್ಧಾರಮಾಡುವ ಕಾರ್ಯದ ಸಲುವಾಗಿ, ಹರಿ-ಹರರು ಕಾಲಕಾಲಕ್ಕೆ ಈ ಪ್ರಕಾರ ಅವತಾರ ತಕ್ಕೊಳ್ಳುತ್ತಾರೆ ಎಂದು ಹೇಳಿದರು ॥ ೪೮ ॥ ಅವರ ಮಾತು ಕೇಳಿ ನಾಮಧಾರಕನು— ಸ್ವಾಮೀ ಸಿದ್ಧಮುನಿಗಳೇ, ತ್ರೈಮೂರ್ತಿಗಳು ಯಾವ ಕಾರಣದಿಂದ ಮನುಷ್ಯಾವತಾರ ತಕ್ಕೊಳ್ಳುತ್ತಾರೆ? ॥ ೪೯ ॥ ಎಂಬುದನ್ನು ತಾವು ನನ್ನ ಮೇಲೆ ಕೃಪಾ ಮಾಡಿ ವಿಸ್ತಾರವಾಗಿ ಹೇಳಬೇಕೆಂದು ಕರುಣಾ ವಚನದಿಂದ ವಿನಂತೀ ಮಾಡಿಕೊಂಡು ಅವರ ಚರಣಕ್ಕೆ ನಮಸ್ಕರಿಸಿದನು ॥ ೪೯-೫೦ ॥ ಆಗ ಸಿದ್ಧರು— ಎಲೈ ನಾಮಧಾರಕನೇ ಮೂಲ ಪರಮಾತ್ಮನು ಒಬ್ಬನೇ ಇರುವನು ಅವನ ಸತ್ವ-ರಜ-ತಮಗಳೆಂಬ ಮೂರು ಗುಣಗಳಿಂದಲೇ ಬ್ರಹ್ಮ-ವಿಷ್ಣು-ಮಹೇಶ್ವರರೆಂದು ತ್ರಿಮೂರ್ತಿಗಳಾಗಿರುವರು. ಈ ಪ್ರಪಂಚದಲ್ಲಿರುವ ಯಾವತ್ತು ವಸ್ತುಗಳು ಸಹ ಮೂರು ಗುಣವುಳ್ಳವಾಗಿರು ವವು. ॥ ೫೧ ॥ ಬ್ರಹ್ಮನು ರಜೋಗುಣದವನು ವಿಷ್ಣುವು ಸತ್ವಗುಣದವನು ಉಮಾರಮಣನಾದ ಶ್ರೀ ಶಂಕರನು ತಮೋಗುಣದವನು ಮೂಲ ಮೂರ್ತಿಯು ಒಂದೇ ॥ ೫೨ ॥ ಬ್ರಹ್ಮನು ಸೃಷ್ಟಿಯನ್ನುಂಟುಮಾಡುವನು. ವಿಷ್ಣುವು ಅದನ್ನು ರಕ್ಷಿಸುವನು ಶಂಕರನು ಪಾಪವು ಹೆಚ್ಚಾದಂಥ ಸೃಷ್ಟಿಯನ್ನು ನಾಶ ಮಾಡುವನು. ಇವು ತ್ರಿಮೂರ್ತಿಗಳ ಗುಣಗಳಿರುತ್ತವೆ. ॥ ೫೩ ॥ ಆ ತ್ರಿಮೂರ್ತಿಗಳು ಒಬ್ಬರನ್ನು ಬಿಟ್ಟು ಒಬ್ಬರಿರುವದಿಲ್ಲ. ಅವರು ಏನಾದರೊಂದು ಕಾರಣದಿಂದ ಭೂಮಿಯಲ್ಲಿ ಅವತಾರ ಮಾಡಿ ಭೂ ಭಾರವನ್ನು ಹರಣ ಮಾಡುತ್ತಾರೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ॥ ೫೪ ॥ ಆ ಬಗ್ಗೆ ಈಗ ನಿನಗೊಂದು ದೃಷ್ಟಾಂತವನ್ನು ಹೇಳುತ್ತೇನೆ ಕೇಳು.

ಪೂರ್ವದಲ್ಲಿ ಏಕಾದಶೀ ವ್ರತವನ್ನು ಶಾಸ್ತ್ರ ರೀತಿಯಿಂದ ಮಾಡುವವರಲ್ಲಿ ಪ್ರಸಿದ್ಧನಾದ ಅಂಬರೀಷ ಮಹಾರಾಜನ ನಿಮಿತ್ತವಾಗಿ ವಿಷ್ಣುವಿನಿಂದ ೧೦ ಅವತಾರಗಳನ್ನು ಮಾಡಿಸಿದನು. ॥ ೫೫ ॥ ಆ ಅವತಾರವಾದ ಕಾರಣವನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಶಾಂತ ಮನಸ್ಸಿನಿಂದಲೂ ಏಕಚಿತ್ತದಿಂದಲೂ ಕೇಳು. ॥ ೫೬ ॥ ಆ ಅಂಬರೀಷ ರಾಜನು ಈ ಪ್ರಕಾರ ನಿಶ್ಚಯದ ಮನಸ್ಸಿನಿಂದ ಏಕಾದಶೀ ವ್ರತವನ್ನು ಮಾಡುತ್ತ, ಅತಿಥಿ ಅಭ್ಯಾಗತರನ್ನು ಪೂಜಿಸುತ್ತ ದೃಢ ಮನಸ್ಸಿನಿಂದ ಸರ್ವಕಾಲದಲ್ಲಿ ಹರಿ ಚಿಂತನ ಮಾಡುತ್ತ ಇರುತ್ತಿದ್ದನು. ॥ ೫೭ ॥ ಹೀಗ ಅವನು ಅನೇಕ ದಿವಸಗಳವರೆಗೆ ವ್ರತ ಮಾಡುತ್ತಿರಲು ಒಂದು ದಿವಸ ಅವನ ವ್ರತ ಭಂಗಮಾಡಬೇಕೆಂಬ ಹಟದಿಂದ ದೂರ್ವಾಸ ಮುನಿಯು ಅತಿಥಿಯಾಗಿ ದ್ವಾದಶೀ ದಿನ ಅವನ ಮನೆಗೆ ಬಂದನು. ॥೫೮॥ ಆ ದಿವಸ ಒಂದು ಘಳಿಗೆಯು ಸಾಧನ ದ್ವಾದಶಿ ಇತ್ತು. ಆಗ ದೂರ್ವಾಸನು ದೂರದಿಂದ ಬರುವದನ್ನು ಅಂಬರೀಷನು ನೋಡಿ ಮನಸ್ಸಿನಲ್ಲಿ— ಈ ದೂರ್ವಾಸನು ಬುದ್ಧಿಪೂರ್ವಕವಾಗಿ ನನ್ನ ವ್ರತ ಕೆಡಿಸಬೇಕೆಂದು ಅತಿಥಿಯಾಗಿ ಬಂದನೆಂದು ತಿಳಿದು ಹೆದರಿ— ಈ ದಿನ ಪಾರಣೆಗೆ, ಯಾವ ರೀತಿ ವಿಘ್ನ ಒದಗುವದೋ ಏನೋ ಎಂದು ಚಿಂತಿಸುತ್ತ ॥ ೫೯ ॥ ಋಷಿಯು ಬರುವದನ್ನು ನೋಡಿ ಎದ್ದು ಎದುರಿಗೆ ಹೋಗಿ ಸಾ। ನ। ಮಾಡಿ ಮನೆಯೊಳಗೆ ಕರಕೊಂಡು ಬಂದು ಯೋಗ್ಯ ಆಸನದಲ್ಲಿ ಕೂಡ್ರಿಸಿ, ಅರ್ಘ್ಯಪಾದ್ಯಾದಿ ಷೋಡಶೋಪಚಾರಗಳಿಂದ ಪೂಜಿಸಿ ॥ ೬೦ ॥ ವಿನಯದಿಂದ— ಸ್ವಾಮೀ ದೂರ್ವಾಸ ಮುನಿಗಳೇ ಈ ದಿನ ಒಂದು ಘಳಿಗೆಯು ಸಾಧನ ದ್ವಾದಶಿ ಇರುವದು. ಕಾರಣ ತಾವು ತೀವ್ರ ನದಿಗೆ ಹೋಗಿ ಸ್ನಾನಾದಿ ನಿತ್ಯ ಕರ್ಮಾನುಷ್ಠಾನಗಳನ್ನು ತೀರಿಸಿಕೊಂಡು ತೀವ್ರ ದಯಮಾಡಿಸಬೇಕೆಂದು ಬೇಡಿಕೊಂಡನು. ॥ ೬೧ ॥ ಆಗ ದೂರ್ವಾಸನು ನದಿಗೆ ಹೋಗಿ ವಿಧಿ ಪ್ರಕಾರ ಅನುಷ್ಠಾನ ಮಾಡುತ್ತಿರುವಾಗ ತಡವಾಗಲು ಸಾಧನ ದ್ವಾದಶಿಯು ಒಂದು ಘಳಿಗೆಯ ಅವಧಿಯು ಮುಗಿಯುತ್ತ ಬಂತು ॥ ೬೨ ॥ ಆಗ ಅಂಬರೀಷನು ಮನಸ್ಸಿನಲ್ಲಿ— ಋಷಿಯು ಇನ್ನೂ ಬರಲಿಲ್ಲ. ನನ್ನ ವ್ರತಭಂಗವಾಗುವದು, ಎಂದು ತೀರ್ಥವನ್ನು ತಕ್ಕೊಂಡು ಪಾರಣೆಯನ್ನು ಮಾಡಿ, ಋಷಿಯ ಸಲುವಾಗಿ ವಿವಿಧ ಪಕ್ವಾನ್ನಗಳನ್ನು ಮಾಡಿ ಸಿದ್ಧಪಡಿಸಿದನು. ॥ ೬೩ ॥

ಅಷ್ಟರಲ್ಲಿ ತ್ರಿಕಾಲ ಜ್ಞಾನಿಯಾದ ದೂರ್ವಾಸನು ಬಂದು ಅಂಬರೀಷನ ಮುಖವನ್ನು ನೋಡಿ— ಎಲೈ ದುರಾತ್ಮನೇ ಅತಿಥಿಯನ್ನು ಬಿಟ್ಟು ಯಾಕೆ ಊಟ ಮಾಡಿದೆ ? ॥ ೧೪ ॥ ನಿನಗೆ ಶಾಪ ಕೊಡುತ್ತೇನೆ ನೋಡು ಎಂದು ಹೇಳಿದನು. ಆಗ ಅಂಬರೀಷನು ಕೂಡಲೆ ಶ್ರೀ ಹರಿಯನ್ನು ನೆನಿಸಿ— ಎಲೈ ಭಕ್ತವತ್ಸಲನಾದ ನಾರಾಯಣನೇ ನೀನು ಶರಣಾಗತರ ರಕ್ಷಕನೆಂಬ ಬಿರುದುಳ್ಳವನೆಂದು ಪುರಾಣಗಳು ಸಾರುತ್ತವೆ. ಈಗ ನೀನು ಕರುವಿನ ಸಲುವಾಗಿ ಆಕಳು ಓಡಿ ಬರುವಂತೆ ತೀವ್ರವಾಗಿ ಬಂದು ನನ್ನನ್ನು ಸಲಹು ' ಎಂದು ಪ್ರಾರ್ಥಿಸಿದನು. ॥ ೧೫-೧೬ ॥ ಇತ್ತ ಆ ಋಷಿಯು ಅಂಬರೀಷನನ್ನು ಕುರಿತು— ಎಲೈ ಅಂಬರೀಷನೇ, ನೀನು ಅಖಿಲ ಯೋನಿಗಳಲ್ಲಿ ಜನ್ಮವನ್ನು ಹೊಂದು ಎಂದು ಶಾಪವನ್ನು ಕೊಡುವಷ್ಟರಲ್ಲಿಯೇ ವಿಷ್ಣುವು ಭಕ್ತನನ್ನೇ ರಕ್ಷಿಸುವದಕ್ಕೋಸ್ಕರ ಕೂಡಲೆ ವೈಕುಂಠದಿಂದ ಅಲ್ಲಿಗೆ ಬಂದು ಅಂಬರೀಷನ ಹತ್ತರ ನಿಂತನು ॥ ೧೭ ॥ ಆಗ ಅಂಬರೀಷನು ವಿಷ್ಣುವನ್ನು ಕುರಿತು— ದೇವಾ, ಈ ಮುನಿಯ ವಚನವು ಎಂದೂ ಸುಳ್ಳಾಗುವದಿಲ್ಲ. ಭಕ್ತವತ್ಸಲನೆಂಬ ಬಿರುದುಳ್ಳ ನೀನು ನನ್ನನ್ನು ರಕ್ಷಿಸು ಎಂದು ಅವನ ಚರಣಕ್ಕೆರಗಿದನು. ॥ ೧೮ ॥ ಆಗ ಶ್ರೀ ಹರಿಯು ದೂರ್ವಾಸನನ್ನು ಕುರಿತು— ಎಲೈ ಮುನಿಯೇ ನೀನು ಈ ಅಂಬರೀಷನಿಗೆ ಶಾಪವನ್ನು ಕೊಟ್ಟೆ, ಆದರೆ ಇವನು ನನ್ನ ಕೇವಲ ಭಕ್ತನಾದ್ದರಿಂದ ನಾನು ಇವನನ್ನು ರಕ್ಷಿಸುವೆನು. ಇವನಿಗೆ ಕೊಟ್ಟ ಶಾಪವನ್ನು ನನಗೆ ಕೊಡು ಎಂದನು. ॥ ೧೯ ॥ ಆಗ ಕೇವಲ ಈಶ್ವರನ ಅವತಾರಿಯೂ ಶ್ರೇಷ್ಠ ಜ್ಞಾನಿಯೂ ಆದ ಆ ಮುನಿಯು ಮನಸ್ಸಿನಲ್ಲಿ ಮುಂದೆ ಈ ವಿಷ್ಣುವು ಭೂ ಭಾರ ಹರಣ ಮಾಡಲಿಕ್ಕೆ ಈ ಶಾಪವು ಕಾರಣವಾಗಿರುತ್ತದೆ ॥ ೨೦ ॥ ಈ ಭೂಮಿಯಲ್ಲಿ ಹುಟ್ಟಿ ಯುಗಗಟ್ಲೆ ತಪಸ್ಸು ಮಾಡಿದ ಜನರಿಗೆ ಹರಿ ಪಾದ ದರ್ಶನವು ದುರ್ಲಭವಾಗಿದೆ. ॥ ೨೧ ॥ ಈ ವಿಷ್ಣುವು ನನ್ನ ಶಾಪದಿಂದ ಭೂ ಭಾರವನ್ನಿಳಿಸಿ ಸಮಸ್ತ ಭಕ್ತರನ್ನು ಉದ್ಧರಿಸುವದಕ್ಕಾಗಿ ಮುಂದೆ ಲಕ್ಷ್ಮೀಸಹಿತ ಈ ಭೂಮಿಯಲ್ಲಿ ಹುಟ್ಟಬೇಕಾಗಿದೆ. ॥ ೨೨ ॥ ಪರೋಪಕಾರಕ್ಕಾಗಿ ಈ ವಿಷ್ಣುವಿಗೆ ಭೂ ಭಾರ ಹರಣ ಮಾಡುವ ಕಾರಣವಿದ್ದದರಿಂದ ಶಾಪವನ್ನು ಕೊಡಬೇಕು. ॥ ೨೩ ॥ ಎಂದು ದೂರ್ವಾಸನು ಮನಸ್ಸಿನಲ್ಲಿ ಆಲೋಚಿಸಿ— ಎಲೈ

ವಿಷ್ಣುವೇ ನೀನು ಭೂಮಿಯಲ್ಲಿ ಅವತಾರಿಸಿ ನಾನಾಕಡೆಗಳಲ್ಲಿ ಹುಟ್ಟಬೇಕು. ॥ ೭೪ ॥ ನಿನ್ನ ಹತ್ತು ಅವತಾರಗಳು ಪ್ರಸಿದ್ಧವಾಗುತ್ತವೆ ಉಳಿದ ಅವತಾರಗಳು ಪೂರ್ಣ-ಬ್ರಹ್ಮರೂಪವಾಗಿರುವವು. ನೀನು ಸ್ವತಃ ಸಹಜವಾಗಿ ವಿಶ್ವಾತ್ಮನಿದ್ದು, ಸ್ಥೂಲ-ಸೂಕ್ಷ್ಮಗಳಲ್ಲಿ ವಾಸಿಸುತ್ತೀ ಎಂದನು. ॥ ೭೫ ॥ ಎಲೈ ನಾಮಧಾರಕಾ ಈ ಪ್ರಕಾರ ಕಾರ್ಯಾಕಾರಣದ್ದೆಶೆಯಿಂದ ಜಗತ್ತಿನ ತಂದೆಯಾದ ಶ್ರೀ ವಿಷ್ಣುವು ದೂರ್ವಾಸನ ಶಾಪವನ್ನು ಸ್ವೀಕರಿಸಿ ದುಷ್ಟರನ್ನು ಶಿಕ್ಷಿಸಿ, ಶಿಷ್ಟರನ್ನು ಪಾಲಿಸುವದಕ್ಕಾಗಿ ಹತ್ತು ಅವತಾರಗಳನ್ನು ತಕ್ಕೊಂಡನು ॥ ೭೬ ॥ ಅನಂತರೂಪೀ ನಾರಾಯಣನ ಹತ್ತು ಅವತಾರಗಳಾದವು ಇದನ್ನು ನೀನು ಭಾಗವತ ಪುರಾಣದಲ್ಲಿ ವಿಸ್ತಾರವಾಗಿ ಕೇಳಿರುವಿ. ॥೭೭॥ ಈ ಪ್ರಕಾರ ಕಾರ್ಯಾಕಾರಣದ್ದೆಶೆಯಿಂದ ಕೆಲವುಸಾರೆ ಪ್ರಕಟವಾಗಿಯೂ ಕೆಲವುಸಾರೆ ಗುಪ್ತವಾಗಿಯೂ ಅವತಾರಗಳನ್ನು ತಕ್ಕೊಳ್ಳುತ್ತಾನೆ. ಬ್ರಹ್ಮ-ಜ್ಞಾನಿಗಳಿಗೆ ಮಾತ್ರ ಪರಮಾತ್ಮನ ಈ ಅವತಾರಗಳು ತಿಳಿಯುವದು. ಮೂಢರಿಗೆ ಏನು ತಿಳಿಯುವದು ? ॥ ೭೮ ॥ ಎಲೈ ನಾಮಧಾರಕಾ ನಿನಗೆ ಸಹಜವಾಗಿ ವಿನೋದದಿಂದ ಆದಂಥ ಮತ್ತೊಂದು ಕಥೆಯನ್ನು ಹೇಳುವೆನು ಅತ್ರಿಮುನಿಯ ಪತ್ನಿಯೂ ಮಹಾ ಪತಿವ್ರತಾ ಶಿರೋಮಣಿಯೂ ಆದ ಅನಸೂಯಾದೇವಿ ಎಂಬವಳಿದ್ದಳು. ॥ ೭೯ ॥ ಆಕೆಯನ್ನು ಛಲಿಸಲಿಕ್ಕೆ ಆ ತ್ರೈಮೂರ್ತಿಗಳು ಕಪಟ ವೇಷದಿಂದ ಆಕೆಯ ಮನೆಗೆ ಬಂದು ಅಲ್ಲಿ ಆಕೆಯ ಪುತ್ರರಾಗಿ ಜನ್ಮವನ್ನು ಹೊಂದಿದರು ಎಂದರು. ॥ ೭೯-೮೦ ॥ ಆಗ ನಾಮಧಾರಕನು ಸಿದ್ಧರಿಗೆ ಕೈಮುಗಿದು— ಸ್ವಾಮೀ ಮುನಿವರ್ಯರೇ ತ್ರೈಮೂರ್ತಿಗಳು ಅತ್ರಿ ಆಶ್ರಮಕ್ಕೆ ಕಪಟ ವೇಷದಿಂದ ಬಂದು ಅವರ ಪುತ್ರರಾದರೆಂಬ ವಿನೋದದ ಕಥೆಯನ್ನು ಹೇಳಿದಿ. ಆದರೆ ಅವರು ಅತ್ರಿ ಮುನಿಗೆ ಪ್ರಗಟರೂಪದಿಂದ ಹ್ಯಾಗೆ ಪುತ್ರರಾದರು ? ॥ ೮೧ ॥ ಮತ್ತು ಅತ್ರಿಮುನಿಯು ಪೂರ್ವದಲ್ಲಿ ಯಾರು ? ಅವರು ಯಾರಿಂದ ಹುಟ್ಟಿದರು ? ಅವರ ಮೂಲ ಪುರುಷರು ಯಾರು ? ಎಂಬದನ್ನು ನನಗೆ ವಿಸ್ತಾರವಾಗಿ ಹೇಳಬೇಕೆಂದು ಬಿನ್ನವಿಸಿದನು. ॥ ೮೨ ॥ ಇತ್ತ ಸರಸ್ವತೀ ಗಂಗಾಧರನು— ಮುಂದಿನ ಮನೋಹರವಾದ ಗುರು ಚರಿತ್ರೆಯನ್ನು ವಿಸ್ತಾರವಾಗಿ ಕೇಳಿದರೆ ಸಕಲಾಭೀಷ್ಟಗಳು ಸಾಧಿಸುವವು ಎಂದು ಹೇಳಿದನು. ॥ ೮೩ ॥

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಅಂಬರೀಷ ವ್ರತ ನಿರೂಪಣಂ ನಾಮ ತೃತೀಯೋಧ್ಯಾಯಃ ॥ ೩ ॥ ಶ್ರೀಗುರುದತ್ತಾತ್ರೇಯಾರ್ಪಣಮಸ್ತು ॥

— ೩ನೇ ಅಧ್ಯಾಯ ಸಮಾಪ್ತ —

---

# ೪ನೆಯ ಅಧ್ಯಾಯ

## ಅನಸೂಯಾ ಚರಿತ್ರೆ

ಶ್ರೀ ಗಣೇಶಾಯ ನಮಃ। ಶ್ರೀ ಸರಸ್ವತ್ಯೈ ನಮಃ। ಶ್ರೀಗುರುಭ್ಯೋ ನಮಃ। ಆಮೇಲೆ ಸಿದ್ಧರು ಶಿಷ್ಯನಾದ ನಾಮಧಾರಕನ ವಿನಂತಿಯನ್ನು ಕೇಳಿ— ಎಲೈ ನಾಮಧಾರಕನೇ, ನಿನ್ನ ಭಕ್ತಿಯು ಒಳ್ಳೇ ಸಾಧುವಾದದ್ದು! ನೀನು ಇನ್ನು ಗುರುಚರಣದಲ್ಲಿ ಪ್ರೀತಿಯನ್ನು ಹೊಂದು ॥ ೧ ॥ ಎಲೈ ಶಿಷ್ಯಶಿರೋಮಣಿಯೇ ಕೇಳು, ನಿನ್ನ ಮಾತು ಧನ್ಯ! ಧನ್ಯ! ವಾಗಿರುವವು ಮೊದಲಿನಿಂದ ಕಡೆಯತನಕ ನಿನ್ನ ಪ್ರಶ್ನೆಯು ನನಗೆ ತಿಳಿಯಿತು ॥ ೨ ॥ ನೀನು ನಿಶ್ಚಯವಾಗಿ ಬಹಳ ಉತ್ತಮ ಪ್ರಶ್ನೆ ಮಾಡಿದಿ. ನಿನಗೆ ಸೃಷ್ಟಿಯ ಉತ್ಪತ್ತಿಯಿಂದ ಆರಂಭ ಮಾಡಿ ಅತ್ರಿಮುನಿಯ ಪೂರ್ವಾಪರ ವಂಶವನ್ನು ಯಾವತ್ತು ವಿಶದವಾಗಿ ಹೇಳುವೆನು ಕೇಳು. ॥ ೩ ॥ ಪೂರ್ವದಲ್ಲಿ ಏನೂ ಸೃಷ್ಟಿ ಇದ್ದಿಲ್ಲ. ಎಲ್ಲ ಕಡೆಯಲ್ಲಿ ಜಲಮಯವಾಗಿತ್ತು ಆದಕಾರಣ ಅದಕ್ಕೆ ವೇದದಲ್ಲಿ ಆಪೋನಾರಾಯಣವೆಂಬ ಹೆಸರು ಬಂದಿದೆ ॥ ೪ ॥ ಆ ಉದಕರೂಪದಿಂದಿದ್ದ ಆಪೋನಾರಾಯಣನು ಎಲ್ಲ ಕಡೆಯಲ್ಲಿ ಪೂರ್ಣ ವಾಸ ಮಾಡಿದವನಾಗಿ ಪ್ರಪಂಚ ಗುಣದಿಂದ ಕೂಡಿದ ಸೃಷ್ಟಿಯನ್ನು ನಿರ್ಮಿಸಬೇಕೆಂಬ ಬುದ್ಧಿಯನ್ನು ಹೊಂದಿ, ಹಿರಣ್ಯಗರ್ಭವೆಂಬ ತತ್ತ್ವಯನ್ನು ನಿರ್ಮಿಸಿದನು ॥ ೫ ॥ ಅದಕ್ಕೆ ಬ್ರಹ್ಮಾಂಡವೆಂಬ ಹೆಸರು ಬಂತು, ಆಮೇಲೆ ನಾರಾಯಣನು ರಜೋಗುಣದಿಂದ ಬ್ರಹ್ಮನನ್ನು ಹುಟ್ಟಿಸಿದನು. ಅವನಿಗೆ ಹಿರಣ್ಯಗರ್ಭನೆಂಬ ಹೆಸರುಂಟಾಯಿತು ಅಲ್ಲಿಗೆ ದೇವಮಾನದ ಒಂದು ವರ್ಷವಾಯಿತು ॥ ೬ ॥ ಆಮೇಲೆ ಅದೇ ಬ್ರಹ್ಮಾಂಡವು ಒಡೆದು ಒಂದು ಆಕಾಶ, ಒಂದು ಭೂಮಿ ಹೀಗೆ ಎರಡು ಭಾಗಗಳಾದವು. ॥ ೭ ॥ ಅದರಲ್ಲಿ ಬ್ರಹ್ಮನು ಹುಟ್ಟಿಗಳ ಲೋಕ, ದಶದಿಕ್ಕು, ಮನಸ್ಸು, ವಚನ, ಕಾಲ, ಕಾಮ, ಕ್ರೋಧಾದಿಗಳನ್ನು ನಿರ್ಮಿಸಿದನು. ॥ ೮ ॥

+ ದಿಗಂಬರಾ ದಿಗಂಬರಾ +

+ ಶ್ರೀಪಾದವಲ್ಲಭ ದಿಗಂಬರಾ +

ಮುಂದಿನ ಸೃಷ್ಟಿಯನ್ನು ಉತ್ಪನ್ನ ಮಾಡಲಿಕ್ಕೆ ಬ್ರಹ್ಮನು ೭ ಮಂದಿ ಮಾನಸಪುತ್ರರನ್ನು ಹುಟ್ಟಿಸಿದನು. ಅವರ ಹೆಸರುಗಳನ್ನು ಹೇಳುವೆನು ಕೇಳು. ‖ ೯ ‖ ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ವಸಿಷ್ಠ ರೆಂಬ ೭ ಜನ ಶ್ರೇಷ್ಠ ಮಾನಸಪುತ್ರರಾದರು. ಬ್ರಹ್ಮನೇ ಸೃಷ್ಟಿಕರ್ತನಾದನು. ‖ ೧೦ ‖ ಆ ಏಳುಮಂದಿ ಬ್ರಹ್ಮ ಮಾನಸಪುತ್ರರಲ್ಲಿ ಅತ್ರಿ ಮುನಿಯಿಂದ ಆರಂಭಮಾಡಿ ಗುರುಸಂತತಿಯ ಪೀಠವಿರುವದು. ಅದನ್ನು ಹೇಳುವೆನು. ಸಭಾಗ್ಯವಂತನಾದ ನಾಮಧಾರಕನೇ ಏಕಚಿತ್ತದಿಂದ ಕೇಳು ‖ ೧೧ ‖ ಅತ್ರಿಮುನಿಯ ಹೆಂಡತಿಯೂ ಮಹಾ ಪತಿವ್ರತೆಯೂ ಆದ ಅನಸೂಯಾದೇವಿಯು ಜಗದಂಬೆ, ಲೋಕಮಾತೆ ಎಂದು ತಿಳಿ. ೧೨ ‖ ಆಕೆಯ ಸೌಂದರ್ಯ ಲಕ್ಷಣವನ್ನು ಇದ್ದಂತೆ ವರ್ಣಿಸುವದು ಯಾರಿಂದ ಶಕ್ಯವಾದೀತು? ಪೂರ್ಣಚಂದ್ರನೇ ಆಕೆಯ ಪುತ್ರನಾದಮೇಲೆ ಆಕೆಯ ರೂಪವನ್ನೇನು ವರ್ಣಿಸಲಿ? ‖ ೧೩ ‖ ಆಕೆಯು ಪತಿವ್ರತಾಧರ್ಮದಲ್ಲಿ ಹೇಳಿದಂತೆ ಒಳ್ಳೇ ಭಕ್ತಿಯಿಂದ ಅತಿಶಯವಾಗಿ ಪತಿಸೇವೆಯನ್ನು ಮಾಡುತ್ತ ಮಹಾಮಹಿಮೆಯುಳ್ಳವಳಾಗಿ ಒಳ್ಳೇ ಹೆಸರಾಗಿದ್ದಳು. ಇತ್ತ ಯಾವತ್ತು ದೇವತೆಗಳು ಆಕೆಯ ಪ್ರಭಾವವನ್ನು ಕೇಳಿ ಹೆದರಿ ಮನಸ್ಸಿನಲ್ಲಿ— ಈಕೆಯು ನಮ್ಮ ಸ್ವರ್ಗದ ಐಶ್ವರ್ಯವೆಲ್ಲವನ್ನು ತೀವ್ರವಾಗಿ ತೆಗೆದುಕೊಳ್ಳುವಳು ಎಂದು ಚಿಂತಿಸುತ್ತಿದ್ದರು ‖ ೧೪ ‖ ಆಗ ಇಂದ್ರನೇ ಮೊದ ಲಾದ ದೇವತೆಗಳು ಕೂಡಿಕೊಂಡು ಆ ತ್ರಿಮೂರ್ತಿಗಳ ಹತ್ತರ ಹೋಗಿ ವಿನಯದಿಂದ ಅತ್ರಿಮುನಿಯ ವಿಚಾರವನ್ನು ವಿಶೇಷವಾಗಿ ವರ್ಣಿಸಹತ್ತಿದರು. ‖ ೧೫ ‖ ಆಗ ಇಂದ್ರನು— ಮಹಾಸ್ವಾಮೀ ತ್ರೈಮೂರ್ತಿಗಳೇ, ಮಹಾ ಪತಿವ್ರತಾಶಿರೋಮಣಿಯಾದ ಅತ್ರಿ ಮುನಿಯ ಪತ್ನಿ ಅನಸೂಯಾದೇವಿಯ ಪಾತಿವ್ರತ್ಯದ ಮಹಿಮೆಯನ್ನು ತಮ್ಮೆದುರಿಗೆ ವಿಸ್ತಾರವಾಗಿ ಎಷ್ಟು ಹೇಳಲಿ? ‖ ೧೬ ‖ ಆಕೆಯು ತ್ರಿಕರಣಪೂರ್ವಕವಾಗಿ ಪತಿಸೇವೆಯನ್ನೂ ಮತ್ತು ಒಳ್ಳೇ ಹರ್ಷದಿಂದ ಅತಿಥಿಪೂಜೆಯನ್ನೂ ಮಾಡುತ್ತಿರುವಳು ಆಕೆಯ ಮನೆಯಿಂದ ಒಬ್ಬ ಅತಿಥಿಯೂ ಕೂಡ ಯಾವ ಕಾಲದಲ್ಲಿಯೂ ವಿಮುಖನಾಗಿ ಹೋಗಿಲ್ಲ. ‖ ೧೭ ‖ ಆಕೆಯ ಧರ್ಮಾಚರಣೆಯನ್ನು ನೋಡಿ ಸೂರ್ಯನು ಆಕೆಗೆ ಬಿಸಿಲಿನ ತಾಪವಾದೀತೆಂದು ಹೆದರಿ ಮಂದಮಂದವಾಗಿ ಪ್ರಕಾಶಿಸುವನು. ‖ ೧೮ ‖ ಅಗ್ನಿಯೂ

ಸಹ ಹೆದರಿ ತಂಪಾಗಿ ನಡೆಯುವನು. ವಾಯುವು ಸಹ ಭಯದಿಂದ ಒಳ್ಳೇ ಮಂದಮಂದವಾಗಿ ಬೀಸುವನು. ‖ ೧೯ ‖ ಭೂದೇವಿಯೂ ಕೂಡ ಹೆದರಿ ಆಕೆಯ ಪಾದಕ್ಕೆ ಮೃದುವಾಗಿರುವಳು. ಅನಸೂಯೆಯು ನಮಗೆಲ್ಲಿ ಶಾಪ ಕೊಡುವಳೋ ಏನೋ ಎಂದು ನಾವೆಲ್ಲರೂ ಅಂಜಿರುವೆವು. ‖ ೨೦ ‖ ಆಕೆಯು ಯಾವ ದೇವರನ್ನು ಓಡಿಸಿ ಯಾವ ಪದವಿಯನ್ನು ಬೇಡುತ್ತಾಳೆಂಬುದು ನಮಗೆ ತಿಳಿಯದಂತಾಗಿದೆ. ಅವಳು ಯಾರಾದರೂ ಒಬ್ಬರಿಗೆ ವರ ಕೊಟ್ಟದ್ದಾದರೆ ಅವರು ನಮ್ಮನ್ನು ಕ್ಷಣದಲ್ಲಿ ನಾಶಮಾಡಲು ಶಕ್ಯರಾಗುವರು. ‖ ೨೧ ‖ ಮುಂದೆ ನಾವು ಸ್ವರ್ಗದಲ್ಲಿರಲಿಕ್ಕೂ ಅಶಕ್ಯವಾದೀತು, ಆದಕಾರಣ ಜಗದಾತ್ಮರೂ ದೇವರ ದೇವರೂ ಆದ ನೀವು ಇದಕ್ಕೆ ಬೇಗನೆ ಉಪಾಯ ಮಾಡಬೇಕೆಂದು ನಿಮಗೆ ಹೇಳಲಿಕ್ಕೆ ಬಂದಿರುತ್ತೇನೆ ‖ ೨೨ ‖ ಒಂದುವೇಳೆ ನೀವು ಇದಕ್ಕೆ ತೀವ್ರ ಉಪಾಯ ಮಾಡದಿದ್ದರೆ ನಾವು ನಮ್ಮ ಮನಸ್ಸು ಗಟ್ಟಿಮಾಡಿಕೊಂಡು ಆಕೆಯ ಸೇವೆ ಮಾಡುತ್ತ ಯಾವಾಗಲೂ ಆಕೆಯ ಬಾಗಿಲವನ್ನು ಕಾಯುತ್ತ ಕೂಡ್ರಬೇಕಾಗುವದು ಎಂದು ಹೇಳಿದನು. ‖ ೨೩ ‖ ಈಪ್ರಕಾರ ಇಂದ್ರನ ಮಾತು ಕೇಳಿ ಆ ತ್ರೈಮೂರ್ತಿಗಳು ಸಿಟ್ಟನಿಂದ ನಡಗುತ್ತ— ಆ ಸತಿಯು ಎಂಥ ಪತಿವ್ರತೆಯಾಗಿರುವಳು ಎಂಬದನ್ನು ಅಲ್ಲಿಗೆ ಹೋಗಿ ನೋಡುವಾ ನಡೆಯಿರಿ. ‖ ೨೪ ‖ ಆಮೇಲೆ ಆಕೆಯ ವ್ರತಭಂಗವನ್ನು ಮಾಡಿ ಆಕೆಯನ್ನು ಭೂಮಿಯಮೇಲಾದರೂ ಇಟ್ಟು ಬರುವಾ, ಅಥವಾ ಆಕೆಯನ್ನು ಯಮಲೋಕಕ್ಕಾದರೂ ಕಳಿಸುವಾ ಎಂದು ಹೊರಟು ‖ ೨೫ ‖ ಆ ಸತಿಯ ಸತ್ವವನ್ನು ಪರೀಕ್ಷಿಸಲಿಕ್ಕೆ ಆ ತ್ರೈಮೂರ್ತಿಗಳು ಭಿಕ್ಷುಕ ವೇಷವನ್ನು ಧರಿಸಿ ಅಭ್ಯಾಗತರಾಗಿ ಅತ್ರಿ ಆಶ್ರಮದ ಹತ್ತರ ಬಂದರು. ‖ ೨೬ ‖ ಅದೇ ವೇಳೆಗೆ ಅತ್ರಿ ಮುನಿಗಳು ಅನುಷ್ಠಾನಕ್ಕಾಗಿ ನದಿಗೆ ಹೋದರು. ಕೂಡಲೆ ಆ ತ್ರಿಮೂರ್ತಿಗಳು ಅತ್ರಿ ಆಶ್ರಮದ ಹೊರಗೆ ನಿಂತು ಅನಸೂಯೆಯನ್ನು ಕರೆದು— ಎಲೈ ಅನಸೂಯೇ ನಾವು ಅತಿಥಿಗಳು ಬಂದಿದ್ದೇವೆ. ‖ ೨೭ ‖ ಬ್ರಾಹ್ಮಣರಾದ ನಾವು ಅತಿಶಯ ಹಸಿವೆಯಿಂದ ಪೀಡಿತರಾಗಿದ್ದೇವೆ. ಎಲೈ ಸತಿಯೇ ನಮಗೆ ತೀವ್ರವಾಗಿ ಭೋಜನ ಮಾಡಿಸು. ಅಥವಾ ಇಲ್ಲದಿದ್ದರೆ ನಾವು ವಿಮುಖರಾಗಿ ಎರಡನೇ ಕಡೆಗೆ ಹೋಗಬೇಕೋ ಹ್ಯಾಗೆ ಹೇಳು. ‖ ೨೮ ‖ ಎಲೌ ಅನಸೂಯೆಯೇ

ನಿಮ್ಮ ಆಶ್ರಮದಲ್ಲಿ ಅಭ್ಯಾಗತರಿಗೆ ನಿರಂತರ ಸಮಾರಾಧನೆಯಾಗುವದೆಂಬ ವಿಖ್ಯಾತವಾದ ಕೀರ್ತಿಯನ್ನು ಕೇಳಿ ಬಂದೆವು ॥ ೨೯ ॥ ನೀನು ಅತಿಥಿಗಳಿಗೆ ಇಚ್ಛಾಭೋಜನ ಮಾಡಿಸುವಿ ಎಂದು ಕೇಳಿ ಆ ಕಾರಣದಿಂದ, ಆ ಇಚ್ಛಾಭೋಜನವನ್ನು ಕೇಳುವದಕ್ಕೆ ಕೂಡಲೆ ಮುದ್ದಾಂ ಇಲ್ಲಿಗೆ ಬಂದೆವು ಎಂದರು. ॥ ೩೦ ॥ ಅವರಾಡುವ ಇಷ್ಟು ಮಾತು ಕೇಳಿ ಅನಸೂಯೆಯು ಕೂಡಲೆ ಅತಿ ವಿನಯದಿಂದ ಅವರಿಗೆ ನಮಿಸಿ— ಒಳಗೆ ಬರ್ರಿ, ಕೂಡಿರಿ ಎಂದು ಹೇಳಿ ಅವರ ಪಾದ ತೊಳೆದು ॥ ೩೧ ॥ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು, ಗಂಧಾಕ್ಷತ ಪುಷ್ಪಾದಿಗಳಿಂದ ಅವರನ್ನು ಒಳ್ಳೇ ಹರ್ಷದಿಂದ ಪೂಜಿಸಿ, ಕೂಡಲೆ ಆನಂದದಿಂದ— ತಾವು ಸ್ನಾನಾನುಷ್ಠಾನಗಳನ್ನು ತೀರಿಸಿಕೊಂಡು ತೀವ್ರವಾಗಿ ಭೋಜನಕ್ಕೆ ಬರಬೇಕೆಂದು ಹೇಳಿದಳು. ॥ ೩೨ ॥ ಆಗ ಆ ತ್ರಿಮೂರ್ತಿಗಳು— ಎಲೌ ಅನಸೂಯೆಯೇ, ಈಗ ನಾವು ಸ್ನಾನ ಮಾಡಿಯೇ ಬಂದಿರುವೆವು ಅತ್ರಿಮುನಿಗಳು ಬಹಳ ಹೊತ್ತಿನಮೇಲೆ ಬರಬಹುದು. ನಮಗೆ ಈಗ ಬಹಳ ಹಸಿವೆಯಾಗಿದೆ, ಬೇಗನೆ ನಮಗೆ ಭೋಜನ ಮಾಡಿಸು ಎಂದರು. ॥ ೩೩ ॥ ಆಗ ಪತಿವ್ರತೆಯಾದ ಅನಸೂಯೆಯು ಆ ಅತಿಥಿಗಳ ಇಚ್ಛೆಯನ್ನು ತಿಳಿದು ಕೂಡಲೇ ಮಣೆಗಳನ್ನೂ ಎಲೆಗಳನ್ನೂ ಹಾಕಿ ಕೂಡ್ರಲಿಕ್ಕೆ ಹೇಳಿ ॥ ೩೪ ॥ ಅವರನ್ನು ಮಣೆಯಮೇಲೆ ಕೂಡ್ರಿಸಿ ಎಲೆಗೆ ಮೊದಲು ತುಪ್ಪದಿಂದ ಪಾತ್ರಾಭಿಗಾರ ಮಾಡಿ ಹಾಲು ಮತ್ತು ಪಲ್ಯೆಕಾಯಿಗಳನ್ನು ತಕ್ಕೊಂಡು ಬಡಿಸಲಿಕ್ಕೆ ಬಂದಳು. ॥ ೩೫ ॥ ಆಗ ಅತಿಥಿಗಳು— ಎಲೌ ದೇವಿಯೇ, ನಾವು ಅತಿ ದೂರದಿಂದ ಅತಿಥಿಗಳಾಗಿ ಬಂದಿರುವೆವು. ನಿನ್ನ ಸುಂದರ ರೂಪವನ್ನು ನೋಡಿ ನಮಗೆ ಮತ್ತೊಂದು ಇಚ್ಛೆಯುಂಟಾಗಿದೆ ಹೇಳುತ್ತೇವೆ ಕೇಳು— ॥ ೩೬ ॥ ನೀನು ನಗ್ನಳಾಗಿ ನಮಗೆ ಅನ್ನವನ್ನು ಬಡಿಸಬೇಕು. ಅಥವಾ ಹಾಗಿಲ್ಲದಿದ್ದರೆ ನಾವು ವಿಮುಖರಾಗಿ ಬೇರೆಕಡೆಗೆ ಹೊರಟು ಹೋಗಬೇಕೋ ಹ್ಯಾಗೆ? ಈ ವಿಷಯವಾಗಿ ನೀನು ನಮಗೇನು ಹೇಳುತ್ತೀ ? ಎಂದರು. ॥ ೩೭ ॥ ಈ ಪ್ರಕಾರ ಅತಿಥಿ ಬ್ರಾಹ್ಮಣರ ಮಾತು ಕೇಳಿ ಅನಸೂಯೆಯು ಮನಸ್ಸಿನಲ್ಲಿ ಆಲೋಚಿಸಿ— ಇವರು ನನ್ನ ಮನಸ್ಸನ್ನು ಪರೀಕ್ಷಿಸಲಿಕ್ಕೆ ಬಂದಂಥ ಕಾರಣಿಕ ಪುರುಷರಾಗಿರಬಹುದು. ॥ ೩೮ ॥ ಎಂದು ಮತ್ತೆ ಆ ಪತಿವ್ರತಾಶಿರೋಮಣಿಯು ಮನಸ್ಸಿನಲ್ಲಿ

ವಿಚಾರಿಸುತ್ತಾ— ಅತಿಥಿಗಳು ವಿಮುಖರಾದರೆ ನಮ್ಮ ತಪೋಹಾನಿಯಾಗುವದು ಪತಿಯು ಅತಿಥಿಗಳು ವಿಮುಖ ರಾಗಬಾರದೆಂದು ಹೇಳಿರುವರು ಪತಿಯು ಆಜ್ಞೆಯನ್ನು ನಾನು ಹೇಗೆ ಮೀರಲಿ? ॥ ೩೯ ॥ ನನ್ನ ಮನಸ್ಸು ನಿರ್ಮಲವಾಗಿರುವದು. ಆ ದುಷ್ಟ ಮನ್ಮಥನು ಏನು ಮಾಡುವನು? ನನ್ನ ಪತಿಯು ತಪಃಫಲವೇ ನನ್ನ ಧರ್ಮ ವನ್ನು ರಕ್ಷಿಸುವದು. ॥ ೪೦ ॥ ಎಂದು ಮನಸ್ಸಿನಲ್ಲಿ ವಿಚಾರಿಸಿ, ಬಹಿರಂಗವಾಗಿ— ಸ್ವಾಮೀ ಅತಿಥಿಗಳೇ ನಿಮ್ಮ ಮನಸ್ಸಿನಂತೆಯೇ ಆಗಲಿ. ನಾನು ನಗ್ನಳಾಗಿಯೇ ನಿಮಗೆ ಊಟಕ್ಕೆ ಬಡಿಸುವೆನು. ನೀವು ಸ್ವಸ್ಥಚಿತ್ತದಿಂದ ಊಟ ಮಾಡಿರಿ. ಎಂದೆನ್ನುತ್ತ ॥ ೪೧ ॥ ಆಕೆಯು ಅಡಿಗೆಯ ಮನೆಗೆ ಹೋಗಿ ಪತಿಯು ಚರಣಗಳನ್ನು ನೆನಿಸಿ, ಉಟ್ಟ ವಸ್ತ್ರವನ್ನು ತೆಗೆದಿಟ್ಟು ನಗ್ನಳಾಗಿ–– ಈ ಅತಿಥಿಗಳು ನನ್ನ (ಬಾಲಕರು) ಮಕ್ಕಳು ॥ ೪೨ ॥ ಎಂದು ಆ ನಗ್ನ ರೂಪದಿಂದಲೇ ಅನ್ನೋದಕಗಳನ್ನು ತಕ್ಕೊಂಡು ಬಡಿಸಲಿಕ್ಕೆ ಹೊರಗೆ ಬರುವಷ್ಟರಲ್ಲಿಯೇ ಆ ತ್ರೈಮೂರ್ತಿ ಗಳು ಸಣ್ಣ ಬಾಲಕರಾಗಿ ತಮ್ಮ ತಮ್ಮ ಎಲೆಗಳ ಮುಂದೆ ಉರುಳಾಡುತ್ತಿದ್ದರು. ॥ ೪೩ ॥ ಆ ಬಾಲಕರನ್ನು ನೋಡಿ ಅನಸೂಯೆಯು ಗಾಬರಿಯಾಗಿ ಮತ್ತೆ ವಸ್ತ್ರವನ್ನುಟ್ಟುಕೊಂಡು ಅವರ ಹತ್ತರ ಬಂದಳು. ॥ ೪೪ ॥ ಆಗ ಆ ಮೂರೂ ಬಾಲಕರು ಅಳುತ್ತಿದ್ದರು ಅವರನ್ನು ನೋಡಿ ಅನಸೂಯೆಯು— ಇವರು ಬಹಳ ಹಸಿದಿರು ವರು ಎಂದು ಅವರನ್ನು ತನ್ನ ತೊಡೆಯಮೇಲೆ ಕರಕೊಂಡು ॥ ೪೫ ॥ ಅತಿ ಹರ್ಷದಿಂದ ಮೊಲೆ ಕೊಡುತ್ತ ಒಬ್ಬನ ಹೊಟ್ಟೆ ತುಂಬಿದಕೂಡಲೆ ಅವನನ್ನು ಕೆಳಗಿಳಿಸಿ ಮತ್ತೊಬ್ಬರನ್ನು ಕರಕೊಂಡು ಮೊಲೆ ಕೊಡುತ್ತ ಅವರ ಹಸಿವೆ ಯನ್ನು ನಿವಾರಣಮಾಡುತ್ತ ಕುಳಿತಳು ॥ ೪೬ ॥ ಎಲೈ ನಾಮಧಾರಕಾ ನೋಡು, ಆಗ ಎಷ್ಟು ಆಶ್ಚರ್ಯ ವಾಯಿತು! ಆ ತ್ರಿಮೂರ್ತಿಗಳ ಹಸಿವೆಯು ಆ ಪತಿವ್ರತೆಯ ಸ್ತನಪಾನ ಮಾತ್ರದಿಂದ ಶಾಂತವಾಯಿತು. ಹೇಳುವೆನು ಕೇಳು— ಪತಿವ್ರತೆಯರ ತಪಃಫಲವು ಈ ಪ್ರಕಾರವಾಗಿರುವದು ॥ ೪೭ ॥ ಹದಿನಾಲ್ಕು ಲೋಕ, ಸಪ್ತಸಮುದ್ರ, ಒಡಬಾಗ್ನಿಗಳು ಉದರದಲ್ಲಿದ್ದ ವಿಷ್ಣುವು, ॥ ೪೮ ॥ ಹಗಲಿರುಳು ಸೃಷ್ಟಿಯನ್ನು ಮಾಡುತ್ತಿರುವ ಬ್ರಹ್ಮನು, ॥ ೪೯ ॥ ಹಣೆಯಲ್ಲಿ ಕಣ್ಣುಳ್ಳಂಥ ಕರ್ಪೂರದಂತೆ ಗೌರವರ್ಣವುಳ್ಳಂಥ, ಪಂಚಮುಖಗಳುಳ್ಳಂಥ

ಕಾಲಾಗ್ನಿ ರುದ್ರನು ಸಹ ಆ ಪತಿವ್ರತಾ ಅನಸೂಯೆಯ ಸ್ತನಪಾನದಿಂದ ತೃಪ್ತರಾದರು, ಅದು ಅತ್ರಿ ಮುನಿಗಳ ತಪಃಫಲವೇ ಸರಿ. ॥ ೫೦ ॥ ಆಗ ಅತ್ರಿಪತ್ನಿಯಾದ ಆ ಅನಸೂಯೆಯಂತೆ ಬೇರೆ ಯಾರೂ ಇದ್ದಿಲ್ಲ. ಈ ರೀತಿಯಾಗಿ ಆಕೆಯು ತ್ರಿಮೂರ್ತಿಗಳಿಗೂ ತಾಯಿಯಾಗಿ ತ್ರಿಭುವನಗಳಲ್ಲಿ ಪ್ರಸಿದ್ಧಳಾದಳು ॥ ೫೧ ॥ ಆಮೇಲೆ ಅನಸೂಯೆಯು ಆ ಬಾಲಕರನ್ನು ಬಗಲಲ್ಲಿ ಕೂಡ್ರಿಸಿಕೊಂಡು ಮೇಲಿಂದಮೇಲೆ ಚುಂಬನ ಕೊಡುತ್ತ ಅನೇಕ ರೀತಿ ಆಟವಾಡಿಸುತ್ತಿದ್ದಳು. ಮತ್ತು ಒಮ್ಮೊಮ್ಮೆ ಅವರನ್ನು ತೊಟ್ಟಿಲಲ್ಲಿ ಮಲಗಿಸಿ, ಅತಿ ಉಲ್ಹಾಸದಿಂದಲೂ ಸಪ್ತಸ್ವರಗಳಿಂದಲೂ ಉಪನಿಷದಾರ್ಥಗಳಿಂದಲೂ ಅವರನ್ನು ವರ್ಣಿಸುತ್ತ ನಾನಾ ರೀತಿಯಿಂದ ಅತಿ ಮನೋಹರವಾಗಿ ಜೋಗುಳಪದವನ್ನು ಹಾಡುತ್ತ ತೂಗುತ್ತ ಅವರನ್ನು ಸಮಾಧಾನ ಮಾಡುತ್ತಿದ್ದಳು ॥ ೫೨–೫೩ ॥ ಇಲ್ಲಿ ಇಷ್ಟಾಗುವದರೊಳಗೆ ಅತ್ತ ಅತ್ರಿ ಮುನಿಯು ಮನಸ್ಸಿನಲ್ಲಿ— ಇನ್ನು ಮಧ್ಯಾಹ್ನವಾಯಿತು. ಮನೆಗೆ ಅತಿಥಿಗಳು ಬರುವ ಹೊತ್ತಾಯಿತು ಎಂದು ತೀವ್ರವಾಗಿ ಅನುಷ್ಠಾನವನ್ನು ತೀರಿಸಿಕೊಂಡು ತಮ್ಮ ಆಶ್ರಮಕ್ಕೆ ಬಂದು ॥ ೫೪ ॥ ಒಳಗೆ ಹೊಕ್ಕು ನೋಡಿ, ಕೂಡಲೆ ಅನುಸೂಯೆಯು ಹಾಡುವದನ್ನು ಕೇಳಿ,— ಎಲೈ ಪ್ರಿಯೇ, ಇವರು ಯಾರ ಮಕ್ಕಳು ? ಎಂದು ಕೇಳಿದನು. ॥ ೫೫ ॥ ಆಗ ಆಕೆಯು ತನ್ನ ಪತಿಗೆ ನಡೆದ ಸಂಗತಿಯನ್ನೆಲ್ಲ ತಿಳಿಸಿದಳು. ಅದನ್ನು ಕೇಳಿ ಅತ್ರಿಮುನಿಯು ಜ್ಞಾನದೃಷ್ಟಿಯಿಂದ ನೋಡಿ, ಇವರು ತ್ರಿಮೂರ್ತಿಗಳೆಂದು ತಿಳಿದು ಅವರಿಗೆ ನಮಸ್ಕರಿಸಿದನು. ॥ ೫೬ ॥ ಈ ಪ್ರಕಾರ ಅತ್ರಿಮುನಿಯು ನಮಸ್ಕರಿಸಿದ ಕೂಡಲೆ ಆ ತ್ರಿಮೂರ್ತಿಗಳು ಸಂತೋಷ ಆನಂದಗಳನ್ನು ಹೊಂದಿ ಆ ದಂಪತಿಗಳ ಭಕ್ತಿಗೆ ಮೆಚ್ಚಿ ಪ್ರಸನ್ನರಾಗಿ ॥ ೫೭ ॥ ತಮ್ಮ ತಮ್ಮ ಪೂರ್ಣಾಂಶದಿಂದ ಬಾಲಕರಾಗಿ ಆ ತೊಟ್ಟಿಲದಲ್ಲಿಯೇ ಉಳಿದು, ನಿಜರೂಪವನ್ನು ಹೊಂದಿ ಆ ದಂಪತಿಗಳೆದುರಿಗೆ ನಿಂತು— ಎಲೈ ಅತ್ರಿಮುನಿಯೇ, ನೀನು ಧನ್ಯನು! ಧನ್ಯನು! ಈ ಅನಸೂಯೆಯು ಸತ್ಯ ಪತಿವ್ರತೆಯಾಗಿದ್ದಾಳೆ. ॥ ೫೮ ॥ ಎಲೈ ಅತ್ರಿಯೇ ನಾವು ನಿನ್ನ ಭಕ್ತಿಗೆ ಮೆಚ್ಚಿದ್ದೇವೆ. ಈಗ ನೀನು ನಿನ್ನ ಮನಸ್ಸಿಗೆ ಬಂದ ಬೇಕಾದ ವರವನ್ನು ಬೇಡು ಎಂದರು. ಆಗ ಅತ್ರಿ ಮುನಿಯು ಅನಸೂಯೆಯನ್ನು ಕುರಿತು— ಎಲೈ ಸತಿಯೇ, ಇವರಲ್ಲಿ ನೀನು ನಿನಗೆ

ಬೇಕಾದ ವರವನ್ನು ಕೇಳು ಎಂದನು. ॥ ೫೯ ॥ ಆ ಮಾತು ಕೇಳಿ ಆಕೆಯು— ಮಹಾರಾಜ, ತಾವು ನನ್ನ ಪ್ರಾಣೇಶ್ವರರಿದ್ದೀರಿ. ಈ ತ್ರೈಮೂರ್ತಿಗಳು ನಿಮ್ಮ ಭಕ್ತಿಗೆ ಮೆಚ್ಚಿ ಬಂದಿರುವರು. ಆದಕಾರಣ ಈಗ ನೀವೇ ಇವರನ್ನು ಕುರಿತು ಪುತ್ರರನ್ನು ಕೇಳಿರಿ. ॥ ೬೦ ॥ ಈ ಮೂರು ಮಂದಿ ಬಾಲಕರು ನಿಶ್ಚಯವಾಗಿ ನಮ್ಮ ಮನೆಯಲ್ಲಿ ನಮ್ಮ ಪುತ್ರರಾಗಿಯೇ ಉಳಿಯಬೇಕು. ಮತ್ತು ಇವರು ಮುಂದೆ ಏಕರೂಪವಾಗಬೇಕು. ಹೀಗೆ ನನ್ನ ನಿಶ್ಚಯ ವಾದ ಬೇಡಿಕೆಯಿರುತ್ತದೆ ಎಂದು ಹೇಳಿದಳು. ॥ ೬೧ ॥ ಈ ಪ್ರಕಾರ ಅನಸೂಯೆಯ ಮಾತು ಕೇಳಿ ಆ ತ್ರೈಮೂರ್ತಿಗಳು— ಎಲೈ ದಂಪತಿಗಳೇ ಈ ಮೂರೂಮಂದಿ ಬಾಲಕರು ನಿಮ್ಮ ಮಕ್ಕಳಾಗಿ ನಿಮ್ಮ ಮನೆಯಲ್ಲಿಯೇ ಇರುತ್ತಾರೆ. ಏನೂ ಚಿಂತೆ ಮಾಡಬೇಡಿರಿ ಎಂದು ವರವನ್ನಿತ್ತು ಆ ತ್ರೈಮೂರ್ತಿಗಳು ತಮ್ಮ ತಮ್ಮ ಪತ್ನಿಯರ ಸಹಿತವಾಗಿ ತಮ್ಮ ತಮ್ಮ ಸ್ಥಾನಕ್ಕೆ ಹೋದರು. ॥ ೬೨ ॥ ಎಲೈ ನಾಮಧಾರಕಾ, ಈ ಪ್ರಕಾರ ಆ ಮೂರೂ ಮಂದಿ ಬಾಲಕರು ಅವರ ಮನೆಯಲ್ಲಿಯೇ ಇದ್ದರು ಆಗ ಅನಸೂಯೆಯು ಅವರನ್ನು ತನ್ನ ಮಕ್ಕಳಂತೆ ರಕ್ಷಿಸುತ್ತ ಆಡಿಸುತ್ತ ಪ್ರೀತಿಯಿಂದ ಆ ಮೂರೂ ಮಂದಿ ಬಾಲಕರಿಗೆ ಹೆಸರನ್ನಿಟ್ಟಳು ಕೇಳು. ॥ ೬೩ ॥ ಬ್ರಹ್ಮಮೂರ್ತಿಗೆ ಚಂದ್ರನೆಂದೂ ವಿಷ್ಣುಮೂರ್ತಿಗೆ ದತ್ತನೆಂದೂ ಮಹೇಶ್ವರನ ಮೂರ್ತಿಗೆ ದೂರ್ವಾಸನೆಂದೂ ಹೆಸರಿಟ್ಟಳು ಎಲೈ ನಾಮಧಾರಕನೇ ಹೀಗೆ ಅನಸೂಯೆಗೆ ಮೂರು ಮಂದಿ ಮಕ್ಕಳಾಗಿ ಅವರು ಬೆಳೆದು ದೊಡ್ಡವರಾದರು ॥ ೬೪ ॥ ಆಗ ದೂರ್ವಾಸನೂ ಮತ್ತೂ ಚಂದ್ರನೂ ತಾಯಿಯ ಎದುರಿಗೆ ನಿಂತು ಕೈಮುಗಿದು, ದೂರ್ವಾಸನು ತಪಸ್ಸು ಮಾಡಲಿಕ್ಕೆ, ಚಂದ್ರನು ತನ್ನ ಸ್ಥಾನಕ್ಕೆ ಹೋಗಲಿಕ್ಕೆ ಕೌತುಕವಾಗಿ ಅಪ್ಪಣೆ ಕೇಳಿದರು ಹೇಳುವೆನು ಕೇಳು ॥ ೬೫ ॥ ಆಗ ದೂರ್ವಾಸನು— ಎಲೌ ತಾಯಿಯೇ, ನಾನು ಋಷಿಯು ಆದ್ದರಿಂದ ಋಷಿಗಳಂತೆ ನಾನು ಅನೇಕ ತೀರ್ಥ ಗಳಲ್ಲಿ ಸಂಚರಿಸಿ ನಿತ್ಯಕರ್ಮಾನುಷ್ಠಾನ ಮಾಡಬೇಕಾಗಿದೆ. ಕಾರಣ ನನಗೆ ಹೋಗಲಿಕ್ಕೆ ಅಪ್ಪಣೆ ಕೊಡು ಎಂದು ಬೇಡಿಕೊಂಡನು ॥ ೬೬ ॥ ಆಮೇಲೆ ಚಂದ್ರನು ಕೈಮುಗಿದು— ಎಲೌ ತಾಯಿಯೇ, ನಾನು ನನ್ನ ವಾಸಸ್ಥಾನ ವಾದ ಚಂದ್ರಮಂಡಲದಲ್ಲಿದ್ದು ನಿತ್ಯವೂ ನಿಮ್ಮ ಚರಣದರ್ಶನವನ್ನು ತಕ್ಕೊಳ್ಳುವೆನು. ಕಾರಣ ನನಗೆ ಹೋಗ

ಲಿಕ್ಕೆ ಅಪ್ಪಣೆ ಕೊಡು ಎಂದು ಹೇಳಿ ॥ ೧೭ ॥ ಆಮೇಲೆ ಇಬ್ಬರೂ ಕೂಡಿ— ಅವ್ವಾ, ಮೂರನೆಯ ವಿಷ್ಣು
ಮೂರ್ತಿಯಾದ ದತ್ತನಲ್ಲಿಯೇ ನಾವು ನಮ್ಮ ನಮ್ಮ ಪೂರ್ಣಾಂಶದಿಂದ ಐಕ್ಯರಾಗಿರುವೆವು. ಇವನೇ ನಿಶ್ಚಯವಾಗಿ
ತ್ರೈಮೂರ್ತಿ ಸ್ವರೂಪನೆಂದು ತಿಳಿಯಿರಿ ॥ ೧೮ ॥ ತ್ರೈಮೂರ್ತಿಸ್ವರೂಪನಾದ ಈ ದತ್ತನು ನಿಮ್ಮ ಹತ್ತಿರವೇ
ಇದ್ದು ನಿಮ್ಮ ಮಾತಿನಂತೆ ನಡೆಯುವನು. "ಸರ್ವಂ ವಿಷ್ಣುಮಯಂ ಜಗತ್" ಎಂಬಂತೆ ಈ ವಿಷ್ಣುಮೂರ್ತಿಯೇ
ದತ್ತಾತ್ರೇಯನಾಗಿ ಇಲ್ಲಿಯೇ ಇದ್ದು ನಿಮ್ಮನ್ನು ಸೇವಿಸುವನು. ॥ ೧೯ ॥ ಎಂದು ಹೇಳಹೇಳುತ್ತ ಅವರು ತಮ್ಮ
ತಮ್ಮ ಪೂರ್ಣಾಂಶಗಳಿಂದ ಆ ದತ್ತಮೂರ್ತಿಯಲ್ಲಿ ಐಕ್ಯರಾಗಲು ಆ ದತ್ತನು ಕೂಡಲೆ ಮೂರು ಮುಖ, ಆರು
ಕೈಗಳುಳ್ಳ ದತ್ತಾತ್ರೇಯನಾಗಿ ನಿಂತನು ಆಮೇಲೆ ಆ ದೂರ್ವಾಸ ಹಾಗೂ ಚಂದ್ರರು ತಾಯಿಯ ಅಪ್ಪಣೆ ಪಡೆದು
ಒಬ್ಬನು ತಪಸ್ಸಿಗೆ, ಒಬ್ಬನು ತನ್ನ ಸ್ಥಾನಕ್ಕೆ ಹೋದರು. ॥ ೨೦ ॥ ಎಲೈ ನಾಮಧಾರಕನೇ ಹೀಗೆ ಆ ತ್ರೈಮೂರ್ತಿ
ಗಳು ಐಕ್ಯರಾಗಿ ದತ್ತಾತ್ರೇಯರೆಂಬ ಹೆಸರಿನಿಂದ ಒಂದೇ ಮೂರ್ತಿಯಾಗಿ ಅನಸೂಯೆಯ ಮನೆಯಲ್ಲಿ ಶ್ರೀಗುರುಗಳ
ಮೂಲ ಪೀಠಸ್ವರೂಪರಾಗಿ ನಿಂತರು. ॥ ೨೧ ॥ ಎಂದು ಸಿದ್ಧರು ಹೇಳಲು ಅದನ್ನು ಕೇಳಿ ನಾಮಧಾರಕನು
ಸಂತೋಷಬಟ್ಟು ಅನೇಕ ರೀತಿ ಪ್ರಶ್ನೆ ಮಾಡಿ ಕೇಳಹತ್ತಿದನು. ॥ ೨೨ ॥ ಸ್ವಾಮೀ, ಜಯಜಯ ಸಿದ್ಧಯೋಗೀ
ಶ್ವರನೇ, ಭಕ್ತಜನ ಮನೋಹರನೇ, ಸಂಸಾರಸಾಗರ ತಾರಕನೇ, ಜ್ಞಾನಮೂರ್ತಿಯೇ ಕೃಪಾಸಿಂಧುವೇ ॥ ೨೩ ॥
ತಮ್ಮ ಅನುಗ್ರಹದಿಂದ ನನಗೆ ಸಹಜ ಜ್ಞಾನವುಂಟಾಯಿತು. ಭವಸಾಗರ ತಾರಕರೂ ಯೋಗಿರಾಜರೂ ಆದ
ತಾವು ನನ್ನ ವಿನಂತಿಯನ್ನು ಕೇಳಬೇಕು ॥ ೨೪ ॥ ತಾವು ಶ್ರೀ ದತ್ತಾತ್ರೇಯರ ಅವತಾರದ ಪೂರ್ವಾಪರ
ಸಂಗತಿಯನ್ನು ಹೇಳಿದಿರಿ. ಆ ತ್ರೈಮೂರ್ತಿ ಅವತಾರವಾದ ಶ್ರೀಗುರುಗಳು ಮುಂದೆ ಎಲ್ಲಿ ಅವತರಿಸಿದರು ॥ ೨೫ ॥
ಎಂಬದನ್ನು ಬಾಲಕನಾದ ನನ್ನಮೇಲೆ ಕೃಪಾಮಾಡಿ ತ್ರಿಮೂರ್ತಿಗಳ ಅವತಾರವನ್ನು ಅನುಕ್ರಮದಿಂದ ವಿಸ್ತಾರ
ವಾಗಿ ನನಗೆ ಹೇಳಬೇಕೆಂದು ವಿನಯಪೂರ್ವಕ ಬೇಡಿಕೊಳ್ಳುವೆನು ಎಂದನು. ॥ ೨೬ ॥ ಇತ್ತ ಸರಸ್ವತೀ-

ಗಂಗಾಧರನು-- ಎಲೈ ಶ್ರೋತೃಗಳೇ, ವಿಸ್ತಾರ ಹಾಗೂ ಮನೋಹರವಾದ ಮುಂದಿನ ಗುರುಚರಿತ್ರೆಯನ್ನು ಕೇಳುತ್ತ ಹೋಗುವದರಿಂದ ನಿಮಗೆ ಸಕಲಾಭೀಷ್ಟಗಳು ಸಿದ್ಧಿಸುವವು ಎಂದು ಅಂದನು. ॥ ೭೭ ॥

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ "ಅನಸೂಯೋಪಾಖ್ಯಾನಂ" ನಾಮ ಚತುರ್ಥೋಽಧ್ಯಾಯಃ ॥ ೪ ॥ ಶ್ರೀ ಗುರುದೇವದತ್ತ ॥

—. ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು —

**— ೪ನೇ ಅಧ್ಯಾಯ ಸಮಾಪ್ತ —**

---

# ೫ನೆಯ ಅಧ್ಯಾಯ

## (ಶ್ರೀ ಗುರು ದತ್ತಾತ್ರೇಯರು ಪೀಠಾಪುರದಲ್ಲಿ ಶ್ರೀಪಾದ ಶ್ರೀ ವಲ್ಲಭರಾಗಿ ಅವತರಿಸಿದ್ದು)

ಶ್ರೀ ಗಣೇಶಾಯನಮಃ ॥ ಆ ಮೇಲೆ ಸಿದ್ಧರು ನಾಮಧಾರಕನಿಗೆ ಶ್ರೀ ಗುರುದತ್ತರು ಭಕ್ತರನ್ನು ರಕ್ಷಿಸುವದಕ್ಕೆ ಮನುಷ್ಯಾವತಾರವನ್ನು ತಕ್ಕೊಂಡರೆಂದು ವಿಸ್ತಾರವಾಗಿ ಹೇಳಿದರು. ॥ ೧ ॥ ಹ್ಯಾಗಂದರೆ, ಎಲೈ ನಾಮಧಾರಕನೇ ಕೇಳು ಪರಮಾತ್ಮನಾದ ಶ್ರೀ ವಿಷ್ಣುವು ಅಂಬರೀಷನಿಗೆ ಬಂದ ಶಾಪವನ್ನು ತಾನು ತಕ್ಕೊಂಡು ಮನುಷ್ಯ ಮೊದಲಾದ ಅವತಾರಗಳನ್ನು ತಕ್ಕೊಂಡನು, ಅವುಗಳನ್ನು ಹೇಳುವೆನು ಕೇಳು. ॥ ೨ ॥ ಅವನು ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬೌದ್ಧ, ಕಲ್ಕಿಗಳೆಂಬ ಹತ್ತು ಅವತಾರಗಳನ್ನು ತಕ್ಕೊಂಡನು. ॥ ೩-೪-೫ ॥ ಹೃಷೀಕೇಶನಾದ ಶ್ರೀ ವಿಷ್ಣುವು ಭಕ್ತರನ್ನು ರಕ್ಷಿಸುವದಕ್ಕೂ ದುಷ್ಟರನ್ನು ಶಿಕ್ಷಿಸುವದಕ್ಕೂ ಈ ಪ್ರಕಾರ ನಾನಾಪ್ರಕಾರದ, ನಾನಾವೇಷದ ಅವತಾರಗಳನ್ನು ಧರಿಸಿದನು. ॥ ೬ ॥ ಮುಂದೆ ದ್ವಾಪರ ಯುಗಾಂತ್ಯದಲ್ಲಿ ಕಲಿಯ ಪ್ರವೇಶವಾಯಿತು. ಆಗ ಬ್ರಾಹ್ಮಣರು ಅಜ್ಞಾನಿಗಳಾಗುತ್ತ, ಒಳ್ಳೇ ಆಚಾರಹೀನರಾಗುತ್ತ ನಡೆದರು. ಈ ಪ್ರಕಾರ ಮುಂದೆ ಬರಬರುತ್ತ ಕಲಿಯುಗದ ಮಹಿಮೆಯು ಪ್ರಬಲವಾಗಿ ನಡೆಯಹತ್ತಿತು ॥ ೭ ॥ ಆದ್ದರಿಂದ ಹಿಂದಕ್ಕೆ ಸಗರ ಪುತ್ರರನ್ನು ಉದ್ಧರಿಸುವದಕ್ಕೆ ಭಗೀರಥನ ತಪಸ್ಸಿಗೆ ಮೆಚ್ಚಿ, ಪವಿತ್ರಳಾದ ಗಂಗಾದೇವಿಯು ಜಲರೂಪದಿಂದ ಈ ಭೂಮಿಗೆ ಬಂದಂತೆ ಶ್ರೀ ದತ್ತಗುರುಗಳು ಭಕ್ತರ ಉದ್ಧಾರಕ್ಕಾಗಿ ಈ ಭೂಮಿಯಲ್ಲಿ ಮತ್ತೆ ಬೇರೆ ರೂಪದಿಂದ ಅವತರಿಸಿದರು ಅದನ್ನು ಹೇಳುವೆನು ಕೇಳು. ॥ ೮ ॥ ಒಂದು ಪೀಠಾಪುರವೆಂಬ ಗ್ರಾಮದಲ್ಲಿ ಒಬ್ಬ ಬ್ರಾಹ್ಮಣ ಪತ್ನಿಯು ಮಕ್ಕಳಸಲುವಾಗಿ ಶ್ರೀ ವಿಷ್ಣುಸ್ವರೂಪರಾದ ಶ್ರೀ ಗುರು ದತ್ತಾತ್ರೇಯರನ್ನು ಆರಾಧಿಸಲು ಆಕೆಯ ಉದರದಿಂದ ಅವರು

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

" ಶ್ರೀಪಾದ ಶ್ರೀ ವಲ್ಲಭ "ರೆಂಬ ನಾಮದಿಂದ ಮನುಷ್ಯಾವತಾರ ಮಾಡಿದರು. ಆಗ ಆದ ಆಶ್ಚರ್ಯವನ್ನು ಹೇಳುವೆನು ಕೇಳು. ‖ ೯ ‖ ಪೂರ್ವದೇಶದಲ್ಲಿ ಪೀಠಾಪುರವೆಂಬ ಗ್ರಾಮದಲ್ಲಿ ಆಪಸ್ತಂಬ ಶಾಖೆಯ ಉತ್ತಮ ಬ್ರಾಹ್ಮಣ ವಂಶದಲ್ಲಿ ಹುಟ್ಟಿದ ಆಪಳರಾಜನೆಂಬ ಒಬ್ಬ ಬ್ರಾಹ್ಮಣನಿದ್ದನು. ‖ ೧೦ ‖ ಆವನ ಪತ್ನಿಯಾದ ಸುಮತಾ ಎಂಬವಳು ಮಹಾ ಪತಿವ್ರತೆಯಾಗಿದ್ದಳಲ್ಲದೆ ಮನೆಗೆ ಬಂದ ಅತಿಥಿ-ಅಭ್ಯಾಗತರನ್ನೂ ಒಳ್ಳೇ ಭಕ್ತಿ ಭಾವದಿಂದ ಪೂಜಿಸುತ್ತಿದ್ದಳು. ‖ ೧೧ ‖ ಹೀಗೆ ಆಕೆಯು ಒಂದೇ ಮನಸ್ಸಿನಿಂದ ಪತಿ ಸೇವೆಯನ್ನು ಮಾಡುತ್ತ ಪ್ರತ್ಯಕ್ಷವಾಗಿ ಅತಿಥಿ-ಅಭ್ಯಾಗತರನ್ನು ಪೂಜಿಸುತ್ತಿದ್ದಳು. ‖ ೧೨ ‖ ಈ ಪ್ರಕಾರ ನಡೆದಿರಲು ಒಂದು ದಿವಸ ಶ್ರೀ ಗುರು ದತ್ತಾತ್ರೇಯರು ಅತಿಥಿ ವೇಷದಿಂದ ಅವರ ಮನೆಗೆ ಬಂದರು. ಆದಿವಸ ಅಮಾವಾಸ್ಯೆಯಿದ್ದು ಅವರ ಮನೆಯಲ್ಲಿ ಶ್ರಾದ್ಧವೂ ಇತ್ತು ‖ ೧೩ ‖ ಆ ಪತಿವ್ರತೆಯು ಬ್ರಾಹ್ಮಣರ ಊಟವಾಗುವದಕ್ಕಿಂತ ಪೂರ್ವದಲ್ಲಿಯೇ ಆ ಗುರು ದತ್ತಾತ್ರೇಯರಿಗೆ ಭಿಕ್ಷೆಯನ್ನು ಹಾಕಿದಳು ಆಗ ಅವರು ಆಕೆಯ ಭಕ್ತಿಗೆ ಮೆಚ್ಚಿ ತಮ್ಮ ನಿಜರೂಪವನ್ನು ತೋರಿಸಿದರು. ‖ ೧೪ ‖ ಹ್ಯಾಗಂದರೆ, ಅವರು ತ್ರೈಮೂರ್ತಿ ಸ್ವರೂಪವನ್ನು ಹೊಂದಿ ಅತಿ ಗಹನವಾದ ತಮ್ಮ ದತ್ತಾತ್ರೇಯ ರೂಪವನ್ನು ತೋರಿಸಿದರು. ಆಗ ಆ ಪತಿವ್ರತೆಯು ಅದನ್ನು ಕಂಡು, ಒಳ್ಳೇ ಭಕ್ತಿಯಿಂದ ಬಂದು ಅವರ ಚರಣಕ್ಕೆ ನಮಸ್ಕರಿಸಿದಳು ‖ ೧೫ ‖ ಆಗ ಶ್ರೀ ಗುರುದತ್ತಾತ್ರೇಯರು -- ಹೇ, ತಾಯೇ, ನಿನ್ನ ಮನಸ್ಸಿನಲ್ಲಿರುವ ಇಚ್ಛೆಯಂತೆ ಬೇಕಾದ ವರವನ್ನು ಕೇಳು. ಅದರ ಫಲವು ನಿನಗೆ ತೀವ್ರವಾಗಿ ಉಂಟಾಗುವದು ಎಂದು ಹೇಳಿದರು. ‖ ೧೬ ‖ ಶ್ರೀ ಗುರುಗಳಾಡಿದ ಈ ಪ್ರಕಾರವಾದ ಮಾತು ಕೇಳಿ, ಆ ಸುಮತಿಯು ಮನಸ್ಸಿನಲ್ಲಿ ಆಲೋಚಿಸಿ, ವಿನಯದಿಂದ ಕೈಮುಗಿದು ನಿಂತು ನಾನಾರೀತಿಯಿಂದ ಸ್ತುತಿಸಹತ್ತಿದಳು. ‖ ೧೭ ‖ ಜಯ ಜಯ ಜಗನ್ನಾಥನೇ, ನೀವು ಭಕ್ತರನ್ನು ಈ ಭವಸಾಗರದಿಂದ ದಾಟಿಸುವಂಥವರಾಗಿರುತ್ತೀರಿ. ದೇವರಾಯಾ, ನನ್ನ ಮನಸ್ಸಿನ ಇಚ್ಛೆಯನ್ನು ಪೂರ್ಣಮಾಡಬೇಕು. ‖ ೧೮ ‖ ನೀವು ಸರ್ವ ಪ್ರಾಣಿಗಳಲ್ಲಿಯೂ ದಯಾವಂತರಾಗಿರುತ್ತೀರೆಂದು ಸಕಲ ವೇದ ಪುರಾಣಗಳು ಹೇಳುತ್ತವೆ. ಎಲೈ ಭಕ್ತವತ್ಸಲನೇ, ಕೃಪಾನಿಧಿಯೇ ತಮ್ಮ

ಕೀರ್ತಿಯನ್ನು ಎಷ್ಟು ವರ್ಣಿಸಲಿ! ‖ ೧೯ ‖ ಈಗ ತಾವು ಆಡಿದ ಮಾತು ಎಂದೂ ಸುಳ್ಳಾಗುವದಿಲ್ಲ. ನೀವು ೫ ವರುಷದ ಬಾಲಕನಾದ ಧ್ರುವನಿಗೆ ಅಚಲ ಪದವಿಯನ್ನು ಕೊಟ್ಟಿರಿ ಮತ್ತು ವಿಭೀಷಣನಿಗೆ ಲಂಕಾರಾಜ್ಯವನ್ನು ಕೊಟ್ಟಿರಿ. ‖ ೨೦ ‖ ಭಕ್ತಜನರಿಗೆ ಆಧಾರವಾದಂಥ ನೀವು ಹದಿನಾಲ್ಕು ಲೋಕಗಳಲ್ಲಿರುವ ಯಾವತ್ತು ಚರಾಚರಗಳಲ್ಲಿ ಅವತರಿಸಿ ಅವರನ್ನು ಉದ್ಧಾರ ಮಾಡುವದು ನಿಮ್ಮ ಬಿರುದಾಗಿದೆ. ‖ ೨೧ ‖ ಕೃಪಾನಿಧಿಯಾದ ದೇವರಾಯನೇ, ಅನಾಥ ರಕ್ಷಕನೇ, ನಾರಾಯಣನೇ, ತ್ರಿಲೋಕಗಳ ಜನಕನೇ, ಈಗ ತಾವು ನನಗೆ ವರವನ್ನು ಕೊಡಲಿಕ್ಕೆ ಸಿದ್ಧರಾಗಿರುವಿರಿ ನನ್ನ ಮನಸ್ಸಿನಲ್ಲಿ ಒಂದು ಇಚ್ಛೆ ಅದೆ ನಿಮ್ಮ ಮಾತು ಸುಳ್ಳಾಗಲಾರದು ‖ ೨೨ ‖ ಆ ಇಚ್ಛೆಯನ್ನು ಪೂರ್ಣ ಮಾಡಿ ತಮ್ಮ ಮಾತನ್ನು ಸತ್ಯ ಮಾಡಬೇಕು ಎಂದು ಅವರ ಚರಣಗಳಿಗೆ ನಮಸ್ಕಾರ ಮಾಡಿದಳು. ‖ ೨೩ ‖ ಆಕೆಯ ಕರುಣಾ ವಚನವನ್ನು ಕೇಳಿ ತ್ರಿಮೂರ್ತಿ ಅವತಾರವಾದ ಶ್ರೀ ದತ್ತಾತ್ರೇಯರು ಸಂತೋಷಬಟ್ಟು ಅಭಯ ಕೊಟ್ಟು ಆಕೆಯ ಕೈಹಿಡಿದು ಎಬ್ಬಿಸಿ ಸಮಾಧಾನ ಮಾಡಿ— ಎಲೌ ಜನನಿಯೇ ಮೊದಲು ನಿನ್ನ ಮನಸ್ಸಿನಲ್ಲಿದ್ದ ಇಚ್ಛೆಯನ್ನಾದರೂ ಹೇಳು ಎಂದರು ‖ ೨೪ ‖ ಆಗ ಕೂಡಲೆ ಆ ಪತಿವ್ರತೆಯು—ಸ್ವಾಮೀ, ಈಗ ನೀವು ನನಗೆ ಜನನಿಯೆಂದು ಕರೆಯಲಿಲ್ಲವೇ ? ಈಗ ಆ ಮಾತನ್ನೇ ನೀವು ಸತ್ಯವಾಗಿ ಮಾಡಿರಿ ‖ ೨೫ ‖ ಈ ವರೆಗೆ ನನಗೆ ಅನೇಕ ಮಂದಿ ಮಕ್ಕಳಾದರೂ ಅವರಲ್ಲಿ ಬಹುಮಂದಿ ಹುಟ್ಟಿದ ಕೂಡಲೆ ಮೃತರಾದರು, ಆದರೆ ಈಗ ಬದುಕಿದ್ದ ಇಬ್ಬರಲ್ಲಿ ಒಬ್ಬನು ಕುರುಡನೂ ಒಬ್ಬನು ಹೆಳವನೂ ಆಗಿರುವರು. ‖ ೨೬ ‖ ಅವರಲ್ಲಿ ನನಗೆ ಒಬ್ಬರೂ ಯೋಗ್ಯ ಪುತ್ರರಾಗಲಿಲ್ಲ. ಆ ಮೂರ್ಖ ಪ್ರಾಣಿಗಳನ್ನು ತಕ್ಕೊಂಡು ಏನು ಮಾಡಬೇಕು? ಅವರಿಂದ ನನಗೆ ಏನೂ ಉಪಯೋಗವಾಗುವದಿಲ್ಲ. ಈ ಪ್ರಕಾರ ಅವರು ಇದ್ದೂ ಇಲ್ಲದಂತೆಯೇ ಸರಿ, ಸ್ವಾಮೀ, ಯೋಗ್ಯ ಪುತ್ರರಿಲ್ಲದವರ ಜನ್ಮವು ವ್ಯರ್ಥವು! ‖ ೨೭ ‖ ಆದರೆ ದೇವಾ, ದಯಾನಿಧಿಯೇ ಜ್ಞಾನವಂತನೇ ಪುರಾಣಪುರುಷನೇ, ಜಗದ್ವಂದ್ಯನೇ, ವೇದ ಸದೃಶನೇ ನನಗೆ ತಮ್ಮಂಥ ಒಬ್ಬ ಮಗನು ಹುಟ್ಟಬೇಕು ಎಂದು ನನ್ನ ಮನಸ್ಸಿನ ಇಚ್ಛೆಯದೆ, ಆದರಂತೆ ನನಗೆ ವರವನ್ನು

+ ದಿಗಂಬರಾ ದಿಗಂಬರಾ +

+ ಶ್ರೀಪಾದವಲ್ಲಭ ದಿಗಂಬರಾ +

ಕೊಡಿರಿ ಎಂದು ಅಂದಳು. ‖ ೨೮ ‖ ಆಕೆಯ ಮಾತು ಕೇಳಿ ಶ್ರೀ ಗುರು ದತ್ತಾತ್ರೇಯರು ಪ್ರಸನ್ನರಾಗಿ ಮನಸಿನಲ್ಲಿ ಭಕ್ತ ಜನರಿಗೆ ದೀಕ್ಷೆಯನ್ನು ಕೊಡುವ ಮುಂದಿನ ಕಾರ್ಯಾ ಕಾರಣವನ್ನು ತಿಳಿದು ‖ ೨೯ ‖ ಆ ತಪಸ್ವಿಕರು ಆಕೆಗೆ-- ಎಲೌ ಜನನಿಯೇ, ನಿನಗೆ ನನ್ನಂಥ ಜ್ಞಾನವಂತನೂ ಪುರಾಣಪುರುಷನೂ ಜಗದ್ವಂದ್ಯನೂ ವೇದಸದೃಶನೂ ಆದ ಪುತ್ರನೇ ಆಗುವನು, ನೀನು ಏನೂ ಚಿಂತಿಸಬೇಡ ಅವನು ಈ ಕಲಿಯುಗದಲ್ಲಿ ತಪಸ್ವಿಯೂ ಖ್ಯಾತಿವಂತನೂ ಆಗಿ ನಿನ್ನ ವಂಶವನ್ನು ಉದ್ಧಾರ ಮಾಡುವನು. ‖ ೩೦ ‖ ಆತನು ಜ್ಞಾನಮಾರ್ಗದಲ್ಲಿ ಅತ್ಯಂತ ಶ್ರೇಷ್ಠನಾಗುವನು ನೀವು ಅವನ ಮಾತಿನಂತೆ ಮಾತ್ರ ನಡೆಯಬೇಕು ಇಲ್ಲದಿದ್ದರೆ ಅವನು ನಿಮ್ಮ ಹತ್ತಿರ ಇರುವದಿಲ್ಲ ಅವನು ನಿಮ್ಮ ಕಷ್ಟವನ್ನು ಪರಿಹರಿಸುವನು ‖ ೩೧ ‖ ಎಂದು ಅವರು ಆಕೆಗೆ ವರವನ್ನು ಕೊಟ್ಟು ಕೂಡಲೆ ಅಲ್ಲಿಯೇ ಅದೃಶ್ಯರಾದರು. ಆಗ ಆ ಪತಿವ್ರತೆಯು ಮನಸ್ಸಿನಲ್ಲಿ ಆಶ್ಚರ್ಯವನ್ನು ಹೊಂದಿದಳು ‖ ೩೨ ‖ ಹಾಗೆಯೇ ಮನೆಯೊಳಗೆ ಹೋಗಿ, ಒಳ್ಳೇ ಸಂತೋಷದಿಂದ ತನ್ನ ಪತಿಗ ಎಲ್ಲ ಸಂಗತಿಯನ್ನು ಹೇಳಿದಳು ಆಗ ದಂಪತಿಗಳಿಬ್ಬರೂ ಹರ್ಷಬಟ್ಟು— ನಮಗೆ ನಿಶ್ಚಯವಾಗಿ ಶ್ರೀ ಗುರು ದತ್ತಾತ್ರೇಯರೇ ಪುತ್ರರಾಗುವರು ‖ ೩೩ ‖ ಎಲೌ ಪ್ರಿಯೇ ಮಧ್ಯಾಹ್ನ ಕಾಲದಲ್ಲಿ ಅತಿಥಿಗಳು ಬರುವ ಸಮಯದಲ್ಲಿ ಶ್ರೀ ಗುರು ದತ್ತಾತ್ರೇಯರೂ ಬರುವರು. ಆಗ ನೀನು ಅವರಿಗೆ ಭಿಕ್ಷೆಯನ್ನು ಹಾಕಲಿಕ್ಕೇಬೇಕು. ಅವರು ಭಿಕ್ಷೆಯಿಲ್ಲದೆ ಹಾಗೇ ತಿರುಗಿ ಹೋಗಬಾರದು. ‖ ೩೪ ‖ ಆ ದತ್ತಾತ್ರೇಯರು ಮುಖ್ಯವಾಗಿ ವರಹಾಡ ಪ್ರಾಂತದಲ್ಲಿ ಮಾಹೂರ ಎಂಬಲ್ಲಿಯೂ, ಕೊಲ್ಹಾಪೂರ ಕ್ಷೇತ್ರದಲ್ಲಿ ನರಸೋಬ ವಾಡಿಯಲ್ಲಿಯೂ ಪಾಂಚಾಳೇಶ್ವರ ನಗರದಲ್ಲಿಯೂ, ಕುರುಗಡ್ಡಿ ಅಥವಾ ಕುರವಪುರದಲ್ಲಿಯೂ, ಔದುಂಬರದಲ್ಲಿಯೂ, ವಿಶೇಷವಾಗಿ ಗಾಣಗಾಪುರದಲ್ಲಿಯೂ ಬೇರೆ ಬೇರೆ ರೂಪಗಳಿಂದ ಸದಾ ವಾಸವಾಗಿರುತ್ತಾರೆ. ‖ ೩೫ ‖ ಶ್ರೀ ದತ್ತಾತ್ರೇಯರು ನಾನಾವಿಧ ಭಿಕ್ಷುಕ ವೇಷದಿಂದ ಬರುತ್ತಿರುವರು. ಆಗ ನೀನು ನನ್ನ ಅಪ್ಪಣೆಯನ್ನು ಕೇಳದೆ ಅವರಿಗೆ ಭಿಕ್ಷೆಯನ್ನು ಹಾಕು ಎಂದು ಹೇಳಿದನು. ‖ ೩೬ ‖ ಆಗ ಆಕೆಯು-- ಸ್ವಾಮೀ, ಪತಿರಾಯರೇ ತಾವು ಹಿಂದಕ್ಕೆ ಶ್ರಾದ್ಧದ ದಿವಸ ಬ್ರಾಹ್ಮಣ ಭೋಜನವಾಗದ ಪೂರ್ವದಲ್ಲಿ

ಯಾರಿಗೂ ಭಿಕ್ಷಾ ಹಾಕಬಾರದೆಂದು ಹೇಳಿದ್ದಿರಿ. ಈ ದಿವಸ ನಾನು ತಮ್ಮ ಮಾತನ್ನು ಮೀರಿ, ಬ್ರಾಹ್ಮಣ ಭೋಜನವಾಗದ ಪೂರ್ವದಲ್ಲಿ ಶ್ರೀ ಗುರುದತ್ತಾತ್ರೇಯರಿಗೆ ಭಿಕ್ಷೆಯನ್ನು ಹಾಕಿದೆನು ಎಂದು ಅಂದಳು. ॥ ೩೭ ॥ ತನ್ನ ಸತಿಯು ಮಾತು ಕೇಳಿ ಬ್ರಾಹ್ಮಣನು ಸಂತೋಷಬಟ್ಟು— ಎಲೈ ಪತಿವ್ರತೆಯೇ, ಈ ದಿನ ನೀನು ಬಹಳ ಉತ್ತಮ ಕೆಲಸ ಮಾಡಿದಿ, ಈ ದಿನ ನಮ್ಮ ಪಿತೃಗಳು ತೃಪ್ತರಾದರು. ಅದರಿಂದ ನಮಗೆ ಬಹಳ ಲಾಭವಾಯಿತು. ॥ ೩೮ ॥ ಯಾಕಂದರೆ ನಾವು ಪಿತೃಗಳ ಹೆಸರಿನಿಂದ ಕರ್ಮ ಮಾಡಿ ಆ ಅನ್ನವನ್ನು ವಿಷ್ಣುವಿಗೆ ಸಮರ್ಪಿಸಬೇಕು. ಹೀಗಿದ್ದು ವಿಷ್ಣುಮೂರ್ತಿಯಾದ ಆ ದತ್ತಾತ್ರೇಯರು ಸಾಕ್ಷಾತ್ತಾಗಿ ನಮ್ಮ ಮನೆಗೆ ಬಂದು ನಮ್ಮ ಭಿಕ್ಷೆಯನ್ನು ಹಾಕಿಸಿಕೊಂಡರು. ॥ ೩೯ ॥ ತ್ರೈಮೂರ್ತಿಗಳ ಅವತಾರವಾದ ಶ್ರೀ ದತ್ತಾತ್ರೇಯರು ವಿಷ್ಣು ರೂಪದಿಂದ ನಮಗೆ ಪ್ರತ್ಯಕ್ಷವಾಗಿ ದರ್ಶನ ಕೊಟ್ಟಿದ್ದರಿಂದ ನಮ್ಮ ಯಾವತ್ತೂ ಪಿತೃಗಳು ಕೃತಾರ್ಥರಾಗಿ ನಿಶ್ಚಯವಾಗಿ ಸ್ವರ್ಗವಾಸಿಗಳಾದರು. ॥ ೪೦ ॥ ಎಲೈ ಪ್ರಿಯೇ, ಸಾಕ್ಷಾತ್ ವಿಷ್ಣುಸ್ವರೂಪರಾದ ಶ್ರೀ ದತ್ತಾತ್ರೇಯರು ನಿನಗೆ ದರ್ಶನ ಕೊಟ್ಟಿದ್ದರಿಂದ ನಿನ್ನ ತಾಯಿ-ತಂದೆಗಳು ಧನ್ಯರು! ಈಗ ನೀನು ಶ್ರೀ ಗುರುಗಳನ್ನು ಕುರಿತು ಮುಖ್ಯವಾಗಿ ಏನು ಒಂದು ವರವನ್ನು ಕೇಳಿದಿಯಲ್ಲಾ! ಆ ವರದಂತೆ ನಿನಗೆ ಅಂಥ ಪುತ್ರನೇ ಆಗುವನು, ಇದರಲ್ಲಿ ಏನೂ ಸಂಶಯವಿಲ್ಲ, ನೀನು ಮನಸ್ಸಿನಲ್ಲಿ ಏನೂ ಚಿಂತೆ ಮಾಡಬೇಡೆಂದು ಹೇಳಿದನು. ॥ ೪೧ ॥ ಆ ಮೇಲೆ ಆ ದಂಪತಿಗಳು ಹರ್ಷಬಟ್ಟು ಸಂತೋಷದಿಂದ ನಿಶ್ಚಿಂತರಾಗಿರುತ್ತಿರಲು ಕೆಲವು ದಿವಸಗಳ ಮೇಲೆ ಆ ಸುಮತಿಯು ಗರ್ಭಿಣಿಯಾದಳು. ॥ ೪೨ ॥ ಈ ಪ್ರಕಾರ ನವಮಾಸ ತುಂಬಿದ ಕೂಡಲೆ ಆಕೆಯು ಒಂದು ಶುಭ ದಿವಸದಲ್ಲಿ ಪುತ್ರರತ್ನವನ್ನು ಪಡೆದಳು. ಆಗ ಬ್ರಾಹ್ಮಣನು ಸ್ನಾನ ಮಾಡಿ ಅನೇಕ ಬ್ರಾಹ್ಮಣರನ್ನು ಕರೆಯಿಸಿ ಜಾತಕರ್ಮವನ್ನು ಮಾಡಿದನು. ॥ ೪೩ ॥ ಆಮೇಲೆ ಆ ಬ್ರಾಹ್ಮಣರೆಲ್ಲರೂ ಕೂಡಿ ಆ ಕೂಸಿನ ಜಾತಕವನ್ನು ಬರೆದು— ಈ ಬಾಲಕನು ಮಹಾ ತಪಸ್ವಿಯಾಗಿ ಸರ್ವರಿಗೂ ದೀಕ್ಷೆಯನ್ನು ಕೊಡುವಂಥ ಜಗದ್ಗುರುವಾಗಿ ನಿಮ್ಮ ಕುಲವನ್ನು ಉದ್ಧರಿಸುವನು ಎಂದು ಹೇಳಿದರು. ॥ ೪೪ ॥ ಅವರ ಮಾತು ಕೇಳಿ ಆ ದಂಪತಿಗಳು— ಆಹಾ!

ಇವನು ನಮ್ಮ ಕುಲವನ್ನು ಉದ್ಧರಿಸುವನು ಎಂದು ಅತ್ಯಂತ ಆನಂದವನ್ನು ಹೊಂದಿ. ನಮಗೆ ಶ್ರೀ ದತ್ತರು ವರ ಕೊಟ್ಟಿದ್ದರಿಂದ ಇವನಿಗೆ ಅವರ ಹೆಸರನ್ನೇ ಇಡಬೇಕು ಎಂದು ‖ ೪೫ ‖ ೧೨ ನೇ ದಿವಸ ತೊಟ್ಟಿಲಲ್ಲಿಕ್ಕುವ ಸಮಾರಂಭವನ್ನು ಮಾಡಿ ಆ ಕೂಸಿಗೆ ದತ್ತನ ಹೆಸರುಗಳಲ್ಲಿ ಒಂದಾದ "ಶ್ರೀಪಾದ" ಎಂಬ ಹೆಸರನ್ನಿಟ್ಟರು. ಎಲ್ಲೈ ನಾಮಧಾರಕನೇ, ತ್ರೈಮೂರ್ತಿ ಅವತಾರವಾದ ಆ ಬಾಲಕನು ಭಕ್ತಜನೋದ್ಧಾರಕ್ಕಾಗಿಯೇ ಅವರ ಮನೆಯಲ್ಲಿ ಅವತರಿಸಿದನು. ‖ ೪೬ ‖ ಈ ಪ್ರಕಾರ ಆ ಬಾಲಕನು ಅವರ ಮನೆಯಲ್ಲಿ ಬೆಳೆಯುತ್ತ ಬೆಳೆಯುತ್ತ ಏಳು ವರ್ಷದವನಾದನು. ಆ ಕೂಡಲೆ ಆ ಬ್ರಾಹ್ಮಣೋತ್ತಮನು ಆ ಬಾಲಕನ ಮುಂಜಿವಿಯನ್ನು ಮಾಡಿದನು. ‖ ೪೭ ‖ ಮೌಂಜೀ ಬಂಧನವನ್ನು ಮಾಡಿದಕೂಡಲೆ ಆ ಬಾಲಕನು ನಾಲ್ಕು ವೇದಗಳನ್ನೂ ತರ್ಕ ಮೀಮಾಂಸಾದಿ ಶಾಸ್ತ್ರಗಳನ್ನೂ ಅತಿ ವಿಸ್ತಾರವಾಗಿ ಹೇಳಹತ್ತಿದನು. ‖ ೪೮ ‖ ಅದನ್ನು ಆ ಊರ ಯಾವತ್ತೂ ಜನರು ಕೇಳಿ ಆಶ್ಚರ್ಯಬಟ್ಟು— ಈ ಹುಡುಗನು ಮನುಷ್ಯನಲ್ಲ! ಯಾವನೋ ಒಬ್ಬ ಕಾರಣಿಕ ಪುರುಷನು ಮನುಷ್ಯನಾಗಿ ಅವತರಿಸಿರುವನು ಎಂದು ತಮ್ಮತಮ್ಮೊಳಗೆ ಮಾತಾಡುತ್ತಿದ್ದರು. ‖ ೪೯ ‖ ಆ ಮೇಲೆ ಆ ಬ್ರಹ್ಮಚಾರಿಯು ಆಚಾರ, ವ್ಯವಹಾರ, ಪ್ರಾಯಶ್ಚಿತ್ತಾದಿಗಳನ್ನೂ ವೇದ–ವೇದಾಂತಗಳ ಅರ್ಥವನ್ನೂ ಯಾವತ್ತೂ ಬ್ರಾಹ್ಮಣರಿಗೆ ಹೇಳುತ್ತಿದ್ದನು. ‖ ೫೦ ‖ ಈ ಪ್ರಕಾರ ನಡೆಯುತ್ತಿರುವಷ್ಟರಲ್ಲಿ ಆ ಬಾಲಕನಿಗೆ ೧೬ ವರುಷಗಳಾದವು ಆಗ ಆ ತಾಯಿ–ತಂದೆಗಳು ತಮ್ಮ ಮನಸ್ಸಿನಲ್ಲಿ ಮಗನ ವಿವಾಹ ಮಾಡಬೇಕೆಂದು ಅಂದು ‖ ೫೧ ‖ ಅವನನ್ನು ಕರೆದು— ಅಪ್ಪಾ ಮಗನೇ, ಈಗ ನಿನ್ನ ವಿವಾಹ ಮಾಡಬೇಕಾಗಿದೆ ಎಂದು ಅಂದರು ಆ ಶ್ರೀಪಾದ ಬಾಲಕನು— ಎಲ್ಲೈ ಮಾತಾಪಿತೃಗಳೇ, ನಾನು ಭಕ್ತಿಯಿಂದ ನಿಮಗೆ ನನ್ನ ಮನಸ್ಸಿನ ಇಚ್ಛೆಯನ್ನು ಹೇಳುವೆನು ಕೇಳಿರಿ. ‖ ೫೨ ‖ ನೀವು ನನ್ನ ಲಗ್ನ ಮಾಡಬೇಕೆಂದಿದ್ದರೆ ನಾನು ಪ್ರಾಕೃತ ಸ್ತ್ರೀಯನ್ನು ಲಗ್ನ ಮಾಡಿಕೊಳ್ಳುವದಿಲ್ಲ. ವೈರಾಗ್ಯವೆಂಬ ಸ್ತ್ರೀಯನ್ನು ಲಗ್ನ ಮಾಡಿಕೊಳ್ಳುವೆನು. ಆಕೆಯಲ್ಲಿಯೇ ನನ್ನ ಅಪೇಕ್ಷ ಇರುವದು. ‖ ೫೩ ‖ ಆ ಯೋಗ್ಯ ಸ್ತ್ರೀಯನ್ನು ಬಿಟ್ಟು ಲೋಕದೊಳಗಿನ ಉಳಿದ ಸ್ತ್ರೀಯರೆಲ್ಲರೂ ನನಗೆ ತಾಯಿಯ ಸಮಾನರು. ‖ ೫೪ ‖

ನಾನು ತಪಸ್ವಿಯೂ ಬ್ರಹ್ಮಚಾರಿಯೂ ಆದ್ದರಿಂದ ನನಗೆ ಯೋಗವೆಂಬ ಸ್ತ್ರೀಯ ಹೊರತಾಗಿ ನನಗೆ ಬೇರೆ ಯಾವ ಸ್ತ್ರೀಯೂ ಬೇಡ, ಇದು ನಿರ್ಧಾರದ ಮಾತು. ನನ್ನ ಹೆಸರು 'ಶ್ರೀವಲ್ಲಭ' ಎಂದಿರುತ್ತದೆ. ಹೀಗೆ ತ್ರೈಮೂರ್ತಿಗೆ 'ಶ್ರೀಪಾದ-ಶ್ರೀವಲ್ಲಭ' ಎಂಬ ನಾಮ ಬಂದು, ತಂದೆಗೆ ಇನ್ನು ನಾನು ಉತ್ತರದೇಶಕ್ಕೆ ಹೋಗುತ್ತೇನೆಂದು ಹೇಳಿದರು. ॥ ೫೬ ॥ ಈ ಪ್ರಕಾರವಾದ ಮಗನ ಮಾತು ಕೇಳಿ ಆ ದಂಪತಿಗಳು ಹಿಂದಿನ ಸಂಗತಿಯನ್ನು ನೆನಿಸಿ— ಪೂರ್ವದಲ್ಲಿ ಶ್ರೀ ದತ್ತಾತ್ರೇಯರು ಭಿಕ್ಷೆಗೆ ಬಂದಾಗ ಹೇಳಿದ ಮಾತು ಈಗ ಸತ್ಯವಾಯಿತು. ॥ ೫೭ ॥ ಈಗ ನಾವು ಈತನ ಮಾತು ಕೇಳದಿದ್ದರೆ ನಮಗೆ ತೀವ್ರವಾಗಿ ವಿಘ್ನ ಬರುವದು ಎಂದು ವಿಚಾರ ಮಾಡಿ ॥ ೫೮ ॥ ಇವನಿಗೆ ನಮ್ಮ ಪುತ್ರನೆಂದೆನಬಾರದು ಇವನು ಅವತಾರಿಕ ತಪಸ್ವಿ ಇರುತ್ತಾನೆ. ಈತನ ಮನಸ್ಸಿನಂತೆ ನಾವು ಮಾಡಬೇಕು. ॥ ೫೯ ॥ ಎಂದು ದಂಪತಿಗಳು ತಮ್ಮ ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ಮಗನ ಎದುರಿಗೆ ನಿಂತು ಎಲೈ ಪುತ್ರನೇ, ನೀನು ಮುಪ್ಪಿನಕಾಲದಲ್ಲಿ ನಮ್ಮನ್ನು ಸಂರಕ್ಷಿಸುವಿಯೆಂದು ನಾವು ಆಶೆ ಮಾಡಿಕೊಂಡಿದ್ದೆವು ॥ ೬೦ ॥ ಆದರೆ ಈಗ ನೀನು ವೈರಾಗ್ಯವನ್ನು ಹೊಂದಬೇಕೆನ್ನುತ್ತೀ ಎಂದು ಆ ತಾಯಿಯು ಮಗನಮೇಲಿನ ಪ್ರೀತಿಯಿಂದ ಮನಸ್ಸಿನಲ್ಲಿ ಬಹಳ ಚಿಂತೆಪಟ್ಟು ದುಃಖದಿಂದ ಕಣ್ಣೀರು ಸುರಿಸುತ್ತ ಮೂರ್ಛೆಬಂದು ಬಿದ್ದಳು. ॥ ೬೧ ॥ ಆಗ ಆ ಪರಮಪುರುಷನು ತನ್ನ ತಾಯಿಯ ದುಃಖವನ್ನು ನೋಡಿ, ಆಕೆಯನ್ನು ಸಮಾಧಾನಪಡಿಸಿ ತನ್ನ ಕರ ಕಮಲಗಳಿಂದ ಆಕೆಯನ್ನು ಎತ್ತಿ ಕೂಡ್ರಿಸಿ, ಕಣ್ಣೀರನ್ನು ಒರಿಸಿ ॥ ೬೨ ॥— ಎಲೌ ಜನನಿಯೇ ನೀನು ಏನೂ ಚಿಂತೆಮಾಡಬೇಡ ಈಗ ನೀನು ಮನಸ್ಸಿನಲ್ಲಿ ಏನೇನು ಇಚ್ಛಿಸುತ್ತಿಯೋ ಅದೆಲ್ಲವನ್ನೂ ನಾನು ಕೊಡುತ್ತೇನೆ ಇನ್ನು ನೀನು ನಿನ್ನ ಮನಸ್ಸು ಗಟ್ಟಿಮಾಡಿಕೊಂಡು ಒಳ್ಳೇ ಆನಂದದಿಂದಿರು ಎಂದು ಹೇಳಿ ಸಂತೈಸಿದನು ॥ ೬೩ ॥ ಆಗ ಆಕೆಯು— ಅಪ್ಪಾ ಮಗನೇ ನೀನು ನಮ್ಮ ದೈನ್ಯವನ್ನೆಲ್ಲ ಕಳೆದು, ಮುಪ್ಪಿನಕಾಲದಲ್ಲಿ ನಮ್ಮನ್ನು ರಕ್ಷಿಸುವಿಯೆಂದು ನಾನು ನನಗೆ ಹಿಂದೆ ಆದ ಎಲ್ಲ ದುಃಖವನ್ನು ಮರೆತಿದ್ದೆನು. ॥ ೬೪ ॥ ಈಗ ನನಗೆ ನೀನಲ್ಲದೆ ಒಬ್ಬನು ಹೆಳವನೂ, ಒಬ್ಬನು ಕುರುಡನೂ ಆದ

ಇಬ್ಬರು ಮಕ್ಕಳಿರುವರು. ಅವರಲ್ಲಿ ನಮ್ಮನ್ನು ಪೋಷಿಸಿ ರಕ್ಷಿಸುವವರು ಯಾರು ಹೇಳು ? ಎಂದಳು. || ೬೫ || ಈ ಪ್ರಕಾರ ತಾಯಿ ಆಡಿದ ಮಾತು ಕೇಳಿ ಶ್ರೀಪಾದ ಶ್ರೀವಲ್ಲಭರು ಆ ಹೆಳವನೂ ಕುರುಡನೂ ಆದ ಅಣ್ಣಂದಿರನ್ನು ಅಮೃತ ದೃಷ್ಟಿಯಿಂದ ನೋಡಿದರು. ಕೂಡಲೆ ಆ ಹೆಳವನಿಗೆ ಕಾಲುಗಳೂ, ಆ ಕುರುಡನಿಗೆ ಕಣ್ಣುಗಳೂ ಬಂದು ಅವರು ಧಷ್ಟಪುಷ್ಟರಾಗಿ || ೬೬ || ಕೂಡಲೆ ವ್ಯಾಕರಣ-ವೇದ-ಶಾಸ್ತ್ರ ಮೊದಲಾದವುಗಳನ್ನು ಹೇಳುತ್ತ ನಾವು ಕೃತಾರ್ಥರಾದೆವೆಂದು ಅನ್ನುತ್ತ ಅವರು ಆ ಶ್ರೀಪಾದರ ಚರಣಗಳಿಗೆ ನಮಸ್ಕರಿಸಿದರು. || ೬೭ || ಲೋಹಕ್ಕೆ ಚಿಂತಾಮಣಿಯು ಸ್ಪರ್ಶವಾದಕೂಡಲೆ ಅದು ಸುವರ್ಣವಾಗುವಂತೆ ಮಹಾತ್ಮರಾದ ಶ್ರೀಪಾದರ ಕೃಪಾದೃಷ್ಟಿ ಯಿಂದ ಆ ಹೆಳವ ಮತ್ತು ಕುರುಡರು ಸುದೇಹ ಉಳ್ಳವರಾಗಿ ಯೋಗ್ಯ ಮನುಷ್ಯರಾದರು || ೬೮ || ಆಗ ಶ್ರೀಪಾದರು ಅವರಿಗೆ ಆಶ್ವಾಸವನ್ನು ಕೊಟ್ಟು ಕೂಡಲೆ— ವರ ಕೊಟ್ಟರು. ಎಲೈ ಅಣ್ಣಂದಿರಾ ನೀವು ಯಾವಾಗಲೂ ಸಂಪತ್ತಿನಿಂದ ಕೂಡಿದವರಾಗಿ, ಪುತ್ರ-ಪೌತ್ರರನ್ನು ಹೊಂದಿ ಆನಂದದಿಂದಿರ್ರಿ ಎಂದು ವರವನ್ನು ಕೊಟ್ಟು- ನೀವು ತಂದೆ-ತಾಯಿಗಳನ್ನು ಸೇವಿಸುತ್ತ ಇದ್ದು, ಮಹಾ ಜ್ಞಾನಿಗಳಾಗಿ ಇಹಲೋಕದಲ್ಲಿ ಅತ್ಯಂತ ಸುಖವನ್ನು ಹೊಂದಿ, ಅಂತ್ಯದಲ್ಲಿ ನಿಶ್ಚಯವಾಗಿ ಮೋಕ್ಷವನ್ನು ಪಡೆಯುವಿರಿ. || ೭೦ || ಎಂದು ಅವರಿಗೆ ಹೇಳಿ, ಆಮೇಲೆ ತಾಯಿಯನ್ನು ಸಮಾಧಾನ ಪಡಿಸಿ— ಎಲೌ ಮಾತೇ ನೀನು ಈ ಇಬ್ಬರು ಪುತ್ರರನ್ನು ನೋಡುತ್ತ ಇದ್ದು ಸುಖವಾಗಿರುನಿ || ೭೧ || ಈ ಇಬ್ಬರೂ ಮಕ್ಕಳು ಶತಾಯುಷ್ಯ ಉಳ್ಳವರೆಂದು ನಿಶ್ಚಯವಾಗಿ ತಿಳಿ. ಇವರಿಗ ಹೆಣ್ಣು-ಗಂಡು ಮಕ್ಕಳು ಆಗುವರು ನೀನು ಪುತ್ರರನ್ನೂ ಪೌತ್ರರನ್ನೂ ನೋಡಿಕೊಂಡು ಆನಂದದಿಂದಿರು ||೭೨|| ಇವರ ಮನೆಯಲ್ಲಿ ಅಖಂಡ ಐಶ್ವರ್ಯವು ವಂಶ ಪರಂಪರೆಯಾಗಿರುವದು ಇವರ ವಂಶದವರು ಚರಾಚರಗಳಲ್ಲಿ ಕೀರ್ತಿವಂತರೂ ವೇದಶಾಸ್ತ್ರ ಸಂಪನ್ನರೂ ಆಗುವರು. || ೭೩ || ಹೇ ಜನನಿಯೇ ಈಗ ನೀನು ನನ್ನ ಮಾತಿಗೆ ಮಾತ್ರ ಇಲ್ಲೆನ್ನದೆ ಈಗ ನನಗೆ ತೀವ್ರವಾಗಿ ಅಪ್ಪಣೆಯನ್ನು ಕೊಡು. ಯಾಕಂದರೆ ಈಗ ನಾನು ಸಾಧುಗಳಾದ ಭಕ್ತರಿಗೆ ದೀಕ್ಷೆಯನ್ನು ಕೊಡುವದರ ಸಲುವಾಗಿ ಉತ್ತರದಿಕ್ಕಿಗೆ ಹೋಗಬೇಕಾಗಿದೆ. || ೭೪ ||

ಎಂದು ಅಂದು ಶ್ರೀಪಾದ ಶ್ರೀವಲ್ಲಭರು ತಂದೆ-ತಾಯಿಗಳಿಂದ ಅಪ್ಪಣೆಯನ್ನು ಪಡೆದು ಕೂಡಲೆ ಅಲ್ಲಿಯೇ ಅದೃಶ್ಯರಾಗಿ ಕೂಡಲೆ ಕಾಶಿಗೆ ಹೋಗಿ ಅಲ್ಲಿ ಕೆಲವು ದಿವಸ ಗುಪ್ತವಾಗಿದ್ದರು. || ೭೫ || ಆ ಮೇಲೆ ಅಲ್ಲಿಂದ ಹೊರಟು ಬದರಿಕಾಶ್ರಮಕ್ಕೆ ಹೋಗಿ, ಅಲ್ಲಿ ತಮ್ಮ ಬದರಿನಾರಾಯಣನ ದರ್ಶನ ಮಾಡಿಕೊಂಡು ಕಾರ್ಯಾಕಾರಣದ್ದೆಶಿಯಿಂದ ಈ ಮನುಷ್ಯ ದೇಹವನ್ನು ಧರಿಸಿದ ಶ್ರೀಪಾದ ಶ್ರೀವಲ್ಲಭರು || ೭೬ || ಭಕ್ತ ಜನರಿಗೆ ದೀಕ್ಷೆ ಕೊಡುವದಕ್ಕಾಗಿ ಮನೋವೇಗದಿಂದ ಮಾರ್ಗ ಕ್ರಮಣ ಮಾಡುತ್ತ, ಹಾದಿಯಲ್ಲಿ ಹತ್ತುವ ಅನೇಕ ತೀರ್ಥಯಾತ್ರೆ ಮಾಡುತ್ತ ಗೋಕರ್ಣ ತೀರ್ಥಕ್ಕೆ ಬಂದರು ಎಂದು ಸಿದ್ಧರು ಹೇಳಿದರು. || ೭೭ || ಅವರ ಮಾತು ಕೇಳಿ ನಾಮಧಾರಕನು, ಶ್ರೀಗುರುಗಳ ಮುಂದಿನ ಚರಿತ್ರೆಯನ್ನು ಹೇಳಲಿಕ್ಕೆ ಅವರಿಗೆ ವಿನಂತೀಮಾಡಿಕೊಂಡನು. ನೀವು ಮುಂದಿನ ಆ ಚರಿತ್ರೆಯನ್ನು ಕೇಳಿರಿ ಎಂದು ಸರಸ್ವತಿ ಗಂಗಾಧರನು ಶ್ರೋತೃಗಳಿಗೆ ಹೇಳಿದನು. || ೭೮ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ ಶ್ರೀ ದತ್ತಾತ್ರೇಯ ಶ್ರೀಪಾದ ಶ್ರೀ ವಲ್ಲಭಾವತಾರ ಕಥನಂನಾಮ ಪಂಚಮೋಧ್ಯಾಯಃ || ೫ ||

—. ಶ್ರೀ ಗುರು ದತ್ತಾತ್ರೇಯ ಶ್ರೀಪಾದ ಶ್ರೀ ವಲ್ಲಭಾರ್ಪಣಮಸ್ತು .—

**— ೫ನೇ ಅಧ್ಯಾಯ ಸಮಾಪ್ತ —**

---

# ೬ನೆಯ ಅಧ್ಯಾಯ



## ( ಗೋಕರ್ಣ ಕ್ಷೇತ್ರದಲ್ಲಿ ಮಹಾಬಲೇಶ್ವರ ಲಿಂಗಸ್ಥಾಪನೆಯೊದದ್ದು )

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕರು ಸಿದ್ಧರಿಗೆ ಕೈಮುಗಿದು— ಸ್ವಾಮೀ, ಸಿದ್ಧಮುನಿಗಳೇ, ನೀವು ಕತ್ತಲೆಯನ್ನು ಕಳೆಯುವಂಥ ಜ್ಯೋತಿಸ್ವರೂಪರಾಗಿದ್ದು, ಗುರುಪೀರ ಪರಂಪರೆಯ ಆದ್ಯಂತವನ್ನು ನನಗೆ ಪ್ರಕಾಶವಾಗಿ ತಿಳಿಸಿದಿರಿ ॥ ೧ ॥ ದತ್ತಾತ್ರೇಯ ಅವತಾರವಾದ ಶ್ರೀಪಾದವಲ್ಲಭರು ತಾವು ಸ್ವತಃ ತ್ರಿಮೂರ್ತಿಸ್ವರೂಪರಾಗಿದ್ದರೂ (ಅವತಾರ) ಸಹ ತೀರ್ಥಯಾತ್ರೆಯನ್ನೇಕೆ ಮಾಡಿದರು ? ಆ ಗೋಕರ್ಣದಲ್ಲಿ ಏನು ವಿಶೇಷ ಇರುತ್ತದೆಂದು ಅಲ್ಲಿಗೆ ಹೋದರು ? ॥ ೨ ॥ ಮತ್ತು ಈ ಭೂಮಿಯಲ್ಲಿರುವ ಅನೇಕ ಅಪರಂಪಾರವಾದ ತೀರ್ಥಗಳನ್ನು ಬಿಟ್ಟು, ದತ್ತಾತ್ರೇಯ ಅವತಾರವಾದ ಶ್ರೀಪಾದ ಶ್ರೀವಲ್ಲಭರು ಒಳ್ಳೇ ಪ್ರೀತಿಯಿಂದ ಗೋಕರ್ಣಕ್ಕೆ ಯಾಕೆ ಹೋದರು ? ಎಂದು ಕೇಳಿದನು. ॥ ೩ ॥ ಆಗ ಸಿದ್ಧರು— ಎಲೈ ಶಿಷ್ಯ ಶಿಖಾಮಣಿಯಾದ ನಾಮಧಾರಕನೇ, ನೀನು ಕೇಳಿದ ಪ್ರಶ್ನೆಯಿಂದ ನನಗೆ ಬಹಳ ಸಂತೋಷವಾಯಿತು. ನಿನಗೆ ಗುರುವಿನ ಚರಿತ್ರೆಯನ್ನು ಹೇಳುವೆನು ಕೇಳು ಎಂದರು. ॥ ೪ ॥ ಆಗ ನಾಮಧಾರಕನು— ಸ್ವಾಮೀ, ತಾವು ನನ್ನ ಮೇಲೆ ದಯಮಾಡಿ ವಿಸ್ತರವಾಗಿ ಹೇಳಬೇಕೆಂದು ಒಳ್ಳೇ ಪ್ರೀತಿಯಿಂದ ಅವರ ಚರಣಕ್ಕೆ ನಮಸ್ಕರಿಸಿದನು. ॥ ೫ ॥ ಆ ನಾಮಧಾರಕನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಹತ್ತಿದರು. ॥ ೬ ॥ ಎಲೈ ಶಿಷ್ಯನೇ, ನಿನಗೆ ನಾನು ಗುರುಚರಿತ್ರೆಯನ್ನು ಹೇಳುವದರಿಂದ ನನ್ನ ಮನಸ್ಸಿಗೆ ಲಾಭವಾಗುತ್ತದೆ. ಮತ್ತು ಶ್ರೀಗುರುಚರಿತ್ರೆಯನ್ನು ಹೇಳಲಿಕ್ಕೆ ನನ್ನ ಮನಸ್ಸು ಸಹ ಅತ್ಯಂತ ಉತ್ಕಂಠವಾಗಿರುತ್ತದೆ. ॥ ೭ ॥ ಎಲೈ ಶಿಷ್ಯನೇ ನೀನು— ಶ್ರೀಪಾದ ಶ್ರೀವಲ್ಲಭರು

ತ್ರೈಮೂರ್ತಿ ಅವತಾರವಾಗಿದ್ದು ಅವರು ಅನೇಕ ತೀರ್ಥಗಳನ್ನು ಯಾಕೆ ತಿರಗುತ್ತಾರೆ? ಮತ್ತು ವಿಶೇಷವಾಗಿ ಗೋಕರ್ಣಕ್ಕೇ ಯಾಕೆ ಹೋದರು ಎಂದು ಕೇಳುತ್ತೀ, ಅದನ್ನು ಹೇಳುವೆನು ಕೇಳು. ‖ ೮ ‖ ದತ್ತಾತ್ರೇಯರ ಅವತಾರವಾದಂಥ ಅವರು ತಮ್ಮ ನಿಜಭಕ್ತರ ಹಿತಕ್ಕಾಗಿ ಅವರಿಗೆ ದೀಕ್ಷೆಯನ್ನು ಕೊಟ್ಟು ಜ್ಞಾನೋಪದೇಶವನ್ನು ಮಾಡುವದರ ಸಲುವಾಗಿ ತೀರ್ಥಯಾತ್ರಾ ಮಾಡುತ್ತಿರುವದಕ್ಕೆ ಕಾರಣವಾಗಿತ್ತು. ‖ ೯ ‖ ಮತ್ತು ಆ ಗೋಕರ್ಣ ಕ್ಷೇತ್ರವು ತ್ರೈಮೂರ್ತಿಗಳ ವಸತಿಸ್ಥಾನವೂ ಅದರಲ್ಲಿ ವಿಶೇಷವಾಗಿ ಶ್ರೀಶಂಕರನ ಸ್ಥಾನವೂ ಹಾಗು ಉಳಿದ ಅನೇಕ ತೀರ್ಥಗಳಿಗಿಂತಲೂ ಅದು ತಮ್ಮ ವಾಸಕ್ಕೆ ಯೋಗ್ಯ ಸ್ಥಾನವೂ ಎಂದು ತಿಳಿದು ಅಲ್ಲಿಗೆ ಹೋದರು. ‖ ೧೦ ‖ ಎಲೈ ಶಿಷ್ಯಾ ನಾಮಧಾರಕಾ, ಆ ಗೋಕರ್ಣದ ಮಹಾತ್ಮೆಯು ಹೇಳಲಿಕ್ಕೆ ಅನುಪಮ್ಯವಾಗಿರುವದು, ನೀನು ಏಕ ಚಿತ್ತದಿಂದ ಕೇಳು. ‖ ೧೧ ‖ ಆ ಸ್ಥಾನದಲ್ಲಿ ಪೂರ್ವ ಕಾಲದಲ್ಲಿ ಯಾರು ವರವನ್ನು ಪಡೆದಿರುತ್ತಾರೆಂಬ ಆದರ ಆದ್ಯಂತ ಚರಿತ್ರೆಯನ್ನು ನಿನಗೆ ವಿಸ್ತಾರವಾಗಿ ಹೇಳುವೆನು, ಅದು ಕೇಳಲಿಕ್ಕೆ ಅಪೂರ್ವವಾಗಿರುವದು. ‖ ೧೨ ‖ ಮತ್ತು ಆ ಗೋಕರ್ಣ ಕ್ಷೇತ್ರದಲ್ಲಿ ಗಣಪತಿಯಿಂದ ಸ್ಥಾಪಿಸಲ್ಪಟ್ಟ "ಮಹಾಬಳೇಶ್ವರ" ಎಂಬ ಒಂದು ಸ್ವಯಂಭೂ ಶಿವಲಿಂಗವಿದೆ. ಆದರ ಆಖ್ಯಾನವು ವಿಶೇಷವಾಗಿರುವದು ಕೇಳಿರಿ ಎಂದರು. ‖ ೧೩ ‖ ಅದನ್ನು ಕೇಳಿ ನಾಮ-ಧಾರಕನು— ಸ್ವಾಮೀ, ಸಿದ್ಧಮುನಿಗಳೇ, ನೀವು ಗೋಕರ್ಣ ತೀರ್ಥದ ಮಹಿಮೆಯನ್ನು ಒಳ್ಳೇ ವಿಶೇಷವಾಗಿ ವರ್ಣಿಸುತ್ತೀರಿ. ಅಲ್ಲಿ ಆ ಗಣೇಶನು ಶಿವಲಿಂಗವನ್ನು ಸ್ಥಾಪಿಸಿದ ಸಂಗತಿಯನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದು ವಿನಂತೀ ಮಾಡಿಕೊಂಡನು. ‖ ೧೪ ‖ ಅವನ ವಿನಂತಿಗೆ ಸಿದ್ಧರು ಬಹು ಸಂತೋಷಪಟ್ಟು— ಆ ಮಹಾಬಳೇಶ್ವರಲಿಂಗದ ಚರಿತ್ರೆಯನ್ನು ಸಾದ್ಯಂತವಾಗಿ ಹೇಳಹತ್ತಿದರು ‖ ೧೫ ‖

ಎಲೈ ನಾಮಧಾರಕನೇ, ಪುಲಸ್ತ್ಯ ಋಷಿಯ ಹೆಂಡತಿಯಾದ ಕೈಕಸೀ ಎಂಬವಳು ಕೇವಲ ಈಶ್ವರಭಕ್ತ ಳಾಗಿದ್ದು, ಅತಿ ಪ್ರೀತಿಯಿಂದ ಯಾವಾಗಲೂ ಶಿವಪೂಜೆಯನ್ನು ಮಾಡುತ್ತಿದ್ದಳು. ‖ ೧೬ ‖ ಆಕೆಯು ನಿತ್ಯ ಶಿವಪೂಜೆ ಮಾಡುತ್ತಿದ್ದಳು. ಪೂಜಾ ಮಾಡದೆ, ಹಾಗೇ ಎಂದೂ ಊಟ ಮಾಡುತ್ತಿದ್ದಿಲ್ಲ. ಈ ಪ್ರಕಾರ ನಡೆ

ದಿರಲು ಒಂದು ದಿವಸ ಇಂದ್ರನು ಬಂದು ಮಾಯೆಯಿಂದ ಆಕೆಯು ಪೂಜೆ ಮಾಡುವ ಶಿವಲಿಂಗವನ್ನು ಒಯ್ದು ಬಿಟ್ಟನು. ಆದ್ದರಿಂದ ಆ ದಿವಸ ಆಕೆಯ ಪೂಜೆಗೆ ಆ ಲಿಂಗವು ದೊರೆಯಲಿಲ್ಲ. ‖ ೧೭ ‖ ವ್ರತಭಂಗವಾಗುವದೆಂದು ತಿಳಿದು ಆಕೆಯು ಮಣ್ಣಿನಿಂದ ಒಂದು ಶಿವಲಿಂಗವನ್ನು ಮಾಡಿ, ಅದನ್ನೇ ಒಳ್ಳೇ ಭಕ್ತಿಯಿಂದಲೂ ಸಂತೋಷದಿಂದಲೂ ಪೂಜಿಸುತ್ತಿದ್ದಳು. ‖ ೧೮ ‖ ಆಗ ಆಕೆಯ ಹಿರಿಯ ಮಗನೂ ಅತಿ ಕ್ರೂರನೂ ಆದ ದಶಕಂಠನಾದ ರಾವಣನು ತಾಯಿಯ ದರ್ಶನಕ್ಕಾಗಿ ಅತಿ ತೀವ್ರವಾಗಿ ಅಲ್ಲಿಗೆ ಬಂದು ‖ ೧೯ ‖ ತಾಯಿಗೆ ನಮಸ್ಕಾರ ಮಾಡಿ— ಅವ್ವಾ, ಇದೇನು ಪೂಜಾ ಮಾಡುತ್ತೀ ? ಎಂದು ಕೇಳಿದನು. ಆಗ ಆಕೆಯು— ಎಲೈ ಮಗನೇ, ಈಗ ನಾನು ಈ ಮಣ್ಣಿನ ಲಿಂಗವನ್ನು ಪೂಜಿಸಿದೆನು ಎಂದು ಎಲ್ಲ ಸಂಗತಿಯನ್ನು ಹೇಳಿದಳು. ‖ ೨೦ ‖ ಆಗ ರಾವಣನು— ಅವ್ವಾ, ನೀನು ನನ್ನ ತಾಯಿ ಎಂದೆನ್ನಿಸಿಕೊಳುತ್ತೀ. ಹೀಗಿದ್ದು ಈಗ ನೀವು ಮಣ್ಣಿನ ಲಿಂಗವನ್ನು ಪೂಜಿಸುತ್ತೀ ಅಂದಮೇಲೆ ನಾನೇ ದುರ್ದೈವಿಯು ‖ ೨೧ ‖ ಅವ್ವಾ, ಲಿಂಗಪೂಜಾ ಮಾಡುವದರಿಂದ ಏನು ಫಲ ಬರುವದು ? ಎಂದು ಕೇಳಿದನು. ಆಗ ಆ ಕೈಕಸೆಯು— ಅಪ್ಪಾ ಮಗನೇ, ಶಿವಲಿಂಗವನ್ನು ಭಕ್ತಿಯಿಂದ ವಿಧಿಪ್ರಕಾರ ಪೂಜಿಸುವದರಿಂದ ಕೈಲಾಸಪದ ಪ್ರಾಪ್ತವಾಗುವದು ಎಂದು ಹೇಳಿದಳು ‖ ೨೧ ‖ ಆಗ ಅವನು— ಅವ್ವಾ, ನಾನು ನಿನ್ನ ಪೂಜಯ ದೆಶೆಯಿಂದ ನಿಶ್ಚಯವಾಗಿ ಶ್ರೀಶಂಕರನ ಸಹಿತವಾದ ಕೈಲಾಸವನ್ನೇ ತೀವ್ರವಾಗಿ ನಿನ್ನ ಹತ್ತರ ತರುತ್ತೇನೆ. ಆಮೇಲೆ ನೀನು ಸ್ವಸ್ಥಚಿತ್ತದಿಂದ ನಿತ್ಯ ಪ್ರತ್ಯಕ್ಷ ಶಿವನನ್ನೇ ಪೂಜಾ ಮಾಡು ಈ ಮಣ್ಣಿನ ಲಿಂಗವನ್ನು ತಕ್ಕೊಂಡು ಏನು ಮಾಡುತ್ತೀ ? ಈಗ ಇದನ್ನು ಪೂಜೆ ಮಾಡುತ್ತ ಸುಮ್ಮನೆ ಯಾಕೆ ಕಷ್ಟಪಡುತ್ತೀ ? ಎಂದು ಹೇಳಿ ತಾಯಿಯ ಎದುರಿಗೆ ಪಣಮಾಡಿ ಆ ರಾವಣನು ಮನೋವೇಗದಿಂದ ತೀವ್ರವಾಗಿ ಕೈಲಾಸದ ಕಡೆಗೆ ಹೊರಟನು. ‖ ೨೩-೨೪-೨೫ ‖ ಆಮೇಲೆ ತೀವ್ರವಾಗಿ ಕೈಲಾಸಕ್ಕೆ ಹೋಗಿ ಶುಭ್ರ ಹಾಗೂ ರಮ್ಯವಾದ ಆ ಕೈಲಾಸ ಪರ್ವತವನ್ನು ತನ್ನ ಬಲವಾದ ಇಪ್ಪತ್ತೂ ಕೈಗಳಿಂದ ಹಿಡಿದು ಒಳ್ಳೇ ಸಿಟ್ಟಿನಿಂದ ಅಗಳಾಡಿಸ ಹತ್ತಿದನು. ‖ ೨೬ ‖ ಆಗ ಆ ಕೈಲಾಸ ಪಟ್ಟಣವು ಅಗಳಾಡಹತ್ತಿತು. ಆಗ ಆ ರಾವಣನು— ತನ್ನ ಹತ್ತೂ

ತಲೆಗಳನ್ನು ಹಚ್ಚಿ ಇದನ್ನು ಎತ್ತುತ್ತೇನೆಂದು ಉಲ್ಲಾಸದಿಂದ ಅಂದನು. || ೨೬ || ಮೊಳಕಾಲ ಮಂಡೆಗಳನ್ನೂರಿ ಕುಳಿತು, ತನ್ನ ಹತ್ತೂ ತಲೆಗಳನ್ನು ಆ ಪರ್ವತಕ್ಕೆ ಆನಿಸಿ ತೊಡೆಯಮೇಲೆ ತನ್ನ ಇಪ್ಪತ್ತೂ ಕೈಗಳನ್ನೂರಿ ಒಳ್ಳೇ ಕಸುವಿನಿಂದ ಅದನ್ನು ಎತ್ತಿದನು. ಅದರಿಂದ ಸಪ್ತಪಾತಾಳಗಳು ಅಲ್ಲಾಡಹತ್ತಿದವು. || ೨೭-೨೮ || ಆಗ ಮಹಾ-ಶೇಷನು ತನ್ನ ತಲೆಯನ್ನು ಕೊಡಹಿದನು. ಆದಿಕೂರ್ಮನು ಭಯದಿಂದ ನಡುಗಿದನು. ಅಮರಪುರವು ನಡುಗ ಹತ್ತಿತು. ಅದರಿಂದ ದೇವತೆಗಳು ಹೆದರಿದರು. || ೨೯ || ಸ್ವರ್ಗಲೋಕವು ನಡುಗಿತು. ಸತ್ಯ-ವೈಕುಂಠ ಲೋಕಗಳ ಜನರು–ಪ್ರಳಯ ಕಾಲವು ಬಂತೆಂದು ಗಡಬಿಡಿಯಿಂದ ಒಬ್ಬರಮೇಲೊಬ್ಬರು ಬೀಳುತ್ತಿದ್ದರು. || ೩೦ || ಆಗ ಕೈಲಾಸದಲ್ಲಿರುವ ದೇವತೆಗಳು ಅಂಜಿ ನಡುಗಹತ್ತಿದರು ಆಗ ಪಾರ್ವತಿಯು ಭಯಪಟ್ಟು ಶಿವನ ಹತ್ತರ ಓಡಿ ಹೋಗಿ, || ೩೧ || ಕೈಮುಗಿದು ವಿನಯದಿಂದ— ಸ್ವಾಮೀ, ಈ ಕೈಲಾಸಕ್ಕೆ ಏನಾಯಿತು ? ಇದು ಒಳ್ಳೇ ಭರದಿಂದ ಅಲ್ಲಾಡುತ್ತದೆ ! ಇದು ನಿಶ್ಚಯವಾಗಿ ಬೀಳುತ್ತದೆ. || ೩೨ || ನಗರದಲ್ಲಿಯ ಜನರೆಲ್ಲರೂ ಗೋಳಾಡುವರು. ಇಷ್ಟಾದರೂ ನೀವು ಸುಮ್ಮನೆ ಕುಳಿತಿರುವಿರಲ್ಲಾ ? ಇದಕ್ಕೆ ಬೇಗನೆ ಏನಾದರೂ ಪ್ರತೀಕಾರ ಮಾಡಿರಿ ಎಂದು ಪತಿಯ ಪಾದಕ್ಕೆ ನಮಸ್ಕರಿಸಿದಳು. || ೩೩ || ಆಗ ಶ್ರೀಶಂಕರನು— ಪ್ರಿಯೇ, ಪಾರ್ವತೀ, ನೀನು ಏನೂ ಚಿಂತೆ ಮಾಡಬೇಡ. ನನ್ನ ಪರಮ ಭಕ್ತನಾದ ರಾವಣನು ಭಕ್ತಿಯಿಂದ ಆಟವಾಡುತ್ತಾನೆ ಎಂದನು. || ೩೪ || ಆ ಮಾತು ಕೇಳಿ ಪಾರ್ವತಿಯು ಪತಿಗೆ ನಮಸ್ಕಾರ ಮಾಡಿ ವಿನಯದಿಂದ— ಸ್ವಾಮೀ, ಶೂಲಪಾಣಿಯೇ, ಯಾಪತ್ತು ದೇವತೆಗಳನ್ನು ತೀವ್ರವಾಗಿ ಸಲುಹಿರಿ ಸಲುಹಿರಿ ಎಂದಳು. || ೩೫ || ಈ ಪ್ರಕಾರ ಪಾರ್ವತಿಯ ವಿನಂತಿಯನ್ನು ಕೇಳಿ ಶ್ರೀಶಂಕರನು ತನ್ನ ಎಡಗೈಯಿಂದ ಆ ಕೈಲಾಸಪರ್ವತವನ್ನು ಮೆಲ್ಲಗೆ ಒತ್ತಿದನು. ಆಗ ಆ ಪರ್ವತದ ಬುಡದಲ್ಲಿ ರಾವಣನ ಹತ್ತೂ ಶಿರಗಳೂ ಇಪ್ಪತ್ತು ಕೈಗಳೂ ಸಿಕ್ಕವು. || ೩೬ || ಆಗ ರಾವಣನು ಮನಸ್ಸಿನಲ್ಲಿ ಬಹಳವಾಗಿ ಚಿಂತಿಸಿ, ಶಿವ ಶಿವ ಎಂದೆನ್ನುತ್ತ ಸ್ತೋತ್ರ ಮಾಡುತ್ತ ಶರಣಾಗತನನ್ನು ರಕ್ಷಿಸು ಎಂದು || ೩೭ || ಶ್ರೀಶಂಕರನನ್ನು ಧ್ಯಾನಿಸುತ್ತ— ಎಲೈ ಪಿನಾಕಪಾಣಿಯೇ, ಜಗತ್ತನ್ನು ರಕ್ಷಿಸುವ ಶಿರೋ

ಮಣಿಯೇ ನಾನು ನಿನ್ನ ಚರಣಗಳಿಗೆ ಶರಣು ಬಂದಿದ್ದೇನೆ. ನಿನಗೆ ಶರಣು ಬಂದ ನಿನ್ನ ನಿಜಭಕ್ತರಿಗೆ ಮರಣವು ಹ್ಯಾಗೆ ಬಂದೀತು ? ಈಗ ನನ್ನನ್ನು ರಕ್ಷಿಸು, ರಕ್ಷಿಸು ಎಂದನು ॥ ೩೮ ॥ ಅವನ ವಿನಂತಿಯನ್ನು ಕೇಳಿ, ಭೋಳಾ ಚಕ್ರವರ್ತಿಯಾದ ಶ್ರೀಶಂಕರನು ಅಂತಃಕರಣಪಟ್ಟು ಒತ್ತಿದಂಥ ತನ್ನ ಎಡಗೈಯನ್ನು ಕೂಡಲೇ ಮೇಲ ಕ್ಕೆತ್ತಿದನು. ॥ ೩೯ ॥ ಆದರಿಂದ ರಾವಣನು ಬಿಡುಗಡೆ ಹೊಂದಿ, ಶ್ರೀಶಂಕರನನ್ನು ಕುರಿತು ಬಹು ಸ್ತೋತ್ರ ಮಾಡುತ್ತ, ಸಾಹಸ ಮಾಡಿ ತನ್ನ ಎಲ್ಲಾ ಶಿರಗಳನ್ನು ಕತ್ತರಿಸಿ ಕೈಯಲ್ಲಿ ಹಿಡಕೊಂಡು ಅದನ್ನು ತಂಬೂರಿ ಕಾಯಿಯನ್ನಾಗಿ ಮಾಡಿ, ಆದಕ್ಕೆ ತನ್ನ ನರಗಳೆಂಬ ತಂತುಗಳನ್ನು ಹಚ್ಚಿದನು ॥ ೪೦ ॥ ಆಮೇಲೆ ವರ್ಣಾದಿ ಕ್ರಮದಿಂದಲೂ ವಿಸ್ತಾರವಾದ ಹಾಗೂ ಗಹನವಾದ ಸಾಮವೇದದ ಸಾವಿರಾರು ವಚನಗಳಿಂದಲೂ ಸಮಸ್ತ ರಾಗ ಗಳಿಂದಲೂ ಹಾಡುತ್ತ ॥ ೪೧ ॥ ಶ್ರೀಶಂಕರನನ್ನು ಸ್ತುತಿಸುತ್ತ ರಾವಣನು ಗಣ-ಋಷೀಶ್ವರ ಯುಕ್ತವಾಗಿ ಗಾಯನ ಮಾಡಿದನು ಎಲೈ ನಾಮಧಾರಕನೇ, ಆ ಗಣಗಳಲ್ಲಿ ಮುಖ್ಯವಾದವುಗಳನ್ನು ನಿನಗೆ ಹೇಳುವೆನು ಕೇಳು. ॥ ೪೨ ॥ ಎಂಟು ಗಣಗಳು ಪ್ರಖ್ಯಾತ ಅವೆ. ಅವುಗಳನ್ನು ರಾವಣನು ಅನ್ನುತ್ತಿದ್ದನು. 'ಮ' ಗಣವು ಪ್ರಖ್ಯಾತವಾದ ಬ್ರಾಹ್ಮಣ ವರ್ಣದ್ದು. 'ನ' ಗಣವು ವಿಶೇಷವಾಗಿ ಕ್ಷತ್ರಿಯ ವರ್ಣದ್ದು ॥ ೪೩ ॥ 'ಭ' ಗಣವು ಧ್ಯಾನರೂಪವಾದ ವೈಶ್ಯವರ್ಣದ್ದು. 'ಯ' ಗಣವು ಶೂದ್ರ ವರ್ಣದ್ದು. 'ಜ' ಗಣವು ದೈತ್ಯ ಸಂಬಂಧದ್ದು 'ರ' ಗಣವು ಪ್ರೇತಕ್ಕೆ ಮತ್ತು 'ತ' ಗಣವು ರಾಕ್ಷಸ ಸಂಬಂಧಿಸಿದ್ದು. ॥ ೪೪ ॥ 'ಸ' ಗಣವು ಕುದುರೆಯ ರೂಪದ್ದು. ಈಪ್ರಕಾರ ಎಂಟೂ ಗಣಗಳಿಂದ ಸ್ತುತಿಸುತ್ತ ರಾವಣನು ವಿಸ್ತಾರವಾಗಿ ಗಾಯನ ಮಾಡಿದನು. ॥ ೪೫ ॥ ಆಮೇಲೆ ಶಾಂತ, ಭಯಾನಕ, ಅದ್ಭುತ, ಶೃಂಗಾರ, ಹಾಸ್ಯ, ಕರುಣಾ, ರೌದ್ರ, ವೀರ, ಭೀಭತ್ಸಗಳೆಂಬ ನವರಸಗಳಿಂದ ಕೂಡಿ ವಿಧಿಪ್ರಕಾರ ಹಾಗೂ ಧ್ಯಾನಪೂರ್ವಕ ಉಲ್ಲಾಸಯುಕ್ತನಾಗಿ ಸಪ್ತಸ್ವರಗಳಿಂದ ವೀಣೆಯನ್ನು ಬಾರಿಸುತ್ತ ಗಾಯನ ಮಾಡಿದನು. ॥ ೪೬–೪೭ ॥ ಜಂಬೂದ್ವೀಪವಾಸಿಯಾದ ಷಡ್ಜಸ್ವರವು ಕಂಠದಿಂದ ಹುಟ್ಟಿ ಮಯೂರ ಸ್ವರದಿಂದ ಗಾಯನ ಮಾಡಿದನು. ॥ ೪೮ ॥ ಶೃಂಗಾರ ರಸವು ಉತ್ತಮ ವಂಶದಲ್ಲಿ ಅಂದರೆ ಗೀರ್ವಾಣ ಕುಲದ ಬ್ರಹ್ಮ

ವಂಶದಲ್ಲಿ ಹುಟ್ಟಿ ಕಾದ ಬಂಗಾರದಂತೆ ವರ್ಣ ಮತ್ತು ಅಗ್ನಿ ದೇವತಾ ಉಳ್ಳದ್ದಾಗಿರುವದು. || ೪೯ || ಎರಡನೇಯದಾದ ಋಷಭ ಸ್ವರವು ಶಾಲ್ಮಲೀ ದೀಪವಾಶಿಯು ಹೃದಯಸ್ಥಾನದಲ್ಲಿ ಹುಟ್ಟಿದ್ದು ಇದನ್ನು ರಾವಣನು ಪಂಚಮಸ್ವರಯುಕ್ತವಾಗಿ ಆಲಾಪಿಸಿದನು. || ೫೦ || ಕ್ರೀಡಾರೂಪವಾದ ಆದ್ಭುತ ರಸವು ಪ್ರಖ್ಯಾತ ಕ್ಷತ್ರಿಯ ಜಾತಿಯದು, ವಿರಾಜವರ್ಣದ್ದಾಗಿ ಯಮದೇವತಾ ಉಳ್ಳದ್ದು. ಇದನ್ನು ರಾವಣನು ವೀಣೆಯಿಂದ ಬಾರಿಸಿದನು. || ೫೧ || ೩ನೇ ಗಾಂಧಾರ ಸ್ವರವು ಕುಶದ್ವೀಪದ್ದು, ನಾಶಿಕದಿಂದ ಹುಟ್ಟುವಂಥಾದ್ದು ಇದನ್ನು ಹಾಡಿದನು. || ೫೨ || ಆದ್ಭುತ ರಸದಲ್ಲಿ ಅಜಸ್ವರವರ್ಣ, ಗೀರ್ವಾಣ ವೈಶ್ಯ ವಂಶದಲ್ಲಿ ಹುಟ್ಟಿದ್ದು, ಸುವರ್ಣ ಕಾಂತಿಯುಳ್ಳದ್ದು, ಚಂದ್ರದೇವತಾ ಉಳ್ಳದ್ದು ಇದನ್ನು ಹಾಡಿದನು || ೫೩ || ೪ನೇ ಮಧ್ಯಮ ಸ್ವರವು ಕ್ರೌಂಚ ದೀಪವಾಸಿಯು, ಉರಸ್ಥಾನದಲ್ಲಿರುವದು. ಇದನ್ನು ಕ್ರೌಂಚ ಸ್ವರದಿಂದ ಬಾರಿಸಿದನು || ೫೪ || ಕರುಣಾ ರಸವು, ಗೀರ್ವಾಣ ಕುಲದ ಬ್ರಹ್ಮವಂಶದ್ದು, ಕುಂದವರ್ಣ, ಸುಂದರ ರೂಪ, ಲಕ್ಷ್ಮೀದೇವತಾ ಉಳ್ಳದ್ದು. ರಾವಣನು ಇದನ್ನು ಧ್ಯಾನ ಮಾಡಿದನು. || ೫೫ || ೫ನೇ ಸ್ವರವು ಶಾಲ್ಮಲೀ ದ್ವೀಪವಾಸಿಯು, ಇದು ಕಂಠದಿಂದ ಉತ್ಪನ್ನವಾಗುವದು, ಕೋಕಿಲೆಯ ಸ್ವರವುಳ್ಳದ್ದು ಇದನ್ನು ಹಾಡಿದನು. || ೫೬ || ಹಾಸ್ಯ ರಸವು ಪಿತೃವಂಶೀಯದ್ದು ಕಪ್ಪು ವರ್ಣದ್ದು, ಗಣನಾಥ ದೇವತೆಯು ಇದನ್ನು ಧ್ಯಾನ ಮಾಡಿದನು. || ೫೭ || ಭೀಭತ್ಸ ರಸವು ಶ್ವೇತ ದ್ವೀಪವಾಸಿಯು, ಧೈವತೆ ಹೆಸರುಳ್ಳದ್ದು, ಹಣೆಯು ಉದರ ಸ್ಥಾನವು, ವ್ಯಕ್ತನಾದವುಳ್ಳದ್ದು, ದುರ್ಧರ ಸ್ವರವುಳ್ಳದ್ದು, ಇದರಿಂದ ಈಶ್ವರ ಪ್ರಾಪ್ತಿಯಾಗುವದು. ಇದನ್ನು ಉಲ್ಲಾಸದಿಂದ ಹಾಡಿದನು. || ೫೮-೫೯ || ೭ನೇ ನಿಷಾದ ಸ್ವರವು ಪುಷ್ಕರ ದ್ವೀಪವಾಸಿಯು, ರಾಕ್ಷಸ ವಂಶೀಯದ್ದು, ವೈಶ್ಯಕುಲ, ಬಿಳುಪು-ಕೆಂಪು ಕೂಡಿದಬಣ್ಣ, ತುಂಬರನೇ ದೇವತೆಯು, ಇದನ್ನು ರಾವಣನು ಆನೆಯ ಸ್ವರದಿಂದ ಗಾಯನ ಮಾಡಿದನು. || ೬೦-೬೧ || ಭಯಾನಕ ರಸವು ಸರ್ವ ದೇವತಾಕವಾದದ್ದು. ಚರ್ಚೆ ಮಾಡುವಂಥಾದ್ದು "ನಿಶ್ಚಯವಾಗಿ ವ್ಯಾಕುಲವುಳ್ಳದ್ದಾಗಿರುವದು. ಈ ಪ್ರಕಾರ ರಾವಣನು ಸಪ್ತ ಸ್ವರಗಳಲ್ಲಿ ಹಾಡಿದನು. || ೬೨ ||

ಆಮೇಲೆ ಸಾಮವೇದವನ್ನು ಅನೇಕ ರಾಗ–ರಾಗಿಣಿಗಳಲ್ಲಿ ಅಂದರೆ ಶ್ರೀರಾಗ ಮೊದಲಾದ, ವಸಂತ, ಭೈರವಾದಿ ಪಂಚಮ ರಾಗಗಳಲ್ಲಿಯೂ, ನಟನಾರಾಯಣ, ಮೇಘ, ಅಭ್ಯಾಸ, ಗೌಡ, ಕೋಲ್ಹಾಳ, ಕಾಂದಾಳಿ, ದ್ರಾವಿಡ, ಕೌಶಿಕಮಾಳಿ, ದೇವಗಾಂಧಾರ, ಆನಂದಲೀಲ, ಧನಾಶ್ರಿಯಾ, ವರಾಡಿ, ರಾಮಕಲಿ ಮಂಜರಿ, ಗೌಡಿಕೀ, ದಶಾಂಕ, ಹಾರಿ, ಭೈರವಿ, ಗುರ್ಜರಿ, ವೇಳಾವಲಿ, ಲಲಿತ, ಹಂಸಯುಕ್ತ ಕರ್ನಾಟಕಿ, ತ್ರಾಟಕೀ, ಲೋಟಕಿ, ಟಂಕಾಕ್ಷಿ, ಸುಧಾ, ಸೈಂಧವ, ಮಾಲಾಕ, ಬಂಗಾಲಿ, ಸೌರಾಷ್ಟ್ರ, ಕಾಂಬೋಧಿ, ಮಧು ಮಾಧವಿ, ದೇವಕಿ, ಭೂಪಾಳಿ, ರಾಗ ವಲ್ಲಭ, ಪೂರ್ಧರಿ, ರಾವ್ಹೇರಿ, ವಿರಂಗಧಾತ್ರಿ, ಚಂಡಿ, ಪಸವೀಜ ಮುಂತಾದ ರಾಗಗಳಲ್ಲಿ ಹಾಡಿದನು ॥ ೧೩ ರಿಂದ ೨೦ ॥ ಆಮೇಲೆ ತನ್ನ ತಲೆಗಳನ್ನು ಕಡೆದು, ಕರಕಮಲದಲ್ಲಿ ಯಂತ್ರವನ್ನಾಗಿ ಮಾಡಿ, ಆದಕ್ಕೆ ನರಗಳೆಂಬ ತಂತಿಗಳನ್ನು ಹಚ್ಚಿ, ಗಾಯನ ಮಾಡಿದನು ॥ ೨೧ ॥ ಇದಲ್ಲದೆ ಸಮಯಾನುಸಾರ ಅಂದರೆ ಪ್ರಾತಃಕಾಲದಲ್ಲಿ ಮಧ್ಯಮ, ದಶಾಂಕ, ಭೈರವಿ, ಭೂಪಾಳಿ, ಮಲ್ಹಾರ, ಧನಾಶ್ರೀ, ಬಂಗಾಲಿ ಮುಂತಾದ ಎಂಟು ರಾಗಗಳಿಂದ ಗಾಯನ ಮಾಡಿದನು. ॥ ೨೨-೨೩ ॥ ಮಧ್ಯಾಹ್ನದಲ್ಲಿ ವರಾಡಿ, ಲಲಿತ, ಗುರ್ಜರಿ, ಗೌಡಕಿ, ಆಹೀರಿ, ಕೌಶಿಕೆ ರಾಗಗಳಲ್ಲಿಯೂ ॥ ೨೪ ॥ ಅಪರಾಹ್ನದಲ್ಲಿ ಕುರಂಜಿ, ತುಂಡಿ, ಮಾಲಾಶ್ರೀ, ದಶಾಂಕ, ಪಂಚಮ, ನಾಲ್ಕು ತರದ ಗೌಡಿಯ, ರಾಮಕಲಿ, ಶ್ರೀರಾಗ, ದೇವಕಿ, ಪಟಮಂಜರಿ, ವಸಂತ ಮುಂತಾದ ೩೬ ರಾಗಗಳಲ್ಲಿ ಸಾಮವೇದವನ್ನು ಒಳ್ಳೇ ನಿಕಟ ಭಕ್ತಿಯಿಂದಲೂ ಹರ್ಷದಿಂದಲೂ ಈಶ್ವರನಿಗೆ ಪ್ರಿಯವಾಗುವಂತೆ ರಾವಣನು ಹಾಡಿದನು. ॥ ೨೫–೨೬–೨೭ ॥ ಆಕೂಡಲೆ ಶ್ರೀಶಂಕರನು ರಾವಣನ ಭಕ್ತಿಗೆ ಮೆಚ್ಚಿ, ಒಳ್ಳೇ ಸಂತೋಷದಿಂದ ಪಂಚಮುಖ, ತ್ರಿನೇತ್ರ, ದಶಭುಜಗಳಿಂದ ಕೂಡಿದ ನಿಜರೂಪವನ್ನು ಹೊಂದಿ ರಾವಣನ ಹತ್ತಿರ ಬಂದು ನಿಂತು— ಎಲೈ ರಾವಣಾ, ಈಗ ನೀನು ನಿನ್ನ ಮನಸ್ಸಿಗೆ ಬಂದ ಬೇಕಾದ ವರವನ್ನು ಬೇಡು ಎಂದನು. ॥ ೨೮–೨೯ ॥ ಆಗ ರಾವಣನು— ಸ್ವಾಮೀ ಪಿನಾಕಪಾಣಿಯೇ, ನಾನು ನಿನಗೆ ಯಾವ ವರವನ್ನು ಕೇಳಲಿ? ಲಕ್ಷ್ಮಿಯು ನಮ್ಮ ಮನೆಯ ದಾಸಿಯಾಗಿರುವಳು. ಅಷ್ಟಸಿದ್ಧಿಗಳು ನಮ್ಮ ಮನೆಯ ಬಾಗಿಲನ್ನು

ಕಾಯ್ದುಕೊಂಡಿರುವವು. ॥ ೮೦ ॥ ಬ್ರಹ್ಮನು ನಮ್ಮ ಜೋಯಿಸನಾಗಿರುವನು. ಮೂವತ್ತುಮೂರು ಕೋಟಿ ದೇವತೆಗಳೂ, ಸೂರ್ಯ, ಚಂದ್ರ, ವರುಣ, ವಾಯು, ಕುಬೇರ ಮೊದಲಾದ ಯಾವತ್ತರೂ ಸಂತೋಷದಿಂದ ನನ್ನ ಸೇವೆಯನ್ನು ಮಾಡುತ್ತಿರುವರು. ॥ ೮೧ ॥ ಅಗ್ನಿಯು ಅತ್ಯಂತ ಸಂತೋಷದಿಂದ ಒಂದೇಸವನೆ ನನ್ನ ಸೇವಾ ಮಾಡುತ್ತ ನನ್ನ ಧೋತರ ಒಗೆಯುತ್ತಾನೆ. ಯಮನು ನನ್ನ ಆಜ್ಞಾಧಾರಕನಿದ್ದು ನನ್ನ ಅಪ್ಪಣೆಯಿಲ್ಲದೆ ನನ್ನ ರಾಜ್ಯದಲ್ಲಿ ಯಾರನ್ನೂ ಕೊಲ್ಲುವದಿಲ್ಲ ॥ ೮೨ ॥ ಮತ್ತು ನನಗೆ ಇಂದ್ರನನ್ನು ಗೆದ್ದಂಥ "ಇಂದ್ರಜಿತು" ಎಂಬ ಶ್ರೇಷ್ಠ ಪುತ್ರನೂ ಮಹಾ ಶೂರನಾದ ಕುಂಭಕರ್ಣನಂಥ ತಮ್ಮನೂ ಇರುವರಲ್ಲದೆ ನನಗೆ ಬೇಕಾದದ್ದನ್ನು ಕೊಡುವ ಕಾಮಧೇನುವೂ, ಸಮುದ್ರಮಧ್ಯದಲ್ಲಿರುವ ಲಂಕಾ ನಗರವೂ ಅವೆ. ॥ ೮೩ ॥ ಮತ್ತು ನನಗೆ ಆರು ಕೋಟಿ ವರ್ಷ ಆಯುಷ್ಯವೂ ಅದೆ. ನನ್ನ ಸಮಾನ ಯಾರೂ ಇರುವದಿಲ್ಲ. ನನ್ನ ಅಪೇಕ್ಷೆಯೇ ಬೇರೆ ಇರುವದು. ಈ ಕೈಲಾಸವನ್ನು ಲಂಕೆಗೆ ಒಯ್ಯುವೆನು. ಯಾಕಂದರೆ ದೇವಾ, ನನ್ನ ತಾಯಿಯು ನಿತ್ಯವೂ ನಿನ್ನನ್ನು ಭಕ್ತಿಯಿಂದ ಪೂಜಿಸಬೇಕೆಂದು ವ್ರತವನ್ನು ಮಾಡಿರುವಳು. ಆದ್ದರಿಂದ ಈಗ ನಾನು ನಿನ್ನ ಸಹಿತವಾದ ಈ ಕೈಲಾಸ ಪರ್ವತವನ್ನು ಲಂಕೆಗೆ ತಕ್ಕೊಂಡು ಹೋಗಲಿಕ್ಕೆ ಬಂದಿರುವೆನು ಆದಕಾರಣ ಎಲೈ ದಾತಾರನೇ, ಕೃಪಾ ಸಿಂಧುವೇ, ಆಕೆಯ ಮನೋರಥವನ್ನು ಪೂರ್ಣ ಮಾಡು ಎಂದು ಪ್ರಾರ್ಥಿಸಿದನು ॥ ೮೫ ॥ ಅವನ ಪ್ರಾರ್ಥನೆಯನ್ನು ಕೇಳಿ ಶ್ರೀಶಂಕರನು— ಎಲೈ ಭಕ್ತನಾದ ರಾವಣನೇ ಕೇಳು. ನಿನ್ನ ತಾಯಿಯು ನಿತ್ಯ ನನ್ನ ಪೂಜೆಯನ್ನು ಮಾಡಬೇಕೆಂದು ಅಪೇಕ್ಷಿಸುತ್ತಿದ್ದರೆ ಈ ಕೈಲಾಸವನ್ನೇಕೆ ಒಯ್ಯುತ್ತೀ? ಆಕೆಯ ಪೂಜೆಗಾಗಿ ನಿನಗೆ ನನ್ನ ಆತ್ಮಲಿಂಗವನ್ನೇ ಕೊಡುವೆನು. ॥ ೮೬ ॥ ಎಂದು ಶಿವನು ಕೂಡಲೆ ತನ್ನ ಪ್ರಾಣಲಿಂಗವನ್ನು ಕೈಯಲ್ಲಿ ಹಿಡಕೊಂಡು— ಎಲೈ ರಾವಣಾ, ಇಕೋ ಇದು ನನ್ನ ಪ್ರಾಣಲಿಂಗವು. ಇದು ನಿನ್ನ ಮನಸ್ಸಿನ ಎಲ್ಲ ಇಚ್ಛೆಗಳನ್ನು ಪೂರ್ಣ ಮಾಡುವದು ಎಂದು ಹೇಳಿ, ಆ ಪ್ರಾಣಲಿಂಗವನ್ನು ಆ ರಾವಣನ ಕೈಯಲ್ಲಿ ಕೊಟ್ಟು— ॥ ೮೭ ॥ ಎಲೈ ರಾವಣನೇ, ಈ ಲಿಂಗವನ್ನು ತ್ರಿಕಾಲದಲ್ಲಿಯೂ ೧೦೮ ಸಾರೆ ಶಿವಪಂಚಾಕ್ಷರಿ ಮಂತ್ರವನ್ನು ಜಪಿಸಿ,

ಏಕಚಿತ್ತನಾಗಿ ರುದ್ರಾಭಿಷೇಕದಿಂದ ಪೂಜೆ ಮಾಡಬೇಕು. ॥ ೮೮ ॥ ಈ ಪ್ರಕಾರ ಯಾರು ಈ ಲಿಂಗವನ್ನು ಮೂರು ವರುಷಗಳವರೆಗೆ ಪೂಜಿಸುವರೋ ಅವರು ನನ್ನ ಸ್ವರೂಪವನ್ನು ಹೊಂದಿ ತಮ್ಮ ಮನಸ್ಸಿನ ಎಲ್ಲ ಅಭೀಷ್ಟಗಳನ್ನು ಹೊಂದುವರು. ॥ ೮೯ ॥ ಎಲೈ ರಾವಣಾ ಈ ಲಿಂಗವು ಯಾರಹತ್ತರ ಇರುವದೋ ಅವರಿಗೆ ಮೃತ್ಯು ಭಯವಿಲ್ಲ ಇದರ ದರ್ಶನ ಮಾತ್ರದಿಂದ ಮಹಾ ಪಾಪ ಮಾಡಿದವನೂ ಸಹ ಉದ್ಧಾರನಾಗುವನು. ॥ ೯೦ ॥ ಎಲೈ ರಾವಣಾ, ನೀನು ಲಂಕೆಗೆ ಹೋಗುವತನಕ ಯಾವ ಕಾಲಕ್ಕೂ ಈ ಲಿಂಗವನ್ನು ಭೂಮಿಯಮೇಲೆ ಮಾತ್ರ ಇಡಬೇಡ. ಇದನ್ನು ಲಂಕೆಗೆ ತಕ್ಕೊಂಡು ಹೋಗಿ ಮೂರುವರುಷ ಬಿಟ್ಟೂಬಿಡದ ಪೂಜ ಮಾಡು, ಅಂದರ ನೀನೂ ಈಶ್ವರನಾಗುವಿ ಎಂದು ವರವನ್ನು ಕೊಟ್ಟನು. ॥ ೯೧ ॥ ಎಲೈ ನಾಮಧಾರಕಾ ಮುಂದೆ ಕೇಳು ಈ ಪ್ರಕಾರ ರಾವಣನು ಈಶ್ವರನಿಂದ ವರವನ್ನು ಪಡೆದು ನಾ। ಸ। ಮಾಡಿ, ಆತನಿಂದ ಅಪ್ಪಣೆ ಪಡೆದು ಆ ಲಿಂಗವನ್ನು ತಕ್ಕೊಂಡು ತೀವ್ರವಾಗಿ ಲಂಕೆಗೆ ಹೊರಟನು. ॥ ೯೨ ॥ ಆ ಸಮಯದಲ್ಲಿ ನಾರದಮುನಿಯು ಇದನ್ನು ತಿಳಿದು, ಒಳ್ಳೇ ವೇಗದಿಂದ ಇಂದ್ರನ ಅಮರಾವತಿಗೆ ಹೋಗಿ ॥ ೯೩ ॥ ಇಂದ್ರನನ್ನು ಕುರಿತು— ಎಲೈ ದೇವೇಂದ್ರನೇ ನೀನು ಏನೂ ಚಿಂತೆಯಿಲ್ಲದೆ ಹೀಗೇಕೆ ಸುಮ್ಮನೆ ಕುಳಿತಿರುವೆ ? ಲೋಕದಲ್ಲಿ ನಡೆದ ಯಾವ ಸುದ್ದಿಯೂ ನಿನಗೆ ಗೊತ್ತಿಲ್ಲೆಂದು ತಿಳಿಯುತ್ತದೆ. ಏನು ಹೇಳಲಿ ! ಶ್ರೀ ಶಂಕರನು ದುಷ್ಟನಾದ ರಾವಣನಿಗೆ ಅಮರತ್ವವನ್ನು ಕೊಟ್ಟುಬಿಟ್ಟನು. ಅಂದಮೇಲೆ ಇವತ್ತಿನಿಂದ ಸ್ವರ್ಗಲೋಕದ ಐಶ್ವರ್ಯವೆಲ್ಲ ರಾವಣನ ಕಡೆಗೆ ಹೋಯಿತೆಂದು ತಿಳಿ. ॥ ೯೪ ॥ ಶ್ರೀ ಶಂಕರನು ತನ್ನ ಪ್ರಾಣಲಿಂಗವನ್ನು ಕೊಟ್ಟದ್ದರಿಂದ ರಾವಣನು ಚಿರಾಯುವಾದನು. ಇದಲ್ಲದೆ ನೀನು ಈಶ್ವರನಾಗುವಿ ಎಂದು ವರವನ್ನು ಕೊಟ್ಟನು. ಇನ್ನುಮೇಲೆ ದೇವತೆಗಳ ಗತಿಯನ್ನು ಏನು ಹೇಳಲಿ! ಎಂದನು. ಆಗ ಇಂದ್ರನು— ಸ್ವಾಮೀ ನಾರದರೇ, ಆದದ್ದಾದರೂ ಏನು ನೆಟ್ಟಗೆ ಹೇಳಿರಿ ಎಂದನು. ॥ ೯೫ ॥ ಆಗ ನಾರದನು— ಎಲೈ ಇಂದ್ರನೇ, ರಾವಣನು ಶ್ರೀ ಶಂಕರನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಲಾಗಿ ಶ್ರೀ ಶಂಕರನು ಮೆಚ್ಚಿ ಆವನಿಗೆ ಮಹತ್ವವಾದ ತನ್ನ ಪ್ರಾಣಲಿಂಗವನ್ನು ಕೊಟ್ಟು— ಈ ಲಿಂಗವನ್ನು ಮೂರು

ವರುಷ ಪೂಜಿಸು ಅಂದರೆ, ನೀನೂ ನನ್ನಂತೆ ಈಶ್ವರನಾಗುವಿ, ನಿನ್ನ ಲಂಕೆಯೇ ಕೈಲಾಸವಾಗುವದು ನಿನಗೆ ಎಂದೂ ಮರಣವಿಲ್ಲ ಎಂದು ವರವನ್ನೂ ಕೊಟ್ಟಿರುವನು. ॥ ೯೬ ॥ ಎಲೈ ಇಂದ್ರನೇ ಈ ಪ್ರಕಾರ ವರವನ್ನು ಹೊಂದಿ ರಾವಣನು ಸಂತೋಷದಿಂದ ಈಗ ಲಂಕೆಗೆ ಹೊರಟುಹೋದನು. ಅಂದಮೇಲೆ ನಿನ್ನಸಲುವಾಗಿ ಆ ಮೂವತ್ತು ಮೂರು ಕೋಟಿ ದೇವತೆಗಳು ಹ್ಯಾಗೆ ಬಿಡುಗಡೆ ಹೊಂದಬೇಕು ? ॥ ೯೭ ॥ ಇನ್ನುಮೇಲೆ ನೀನು ತೀವ್ರವಾಗಿ ಆ ರಾವಣನ ಸೇವೆಯನ್ನು ಮಾಡಲಿಕ್ಕೆ ಹೋಗಬೇಕಾಗುವದು. ಮತ್ತು ನಿನ್ನ ರಂಭಾ, ಊರ್ವಶಿ, ಮೇನಕಾ, ತಿಲೋತ್ತಮ ಮೊದಲಾದ ಅಪ್ಸರೆಯರನ್ನು ತೀವ್ರವಾಗಿ ಲಂಕೆಗೆ ಕರಕೊಂಡು ಹೋಗಿ ರಾವಣನಿಗೆ ಭೆಟ್ಟಿ ಮಾಡಿಸು. ಇಂದ್ರಾ, ಇನ್ನು ನಿನ್ನ ಅವಸ್ಥಾ ಮುಗಿಯಿತು ! ಎಂದನು. ॥ ೯೮ ॥ ಈ ಪ್ರಕಾರ ನಾರದನ ಮಾತು ಕೇಳಿ ಇಂದ್ರನು ಗಾಬರಿಯಾಗಿ ಕೈಮುಗಿದು ವಿನಯದಿಂದ— ಸ್ವಾಮೀ ನಾರದರೇ, ಈಗ ಇದಕ್ಕೆ ಏನು ಉಪಾಯ ಮಾಡಬೇಕು ಹೇಳಿರಿ ಅಂದನು. ॥ ೯೯ ॥ ಆಗ ನಾರದನು— ಇಂದ್ರಾ, ಇದಕ್ಕೆ ನಾನು ತೀವ್ರವಾದ ಉಪಾಯವನ್ನೇನು ಹೇಳಲಿ ? ಈಗ ನೀನು ಮೊದಲು ಬ್ರಹ್ಮನ ಹತ್ತರ ನಡೆ. ಅವನು ಇದಕ್ಕೆ ಏನಾದರೂ ಉಪಾಯ ಮಾಡುವನು ಎಂದನು ॥ ೧೦೦ ॥ ಆಗ ಇಂದ್ರನು ಆ ನಾರದನೊಡನೆ ತೀವ್ರವಾಗಿ ಬ್ರಹ್ಮಲೋಕದಲ್ಲಿ ಬ್ರಹ್ಮನ ಹತ್ತರ ಹೋಗಿ ಅವನಿಗೆ ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಹೇಳಿದನು. ॥ ೧೦೧ ॥ ಆಗ ಬ್ರಹ್ಮನು— ಎಲೈ ಇಂದ್ರನೇ ಇದು ನನಗೂ ತಿಳಿಯದ ಮಾತು. ನಾವು ಮೂವರೂ ತೀವ್ರವಾಗಿ ವೈಕುಂಠಕ್ಕೆ ಹೋಗಿ, ವಿಷ್ಣುವಿಗೆ ಎಲ್ಲ ಸಂಗತಿಯನ್ನು ಹೇಳೋಣ ದೈತ್ಯಾರಿಯಾದ ಆ ಶ್ರೀಹರಿಯು ಇದಕ್ಕೆ ನಿಶ್ಚಯವಾಗಿ ಏನಾದರೂ ಉಪಾಯ ಮಾಡುವನು. ॥ ೧೦೨ ॥ ಎಂದು ಎಲ್ಲರೂ ತೀವ್ರವಾಗಿ ವೈಕುಂಠಕ್ಕೆ ಬಂದರು. ಆಗ ಬ್ರಹ್ಮನು ವಿಷ್ಣುವನ್ನು ಕುರಿತು ರಾವಣನ ಎಲ್ಲ ಸಂಗತಿಯನ್ನು ಹೇಳಿ— ॥ ೧೦೩ ॥ ದೇವಾ, ಇದಕ್ಕೆ ತೀವ್ರವಾಗಿ ಏನಾದರೂ ಪ್ರತೀಕಾರ ಮಾಡು. ಯಾಕಂದರೆ ನೀನು ಮುಂದೆ ರಾಮಾವತಾರ ಮಾಡಿ ರಾವಣನ ವಧ ಮಾಡಿ ॥ ೧೦೪ ॥ ಅವನು ಬಂದಿಯಲ್ಲಿ ಹಾಕಿದ ೩೩ ಕೋಟಿ ದೇವತೆಗಳನ್ನು ಬಿಡಿಸುವ ಪ್ರಸಂಗ ಬರು

ತ್ತದೆ. ॥ ೧೦೫ ॥ ಈಗ ದೈತ್ಯನಾದ ರಾವಣನು ಒಳ್ಳೇ ಸಂತೋಷದಿಂದ ಈಶ್ವರ ಪ್ರಾಣಲಿಂಗವನ್ನು ಲಂಕೆಗೆ ಒಯ್ದನು ಅವನಿಗೆ ನಾಶವಿಲ್ಲ, ಅವನೇ ಈಶ್ವರನಾಗುವನು. ಇದಕ್ಕೆ ತೀವ್ರವಾಗಿ ಏನಾದರೂ ಉಪಾಯ ಮಾಡಬೇಕು. ಈಗ ಬಿಟ್ಟರೆ ರಾಕ್ಷಸರು ಅಮರರಾದಮೇಲೆ ಮುಂದೆ ಅವನನ್ನು ನಾಶಮಾಡಲಿಕ್ಕೆ ನಿನಗೆ ಬಹಳ ಕಠಿಣವಾದೀತು. ಆಗ ನೀನು ಬೇರೆ ಅವತಾರ ತಕ್ಕೊಳ್ಳಬೇಕಾಗುವದು ಎಂದು ಹೇಳಿದನು. ॥ ೧೦೭ ॥ ಈಪ್ರಕಾರ ಬ್ರಹ್ಮನ ವಿನಂತೀಮಾತು ಕೇಳಿ ಶ್ರೀಮನ್ನಾರಾಯಣನು ಶಿಟ್ಟಾಗಿ— ಅಹಾ ! ಈಗ ನಾನು ಹೀಗೇ ಬಿಟ್ಟರೆ ಕೆಲಸವು ಕೆಟ್ಟು ಹೋದೀತು ! ಎಂದು ಎಲ್ಲರೂ ಕೂಡಲೇ ಕೈಲಾಸಕ್ಕೆ ಬಂದರು. ॥ ೧೦೮ ॥ ಅಲ್ಲಿ ವಿಷ್ಣುವು ಶ್ರೀಶಂಕರನನ್ನು ಕುರಿತು— ಶ್ರೀಶಂಕರನೇ, ನೀನು ಆ ದುಷ್ಟ ದೈತ್ಯನಾದ ರಾವಣನಿಗೆ ನಿನ್ನ ಪ್ರಾಣ-ಲಿಂಗವನ್ನು ಕೊಟ್ಟ ಕಾರಣವೇನು ? ॥ ೧೦೯ ॥ ಆ ಕ್ರೂರನು ಸಮಸ್ತ ದೇವತೆಗಳನ್ನು ಶೆರೆಯಲ್ಲಿಟ್ಟು ತನ್ನ ಭೃತ್ಯರನ್ನಾಗಿ ಮಾಡಿಕೊಂಡಿರುವನು. ಇನ್ನು ಅವರು ಹ್ಯಾಗೆ ಬಿಡುಗಡ ಹೊಂದಬೇಕು ಹೇಳು ! ॥ ೧೧೦ ॥ ಈ ಪ್ರಕಾರ ದುರಾಚಾರಿಯಾದ ರಾವಣನಿಗೆ ನೀನು ಉಲ್ಹಾಸದಿಂದ ವರ ಕೊಟ್ಟದ್ದರಿಂದ ದೇವತ್ವವು ಅವನ ಮನೆಗೆ ಹೋಯಿತು ಅವನು ನಿಶ್ಚಯವಾಗಿ ಸ್ವರ್ಗೈಶ್ವರ್ಯವನ್ನು ಒಯ್ಯುವನು ಎಂದನು ॥ ೧೧೧ ॥ ಆಗ ಈಶ್ವರನು-- ಎಲೈ ಶ್ರೀಹರಿಯೇ ಕೇಳು, ರಾವಣನು ತನ್ನ ತಲೆಗಳನ್ನು ಕತ್ತರಿಸಿ, ಅದನ್ನು ತನ್ನ ಕೈಯಲ್ಲಿಯೇ ವೀಣೆಯನ್ನಾಗಿ ಮಾಡಿ ಅದಕ್ಕೆ ತನ್ನ ನರಗಳೆಂಬ ತಂತಿಗಳನ್ನು ಹಚ್ಚಿ, ಭಕ್ತಿಯಿಂದ ಸಾಮವೇದವನ್ನು ಸಪ್ತಸ್ವರ ಗಳಿಂದ ಗಾಯನ ಮಾಡಿದನು. ಆದರಿಂದ ನಾನು ಅವನ ಭಕ್ತಿಗೆ ಮೆಚ್ಚಿ ಸಂತೋಷಪಟ್ಟು ಮರೆತು ಅವನಿಗೆ ನನ್ನ ಪ್ರಾಣಲಿಂಗವನ್ನು ಕೊಟ್ಟೆನು. ಆದರಿಂದ ಅವನು ಅದನ್ನು ಒಯ್ದನು ॥ ೧೧೨-೧೧೩ ॥ ವಿಷ್ಣುವೇ, ಅವನು ಒಂದುವೇಳೆ ಪಾರ್ವತಿಯನ್ನು ಬೇಡಿದ್ದರೂ ಸಹ ಕೊಟ್ಟುಬಿಡುತ್ತಿದ್ದೆನು. ಅವನ ಭಕ್ತಿಗೆ ನಾನು ಭುಲಾಯಿ ಸಿದ್ದರಿಂದ ಅವನು ನನ್ನ ಪ್ರಾಣಲಿಂಗವನ್ನು ಒಯ್ದನು ಏನು ಮಾಡಲಿ ? ಎಂದನು ॥ ೧೧೪ ॥ ಆಗ ವಿಷ್ಣುವು ಎಲೈ ಉಮಾಕಾಂತನೇ, ನೀನು ಈ ಪ್ರಕಾರ ಅವನಿಗೆ ವರ ಕೊಟ್ಟದ್ದರಿಂದ ನಮಗೆ ನಿಶ್ಚಯವಾಗಿ ಬಹಳ ಕಷ್ಟ

ಅ ೬
+ ದಿಗಂಬರಾ ದಿಗಂಬರಾ +

ವಾಗಿದೆ. ನಿನ್ನ ಆ ವರದಿಂದ ಅವನು ಮತ್ತಿಷ್ಟು ಉನ್ಮತ್ತನಾಗಿ ॥ ೧೧೫ ॥ ದೇವ-ಬ್ರಾಹ್ಮಣ ಹಾಗು ಪ್ರಜೆ ಗಳನ್ನು ಬಹಳವಾಗಿ ಪೀಡಿಸುವನು ಆದರಿಂದ ನಾನು ಅವತಾರ ತೆಗೆದುಕೊಳ್ಳಬೇಕಾಗುವದು ನೋಡು ॥೧೧೬॥ ಅದಿರಲಿ. ಎಲೈ ಶಂಕರನೇ, ಅವನಿಗೆ ಯಾವಾಗ ಲಿಂಗವನ್ನು ಕೊಟ್ಟಿ ? ಅವನು ಅದನ್ನು ಇಷ್ಟೊತ್ತಿಗೆ ಲಂಕೆಗೆ ಒಯ್ದಿರಬಹುದೇನು ? ಎಂದು ಕೇಳಿದನು. ಆಗ ಶಂಕರನು— ವಿಷ್ಣುವೇ, ಅವನಿಗೆ ಲಿಂಗವನ್ನು ಕೊಟ್ಟು ಈಗ ೫ ಘಳಿಗೆಯಾಯಿತು ಎಂದು ಹೇಳಿದನು ॥ ೧೧೭ ॥ ಈ ಪ್ರಕಾರವಾದ ಶಿವನ ಮಾತು ಕೇಳಿ ಉಪಾಯ ವನ್ನು ಹುಡುಕಿ ಸೂರ್ಯನು ಮರೆಯಾಗುವಂತೆ ಸುದರ್ಶನ ಚಕ್ರವನ್ನು ಬಿಟ್ಟನು । ೧೧೮ ॥ ಆಮೇಲೆ ನಾರದ ನನ್ನು ಮುಂದೆ ಕರೆದು ಹೃಷಿಕೇಶನು-- ಎಲೈ ನಾರದನೇ, ಲಂಕೆಗೆ ಹೋಗುವಂಥ ರಾವಣನೆದುರಿಗೆ ನೀನು ತೀವ್ರವಾಗಿ ಹೋಗು. ॥ ೧೧೯ ॥ ಮಾರ್ಗದಲ್ಲಿ ಅವನ ಸಂಗಡ ಏನಾದರೊಂದು ಮಾತು ಹಚ್ಚಿ, ಅವನು ತೀವ್ರ ಲಂಕೆಗೆ ಹೋಗದಂತೆ ಮಾಡು, ನಡೆ ತೀವ್ರ ಹೋಗು. ॥ ೧೨೦ ॥ ಎಲೈ ನಾರದಾ, ಈ ಮೊದಲೇ ನನ್ನ ಚಕ್ರವು ಸೂರ್ಯನಿಗೆ ಮರೆಯಾಗಿರುವದರಿಂದ ಈ ಪ್ರದೋಷಕಾಲದಲ್ಲಿ ಸ್ನಾನ-ಸಂಧ್ಯಾದಿಗಳನ್ನು ಮಾಡುವದು ರಾವಣನಿಗೆ ಅತ್ಯಂತ ಪ್ರಿಯಕರವಾಗಿರುವದು, ಆದ್ದರಿಂದ ನೀನು ತೀವ್ರವಾಗಿ ಹೋಗಿ. ಅವನು ಮುಂದೆ ಹೋಗ ದಂತೆ ಅಡ್ಡಿಯನ್ನು ಮಾಡು ಎಂದು ಹೇಳಿದನು ॥ ೧೨೧ ॥ ಶ್ರೀವಿಷ್ಣುವಿನ ಮಾತು ಕೇಳಿ ನಾರದನು ಕೂಡಲೆ ಅಲ್ಲಿಂದ ಹೊರಟು ಮನೋವೇಗದಿಂದ ಮಾರ್ಗಕ್ರಮಣ ಮಾಡುತ್ತ ರಾವಣನ ಹತ್ತರ ನಡೆದನು. ॥ ೧೨೨ ॥ ನಾರದನನ್ನು ಕಳಿಸಿದಮೇಲೆ ಇತ್ತ ವಿಷ್ಣುವು ಮನಸ್ಸಿನಲ್ಲಿ ವಿಚಾರ ಮಾಡಿ— ರಾವಣನಿಗೆ ವಿಘ್ನ ಮಾಡಲಿಕ್ಕೆ ಗಣಪತಿಯನ್ನು ಕಳಿಸಬೇಕೆಂದು ಅಂದು ॥ ೧೨೩ ॥ ಅವನನ್ನು ಕರೆದು— ಎಲೈ ಗಣೇಶನೇ, ರಾವಣನು ಹ್ಯಾಗಿದ್ದಾನೆ ನೋಡಿದೆಯಾ ? ಅವನು ನಿನ್ನನ್ನು ಸದಾ ಉಪೇಕ್ಷಿಸುತ್ತಾನೆ ॥ ೧೨೪ ॥ ಯಾವತ್ತೂ ದೇವತೆ ಗಳು ನಿನ್ನನ್ನು ವಂದಿಸುತ್ತಾರೆ. ಆದರಿಂದ ಅವರ ಮನೋರಥಗಳು ಪೂರೈಸುತ್ತವೆ ನಿನ್ನನ್ನು ಸದಾ ಉಪೇಕ್ಷಿ ಸುವಂಥ ರಾಕ್ಷಸರಿಗೆ ವಿಘ್ನಗಳು ಬಾಧಿಸುವವು. ॥ ೧೨೫ ॥ ಈಗ ನೋಡು, ರಾವಣನು ನಿನಗೆ ತಿಳಿಯದಂತೆ

+ ಶ್ರೀಪಾದವಲ್ಲಭ ದಿಗಂಬರಾ +
೮೪

ನಿಮ್ಮ ತಂದೆಯಾದ ಸದಾಶಿವನ ಕಡೆಯಿಂದ ಆತಿ ಮಹತ್ವದ್ದಾದ ಪ್ರಾಣಲಿಂಗವನ್ನು ತಕ್ಕೊಂಡು ಸಂತೋಷದಿಂದ ಹೋಗುತ್ತಿರುವನು. ॥ ೧೨೬ ॥ ಆದ್ದರಿಂದ ಈಗ ನೀನು ಒಂದು ಕೆಲಸ ಮಾಡಬೇಕು ಕೇಳು, ಏನಂದರೆ— ನೀನು ಗಿಡ್ಡ ಬಾಲರೂಪ ಧರಿಸಿ ಕಪಟ ರೂಪದಿಂದ ರಾವಣನ ಸಮೀಪಕ್ಕೆ ಹೋಗಬೇಕು. ॥ ೧೨೭ ॥ ಆಗ ದಾರಿಯಲ್ಲಿ ಸೂರ್ಯಾಸ್ತವಾಗುವದರಿಂದ ರಾವಣನು ಸಂಧ್ಯಾವಂದನೆ ಮಾಡಬೇಕೆನ್ನುವನು. ರಾವಣನು ಮುಂದೆ ಹೋಗದಂತೆ ಅಡ್ಡಿ ಮಾಡುವದಕ್ಕೆ ಈ ಮೊದಲು ನಾರದನು ಹೋಗಿದ್ದಾನೆ. ॥ ೧೨೮ ॥ ಆದರೆ ಶ್ರೀಶಂಕರನು ರಾವಣನಿಗೆ ಪ್ರಾಣಲಿಂಗವನ್ನು ಕೊಡುವ ಮುಂದೆ— ಎಲೈ ರಾವಣಾ ಶೌಚಾಚಮನ ಸಮಯದಲ್ಲಿ ನೀನು ಈ ಲಿಂಗವನ್ನು ನಿನ್ನ ಹತ್ತರ ಇಟ್ಟುಕೊಳ್ಳಬೇಡ ಮತ್ತು ಭೂಮಿಯ ಮೇಲೂ ಇಡಬೇಡ ಎಂದು ಹೇಳಿರುವನು. ॥ ೧೨೯ ॥ ಆದ್ದರಿಂದ ಎಲೈ ಗಣಪತಿಯೇ, ನೀನು ಸಣ್ಣ ಬಾಲಕನಾಗಿ ತೀವ್ರವಾಗಿ ರಾವಣನ ಎದುರಿಗೆ ಹೋಗಿ ನಮ್ರತನ ತೋರಿಸಿ ಆ ಲಿಂಗವನ್ನು ನಿನ್ನ ಕೈಯಲ್ಲಿ ಕೊಡುವಷ್ಟು ಸೂಕ್ಷ್ಮರೂಪದಿಂದ ವಿಶ್ವಾಸವನ್ನುಂಟು ಮಾಡು. ॥ ೧೩೦ ॥ ಸಂಧ್ಯಾಸಮಯದಲ್ಲಿ ಆವನು ವಿಶ್ವಾಸದಿಂದ ಆ ಲಿಂಗವನ್ನು ನಿನ್ನ ಕೈಯಲ್ಲಿ ಕೊಡುವನು ಆಗ ನೀನು ಆದನ್ನು ತೆಗೆದುಕೊಂಡು ಅವನು ಸಂಧ್ಯಾವಂದನೆಗೆ ಹೋದ ಕೂಡಲೆ ಆದನ್ನು ಭೂಮಿಯ ಮೇಲೆ ಇಟ್ಟುಬಿಡು ಆಗ ಅದು ಪಾತಾಳಕ್ಕೆ ಇಳಿದು ಅಲ್ಲಿಯೇ ಸ್ಥಿರವಾಗುವದು. ಎಂದು ಎಲ್ಲವನ್ನೂ ಕಲಿಸಿದನು ॥ ೧೩೧ ॥ ಈ ಪ್ರಕಾರ ವಿಷ್ಣುವಿನ ಮಾತು ಕೇಳಿ ಗಣಪತಿಯು ಸಂತೋಷಬಟ್ಟು— ಸ್ವಾಮೀ, ನಾರಾಯಣನೇ ಹಾಗೇ ಆಗಲಿ ಹೋಗುವೆನು ಆದರೆ ಈಗ ನನಗೆ ಹೊಟ್ಟೆ ಹಸಿದಿದೆ. ಈಗ ಸದ್ಯದಲ್ಲಿ ನನಗೆ ತಿನ್ನಲಿಕ್ಕೆ ಕೊಡು ಎಂದು ಕೇಳಿದನು ॥ ೧೩೨ ॥ ಏನಂದರೆ ಉಂಡಿ, ಎಳ್ಳುಂಡಿ, ಪಂಚಕಜ್ಜಾಯ, ಕಬ್ಬು, ಕೊಬ್ಬರಿ, ಸಕ್ಕರಿ, ದಾಳಿಂಬ ಮೊದಲಾದ ಹಣ್ಣು, ಹಾಲು, ತುಪ್ಪ, ॥ ೧೩೩ ॥ ಹುರಕಡ್ಲಿ, ಸಕ್ಕರೆ ಹಾಕಿದ ತಂಬಿಟ್ಟುಗಳನ್ನು ತೀವ್ರವಾಗಿ ನನಗೆ ತಿನ್ನಲಿಕ್ಕೆ ಕೊಡಬೇಕು ಎಂದನು. ॥ ೧೩೪ ॥ ಆಗ ನಾರಾಯಣನು ಅವನು ಬೇಡಿದ ಎಲ್ಲ ಪದಾರ್ಥಗಳನ್ನು ಕೂಡಲೆ ಒದಗಿಸಿ ಕೊಟ್ಟನು. ಗಣಪತಿಯು ಅವುಗಳನ್ನು ತಿನ್ನುತ್ತ

ಬ್ರಹ್ಮಚಾರಿಯ ವೇಷದಿಂದ ರಾವಣನ ಕಡೆಗೆ ವೇಗದಿಂದ ನಡೆದನು. ॥ ೧೩೫ ॥ ಅತ್ತ ಗಣಪತಿಯಕಿಂತ ಮುಂಚೆ ಹೋದ ಬ್ರಹ್ಮಋಷಿಯೂ ಶ್ರೇಷ್ಠ ಮಹಾತ್ಮನೂ ಆದ ನಾರದನು ಒಳ್ಳೇ ವೇಗದಿಂದ ರಾವಣನೆದುರಿಗೆ ಹೋಗಿ— ಇದೇನು ರಾವಣಾ ? ಎಲ್ಲಿಗೆ ಹೋಗಿದ್ದಿ ? ಎಲ್ಲಿಂದ ಬಂದೆ ? ಎಂದು ಕೇಳಿದನು. ॥ ೧೩೬ ॥ ಆಗ ರಾವಣನು— ಎಲೈ ನಾರದರೇ, ನಾನು ಕೈಲಾಸಕ್ಕೆ ಹೋಗಿ ಉಗ್ರ ತಪಸ್ಸು ಮಾಡಿ ಶ್ರೀಶಂಕರನನ್ನು ಸಂತೋಷ ಬಡಿಸಿದೆನು. ॥ ೧೩೭ ॥ ಆದರಿಂದ ಅವನು ನನಗೆ ಪ್ರಸನ್ನನಾಗಿ ಸಂತೋಷದಿಂದ ತನ್ನ ಪ್ರಾಣಲಿಂಗವನ್ನು ನನಗೆ ಕೊಟ್ಟು, ಅದರ ಅಪಾರವಾದ ಮಹಿಮೆಯನ್ನು ಹೇಳಿದನು ಎಂದನು ॥ ೧೩೮ ॥ ಆಗ ನಾರದನು— ಎಲೈ ರಾವಣಾ, ಈಗ ನೀನು ಮಹಾ ಸುದೈವಿಯು ! ನೀನು ಅದ್ಭುತವಾದ ಶಿವನ ಪ್ರಾಣಲಿಂಗವನ್ನು ಸಂಪಾದಿ ಸಿದಿ ಅಂದಮೇಲೆ ಕೇಳುವದೇನು ! ನಿನ್ನ ಪುಣ್ಯಕ್ಕೆ ಬೆಲೆಯಿಲ್ಲ ! ಆ ಲಿಂಗದ ಆದ್ಯಂತ ಮಹಿಮೆಯು ನನಗೂ ಗೊತ್ತಿದೆ, ॥ ೧೩೯ ॥ ರಾವಣಾ, ಎಲ್ಲಿ ಆ ಲಿಂಗವು ಹ್ಯಾಗೆ ಅದೆ ತೋರಿಸು ನೋಡುವೆನು ಅದರ ಗುರುತು ನನಗೆ ಅದೆ. ಆ ಲಿಂಗ ಲಕ್ಷಣವನ್ನು ನಾನು ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು ಎಂದನು. ॥ ೧೪೦ ॥ ಆಗ ರಾವಣನು ನಾರದರ ಮಾತಿನ ಮೇಲೆ ವಿಶ್ವಾಸವಿಡದೆ ಎಲ್ಲಿಯಾವರೂ ಕಸಿದುಕೊಂಡು ಹೋದಾನೆಂದು ದೂರ ಕ್ಕೆ ಹಿಡಿದು ಆ ಲಿಂಗವನ್ನು ಸ್ಪಷ್ಟವಾಗಿ ತೋರಿಸಿದನು. ॥ ೧೪೧ ॥ ಆಗ ನಾರದನು— ಎಲೈ ರಾವಣನೇ, ಈ ಲಿಂಗವು ಯಾವದಿವಸ ಹುಟ್ಟಿತು ? ಇದರ ಮಹಿಮೆಯು ಎಷ್ಟು ? ಇದರ ಅಪೂರ್ವವಾದ ಪೂರ್ವಾಪರ ಸಂಗತಿ ಯನ್ನು ಬಹು ಸುರಸವಾಗಿ ನಿನಗೆ ಹೇಳುವೆನು. ನೀನು ಸ್ವಲ್ಪ ಹೊತ್ತು ಇಲ್ಲಿ ಕೂತುಕೊಂಡು ಏಕಚಿತ್ತದಿಂದ ಕೇಳು. ॥ ೧೪೨–೧೪೩ ॥ ಪೂರ್ವದಲ್ಲಿ ಯಾವತ್ತು ಸುಗಂಧ ದ್ರವ್ಯವನ್ನು ತಿಂದಂಥ, ಕಾಲಾಗ್ನಿಗೆ ಸಮಾನವಾದ ಭಯಂಕರ ಸ್ವರೂಪ ಉಳ್ಳಂಥ ಒಂದು ಮೃಗವು ಈ ಬ್ರಹ್ಮಾಂಡ ಖಂಡದಲ್ಲಿ ಬಿದ್ದಿತ್ತು. ॥ ೧೪೪ ॥ ಆಗ ತ್ರೈಮೂರ್ತಿಗಳು ಬೇಟೆಯ ಸಲುವಾಗಿ ಬಂದು ಆ ಮೃಗವನ್ನು ನೋಡಿ ಅದನ್ನು ಕೊಂದು ಅವರು ಅದರ ಮೇಧಸ್ಸನ್ನು ಸ್ವೀಕರಿಸಿದರು. ॥ ೧೪೫ ॥ ಆ ಮೃಗಕ್ಕೆ ಮೂರು ಕೋಡುಗಳಿದ್ದವು. ಆ ಕೋಡುಗಳ ಬುಡ

ದಲ್ಲಿ ಮೂರು ಲಿಂಗಗಳಿದ್ದವು. ಆಗ ತ್ರಿಮೂರ್ತಿಗಳು ಅವು ತಮ್ಮ ಪ್ರಾಣಲಿಂಗವೆಂದು ಒಬ್ಬೊಬ್ಬರು ಒಂದೊಂದು ಲಿಂಗವನ್ನು ತಕ್ಕೊಂಡರು. ||೧೪೬|| ಆದರೆ ಶ್ರೀ ಶಂಕರನು ಮಾತ್ರ ಅದು ತನ್ನ ನಿಜವಾದ ಪ್ರಾಣಲಿಂಗ ವೆಂದೇ ನಿಶ್ಚಯಿಸಿದನು. ಎಲೈ ರಾವಣಾ, ಈಗ ನೀನು ಅದೇ ಲಿಂಗವನ್ನೇ ತಂದಿರುತ್ತೀ ನೀನೇ ಸುದೈವಿಯು! ಇನ್ನು ಈ ಲಿಂಗಮಹಿಮೆಯನ್ನು ಕೇಳು— ಈ ಲಿಂಗವನ್ನು ಮೂರು ವರ್ಷ ವಿಧಿಪ್ರಕಾರ ಪೂಜಿಸಿದವನು ನಿರ್ಗುಣಿ ಯಾದ ಈಶ್ವರನಾಗಿ ವರದ ಹಾಗು ವೇದಮೂರ್ತಿಯಾಗುವನು. ||೧೪೭|| ಮತ್ತು ಈ ಲಿಂಗವಿರುವ ಸ್ಥಾನವೇ ಕೈಲಾಸವಾಗುವದೆಂದು ತಿಳಿ ಎಲೈ ರಾವಣಾ, ಇದರಿಂದಲೇ ತ್ರೈಮೂರ್ತಿಗಳಿಗೆ ಮಹತ್ವ ಬಂದಿದೆ. ||೧೪೮|| ಈಗ ನಿನಗೆ ಇನ್ನೊಂದು ಅಪಾರವಾದ ಮಹಿಮೆಯುಳ್ಳ ಸಂಗತಿಯನ್ನು ಹೇಳುವೆನು ಕೇಳು ಎಂದನು. ಆಗ ರಾವಣನು— ಸ್ವಾಮೀ ನಾರದರೇ ನನಗೆಲ್ಲಾ ಗೊತ್ತದೆ ನಿಮ್ಮ ಸಂಗತಿಯು ಸಾಕು. ನಾನು ತೀವ್ರವಾಗಿ ಲಂಕೆಗೆ ಹೋಗಬೇಕಾಗಿದೆ ||೧೪೯|| ಈಗ ನನಗೆ ಬಹಳ ಹೊತ್ತಾಯಿತು ಎಂದು ಬಲಿಷ್ಠನಾದ ರಾವಣನು ಎದ್ದು ಮುಂದೆ ನಡೆದನು ಆಗ ನಾರದನು- ಎಲೈ ರಾವಣಾ, ಅತ್ತನೋಡು, ಈಗ ಸೂರ್ಯಾಸ್ತವಾಗುತ್ತ ಬಂತು ಬ್ರಾಹ್ಮಣರಿಗೆ ಇದು ಸಂಧ್ಯಾಕಾಲವು ||೧೫೦|| ಸಹಸ್ರ ವೇದಗಳನ್ನು ಓದುವಂಥ ನೀನು ಈ ಸಂಧ್ಯಾಕಾಲದಲ್ಲಿ ಮಾರ್ಗವನ್ನು ಕ್ರಮಿಸುತ್ತೀ ಆದರಿಂದ ಸಂಧ್ಯಾಲೋಪವಾಗುವದಲ್ಲದೆ ಮಾರ್ಗದಲ್ಲಿ ಕತ್ತಲೆಯೂ ಆಗುವದು ||೧೫೧|| ಈಗ ನಾನು ಸಂಧ್ಯಾಮಾಡಲಿಕ್ಕೆ ಹೋಗುತ್ತೇನೆ ಎಂದು ನಾರದನು ವಿನಯದಿಂದ ರಾವಣನನ್ನು ಕೇಳಿ ಅಲ್ಲಿರುವ ನದೀತೀರಕ್ಕೆ ಹೋದನು ||೧೫೨|| ಅಷ್ಟರಲ್ಲಿ ಬ್ರಹ್ಮಚಾರಿವೇಷದಿಂದ ಗಣಪತಿಯು ತೀವ್ರವಾಗಿ ರಾವಣನ ಸಮೀಪಕ್ಕೆ ಬಂದು ಅವನನ್ನು ನೋಡಿಯೂ ನೋಡದವನಂತೆ ಆಶ್ಚರ್ಯಕರವಾಗಿ ಸಮಿಧೆಗಳನ್ನು ತೆಗೆಯುತ್ತಿದ್ದನು. ||೧೫೩|| ಅತ್ತ ನಾರದನು ಹೋದಮೇಲೆ ಇತ್ತ ರಾವಣನು ಮನಸ್ಸಿನಲ್ಲಿ ಆಲೋಚಿಸಿ— ತ್ರಿಕಾಲ ದಲ್ಲಿ ಸಂಧ್ಯಾ ಮಾಡಲಿಕ್ಕೇಬೇಕು. ಈ ವೇಳೆಯಲ್ಲಿ ನಾನು ಸಂಧ್ಯಾ ಮಾಡದಿದ್ದರೆ ವ್ರತ ಭಂಗವಾಗುವದು. ಈಗ ನನಗೊಂದು ಸಂದೇಹ ಬಂದದೆ. ||೧೫೪|| ಶ್ರೀ ಶಂಕರನು ನನಗೆ ಈ ಲಿಂಗವನ್ನು ಭೂಮಿಯಮೇಲೆ

ಇಡಬಾರದೆಂದು ಹೇಳಿರುವನು, ಈಗಂತೂ ಸಾಯಂಕಾಲದ ಸಂಧ್ಯಾಸಮಯವಾಗಿದೆ. ಸಂಧ್ಯೆಯನ್ನಂತೂ ಮಾಡಲಿಕ್ಕೇಬೇಕು. ಈಗ ಏನು ಮಾಡಲಿ? ಈ ಲಿಂಗವನ್ನು ಯಾರಕೈಯಲ್ಲಿ ಕೊಡಲಿ? ಎಂದು ಸುತ್ತು ಮುತ್ತು ನೋಡುತ್ತಿದ್ದನು ॥ ೧೫೫ ॥ ಅಷ್ಟರಲ್ಲಿ ಬ್ರಹ್ಮಚಾರಿಯಾದ ಒಬ್ಬ ಸುಂದರ ಬಾಲಕನು ನದೀತೀರದಲ್ಲಿ ಆಡ್ತಾಡುತ್ತಿದ್ದನು ಅದನ್ನು ಕಂಡು ॥ ೧೫೬ ॥ ರಾವಣನು ಮನಸ್ಸಿನಲ್ಲಿ ವಿಚಾರಿಸುತ್ತ— ಆಹೋ, ಈ ಬಾಲಕನು ಬ್ರಹ್ಮಚಾರಿಯಾಗಿ ಕಾಣಿಸುತ್ತಾನೆ ಅವನು ನನಗೆ ವಿಶ್ವಾಸಘಾತ ಮಾಡಲಿಕ್ಕಿಲ್ಲ. ಅವನ ಕೈಯಲ್ಲಿ ಈ ಲಿಂಗವನ್ನು ಕೊಟ್ಟು, ॥ ೧೫೭ ॥ ನಾನು ಸ್ವಸ್ಥ ಚಿತ್ತದಿಂದ ಸಂಧ್ಯಾ ಮಾಡುತ್ತೇನೆ. ಲಿಂಗವಂತೂ ಅವನ ಕೈಯಲ್ಲಿರುತ್ತದೆ ಅವನಂತೂ ನಿಶ್ಚಯವಾಗಿ ಬಾಲಕನಿರುತ್ತಾನೆ ಎಂದೆನ್ನುತ್ತ ರಾವಣನು ಆ ಬಾಲ ಗಣಪತಿಯ ಹತ್ತರ ಹೋದನು ॥ ೧೫೮ ॥ ದಶಮುಖದ ರಾವಣನನ್ನು ನೋಡಿದಕೂಡಲೆ ಬ್ರಹ್ಮಚಾರಿಯಾದ ಗಣಪತಿಯು ಹೆದರಿದವನಂತೆ ಹಿಂದಕ್ಕೆ ಓಡಿಹೋಗಹತ್ತಿದನು. ಅದನ್ನು ಕಂಡು ರಾವಣನು ಕೂಡಲೆ ಏಕಮುಖದ ಬ್ರಾಹ್ಮಣ ಸ್ವರೂಪವನ್ನು ಹೊಂದಿ— ಎಲೈ ಬ್ರಹ್ಮಚಾರಿಯೇ ಹೆದರಬೇಡ ಹೆದರಬೇಡ ನಿಲ್ಲು ನಿಲ್ಲು ಎಂದು ಹೇಳಿ ಅವನಿಗೆ ಅಭಯವನ್ನು ಕೊಟ್ಟು, ಅವನಹತ್ತರ ಹೋಗಿ ॥ ೧೫೯ ॥— ಎಲೈ ಬಾಲಕಾ, ನೀನು ಯಾರು? ನಿನ್ನ ತಂದೆ-ತಾಯಿಗಳ್ಯಾರು? ನೀನು ಯಾವ ಕುಲದಲ್ಲಿ ಹುಟ್ಟಿರುವಿ? ಎಂದು ಕೇಳಿದನು. ॥ ೧೬೦ ॥ ಆಗ ಗಣಪತಿಯು— ಎಲೈ ರಾವಣಾ ನೀನು ನನಗೆ ಇಷ್ಟೆಲ್ಲಾ ಕೇಳಲಿಕ್ಕೆ ಕಾರಣ? ನಮ್ಮ ತಂದೆಯು ನಿನಗೆಷ್ಟು ಸಾಲ ಕೊಡಬೇಕು ಹೇಳು ಎಂದನು ॥ ೧೬೧ ॥ ಅದನ್ನು ಕೇಳಿ ರಾವಣನು ನಕ್ಕು ಒಳ್ಳೇ ಪ್ರೀತಿಯಿಂದ ಅವನ ಕೈಹಿಡಿದು— ತಮ್ಮಾ, ಬಾಲಕಾ, ನೀನು ಯಾರ ಮಗನೆಂಬದನ್ನು ನಾನು ನಿನಗೆ ಪ್ರೀತಿಯಿಂದ ಕೇಳುತ್ತೇನೆ ಹೇಳು ಎಂದನು. ॥ ೧೬೨ ॥ ಆಗ ಆ ಬ್ರಹ್ಮಚಾರಿಯು— ಎಲೈ ರಾವಣಾ, ನಮ್ಮ ತಂದೆಯನ್ನೇನುಕೇಳುತ್ತೀ? ಅವನು ಜಟಾಧಾರಿಯೂ, ಸರ್ವಾಂಗ ಭಸ್ಮಧರನೂ, ರುದ್ರಾಕ್ಷ ಮಾಲಾಧರನೂ ಆಗಿರುವನು. ॥ ೧೬೩ ॥ ಆತನಿಗೆ ಶಂಕರನೆಂಬ ಹೆಸರು, ಅವನು ವೃಷಭಾರೂಢನಾಗಿ ನಮ್ಮ ತಾಯಿಯೂ ಜಗನ್ಮಾತೆಯೂ ಆದ ಉಮಾ

ಎಂಬವಳೊಡನೆ ಹಗಲು ರಾತ್ರಿ ಭಿಕ್ಷೆ ಬೇಡುತ್ತಿರುವನು. ॥ ೧೬೪ ॥ ಎಲೈ ರಾವಣಾ, ನಮ್ಮನ್ನು ಇಷ್ಟು ಕೇಳುತ್ತೀ ? ನಿನ್ನನ್ನು ಕಂಡು ನನಗೆ ಬಹು ಭಯಬರುತ್ತದೆ. ನನ್ನ ಕೈ ಬಿಡು ನಾನು ಹೋಗುತ್ತೇನೆ ಎಂದನು. ॥ ೧೬೫ ॥ ಆಗ ರಾವಣನು— ಎಲೈ ಬ್ರಹ್ಮಚಾರಿಯೇ, ಹಾಗಾದರೆ ನಿನ್ನ ತಂದೆಯು ದರಿದ್ರನಿದ್ದು, ದಿನಾಲು ಭಿಕ್ಷೆ ಬೇಡುತ್ತಿರುವನೆಂದಬಳಿಕ ನಿನಗೆ ಸ್ವಲ್ಪಾದರೂ ಸುಖವಿಲ್ಲೆಂಬಂತೆ ಕಾಣುತ್ತದೆ ॥ ೧೬೬ ॥ ನನ್ನ ರಾಜಧಾನಿಯಾದ ಲಂಕಾಪುರವು, ರತ್ನಖಚಿತವಾಗಿ ಸುಂದರವಾಗಿರುವದು ಆದ್ದರಿಂದ ನೀನು ತೀವ್ರವಾಗಿ ನನ್ನಸಂಗಡ ನಮ್ಮ ಮನೆಯು ದೇವರ ಪೂಜ ಮಾಡಿಕೊಂಡು ಸುಖವಾಗಿರು. ॥ ೧೬೭ ॥ ಆಗ ನಾನು ನೀನು ಕೇಳಿದ್ದನ್ನೆಲ್ಲವನ್ನೂ ಕೊಡುವೆನು ಆಮೇಲೆ ನೀನು ನಮ್ಮಹತ್ತರ ಸುಖದಿಂದಿರುವಿಯಂತೆ ತೀವ್ರ ನಡೆ ಎಂದನು. ॥ ೧೬೮ ॥ ಅವನ ಮಾತು ಕೇಳಿ ಬ್ರಹ್ಮಚಾರಿ ಗಣಪತಿಯು— ಎಲೈ ರಾವಣಾ, ನಿನ್ನ ಲಂಕೆಯಲ್ಲಿ ಬಹು ಮಂದಿ ರಾಕ್ಷಸರಿರುವರು. ನಾನು ಅರಣ್ಯವಾಸಿಯಾದ ಬಾಲಕನು, ನಾನು ನಿಮ್ಮೂರಿಗೆ ಬಂದರೆ ನಿಮ್ಮ ರಾಕ್ಷಸರು ನನ್ನನ್ನು ತಿಂದುಬಿಟ್ಟಾರು. ॥ ೧೬೯ ॥ ಆದ್ದರಿಂದ ಮಹಾರಾಯಾ, ನಾನು ನಿಮ್ಮೂರಿಗೆ ಬರುವದಿಲ್ಲಪ್ಪಾ! ರಾವಣಾ, ಈಗ ನನಗೆ ಬಹಳ ಹಸಿವೆಯಾಗಿದೆ ನನ್ನ ಕೈಬಿಡು ಮನೆಗೆ ಹೋಗುತ್ತೇನೆ ಎಂದು ಉಂಡಿ ಮೊದಲಾದವುಗಳನ್ನು ತಿನ್ನಹತ್ತಿದನು. ॥ ೧೭೦ ॥ ಆಗ ರಾವಣನು ಅವನನ್ನು ಸಮಾಧಾನ ಮಾಡುತ್ತ— ಎಲೈ ಬಾಲಕಾ, ಆದಿರಲಿ. ಈಗ ಸ್ವಲ್ಪ ನನ್ನ ಮಾತು ಕೇಳು. ಈಗ ಸಂಧ್ಯಾಸಮಯವಾಗಿದೆ, ಇಲ್ಲಿಯೇ ಸಂಧ್ಯಾಮಾಡಿ ತೀವ್ರ ಬರುತ್ತೇನೆ ನಾನು ಬರುವತನಕ, ನೀನು ಈ ಲಿಂಗವನ್ನು ಸ್ವಲ್ಪ ಹೊತ್ತು ಹಿಡಕೊಂಡು ನಿಂತುಕೋ, ಯಾಕಂದರೆ ಇದನ್ನು ಭೂಮಿಯಮೇಲೆ ಇಡಬಾರದಾಗಿದೆ ನಾನು ತೀವ್ರವಾಗಿ ಬರುವೆನು ಎಂದನು. ॥ ೧೭೧ ॥ ಆಗ ಗಣಪತಿಯು ವಿನಯದಿಂದ— ಅಯ್ಯಾ ರಾವಣನೇ ನಾನು ಈ ಲಿಂಗವನ್ನು ಹಿಡಿಯುವದಿಲ್ಲ ಯಾಕಂದರೆ ನಾನು ಬ್ರಹ್ಮಚಾರಿಯಾದ ಬಾಲಕನೂ ಮತ್ತು ಅರಣ್ಯವಾಸಿಯೂ ಆಗಿರುವೆನು ನನ್ನನ್ನು ಸುಮ್ಮನೆ ಕಾಡಬೇಡ. ॥ ೧೭೨ ॥ ಈ ಲಿಂಗವು ಭಾರವಾಗಿರುವಂತೆ ಕಾಣುವದು. ನಾನಂತೂ

ಹುಚ್ಚ ಬಾಲಕನು! ನನ್ನಿಂದ ಇದನ್ನು ಹಿಡಕೊಂಡು ನಿಲ್ಲುವದಾಗಲಿಕ್ಕಿಲ್ಲ, ಆದಕಾರಣ ನಾನು ಹೋಗುತ್ತೇನೆ, ನನ್ನ ಕೈ ಬಿಡು ನಿನಗೆ ಪುಣ್ಯ ಬರುವದು ಎಂದು ಹೇಳಿದನು. ॥ ೧೭೩ ॥ ಆಗ ರಾವಣನು ಆ ವಟುವನ್ನು ನಾನಾರೀತಿಯಿಂದ ಒಡಂಬಡಿಸಿ ಆ ಲಿಂಗವನ್ನು ಅವನ ಕೈಯಲ್ಲಿ ಕೊಟ್ಟು, ತಾನು ಸಂಧ್ಯಾ ಮಾಡುವದಕ್ಕೆ ಸಮುದ್ರತೀರಕ್ಕೆ ಹೋಗಿ ಕೂತನು. ॥ ೧೭೪ ॥ ಆಗ ಬ್ರಹ್ಮಚಾರಿಯು ಆ ಲಿಂಗವನ್ನು ಹಿಡಕೊಂಡು ನಿಂತು ವಿನಯದಿಂದ— ಎಲೈ ರಾವಣಾ, ಈ ಲಿಂಗವು ಬಹಳ ಭಾರವಾಗಿದೆ, ಇದನ್ನು ನಾನು ತೀವ್ರವಾಗಿ ಭೂಮಿಯ ಮೇಲೆ ಇಡುವೆನು. ॥ ೧೭೫ ॥ ನಾನು ನಿನ್ನನ್ನು ಮೂರುಸಾರೆ ಮಾತ್ರ ಒದರುವೆನು. ಆಗ ನೀನು ಒಂದು ವೇಳೆ ಬರದಿದ್ದರೆ ನಾನು ಈ ಲಿಂಗವನ್ನು ನಿಶ್ಚಯವಾಗಿ ಭೂಮಿಯ ಮೇಲಿಡುವೆನು. ॥ ೧೭೬ ॥ ಆಮೇಲೆ ನನ್ನಮೇಲೆ ಮಾತಿಲ್ಲ ಎಂದು ನಿರ್ಧಾರದಿಂದ ಹೇಳಿ ಆ ಲಿಂಗವನ್ನು ಹಿಡಕೊಂಡು ನಿಂತನು. ಆಗ ಯಾವತ್ತು ದೇವತೆಗಳು ವಿಮಾನರೂಢರಾಗಿ ಆಕಾಶದಲ್ಲಿ ನಿಂತು ಈ ಕೌತುಕವನ್ನು ನೋಡುತ್ತಿದ್ದರು. ॥ ೧೭೭ ॥ ಇತ್ತ ರಾವಣನು ಅರ್ಘ್ಯಕೊಡುವ ಸಮಯದಲ್ಲಿ ಗಣಪತಿಯು— ಏ ರಾವಣಾ, ಈ ಲಿಂಗವು ಬಹಳ ಜಡವಾಗಿರುವದು ಕಾರಣ ನೀನು ತೀವ್ರವಾಗಿ ಬಂದು ಇದನ್ನು ತೆಗೆದುಕೋ ಎಂದು ಮೊದಲನೇಸಾರೆ ಒದರಿದನು. ॥ ೧೭೮ ॥ ಆಗ ನ್ಯಾಸಪೂರ್ವಕ ಅರ್ಘ್ಯ ಕೊಡುತ್ತಿದ್ದ ರಾವಣನು ಮಾತಾಡುವ ಹಾಗಿಲ್ಲದ್ದರಿಂದ ಕೈ ಸನ್ನೆ ಮಾಡಿ ಈಗ ಬರುವೆನು ನಿಲ್ಲು ಎಂದು ತಿಳಿಸಿದನು. ॥ ೧೭೯ ॥ ಮತ್ತೆ ಒಂದು ಕ್ಷಣದಮೇಲೆ ಗಣಪತಿಯು— ಏ ರಾವಣಾ ಬೇಗ ಬಾ ಲಿಂಗವು ಬಹಳ ಭಾರವಾಗಿರುವದು ಎಂದು ೨ನೇ ಸಾರೆ ಒದರಿದನು ॥ ೧೮೦ ॥ ಆಗಸಹ ಧ್ಯಾನಸ್ಥನಾಗಿದ್ದ ರಾವಣನು ಬರಲಿಲ್ಲ. ಅದನ್ನು ಕಂಡು ಗಣೇಶನು ವಿಚಾರ ಮಾಡಿ ೩ನೇ ಸಾರೆ ಒದರಿ ಯಾವತ್ತು ದೇವತೆಗಳು ನೋಡುತ್ತಿರಲು ಆ ಲಿಂಗವನ್ನು ಭೂಮಿಯ ಮೇಲಿಡುವದಕ್ಕಾಗಿ ॥ ೧೮೧ ॥ ಮನಸ್ಸಿನಲ್ಲಿ ಶ್ರೀ ವಿಷ್ಣುವನ್ನು ಧ್ಯಾನಿಸಿ ಆ ಲಿಂಗವನ್ನು ಭೂಮಿಯ ಮೇಲಿಟ್ಟು ಸ್ಥಾಪಿಸಿಬಿಟ್ಟನು ಆಗ ಯಾವತ್ತು ದೇವತೆಗಳು ಸಂತೋಷಬಟ್ಟು ಪುಷ್ಪ ವೃಷ್ಟಿಯನ್ನು ಮಾಡಿದರು. ಇದನ್ನೆಲ್ಲ ನೋಡುತ್ತ ದೂರ ಮರೆಗೆ ನಿಂತ ನಾರದನು

ಕೆಲಸವಾಯಿತೆಂದು ಆನಂದದಿಂದ ತಂಬೂರಿಯನ್ನು ಬಾರಿಸುತ್ತ ಹರಿ ನಾಮ ಗರ್ಜನ ಮಾಡುತ್ತ ಆಕಾಶ ಮಾರ್ಗವಾಗಿ ನಡೆದನು. ॥ ೧೮೨ ॥ ಆಮೇಲೆ ರಾವಣನು ಅರ್ಘ್ಯಕೊಟ್ಟು ತೀವ್ರವಾಗಿ ಬಂದು ಲಿಂಗವು ಭೂಮಿಯಮೇಲೆ ಇಡಲ್ಪಟ್ಟದ್ದನ್ನು ಕಂಡು ಅವನು ಮನಸ್ಸಿನಲ್ಲಿ ಬಹಳವಾಗಿ ದುಃಖಿಸಿ ॥ ೧೮೩ ॥ ಆವೇಶ ದಿಂದ ಅಲ್ಲಿ ನಿಂತಿದ್ದ ಗಣೇಶನ ತಲೆಯಮೇಲೆ ಒಳ್ಳೇ ಕಸುವಿನಿಂದ ಗುದ್ದಿದನು, ಆಗ ಗಣಪತಿಯು ಹಾಸ್ಯ ಮುಖ ದಿಂದ ಅಳುತ್ತ ಭೂಮಿಯಮೇಲೆ ಬಿದ್ದು ಹೊರಳಾಡುತ್ತ ॥ ೧೮೪ ॥—ಎಲೈ ರಾವಣಾ, ಬಾಲಕನಾದ ನನ್ನನ್ನೇಕೆ ಹೊಡೆದಿ ? ಲಿಂಗವು ಭಾರವಾದರೆ ಭೂಮಿಯ ಮೇಲಿಡುವೆನೆಂದು ನಿನಗೆ ನಾನು ಮೊದಲೇ ಹೇಳಿದ್ದಿಲ್ಲವೇ ? ಕರೆದರೆ ನೀನೇಬರಲಿಲ್ಲ ನಾನೇನು ಮಾಡಲಿ ? ನೀನು ಸುಮ್ಮಸುಮ್ಮನೆ ನನ್ನನ್ನು ಹೊಡೆದದ್ದರಿಂದ ಈಗ ನಾನು ನಮ್ಮಪ್ಪನಿಗೆ ಹೇಳುತ್ತೇನೆ ನೋಡು ! ಎಂದು ಅನ್ನುತ್ತ ಹೋದನು. ॥ ೧೮೫ ॥ ಇತ್ತ ರಾವಣನು ಮನಸ್ಸಿನಲ್ಲಿ— ಲಿಂಗವಂತೂ ಭೂಮಿಯಮೇಲೆ ಇಡಲ್ಪಟ್ಟಿತು, ಇನ್ನೇನು ಮಾಡಲಿ ? ಎಂದು ಆ ಲಿಂಗವನ್ನು ತನ್ನ ಇಪ್ಪತ್ತೂ ಕೈಗಳಿಂದ ಹಿಡಿದು ಕಿತ್ತಲಿಕ್ಕೆ ನಾನಾರೀತಿಯಿಂದ ಪ್ರಯತ್ನಿಸುತ್ತ ಭೂಮಿ ಸಹಿತ ಅಗಳಾಡಿಸಹತ್ತಿದನು. ॥ ೧೮೬ ॥ ಆಗ ಭೂಮಿಯು ನಡುಗಿತು. ಆ ಲಿಂಗವು ಬಹಳ ಭಾರವಾಗಿ ಕಂಡದ್ದರಿಂದ ಮಹಾ ಬಲದಿಂದ ಅದನ್ನು ಎತ್ತ ಲಿಕ್ಕೆ ಹೋದನು ಆದರೂ ಆ ಲಿಂಗವು ಮೇಲಕ್ಕೆ ಬರಲಿಲ್ಲ. ಆ ಮೇಲೆ ಅವನು ಆ ಲಿಂಗವನ್ನು ಹತ್ತೂ ತಲೆ ಗಳಿಂದ ಬಡೆದು ಕಿತ್ತಬೇಕೆಂದು ಪ್ರಯತ್ನ ಮಾಡಹತ್ತಿದನು. ಆದರೂ ಅದು ಮಹಾ ಬಲವಾಗಿಯೇ ಇದ್ದು ಪಾತಾಳಕ್ಕೆ ಇಳಿದುಬಿಟ್ಟದ್ದರಿಂದ ಅದು ಮೇಲಕ್ಕೆ ಬರಲಿಲ್ಲ. ॥ ೧೮೭ ॥ ಆ ಕಾರಣದಿಂದ ಆ ಲಿಂಗಕ್ಕೆ "ಮಹಾಬಲೇಶ್ವರ" ಲಿಂಗವೆಂಬ ಹೆಸರಾಯಿತು. ಆ ಮೇಲೆ ರಾವಣನು ಆ ಲಿಂಗವನ್ನು ಮುರಡಿಯನ್ನು ಮಾಡಿ ಜಗ್ಗಹತ್ತಿದನು. ಆಗ ಅದು ಗೋಕರ್ಣದ (ಆಕಳ ಕಿವಿಯ) ಆಕಾರವಾಯಿತು ಇಷ್ಟೇ ! ಆದರೆ ಆ ಲಿಂಗವು ಮಾತ್ರ ಕಡೆಗೆ ಬರಲಿಲ್ಲ. ಅದರಿಂದ ಆ ಪ್ರದೇಶಕ್ಕೆ "ಗೋಕರ್ಣ"ವೆಂಬ ಹೆಸರು ಬಂತು. ॥ ೧೮೮ ॥ ಈ ಪ್ರಕಾರ ಮಾಡಿ ರಾವಣನು ಇದು ದೇವತೆಗಳ ತಂತ್ರವೆಂದು ಹಲ್ಲುಕಡಿಯುತ್ತ ಮೋರೆ ಒಣಗಿಸಿಕೊಂಡು

ಸುಮ್ಮನೆ ಲಂಕೆಗೆ ಹೋದನು. ಎಲೈ ನಾಮಧಾರಕನೇ ಮುಂದೆ ಅನೇಕಕಾಲದ ಮೇಲೆ ಅದೇ ರಾವಣನು ಆ ಗೋಕರ್ಣಕ್ಕೆ ಹೋಗಿ, ಉಗ್ರವಾದ ತಪಸ್ಸು ಮಾಡಿ ತನಗೆ ಬೇಕಾದ ವರಗಳನ್ನು ಪಡೆದನು. ಈ ಪ್ರಕಾರ ಆ ಗೋಕರ್ಣ ಕ್ಷೇತ್ರದಲ್ಲಿ ಈಶ್ವರನ ಪ್ರಾಣಲಿಂಗವು ಮಹಾಬಲೇಶ್ವರ ಎಂಬ ಹೆಸರಿನಿಂದ ಸ್ಥಾಪನಾ ಆಯಿತು. ಆಮೇಲೆ ಮೂವತ್ತು ದೇವತೆಗಳು ತಾವೂ ಅಲ್ಲಿಗೆ ಬಂದು ವಾಸಮಾಡಿದರು ಆಗ ಆ ಗೋಕರ್ಣ ಕ್ಷೇತ್ರದ ಖ್ಯಾತಿಯಾಯಿತು ॥ ೧೯ ॥ ಆ ಗೋಕರ್ಣ ಕ್ಷೇತ್ರದಲ್ಲಿ ಇನ್ನೂ ಅಪಾರವಾದ ಮಹಿಮೆಗಳಾದವು ಅವುಗಳನ್ನು ಹೇಳಲಿಕ್ಕೆ ಅಸಾಧ್ಯವಾಗಿರುವದು ಆ ಗೋಕರ್ಣವು ಒಳ್ಳೇ ಪ್ರಖ್ಯಾತವಾದದ್ದೆಂದು ಸ್ಕಂದಪುರಾಣದಲ್ಲಿ ವಿಸ್ತಾರವಾಗಿ ಹೇಳಿರುವದು. ಅದರಿಂದ ಅದರ ಖ್ಯಾತಿಯು ತ್ರಿಲೋಕಗಳಲ್ಲಿ ಹಬ್ಬಿರುವದು ಎಂದು ಹೇಳಿದರು ॥ ೨೦ ॥ ಅವರ ಮಾತು ಕೇಳಿ ನಾಮಧಾರಕನು ಸಂತೋಷಬಟ್ಟು ಸಿದ್ಧರ ಚರಣಕ್ಕೆ ನಮಸ್ಕಾರ ಮಾಡಿದನು ಎಂದು ಸರಸ್ವತೀ ಗಂಗಾಧರನು ಶ್ರೋತೃಗಳಿಗೆ ಹೇಳಿದನು. ॥ ೨೧ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ ಗೋಕರ್ಣ ಮಹಿಮಾ, ಮಹಾಬಲೇಶ್ವರ ಲಿಂಗಸ್ಥಾಪನಂ ನಾಮ ಷಷ್ಠೋಽಧ್ಯಾಯಃ ॥ ೬ ॥ ಶ್ರೀ ಗುರುದೇವದತ್ತ ॥

—: ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು —

**— ೬ನೇ ಅಧ್ಯಾಯ ಸಮಾಪ್ತ —**

# ೭ನೇಯ ಅಧ್ಯಾಯ

## — ಗೋಕರ್ಣ ಮಹಿಮೆಯ ವರ್ಣನೆ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕನು ಸಿದ್ಧರನ್ನು ಕುರಿತು-- ಸ್ವಾಮೀ ಸಿದ್ಧಮುನಿಗಳೇ, ಪೂರ್ವದೊಳು ಆ ಗೋಕರ್ಣದ ಮಹಿಮೆಯು ಯಾರಿಗೆ ಪ್ರತ್ಯಕ್ಷವಾಗಿ ತಿಳಿಯಿತು ಎಂಬದನ್ನು ನನಗೆ ಕೃಪೆಯಿಂದ ಹೇಳಿರಿ ||೧|| ಶ್ರೀಪಾದ ಗುರುಗಳು ಸಮಸ್ತ ತೀರ್ಥಗಳನ್ನು ಬಿಟ್ಟು ಆ ಗೋಕರ್ಣಕ್ಕೇ ಯಾಕೆ ಹೋದರು ? ಮತ್ತು ಪೂರ್ವದಲ್ಲಿ ಅಲ್ಲಿ ಯಾರು ಆರಾಧನೆ ಮಾಡಿದರು ? ಎಂಬ ಪುರಾಣ ಪ್ರಸಿದ್ಧವಾದ ಕಥೆಯನ್ನು ನನಗೆ ಹೇಳಿರಿ ||೨|| ಶ್ರೀ ಗುರುಗಳು ಪ್ರೀತಿಸುವಂಥ ಆ ಗೋಕರ್ಣ ತೀರ್ಥದ ಮಹಿಮೆಯನ್ನು ಕೇಳಬೇಕೆಂಬ ಇಚ್ಛೆಯು ನನ್ನ ಮನಸ್ಸಿನಲ್ಲಿ ಬಹಳ ಅದೆ. ಕಾರಣ ಜ್ಞಾನಜ್ಯೋತಿಗಳೂ, ಕೃಪಾ ಸಿಂಧುಗಳೂ ಗುರುರಾಯರೂ ಆದ ತಾವು ನನಗೆ ಹೇಳಬೇಕು ಎಂದನು ||೩|| ಆಗ ಸಿದ್ಧರು— ಎಲೈ ನಾಮಧಾರಕನೇ, ನನಗ ಗೋಕರ್ಣ ಮಹಿಮೆಯನ್ನು ಕೇಳುತ್ತೀ. ಅದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು ||೪||

ಪೂರ್ವಯುಗದಲ್ಲಿ ಇಕ್ಷ್ವಾಕು ವಂಶದಲ್ಲಿ ಮಿತ್ರಸಹ ಎಂಬ ರಾಜನು ಪ್ರತಾಪವಂತನೂ ಸಕಲ ಕ್ಷಾತ್ರ ಧರ್ಮವನ್ನು ತಿಳಿದವನೂ ಸಕಲ ಧರ್ಮ-ಕರ್ಮಗಳನ್ನು ಬಲ್ಲವನೂ ||೫|| ಸಕಲ ಶಾಸ್ತ್ರಜ್ಞನೂ ವಿವೇಕಿಯೂ, ಶ್ರುತಿ-ಸ್ಮೃತಿಗಳನ್ನು ಬಲ್ಲವನೂ, ಬಲಾಢ್ಯನೂ, ಮಹಾ ಶೂರನೂ ಮಹಾ ತೇಜಸ್ವಿಯೂ ವಿದ್ಯಾವಂತನೂ ಉದ್ಯೋಗಿಯೂ ದಯಾನಿಧಿಯೂ ಆಗಿದ್ದನು ||೬|| ಹೀಗೆ ಇರುವಾಗ ಆ ರಾಜನು ಒಂದು ದಿವಸ ವಿನೋದದಿಂದ ಬೇಟೆಯಾಡುವದಕ್ಕಾಗಿ ಹೊರಟು ಸಿಂಹ ಶಾರ್ದೂಲ ಮುಂತಾದ ಕ್ರೂರ ಮೃಗಗಳುಳ್ಳಂಥ ಮಹಾ ವನ

ವನ್ನು ಹೊಕ್ಕನು. || ೭ || ಆ ನಿರ್ಮಾನುಷವಾದ ಅರಣ್ಯದಲ್ಲಿ ಆ ರಾಜನು ಬೇಟೆಯಾಡುತ್ತಿರುವಾಗ ಅಲ್ಲಿ ಒಬ್ಬ ಭಯಂಕರ ಜ್ವಾಲಾಕಾರನಾದ ಅದ್ಭುತ ದೈತ್ಯನು ಭೆಟ್ಟಿಯಾದನು. || ೮ || ಅವನನ್ನು ನೋಡಿದಕೂಡಲೆ ರಾಜನು ಸಿಟ್ಟಿನಿಂದ ಅವನ ಮೇಲೆ ಅನೇಕ ಬಾಣದ ಮಳೆಯನ್ನು ಸುರಿಸಿದನು. ಆಗ ಆ ರಾಕ್ಷಸನು ಮೂರ್ಛೆ ಬಂದು ಭೂಮಿಯ ಮೇಲೆ ಬಿದ್ದನು || ೯ || ಆಗ ಅವನ ಹತ್ತರಿದ್ದ ಅವನ ತಮ್ಮನು ಒಳ್ಳೇ ಭಯಂಕರವಾಗಿ ಅಳುತ್ತ ಕಲ್ಲಿನಿಂದ ಹಣೆ ಹಣೆ ಘಟ್ಟಿಸಿಕೊಳ್ಳುತ್ತ ಅಣ್ಣನ ಸಲುವಾಗಿ ಬಹಳ ಶೋಕವಮಾಡಿದನು || ೧೦ || ಪ್ರಾಣ ಬಿಡುವಾಗ ಆ ರಾಕ್ಷಸನು ತನ್ನ ತಮ್ಮನಿಗೆ ಒಂದು ಗುಟ್ಟಿನ ಸಂಗತಿ ಹೇಳುತ್ತಾನೆ— ಎಲೈ ತಮ್ಮನೇ, ನೀನು ನಿಜವಾಗಿ ನನ್ನ ತಮ್ಮನೇ ಆಗಿದ್ದರೆ ಈ ರಾಜನು ಹೊಡೆದ ನನ್ನ ಸೇಡನ್ನು ತಕ್ಕೊಳ್ಳಬೇಕು || ೧೧ || ಎಂದು ಅವನು ತನ್ನ ತಮ್ಮನಿಗೆ ಹೇಳಿ ಪ್ರಾಣಬಿಟ್ಟನು. ಆಗ ಅವನ ತಮ್ಮನು ಅನೇಕ ಮಾಯೆಯನ್ನು ಮಾಡಿ ರಾಜನಿಗೆ ತಿಳಿಯದಂತೆ ಮನುಷ್ಯ ರೂಪವನ್ನು ಧರಿಸಿದನು || ೧೨ || ಆಮೇಲೆ ಅವನು ಸೌಮ್ಯವಾಗಿ ಮಾತಾಡುತ್ತ ಅತಿ ನಮ್ರತನದಿಂದ ರಾಜನಿಗೆ ಹೇಳಿಕೊಂಡು ಅವನ ಸೇವಕನಾದನು || ೧೩ || ಅವನು ಒಳ್ಳೇ ನಂಬಿಗೆಯ ಸೇವಕನಂತೆ ನಾನಾರೀತಿಯಾಗಿ ಸೇವೆ ಮಾಡುತ್ತ ಆ ರಾಜನ ಮನಸ್ಸಿಗೆ ಬರುವಂತೆ ನಡೆಯುತ್ತಿದ್ದನು ಅವನು ಕಪಟಿಯೆಂದು ಆ ರಾಜನಿಗೆ ತಿಳಿಯಲಿಲ್ಲ ಮತ್ತೆ ಕೆಲವು ದಿವಸಗಳ ಮೇಲೆ ಆ ರಾಜನು ಮತ್ತೆ ವನಕ್ಕೆ ಹೋಗಿ || ೧೪ || ಅಲ್ಲಿ ಸಮಸ್ತ ಮೃಗಗಳನ್ನು ಓಡಿಸಿ ದುಷ್ಟ ಮೃಗಗಳನ್ನು ಕೊಂದು ತಿರುಗಿ ತನ್ನ ನಗರಕ್ಕೆ ಬಂದನು || ೧೫ || ಹೀಗೆ ಇರುತ್ತಿರಲು ಒಂದುದಿವಸ ಆ ರಾಜನ ತಂದೆಯ ಶ್ರಾದ್ಧವು ಬಂತು. ಆಗ ಅವನು ವಸಿಷ್ಠ ಮೊದಲಾದ ಋಷಿಗಳಿಗೆ ಊಟಕ್ಕೆ ಹೇಳಿದ್ದನು || ೧೬ || ಆ ದಿವಸ ಒಳ್ಳೇ ರೀತಿಯಿಂದ ಅಡಿಗೆಯನ್ನು ಮಾಡಿಸಲಿಕ್ಕೆ ಆ ರಾಜನು ಆ ಕಪಟ ಸೇವಕನನ್ನೇ ಮೇಲೆ ವ್ಯವಸ್ಥೆ ಮಾಡುವದಕ್ಕೆ ಆ ಪಾಕಶಾಲೆಯ ಮೇಲೆ ನೇಮಿಸಿ || ೧೭ || ಅವನನ್ನು ಕುರಿತು— ಎಲೈ ಸೇವಕನೇ ಈ ಪಾಕಶಾಲೆಯಲ್ಲಿ ನೀನು ಇರುತ್ತೀ ಆದಕಾರಣ ಆ ಅಡಿಗೆ ಮಾಡುವದಕ್ಕೆ ಏನೇನು ಉತ್ತಮ ಸಾಮಾನುಗಳು ಬೇಕೋ ಅವೆಲ್ಲವನ್ನು ನೀನು

ತಂದುಕೊಟ್ಟು ಉತ್ತಮ ಅಡಿಗೆಯನ್ನು ಮಾಡಿಸು ಎಂದು ಹೇಳಿದನು. || ೧೮ || ಆ ಕಪಟಿಯು ಅದಕ್ಕೆ ಒಪ್ಪಿ ಮನಸ್ಸಿನಲ್ಲಿ— ಈ ರಾಜನಿಗೇನಾದರೂ ಶಿಕ್ಷೆ ಮಾಡಿಸುವದು ಇದೇ ಹೊತ್ತೆಂದು ತಿಳಿದು, ಕಪಟದಿಂದ ನರ ಮಾಂಸದ ಅಡಿಗೆಯನ್ನು ಮಾಡಿಸಿ ಆ ಮೇಲೆ ಪಲ್ಯೆ ಮೊದಲಾದ ಯಾವತ್ತು ಅಡಿಗೆಯನ್ನು ಮಾಡಿಸಿದನು. || ೧೯ || ಆಮೇಲೆ ಯಾವತ್ತು ಋಷಿಗಳು ಬರಲು ಅವರಿಗೆ ಮಣೆ ಮತ್ತು ಎಲೆಗಳನ್ನು ಹಾಕಿ ಮೊದಲಿಗೇನೇ ಆ ನರ ಮಾಂಸವನ್ನು ಬಡಿಸಿದನು ಅದನ್ನು ಕಂಡು ವಸಿಷ್ಠರು ಸಿಟ್ಟಾಗಿ || ೨೦ || ಎಲೈ ರಾಜನೇ, ನಮಗೆ ನರಮಾಂಸವನ್ನು ಬಡಿಸಿಸಿದ್ದರಿಂದ ನೀನು ಈ ಕೂಡಲೆ ಬ್ರಹ್ಮರಾಕ್ಷಸನಾಗುತ್ತೀ ಎಂದು ಶಾಪ ಕೊಟ್ಟರು. || ೨೧ || ಆಗ ಕೂಡಲೇ ರಾಜನು ಮನಸ್ಸಿನಲ್ಲಿ— ನನ್ನಕಡೆಗೆ ಮಹತ್ವವಾದ ಏನೂ ತಪ್ಪಿಲ್ಲದೆ ನನಗೆ ಸುಮ್ಮನೆ ಯಾಕೆ ಶಾಪಕೊಟ್ಟರು ? ಎಂದು ಅತ್ಯಂತ ಸಿಟ್ಟಾಗಿ || ೨೨ ||-- ಗುರುವಸಿಷ್ಠರೇ, ಈ ನರಮಾಂಸದ ಅಡಿಗೆಯನ್ನು ಯಾರು ಮಾಡಿದರೆಂಬದು ನನಗೆ ಗೊತ್ತಿಲ್ಲ ಹಾಗೆ ಮಾಡಿರೆಂದು ನಾನು ಸತ್ಯವಾಗಿ ಯಾರಿಗೂ ಹೇಳಿಲ್ಲ ನನ್ನಕಡೆಗೆ ಏನೂ ತಪ್ಪಿಲ್ಲ ಇದನ್ನು ನೀವು ವಿಚಾರ ಮಾಡದೆ ನನಗೆ ಸುಮ್ಮನೆ ಇಂಥ ದುರ್ಧರವಾದ ಶಾಪ ಕೊಟ್ಟಿರಿ ಆದ್ದರಿಂದ ನಾನೂ ನಿಮಗೆ ಶಾಪವನ್ನು ಕೊಡುವೆನು || ೨೩ || ಎಂದು ಕೈಯಲ್ಲಿ ಉದಕವನ್ನು ತಕ್ಕೊಂಡು ಶಾಪ ಕೊಡಲಿಕ್ಕೆ ಸಿದ್ಧನಾಗಿ ನಿಂತನು. ಆಗ ಅವನ ಪತ್ನಿಯಾದ ಮದಯಂತಿಯು ಓಡುತ್ತ ಪತಿಯ ಹತ್ತರ ಬಂದು ಅವನ ಕೈಹಿಡಿದು ಶಾಪ ಕೊಡುವದಕ್ಕೆ ಅಡ್ಡಿ ಮಾಡಿ || ೨೪ ||-- ಮಹಾರಾಜ, ಗುರುಗಳನ್ನು ಶಪಿಸಿದರೆ, ಆದರಿಂದ ಮಹಾದೋಷವು ಬರುವದು, ಆದ್ದರಿಂದ ನೀವು ತಪ್ಪಾಯಿತೆಂದು ಅವರ ಚರಣಗಳನ್ನು ಹಿಡಿಯಿರಿ ಅಂದರೆ ಅವರು ನಮ್ಮನ್ನು ಈ ಭವಸಾಗರದಿಂದ ಪಾರು ಮಾಡುವರು ಎಂದು ಹೇಳಿದಳು. || ೨೫ || ಆಕೆಯ ಮಾತಿಗೆ ಆ ರಾಜನು ಒಪ್ಪಿ ತನ್ನ ಕೈಯಲ್ಲಿರುವ ಆ ಶಾಪೋದಕವನ್ನು ತನ್ನ ಕಾಲುಗಳಮೇಲೆ ಹಾಕಿಕೊಂಡನು. || ೨೬ || ಶಾಪಕೊಡುವಂಥ ಆ ಪಾಪಯುಕ್ತ ನೀರು ಕಾಲುಗಳಮೇಲೆ ಬಿದ್ದು ಅವು ಕಪ್ಪಾದವು. ಆಗ ಆ ರಾಜನು "ಕಲ್ಮಷಪಾದ"ನೆಂಬ ಹೆಸರುಳ್ಳ ಬ್ರಹ್ಮರಾಕ್ಷಸನಾದನು. || ೨೭ || ಇತ್ತ ಆ ಪತಿವ್ರತೆಯಾದ

ಮದಯಂತಿಯು ವಸಿಷ್ಠರ ಚರಣಗಳಮೇಲೆ ಬಿದ್ದು— ಸ್ವಾಮೀ ಗುರುಗಳೇ, ತಮ್ಮ ಬಾಲಕರಂತಿದ್ದ ನಮ್ಮ ಮೇಲೆ ತಾವು ಇಷ್ಟು ಸಿಟ್ಟಾಗಲಿಕ್ಕೇನು ಕಾರಣ ? ಸಿಟ್ಟಾಗದೆ ನಮ್ಮನ್ನು ಉದ್ಧರಿಸಿರಿ ಎಂದು ಕರುಣಾ ವಚನದಿಂದ ಪ್ರಾರ್ಥಿಸಿದಳು || ೨೮ || ಆಕೆಯ ಕರುಣಾ ವಚನವನ್ನು ಕೇಳಿ ಅವರು ಶಾಂತರಾಗಿ— ಎಲೌ ಪತಿವ್ರತೆಯೇ ಕೇಳು, ಇವತ್ತಿನಿಂದ ೧೨ ವರುಷಗಳ ಮೇಲೆ ನಿನ್ನ ಪತಿಯು ಶಾಪದಿಂದ ಮುಕ್ತನಾಗಿ ಪುನಃ ರಾಜನಾಗುವನು. || ೨೯ || ಎಂದು ಉಃಶಾಪವನ್ನು ಕೊಟ್ಟು ತಮ್ಮ ಸ್ನಾನಕ್ಕೆ ಹೋದರು । ಕೂಡಲೆ ಆ ರಾಜನು ಭಯಂಕರ ಬ್ರಹ್ಮರಾಕ್ಷಸನಾಗಿ ವನಕ್ಕೆ ಹೋದನು || ೩೦ || ಅವನು ಮನುಷ್ಯ ಸಂಚಾರವಿಲ್ಲದ ಅರಣ್ಯದಲ್ಲಿ ಇದ್ದು ಅಲ್ಲಿ ಸಿಕ್ಕ ಪಶು–ಪಕ್ಷಿ–ಮನುಷ್ಯ ಮೊದಲಾದ ಪ್ರಾಣಿಗಳನ್ನು ಹಿಡಿದು ತಿನ್ನುತ್ತ ಒಳ್ಳೇ ಹೆಸರಾಗಿದ್ದನು || ೩೧ ||

ಹೀಗೆ ಕೆಲವು ದಿವಸಗಳಾದಮೇಲೆ ಒಂದು ದಿವಸ ಆ ಭಯಂಕರ ಕಾಡಿನಲ್ಲಿ ಮಾರ್ಗಕ್ರಮಣ ಮಾಡುತ್ತಿದ್ದ ಬ್ರಾಹ್ಮಣ ತರುಣ ದಂಪತಿಗಳನ್ನು ಕಂಡು || ೩೨ || ಓಡಿ ಬಂದು ಹುಲಿಯು ಆಕಳನ್ನು ಹಿಡಿಯುವಂತೆ, ಬ್ರಾಹ್ಮಣನನ್ನು ಹಿಡಿದು ತಿನ್ನಲಿಕ್ಕೆ ಒಯ್ದನು ಆಗ ಅವನ ಪತ್ನಿಯು ಆ ರಾಕ್ಷಸನ ಬೆನ್ನುಹತ್ತಿ ಹೋಗಿ || ೩೩ || ಅತ್ಯಂತ ಶೋಕ ಮಾಡುತ್ತ ಅವನ ಚರಣಗಳ ಮೇಲೆ ಬಿದ್ದು— ಮಹಾರಾಯಾ, ನಮ್ಮ ತಂದೆಯ ಸಮಾನನಾದ ನೀನು ನನ್ನ ಪತಿಯನ್ನು ಜೀವದಿಂದ ಬಿಟ್ಟು ನನ್ನ ಮುತ್ತೈದಿತನವನ್ನು ಕಾಪಾಡು || ೩೪ || ನನ್ನ ಪತಿಯನ್ನು ತಿನಬೇಡ ಈ ನನ್ನ ಪತಿಯಮೇಲೆ ನನ್ನ ಪ್ರೀತಿಯು ಬಹಳ ಆದ್ದರಿಂದ ನೀನು ಈ ನನ್ನ ಪತಿಯನ್ನು ಬಿಟ್ಟು ನನ್ನನ್ನು ಮಾತ್ರ ಬೇಕಾದ ಹಾಗೆ ತಿನ್ನು. || ೩೫ || ಗಂಡನಿಲ್ಲದ ಸ್ತ್ರೀ ಜನ್ಮವು ಕಲ್ಲಿನಂತೆ ವ್ಯರ್ಥವಾದ್ದರಿಂದ ಮೊದಲು ನನ್ನನ್ನು ತಿಂದು ನನ್ನ ಪತಿಯನ್ನು ಬಿಡು. || ೩೬ || ಈ ನನ್ನ ಪತಿಯು ರೂಪವಂತನೂ ತರುಣನೂ ವೇದಶಾಸ್ತ್ರಸಂಪನ್ನನೂ ಇರುವನು. ಮಹಾರಾಯಾ, ನನ್ನ ಪತಿಯನ್ನು ರಕ್ಷಿಸಿಬಿಟ್ಟರೆ ನಿನಗೆ ಜಗದ್ರಕ್ಷಣೆ ಮಾಡಿದಷ್ಟು ಪುಣ್ಯ ಬರುವದು. || ೩೭ || ಹೇ ರಾಜಾ, ನನ್ನಮೇಲೆ ಕೃಪಾ ಮಾಡು. ಅಂದರೆ ನಿನಗೆ ನಾನು

ಮಗಳಾಗುವೆನು  ಒಂದುವೇಳೆ ಈ ಪತಿಯಿಂದ ಹುಟ್ಟಿದ ನನ್ನ ಮಕ್ಕಳಿಗೆ ನಿನ್ನ ಹೆಸರನ್ನೇ ಇಡುವೆನು. ||೩೮||
ಆದಕಾರಣ ನನ್ನ ಪತಿಯನ್ನು ಕೊಲ್ಲಬೇಡ ಬಿಡು, ಎಂದು ಆ ಸ್ತ್ರೀಯು ನಾನಾರೀತಿಯಿಂದ ದುಃಖಿಸಿ ಹೇಳಿಕೊಂಡರೂ ಅವಳ ಮಾತನ್ನು ಕೇಳದೆ ಆ ರಾಕ್ಷಸನು ಆಕೆಯ ಪತಿಯನ್ನು ಕೊಂದು ತಿಂದುಬಿಟ್ಟನು. ||೩೯||
ಆದನ್ನು ಕಂಡು ಆ ಸ್ತ್ರೀಯು ಅತ್ಯಂತ ದುಃಖದಿಂದ ಸಿಟ್ಟಾಗಿ— ಎಲೈ ರಾಕ್ಷಸನೇ, ನಾನೂ ನಿನಗೆ ಶಾಪ ಕೊಡುತ್ತೇನೆ. ನನ್ನ ನಿರ್ಧಾರವಾದ ಶಾಪವನ್ನು ಕೇಳು. ||೪೦|| ನೀನು ಸೂರ್ಯವಂಶದ ರಾಜನು. ಈಗ ಶಾಪವಶದಿಂದ ರಾಕ್ಷಸನಾಗಿರುವಿ. ೧೨ ವರ್ಷಗಳ ನಂತರ ಮತ್ತೆ ನೀನು ರಾಜನಾಗುವಿ ||೪೧| ನೀನು ದುರಾತ್ಮನಾದ ರಾಕ್ಷಸನಿರುತ್ತೀ, ನೀನು ದುಷ್ಟತನದಿಂದ ಅನಾಥನಾದ ನನ್ನ ಪತಿಯನ್ನು ಕೊಂದಿದ್ದರಿಂದ ಇನ್ನುಮೇಲೆ ನೀನು ನಿನ್ನ ಸತಿಯನ್ನು ರಮಿಸಿದ ಕೂಡಲೆ ಮೃತಿಯನ್ನು ಹೊಂದು ||೪೨|| ಎಂದು ಅವನಿಗೆ ಶಪಿಸಿ ಕಟ್ಟಿಗೆಗಳನ್ನು ಆರಿಸಿ ತಂದು ದೊಡ್ಡ ಚಿತೆಯನ್ನು ಮಾಡಿ, ಗಂಡನ ಅಸ್ಥಿಗಳನ್ನೆಲ್ಲ ಕೂಡಿಸಿ ಅದರಲ್ಲಿ ಹಾಕಿ ತಾನೂ ಅಗ್ನಿಪ್ರವೇಶ ಮಾಡಿದಳು ||೪೩|| ಹೀಗಿರುತ್ತ ೧೨ ವರ್ಷಗಳ ನಂತರ ಆ ರಾಕ್ಷಸನು ಶಾಪದಿಂದ ಮುಕ್ತನಾಗಿ ಮನುಷ್ಯನಾಗಿ ತನ್ನ ನಗರಕ್ಕೆ ಬಂದು ರಾಜನಾದನು. ||೪೪|| ಆಮೇಲೆ ತನ್ನ ಹೆಂಡತಿಯನ್ನು ಕರೆದು— ಎಲೈ ಪ್ರಿಯೇ, ನಾನು ಅಡವಿಯಲ್ಲಿ ರಾಕ್ಷಸನಾಗಿದ್ದಾಗ ಒಬ್ಬ ಬ್ರಾಹ್ಮಣನನ್ನು ಕೊಂದು ತಿಂದೆನು. ಆಗ ಅವನ ಸತಿಯು ನನ್ನನ್ನು ಕುರಿತು— ಎಲೈ ರಾಜನೇ, ನೀನು ನಿನ್ನ ಸತಿಯ ಸಂಗ ಮಾಡಿದ ಕೂಡಲೆ ಮರಣವನ್ನು ಹೊಂದು ಎಂದು ಶಾಪವನ್ನು ಕೊಟ್ಟಳು ಆದ್ದರಿಂದ ನಿನ್ನ ಸಂಗ ಮಾಡಿದರೆ ನನಗೆ ಮರಣ ಬರುವದು ಏನು ಮಾಡಲಿ ? ಎಂದು ಹೇಳಿದನು. ||೪೫|| ಪತಿಯ ಆ ಮಾತು ಕೇಳಿ ಮದಯಂತಿಯು ಅತ್ಯಂತ ದುಃಖಪಟ್ಟು ಹಣೆ ಹಣೆ ಬಡಕೊಂಡು, ಏಕಾಗ್ರ ಮನಸ್ಸಿನಿಂದ ತಾನು ಇನ್ನು ಪ್ರಾಣ ಬಿಡಬೇಕೆಂದು ಆಲೋಚಿಸುತ್ತ ಆ ರಾಜನನ್ನು ಕುರಿತು— ||೪೬|| ಮಹಾರಾಜ, ನಿಮ್ಮ ವಂಶದಲ್ಲಿ (ಹೊಟ್ಟೆಯಿಂದ) ಈ ಮೊದಲು ಒಂದೂ ಮಕ್ಕಳಾಗಲಿಲ್ಲ. ನೀವು ಅರಣ್ಯದಲ್ಲಿ ೧೨ ವರುಷ ಕಷ್ಟಪಟ್ಟಿದ್ದರೂ ಅಲ್ಲಿಯೂ ತಪ್ಪು ಮಾಡಿ ಮುಂದೆ ಸಹ ಮಕ್ಕಳಾಗ

ದಂತೆ ಶಾಪವನ್ನು ಹೊಂದಿದಿರಿ. ಎಲ್ಲಿದ್ದರೂ ಪ್ರಾರಬ್ಧವು ನಿಮ್ಮನ್ನು ಬಿಡಲಿಲ್ಲ. ಅಂದಮೇಲೆ ಇನ್ನು ನನಗೆ ಮಕ್ಕಳಾಗುವ ಬಗೆ ಹೇಗೆ ಎಂದು ದುಃಖಿಸಿದಳು. || ೪೭ || ಹೆಂಡತಿಯ ಮಾತನ್ನು ಕೇಳಿ ಆ ರಾಜನು ತಾನೂ ಅತ್ಯಂತ ದುಃಖಪಟ್ಟು ಕಣ್ಣೀರು ಸುರಿಸುತ್ತ— ಎಲೈ ಸತಿಯೇ, ಆ ವೇಳೆಯಲ್ಲಿ ನನಗೆ ಏನೂ ತಿಳಿಯಲಿಲ್ಲ, ಇನ್ನೇನು ಮಾಡಲಿ ಎಂದನು. || ೪೮ || ಆಮೇಲೆ ಆ ರಾಜನು ವೃದ್ಧರಾದ ತನ್ನ ಮಂತ್ರಿ ಪುರೋಹಿತರನ್ನು ಕರೆಸಿ— ಎಲೈ ಮಂತ್ರಿ ಪುರೋಹಿತರೇ ಕೇಳಿರಿ. ಎಂದು ತಾನು ಅರಣ್ಯದಲ್ಲಿದ್ದ ಎಲ್ಲ ಸಂಗತಿಯನ್ನು ಹೇಳಿ— ಈಗ ನನಗೆ ಬ್ರಹ್ಮಹತ್ಯಾಪಾತಕವು ಬಂದಿದೆ. ಈಗ ಅದರ ಪರಿಹಾರಕ್ಕಾಗಿ ಏನು ಉಪಾಯ ಮಾಡಬೇಕು ಹೇಳಿರಿ ಎಂದು ಅಂದನು. || ೪೯ || ಆಗ ಅವರು— ಎಲೈ ರಾಜನೇ, ನೀನು ವಿಧಿಪೂರ್ವಕ ಸಮಸ್ತ ತೀರ್ಥ ಯಾತ್ರೆಗಳನ್ನು ಮಾಡು, ಅಂದರೆ ನೀನು ಪವಿತ್ರನಾಗಿ ಆ ಬ್ರಹ್ಮಹತ್ಯಾಪಾಪದಿಂದ ಮುಕ್ತನಾಗುವಿ ಎಂದು ಹೇಳಿದರು. || ೫೦ || ಅವರ ಮಾತು ಕೇಳಿ ರಾಜನು ಮನಸ್ಸಿನಲ್ಲಿ ಪೂರ್ಣ ವಿಚಾರ ಮಾಡಿ, ತೀರ್ಥ ಯಾತ್ರೆಗೆ ಹೊರಟು ಸಕಲ ತೀರ್ಥಕ್ಷೇತ್ರಗಳಲ್ಲಿಯೂ ವಿಧಿಪ್ರಕಾರ ಆಚರಣೆ ಮಾಡುತ್ತ || ೫೧ || ಅಲ್ಲಲ್ಲಿ ಮಾಡ ತಕ್ಕ ಅನೇಕ ಪುಣ್ಯಕರ್ಮಗಳನ್ನೂ ಯಜ್ಞಯಾಗಾದಿಗಳನ್ನೂ ಬ್ರಾಹ್ಮಣರಿಗೆ ಅನ್ನದಾನಾದಿಗಳನ್ನೂ ಮಾಡು ತ್ತಿದ್ದನು. || ೫೨ || ಹೀಗೆ ಅವನು ಅನೇಕ ತೀರ್ಥಯಾತ್ರೆ ಮಾಡಿದರೂ ಸಹ ಆ ಬ್ರಹ್ಮಹತ್ಯೆಯು ಘೋರ ರೂಪವನ್ನು ಧರಿಸಿ ಅವನು ಕಾಣುವಂತೆ ಅವನ ಬೆನ್ನು ಹತ್ತಿಯೇ ಬರುತ್ತಿತ್ತು. ಏನು ಮಾಡಿದರೂ ಅದು ಹೋಗಲಿಲ್ಲ. || ೫೩ || ಅದರಿಂದ ಆ ರಾಜನು ಬಹಳ ಕಷ್ಟಬಡುತ್ತ ಮನಸ್ಸು ಗಟ್ಟಿ ಮಾಡಿಕೊಂಡು ತಿರುಗುತ್ತ ತಿರುಗುತ್ತ ಚಿಂತಾಯುಕ್ತನಾಗಿ ಮಿಥಿಲಾ ನಗರಕ್ಕೆ ಬಂದು || ೫೪ || ಶ್ರಮದಿಂದ ಬಳಲಿದವನಾಗಿ ಆ ನಗರದ ಹೊರಭಾಗದಲ್ಲಿರುವ ಒಂದು ಗಿಡದ ನೆರಳಿನಲ್ಲಿ ಚಿಂತೆ ಮಾಡುತ್ತ ಕೂತನು. || ೫೫ || ಅಷ್ಟರಲ್ಲಿ ಆಕಸ್ಮಾತ್ತಾಗಿ ಅನೇಕ ಋಷಿಗಳಿಂದ ಕೂಡಿ ಈಶ್ವರನಂತೆ ಪ್ರಕಾಶಿಸುವ ಗೌತಮ ಮಹಾಮುನಿಗಳು ಅದೇ ಸ್ಥಳಕ್ಕೆ ಬಂದರು. || ೫೬ || ಅವರನ್ನು ಕಂಡು ಆ ರಾಜನು ಸಂತೋಷದಿಂದಲೂ ಒಳ್ಳೇ ಭಕ್ತಿಭಾವದಿಂದಲೂ ಸಾ। ನ।

ಮಾಡಿ ಓಡಿ ಬಂದು ಅವರ ಚರಣಗಳ ಮೇಲೆ ಉರುಳಾಡಹತ್ತಿದನು. ॥ ೫೭ ॥ ಆಗ ಗೌತಮರು ಅವನಿಗೆ ಆಶೀರ್ವದಿಸಿ ಅಂತಃಕರಣದಿಂದ— ಎಲೈ ಮಿತ್ರಸಹರಾಜನೇ, ನಿನ್ನ ರಾಜ್ಯವು ಏನಾಯಿತು? ನೀನು ಚಿಂತೆ ಯಿಂದ ಕೂಡಿದ ಮುಖವುಳ್ಳವನಾಗಿ ಹೀಗೆ ಅರಣ್ಯದಲ್ಲಿ ಸಂಚರಿಸುವದಕ್ಕೆ ಕಾರಣವೇನು? ನಿನ್ನ ಹೆಂಡತಿ ಮೊದಲಾದವರು ಎಲ್ಲಿರುವರು? ಅವರನ್ನು ಬಿಟ್ಟು ಬರುವಂಥ ಪ್ರಸಂಗವೇನು ಬಂತು? ಎಂದು ಆ ರಾಜನ ಕ್ಷೇಮಸಮಾಚಾರ ಮೊದಲಾದ ಸಂಗತಿಗಳನ್ನು ಕೇಳಿದರು ॥ ೫೮-೫೯ ॥ ಆಗ ರಾಜನು— ಸ್ವಾಮೀ, ಗೌತಮ ಮಹಾಮುನಿಗಳೇ, ನಾನು ರಾಕ್ಷಸನಾಗಿದ್ದಾಗ ಒಬ್ಬ ಬ್ರಾಹ್ಮಣನನ್ನು ಕೊಂದೆನು. ಆದರಿಂದ ನನಗೆ ಆ ಬ್ರಹ್ಮ ಹತ್ಯಾದೋಷ ಬಂದದ್ದಲ್ಲದೆ ಅವನ ಸತಿಯು ನನಗೆ ಶಾಪವನ್ನು ಸಹ ಕೊಟ್ಟಳು ನಾನು ಆ ಬ್ರಹ್ಮಹತ್ಯಾದೋಷ ವನ್ನು ಕಳಕೊಳ್ಳುವದಕ್ಕಾಗಿ, ನಮ್ಮ ವೃದ್ಧ ಮಂತ್ರಿ ಮತ್ತು ಪುರೋಹಿತರ ಮಾತಿನಂತೆ ಎಲ್ಲ ಪ್ರಾಯಶ್ಚಿತ್ತ ಮಾಡಿ ಕೊಂಡು ಅನೇಕ ತೀರ್ಥಯಾತ್ರೆಗಳನ್ನು ಮಾಡುತ್ತ ಅಲ್ಲಲ್ಲಿ ಮಾಡತಕ್ಕ ಪುಣ್ಯಕರ್ಮ, ಯಜ್ಞಯಾಗ, ಅನ್ನದಾನ ಗಳನ್ನು, ಅನೇಕ ಕೋಟಿ ವ್ರತಗಳನ್ನು ಮಾಡಿದರೂ ಆ ದೋಷವು ಹೋಗದೆ ಅದು ಘೋರ ರೂಪವನ್ನು ಧರಿಸಿ ನನ್ನ ಬೆನ್ನುಹತ್ತಿ ಬರುವದು. ಆದರಿಂದ ನಾನು ಬಳಲಿ ಬೇಸತ್ತು ಇಲ್ಲಿಗೆ ಬಂದು ಕೂತಿರುವೆನು. ಎಂದು ವಿಸ್ತಾರವಾಗಿ ಎಲ್ಲ ಸಂಗತಿಯನ್ನು ಹೇಳಿ ॥ ೬೦-೬೧-೬೨ ॥ ಸ್ವಾಮೀ, ಈ ದಿವಸ ತಮ್ಮ ಚರಣದರ್ಶನ ವಾದ್ದರಿಂದ ನನ್ನ ಜನ್ಮವು ಸಫಲವಾಯಿತು. ಇನ್ನು ನನ್ನ ಕಷ್ಟವು ನಿವಾರಣೆಯಾಗುವದು ಎಂದು ಅವರ ಚರಣಕ್ಕೆ ನಮಿಸಿದನು ॥ ೬೩ ॥ ಈ ಪ್ರಕಾರ ಅವನ ಮಾತು ಕೇಳಿ ಕರುಣಾಸಾಗರರಾದ ಗೌತಮ ಮುನಿಗಳು—ಎಲೈ ರಾಜನೇ, ಇನ್ನು ನೀನು ನಿಶ್ಚಯವಾಗಿ ಭಯವನ್ನು ಬಿಡು, ಮೃತ್ಯುಂಜಯನಾದ ಶ್ರೀಶಂಕರನು ಆ ಬ್ರಹ್ಮಹತ್ಯಾಪಾಪದಿಂದ ನಿನ್ನನ್ನು ಬಿಡುಗಡೆ ಮಾಡುವನು, ಇದು ನನ್ನ ಸತ್ಯವಚನವೆಂದು ತಿಳಿ. ॥ ೬೪ ॥ ನಿನ್ನ ಪಾಪ ನಿವಾರಣೆಗಾಗಿ ನಾನು ಒಂದು ವಿಶೇಷವಾದ ತೀರ್ಥವನ್ನು ಹೇಳುವೆನು ಕೇಳು. ಮಹಾಪಾತಕಗಳು ನಾಶ ವಾಗುವದಕ್ಕೆ ಗೋಕರ್ಣ ಕ್ಷೇತ್ರವು ಪ್ರಸಿದ್ಧವಾಗಿರುವದು. ॥ ೬೫ ॥ ಆ ಗೋಕರ್ಣದ ಸ್ಮರಣೆ ಮಾಡಿದಕೂಡಲೆ

ಬ್ರಹ್ಮಹತ್ಯಾದಿ ಪಾತಕಗಳು ನಾಶವಾಗುವವು. ನೀನು ಆ ಗೋಕರ್ಣ ಕ್ಷೇತ್ರಕ್ಕೆ ಹೋಗು. ಅದು ಕೈಲಾಸ ಶಿಖರಕ್ಕೆ ಸಮಾನವಾದದ್ದು ಅಥವಾ ಮೂರ್ಧಾನ ಮಂದಿರಕ್ಕೆ ಸಮಾನವಾದದದ್ದೆಂದು ಕರ್ಪೂರಗೌರನೂ ಮೃತ್ಯುಂಜಯನೂ ಆದ ಶ್ರೀ ಸದಾಶಿವನು ಸದಾ ಆ ಗೋಕರ್ಣ ಕ್ಷೇತ್ರದಲ್ಲಿ ವಾಸ ಮಾಡಿರುವನು || ೬೬-೬೭ || ಭಯಂಕರ ಕತ್ತಲೆಯು ಪೂರ್ಣ ನಾಶವಾಗಲಿಕ್ಕೆ ಅಗ್ನಿ ಮತ್ತು ಚಂದ್ರಪ್ರಕಾಶದಿಂದ ಆಗದೆ ಸೂರ್ಯಪ್ರಕಾಶದಿಂದ ಸರ್ವ ಕತ್ತಲೆಯು ನಾಶವಾಗುತ್ತದೆ ಅದರಂತೆ ಬೇರೆ ಯಾವತ್ತು ತೀರ್ಥಗಳಿಂದ ಹೋಗದಿರುವ ನಿನ್ನ ಪಾಪವು ಗೋಕರ್ಣ ಕ್ಷೇತ್ರದ ದರ್ಶನ ಮಾತ್ರದಿಂದಲೇ ಹೋಗುವದು || ೬೮-೬೯ || ಒಂದುವೇಳೆ ಈ ಶರೀರಕ್ಕೆ ಬ್ರಹ್ಮ ಹತ್ಯಾ ದೋಷಗಳು ಘಟಿಸಿದರೂ ಆ ಗೋಕರ್ಣ ಕ್ಷೇತ್ರದಲ್ಲಿ ಪ್ರವೇಶ ಮಾಡಿದ ಕೂಡಲೆ ಅವೆಲ್ಲವೂ ನಾಶವಾಗಿ ಆ ಮನುಷ್ಯನು ಶುದ್ಧನಾಗುವನು || ೭೦ || ಬ್ರಹ್ಮನೂ, ವಿಷ್ಣುವೂ, ಏಕಾದಶ ರುದ್ರರೂ ಮೊದಲಾದವರೆಲ್ಲರೂ ಆ ಸ್ಥಾನಕ್ಕೆ ಹೋಗಿ ತಪಸ್ಸು ಮಾಡಿ ತಮ್ಮ ಸರ್ವ ಕಾರ್ಯಸಿದ್ಧಿಯನ್ನು ಪಡೆದರು || ೭೧ || ಆ ಸ್ಥಾನದಲ್ಲಿ ಭಕ್ತಿ ಹಾಗು ವಿಧಿಪೂರ್ವಕ ಜಪ-ತಪಾದಿಗಳನ್ನು ಮಾಡಿದರೆ ಅವು ಲಕ್ಷಗುಣವಾಗಿ ಫಲಗಳನ್ನು ಕೊಡುವವು ಆ ಕ್ಷೇತ್ರವು ಈ ಪ್ರಕಾರ ಪುಣ್ಯಕರವಾಗಿರುವದು || ೭೨ || ಯಾವ ಸ್ಥಾನದಲ್ಲಿ ಬ್ರಹ್ಮ-ವಿಷ್ಣು-ಇಂದ್ರಾದಿ ಸಮಸ್ತ ದೇವತೆಗಳು ತಪಸ್ಸು ಮಾಡಿ ಸಿದ್ಧಿಯನ್ನು ಹೊಂದಿದರೋ ಅದರ ಮಹತ್ವವನ್ನು ಮತ್ತಿನ್ನೆಷ್ಟು ಹೇಳಲಿ ? || ೭೩ || ಆ ಲಿಂಗವು ಸಾಕ್ಷಾತ್ ಈಶ್ವರನೆಂದೂ ಆ ಗೋಕರ್ಣ ಕ್ಷೇತ್ರವು ಪ್ರತ್ಯಕ್ಷ ಕೈಲಾಸಪುರ ವೆಂದೂ ತಿಳಿ. ಅಲ್ಲಿ ವಿಘ್ನೇಶ್ವರನು ಶ್ರೀವಿಷ್ಣುವಿನ ಆಜ್ಞೆಯಂತೆ ಶಿವನ ಆತ್ಮಲಿಂಗವನ್ನು ಪ್ರತಿಷ್ಠಿಸಿರುವನು || ೭೪ || ಅದು ಅತ್ಯಂತ ಪುಣ್ಯ ಕ್ಷೇತ್ರವೆಂದು ಸರ್ವ ದೇವತೆಗಳು ಅಲ್ಲಿ ವಾಸ ಮಾಡಿರುತ್ತಾರೆ ಹೇಳುವೆನು ಕೇಳು. ಬ್ರಹ್ಮ-ವಿಷ್ಣು-ಇಂದ್ರಾದಿ ದೇವತೆಗಳೂ ವಿಶ್ವೇದೇವತೆಗಳೂ ಮರುದ್ಗಣಗಳೂ || ೭೫ || ಸೂರ್ಯ-ಚಂದ್ರರೂ ವಸ್ವಾದಿ ಗಳೂ ಭಕ್ತಿ ಹಾಗು ಪ್ರೀತಿಗಳಿಂದ ಆ ಕ್ಷೇತ್ರದ ಪೂರ್ವದ್ವಾರದಲ್ಲಿ ಕೂತಿರುವರು || ೭೬ || ಅಗ್ನಿಯೂ, ಯಮನೂ ಚಿತ್ರಗುಪ್ತರೂ, ಏಕಾದಶ ರುದ್ರರೂ ಪಿತೃದೇವತೆಗಳೂ ಸಂತೋಷದಿಂದ ಅಲ್ಲಿಯ ದಕ್ಷಿಣ ದ್ವಾರ

ದಲ್ಲಿರುವರು. ॥ ೭೭ ॥ ವರುಣ ಸಹಿತ ಗಂಗಾ ಮೊದಲಾದವರು ಪಶ್ಚಿಮ ದ್ವಾರದಲ್ಲಿ ಕೂತಿರುವರು ಚಂದ್ರ ಮೌಳಿಯಾದ ಶ್ರೀ ಶಂಕರನು ಅವರೆಲ್ಲರನ್ನು ಪ್ರೀತಿಸುತ್ತಿರುವನು. ॥ ೭೮ ॥ ಕುಬೇರ, ವಾಯು, ಭದ್ರಕಾಳಿ, ಮಾತೃದೇವತೆ, ಚಂಡಿ, ಮೊದಲಾದವರೆಲ್ಲರೂ ಉತ್ತರದ್ವಾರದಲ್ಲಿದ್ದು ತ್ರಿಕಾಲದಲ್ಲಿ ಮಹಾಬಳೇಶ್ವರನನ್ನು ಪೂಜಿಸುತ್ತಿರುವರು. ॥ ೭೯ ॥ ಚಿತ್ರಸೇನ, ಚಿತ್ರರಥ, ವಿಶ್ವಾವಸು ಮೊದಲಾದ ಗಂಧರ್ವರು ಆಸ್ಥಾನದಲ್ಲಿದ್ದು ಯಾವಾಗಲೂ ಸದಾಶಿವನ ಪೂಜೆಯನ್ನು ಮಾಡುತ್ತಿರುವರು. ॥ ೮೦ ॥ ಘೃತಾಚಿ. ಮೇನಕಾ, ರಂಭಾ, ತಿಲೋತ್ತಮಾ, ಊರ್ವಶಿ ಮುಂತಾದ ಅಪ್ಸರಾ ಸ್ತ್ರೀಯರು ನಿತ್ಯ ಮಹಾಬಳೇಶ್ವರನ ಎದುರಿನಲ್ಲಿ ನರ್ತನ ಮಾಡುತ್ತಿರುವರು. ॥ ೮೧ ॥ ವಸಿಷ್ಠ, ಕಶ್ಯಪ, ಕಣ್ವ, ಮಹಾತಪಸ್ವಿಯಾದ ವಿಶ್ವಾಮಿತ್ರ, ಭರದ್ವಾಜ, ಜೈಮಿನಿ, ಜಾಬಾಲ ಮುಂತಾದ ಮಹಾ ಮಹಾ ಋಷಿಗಳು ಸದಾ ಮಹಾಬಳೇಶ್ವರನನ್ನು ಪೂಜಿಸುತ್ತಿರುವರು. ॥ ೮೨ ॥ ಕ್ರತು, ಅಂಗಿರಸ ಮೊದಲಾದ ಬ್ರಹ್ಮರ್ಷಿಗಳು ಆಚಾರಯುಕ್ತರಾಗಿ ಮಹಾ ತಪಸ್ಸು ಮಾಡುತ್ತ ಆ ಗೋಕರ್ಣ ಕ್ಷೇತ್ರದಲ್ಲಿ ವಾಸಮಾಡಿ ಭಕ್ತಿಯಿಂದ ಮಹಾಬಳೇಶ್ವರನನ್ನು ಪೂಜಿಸುತ್ತಿರುವರು. ॥ ೮೩ ॥ ಮತ್ತು ಮರೀಚಿ, ಅತ್ರಿ, ನಾರದ, ದಕ್ಷ, ಮೊದಲಾದ ಬ್ರಹ್ಮರ್ಷಿ ಮುನಿಗಳು ಮಹಾ ತಪಸ್ವಿಗಳಾದ ಸನಕಾದಿಗಳೂ ನಿತ್ಯ ಉಪನಿಷತ್ತುಗಳಿಂದ ಅಲ್ಲಿ ಶ್ರೀಶಂಕರನನ್ನು ಪೂಜಿಸುತ್ತಿರುವರು ॥ ೮೪ ॥ ಅನೇಕ ಸಿದ್ಧರೂ, ಸಾಧ್ಯರೂ, ಜಟಾಧಾರಿಗಳಾದ ಮುನೀಶ್ವರರೂ, ದಂಡಧಾರಿಗಳಾದ ಸನ್ಯಾಸಿಗಳೂ ನಿರ್ಗುಣ ಬ್ರಹ್ಮಚಾರಿಗಳೂ ಅಲ್ಲಿ ವಾಸಿಸುವರು ॥ ೮೫ ॥ ಶರೀರದಲ್ಲಿ ಅಸ್ಥಿ–ಚರ್ಮ ಮಾತ್ರವುಳ್ಳ ಮಹಾ ತಪಸ್ವಿಗಳೂ ಭಕ್ತಿಯಿಂದ ಚಂದ್ರಮೌಳಿಯಾದ ಮಹಾಬಳೇಶ್ವರನನ್ನು ಪೂಜಿಸುತ್ತಿರುವರು ॥ ೮೬ ॥ ಗಂಧರ್ವಾದಿ ಸಮಸ್ತ ದೇವತೆಗಳೂ ಪಿತೃದೇವತೆಗಳೂ, ಅಷ್ಟವಸುಗಳೂ, ವಿದ್ಯಾಧರರೂ, ಕಿಂಪುರುಷರೂ, ಸರ್ವರೂ ಸದಾ ಮಹಾಬಳೇಶ್ವರನ ದರ್ಶನಕ್ಕೆ ಹೋಗುತ್ತಿರುವರು ॥ ೮೭ ॥ ಗುಹ್ಯಕ, ಕಿನ್ನರರೆಂಬ ಸ್ವರ್ಗವಾಸಿಗಳೂ, ಶೇಷ ತಕ್ಷಕಾದಿ ನಾಗರೂ, ಪಿಶಾಚ ವೇತಾಳಾದಿಗಳೂ ಅಲ್ಲಿ ನಿತ್ಯ ಪೂಜೆಗೆ ಹೋಗುತ್ತಿರುವರು. ॥ ೮೮ ॥ ಸೂರ್ಯ ಚಂದ್ರರು ನಾನಾರೀತಿ ಶೃಂಗಾರರಾಗಿ, ನಾನಾ ಭೂಷಣ

ಗಳಿಂದ ವಿರಾಜಮಾನರಾಗಿ ವಿಮಾನಗಳಲ್ಲಿ ಕೂತು ಅಲ್ಲಿಗೆ ಬರುತ್ತಿರುವರು. ॥ ೮೯ ॥ ಮತ್ತೆ ಕೆಲಕೆಲವು ದೇವತೆಗಳು ಗಾಯನಪೂರ್ವಕ ಶ್ರೀ ಮಹಾಬಳೇಶ್ವರನ ಸ್ತೋತ್ರ ಮಾಡುತ್ತ, ನಮಸ್ಕಾರ ಮಾಡುತ್ತ, ಕುಣಿಯುತ್ತ ಬರುವರು. ಈ ಪ್ರಕಾರ ಯಾವತ್ತರೂ ಅಲ್ಲಿಗೆ ಬಂದು ಶ್ರೀ ಮಹಾಬಳೇಶ್ವರನನ್ನು ಪೂಜಿಸಿ ತಮ್ಮ ತಮ್ಮ ಮನಸ್ಸಿನ ಇಚ್ಛೆಗಳಂತೆ ಶೀಘ್ರವಾಗಿ ನಿಶ್ಚಯವಾದ ಫಲಗಳನ್ನು ಹೊಂದುತ್ತಿರುವರು. ರಾಜಾ, ಆ ಗೋಕರ್ಣ ಕ್ಷೇತ್ರಕ್ಕೆ ಸಮಾನವಾದ ಕ್ಷೇತ್ರವು ಈ ಭೂಮಂಡಲದಲ್ಲಿ ಮತ್ತೊಂದಿಲ್ಲ ॥ ೯೦-೯೧ ॥ ಅಗಸ್ತ್ಯಾದಿ ಮುನಿಗಳೂ, ಸನತ್ಕುಮಾರರೂ, ಪ್ರಿಯವ್ರತಾದಿ ರಾಜಕುಮಾರರೂ, ಅಗ್ನಿಯೂ, ದೇವತೆಗಳೂ, ದಾನವರೂ ಮುಂತಾದ ಸರ್ವರೂ ಅಲ್ಲಿ ಬಂದು ಉತ್ತಮವಾದ ವರಗಳನ್ನು ಪಡೆದರು. ॥ ೯೨ ॥ ಶಿಶುಮಾರಿ, ಭದ್ರಕಾಳಿಯರು ತ್ರಿಕಾಲದಲ್ಲಿಯೂ ಆ ಮಹಾಬಳೇಶ್ವರನನ್ನು ಪೂಜಿಸುತ್ತಿರುವರು. ಅಲ್ಲಿ ಹಾವು, ಗರುಡ ಮುಂತಾದ ಪ್ರಾಣಿಗಳೂ ನಿತ್ಯ ಮಹಾಬಳೇಶ್ವರನ ದರ್ಶನಕ್ಕೆ ಬರುತ್ತಿರುವವು. ಆದರೆ ಅಲ್ಲಿ ಗರುಡನು ಹಾವನ್ನು ನುಂಗುವದಿಲ್ಲ. ॥ ೯೩ ॥ ರಾಜಾ, ಹಿಂದಕ್ಕೆ ರಾಕ್ಷಸಕುಲದ ರಾವಣ, ಕುಂಭಕರ್ಣ, ವಿಭೀಷಣ ಮೊದಲಾದವರು ಆ ಗೋಕರ್ಣ ಕ್ಷೇತ್ರಕ್ಕೆ ಬಂದು ಶ್ರೀಶಂಕರನನ್ನು ಪೂಜಿಸಿ ಕಠಿಣವಾದ ತಪಸ್ಸು ಮಾಡಿ, ರಾವಣನು ತನಗೆ ಮನುಷ್ಯ ಹಾಗು ಮಂಗಗಳ ಹೊರತು ಉಳಿದ ಪ್ರಾಣಿಗಳಿಂದ ಮರಣ ಬರಬಾರದೆಂದೂ, ಕುಂಭಕರ್ಣನು ತನಗೆ ಆರಾರು ತಿಂಗಳು ನಿದ್ರೆ ಬರಬೇಕೆಂದೂ, ವಿಭೀಷಣನು ತನಗೆ ದೇವರಲ್ಲಿ ಭಕ್ತಿ ಇರಬೇಕೆಂದೂ ವರವನ್ನು ಪಡೆದರು. ॥ ೯೪ ॥ ಈ ಪ್ರಕಾರ ಸಮಸ್ತ ದೇವತೆಗಳೂ, ಸಿದ್ಧರೂ, ದಾನವರೂ ಸರ್ವರೂ ಗೋಕರ್ಣಕ್ಕೆ ಹೋಗಿ ವಿಧಿ ಪೂರ್ವಕ ಅನೇಕ ರೀತಿಯಿಂದ ಮಹಾಬಳೇಶ್ವರನನ್ನು ಆರಾಧಿಸುತ್ತಿರುವರು. ॥ ೯೫ ॥ ಅಲ್ಲಿಗೆ ಹೋದ ಅನೇಕ ಕಾಮೀ ಜನರು ಮಹಾಬಳೇಶ್ವರನನ್ನು ಆರಾಧಿಸಿ ಪ್ರಖ್ಯಾತರಾಗಿ ತಮ್ಮ ತಮ್ಮ ಹೆಸರಿನ ಒಂದೊಂದು ಲಿಂಗವನ್ನು ಸ್ಥಾಪಿಸಿ, ಅನೇಕ ವರಗಳನ್ನೂ ಚತುರ್ವಿಧ ಪುರುಷಾರ್ಥಗಳನ್ನೂ ಪಡೆದರು. ॥ ೯೬ ॥ ಬ್ರಹ್ಮ, ವಿಷ್ಣು, ಕಾರ್ತವೀರ್ಯ, ವಿನಾಯಕ, ಧರ್ಮದೇವತೆ, ಕ್ಷೇತ್ರಪಾಲ, ದುರ್ಗಾದಿ ದೇವಿಯರು ಮೊದಲಾದವರು ಸಹ ಆ

ಗೋಕರ್ಣ ಕ್ಷೇತ್ರದಲ್ಲಿ ತಮ್ಮ ತಮ್ಮ ಹೆಸರಿನ ಲಿಂಗಗಳನ್ನು ಸ್ಥಾಪಿಸಿರುವರು. ॥ ೯೭–೯೮ ॥ ಈ ಪ್ರಕಾರ ಮಹತ್ವವಾದ ಆ ಗೋಕರ್ಣ ಕ್ಷೇತ್ರದಲ್ಲಿ ಅಸಂಖ್ಯ ಲಿಂಗಗಳೂ ಅಸಂಖ್ಯ ತೀರ್ಥಗಳೂ ಅವೆ. ಈಗ ಅವುಗಳಲ್ಲಿ ಎಷ್ಟೋ ಗುಪ್ತವಾಗಿವೆ. ಈಗ ಅಲ್ಲಿ ಕಾಣುವ ಕಲ್ಲುಗಳೆಲ್ಲವೂ ಲಿಂಗಗಳೂ ಮತ್ತು ಅಲ್ಲಿರುವ ಜಲಾಶಯಗಳೆಲ್ಲವೂ ತೀರ್ಥಗಳೂ ಆಗಿರುತ್ತವೆ ಇಂಥ ಅನುಪಮವಾದ ಕ್ಷೇತ್ರವನ್ನು ಎಷ್ಟು ವಿಸ್ತಾರವಾಗಿ ವರ್ಣಿಸಿದರೂ ತೀರದು. ॥ ೯೯–೧೦೦ ॥ ಆ ಮಹಾಬಳೇಶ್ವರ ಲಿಂಗವು ಕೃತಯುಗದಲ್ಲಿ ಬಿಳಿಯ ವರ್ಣದ್ದು, ತ್ರೇತಾಯುಗದಲ್ಲಿ ಲೋಹಿತ ಅಂದರೆ ತಾಮ್ರ ವರ್ಣದ್ದು, ದ್ವಾಪಾರ ಯುಗದಲ್ಲಿ ಒಂಗಾರ ವರ್ಣದ್ದು ಕಲಿಯುಗದಲ್ಲಿ ಕಪ್ಪು ವರ್ಣದ್ದು ಆಗಿ ಕಾಣುವದು. ॥ ೧೦೧ ॥ ಅದು ಸಪ್ತ ಪಾತಾಳದವರೆಗೂ ಇಳಿದು ನಿಂತಿರುವದು ಕಲಿಯುಗದಲ್ಲಿ ಆ ಲಿಂಗವು ಮೃದುವಾಗಿಯೂ ಸೂಕ್ಷ್ಮವಾಗಿಯೂ ಕಾಣುವದು. ॥ ೧೦೨ ॥ ಆ ಗೋಕರ್ಣ ಕ್ಷೇತ್ರವು ಪಶ್ಚಿಮ ಸಮುದ್ರ ತೀರದಲ್ಲಿ ಮಹತ್ವದ್ದಾಗಿದ್ದು ಬ್ರಹ್ಮ ಹತ್ಯಾದಿ ಪಾತಕಗಳನ್ನು ನಾಶಮಾಡುತ್ತದೆ ಅಲ್ಲಿಯ ಆಶ್ಚರ್ಯವನ್ನು ಹೇಳುವೆನು ಕೇಳು ? ॥ ೧೦೩ ॥ ಆ ಗೋಕರ್ಣದ ಹಾಗು ಆ ಲಿಂಗದರ್ಶನ ಮಾತ್ರದಿಂದ ಮನುಷ್ಯನು ಪುನೀತನಾಗಿ ಬ್ರಹ್ಮ ಹತ್ಯಾದಿ ಪಾತಕಗಳನ್ನೂ, ಪರದಾರ ಗಮನಾದಿ ಷಟ್ಪಾಪಗಳನ್ನೂ, ದುಃಶೀಲ ದುರಾಚಾರಾದಿ ಪಾತಕಗಳನ್ನೂ ಕಳಕೊಂಡು, ಸಕಲ ಕಾಮ್ಯಾರ್ಥಗಳನ್ನು ಹೊಂದಿ, ಅಂತ್ಯದಲ್ಲಿ ಸದ್ಗತಿಯನ್ನು ಪಡೆಯುವನು ॥ ೧೦೪–೧೦೫ ॥ ರಾಜಾ, ಆ ಗೋಕರ್ಣಕ್ಕೆ ಹೋಗಿ ಪುಣ್ಯ ದಿನಗಳಲ್ಲಿ ಯಾರ್ಯಾರು ಭಕ್ತಿಯಿಂದ ಆ ಮಹಾಬಳೇಶ್ವರನನ್ನು ಪೂಜಿಸುತ್ತಾರೋ ಅವರು ರುದ್ರಾಂಶರಾಗುವರು ॥ ೧೦೬ ॥ ಮನುಷ್ಯರು ಬೇಕಾದಾಗ ಗೋಕರ್ಣಕ್ಕೆ ಹೋಗಿ ಭಕ್ತಿಯಿಂದ ಸದಾಶಿವನ ಪೂಜೆಯನ್ನು ಮಾಡಿದರೆ ಅವರು ನಿಶ್ಚಯವಾಗಿ ಶಿವಪದವನ್ನು ಹೊಂದುವರು. ॥ ೧೦೭ ॥ ಆದಿತ್ಯ, ಸೋಮ, ಬುಧವಾರಗಳಲ್ಲಿಯೂ ಅಮಾವಾಸ್ಯಾದಿ ಪರ್ವ ದಿನಗಳಲ್ಲಿಯೂ ಸಮುದ್ರ ಸ್ನಾನ ಮಾಡಿ, ಶಿವಪೂಜೆಯನ್ನೂ ದಾನ–ಧರ್ಮಗಳನ್ನೂ ಮಾಡಬೇಕು. ॥ ೧೦೮ ॥ ಅಲ್ಲಿ ಶಿವಪೂಜಾ ವ್ರತ ಹೋಮ–ಹವನ–ಜಪಗಳನ್ನೂ, ಬ್ರಾಹ್ಮಣ ಸಂತರ್ಪಣೆಯನ್ನೂ ಸ್ವಲ್ಪ ಮಾಡಿದಾಗ್ಯೂ

ದರೂ ಅದು ಅನಂತ ಫಲವನ್ನು ಕೊಡುವದು. ॥ ೧೦೯ ॥ ವ್ಯತಿಪಾತಾದಿಪರ್ವಣಿ ಮತ್ತು ಸೂರ್ಯ ಸಂಕ್ರಾಂತಿಗಳಲ್ಲಿಯೂ ಶನಿಪ್ರದೋಷದಲ್ಲಿಯೂ ಶಿವನನ್ನು ಪೂಜಿಸಿದರೆ ಅಗಣ್ಯ ಪುಣ್ಯ ಬರುವದು. ॥ ೧೧೦ ॥ ಎಲೈ ರಾಜನೇ ಆ ಗೋಕರ್ಣ ಮಹಿಮೆಯನ್ನು ಎಷ್ಟು ಹೇಳಲಿ? ಅಲ್ಲಿ ಸಕಲ ಕರ್ಮಗಳೂ ಸಿದ್ಧಿಸುವವು. ಅನಂತ ಮಹಿಮೆಯುಳ್ಳ ಆ ಭೋಳಾಶಿವನು ಪೂಜಾ ಮಾತ್ರದಿಂದಲೇ ತುಷ್ಟನಾಗುವನು. ॥ ೧೧೧ ॥ ಮಾಘವದ್ಯ ಚತುರ್ದಶಿ ಮಹಾಶಿವರಾತ್ರಿ ದಿವಸ ಆ ಶಿವಲಿಂಗವನ್ನು ಬಿಲ್ವಪತ್ರದಿಂದ ಪೂಜಿಸಿದರೆ ತ್ರಿಭುವನದಲ್ಲಿ ದುರ್ಲಭವಾದ ಹಾಗು ಅತಿಶಯವಾದ ಪುಣ್ಯವುಂಟು. ॥ ೧೧೨ ॥ ಅದು ಇಂಥ ಅನುಪಮವಾದ ಸ್ಥಾನದಲ್ಲಿರುತ್ತಿರಲು ಅದರ ಮಹತ್ವವನ್ನು ಕೇಳಿ ಮೂರ್ಖರು ಅಲ್ಲಿಗೆ ಹೋಗುವದಿಲ್ಲ. ಆ ಶಿವತಿಥಿಯು ಇಷ್ಟು ದುರ್ಲಭವಾದದ್ದಿದ್ದರೂ ಜನರು ಕಿವುಡರು ಮೂಢರಂತೆ ಆಗಿರುವರು. ॥ ೧೧೩ ॥ ಆ ಗೋಕರ್ಣದ ಲಿಂಗ ಸನ್ನಿಧಿಯಲ್ಲಿ ಕ್ಷೇತ್ರೋಪವಾಸ ಜಾಗರಣಾದಿಗಳನ್ನು ಮಾಡಿದರೆ ಆ ಪುಣ್ಯವು ಸ್ವರ್ಗಕ್ಕೆ ಹೋಗಲು ಸೋಪಾನವಾಗುವದೆಂದು ಪ್ರಸಿದ್ಧಿಯದೆ. ॥ ೧೧೪ ॥ ಈ ಪ್ರಕಾರವಾಗಿರುವ ಗೋಕರ್ಣಕ್ಕೆ ಯಾತ್ರೆಗೆ ಯಾರು ಹೋಗುತ್ತಾರೋ ಅವರು ಚತುರ್ವಿಧ ಪುರುಷಾರ್ಥಗಳನ್ನು ಹೊಂದುವರು. ॥ ೧೧೫ ॥ ಅಲ್ಲಿಯ ಸಮಸ್ತ ತೀರ್ಥಗಳಲ್ಲಿ ಸ್ನಾನಮಾಡಿ ಭಕ್ತಿಯಿಂದ ಮಹಾಬಳೇಶ್ವರ ಲಿಂಗವನ್ನು ಪೂಜಿಸುವಂಥವರು ಸಕಲ ಪಾಪಗಳಿಂದ ಬಿಡುಗಡೆ ಹೊಂದುವರು. ॥ ೧೧೬ ॥ ಎಂದೀ ಪ್ರಕಾರವಾದ ಗೋಕರ್ಣ ಮಹಿಮೆಯನ್ನು ಗೌತಮರು ಮಿತ್ರ ಸಹರಾಜನಿಗೆ ಪ್ರಕಾಶವಾಗಿ ಹೇಳಿದರು. ಆ ರಾಜನು ಅದನ್ನು ಪ್ರೀತಿಯಿಂದ ಕೇಳಿ ॥ ೧೧೭ ॥ ಮತ್ತೆ ಸ್ವಾಮಿ ಗೌತಮಮುನಿಗಳೇ, ತಾವು ಗೋಕರ್ಣ ಮಹಿಮೆಯನ್ನು ಬಹಳವಾಗಿ ಹೇಳಿದಿರಿ. ಆದರೆ ಅಲ್ಲಿಗೆ ಪೂರ್ವದಲ್ಲಿ ಯಾರು ಹೋಗಿ ಸಿದ್ಧಿಯನ್ನು ಪಡೆದರು ಎಂಬದಕ್ಕೆ ಉದಾಹರಣೆಯನ್ನು ಹೇಳಿರಿ. ॥ ೧೧೮ ॥ ಸ್ವಾಮೀ ಅದನ್ನು ನನಗೆ ಅಂತಃಕರಣಪೂರ್ವಕ ವಿಸ್ತಾರವಾಗಿ ಹೇಳಬೇಕು ಎಂದು ಭಕ್ತಿಯಿಂದ ಅವರ ಚರಣಕ್ಕೆರಗಿದನು. ॥ ೧೧೯ ॥

ಆಗ ಗೌತಮರು— ಎಲೈ ರಾಜನೇ ಮಹಾಮಹಿಮೆಯುಳ್ಳ ಆ ಗೋಕರ್ಣ ಕ್ಷೇತ್ರವನ್ನು ನಾನು ಬಹು ದಿವಸಗಳಿಂದ ತಿಳಿದಿರುವೆನಲ್ಲದೆ ಅಲ್ಲಿ ಆದ ಅಪಾರ ಉದಾಹರಣೆಗಳನ್ನೂ ನೋಡಿದ್ದೇನೆ. ॥ ೧೨೦ ॥ ಹೇಳುತ್ತೇನೆ ಕೇಳು ನಾನು ಒಂದು ಸಾರೆ ಪದ್ಧತಿಯಂತೆ ಮಹಾಶಿವರಾತ್ರಿಯ ನಿಮಿತ್ತವಾಗಿ ಗೋಕರ್ಣಕ್ಕೆ ಹೋಗಿದ್ದೆನು. ಅಲ್ಲಿ ಯಾತ್ರೆಯ ದೆಸೆಯಿಂದ ಬಹುಜನರು ಬಂದಿದ್ದರು. ಆಗ ಅಲ್ಲಿ ಒಂದು ದೃಷ್ಟಾಂತವನ್ನು ಕಂಡೆನು. ॥ ೧೨೧ ॥ ಶಿವರಾತ್ರಿಯ ಮರುದಿನ ಮಧ್ಯಾಹ್ನದಲ್ಲಿ ನಾನು ಒಂದು ಗಿಡದ ಛಾಯೆಯಲ್ಲಿ ಕೂತಿದ್ದೆನು. ಆಗ ಅಲ್ಲಿ ಸ್ವಲ್ಪ ದೂರದಲ್ಲಿ ಕುರಡಿಯೂ, ಮುದುಕೆಯೂ, ರೋಗಿಯೂ ॥ ೧೨೨ ॥ ಬತ್ತಿದ್ದ ಮುಖವುಳ್ಳವಳೂ, ನಿರಾಹಾರಿಯೂ ದೇಹದಲ್ಲೆಲ್ಲ ತೊನ್ನುಳ್ಳವಳೂ ಹುಳಗಳಿಂದ ತುಂಬಿ ಕೀವು ರಕ್ತಗಳು ಸೋರುತ್ತಿರಲು ದುರ್ಗಂಧ ನಾತವುಳ್ಳವಳೂ ॥ ೧೨೩ ॥ ಹೊಟ್ಟೆನೋವು ಗಂಡಮಾಲೆಗಳುಳ್ಳವಳೂ, ಗಂಟಲದಲ್ಲಿ ಕಫದಿಂದ ತುಂಬಿದವಳೂ, ಅತಿ ಜರ್ಜರಳಾದವಳೂ ದಂತ ಹೀನಳೂ ಉಟ್ಟುಕೊಳ್ಳಲಿಕ್ಕೆ ಬಟ್ಟೆ ಇಲ್ಲದವಳೂ ॥ ೧೨೪ ॥ ಸೂರ್ಯ ಚಂದ್ರ ಕಿರಣಗಳು ಮೈಮೇಲೆ ಬಿದ್ದರೆ ಕಂಠಗತ ಪ್ರಾಣಳಾಗುವವಳೂ ಸರ್ವಾಂಗ ಶೂಲಿಯುಳ್ಳವಳೂ, ಬಹು ಶೌಚ ರೋಗವುಳ್ಳವಳೂ ॥ ೧೨೫ ॥ ವಿಧವೆಯೂ ಕೇಶವಪನ ಮಾಡಿಸಿಕೊಂಡವಳೂ, ಕೀವು ರಕ್ತಗಳಿಂದ ಅತಿ ಹೊಲಸಿಯಾದವಳೂ ಕ್ಷಣಕ್ಷಣಕ್ಕೆ ಭೂಮಿಯ ಮೇಲೆ ಬಿದ್ದು ಪ್ರಾಣತ್ಯಾಗಕ್ಕೆ ಉದ್ಯುಕ್ತಳಾದವಳೂ ॥ ೧೨೬ ॥ ಆದ ಒಬ್ಬ ಚಾಂಡಾಲಿಯು ಬಂದು ಒಂದು ಗಿಡದ ಬುಡದಲ್ಲಿ ಬಿದ್ದು ಪ್ರಾಣ ಬಿಡಹತ್ತಿದಳು ॥ ೧೨೭ ॥ ಈ ಪ್ರಕಾರ ಆಕೆಯು ಪ್ರಾಣ ಬಿಟ್ಟಕೂಡಲೆ ಆಕೆಯನ್ನು ಒಯ್ಯಲಿಕ್ಕೆ ಅತಿ ಬಲವಂತರಾದ ನಾಲ್ಕುಮಂದಿ ಶಿವದೂತರು ಕಿರೀಟ ಕುಂಡಲಧಾರಿಗಳಾಗಿ, ಸೂರ್ಯನಂತೆ ತೇಜೋಮಯರಾಗಿ ಅತಿ ವಿಚಿತ್ರರೀತಿಯಿಂದ ವಿರಾಜಮಾನರಾಗಿ ಕಾಣುತ್ತ ಪ್ರತಿಯೊಬ್ಬರು ತಮ್ಮ ತಮ್ಮ ತ್ರಿಶೂಲ, ಖಟ್ವಾಂಗ, ಟಂಕಾಯುಧ, ಕೇವಲ ಚಂದ್ರನಂತೆ ಪ್ರಕಾಶಮಾನವಾದ ಚಂದ್ರಭಾಳಿಗಳೆಂಬ ಆಯುಧಗಳನ್ನು ಹಿಡಕೊಂಡು ವಿಮಾನದಲ್ಲಿ ಕೂತು, ಆ ಚಾಂಡಾಲಿಯ ಪ್ರೇತದ ಹತ್ತರ ಬಂದರು. ಆಗ ಒಂದು ಅಪೂರ್ವ ಸಂಗತಿಯು ವರ್ತಿಸಿತು ಹೇಳುವೆನು ಕೇಳು. ॥ ೧೨೮-೧೨೯-೧೩೦ ॥

ಆ ಮೇಲೆ ನಾನು ಆ ಶಿವದೂತರನ್ನು ಕುರಿತು-- ಎಲೈ ಶಿವದೂತರೇ, ನೀವು ಇಲ್ಲಿಗೆ ಯಾವ ಕಾರ್ಯಕ್ಕೆ ಬಂದಿರಿ ? ಎಂದು ಕೇಳಿದೆನು. ಆಗ ಅವರು— ಸ್ವಾಮೀ, ಈ ಚಾಂಡಾಲಿಯನ್ನು ವಿಮಾನದಲ್ಲಿ ಕೂಡ್ರಿಸಿಕೊಂಡು ಸ್ವರ್ಗ ಮತ್ತು ಕೈಲಾಸಗಳಿಗೆ ಒಯ್ಯಲಿಕ್ಕೆ ಬಂದಿರುವೆವು ಎಂದು ಹೇಳಿದರು. ‖ ೧೩೧ ‖ ಆಗ ನಾನು ಬಹಳ ಆಶ್ಚರ್ಯಬಟ್ಟು ಮತ್ತೆ ಆ ಶಿವದೂತರನ್ನು ಕುರಿತು— ಎಲೈ ಶಿವದೂತರೇ ಈ ಪ್ರಕಾರ ಚಾಂಡಾಲಿಯೂ ಪಾಪಿಷ್ಠಳೂ ಆದ ಈಕೆಯು ವಿಮಾನವನ್ನು ಹತ್ತಲಿಕ್ಕೆ ಹ್ಯಾಗೆ ಯೋಗ್ಯಳಾದಾಳು ? ನಾಯಿಯನ್ನೊಯ್ದು ಸಿಂಹಾಸನದ ಮೇಲೆ ಕೂಡ್ರಿಸುವದು ಯೋಗ್ಯವಾದೀತೇ ? ‖ ೧೩೨–೧೩೩ ‖ ಇವಳು ಜನ್ಮದಾರಭ್ಯ ಪಾಪವನ್ನು ಸಂಗ್ರಹಿಸಿರುವಳು ಇಂಥ ಪಾಪಿಷ್ಠಳೂ ದುರ್ವೃತ್ತಳೂ ಆದ ಈಕೆಯನ್ನು ಕೈಲಾಸಕ್ಕೆ ಹ್ಯಾಗೆ ಒಯ್ಯುವಿರಿ ? ‖ ೧೩೪ ‖ ಈಕೆಯು ಒಂದು ದಿವಸವಾದರೂ ಶಿವಧ್ಯಾನ ಮಾಡಿಲ್ಲ. ಮತ್ತು ಯಾವ ತಪಸ್ಸಾಧನವನ್ನೂ ಮಾಡಿಲ್ಲ. ಈಕೆಯಲ್ಲಿ ದಯಾ-ಸತ್ಯಗಳನ್ನು ಎಂದೂ ಕಾಣಲಿಲ್ಲ. ‖ ೧೩೫ ‖ ಈಕೆಯು ಸದಾ ಜೀವಹಿಂಸೆ ಮಾಡಿ ಪಶು ಮಾಂಸ ತಿನ್ನುತ್ತಿದ್ದಳು. ಈ ಪ್ರಕಾರ ದುಷ್ಟಳೂ, ಕುಷ್ಠಿಯೂ ಪಾಪಿಯೂ ಆದ ಇವಳು ಒಂದು ದಿವಸವಾದರೂ ಶಿವಪೂಜೆ ಮಾಡಲಿಲ್ಲ ಶಿವಪಂಚಾಕ್ಷರಿ ಜಪವನ್ನೂ ಶಿವಸ್ಮರಣೆಯನ್ನೂ ಮಾಡಿಲ್ಲ. ‖ ೧೩೬–೧೩೭ ‖ ಮತ್ತು ಶಿವರಾತ್ರಿದಿವಸ ಉಪೋಷಣವನ್ನೂ ಪುಣ್ಯಕರವಾದ ದಾನವನ್ನೂ ಯಜ್ಞಯಾಗಾದಿ ಸಾಧನಗಳನ್ನೂ ‖ ೧೩೮ ‖ ಪರ್ವಕಾಲಗಳಲ್ಲಿ ಸ್ನಾನವನ್ನೂ ತೀರ್ಥಯಾತ್ರೆಗಳನ್ನೂ ಸಕಲ ವ್ರತಾದಿಗಳನ್ನೂ ಎಂದೂ ಮಾಡಿಲ್ಲ. ‖ ೧೩೯ ‖ ಇವಳು ಸರ್ವಾಂಗದಲ್ಲಿ ಕೀವು-ರಕ್ತ ಉಳ್ಳವಳಾಗಿ ಬಹು ದುರ್ಗಂಧವಾಗಿ ನಾರುತ್ತಿರುವಳು. ಇಂಥ ಚಾಂಡಾಲಿಯೂ ದುರ್ವೃತ್ತಳೂ ಆದ ಇವಳು ಪೂರ್ವ ಜನ್ಮದಲ್ಲಿ ಸಹ ಯಾವ ದೇವರನ್ನೂ ಆರಾಧಿಸಿಲ್ಲವೆಂಬಂತೆ ಕಾಣುತ್ತದೆ. ಯಾಕಂದರೆ ಈಕೆಯ ಸರ್ವಾಂಗವು ಕುಷ್ಠವಾಗಿ ಬಾಯಿಂದ ಹುಳಗಳು ಬೀಳುತ್ತಿರುವದೇ ಅದರ ಗುರುತಾಗಿದೆ. ಹೀಗಿದ್ದು ಈಕೆಯು ಪೂರ್ವದಲ್ಲಿ ಏನು ಸುಕೃತವನ್ನು ಮಾಡಿರುವಳು ? ‖ ೧೪೦–೧೪೧ ‖ ಇಂಥ ದುರಾಚಾರಿಯೂ ಪಾಪಿಯೂ ಆದವಳನ್ನು ಕೈಲಾಸಕ್ಕೆ ಒಯ್ಯು

ವದು ಈ ಪ್ರಪಂಚದಲ್ಲಿ ಯೋಗ್ಯವಾಗುವದಿಲ್ಲ. ಆದ್ದರಿಂದ ಈಕೆಯನ್ನು ಕೈಲಾಸಕ್ಕೆ ಹ್ಯಾಗೆ ಒಯ್ಯುವಿರಿ ಹೇಳಿರಿ ಎಂದು ಕೇಳಿದೆನು. ಆಗ ಆ ಶಿವದೂತರು ನನಗೆ ಆ ಚಾಂಡಾಲಿಯ ಆದ್ಯಂತ ಕಥೆಯನ್ನು ಹೇಳಿದರು. ॥೧೪೨-೧೪೩॥ ಎಲೈ ರಾಜನೇ, ಅದು ಬಹಳ ಆಶ್ಚರ್ಯಕರವಾಗಿದೆ. ಅದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು. ॥೧೪೪॥ ರಾಜಾ, ಆ ಶಿವದೂತರು ಅಂದದ್ದೇನಂದರೆ— ಸ್ವಾಮೀ, ಗೌತಮ ಮುನಿಗಳೇ, ಈಕೆಯು ಪೂರ್ವದಲ್ಲಿ ಒಬ್ಬ ಬ್ರಾಹ್ಮಣನ ಮಗಳಾಗಿದ್ದು, ಈಕೆಗೆ ಸೌಮಿನಿ ಎಂಬ ಹಸರಿತ್ತು. ಈಕೆಯು ಚಂದ್ರನಂತೆ ಮುಖವುಳ್ಳವಳಾಗಿ ॥೧೪೫॥ ಅತಿ ಸುಂದರಿಯಾಗಿದ್ದು ತಂದೆಯ ಮನೆಯಲ್ಲಿ ಬೆಳೆದು ಲಗ್ನಕ್ಕೆ ಯೋಗ್ಯಳಾದಳು. ಈಕೆಗೆ ಸುಂದರನಾದ ವರನು ಸಿಗಲಿಲ್ಲವೆಂದು ತಂದತಾಯಿಗಳು ಚಿಂತಿಸುತ್ತಿದ್ದರು. ॥೧೪೬॥ ಈಕೆಯು ಹತ್ತು ವರ್ಷಗಳ ವಯಸ್ಸಿನಲ್ಲಿಯೇ ಪ್ರಾಯದಿಂದ ಉನ್ಮತ್ತಳಾದಳು. ಆಗ ಇವಳ ತಾಯಿ-ತಂದೆಗಳು ಒಬ್ಬ ಬ್ರಾಹ್ಮಣನನ್ನು ನೋಡಿ, ಅವನಿಗೆ ಈಕೆಯನ್ನು ಕೊಟ್ಟು ವಿಧಿಪೂರ್ವಕ ಲಗ್ನ ಮಾಡಿದರು ॥೧೪೭॥ ಲಗ್ನವಾದಮೇಲೆ ಇವಳು ಪತಿಯ ಮನೆಗೆ ಹೋಗಿ ಕೆಲವು ದಿವಸ ಸುಖದಿಂದ ಇದ್ದಳು ॥೧೪೮॥ ಹೀಗೆ ನಡೆದಿರಲು ಮುಂದೆ ಸ್ವಲ್ಪ ದಿವಸಗಳಲ್ಲಿ ಬ್ರಹ್ಮಬರಹದ ಪ್ರಕಾರ ಇವಳ ಪತಿಯು ಸ್ವಲ್ಪ ಬೇನೆ ಬಂದು ಕೂಡಲೆ ಮೃತನಾದನು ॥೧೪೯॥ ಈ ಸುದ್ದಿಯನ್ನು ಕೇಳಿ ಇವಳ ತಂದೆ-ತಾಯಿಗಳು ದುಃಖದಿಂದ ಈಕೆಯನ್ನು ತಮ್ಮ ಮನೆಗೆ ಕರಕೊಂಡು ಬಂದರು. ಈಕೆಯು ಕೆಲವು ದಿವಸ ಪತಿಯ ಸಂಬಂಧವಾಗಿ ದುಃಖಿಸುತ್ತಿದ್ದಳು. ॥೧೫೦॥ ಇವಳು ಒಳ್ಳೇ ತರುಣಿಯೂ ಅತಿ ಸುಂದರಿಯೂ ಆಗಿದ್ದದರಿಂದ ಪ್ರತಿದಿವಸ ಪರಪುರುಷರನ್ನು ನೋಡಿ ಚಂಚಲಚಿತ್ತಳಾಗಿ ಕಾಮವಿಕಾರವನ್ನು ಹೊಂದಿ ಕೆಲವು ದಿವಸ ಗುಪ್ತವಾಗಿ ಜಾರಕರ್ಮವನ್ನು ಮಾಡಹತ್ತಿದಳು. ಆದರೆ ಪಾಪವು ಗುಪ್ತವಾಗಿ ಉಳಿಯುವದಿಲ್ಲ ಕೂಡಲೆ ಇವಳ ಜಾರಕೃತ್ಯವು ಹೊರಬಿತ್ತು. ॥೧೫೧-೧೫೨॥ ತರುಣಿಯೂ ಸುಂದರಿಯೂ ವಿಧವೆಯೂ ಆದ ಈ ಸ್ತ್ರೀಯಳಿಗೆ ವಿಷಯವಾಸನೆಯು ಹೆಚ್ಚಾಗಿ ಮನಸ್ಸು ಸ್ಥಿರವಾಗಿ ಉಳಿಯಲಿಲ್ಲ. ॥೧೫೩॥ ಆದರಂತೆ ಇವಳು ಪಾಪ ಮಾಡಿದ್ದು ಎಲ್ಲರಿಗೂ ತಿಳಿಯಿತು. ಆಗ ಇವಳ ತಾಯಿ-

ತಂದೆ, ಬಂಧು-ಬಳಗದವರು ತಿರಸ್ಕಾರ ಮಾಡಿ ಇವಳನ್ನು ಜಾತಿಯಿಂದಲೂ ಮನೆಯಿಂದಲೂ ಹೊರಗೆ ಹಾಕಿ ತಾವು ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧರಾದರು. ॥ ೧೫೪-೧೫೫ ॥ ಮನೆಯಲ್ಲಿದ್ದಾಗ ಇವಳಿಗೆ ವ್ಯಭಿಚಾರ ಮಾಡಲಿಕ್ಕೆ ಅಡ್ಡಿಯಾಗಿತ್ತು. ಮನೆಬಿಟ್ಟು ಹೊರಗೆ ಬಂದ ಬಳಿಕ ಯಾರ ಹೆದರಿಕೆಯೂ ಇಲ್ಲದೆ ಅವಳು ಅಹೋರಾತ್ರಿ ಬಹಿರಂಗವಾಗಿ ಜಾರಕರ್ಮ ಮಾಡುತ್ತ ಊರಲ್ಲಿ ಅಡ್ಡಾಡುತ್ತಿದ್ದಳು. ॥ ೧೫೬ ॥ ಕಡೆಗೆ ಇವಳು ಅದೇ ಊರಲ್ಲಿರುವ ಒಬ್ಬ ಸುಂದರ ತರುಣ ವ್ಯಾಪಾರಿ ವೈಶ್ಯ ಕುಮಾರನನ್ನು ನೋಡಿ ಅವನನ್ನು ಲಗ್ನ ಮಾಡಿಕೊಂಡಳು. ॥ ೧೫೭ ॥ ಗೌತಮರೇ, ಈ ಪ್ರಕಾರ ಪಾಪಿಷ್ಠಳೂ, ದುರಾಚಾರಿಯೂ ಆಗಿ ಕುಲಗಳ ವೈರಿಯೂ ಆದ ಇವಳು ಆ ಶೂದ್ರನ ಮನೆಯಲ್ಲಿಯೇ ಇರುತ್ತಿದ್ದಳು. ॥ ೧೫೮ ॥ ಯಾರ್ಯಾರು ಯಾತ್ಯಾತರಿಂದ ಕೆಡುತ್ತಾರೆಂಬದನ್ನು ಹೇಳುತ್ತೇವೆ ಕೇಳಿರಿ.

**ಶ್ಲೋಕ—** ಸ್ತ್ರೀಯಃ ಕಾಮೇನ ನಶ್ಯಂತಿ ಬ್ರಾಹ್ಮಣೋ ಹೀನ ಸೇವಯಾ ।
ರಾಜಾನೋ ಬ್ರಹ್ಮದಂಡೇನ ಯತಯೋ ಭೋಗಸಂಗ್ರಹಾತ್ ೧೫೯ ॥

**ಅರ್ಥ—** ಸ್ತ್ರೀಯರು ಕಾಮದಿಂದಲೂ ಬ್ರಾಹ್ಮಣರು ನೀಚರ ಸೇವೆಯಿಂದಲೂ ರಾಜರು ಬ್ರಾಹ್ಮಣರನ್ನು ಶಿಕ್ಷಿಸುವದರಿಂದಲೂ ಸನ್ಯಾಸಿಗಳು ವಿಷಯ ಭೋಗದಿಂದಲೂ ಕೆಡುವರು ॥ ೧೬೦ ॥ ಸ್ವಾಮೀ, ಗೌತಮರೇ, ಹೀಗೆ ಈಕೆಯು ಆ ಶೂದ್ರನ ಮನೆಯಲ್ಲಿದ್ದು ಅವನ ಸಂಗಡ ಅತಿ ಹರ್ಷದಿಂದ ರಮಿಸುತ್ತಿರುವಾಗ ಒಬ್ಬ ಪುತ್ರನನ್ನು ಪಡೆದಳು. ॥ ೧೬೧ ॥ ಈಕೆಯು ನಿತ್ಯವೂ ಮಾಂಸ ತಿನ್ನುತ್ತ, ಮಧ್ಯಪಾನದಿಂದ ಉನ್ಮತ್ತಳೂ, ದುರಾಚಾರಿಯೂ, ಪಾಪಿಷ್ಠಳೂ ಆಗಿ ಆ ಶೂದ್ರನ ಹೆಂಡತಿಯಾಗಿದ್ದಳು ॥ ೧೬೨ ॥ ಹೀಗಿರಲು ಒಂದು ದಿವಸ ಈಕೆಯು ಶರೆ ಕುಡಿದು ಒಳ್ಳೇ ಉನ್ಮತ್ತಳಾಗಿ ಆಹಾರಕ್ಕೋಸ್ಕರ ಕುರಿ ಎಂದು ತಿಳಿದು, ಮನೆಯಲ್ಲಿದ್ದ ಆಕಳ ಕರುವನ್ನು ಕೊಂದು ಅದರ ದೇಹದೊಳಗಿನ ಮಾಂಸವನ್ನು ಅಡಿಗೆ ಮಾಡಿ, ಮರುದಿವಸ ತಿನ್ನಲಿಕ್ಕೆಂದು

ಆದರ ರುಂಡವನ್ನು ನೆಲುವಿನಮೇಲಿಟ್ಟಿದ್ದಳು ॥ ೧೬೪ ॥ ಆಗ ಮದ್ಯಪಾನದಿಂದ ಭ್ರಮಿತಳಾದ ಇವಳು ಅಸ್ತಮಯ ಕಾಲದಲ್ಲಿ ಆ ಮದ್ಯದ ಮದವಿಳಿದವಳಾಗಿ ಎಚ್ಚರ ಹೊಂದಿ, ಆಕಳನ್ನು ಹಿಂಡಬೇಕೆಂದು ಕರುವನ್ನು ನೋಡಿದಳು. ॥ ೧೬೫ ॥ ಆದರೆ ಆ ಕರುವನ್ನು ಕಟ್ಟುವ ಸ್ಥಳದಲ್ಲಿ ಕುರಿಯು ಇತ್ತು ಅದನ್ನು ನೋಡಿ ಇವಳು ಭ್ರಮದಿಂದ ಗಾಬರಿಯಾಗಿ ಬಹಳವಾಗಿ ದುಃಖಿಸುತ್ತ ನೆಲುವಿನ ಮೇಲಿಟ್ಟ ರುಂಡವನ್ನು ನೋಡಿ— ಅಯ್ಯೋ! ಇದು ನಿಶ್ಚಯವಾಗಿ ಕರುವಿನ ರುಂಡವು! ಎಂದು ತಿಳಿದು ॥ ೧೬೬ ॥ ಬಹಳ ಚಿಂತೆಬಟ್ಟು ಶಿವ ಶಿವ ಚಂದ್ರಮೌಳಿಯೇ ನನ್ನ ಅಜ್ಞಾನದಿಂದ ಈ ಪ್ರಕಾರ ಪಾಪವು ಘಟಿಸಿತು ಎಂದು ಈ ದುರಾತ್ಮಳು ಚಿಂತಿಸಿದಳು. ॥ ೧೬೭ ॥ ಆ ಮೇಲೆ ಗಂಡನು ಸಿಟ್ಟುಮಾಡಬಹುದೆಂದು ತಿಳಿದು, ಆ ಕರುವಿನ ತಲೆಯನ್ನೂ ಅಸ್ಥಿಗಳನ್ನೂ ಚರ್ಮವನ್ನೂ ಭೂಮಿಯಲ್ಲಿ ಹುಗಿದುಬಿಟ್ಟಳು ॥ ೧೬೮ ॥ ಆಮೇಲೆ ತನ್ನ ತಪ್ಪನ್ನು ಮುಚ್ಚಿಕೊಳ್ಳಬೇಕೆಂದು ಗಂಡನನ್ನೂ ನೆರೆಹೊರೆಯವರನ್ನೂ ಕುರಿತು— ನೋಡಿರಿ! ನಮ್ಮ ಆಕಳ ಕರುವನ್ನು ಒಂದು ಹುಲಿಯು ಬಂದು ತಕ್ಕೊಂಡುಹೋಗಿ ತಿಂದುಬಿಟ್ಟಿತು ಎಂದು ಅಳುತ್ತ ಸುಳ್ಳು ಹೇಳಿದಳು. ॥ ೧೬೯ ॥ ಹೀಗೆ ಇವಳು ಕೆಲವುದಿವಸ ಆನಂದದಿಂದ ಆ ಶೂದ್ರನ ಮನೆಯಲ್ಲಿರುವಾಗ ಜೇನೆಬಂದು ಮೃತಪಟ್ಟಳು. ಆಗ ಈಕೆಯನ್ನು ಯಮದೂತರು ಯಮಪುರಕ್ಕೆ ಒಯ್ದರು. ॥ ೧೭೦ ॥ ಅಲ್ಲಿ ಈಕೆಯನ್ನು ನರಕದಲ್ಲಿ ಹಾಕಿದ್ದರಿಂದ ಅಲ್ಲಿ ಅತಿ ದುಃಖವನ್ನು ಅನುಭೋಗಿಸಿ ಈಕೆಯು ಪುನಃ ಚಾಂಡಾಲ ಜನ್ಮದಲ್ಲಿ ಕುರುಡಿಯೂ ವಿಕಾರ ರೂಪವುಳ್ಳವಳೂ ಆಗಿ ಹುಟ್ಟಿದಳು ಆದರೂ ಈಕೆಯ ತಂದೆ-ತಾಯಿಗಳು ಕೆಲವುದಿವಸ ಮಮತೆಯಿಂದ ಜೋಪಾನ ಮಾಡಿದರು. ॥ ೧೭೧-೧೭೨ ॥ ಈಕೆಯ ಆಪ್ತೇಷ್ಟರು ಈಕೆಗೆ ಎಂಜಲವನ್ನೂ ಊಟಕ್ಕೆ ಕೊಡುತ್ತಿದ್ದರು. ಈಕೆಯು ಅದನ್ನೇ ಅಖಂಡವಾಗಿ ತಿನ್ನುತ್ತ ಬಾಲ್ಯದಲ್ಲಿ ಪೋಷಿತಳಾದಳು ॥ ೧೭೩ ॥ ಈ ಪ್ರಕಾರ ಇರುವಾಗ ಮುಂದೆ ಕೆಲವುದಿವಸಗಳ ಮೇಲೆ ಈಕೆಯ ಸರ್ವಾಂಗದಲ್ಲಿ ಕುಷ್ಠರೋಗವು ವುಂಟಾಯಿತು. ಮುಂದೆ ಇವಳ ತಂದೆ-ತಾಯಿಗಳು ತೀರಿ ಹೋದ್ದರಿಂದ ಇವಳು ದರಿದ್ರಳೂ ನಿರಾಶ್ರಿತಳೂ ಆದಳು. ॥ ೧೭೪ ॥ ಆಗ ಇವಳ

ಅಣ್ಣ-ತಮ್ಮಂದಿರೂ, ಅಪ್ತೇಷ್ಟರೂ ಈಕೆಯನ್ನು ಮನೆಯಿಂದ ಹೊರಗೆ ಹಾಕಿದರು. ಆಗ ಇವಳು ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೊಂಡು ತನ್ನ ದೇಹ ರಕ್ಷಣೆ ಮಾಡಿಕೊಳ್ಳುತ್ತಿದ್ದಳು. ॥ ೧೭೫ ॥ ಈ ಪ್ರಕಾರ ಚಾಂಡಾಲಿಯೂ, ಕುರುಡಿಯೂ, ಕುಷ್ಠಿಯೂ ಆದ ಇವಳು ಸರ್ವಕಾಲ ಕ್ಷುಧೆಯಿಂದ ಪೀಡಿತಳಾಗಿರುತ್ತಿದ್ದಳು. ॥ ೧೭೬ ॥ ಮುಂದೆ ಇವಳಿಗೆ ಅನ್ನ-ವಸ್ತ್ರಗಳು ಸಿಗದಂತಾದ್ದರಿಂದಲೂ ಪೂರ್ವ ಜನ್ಮದ ಕರ್ಮಫಲದಿಂದಲೂ ಕ್ಷುಧೆಯಿಂದ ಪೀಡಿತಳಾಗಿ ದುಃಖದಿಂದ ಕಷ್ಟಬಡುತ್ತ ಮುದಿಕೆಯಾದಳು. ॥ ೧೭೭ ॥ ಆ ಮೇಲೆ ಇವಳು ಬಹು ಜನರು ಓಡಾಡುವ ಮಾರ್ಗದಲ್ಲಿ ಕೂತು ಭಿಕ್ಷೆ ಬೇಡುತ್ತಿದ್ದಳು. ಆದರೂ ಇವಳ ಹೊಟ್ಟೆ ತುಂಬುತ್ತಿದ್ದಿಲ್ಲ ಆದರಿಂದ ಈಕೆಯು ಅಹೋರಾತ್ರಿ ಅತಿಯಾಗಿ ದುಃಖಿಸುತ್ತಿದ್ದಳು ॥ ೧೭೮ ॥ ಮಹಾ ದೋಷಿಯಾದ ಇವಳು ಸರ್ವಾಂಗದಲ್ಲಿ ಕುಷ್ಠರೋಗದಿಂದ ಪೀಡಿತಳಾಗಿ ಕೀವು-ರಕ್ತಗಳು ಸೋರುತ್ತಿರಲು ಅತಿ ದುರ್ಗಂಧ ನಾತವುಳ್ಳವಳಾಗಿದ್ದಳು. ॥ ೧೭೯ ॥ ಹೀಗಿರುತ್ತಿರಲು ಈ ಮಾಘಮಾಸದಲ್ಲಿ ಮಹಾ ಸ್ಥಾನವಾದ ಈ ಗೋಕರ್ಣಕ್ಕೆ ಅನೇಕ ಜನರು ತಮ್ಮ ಹೆಂಡರು-ಮಕ್ಕಳೊಡನೆ ಹೊರಟರು. ॥ ೧೮೦ ॥ ಮತ್ತು ಶಿವರಾತ್ರಿಯ ಯಾತ್ರೆಯಪೇಕ್ಷೆಯಿಂದ ದೇಶೋದೇಶದ ನಾಲ್ಕೂ ವರ್ಣದ ಅನೇಕ ಜನರೂ, ಆನೆ-ಕುದುರೆ, ರಥ ಸಹಿತವಾಗಿ ಅನೇಕ ರಾಜರೂ ಮಹಾಬಳೇಶ್ವರ ದರ್ಶನಕ್ಕಾಗಿ ಹರುಷದಿಂದ ಬರುತ್ತಿದ್ದರು. ॥ ೧೮೧-೧೮೨ ॥ ಆ ನಾಲ್ಕೂವರ್ಣದ ಜನರಲ್ಲಿ ಕೆಲವರು ವಿನೋದದಿಂದಲೂ ಸಮಾರಂಭದಿಂದ ವಾದ್ಯಗಳನ್ನು ಬಾರಿಸುತ್ತಲೂ ಬರುತ್ತಿದ್ದರು. ॥ ೧೮೩ ॥ ಯಾತ್ರೆಗೆ ಬರುವಾಗ ಕೆಲವು ಜನರು ನಗುತ್ತ ಗಾಯನ ಮಾಡುತ್ತ ಓಡುತ್ತ, ಕುಣಿಯುತ್ತ, ದಾರಿಗುಂಟ ಶಿವ ನಾಮ ಗರ್ಜನೆ ಮಾಡುತ್ತ ಬರುತ್ತಿದ್ದರು. ॥ ೧೮೪ ॥ ಆಗ ಈಕೆಯು ಆ ಮಹಾ ಜನರೊಡನೆಯೂ ಅನೇಕ ಭಿಕ್ಷುಕರೊಡನೆಯೂ ಹೊರಟು ದೀನ ಸ್ವರದಿಂದ ಒದರಿ ಭಿಕ್ಷೆ ಬೇಡುತ್ತ, ಮತ್ತೊಬ್ಬರಿಂದ ತನ್ನ ಕೈಯನ್ನು ಹಿಡಿಸಿಕೊಂಡು ಕಷ್ಟದಿಂದ ದಾರಿಯನ್ನು ನಡೆಯುತ್ತ ನಿನ್ನಿನದಿವಸ ಈ ಗೋಕರ್ಣಕ್ಕೆ ಬಂದು ಮುಟ್ಟಿದಳು. ॥ ೧೮೫-೧೮೬ ॥ ಇಲ್ಲಿ ಬಹು ಜನರು ಓಡಾಡುವಂಥ ದೊಡ್ಡ ಬೀದಿಯಲ್ಲಿ ಅಳುತ್ತ ಮಲಗಿಕೊಂಡು

ಎರಡೂ ಕೈಗಳನ್ನು ಚಾಚಿ ಆ ಮಹಾಜನರನ್ನು ಕುರಿತು ॥ ೧೮೭ ॥— ಅಯ್ಯಾ ದಾರಿಕಾರರೇ, ನಾನು ಪೂರ್ವ ಜನ್ಮದಲ್ಲಿ ಬಹಳ ಪಾಪ ಮಾಡಿದ್ದರಿಂದ ಈ ಜನ್ಮದಲ್ಲಿ ನಾನು ಇಷ್ಟು ಕಷ್ಟಪಡುತ್ತೇನೆ ಆದ್ದರಿಂದ ನನ್ನ ಹಸಿವೆಯು ಶಾಂತವಾಗುವದಕ್ಕೆ ನನಗೆ ಭಿಕ್ಷೆಯನ್ನು ಹಾಕಿರಿ. ॥ ೧೮೮ ॥ ನನಗೆ ಉಡುವ-ತೊಡುವ-ಹೊರುವ ಬಟ್ಟೆಗಳಿಲ್ಲ ಎಂದು ಧೂಳಿಯಲ್ಲಿ ಹೊರಳಾಡುತ್ತ— ನಾನು ಹಸಿವೆಯಿಂದ ಸಾಯುತ್ತೇನೆ ಎಲ್ಲರೂ ಧರ್ಮಮಾಡಿರಿ ಎಂದು ಅನ್ನುತ್ತಿದ್ದಳು. ॥ ೧೮೯ ॥ ಮತ್ತೊಮ್ಮೆ— ಅಯ್ಯೋ! ನನ್ನ ಸರ್ವಾಂಗದಲ್ಲಿ ಕುಷ್ಠರೋಗವಾಗಿ ಕೀವು-ರಕ್ತಗಳು ಸೋರುತ್ತವೆ. ಮೈಮೇಲೆ ವಸ್ತ್ರಗಳಿಲ್ಲದ್ದರಿಂದ ಶೀತವು ನನ್ನನ್ನು ಬಾಧಿಸುತ್ತದೆ ನಾನು ಕುರುಡಿಯಾಗಿ ಬಹಳ ಹಸಿದಿದ್ದೇನೆ ಎಲ್ಲರೂ ಧರ್ಮ ಮಾಡಿರಿ. ॥ ೧೯೦ ॥ ನಾನು ಪೂರ್ವದ ನೂರಾರು ಜನ್ಮಗಳಲ್ಲಿ ಸಹ ಪುಣ್ಯ ಮಾಡಿಲ್ಲ! ಆದ್ದರಿಂದ ಈಗ ನಾನು ಬಹಳ ದುಃಖದಿಂದ ಪೀಡಿತಳಾಗಿದ್ದೇನೆ ಎಲ್ಲರೂ ಧರ್ಮ ಮಾಡಿರಿ. ॥ ೧೯೧ ॥ ಎಂದು ಈ ಚಾಂಡಾಲಿಯು ಮಾರ್ಗದಲ್ಲಿ ಬಿದ್ದು ಬೇಡುತ್ತಿದ್ದಳು. ನಿನ್ನಿನದಿವಸ ಮಹಾ ಶಿವರಾತ್ರಿ ವ್ರತವಿದ್ದು ಯಾರೂ ಈಕೆಗೆ ಭಿಕ್ಷೆ ಹಾಕಲಿಲ್ಲ ॥ ೧೯೨ ॥ ಅವಳು ಹಸಿವೆಯಿಂದ ತೀವ್ರ ಖಿನ್ನಳಾಗಿ— ಅಯ್ಯಾ ನನ್ನ ಜಠರಾಗ್ನಿಯು ಅತ್ಯಂತ ಪ್ರದೀಪ್ತವಾಗಿದೆ ಆದ್ದರಿಂದ ಧರ್ಮ ಮಾಡಿರಿ ಎಂದು ಮಾರ್ಗದಲ್ಲಿ ಬಿದ್ದಳು ॥ ೧೯೩ ॥ ಮತ್ತೆ ಮಹಾಬಳೇಶ್ವರನ ಪೂಜೆಗೆ ಹೋಗುವಂಥ ಯಾವತ್ತು ಜನರನ್ನು ಕುರಿತು ಅಳುತ್ತ ಅವರಿಗೆ ಭಿಕ್ಷೆ ಹಾಕಿರೆಂದು ಅನ್ನುತ್ತಿದ್ದಳು. ಆಗ ಅವರಲ್ಲಿ ಕೆಲವರು ನಗುತ್ತ— ಎಲೌ ಸ್ತ್ರೀಯಳೇ, ಈ ದಿನ ಮಹಾಶಿವರಾತ್ರಿ ಉಪವಾಸವಿದ್ದು ಅನ್ನವೆಲ್ಲಿಂದ ಬರಬೇಕು? ॥ ೧೯೪ ॥ ಎಂದು ಅವರು ತಮ್ಮ ಕೈಯಲ್ಲಿದ್ದ ಬಿಲ್ವಪತ್ರಿಯನ್ನೇ ಈಕೆಯ ಕೈಯಲ್ಲಿ ಹಾಕಿದರು. ಈಕೆಯು ಅದನ್ನು ಮೂಸಿನೋಡಿ, ಇದು ತಿನ್ನುವ ಪದಾರ್ಥವಲ್ಲವೆಂದು ॥ ೧೯೫ ॥ ಸಿಟ್ಟಿನಿಂದ ಕೂಡಲೆ ಅದನ್ನು ಬಿಸಾಟಿ ಒಗೆದಳು ಕೂಡಲೆ ಆ ಬಿಲ್ವವು ಹೋಗಿ ಅಲ್ಲಿರುವ ಒಂದು ಶಿವಲಿಂಗದ ಮೇಲೆ ಬಿತ್ತು. ಈ ರೀತಿ ನಿನ್ನೆ ಶಿವರಾತ್ರಿ ಪ್ರದೋಷಕಾಲದಲ್ಲಿ ಈಕೆಗೆ ಆಕಸ್ಮಾತ್ತಾಗಿ ಅಲಭ್ಯ ಶಿವಪೂಜೆಯು ಘಟಿಸಿತು. ॥ ೧೯೬ ॥ ಈಕೆಗೆ ಯಾರೂ ಭಿಕ್ಷೆಯನ್ನು ಹಾಕದ್ದರಿಂದ ನಿನ್ನೆ ಉಪವಾಸವೂ ಆಯಿತು. ಬಿಲ್ವದಿಂದ

ಶಿವಪೂಜೆಯಂತೂ ಆಗೇಆಗಿತ್ತು ಮತ್ತು ಜಾಗರಣವೂ ಆಯಿತು. ॥ ೧೯೭ ॥ ಹೀಗೆ ಈಕೆಗೆ ಅನಾಯಾಸವಾಗಿ ಏನೂ ಪ್ರಯತ್ನವಿಲ್ಲದೆ ಶಿವರಾತ್ರಿಯ ಪುಣ್ಯವು ಘಟಿಸಿದ್ದರಿಂದ ಈಶ್ವರನು ಪ್ರೀತನಾಗಿ ಹರ್ಷದಿಂದ ಈಕೆಯನ್ನು ಈ ಭವಸಾಗರದಿಂದ ದಾಟಿಸಿದನು. ॥ ೧೯೮ ॥ ಗೌತಮರೇ ಈ ಚಾಂಡಾಲಿಗೆ ನಿನ್ನೆ ಈ ಪ್ರಕಾರ ಅನಾಯಾಸವಾಗಿ ಉಪವಾಸ ಘಟಿಸಿದ್ದರಿಂದ ಈ ದಿವಸ ಈಕೆಯು ಮೆಲ್ಲನೆ ಎದ್ದು ಭಿಕ್ಷೆ ಬೇಡುವದಕ್ಕಾಗಿ ಹೊರಟಳು. ॥ ೧೯೯ ॥ ಇವಳು ಮೊದಲೇ ಕುಷ್ಠರೋಗಿಯೂ ಉಪವಾಸದಿಂದ ಅಶಕ್ತಳೂ ಆಗಿ ಕುರುಡಿಯಾಗಿ ಕಣ್ಣು ಕಾಣದ್ದರಿಂದ ಮೆಲ್ಲಮೆಲ್ಲನೆ ಹೋಗುತ್ತಿದ್ದಳು. ॥ ೨೦೦ ॥ ಸೂರ್ಯ ಕಿರಣಗಳಿಂದ ಇವಳಿಗೆ ಭಯಂಕರ ದುಃಖವಾಗುತ್ತಿತ್ತು ಪೂರ್ವಜಿತ ಕರ್ಮದಿಂದ ಈ ಪ್ರಕಾರ ತಾಪ-ಕಷ್ಟಗಳನ್ನು ಅನುಭವಿಸುತ್ತಿದ್ದಳು. ॥ ೨೦೧ ॥ ಈ ಪ್ರಕಾರ ಈ ಚಾಂಡಾಲಿಯು ಕಷ್ಟಪಡುತ್ತ ಇನ್ನು ನಾನು ಉಳಿಯುವದಿಲ್ಲವೆಂದು ತಿಳಿದು ಓಡಿ ಓಡಿ ಬಂದು ಈ ಗಿಡದ ಬುಡದಲ್ಲಿ ಬಿದ್ದು ತೀವ್ರವಾಗಿ ಪ್ರಾಣಬಿಟ್ಟಳು ಆದರಿಂದ ನಾವು ಓಡಿಬಂದೆವು ॥ ೨೦೨ ॥ ಸ್ವಾಮೀ ಗೌತಮರೇ ಇವಳು ನಿನ್ನೆ ಶಿವರಾತ್ರಿದಿವಸ ಉಪವಾಸ ಜಾಗರಣೆಗಳನ್ನು ಮಾಡಿ ಅಕಸ್ಮಾತ್ ಶಿವನಿಗೆ ಬಿಲ್ವಪತ್ರಿ ಏರಿಸಿ ಪುಣ್ಯಪಡೆದಳು. ॥ ೨೦೩ ॥ ಆ ಪುಣ್ಯದಿಂದ ಈ ಚಾಂಡಾಲಿಯು ನೂರುಜನ್ಮದ ಪಾಪವು ಹೋಯಿತು. ಆದರಿಂದ ಶಂಕರನು ಪ್ರೀತನಾಗಿ-- ಇವಳನ್ನು ವಿಮಾನದಲ್ಲಿ ಕೂಡಿಸಿಕೊಂಡು ಕೈಲಾಸಕ್ಕೆ ಕರಕೊಂಡು ಬರ್ರಿ ಎಂದು ಹೇಳಿ ನಮ್ಮನ್ನು ಕಳಿಸಿದನು. ॥ ೨೦೪ ॥ ಎಲೈ ರಾಜನೇ ಈ ಪ್ರಕಾರ ಆ ಶಿವದೂತರು ನನಗೆ ಹೇಳಿ ಆ ಚಾಂಡಾಲಿಯ ದೇಹದಮೇಲೆ ಅಮೃತವನ್ನು ಸಿಂಪಡಿಸಿದರು. ಕೂಡಲೇ ಆಕೆಯ ದೇಹವು ದಿವ್ಯರೂಪವನ್ನು ಹೊಂದಿತು. ಆಗ ಆ ಶಿವದೂತರು ಆಕೆಯನ್ನು ವಿಮಾನದಲ್ಲಿ ಕೂಡ್ರಿಸಿಕೊಂಡು ಶಿವಲೋಕಕ್ಕೆ ತೆಗೆದುಕೊಂಡು ಹೋದರು. ॥ ೨೦೫ ॥ ಎಲೈ ರಾಜನೇ, ಇಂಥ ಮಹತ್ವವಾದ ಗೋಕರ್ಣದ ಮಹಿಮೆಯನ್ನು ನಿನಗೆ ವಿಸ್ತಾರವಾಗಿ ಹೇಳಿದೆನು ನೀನಾದರೂ ತೀವ್ರವಾಗಿ ಆ ಗೋಕರ್ಣಕ್ಕೆ ಹೋಗು. ॥೨೦೬॥ ಅಲ್ಲಿ ಮಹಾಬಳೇಶ್ವರನ ಪೂಜೆ ಮಾಡಿದಕೂಡಲೆ ನಿನ್ನ ಬ್ರಹ್ಮಹತ್ಯಾ ದೋಷವು ಹೋಗಿ ನಿನಗೆ ಈ ಲೋಕದಲ್ಲಿ

ಸುಖವೂ ಪರಲೋಕದಲ್ಲಿ ಸದ್ಗತಿಯೂ ಆಗುವದು. ನೀನು ಮನಸ್ಸಿನಲ್ಲಿ ಏನೂ ಸಂಶಯ ಹಿಡಿಯಬೇಡೆಂದು ಹೇಳಿದರು. ‖ ೨೧೭ ‖ ಎಲೈ ನಾಮಧಾರಕನೇ, ಅವರ ಮಾತು ಕೇಳಿ ಆ ರಾಜನು ಒಳ್ಳೇ ಸಂತೋಷಬಟ್ಟು, ಆ ಗೌತಮರ ಪಾದಕ್ಕೆ ನಮಸ್ಕಾರ ಮಾಡಿ ಕೂಡಲೆ ಗೋಕರ್ಣಕ್ಕೆ ಹೋಗಿ, ಮಹಾಬಳೇಶ್ವರನ ಆರಾಧನೆ ಮಾಡಿ ತನ್ನ ಬ್ರಹ್ಮಹತ್ಯಾ ಪಾಪವನ್ನು ಕಳಕೊಂಡನು. ‖ ೨೧೮ ‖ ಆದ್ದರಿಂದ ಎಲೈ ನಾಮಧಾರಕಾ, ಗೋಕರ್ಣವು ಈ ಪ್ರಕಾರ ಪುಣ್ಯಪಾವನವಾದ ಸ್ಥಾನವೆಂದು ಶ್ರೀಪಾದ ಶ್ರೀ ವಲ್ಲಭ ಗುರುಗಳು ಅಲ್ಲಿ ಇದ್ದರು ಎಂದು ಸಿದ್ಧರು ಹೇಳಿದರು. ‖ ೨೧೯ ‖ ಎಂದು ಸರಸ್ವತೀ ಗಂಗಾಧರನು— ಎಲೈ ಶ್ರೋತೃಗಳೇ ಗುರುಚರಿತ್ರೆಯನ್ನು ವಿಸ್ತಾರವಾಗಿ ಏಕಚಿತ್ತದಿಂದ ಕೇಳಿರಿ ಎಂದು ಹೇಳಿದನು. ‖ ೨೨೦ ‖

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ ಗೋಕರ್ಣ ಮಹಿಮಾ ವರ್ಣನಂನಾಮ ಸಪ್ತಮೋಽಧ್ಯಾಯಃ ‖ ೭ ‖ ಶ್ರೀ ಗುರುದೇವದತ್ತ ‖

— ೭ನೇ ಅಧ್ಯಾಯ ಸಮಾಪ್ತ —

# ೮ನೇಯ ಅಧ್ಯಾಯ

**ಶ್ರೀ ಗುರುಗಳು ಅಂಬಾ ಎಂಬ ವಿಧವಾ ಸ್ತ್ರೀಯಳಿಗೆ ಶನಿಪ್ರದೋಷ ವ್ರತದ ಮಹಾತ್ಮ್ಯೆಯನ್ನು ಹೇಳಿ ಆಕೆಯ ಮಂದಮತಿ ಮಗನಿಗೆ ಜ್ಞಾನವನ್ನು ಕೊಟ್ಟದ್ದು ಹೇಳಿದೆ.**

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕನು ಸಿದ್ಧರನ್ನು ಕುರಿತು— ಸ್ವಾಮೀ ನನಗೆ ಗೋಕರ್ಣ ಮಹಿಮೆಯನ್ನು ಹೇಳಿದಿರಿ ಆದರೆ ಶ್ರೀ ಗುರು ಶ್ರೀಪಾದ ಯತಿಗಳು ಆ ಗೋಕರ್ಣದಲ್ಲಿ ಎಷ್ಟು ದಿವಸ ಇದ್ದರು ? ಮುಂದೆ ಏನು ಸಂಗತಿಗಳು ವರ್ತಿಸಿದವು ಎಂಬದನ್ನು ಹೇಳಬೇಕು. ‖ ೧ ‖ ಕೃಪಾಸಿಂಧುವೇ, ಗುರುಮೂರ್ತಿಯೇ, ಈಗ ತಾವು ಹೇಳಿದ ಗುರುಚರಿತ್ರೆಯನ್ನು ಕೇಳಿ ನನಗೆ ಬಹಳ ಸಂತೋಷವಾಯಿತು ಆದರೂ ಇನ್ನೂ ಕೇಳಬೇಕೆಂದು ನನ್ನ ಮನಸ್ಸಿನಲ್ಲಿ ಉಲ್ಹಾಸ ಹುಟ್ಟಿ ನನ್ನ ಮನಸ್ಸಿಗೆ ಅದೇ ವೇಧ ಹತ್ತಿದೆ ಎಂದನು ‖ ೨ ‖ ಅವನ ಮಾತು ಕೇಳಿ ಸಿದ್ಧರು ಬಹಳ ಸಂತೋಷ ಹೊಂದಿ ಮುಂದಿನ ಚರಿತ್ರೆಯನ್ನು ವಿಸ್ತಾರವಾಗಿ ಹೇಳಹತ್ತಿದರು. ಎಲೈ ಶ್ರೋತೃಗಳಿರಾ, ನೀವೂ ಅದನ್ನು ಕೇಳಿರಿ. ‖ ೩ ‖ ಆಗ ಸಿದ್ಧರು— ಎಲೈ ನಾಮಧಾರಕನೇ, ಶ್ರೀಪಾದ ಶ್ರೀ ವಲ್ಲಭರು ಗೋಕರ್ಣದಲ್ಲಿ ಮೂರು ವರುಷ ಗುಪ್ತವಾಗಿದ್ದರು. ಅಲ್ಲಿಂದ ಲೋಕಾನುಗ್ರಹಕ್ಕಾಗಿ ಶ್ರೀಶೈಲಕ್ಕೆ ಹೋದರು. ‖ ೪ ‖ ಅವರ ಚರಣ ದರ್ಶನವೇ ಸರ್ವ ತೀರ್ಥ ಸಮಾನವೆಂದು ತಿಳಿ. “ ಚರಣಂ ಪವಿತ್ರಂ ವಿತತಂ ಪುರಾಣಂ ” ಎಂದು ವೇದ ಶ್ರುತಿ ಯಲ್ಲಿ ಹೇಳಿದೆ ‖ ೫ ‖ ಗುರುಚರಣದಲ್ಲಿ ಸಮಸ್ತ ತೀರ್ಥಗಳಿದ್ದರೂ ಲೋಕಾನುಗ್ರಹಕ್ಕಾಗಿಯೇ ಅವರು ತೀರ್ಥ ಯಾತ್ರೆಗೆ ಹೋಗುತ್ತಿದ್ದರೆಂದು ತಿಳಿ. ‖ ೬ ‖ ಈ ಪ್ರಕಾರ ಅವರು ನಾಲ್ಕು ತಿಂಗಳು ತೀರ್ಥಯಾತ್ರೆ ಮಾಡುತ್ತ ಭಕ್ತರಾದ ಸಜ್ಜನರಿಗೆ ದರ್ಶನ ಕೊಡಲು ನಿವೃತ್ತಿ ಸಂಗಮಸ್ಥಾನದಿಂದ ಕುರವಪುರಕ್ಕೆ ಬಂದರು. ‖ ೭ ‖ ಆ

ಕುರವಪುರವು ಮಹಾ ಕ್ಷೇತ್ರವು. ಅದು ಕೃಷ್ಣಾನದಿಯ ಮಧ್ಯದಲ್ಲಿ ಒಂದು ಗಡ್ಡೆಯಾಗಿರುವದು. ಅದಕ್ಕೆ ಕುರುಗಡ್ಡೆ ಎಂಬ ಹೆಸರು ಬಂದಿರುವದು. ಅಲ್ಲಿಯ ಮಹಿಮೆಯು ಈ ಭೂಮಂಡಲದಲ್ಲಿ ದುರ್ಲಭ ಹಾಗು ಅಪಾರವಾದದ್ದಿರುವದು. ॥ ೮ ॥ ಅದರ ಮಹಿಮೆಯನ್ನು ವಿಸ್ತಾರವಾಗಿ ಹೇಳಹತ್ತಿದರೆ ಕಥೆಯು ಬಹಳ ಬೆಳೆಯುವದು. ಎಲೈ ನಾಮಧಾರಕನೇ ಮುಂದಿನ ಗುರುಚರಿತ್ರೆಯು ಅಮೃತವಾಗಿರುವದು ಹೇಳುವೆನು ಏಕ ಚಿತ್ತದಿಂದ ಕೇಳು. ॥ ೯ ॥ ಶ್ರೀಪಾದರು ಕುರವಪುರದಲ್ಲಿರುವಾಗ ಅವರ ಮಹಿಮೆಯು ಅಪರಂಪಾರವಾಗಿ ಬೆಳೆದು ಅದು ಭೂಮಿಯಲ್ಲಿ ಬಹಳ ಖ್ಯಾತಿಯನ್ನು ಹೊಂದಿ ಹೇಳಲಿಕ್ಕೆ ವಿಸ್ತಾರವಾಗಿರುವದು ॥ ೧೦ ॥ ಯಾರು ಶ್ರೀ ಗುರುಗಳನ್ನು ಭಕ್ತಿಯಿಂದ ಭಜಿಸುತ್ತಾರೋ ಅವರು ಏನೂ ತ್ರಾಸವಿಲ್ಲದೆ ಸರ್ವಸುಖವನ್ನೂ ಕನ್ಯಾ-ಪುತ್ರ-ಧನ ಮೊದಲಾದವುಗಳಲ್ಲಿ ಇಚ್ಛಿಸಿದ್ದನ್ನೂ ಹೊಂದುತ್ತಾರೆ. ॥ ೧೧ ॥ ಗುರುಗಳ ಸಮಸ್ತ ಮಹಿಮೆಯನ್ನು ಹೇಳಹತ್ತಿದರೆ ಕಥೆಯು ವಿಸ್ತಾರವಾಗುವದು ಶ್ರೀಪಾದರು ಕುರವಪುರದಲ್ಲಿದ್ದಾಗ ಒಂದು ನೆಪದಿಂದ ಮತ್ತೆ ಮನುಷ್ಯಾವತಾರ ತಕ್ಕೊಳ್ಳುವ ಕಾರಣವನ್ನೂ ಅದರ ಪೂರ್ವ ಕಥೆಯನ್ನೂ ನಿನಗೆ ಸ್ವಲ್ಪ ಹೇಳುವೆನು ಕೇಳು. ॥ ೧೨-೧೩ ॥ ಆ ಕುರವಪುರದಲ್ಲಿ ವೇದಶಾಸ್ತ್ರ ಸಂಪನ್ನನಾದ ಒಬ್ಬ ಬ್ರಾಹ್ಮಣನಿದ್ದನು ॥ ೧೪ ॥ ಅವನ ಹೆಂಡತಿ "ಅಂಬಿಕಾ" ಎಂಬವಳು ಸುಶೀಲಾಚಾರವಂತಳೂ ಪತಿಸೇವಾರತಳೂ ಮಹಾಪುಣ್ಯವಂತಳೂ ಆಗಿದ್ದಳು. ॥ ೧೫ ॥ ಅವಳ ಪೂರ್ವಕರ್ಮಾನುಸಾರವಾಗಿ ಅವಳಿಗೆ ಹುಟ್ಟಿದ ಮಕ್ಕಳು ಕೂಡಲೆ ಸಾಯುತ್ತಿದ್ದವು. ಅದಕ್ಕಾಗಿ ಆ ದಂಪತಿಗಳು ಅನೇಕ ತೀರ್ಥಯಾತ್ರೆಗಳನ್ನು ಮಾಡಿದರು ॥ ೧೬ ॥ ಆದರೂ ದೈವಗತಿಯು ಹ್ಯಾಗೆ ತಪ್ಪುತ್ತದೆ ? ಕಡೆಗೆ ಅವರಿಗೆ ಒಬ್ಬ ಮಂದಮತಿಯಾದ ಮಗನು ಹುಟ್ಟಿದನು ಆಗ ಆ ತಾಯಿಯು ಇವನು ಅಪರೂಪವಾಗಿ ಬದುಕಿದನೆಂದು ಒಳ್ಳೆಪ್ರೀತಿ ಮತ್ತು ಆದರಗಳಿಂದ ರಕ್ಷಣೆ ಮಾಡುತ್ತಿದ್ದಳು. ॥ ೧೭ ॥ ಅವನು ಬೆಳೆಯುತ್ತ ದೊಡ್ಡವನಾದನು. ಅವನು ವೇದಾಭ್ಯಾಸ ಮಾಡಬೇಕೆಂದು ಆ ತಂದೆತಾಯಿಗಳು ಕುಲಾಚಾರ ಪ್ರಕಾರ ಅವನ ವ್ರತಬಂಧವನ್ನು ಮಾಡಿದರು. ॥ ೧೮ ॥ ವಿದ್ಯಾಭ್ಯಾಸಕ್ಕೆ ಆರಂಭವಾಯಿತು. ಆ ಬ್ರಾಹ್ಮಣನು ಎಷ್ಟು ಹೇಳಿ

ದರೂ ಮಂದಮತಿಯೂ, ಅಜ್ಞಾನಿಯೂ ಕಿವುಡನೂ ಆದ ಆ ಬಾಲಕನಿಗೆ ವಿದ್ಯೆಹತ್ತಲಿಲ್ಲ. ಆಗ ಅವನ ತಂದೆಯು ದುಃಖದಿಂದ— ನಾನು ಅನೇಕ ದೇವರ ಆರಾಧನೆಮಾಡಿ ಕಷ್ಟದಿಂದ ಈ ಮಗನನ್ನು ಪಡದೆನು. ಆದರೆ ಪ್ರಾಚೀನ ಕರ್ಮವು ನನ್ನನ್ನು ಬಿಡಲಿಲ್ಲ. ಇವನು ಮಂದಮತಿಯಾದನಲ್ಲಾ ? ಏನು ಮಾಡಲಿ ? ಎಂದು ಅನ್ನುತ್ತ ಚಿಂತಿಸುತ್ತಿದ್ದನು. ‖ ೧೯-೨೦ ‖ ಮತ್ತೆ ಅನೇಕ ರೀತಿಯಿಂದ ತಿಳಿಸಿಹೇಳಿ ಹೊಡೆದು ಬಡೆದು ಕಲಿಸಿದರೂ ಅವನಿಗೆ ಏನೂ ವಿದ್ಯೆ ಬರಲಿಲ್ಲ. ಮಗನಿಗೆ ಹೊಡೆಯುವದನ್ನು ನೋಡಿ ತಾಯಿಯು ಕನಿಕರದಿಂದ ದುಃಖಪಟ್ಟು ಪತಿಯನ್ನು ಕುರಿತು ವಿನಯದಿಂದ ‖ ೨೧ ‖ —ಸ್ವಾಮೀ ಮನೆಯಲ್ಲಿ ಮಕ್ಕಳಿಲ್ಲವೆಂದು ನಾನಾಪರಿ ಕಷ್ಟಬಟ್ಟು ಹಡೆದು ಇವನನ್ನು ರಕ್ಷಿಸಿದೆವು ‖ ೨೨ ‖ ಇವನು ಮಂದಬುದ್ಧಿಯುವನಾದ್ದರಿಂದ ಇವನಿಗೆ ವೇದ ಮೊದಲಾದ ವಿದ್ಯೆ ಬರುವದಿಲ್ಲ. ಸುಮ್ಮನೆ ಹೊಡೆದು ಬಡೆದು ಯಾಕೆ ಕಷ್ಟಪಡುತ್ತೀರಿ ? ಪ್ರಾಚೀನ ಕರ್ಮವು ಬಿಡುವದಿಲ್ಲ ಇವನು ಮೂರ್ಖನಾಗಿಯೇ ಹುಟ್ಟಿರುವನು ಹಾಗೇ ಇರಲಿ ‖ ೨೩ ‖ ಇನ್ನುಮೇಲೆ ನೀವು ಇವನನ್ನು ಹೀಗೆಯೇ ಹೊಡೆಯುತ್ತ ಹೋದರೆ ನಾನು ನಿಶ್ಚಯವಾಗಿ ಪ್ರಾಣಬಿಡುವೆನು ಎಂದು ವಿನಯದಿಂದ ಹೇಳಿದಳು. ‖ ೨೪ ‖ ಆಕೆಯ ಮಾತು ಕೇಳಿ ಆ ಬ್ರಾಹ್ಮಣನು ಅವತ್ತಿನಿಂದ ಆ ಹುಡುಗನ ಚಿಂತೆಯನ್ನು ಬಿಟ್ಟು ನಿಶ್ಚಿಂತೆಯಿಂದ ಕಾಲ ಕಳೆಯುತ್ತ ಆ ಗ್ರಾಮದಲ್ಲಿರುತ್ತಿದ್ದನು ‖ ೨೫ ‖ ಹೀಗೆ ಕೆಲಪ್ರಕಾಲ ಕಳೆದ ಮೇಲೆ ದೈವವಶಾತ್ ಅತಿ ದುಃಖದಾಯಕವಾದ ಒಂದು ಬೇನೆಯಿಂದ ಅವನು ಮರಣ ಹೊಂದಿದನು. ‖ ೨೬ ‖ ಆ ಮೇಲೆ ಅವನ ಪತ್ನಿ ಅಂಬಿಕೆಯು ಆ ಕುರವಪುರದಲ್ಲಿಯೇ ಇದ್ದು ಭಿಕ್ಷಬೇಡಿ ತಂದು ತನ್ನ ಮಗನೊಡನೆ ಉಪಜೀವಿಸುತ್ತಿದ್ದಳು. ‖ ೨೭ ‖ ಬರಬರುತ್ತ ಆ ಹುಡುಗನು ವಿವಾಹಕ್ಕೆ ಯೋಗ್ಯ ವಯಸ್ಸಿನವನಾದನು ಆಗ ಆ ಊರ ಜನರೆಲ್ಲರೂ ಅವನಿಗೆ ಮಂದಮತಿಯೆಂದು ನಿಂದಿಸುತ್ತಿದ್ದರು ‖ ೨೮ ‖ ಅವನಿಗೆ ಯಾರೂ ಹೆಣ್ಣು ಕೊಡಲಿಲ್ಲ. ಮತ್ತು ಆ ಎಲ್ಲ ಜನರು ಕೂಡಿ— ಎಲೈ ಮಂದ ಬುದ್ಧಿಯೇ, ನೀನು ಕಟ್ಟಿಗೆಯನ್ನಾದರೂ ನೀರನ್ನಾದರೂ ಹೊತ್ತು ಹೊಟ್ಟೆಯನ್ನು ತುಂಬಿಕೋ, ನಿನಗೆ ಇದೇ ವಿದ್ಯೆಯು ‖ ೨೯ ‖ ಎಲೈ ನೀನು ಕಲ್ಲಿನಂತೆ ವ್ಯರ್ಥವಾಗಿ ಯಾಕೆ ಹುಟ್ಟಿರುತ್ತೀ ?

ಮೂರ್ಖಾ, ಕುಲನಾಶಕಾ, ನೀನು ನಿನ್ನ ಕುಲಕ್ಕೆ ಕಲಂಕ ತಂದಿ ‖ ೩೦ ‖ ನಿನ್ನ ತಂದೆಯು ಸದಾಚಾರ ಸಂಪನ್ನನಾಗಿ ಧರ್ಮ–ವೇದ–ಶಾಸ್ತ್ರಗಳಲ್ಲಿ ನಿಪುಣನಾಗಿ ನಾಲ್ಕೂ ರಾಷ್ಟ್ರಗಳಲ್ಲಿ ಪ್ರಸಿದ್ಧನಾಗಿದ್ದನು. ಅವನ ಹೊಟ್ಟೆಯಲ್ಲಿ ನೀನು ಹುಟ್ಟಿ ತಂದೆಯ ಹೆಸರಿಗೆ ಒಟ್ಟಾ ತಂದು ಅವನಿಗ ಅಧೋಗತಿಯನ್ನುಂಟು ಮಾಡಿದಿ. ಮತ್ತು ಭಿಕ್ಷೆಯನ್ನು ಬೇಡಿ ಹೊಟ್ಟೆ ತುಂಬಿಕೊಳ್ಳುತ್ತೀ ನಿನಗೆ ನಾಚಿಕೆ ಬರುವದಿಲ್ಲವೇ ? ‖ ೩೧–೩೨ ‖ ನೀನು ಈ ಜಗತ್ತಿನಲ್ಲಿ ಪಶುವಿನಂತೆ ಹುಟ್ಟಿರುವಿ. ಈ ರೀತಿಯಿಂದ ಬದುಕಿದ್ದು ಫಲವೇನು ನದಿಯಲ್ಲಾದರೂ ಬಿದ್ದು ಸಾಯಿ, ಎಂದು ಆ ಊರವರೆಲ್ಲರೂ ನಿಂದಿಸುತ್ತಿದ್ದರು ‖ ೩೩ ‖

ಈ ಪ್ರಕಾರ ಆಡಿದ ಆ ಊರ ಜನರ ಮಾತು ಕೇಳಿ ಆ ಹುಡುಗನು ನಾನಾರೀತಿಯಾಗಿ ದುಃಖಿಸುತ್ತ ತಾಯಿಯ ಹತ್ತರ ಬಂದು— ಅವ್ವಾ, ಈ ಊರ ಜನರು ನನ್ನನ್ನು ಅನೇಕ ರೀತಿಯಾಗಿ ನಿಂದಿಸುವರು. ನಾನು ಆ ನಿಂದೆಯನ್ನು ಕೇಳಲಾರೆನು ಕಾರಣ ನಾನು ಪ್ರಾಣವನ್ನು ಬಿಡುವೆನು. ಈ ದೇಹವಿದ್ದು ಏನು ಉಪಯೋಗವಾಗುವದು ? ನಿನ್ನಿಂದ ನನ್ನನ್ನು ಸಂರಕ್ಷಿಸುವದಾಗಲಿಕ್ಕಿಲ್ಲ ಕಾರಣ ನಾನು ಅರಣ್ಯವನ್ನಾದರೂ ನೇರುವೆನು ಎಂದನು ‖ ೩೪–೩೫ ‖ ಮಗನ ಮಾತು ಕೇಳಿ ಆ ತಾಯಿಯು ಬಹು ಚಿಂತೆಬಟ್ಟು ದುಃಖಿಸುತ್ತ ವಿಲಾಪ ಮಾಡುತ್ತ ‖ ೩೬ ‖ ತನ್ನ ಮಗನೊಡನೆ ನದಿಯಲ್ಲಿ ಬಿದ್ದು ಸಾಯಬೇಕೆಂದು ಮನಸ್ಸಿನಲ್ಲಿ ಮಾಡಿಕೊಂಡು ತೀವ್ರವಾಗಿ ಆ ನದಿಯ ಪ್ರವಾಹದೊಳಗೆ ಹೋದರು ಅಲ್ಲಿ ನೋಡಲು ಜಗದೋದ್ಧಾರಕರಾದ ಶ್ರೀಪಾದ ಯೋಗಿಗಳು ಸ್ನಾನ ಮಾಡುತ್ತಿದ್ದರು ‖ ೩೭ ‖ ಆಗ ಆ ತಾಯಿ ಮತ್ತು ಮಗನು ಶ್ರೀ ಗುರುಗಳ ಪಾದಕ್ಕೆ ನಮಸ್ಕಾರ ಮಾಡಿದರು ಆ ಮೇಲೆ ಆ ಸ್ತ್ರೀಯು ಕೈಮುಗಿದು ವಿನಯದಿಂದ— ಸ್ವಾಮೀ, ಮಹಾರಾಜ, ನಾವು ಈ ನದಿಯಲ್ಲಿ ಬಿದ್ದು ಪ್ರಾಣಬಿಡಬೇಕೆಂದು ಮಾಡಿರುತ್ತೇವೆ. ‖ ೩೮ ‖ ಕೃಪಾಸಿಂಧುವೇ ನಮಗೆ ಆತ್ಮಹತ್ಯಾ ದೋಷವು ಬರದಂತೆ ಮತ್ತು ನಮಗೆ ಸದ್ಗತಿಯಾಗುವಂತೆ, ಈ ನದಿಯಲ್ಲಿ ಪ್ರಾಣಕೊಡಲಿಕ್ಕೆ ನಮಗೆ ಅಪ್ಪಣೆ ಕೊಡಬೇಕೆಂದು ವಿನಂತೀ ಮಾಡಿಕೊಂಡಳು. ‖ ೩೯ ‖ ಆಕೆಯ ಮಾತು ಕೇಳಿ ಕೃಪಾವಂತರಾದ ಶ್ರೀಪಾದರು— ಎಲಾ

ಸ್ತ್ರೀಯಳೇ, ನೀವು ಈಗ ಯಾವ ಸಂಕಟ ನಿಮಿತ್ತದಿಂದ ಪ್ರಾಣ ಬಿಡಬೇಕೆಂದು ಮಾಡಿರುವಿರಿ ? ಎಂದು ಕೇಳಿದರು. ॥ ೪೦ ॥ ಆಗ ಆ ಸ್ತ್ರೀಯು— ಭಕ್ತವತ್ಸಲಾ ಸ್ವಾಮೀ, ನನ್ನ ಎಲ್ಲ ದುಃಖವನ್ನು ತಮಗೆ ಹೇಳುತ್ತೇನೆ, ತಾವು ನನ್ನನ್ನೂ ನನ್ನ ಮಗನನ್ನೂ ಉದ್ಧರಿಸಬೇಕು. ॥ ೪೧ ॥ ಸ್ವಾಮೀ, ಮನೆಯಲ್ಲಿ ಮಕ್ಕಳಿಲ್ಲದಿದ್ದರೆ ಬಹಳ ಕಷ್ಟವಾಗುವದು ನಾನು ಅನೇಕ ತೀರ್ಥಯಾತ್ರೆ ವ್ರತ, ಪೂಜಾದಿಗಳನ್ನು ಮಾಡಿ, ಸಕಲ ದೇವತೆಗಳನ್ನು ಆರಾಧಿಸಿದೆನು. ॥ ೪೨ ॥ ನಾನು ಮಾಡಿದ ವ್ರತ ಉಪವಾಸಾದಿಗಳನ್ನು ಎಷ್ಟು ಹೇಳಲಿ ? ಅಪರಿಮಿತವಾಗಿ ಮಾಡಿದೆನು. ಹುಟ್ಟಿದ ಮಕ್ಕಳೆಲ್ಲವೂ ಕೂಡಲೆ ಸತ್ತುಹೋದವು ಕಡೆಗೆ ಮಂದಮತಿಯಾದ ಈ ಒಬ್ಬ ಮಗನು ಹುಟ್ಟಿದನು. ಇವನು ದಡ್ಡನೆಂದು ಈ ಊರ ಯಾವತ್ತೂ ಜನರು ನಿಂದಿಸುವರು ॥ ೪೩ ॥ ಸ್ವಾಮೀ, ನನ್ನ ಪತಿಯು ವೇದಶಾಸ್ತ್ರ ಸಂಪನ್ನನಾಗಿದ್ದನು ಅಂಥವರ ಹೊಟ್ಟೆಯಿಂದ ಹೀನ–ಮಂದಮತಿ–ದುರಾತ್ಮನಾದ ಈ ಮಗನು ಹುಟ್ಟಿದನು. ॥ ೪೪ ॥ ಯಾರಿಗೂ ಇಂಥ ಮಗನು ಹುಟ್ಟಬಾರದು. ಆದ್ದರಿಂದ ಶ್ರೀ ಗುರು ಶ್ರೀಪಾದ ಯತಿಗಳೇ, ಈಗ ನಾನು ತಮ್ಮನ್ನು ಮರೆಹೊಕ್ಕಿರುವೆನು. ತಾವು ನನ್ನಮೇಲೆ ಕೃಪಾಮಾಡಿ ನನ್ನನ್ನು ಸುದೈವಿಯನ್ನಾಗಿ ಮಾಡಿ ಜನ್ಮೋಜನ್ಮದಲ್ಲಿ ನನಗೆ ಇಂಥ ಮಂದಮತಿ ಮಗನಾಗದಂತೆ ಏನಾದರೂ ಉಪಾಯವನ್ನು ಹೇಳಬೇಕು ॥ ೪೫ ॥ ಸ್ವಾಮೀ ತಾವು ಕೃಪಾಸಾಗರರೂ ಅನಾಥರ ದೈನ್ಯ ಹರಣಮಾಡುವಂಥವರೂ ಎಂದು ತಮ್ಮ ಚರಣಗಳನ್ನು ಹಿಡಿದಿರುವೆನು ಸ್ವಾಮೀ, ಕೃಪಾಸಿಂಧುವೇ ಶರಣಾಗತರನ್ನು ರಕ್ಷಣ ಮಾಡಲಿಕ್ಕೆಂದೇ ಈ ದಿವಸ ತಾವು ನಮಗೆ ದರ್ಶನ ಕೊಟ್ಟಿರಿ ॥ ೪೬ ॥ ಸ್ವಾಮೀ, ನಾನು ಈ ಲೋಕದಲ್ಲಿ ಹುಟ್ಟಿ ನಾನಾರೀತಿಯಾಗಿ ಕಷ್ಟಬಟ್ಟು ಸ್ವಲ್ಪಾದರೂ ಸುಖವನ್ನು ಕಾಣಲಿಲ್ಲ ಈ ಮೊದಲು ಹುಟ್ಟಿದ ಮಕ್ಕಳು ಒಂದೂ ಬದುಕಲಿಲ್ಲ. ॥ ೪೭ ॥ ಆಡಿನ ಕೊರಳೊಳಗಿನ ಮೊಲೆಯಂತೆ ಈ ಒಬ್ಬ ಮಗನು ಬದುಕಿರುವನು. ಇವನು ಬದುಕಿದ್ದೂ ವ್ಯರ್ಥವಾದನು. ಆದ್ದರಿಂದ ಗುರುಗಳಾದ ತಮಗೆ ವಿನಂತೀ ಮಾಡಿಕೊಳ್ಳುವದೇನಂದರೆ ॥ ೪೮ ॥ ಸ್ವಾಮೀ, ನನ್ನ ಮನಸ್ಸಿನಲ್ಲಿ— ಈಗ ತಾವು ಮೂರು ಲೋಕದಲ್ಲಿ ಹ್ಯಾಗೆ ಪೂಜ್ಯರಾಗಿರುವಿರೋ ಹಾಗೆ ನನಗೆ ಮುಂದಿನ

ಜನ್ಮದಲ್ಲಾದರೂ ತಮ್ಮಂತೆ ಮೂರು ಲೋಕದಲ್ಲಿ ಪೂಜೆಯನ್ನು ಹೊಂದುವಂಥ ಮತ್ತು ಸಕಲ ಜನರೂ ಅವನನ್ನು ವಂದಿಸುವಂಥ ಮಗನಾಗಬೇಕೆಂಬ ಅಪೇಕ್ಷೆಯಿದೆ. ಈಗ ತಾವು ಕೃಪಾಮಾಡಿ ತಮ್ಮಂಥ ಪುತ್ರನು ಆಗಬೇಕಾದರೆ ಏನು ಉಪಾಯ ಮಾಡಬೇಕೆಂಬುದನ್ನು ನನಗೆ ಹೇಳಿರಿ ಎಂದು ಅವರ ಪಾದಕ್ಕೆ ನಮಸ್ಕಾರ ಮಾಡಿ || ೪೯–೫೦ || ಮತ್ತೆ— ಸ್ವಾಮೀ, ಆ ಮಗನಿಂದ ನನ್ನ ಉದ್ಧಾರ ಆಗಬೇಕು ನನಗೆ ಪುನರ್ಜನ್ಮವಾಗಬಾರದು ಮತ್ತು ನನ್ನ ಯಾವತ್ತು ಪಿತೃಗಳಿಗೆ ಸ್ವರ್ಗಪ್ರಾಪ್ತಿಯಾಗಬೇಕು. ನಾನು ಆ ನನ್ನ ಮಗನು ಸಣ್ಣವನಿದ್ದಾಗ್ಗೆ ಬ್ರಹ್ಮಜ್ಞಾನಿ ಯಾದದ್ದನ್ನೂ ಸಮಸ್ತ ಜನರಿಂದ ಪೂಜೆ ಹೊಂದುವದನ್ನೂ ನಾನು ನೋಡಬೇಕೆಂಬ ಇಚ್ಛೆಯು ಬಹಳ ಅದೆ. ಆದರಂತೆ ತಾವು ನನಗೆ ವರವನ್ನು ಕೊಡಬೇಕು ಎಂದು ಬೇಡಿಕೊಂಡಳು || ೫೧–೫೨ || ಆಗ ಶ್ರೀಪಾದ ಗುರುಗಳು ಆಕೆಯ ಭಕ್ತಿಯ ಮಾತನ್ನು ಕೇಳಿ ಕೃಪೆಯಿಂದ— ಅಮ್ಮಾ, ನೀನು ಶ್ರೀಶಂಕರನನ್ನು ಆರಾಧಿಸು, ಶ್ರೀಹರಿಯೇ ನಿನಗೆ ಪುತ್ರನಾಗುವನು. || ೫೩ || ಪೂರ್ವದಲ್ಲಿ ಶ್ರೀಹರಿಯು ಒಂದು ಕಾರಣದಿಂದ ಗೌಳಿಗರ ಮನೆಯಲ್ಲಿ ಶ್ರೀಕೃಷ್ಣನಾಗಿ ಅವತರಿಸಲಿಲ್ಲವೇ? ಆ ಗೌಳಿಣಿಯು ಶನಿಪ್ರದೋಷದಲ್ಲಿ ಈಶ್ವರನನ್ನು ಆರಾಧಿಸಿ ದಳು. || ೫೪ || ಆದರಂತೆ ನೀನೂ ಈಶ್ವರನನ್ನು ಆರಾಧಿಸು ಅಂದರೆ ನೀನೂ ನಿಶ್ಚಯವಾಗಿ ಅಂಥ ಮಗನನ್ನೇ ಪಡೆಯುವೆ. ಒಳ್ಳೇ ರೀತಿಯಿಂದ ನಿನ್ನ ಮನೋರಥವು ಪೂರ್ಣವಾಗುವದು. ನೀನು ಸರ್ವಸಿದ್ಧಿಯನ್ನು ಪಡೆ ಯುವಿ ಎಂದು ಹೇಳಿದರು || ೫೫ || ಆಗ ಆ ವಿಪ್ರ ಸ್ತ್ರೀಯು— ಸ್ವಾಮೀ, ಆ ಗೌಳಿಣಿಯು ಯಾವ ವ್ರತವನ್ನು ಮಾಡಿದಳು? ಈಶ್ವರನನ್ನು ಹ್ಯಾಗೆ ಪೂಜಿಸಿದಳು? ಎಂಬದನ್ನು ನನಗೆ ಹೇಳಿರಿ. || ೫೬ || ಆದರಂತೆ ನಾನೂ ಆ ವ್ರತವನ್ನು ಮಾಡುವೆನು ಎಂದು ಸದ್ಗುರು ಚರಣಕ್ಕೆ ನಮಿಸಿದಳು. ಆಗ ಕೃಪಾಮೂರ್ತಿ ಯಾದ ಶ್ರೀಪಾದರು— ಎಲೌ ಸ್ತ್ರೀಯಳೇ, ನೀನು ಶನಿವಾರ ದಿವಸ ತ್ರಯೋದಶಿ ಬಂದಾಗ ಪ್ರದೋಷ ಕಾಲದಲ್ಲಿ ಭಕ್ತಿಯಿಂದ ವಿಧಿಪ್ರಕಾರ ಶ್ರೀಶಂಕರನನ್ನು ಪೂಜಿಸು. || ೫೭–೫೮ || ಆ ಗೌಳಿಣಿಯು ಪೂಜಿಸಿದ ಮಹಿಮೆಯು ಸ್ಕಂದ ಪುರಾಣದಲ್ಲಿ ವಿಸ್ತಾರವಾಗಿ ಹೇಳಿದೆ. ಆ ಕಥೆಯನ್ನೇ ನಾನು ನಿನಗೆ ವಿಸ್ತಾರವಾಗಿ

ಹೇಳುವೆನು ಕೇಳು ಎಂದರು. ॥ ೫೯ ॥ ಅವರ ಮಾತನ್ನು ಕೇಳಿ ಆ ಸ್ತ್ರೀಯು ಸಂತೋಷಹೊಂದಿ ಪುನಃ ಶ್ರೀಗುರುಗಳಿಗೆ ನಮಸ್ಕಾರ ಮಾಡಿ ॥ ೬೦ ॥ ಸ್ವಾಮೀ, ನೀವು ಆ ಗೌಳಿಣಿಯು ಶನಿಪ್ರದೋಷ ವ್ರತವನ್ನು ಮಾಡಿ ಶ್ರೀಕೃಷ್ಣನಂಥ ಮಗನನ್ನು ಪಡೆದಳೆಂಬ ಚಮತ್ಕಾರವಾದ ಕಥೆಯನ್ನು ಹೇಳಿದಿರಿ. ॥ ೬೧ ॥ ಆದರಂತೆ ನಾನೂ ಪೂಜಾಮಾಡಿ ತಮ್ಮ ಕೃಪೆಯಿಂದ ಅಂಥ ಪುತ್ರನನ್ನು ಪಡೆಯುವೆನು ಆದರೆ ಆ ಕಥೆಯನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದು ಬೇಡಿಕೊಂಡಳು ॥ ೬೨ ॥ ಆಗ ಶ್ರೀಗುರುಗಳು— ಎಲೌ ಸ್ತ್ರೀಯೇ ಹೇಳುತ್ತೇನೆ ಕೇಳು ಪೂರ್ವದಲ್ಲಿ ಉಜ್ಜಯಿನಿ ಎಂಬ ಪಟ್ಟಣದಲ್ಲಿ ಒಂದು ವಿಚಿತ್ರ ಸಂಗತಿಯು ನಡೆಯಿತು. ॥ ೬೩ ॥ ಆ ನಗರದಲ್ಲಿ ಚಂದ್ರಸೇನನೆಂಬ ಒಬ್ಬ ಧಾರ್ಮಿಕ ರಾಜನಿದ್ದನು ಅವನಿಗೆ ಮಣಿಭದ್ರನೆಂಬವನೊಬ್ಬ ಒಳ್ಳೇ ಜೀವದ ಗೆಳೆಯನಿದ್ದನು ॥ ೬೪ ॥ ಅವರಿಬ್ಬರು ನಿತ್ಯವೂ ಹಾಗು ಶನಿಪ್ರದೋಷದಲ್ಲಿಯೂ ಶ್ರೀಶಂಕರನನ್ನು ನಾನಾರೀತಿಯಿಂದ ಅಪರಂಪಾರವಾಗಿ ಪೂಜಿಸುತ್ತಿದ್ದರು ಆ ಭೋಳಾಶಂಕರನು ಅವರ ಭಕ್ತಿಗೆ ಮೆಚ್ಚಿ ಕೋಟಿ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳ ಮತ್ತು ಒಳ್ಳೇ ಶೋಭಾಯಮಾನವಾದ ಚಿಂತಾಮಣಿ ಎಂಬ ಒಂದು ರತ್ನವನ್ನು ಅವರಿಗೆ ಕೊಟ್ಟನು. ಆ ಮಣಿಭದ್ರನು ಆ ರತ್ನವನ್ನು ಸಂತೋಷದಿಂದ ತನ್ನ ಕೊರಳಲ್ಲಿ ಹಾಕಿಕೊಳ್ಳುತ್ತಿದ್ದನು. ॥ ೬೫-೬೬ ॥ ಆ ರತ್ನಕಾಂತಿಯು ಕಲ್ಲು ಮುಂತಾದ ಯಾವ ಪದಾರ್ಥಗಳಮೇಲೆ ಬಿದ್ದರೂ ಅವು ಸುವರ್ಣವಾಗುತ್ತಿದ್ದವು. ॥ ೬೭ ॥ ಮತ್ತು ಅದು ಯಾರ ಹತ್ತರ ಇರುತ್ತದೋ ಅವರ ಮನಸ್ಸಿನ ಇಚ್ಛೆಗಳು ತೀವ್ರವಾಗಿ ಪೂರ್ಣವಾಗುತ್ತಿದ್ದವು ಆದ್ದರಿಂದ ಆ ರತ್ನ ಪ್ರಭಾವವು ಲೋಕದಲ್ಲಿ ಪ್ರಸಿದ್ಧಿಯಾಯಿತು. ಆದರಿಂದ ಎಲ್ಲ ರಾಜರೂ ಅದನ್ನು ಅಪೇಕ್ಷಿಸುತ್ತಿದ್ದರು ॥ ೬೮ ॥ ಕೆಲವು ರಾಜರು ಆ ರತ್ನವನ್ನು ಸ್ವಲ್ಪ ನೋಡಿ ಕೊಡುತ್ತೇವೆಂದು ಸಮಾಧಾನದಿಂದ ಕೇಳುತ್ತಿದ್ದರು ಕೆಲವರು ಕೊಡಲಿಕ್ಕೇಬೇಕೆಂದು ಬಲಾತ್ಕಾರದಿಂದ ಅದನ್ನು ಬೇಡುತ್ತಿದ್ದರು. ॥ ೬೯ ॥ ಕೆಲವರು ಆ ಮಣಿಯನ್ನು ಕ್ರಯಕ್ಕೆ ಕೊಡೆಂದು ಕೇಳುತ್ತಿದ್ದರು. ಕೆಲವರು ಆ ಮಣಿಯನ್ನು ಸುಮ್ಮನೆ ಕೊಡದಿದ್ದರೆ ನಮ್ಮ ಸಂಗಡ ಯುದ್ಧಕ್ಕೆ ಬಾ ಎಂದು ಕರೆಯುತ್ತಿದ್ದರು. ॥ ೭೦ ॥

ಆದರೂ ಆ ರಾಜನು ಅದನ್ನು ಯಾರಿಗೂ ಕೊಡಲಿಲ್ಲ. ಆಗ ಯಾವತ್ತು ರಾಜರು ಕೂಡಿ ಅಸಂಖ್ಯ ಸೈನ್ಯದೊಡನೆ ಬಂದು ಆ ಉಜ್ಜನಿಯ ನಗರವನ್ನು ಮುತ್ತಿದರು. ॥ ೭೧ ॥ ಆದಿವಸ ಶನಿ ತ್ರಯೋದಶಿ ಇತ್ತು. ಆದ್ದರಿಂದ ಆ ರಾಜನು ಮಣಿಭದ್ರನೊಡನೆ ಶಿವಪೂಜೆಗಾಗಿ ಕುಳಿತು ಒಳ್ಳೇ ಭಕ್ತಿಯಿಂದಲೂ ಏಕಚಿತ್ತದಿಂದಲೂ ನಿಃಶಂಕ ಮನಸ್ಸಿನಿಂದಲೂ ಶ್ರೀ ಶಂಕರನನ್ನು ಪೂಜಿಸುತ್ತಿದ್ದನು ॥ ೭೨ ॥ ಈ ಪ್ರಕಾರ ಆ ರಾಜನು ಒಳ್ಳೇ ಸಂತೋಷದಿಂದ ಮಹಾಬಳೇಶ್ವರ ಲಿಂಗವನ್ನು ಪೂಜಿಸುತ್ತಿದ್ದನು ಆಗ ಆ ಊರಲ್ಲಿಯ ಒಬ್ಬ ಗವಳಿಗರ ಹುಡುಗನು ತನ್ನ ಗೆಳೆಯರನ್ನು ಕೂಡಿಕೊಂಡು ಆ ಶಿವಾಲಯಕ್ಕೆ ಬಂದು ॥ ೭೩ ॥ ಆ ರಾಜನು ಮಾಡುವ ಆ ಶಿವಪೂಜೆಯನ್ನು ನೋಡಿ ತನ್ನ ಗೆಳೆಯರನ್ನು ಕುರಿತು— ಎಲೈ ನಾವೆಲ್ಲರೂ ಹೀಗೆಯೇ ಲಿಂಗವನ್ನು ಮಾಡಿಕೊಂಡು ಪೂಜಾಮಾಡಿ ಆಡೋಣ ನಡೆಯಿರಿ ॥ ೭೪ ॥ ಎಂದು ವಿನೋದದಿಂದ ಹೊರಟು ತಮ್ಮ ಮನೆಯ ಹತ್ತರ ಕಲ್ಲಿನಿಂದ ಒಂದು ಗುಡಿಯನ್ನು ಕಟ್ಟಿ ॥ ೭೫ ॥ ಕಲ್ಲಿನಿಂದಲೇ ಒಂದು ಲಿಂಗವನ್ನು ಮಾಡಿ ಅದರಲ್ಲಿಟ್ಟು ಪೂಜೆಯ ಸಲುವಾಗಿ ನಾನಾಪ್ರಕಾರದ ಪತ್ರಿ–ಪುಷ್ಪಗಳನ್ನು ತಂದು ॥ ೭೬ ॥ ಷೋಡಶೋಪಚಾರಗಳಿಂದ ಆ ಲಿಂಗವನ್ನು ಉತ್ತಮವಾಗಿ ಪೂಜಿಸಿ, ಆ ಹೂಗಳನ್ನು ಏರಿಸಿ, ನೀರನ್ನೇ ನೈವೇದ್ಯವನ್ನು ಮಾಡಿ ಭಜನೆ ಮಾಡುತ್ತ ಜನರಿಗೆ ಕೌತುಕವಾಗುವಂತೆ ವಿನೋದದಿಂದ ಆಡುತ್ತಿದ್ದರು. ॥ ೭೭ ॥ ಆಮೇಲೆ ರಾತ್ರಿಯಾಗಲು ಆ ಹುಡುಗರ ತಾಯಂದಿರು ಅಲ್ಲಿಗೆ ಬಂದು ತಮ್ಮ ತಮ್ಮ ಮಕ್ಕಳನ್ನೂ ಊಟಕ್ಕೆ ಕರೆದರು. ಆಗ ಆ ಒಬ್ಬ ಹುಡುಗನ ಹೊರತು ಉಳಿದ ಹುಡುಗರೆಲ್ಲರೂ ತಮ್ಮ ತಮ್ಮ ತಾಯಂದಿರೊಡನೆ ಮನೆಗೆ ಹೋದರು ॥ ೭೮ ॥ ಆ ಹುಡುಗನು ಮಾತ್ರ ಲಿಂಗವನ್ನು ಬಿಟ್ಟು ಬರಲಿಲ್ಲ. ಆಗ ಅವನ ತಾಯಿಯು ಅವನ್ನು ಕಂಡು ಅವನನ್ನು ಹೊಡೆದು ॥ ೭೯ ॥— ಎಲೈ ಮಗನೇ ಈಗ ರಾತ್ರಿಯಾಗಿರುವದು ಮನೆಗೆ ಊಟಕ್ಕೆ ನಡೆ ಎಂದು ಹೇಳಿದಳು ಏನು ಮಾಡಿದರೂ ಆ ಹುಡುಗನು ಆ ಲಿಂಗಪೂಜೆಯನ್ನು ಬಿಟ್ಟು ಮನೆಗೆ ಹೋಗಲಿಲ್ಲ. ॥ ೮೦ ॥ ಆಗ ಆ ಗೌಳಿಣಿಯು ಸಿಟ್ಟಿಗೆದ್ದು, ಅವನು ಪೂಜೆ ಮಾಡಿ ಆಟವಾಡುವ ಆ ಲಿಂಗವನ್ನು ಕಿತ್ತಿ ಅಂಗಳದಲ್ಲಿ ದೂರ ಒಗೆದು

ತನ್ನ ಮನೆಗೆ ಹೋದಳು. || ೮೧ || ಆಗ ಆ ಹುಡುಗನು ತನ್ನ ತಾಯಿಯು ತನ್ನ ಪೂಜೆಯನ್ನು ಕೆಡಿಸಿ ಲಿಂಗವನ್ನು ಕಿತ್ತಿ ಒಗೆದಳೆಂದು ಅನೇಕ ರೀತಿಯಾಗಿ ಪ್ರಳಾಪಿಸುತ್ತ ಆ ಲಿಂಗದ ಸಮೀಪಕ್ಕೆ ಹೋಗಿ ತನ್ನ ಪ್ರಾಣವನ್ನು ಬಿಡಲಿಕ್ಕೆ ಯತ್ನಿಸಿ ಮೂರ್ಛೆ ಹೊಂದಿ ಭೂಮಿಯಮೇಲೆ ಬಿದ್ದನು ಆಗ ಶೂಲಪಾಣಿಯಾದ ಶ್ರೀ ಶಂಕರನು ಅವನ ಭಕ್ತಿಗೆ ಮೆಚ್ಚಿ || ೮೨ || ಆ ಸ್ಥಳದಲ್ಲಿ ಒಂದು ರತ್ನಖಚಿತವಾದ ಶಿವಾಲಯವನ್ನು ಅದರಲ್ಲಿ ಸೂರ್ಯನಂತೆ ಪ್ರಕಾಶಮಾನವಾದ ಒಂದು ರತ್ನಲಿಂಗವನ್ನು ನಿರ್ಮಿಸಿದನು. ಆಗ ಆ ಬಾಲಕನು ಎಚ್ಚರಾಗಿ ಆ ರತ್ನಖಚಿತ ಲಿಂಗ ಮತ್ತು ಗುಡಿಗಳನ್ನು ಕಂಡನು. || ೮೩ || ಆಗ ಆ ಗೌರೀರಮಣನಾದ ಶ್ರೀ ಶಂಕರನು ನಿಜರೂಪವನ್ನು ಧರಿಸಿ ಆ ಬಾಲಕನ ಕೈ ಹಿಡಿದು ಎಬ್ಬಿಸಿ-- ಎಲೈ ಬಾಲಕನೇ, ನಾನು ನಿನಗೆ ಪ್ರಸನ್ನನಾಗಿ ಬಂದಿರುವೆನು. ನಿನಗೆ ಏನು ವರ ಬೇಕು ಬೇಡು ಅದನ್ನು ಕೊಡುವೆನು ಎಂದನು || ೮೪ || ಆಗ ಆ ಬಾಲಕನು ಶ್ರೀ ಶಂಕರನಿಗೆ ವಂದಿಸಿ— ದೇವಾ, ನನ್ನ ತಾಯಿಯು ನಿನ್ನ ಪ್ರದೋಷ ಪೂಜೆಯನ್ನು ಕೆಡಿಸಿದಳೆಂದು ಮಾತ್ರ ಆಕೆಯ ಮೇಲೆ ಸಿಟ್ಟಾಗಬೇಡ. ಆಕೆಯ ಅಪರಾಧವನ್ನು ಕ್ಷಮಿಸಬೇಕು ಎಂದನು. || ೮೫ || ಆಗ ಆ ಭೋಳಾಚಕ್ರವರ್ತಿಯಾದ ಈಶ್ವರನು ಪ್ರೀತಿಯಿಂದ-- ಎಲೈ ಬಾಲಕನೇ ಈ ಪ್ರದೋಷ ಪೂಜೆಯನ್ನು ನೋಡಿದಂಥ ನಿನ್ನ ತಾಯಿಯು ಈಗ ಗೌಳಿಣಿ ಇದ್ದು ಮುಂದೆ ಶ್ರೀ ಕೃಷ್ಣದೇವನ ತಾಯಿ ಯಶೋದಾ ಆಗುವಳು. || ೮೬ || ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಮಗನೇ ನಿಶ್ಚಯವಾಗಿ ಪ್ರಖ್ಯಾತವಾದ ವಿಷ್ಣುವಿನ ಅವತಾರವು ಎಲೈ ಬಾಲಕನೇ ನೀನು ಮಾಡಿದಂತೆ ಶಿವಪೂಜೆಯನ್ನು ಈ ಮೊದಲು ಯಾರೂ ಮಾಡಿಲ್ಲ. ನಿನ್ನ ತಾಯಿಯು ನಿನ್ನನ್ನು ಪೋಷಿಸುವಳು ಚಿಂತಿಸಬೇಡ. || ೮೮ || ನೀನು ಮನಸ್ಸಿನಲ್ಲಿ ಏನೇನು ಇಚ್ಛಿಸುವಿಯೋ ಅದೆಲ್ಲವನ್ನು ಹೊಂದು, ನಿನ್ನ ವಂಶದವರೆಲ್ಲರೂ ಪುತ್ರ-ಪೌತ್ರಾದಿಗಳಿಂದ ಕೂಡಿಕೊಂಡು ಅಖಿಲ ಸೌಖ್ಯವನ್ನು ಹೊಂದುವರು. || ೮೯ || ಎಂದು ಗಿರಿಜಾರಮಣನು ಅವನಿಗೆ ವರವನ್ನು ಕೊಟ್ಟು ಅದೇ ಲಿಂಗದಲ್ಲಿ ಐಕ್ಯ ಹೊಂದಿದನು. ಎಲೌ ಸ್ತ್ರೀಯೇ ಈ ಪ್ರಕಾರವಾಗಿ ಆ ರತ್ನಖಚಿತ ಲಿಂಗವು ಆ ಗೌಳಿಗರ ಮನೆಯಲ್ಲಿಯೇ ಉಳಿಯಿತು. || ೯೦ ||

ಕೋಟಿ ಸೂರ್ಯಪ್ರಕಾಶಮಾನವಾದ ಅತಿ ಉತ್ತಮವಾದ ಆ ಶಿವಾಲಯವನ್ನು ನೋಡಿ ಆ ಊರ ಜನರು ಆಶ್ಚರ್ಯಬಟ್ಟು-- ಇದೇನು ಮಹಾ ಪ್ರಕಾಶವು ? ಈಗಲೇ ಸೂರ್ಯೋದಯವೇ ಆಯಿತೋ ? ಏನು ಎಂದೆನ್ನುತ್ತಿದ್ದರು. ॥ ೯೧ ॥ ಆಗ ಆ ನಗರಕ್ಕೆ ಮುತ್ತಿಗೆ ಹಾಕಿದಂಥ ಪರರಾಜರೂ ಸಹ ಈ ಕೌತುಕವನ್ನು ಕಂಡು ವಿಸ್ಮಯಹೊಂದಿ ಮನಸ್ಸಿನಲ್ಲಿಯ ದ್ವೇಷವನ್ನು ಬಿಟ್ಟು— ಸಹಜರೀತಿಯಾಗಿ ಈ ರಾಜನನ್ನು ಭೆಟ್ಟಿಯಾಗಬೇಕು ॥ ೯೨ ॥ ಈ ಪವಿತ್ರವಾದ ಈ ನಗರದಲ್ಲಿ ಸೂರ್ಯೋದಯವಾದಂತೆ ಪ್ರಕಾಶವನ್ನು ಕಂಡೆವು. ಈ ರಾಜನು ಬಹು ಪುಣ್ಯವಂತನಿರುತ್ತಾನೆ. ನಾವು ಇಂಥವನ ವಿರೋಧವನ್ನು ಮಾಡಬಾರದು ಎಂದು ಅನ್ನುತ್ತ ॥ ೯೩ ॥ ತಮ್ಮಲ್ಲಿಯ ಒಬ್ಬ ಸೇವಕನನ್ನು ಕರೆದು— ಎಲೈ ಸೇವಕನೇ, ನೀನು ಈ ಊರ ರಾಜನ ಹತ್ತರ ಹೋಗಿ, ಎಲ್ಲ ರಾಜರು ನಿನ್ನ ಭೆಟ್ಟಿಗೆ ಬರಬೇಕೆಂದು ಮಾಡಿರುತ್ತಾರೆಂದು ಹೇಳು ಎಂದು ಅವನನ್ನು ಕಳಿಸಿದರು ಆದರಂತೆ ಆ ದೂತನು ಊರಲ್ಲಿ ಹೋಗಿ ಆ ಚಂದ್ರಸೇನ ರಾಜನಿಗೆ ಹೇಳಲಾಗಿ ಅವನ ಮಾತು ಕೇಳಿ ಆ ರಾಜನು— ಎಲೈ ದೂತನೇ, ಎಲ್ಲ ರಾಜರೂ ಊರಲ್ಲಿ ಬರಲಿಕ್ಕೆ ಏನೂ ಅಡ್ಡಿಯಿಲ್ಲವೆಂದು ಹೇಳಿಕಳಿಸಿದನು. ॥ ೯೪ ॥ ಆಮೇಲೆ ಆ ಚಂದ್ರಸೇನ ರಾಜನು ತನ್ನ ಸ್ನೇಹಿತನಾದ ಮಣಿಭದ್ರ ರಾಯನೊಡನೆ ಪೂಜೆಯನ್ನು ಮುಗಿಸಿಕೊಂಡು ಗುಡಿಯ ಹೊರಗೆ ಬಂದು ಪ್ರೀತಿಯಿಂದ-- ಏನಿದು ? ನನ್ನ ಈ ನಗರದಲ್ಲಿ ಈ ರಾತ್ರಿಯಲ್ಲಿ ಸೂರ್ಯೋದಯವಾದಂತೆ ಪ್ರಕಾಶ ಬಿದ್ದಿರುವ ಕಾರಣವೇನು ? ಎಂದನು. ॥ ೯೫ ॥ ಅಷ್ಟರಲ್ಲಿ ಆ ರಾಜರೆಲ್ಲರು ಆ ಕೌತುಕವನ್ನು ನೋಡಲಿಕ್ಕೆ ಅದೇ ಸ್ಥಳಕ್ಕೆ ಬಂದರು. ಆಗ ಅಲ್ಲಿ ಅನುಪಮವಾದ ರತ್ನಖಚಿತವಾದ ಹಾಗು ವಿಚಿತ್ರವಾದ ಶಿವಾಲಯವನ್ನೂ ಅದರಲ್ಲಿರುವ ಪ್ರಕಾಶಮಾನವಾದ ರತ್ನಖಚಿತ ಲಿಂಗವನ್ನೂ ಆ ಬಾಲಕನ ರತ್ನಮಯ ವಿರಾಜಮಾನವಾದ ಮನೆಯನ್ನೂ ಕಂಡು ಅವನನ್ನು ಕುರಿತು ಎಲ್ಲ ಸಂಗತಿಯನ್ನು ಕೇಳಿದರು. ॥ ೯೬-೯೭ ॥ ಆಗ ಅವನು ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಹೇಳಿದನು. ಆಗ ಆ ರಾಜರೆಲ್ಲರೂ— ಎಲೈ ಬಾಲಕನೇ ಗೌಳಿಗರಲ್ಲಿ ನೀನೇ ರಾಜನು ಎಂದು ಹೇಳಿ ಅವನಿಗೆ ನಾನಾದೇಶದ ಸಂಪತ್ತುಗಳೆಲ್ಲ

ವನ್ನೂ ಕೊಟ್ಟು, ಎಲ್ಲರೂ ಹೊರಟುಹೋದರು. || ೯೮ || ಎಲೌ ಸ್ತ್ರೀಯಳೇ ಈ ಪ್ರಕಾರ ಆ ಚಂದ್ರಸೇನ ರಾಜನು ಶನಿಪ್ರದೋಷ ಪೂಜೆಯ ಫಲದಿಂದ ನಿರ್ಮಲ ಮನಸ್ಸಿನಿಂದಲೇ ಇದ್ದನು ಅಂದಮೇಲೆ ಅವನಿಗೆ ಹಗೆಗಳ ಬಾಧೆಯು ಹ್ಯಾಗಾಗಬೇಕು ? ಎಂದೂ ಆಗುವದಿಲ್ಲ. || ೯೯ || ಇತ್ತ ಆ ಗೋಪಾಲನು ತನ್ನ ಮನೆಗೆ ಬಂದು ತಾಯಿಗೆ ಎಲ್ಲ ಸಂಗತಿಯನ್ನು ಹೇಳಿ— ಅಮ್ಮಾ ನಾನು ಮಾಡಿದ ಶನಿಪ್ರದೋಷ ಪೂಜೆಗೆ ಶ್ರೀ ಶಂಕರನು ಮೆಚ್ಚಿ ಮುಂದೆ ನಿನ್ನ ಉದರದಲ್ಲಿ ಶ್ರೀ ಮನ್ನಾರಾಯಣನು ಹುಟ್ಟುವನೆಂದು ವರವನ್ನಿತ್ತನು || ೧೦೦ || ಈ ವಿಷಯ ದಲ್ಲಿ ನೀನು ಮನಸ್ಸಿನಲ್ಲಿ ಏನೂ ಸಂಶಯವನ್ನು ಹಿಡಿಯಬೇಡ, ನೀನು ಶನಿಪ್ರದೋಷ ಪೂಜೆಯನ್ನು ನೋಡಿದ ಮಾತ್ರಕ್ಕೆ ಕರ್ಪೂರ ಗೌರನಾದ ಶ್ರೀ ಶಂಕರನು ನಿಶ್ಚಯವಾಗಿ ಸಂತೋಷಬಟ್ಟನು || ೧೦೧ || ನನ್ನ ವಿನಂತಿ ಯನ್ನು ಕೇಳಿ ನೀನು ಪೂಜೆಯನ್ನು ಕೆಡಿಸಿದಿ ಎಂಬವನ್ನು ಸಹ ಮನಸ್ಸಿನಲ್ಲಿ ಹಿಡಿಯದೆ ಕ್ಷಮಾ ಮಾಡಿ ಈ ಪ್ರಕಾರ ನಿಶ್ಚಯವಾದ ವರವನ್ನು ಕೊಟ್ಟಿರುವನು ಎಂದು ಸಕಲ ವೃತ್ತಾಂತವನ್ನು ಹೇಳಿದನು. || ೧೦೨ || ಎಂದು ಗುರುಗಳು ಆ ವಿಪ್ರಸ್ತ್ರೀಯನ್ನು ಕುರಿತು-- ಎಲೌ ಸ್ತ್ರೀಯಳೇ, ಈ ಪ್ರಕಾರ ಶನಿಪ್ರದೋಷ ಪೂಜೆಯಿಂದ ಈಶ್ವರನು ಪ್ರಸನ್ನನಾಗಿ ಇಚ್ಛಿತ ಫಲವನ್ನು ಕೊಡುವನು. || ೧೦೩ || ನಿನ್ನ ಮನಸ್ಸಿನಲ್ಲಿ ನನ್ನಂಥ ಪುತ್ರನಾಗ ಬೇಕೆಂದಿದ್ದರೆ ಮನಸ್ಸಿನ ಸಂಶಯವನ್ನು ಬಿಟ್ಟು ಒಳ್ಳೇ ನಿಶ್ಚಯ ಮನಸ್ಸಿನಿಂದ ಶನಿಪ್ರದೋಷದಲ್ಲಿ ಶ್ರೀ ಶಂಭುವನ್ನು ಪೂಜಿಸು || ೧೦೪ || ಎಂದು ಭೋಳಾ ಚಕ್ರವರ್ತಿ ಶಿವನ ಅವತಾರಿಕರಾದ ಶ್ರೀಪಾದರು ಅವಳಿಗೆ ಈ ಪ್ರಕಾರ ಹೇಳಿ ಆ ಸ್ತ್ರೀಯ ಭಾವವನ್ನು ನೋಡಿ ಪ್ರಸನ್ನರಾಗಿ || ೧೦೫ || ಆಕೆಯ ಮಗನನ್ನು ಹತ್ತರ ಕರೆದು— ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟರು, ಕೂಡಲೆ ಅವನಿಗೆ ಜ್ಞಾನೋದಯವಾಗಿ ಮೂರು ವೇದಗಳನ್ನೂ || ೧೦೬ || ಆರು ಶಾಸ್ತ್ರಗಳನ್ನೂ ತರ್ಕ ಭಾಷ್ಯಗಳನ್ನೂ ಒಳ್ಳೇ ಪ್ರಕಾಶವಾಗಿ ಅನ್ನಲಾರಂಭಿಸಿದನು. ಈ ಚಮತ್ಕಾರವನ್ನು ನೋಡಿ ಅಲ್ಲಿಯ ಬ್ರಾಹ್ಮಣರೆಲ್ಲರೂ ಆಶ್ಚರ್ಯಪಟ್ಟರು. || ೧೦೭ || ಆಗ ಆ ಬ್ರಾಹ್ಮಣ ಪತ್ನಿಯೂ ಆಶ್ಚರ್ಯವನ್ನು ಹೊಂದಿ ಮನಸ್ಸಿನಲ್ಲಿ— ಈ ಶ್ರೀಪಾದ ಗುರುಗಳು ಸಾಕ್ಷಾತ್ ಈಶ್ವರನು. ಏನೋ ಒಂದು ಕಾರಣಕ್ಕಾಗಿ

ಮನುಷ್ಯ ದೇಹದಿಂದ ಅವತರಿಸಿರುವರು ನಿಶ್ಚಯವು. ॥ ೧೦೮ ॥ ನನ್ನ ಪೂರ್ವ ಜನ್ಮದ ಸುಕೃತದಿಂದ ಇವರು ನನಗೆ ಭೆಟ್ಟಿಯಾದರು ಎಂದು ಮೇಲಿಂದ ಮೇಲೆ ಅವರಿಗೆ ನಮಸ್ಕರಿಸುತ್ತ ॥ ೧೦೯ ॥— ಸ್ವಾಮೀ ನೀವೇ ಈಶ್ವರರಿದ್ದೀರಿ, ನಾನು ನಿಮ್ಮನ್ನೇ ನಿತ್ಯದಲ್ಲಿಯೂ ಶನಿಪ್ರದೋಷದಲ್ಲಿಯೂ ಪೂಜಿಸುವೆನು. ನಿಮ್ಮ ವಾಕ್ಯವು ಮಾತ್ರ ಸುಳ್ಳಾಗಬಾರದು ಮತ್ತು ನನಗೆ ನಿಮ್ಮ ಸಮಾನ ಪುತ್ರನಾಗುತ್ತಾನೆಂದು ನಿಶ್ಚಯ ಮಾಡಿಕೊಂಡಿರುವೆನು ಎಂದು ಹೇಳಿ ॥ ೧೧೦ ॥ ಆ ಸ್ತ್ರೀಯು ಶ್ರೀಪಾದರಾಜರನ್ನು ಅತ್ಯುತ್ತಮ ರೀತಿಯಿಂದ ನಿತ್ಯ ಪೂಜಿಸುತ್ತ ಶನಿಪ್ರದೋಷದಲ್ಲಿಯೂ ಅವರನ್ನು ಪೂಜಿಸುತ್ತಿದ್ದಳು. ॥ ೧೧೧ ॥ ಇತ್ತ ಆಕೆಯ ಕುಮಾರನು ವೇದ-ಶಾಸ್ತ್ರ ಸಂಪನ್ನನಾಗಿ ಬ್ರಾಹ್ಮಣರಲ್ಲಿ ಮಾನ್ಯವಂತನಾಗಿ ಎಲ್ಲರಿಂದಲೂ ಪೂಜೆ ಹೊಂದುವವನಾದನು. ॥ ೧೧೨ ॥ ಆ ಮೇಲೆ ಅವನಿಗೆ ಮದುವೆಯೂ ಆಯಿತು ಅವನು ಪುತ್ರ-ಪೌತ್ರರನ್ನು ಹೊಂದಿ ಸಂತೋಷದಿಂದಿರುತ್ತಿದ್ದನು. ಎಲೈ ಶ್ರೀಮಂತನಾದ ನಾಮಧಾರಕನೇ ಕೇಳು ಹೀಗೆ ಯಾರಮೇಲೆ ಗುರುಕೃಪೆಯುಂಟಾಗುವದೋ ಅವರಿಗೆ ಈ ರೀತಿಯಿಂದ ಇಷ್ಟ ಸಿದ್ಧಿಯಾಗುವದು. ॥ ೧೧೩ ॥ ಕೃಪಾವಂತನಾದ ಶ್ರೀಗುರುವು ಭಕ್ತರನ್ನು ಈ ಪ್ರಕಾರ ಸಂರಕ್ಷಿಸುವನು ॥ ೧೧೪ ॥ ಎಂದು ಸಿದ್ಧರು ಭಕ್ತನಾದ ನಾಮಧಾರಕನಿಗೆ ವಿಸ್ತಾರವಾಗಿ ಹೇಳಿದರು ಎಂದು ಸರಸ್ವತಿ ಗಂಗಾಧರನು— ಎಲೈ ಶ್ರೋತೃಗಳೇ ನೀವು ಯಾವಾಗಲೂ ಗುರುಚರಿತ್ರೆಯನ್ನು ಕೇಳಿರಿ ಎಂದನು. ॥ ೧೧೫ ॥

ಇತಿ ಶ್ರೀ ಗುರುಚರಿತ್ರ ಪರಮಕಥಾ ಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮ ಧಾರಕ ಸಂವಾದೇ ಶನಿಪ್ರದೋಷ ವ್ರತ ಮಹಾತ್ಮ್ಯ ಕಥನಂ ನಾಮ ಅಷ್ಟಮೋಽಧ್ಯಾಯಃ ॥ ೮ ॥ ಶ್ರೀ ಗುರು ದೇವ ದತ್ತ ॥

— ೮ನೇ ಅಧ್ಯಾಯ ಸಮಾಪ್ತ —

# ೯ನೇಯ ಅಧ್ಯಾಯ

## — ಶ್ರೀ ಗುರುಗಳು ರಜಕನನ್ನು ರಾಜನನ್ನಾಗಿ ಮಾಡಿದ್ದು —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ ॥ ಈ ಪ್ರಕಾರ ಸಿದ್ಧರ ಮಾತುಗಳನ್ನು ಕೇಳಿ ನಾಮಧಾರಕನು ಅವರಿಗೆ ಒಳ್ಳೇ ಭಕ್ತಿಯಿಂದಲೂ ವಿನಯದಿಂದಲೂ ಕೈ ಜೋಡಿಸಿ ನಮಸ್ಕರಿಸಿ ॥ ೧ ॥ —ಸ್ವಾಮೀ, ಕೃಪಾಮೂರ್ತಿಯೇ ದಾತಾರನೇ ಶ್ರೀಪಾದ ಶ್ರೀ ವಲ್ಲಭರು ಕುರವಪುರದಲ್ಲಿದ್ದಾಗ್ಗೆ ಮುಂದೆ ಕಥೆಯು ಯಾವ ಪ್ರಕಾರವಾಗಿ ನಡೆಯಿತೆಂಬುದನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದನು. ॥ ೨ ॥ ಆಗ ಸಿದ್ಧರು— ಎಲೈ ನಾಮಧಾರಕನೇ ಆ ಕುರವಪುರದಲ್ಲಿ ಒಬ್ಬ ಆಗಸನಿದ್ದು ಅವನು ಶ್ರೀ ಗುರುಗಳ ಪ್ರೀತಿಯ ಸೇವಕನಾದನು. ಆ ಕಥೆಯು ಅಪೂರ್ವವಾಗಿರುತ್ತದೆ । ೩ ॥ ಎಂದು ಭಕ್ತವತ್ಸಲರಾದ ಸಿದ್ಧ ಗುರುಗಳು ಶಿಷ್ಯನ ಭಾವವನ್ನು ತಿಳಿದು ಅವನ ಭಕ್ತಿಯು ಮತ್ತಿಷ್ಟು ಹೆಚ್ಚಾಗುವವರ ದೆಶೆಯಿಂದ ಗುರುಚರಿತ್ರೆಯನ್ನು ಹೇಳಹತ್ತಿದರು. ॥ ೪ ॥ ಎಲೈ ನಾಮಧಾರಕನೇ, ತ್ರೈಮೂರ್ತಿ ಅವತಾರವಾದ ಶ್ರೀಪಾದಯತಿಗಳು ನಿತ್ಯ ಕೃಷ್ಣಾನದಿಗೆ ಬಂದು ವಿಧಿಪೂರ್ವಕವಾಗಿ ಸ್ನಾನ ಮಾಡುತ್ತಿದ್ದರು. ಲೋಕರೂಢಿಯಂತೆ ಲೌಕಿಕ ಬ್ರಹ್ಮ ಕರ್ಮವನ್ನಾಚರಿಸುತ್ತಿದ್ದರು ॥ ೫ ॥ ಯಾರ ದರ್ಶನದಿಂದ ಮನುಷ್ಯರಿಗೆ ಗಂಗಾಸ್ನಾನ ಮಾಡಿದ ಫಲವು ಬರುತ್ತದೋ ಅಂಥವರಿಗೆ ಯಾವ ಆಚರಣೆ ಬೇಕು ? ಆದರೆ ಅವರು ಲೋಕಾನುಗ್ರಹಕ್ಕಾಗಿ ಸ್ನಾನಾದಿಗಳನ್ನು ಮಾಡುತ್ತಿದ್ದರು. ॥ ೬ ॥ ಈ ಪ್ರಕಾರ ನಡೆದಿರಲು ಒಂದು ದಿವಸ ಶ್ರೀಪಾದ ಯತಿಗಳು ಸ್ನಾನಕ್ಕಾಗಿ ಬಂದು ದಶದಿಕ್ಕುಗಳಲ್ಲಿ ಹರಿಯುತ್ತಿರುವ ಕೃಷ್ಣಾನದಿಯ ಮಧ್ಯದಲ್ಲಿ ನಿಂತಿದ್ದರು. ॥ ೭ ॥ ಅದೇ ನದೀತೀರದಲ್ಲಿ ಒಬ್ಬ ಆಗಸನು ಬಟ್ಟೆಗಳನ್ನು ಒಗೆಯುತ್ತಿದ್ದು ಶ್ರೀಪಾದ ಗುರುಗಳು ತ್ರಿಕಾಲದಲ್ಲಿ ನದಿಗೆ ಸ್ನಾನಕ್ಕೆ ಬಂದಾಗ ತಾನೂ

ನಿತ್ಯ ಆವರ ಹತ್ತಿರ ಹೋಗಿ ತ್ರಿಕರಣ ಪೂರ್ವಕ ಭಕ್ತಿಯಿಂದಲೂ ವಿನಯದಿಂದಲೂ ಅವರಿಗೆ ಸಾ । ನ । ಮಾಡುತ್ತಿದ್ದನು. ॥ ೮–೯ ॥ ಹೀಗೆ ಕೆಲವು ದಿವಸಗಳಾದಮೇಲೆ ಒಂದು ದಿವಸ ಆ ಅಗಸನು ನಿತ್ಯದಂತೆ ಶ್ರೀಗುರುಗಳಿಗೆ ನಮಸ್ಕಾರ ಮಾಡಲಿಕ್ಕೆ ಬರಲು ಅವರು ಅವನನ್ನು ಕುರಿತು— ॥ ೧೦ ॥ ಎಲೈ ರಜಕನೇ, ನೀನು ನಿತ್ಯವೂ ತ್ರಿಕಾಲದಲ್ಲಿ ಬಂದು ನಮಗೆ ನಮಸ್ಕರಿಸಿ ಯಾಕೆ ಕಷ್ಟಬಡುತ್ತೀ ? ನಿನ್ನ ಭಕ್ತಿಗೆ ನಾನು ಮೆಚ್ಚಿದೆನು. ಇನ್ನು ಮೇಲೆ ನೀನು ಸುಖದಿಂದ ರಾಜ್ಯವಾಳು ಎಂದು ವರವನ್ನು ಕೊಟ್ಟರು. ॥ ೧೧ ॥ ಗುರುಗಳ ಮಾತು ಕೇಳಿ ಅಗಸನು— ಇದು ಒಳ್ಳೇ ಉತ್ತಮ ಶಕುನವೆಂದು ತಿಳಿದು ತನ್ನ ಸೆರಗಿಗೆ ಗಂಟು ಹಾಕಿಕೊಂಡು— ಶ್ರೀಗುರುಮೂರ್ತಿಯೇ, ತಾವು ಸತ್ಯಸಂಕಲ್ಪರಿದ್ದೀರಿ ಎಂದು ವಿನಯದಿಂದ ಕೈಮುಗಿದು ಹೋದನು. ॥ ೧೨ ॥ ಆಮೇಲೆ ಅವನು ದಿನದಿನಕ್ಕೆ ಸಂಸಾರ ಚಿಂತೆಯನ್ನು ಬಿಟ್ಟು ಶ್ರೀಗುರುಗಳ ಏಕನಿಷ್ಠ ಶಿಷ್ಯನಾದನು. ಈ ರೀತಿಯಾಗಿ ಅವನು ದಿನಾಲು ಮುಂಜಾನೆ ಮಠಕ್ಕೆ ಹೋಗಿ ಶ್ರೀಗುರುಗಳಿಗೆ ದೂರದಿಂದ ನಾ। ನ। ಮಾಡುತ್ತಿದ್ದನು. ॥ ೧೩ ॥ ಈ ಪ್ರಕಾರ ಬಹಳ ದಿವಸಗಳಾದಮೇಲೆ ಅವನು ಶ್ರೀಗುರುಗಳಿಗೆ ನಿತ್ಯದಂತೆ ನಮಿಸುತ್ತ ಮಠದ ಮುಂದಿನ ಅಂಗಳದ ಕಸವನ್ನು ತೆಗೆದು ನೀರಿನಿಂದ ಧಳಿ ಹಾಕಿ ಸೇವಿಸುತ್ತಿದ್ದನು. ॥ ೧೪ ॥ ಹೀಗೆ ಇರುವಾಗ ವಸಂತ ಋತು ವೈಶಾಖ ಮಾಸದಲ್ಲಿ ಒಂದು ದಿವಸ ಜಲಕ್ರೀಡೆಯಾಡುವದಕ್ಕಾಗಿ ಮ್ಲೇಂಛ ರಾಜನು ಬಂದು ॥ ೧೫ ॥ ಸರ್ವಾಭರಣಗಳಿಂದ ಭೂಷಿತರಾದ ತನ್ನ ಸ್ತ್ರೀಯರೊಡನೆ ತಾನೂ ಅಲಂಕೃತನಾಗಿ ಕ್ರೀಡಾ ಮಾಡುತ್ತ ಆ ನದಿಯ ಮಧ್ಯದಲ್ಲಿ ಬರುತ್ತಿದ್ದನು. ॥ ೧೬ ॥ ಅವನ ಸೈನ್ಯವು ಅಸಂಖ್ಯವಾಗಿ ಆ ನದಿಯ ಎರಡೂ ದಂಡೆಗಳಲ್ಲಿ ರತ್ನಗಳಿಂದಲಂಕೃತವಾದ ಅಸಂಖ್ಯ ಆನೆ-ಕುದುರೆಗಳಿಂದಲೂ ಸೇವಕರಿಂದಲೂ ಮೆರೆಯುತ್ತ ಬರುತ್ತಿತ್ತು ॥ ೧೭ ॥ ಈ ಪ್ರಕಾರ ಆ ನದಿಯ ಮಧ್ಯಪ್ರವಾಹದಲ್ಲಿ ರಾಜನು ಆಟವಾಡುತ್ತ ಬರುತ್ತಿರಲು ಆ ಕೃಷ್ಣಾವೇಣೀ ನದಿಯ ದಂಡೆಗಳಲ್ಲಿ ಅನೇಕ ತರದ ವಾದ್ಯಗಳ ಗರ್ಜನೆಯಾಗುತ್ತಿತ್ತು. ॥ ೧೮ ॥ ಅದೇ ವೇಳೆಗೆ ಆ ಅಗಸನು ನಿತ್ಯದಂತೆ ಶ್ರೀಗುರುಗಳಿಗೆ ನಮಸ್ಕಾರ ಮಾಡುತ್ತಿರುವಾಗ ಆ ಭಯಂಕರವಾದ ವಾದ್ಯಧ್ವನಿಯನ್ನು

ಕೇಳಿ, ಆ ನದಿಯಲ್ಲಿ ಬರುವ ರಾಜನ ವೈಭವವನ್ನು ನೋಡಿ ॥ ೧೯ ॥ ಬಹಳ ಆಶ್ಚರ್ಯಪಟ್ಟು ಮನಸಿನಲ್ಲಿ--
ನಾನು ಈ ನರಜನ್ಮದಲ್ಲಿ ಹುಟ್ಟಿ ಎಂದೂ ಸ್ವಲ್ಪಾದರೂ ಸೌಖ್ಯವನ್ನು ಹೊಂದಲಿಲ್ಲ. ಈ ನನ್ನ ದೇಹವು ಪಶು-
ಸಮಾನವಾದದ್ದು ಇರುತ್ತದೆ. ॥ ೨೦ ॥ ಈ ರಾಜನ ಜೀವಿತ್ವವು ಧನ್ಯವಾದದ್ದು ! ಇವನು ಈ ಪ್ರಕಾರ
ಸ್ತ್ರೀಯರಿಂದಲೂ ಅನೇಕ ತರವ ವಸ್ತ್ರವಿಭೂಷಣಗಳಿಂದಲೂ ಇಷ್ಟು ಸೌಖ್ಯವನ್ನು ಅನುಭವಿಸಬೇಕಾದರೆ ಇವನು
ಈಶ್ವರನ ಭಕ್ತಿಯನ್ನು ಹ್ಯಾಗೆ ಮಾಡಿದ್ದಾನು ? ॥ ೨೧ ॥ ಇವನ ಸೇವೆಯು ಹ್ಯಾಗೆ ಫಲಿಸಿರುವದು ? ಇವನು
ಯಾವ ದೇವರನ್ನು ಆರಾಧಿಸಿರಬಹುದು ? ಮತ್ತು ಇವನಿಗೆ ಯಾವ ಗುರುವಿನ ದರ್ಶನವಾಗಿರಬಹುದು ?
ಇವನು ಯಾತರಿಂದ ಇಷ್ಟು ಸ್ಥಿತಿಯನ್ನು ಹೊಂದಿದ್ದಾನು ? ॥ ೨೨ ॥ ಎಂದು ಅನೇಕ ರೀತಿಯಾಗಿ ಮನಸ್ಸಿನಲ್ಲಿ
ಆಲೋಚಿಸುತ್ತ ಶ್ರೀ ಗುರುಗಳಿಗೆ ನಾ। ನ। ಮಾಡಿದನು. ಆಗ ಕೃಪಾವಂತರೂ ಭಕ್ತವತ್ಸಲರೂ ಆದ ಶ್ರೀಪಾದ
ಗುರುಗಳು ಅವನ ಮನಸ್ಸಿನ ಇಚ್ಛೆಯನ್ನೂ ಅಂತರಂಗದ ಸ್ಥಿತಿಯನ್ನೂ ತಿಳಿದು ಅವನನ್ನು ಕರೆದು— ಎಲೈ
ರಜಕನೇ, ನೀನು ಮನಸ್ಸಿನಲ್ಲಿ ಏನೇನು ಆಲೋಚಿಸುತ್ತೀ ? ಎಂದು ಕೇಳಿದರು ॥ ೨೩-೨೪ ॥ ಆಗ ಆ
ರಜಕನು— ಸ್ವಾಮೀ, ನಾನು ಈ ರಾಜನನ್ನು ನೋಡಿ ಇವನು ಕೇವಲ ಶ್ರೀಗುರುಗಳ ದಾಸನಿರಬಹುದೆಂದು
ತಿಳಿದು ಮನಸ್ಸಿನಲ್ಲಿ ಸಂತೋಷಬಟ್ಟೆನು ॥ ೨೫ ॥ ಸ್ವಾಮೀ, ಕೃಪಾಸಿಂಧುವೇ, ದಯಾನಿಧಿಯೇ ಮತ್ತೂ ನಾನು
ಈ ರಾಜನು ಪೂರ್ವದಲ್ಲಿ ಯಾವ ದೇವರನ್ನು ಪೂಜಿಸಿ ಈ ರಾಜಪದವಿಯನ್ನು ಹೊಂದಿರಬಹುದು ? ಎಂದು
ಆಲೋಚಿಸುತ್ತಿರುತ್ತೇನೆ. ॥ ೨೬ ॥ ಸ್ವಾಮೀ, ಈ ಪ್ರಕಾರ ನನ್ನ ಅಜ್ಞಾನ ಸಂಬಂಧದಿಂದ ಇಂದ್ರಿಯಗಳಿಗೆ
ನಾನಾಪ್ರಕಾರದ ವಾಸನೆಗಳು ಹುಟ್ಟುತ್ತವೆ ಆದರೆ ಅವೆಲ್ಲವುಗಳನ್ನು ಅನುಭವಿಸುವದಕ್ಕೆ ನನ್ನ ಇಚ್ಛೆ ಇರುವ
ದಿಲ್ಲ ನನಗೆ ತಮ್ಮ ಚರಣದಲ್ಲಿಯೇ ಸೌಖ್ಯವಿರುತ್ತದೆ ಎಂದು ಅಂದನು ॥ ೨೭ ॥ ಆಗ ಶ್ರೀಪಾದರು— ಎಲೈ
ರಜಕನೇ, ನೀನು ಹುಟ್ಟಿದಂದಿನಿಂದ ಬಹಳ ಕಷ್ಟಬಟ್ಟಿರುತ್ತೀದಿ ಈಗ ನಿನ್ನ ಮನಸ್ಸಿನಲ್ಲಿ ಒಳ್ಳೇ ಸೌಖ್ಯವನ್ನು
ಅನುಭವಿಸಬೇಕೆಂಬ ಇಚ್ಛೆಯಾಗಿರುತ್ತದೆ. ಆದರೆ ರಾಜಭೋಗವು ತಮೋಗುಣದ ಧರ್ಮವು. ॥ ೨೮ ॥ ಇಂದ್ರಿಯ

ಗಳ ಸುಖಾನುಭವವು ತೀರಿದಮೇಲೆ ಮನಸ್ಸು ನಿರ್ಮಲವಾಗುತ್ತದೆ. ಮನಸ್ಸು ನಿರ್ಮಲವಾಗದಿದ್ದರೆ ಮೋಕ್ಷವಾಗುವದಿಲ್ಲ. ಅದು ಜನ್ಮಾಂತರದಲ್ಲಿ ಬಾಧಿಸುತ್ತದೆ. ॥ ೨೯ ॥ ಎಲೈ ರಜಕನೇ, ಈಗ ನಿನ್ನ ಮನಸ್ಸಿನಲ್ಲಿ ಒಳ್ಳೇ ಸುಖವನ್ನು ಅನುಭವಿಸಬೇಕೆಂಬ ಇಚ್ಛೆಯಾಗಿರುತ್ತದೆ. ಕಾರಣ ರಾಜ್ಯಭೋಗವನ್ನು ಅನುಭವಿಸಿ ಇಂದ್ರಿಯಗಳನ್ನು ತೃಪ್ತಿಪಡಿಸುವದಕ್ಕಾಗಿ ಈಗ ನೀನು ತೀವ್ರವಾಗಿ ಮ್ಲೇಂಛ ರಾಜವಂಶದಲ್ಲಿ ಹುಟ್ಟಿಹೋಗು ಎಂದರು. ॥ ೩೦ ॥ ಶ್ರೀಗುರುಗಳ ಮಾತು ಕೇಳಿ ರಜಕನು ಕೈಮುಗಿದು ವಿನಯದಿಂದ— ಸ್ವಾಮೀ, ಗುರು-ರಾಯರೇ, ತಾವು ಪೂರ್ಣ ಕೃಪಾಸಾಗರರಿದ್ದೀರಿ ತಾವು ನನ್ನನ್ನು ಹೀಗೆ ಉಪೇಕ್ಷಿಸಬಾರದು. ॥ ೩೧ ॥ ದಯಾನಿಧಿಯೇ, ಈಗ ನನಗೆ ತಮ್ಮ ಚರಣವು ಅಂತರಿಸಿದರೂ ತಾವು ನನಗೆ ಪುನಃ ದರ್ಶನ ಕೊಡಬೇಕು. ಮತ್ತು ತಮ್ಮ ಅನುಗ್ರಹಕ್ಕೆ ಕಾರಣವಾದ ಜ್ಞಾನವನ್ನೂ ಕೊಡಬೇಕು ಎಂದು ಪ್ರಾರ್ಥಿಸಿದನು. ॥ ೩೨ ॥ ಆಗ ಗುರುಗಳು— ಎಲೈ ರಜಕನೇ, ನೀನು ಮುಂಪೆ ವೈದುರಾ (ಬೀದರ) ನಗರದಲ್ಲಿ ಜನ್ಮವನ್ನು ಹೊಂದುವಿ ಆಗ ಅಲ್ಲಿ ನಿನ್ನ ಅಂತ್ಯಕಾಲದಲ್ಲಿ ಒಂದು ಕಾರಣದಿಂದ ನಿನಗೆ ನಾವು ದರ್ಶನ ಕೊಡುವೆವು ॥ ೩೩ ॥ ಆಗ ನಿನಗೆ ಕೂಡಲೆ ಜ್ಞಾನವೂ ಉಂಟಾಗುವದು. ಚಿಂತಿಸಬೇಡ. ಈ ಪ್ರಕಾರ ಆಗುತ್ತದೆಂದು ನನಗೆ ಭರವಸೆಯಿದೆ. ॥ ೩೪ ॥ ಮತ್ತೊಂದು ಕಾರಣದ್ದೆಶೆಯಿಂದ ಆಗ ನಾನು "ನರಸಿಂಹಸರಸ್ವತಿ" ಎಂಬ ಹೆಸರಿನಿಂದ ಅವತರಿಸಿ ಸನ್ಯಾಸಿಯಾಗಿರುವೆನು ॥ ೩೫ ॥ ಆಗ ನಿನಗೆ ನಮ್ಮ ದರ್ಶನವಾಗುವದು, ಎಂದು ಹೇಳಿ ಅವನನ್ನು ಸಮಾಧಾನಪಡಿಸಿ— ನೀನು ಇನ್ನು ಹೋಗು ಎಂದು ಹೇಳಿದರು. ಆಗ ಆ ರಜಕನು ಗುರುಚರಣಕ್ಕೆ ನಮಸ್ಕಾರ ಮಾಡಿದನು. ॥ ೩೬ ॥ ಆಗ ಕೃಪಾಮೂರ್ತಿಗಳಾದ ಗುರುಗಳು ಅದನ್ನು ಕಂಡು ಅವನನ್ನು ಹತ್ತರಕ್ಕೆ ಕರೆದು— ಎಲೈ ರಜಕನೇ, ನೀನು ಇದೇ ಜನ್ಮದಲ್ಲಿ ರಾಜ್ಯಸುಖವನ್ನು ಅನುಭವಿಸುತ್ತೀಯೋ ? ಅಥವಾ ಮುಂದಿನ ಜನ್ಮದಲ್ಲಿ ಅನುಭವಿಸುತ್ತೀಯೋ ? ಎಂಬದನ್ನು ಹೇಳು ಎಂದು ಅಂದರು. ॥ ೩೭ ॥ ಆಗ ಆ ರಜಕನು ವಿನಯದಿಂದ— ಸ್ವಾಮೀ, ಈಗ ನಾನು ಮುದುಕನಾಗಿದ್ದೇನೆ. ಆದ್ದರಿಂದ ಮುಂದಿನ ಜನ್ಮದಲ್ಲಿ ನಾನು ಬಾಲ್ಯದಾರಭ್ಯ

ರಾಜ್ಯಸುಖವನ್ನು ಅನುಭವಿಸುವೆನು. ರಾಜ್ಯ ಸುಖಕ್ಕೆ ಯೌವನ ಕಾಲವು ಯೋಗ್ಯವು ಎಂದು ಬಿನ್ನವಿಸಿದನು. ‖ ೩೮ ‖ ಆಗ ಗುರುಗಳು— ಎಲೈ ರಜಕನೇ, ನೀನು ಮುಂದಿನ ಜನ್ಮದಲ್ಲಿ ರಾಜ್ಯಸುಖವನ್ನು ಅನುಭವಿಸುತ್ತೀನೆಂದೆನ್ನುತ್ತೀ ಅಂದಮೇಲೆ ನೀನು ಇಲ್ಲಿಂದ ತೀವ್ರವಾಗಿ ಹೋಗು ಎಂದು ನಿರೋಪವನ್ನು ಕೊಟ್ಟರು. ‖೩೯‖ ಕೂಡಲೇ ಅವನು ಅಲ್ಲಿಯೇ ಪ್ರಾಣವನ್ನು ಬಿಟ್ಟು, ವಿಖ್ಯಾತವಾದ ವೈದುರಾ ನಗರದಲ್ಲಿ ಮ್ಲೇಂಛ ರಾಜಕುಲದಲ್ಲಿ ಹುಟ್ಟಿ ಪ್ರಖ್ಯಾತನಾದನು. ‖ ೪೦ ‖ ಎಲೈ ನಾಮಧಾರಕನೇ, ಈ ಪ್ರಕಾರವಾದ ಆ ರಾಜನ ಚರಿತ್ರೆಯನ್ನು ಮುಂದೆ ನಿನಗೆ ವಿಸ್ತಾರವಾಗಿ ಹೇಳುವೆನು. ಈಗ ಮುಂದಿನ ಕಥೆಯನ್ನು ಕೇಳು. ‖ ೪೧ ‖ ಶ್ರೀಗುರುಗಳು ಕುರವಪುರದಲ್ಲಿರುವಷ್ಟರಲ್ಲಿ ಈ ಪ್ರಕಾರ ಪ್ರಖ್ಯಾತವಾದ ಅನೇಕ ಮಹಿಮೆಗಳು ಅಪರಂಪಾರವಾದವು. ‖ ೪೨ ‖ ಅವೆಲ್ಲವುಗಳನ್ನು ಹೇಳಹತ್ತಿದರೆ ಕಥೆಯು ವಿಸ್ತಾರವಾಗುವದು. ನಾಮಧಾರಕನೇ, ಶ್ರೀಗುರುಗಳ ಮುಂದಿನ ಅವತಾರ ಮಹಿಮೆಗಳು ಬಹಳವಾಗಿರುವವು ಅವುಗಳನ್ನು ಹೇಳುವೆನು ಕೇಳು. ‖ ೪೩ ‖ ಶ್ರೀಗುರುಗಳ ಮಹತ್ವವನ್ನು ಈ ವಾಣಿಯಿಂದ ವರ್ಣಿಸಲಿಕ್ಕೆ ಯಾರಿಂದ ಶಕ್ಯವಾದೀತು ? ಅವರ ಆಶ್ಚರ್ಯಕರವಾದ ಅಮೃತದೃಷ್ಟಿಯಿಂದ ಆ ಸ್ಥಾನಮಹಿಮೆಯು ಈ ಪ್ರಕಾರವಾಗುವದು. ‖ ೪೪ ‖ ಶ್ರೀಗುರುಗಳು ಎಲ್ಲಿ ವಾಸಮಾಡುವರೋ ಅಲ್ಲಿ ಈ ತರದ ಅಪರಂಪಾರ ಮಹಿಮೆಗಳು ವಿಚಿತ್ರವಾಗಿ ಕಂಡುಬರುವವು. ನಿನಗೆ ಒಂದು ದೃಷ್ಟಾಂತವನ್ನೂ ‖ ೪೫ ‖ ಸ್ಥಾನಮಹಿಮೆಯ ಪ್ರಕಾರವನ್ನೂ ಹೇಳುವೆನು ಏಕಚಿತ್ತದಿಂದ ಕೇಳು. ಕುರವಪುರದ ಮಹಿಮೆಯು ಶ್ರೇಷ್ಠವಾದದ್ದು. ಅಲ್ಲಿಗೆ ಹೋಗಿ ಸೇವಾ ಮಾಡಿದವರ ಮನಸ್ಸಿನ ಇಚ್ಛೆಗಳು ತೀವ್ರವಾಗಿ ಪೂರ್ಣವಾಗುವವು. ‖ ೪೬ ‖ ಈ ಪ್ರಕಾರ ಶ್ರೀಗುರುಗಳು ಮುಂದೆ ಎಷ್ಟೋ ದಿವಸಗಳ ವರೆಗೆ ಕುರವಪುರದಲ್ಲಿದ್ದು ಮತ್ತೆ ಮುಂದೆ ಅವತಾರ ತಕ್ಕೊಳ್ಳುವದಕ್ಕಾಗಿ ಆಶ್ವೀನ ವದ್ಯ ದ್ವಾದಶಿ ಮೃಗಶಿರಾ ನಕ್ಷತ್ರದಲ್ಲಿ ನಿಜಾನಂದದಲ್ಲಿದ್ದು ಗಂಗೆಯಲ್ಲಿ ಅದೃಶ್ಯರಾದರು. ‖ ೪೭–೪೮ ‖ ನಿಶ್ಚಯವಾಗಿ ತ್ರೈಮೂರ್ತಿ ಅವತಾರವಾದ ಶ್ರೀಪಾದರು ಲೌಕಿಕ ರೀತಿಯಿಂದ ಅದೃಶ್ಯರಾದಂತೆ ಕಂಡರೂ ನಿಶ್ಚಯವಾಗಿ ಅವರು ಕುರವಪುರದಲ್ಲಿಯೇ ವಾಸವಾಗಿರುತ್ತಾರೆ. ‖ ೪೯ ‖

ಈ ಪ್ರಕಾರ ಶ್ರೀಪಾದಗುರುಗಳು ನಿರ್ಗುಣರೂಪದಿಂದ ಆಸ್ಥಾನದಲ್ಲಿ ಅದೃಶ್ಯರಾಗಿರುತ್ತಾರೆಂಬದಕ್ಕೆ ನಿನಗೆ ಒಂದು ವಿಸ್ತಾರವಾದ ದೃಷ್ಟಾಂತವನ್ನು ಹೇಳುವೆನು. || ೫೦ || ಕೇವಲ ಭಕ್ತರಾದ ಜನರಿಗೆ ಶ್ರೀಗುರುಗಳು ನಿಶ್ಚಯವಾಗಿ ದರ್ಶನ ಕೊಡುವರು. ಕುರವಪುರ ಕ್ಷೇತ್ರವು ಅಪೂರ್ವವಾದದ್ದೆಂದು ಭೂಮಂಡಲದಲ್ಲಿ ಪ್ರಖ್ಯಾತವಾಗಿರುತ್ತದೆ. || ೫೧ || ಎಂದು ಸಿದ್ಧರು ನಾಮಧಾರಕನಿಗೆ ಹೇಳಿದಂಥ ಗುರುಚರಿತ್ರೆಯನ್ನು ವಿಸ್ತಾರವಾಗಿ ಸರಸ್ವತೀ-ಗಂಗಾಧರನು ಶ್ರೋತೃಗಳಿಗೆ ಹೇಳಿದನು. || ೫೨ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ರಜಕ ವರಪ್ರದಾನಂ ನಾಮ ನವಮೋಧ್ಯಾಯಃ || ೯ || ಶ್ರೀಗುರುದೇವದತ್ತ ||

— ಇಲ್ಲಿಗೆ ಮೊದಲನೇ ದಿನದ ಸಪ್ತಾಹವು ಮುಗಿದುದು —

— ೯ನೇ ಅಧ್ಯಾಯ ಸಮಾಪ್ತ —

---

# ೧೧ನೇಯ ಅಧ್ಯಾಯ



## ಕುರವಪುರದ ಯಾತ್ರೆಗೆ ಹೋಗುತ್ತಿದ್ದ ಬ್ರಾಹ್ಮಣ ಭಕ್ತನನ್ನು ಕಳ್ಳರು ಕೊಲ್ಲಲು ಶ್ರೀಪಾದರು ಬದುಕಿಸಿದ್ದು

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಈ ಪ್ರಕಾರ ಸಿದ್ಧರ ಮಾತು ಕೇಳಿ ನಾಮಧಾರಕನು ವಿನಯದಿಂದ— ಸ್ವಾಮೀ, ಕುರವಪುರದ ಮಹಿಮೆಯು ಹ್ಯಾಗೆ ಆಯಿತು ? ॥ ೧ ॥ ಎಂಬದನ್ನೂ ಮತ್ತು ಶ್ರೀಪಾದ ಗುರುಗಳು ಎಲ್ಲಿಯೂ ಹೋಗಿಲ್ಲ. ಅವರು ಸರ್ವ ಧರ್ಮವನ್ನೂ ಮಹಿಮೆಯನ್ನೂ ವಿಸ್ತಾರ ಮಾಡಲಿಕ್ಕೆ ಮತ್ತೆ ಅವತಾರ ತಕ್ಕೊಂಡರೆಂದು ಹೇಳುತ್ತೀರಿ ಅದೆಲ್ಲವನ್ನೂ ನನಗೆ ಹೇಳಬೇಕು ಎಂದು ಬೇಡಿಕೊಂಡನು. ॥ ೨ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ಗುರುಗಳ ಮಹಿಮೆಯನ್ನು ಏನು ಕೇಳುತ್ತೀ ? ವಿಶ್ವವ್ಯಾಪಕನಾದ ಒಬ್ಬನೇ ಒಬ್ಬ ಪರಮಾತ್ಮನು ಅನಂತ ರೂಪದಿಂದಿರುತ್ತಾನೆ. ॥ ೩ ॥ ಆ ಶ್ರೀಪಾದ ಶ್ರೀ ವಲ್ಲಭರು ಆ ಕುರುಗುಡ್ಡಿಯಲ್ಲಿ ಗುಪ್ತವಾಗಿದ್ದು ಒಂದಾನೊಂದು ಕಾರಣದಿಂದ ಅವರು ಮುಂದೆ ಅವತಾರವನ್ನು ತಕ್ಕೊಂಡರು. ॥ ೪ ॥ ಪರಶುರಾಮನನ್ನು ನೋಡು ! ಅವನು ಇವತ್ತಿನವರೆಗೂ ಭೂಮಿಯಲ್ಲಿ ಚಿರಂಜೀವಿಯಾಗಿದ್ದರೂ ಮತ್ತೂ ಶ್ರೀ ರಾಮಾದಿ ಅನೇಕ ಅವತಾರಗಳನ್ನು ಗೈದಂತೆಯೇ ಶ್ರೀಪಾದ ಶ್ರೀ ವಲ್ಲಭರು ಮತ್ತೆ ಅವತಾರ ಮಾಡಿದರು. ಪರಮಾತ್ಮನು ಒಬ್ಬನೇ ಇದ್ದು ಅವನು ಅನೇಕ ರೂಪ ಧಾರಣ ಮಾಡುವನು. ॥ ೫ ॥ ಎಲ್ಲಕಡೆಯಲ್ಲಿ ವಾಸವಾಗಿರುವಂಥ ಆದಿ ನಾರಾಯಣ ಮೂರ್ತಿಯು ಒಂದೇ ಆಗಿರುವದು. ಅವನ ಸತ್ವ-ರಜ-ತಮಗಳೆಂಬ ಮೂರು ಗುಣಗಳಿಂದ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ಮೂರು ಮೂರ್ತಿಗಳಾಗಿ ಬ್ರಹ್ಮನು ಸೃಷ್ಟಿಯನ್ನೂ ವಿಷ್ಣುವು ಅದರ ರಕ್ಷಣವನ್ನೂ ಮಹೇಶ್ವರನು ಅದರ ಪ್ರಲಯವನ್ನೂ ಮಾಡುತ್ತಿರುವರು. ॥ ೬ ॥

ಶ್ರೀಮನ್ನಾರಾಯಣನು ಭಕ್ತರನ್ನು ರಕ್ಷಿಸುವದಕ್ಕಾಗಿ ಅನೇಕ ಅವತಾರಗಳನ್ನು ತಕ್ಕೊಳ್ಳುವನು. ಅದಕ್ಕೆ ದೂರ್ವಾಸ ಋಷಿಯ ಶಾಪವೇ ಕಾರಣವು. ॥ ೭ ॥ ಮತ್ತು ತ್ರೈಮೂರ್ತಿಗಳ ಅವತಾರಕ್ಕೆ ಕಾರಣವನ್ನು ತಿಳಿಯುವದು ಯಾರಿಂದಲೂ ಆಗುವದಿಲ್ಲ ಕುರುವಪುರದ ತೀರ್ಥವು ಅತ್ಯಂತ ಶ್ರೇಷ್ಠವಾದದ್ದೆಂದು ಶ್ರೀ ಗುರುಗಳು ಅಲ್ಲಿ ವಾಸಿಸಿದರು. ॥ ೮ ॥ ಭಕ್ತರು ಶ್ರೀ ಗುರುಗಳ ದರ್ಶನ ಮಾಡಿಕೊಂಡು ತಮ್ಮ ಮನಸ್ಸಿನಲ್ಲಿ ಏನೇನು ಇಚ್ಛಿಸುವರೋ ಅವರು ಕೂಡಲೆ ಆ ಆ ಇಚ್ಛೆಯ ಫಲವನ್ನು ಹೊಂದುವರು. ಯಾಕಂದರೆ ಗುರುಗಳ ವಾಸ ಸ್ಥಾನವು ಕಾಮಧೇನುವಿನಂತಿದ್ದು ಬೇಡಿದ್ದನ್ನು ಕೊಡುವದೆಂದು ತಿಳಿ. ॥ ೯ ॥ ಶ್ರೀಪಾದ ಶ್ರೀ ವಲ್ಲಭರ ಸ್ಥಾನ ಮಹಿಮೆಯನ್ನು ವರ್ಣಿಸುವದು ಅನುಪಮವಾದದ್ದೂ ಅಪಾರವಾದದ್ದೂ ಇರುವದು ಆ ಬಗ್ಗೆ ನಿನಗೆ ದೃಷ್ಟಾಂತವನ್ನು ಹೇಳುತ್ತೇನೆ ಕೇಳು ॥ ೧೦ ॥ ನಿನಗೆ ಹೀಗೆ ಹೇಳುವ ಕಾರಣವೇನಂದರೆ ಗುರುಭಕ್ತಿಯು ಎಂದೂ ವ್ಯರ್ಥವಾಗುವದಿಲ್ಲವೆಂದು ತಿಳಿಸಲು ಶ್ರೀ ಗುರುಗಳು ನಿಜಭಕ್ತರು ಬರುವ ಸಮಯವನ್ನೇ ನೋಡುತ್ತಿರುತ್ತಾರೆ. ಅಂದರೆ ನಿಜಭಕ್ತರು ಯಾವಾಗ ಬಂದಾರೋ ಅವರಿಗೆ ನಾನು ಯಾವಾಗ ದರ್ಶನವನ್ನೂ ವರವನ್ನೂ ಕೊಟ್ಟೇನೋ ಎಂದೆನ್ನುತ್ತಿರುವನು ॥ ೧೧ ॥ ಮನುಷ್ಯರು ಗಂಭೀರತನದಿಂದಲೂ ಧೈರ್ಯದಿಂದಲೂ ಇದ್ದು ಗುರುಗಳಲ್ಲಿ ದೃಢತರವಾದ ಭಕ್ತಿಯನ್ನಿಡಬೇಕು ಅಂದರೆ ಅವರು ಇಹ–ಪರ ಸೌಖ್ಯವನ್ನು ಹೊಂದಿ ಈ ಭವ ಸಾಗರವನ್ನು ದಾಟುವರು ॥ ೧೨ ॥ ಈ ಬಗ್ಗೆ ಸಹಜವಾಗಿ ಆದ ಒಂದು ದೃಷ್ಟಾಂತವನ್ನು ನಿನಗೆ ಹೇಳುವೆನು ಕೇಳು. ಒಂದು ಊರಲ್ಲಿ ಕಾಶ್ಯಪ ಗೋತ್ರದ ವಲ್ಲಭೇಶನೆಂಬ ಒಬ್ಬ ಬ್ರಾಹ್ಮಣನಿದ್ದನು. ॥ ೧೩ ॥ ಅವನು ಸುಶೀಲನೂ ಸದಾಚಾರ ಸಂಪನ್ನನೂ ವ್ಯಾಪಾರ ಮಾಡಿ ಹೊಟ್ಟೆ ತುಂಬಿಕೊಳ್ಳುವವನೂ ಆಗಿದ್ದು ಪ್ರತಿವರ್ಷ ಶ್ರೀಪಾದರ ಕ್ಷೇತ್ರವಾದ ಕುರುವಪುರದ ಯಾತ್ರೆಗೆ ಬರುತ್ತಿದ್ದನು. ॥ ೧೪ ॥ ಹೀಗಿರುತ್ತಿರಲು ಮುಂದೇನಾಯಿತೆಂದರೆ— ಆ ವಲ್ಲಭೇಶನು ಪ್ರತಿವರ್ಷದಂತೆ ಈ ಸಾರೆ ವ್ಯಾಪಾರ ಮಾಡುತ್ತ ಯಾತ್ರೆಗೆ ಹೊರಟು ಮನಸ್ಸಿನಲ್ಲಿ ಅಲ್ಲಿ ಬ್ರಾಹ್ಮಣ ಸಂತರ್ಪಣೆ ಮಾಡಬೇಕೆಂಬುದನ್ನು ಇಟ್ಟುಕೊಂಡು ॥ ೧೫ ॥— ಈ ಸಾರೆ ವ್ಯಾಪಾರದಲ್ಲಿ ನನಗೆ

ಬಹಳ ಲಾಭ ಬಂದರೆ ಅಲ್ಲಿ ಯಾತ್ರೆಗೆ ಬಂದಂಥ ಸಹಸ್ರ ಮಂದಿ ಬ್ರಾಹ್ಮಣರಿಗೆ ಇಚ್ಛಾ ಭೋಜನ ಮಾಡಿಸುವೆನು. ॥ ೧೬ ॥ ಎಂದು ನಿಶ್ಚಯ ಮಾಡಿ ವ್ಯಾಪಾರಕ್ಕಾಗಿ ಹೊರಟು ಸದಾ ಮನಸ್ಸಿನಲ್ಲಿ ಶ್ರೀಪಾದರನ್ನು ಧ್ಯಾನಿಸುತ್ತಿದ್ದನು. ॥೧೭॥ ಅವನು ವ್ಯಾಪಾರ ಮಾಡಿದಲ್ಲೆಲ್ಲ ಅವನಿಗೆ ಬಹು ಸಂತೋಷವಾಗುವಂತೆ ದಿನದಿನಕ್ಕೆ ಹೆಚ್ಚೆಚ್ಚು ಲಾಭ ಬರುತ್ತ ಮುಂದೆ ನೂರುಪಟ್ಟು ಲಾಭ ಬರಹತ್ತಿತು. ಆಗ ಅವನು ಪರಮಾನಂದಬಟ್ಟು ॥ ೧೮ ॥ ಶ್ರೀ ಗುರುಚರಣದಲ್ಲಿ ಅತ್ಯಂತ ಮನಸ್ಸನ್ನಿಟ್ಟು ಕೂಡಲೆ ಕುರವಪುರದ ಯಾತ್ರೆಗೆ ಹೊರಟು, ಅನ್ನಸಂತರ್ಪಣೆಯ ದೆಶೆಯಿಂದ ತನ್ನ ಸಂಗಡ ಎಲ್ಲ ದ್ರವ್ಯವನ್ನು ತಕ್ಕೊಂಡು ನಡೆದನು ॥ ೧೯ ॥ ಈ ಪ್ರಕಾರ ಅವನು ದ್ರವ್ಯವನ್ನು ತಕ್ಕೊಂಡು ಹೊರಟದ್ದನ್ನು ಕೆಲವು ಕಳ್ಳರು ನೋಡಿ ಅವನ ದ್ರವ್ಯವನ್ನು ಹರಣ ಮಾಡಬೇಕೆಂದು ಕಪಟ ವೇಷವನ್ನು ಧರಿಸಿ ತಾವೂ ತೀವ್ರವಾಗಿ ಹೊರಟರು. ॥ ೨೦ ॥ ಆ ಬ್ರಾಹ್ಮಣನನ್ನು ಕೂಡಿಕೊಂಡು ಎರಡು ಮೂರು ದಿವಸ ಅವನ ಸಂಗಡ ಮಾರ್ಗವನ್ನು ಕ್ರಮಿಸುತ್ತ ಒಂದುದಿವಸ ರಾತ್ರಿ ಮಾರ್ಗ ಹಿಡಿದು ಹೋಗುವಾಗ ॥ ೨೧ ॥ ಆ ಬ್ರಾಹ್ಮಣನನ್ನು ಕುರಿತು— ಎಲೈ ಬ್ರಾಹ್ಮಣನೇ ಪ್ರತಿವರ್ಷ ಶ್ರೀಪಾದ ಶ್ರೀವಲ್ಲಭರ ದರ್ಶನಕ್ಕಾಗಿ ನಾವೂ ಶ್ರೀ ಕುರವಪುರಕ್ಕೆ ಹೋಗುವ ನೇಮವನ್ನು ಮಾಡಿದ್ದೇವೆ. ॥ ೨೨ ॥ ಎಂದು ಹೇಳುತ್ತ ಹಾದಿಯಲ್ಲಿ ಒಂದುದಿನ ಆ ಬ್ರಾಹ್ಮಣನ ಶಿರಚ್ಛೇದಮಾಡಿ ಕೊಂದು ಅವನಲ್ಲಿದ್ದ ಎಲ್ಲ ದ್ರವ್ಯವನ್ನು ತಕ್ಕೊಂಡರು. ॥ ೨೩ ॥ ಆಗ ಕುರವಪುರದಲ್ಲಿದ್ದ ಭಕ್ತರನ್ನು ರಕ್ಷಣ ಮಾಡುವವರಲ್ಲಿ ಶ್ರೇಷ್ಠರಾದ ಶ್ರೀಗುರುಗಳು ಜಟಾಧಾರಿಗಳೂ ಸರ್ವಾಂಗದಲ್ಲಿ ಭಸ್ಮವನ್ನು ಧರಿಸಿದವರೂ ॥ ೨೪ ॥ ಕೈಗಳಲ್ಲಿ ತ್ರಿಶೂಲ-ಖಟ್ವಾಂಗಗಳನ್ನು ಹಿಡಿದು ಶ್ರೀಶಂಕರನ ವೇಷದಿಂದ ಒಮ್ಮಿಂದೊಮ್ಮೆ ಆ ಸ್ಥಳದಲ್ಲಿ ಪ್ರಕಟರಾಗಿ ಆ ಕಳ್ಳರ ಎದುರಿಗೆ ನಿಂತು ಕೂಡಲೆ ತ್ರಿಶೂಲದಿಂದ ಒಬ್ಬೊಬ್ಬರನ್ನೇ ಸಂಹಾರ ಮಾಡುತ್ತ ಬಂದರು. ॥ ೨೫ ॥ ಹೀಗೆ ಶ್ರೀಪಾದ ಗುರುಗಳು ಎಲ್ಲ ಕಳ್ಳರನ್ನು ಕೊಲ್ಲುವಾಗ ಅವರಲ್ಲಿ ಒಬ್ಬನು ಶ್ರೀಗುರುಗಳಿಗೆ ಕೈಮುಗಿದು ವಿನಯದಿಂದ— ಸ್ವಾಮೀ ಜಗನ್ನಾಥಾ, ನನ್ನ ಮೇಲೆ ಕೃಪಾ ಮಾಡಿರಿ. ನಾನು ನಿರಪರಾಧಿಯು. ॥ ೨೬ ॥ ನಾನೇನು ಕಳ್ಳನಲ್ಲ. ಈ ಕಳ್ಳರು ಈ ಬ್ರಾಹ್ಮಣನನ್ನು ಕೊಲ್ಲುತ್ತಾರೆಂಬದೂ

ನನಗೆ ಗೊತ್ತಿಲ್ಲ. ನಾನೂ ಒಬ್ಬ ದಾರಿಗನಿದ್ದು ಸುಮ್ಮನೆ ಇವರ ಸಂಗಡ ಮಾತ್ರ ಬಂದೆನು. ತಾವು ಸರ್ವಜ್ಞರೂ ಸರ್ವೋತ್ತಮರೂ ಇದ್ದು ಜಗತ್ತಿನ ಎಲ್ಲ ಜನರ ಮನಸ್ಸಿನ ಇಚ್ಛೆಯನ್ನು ತಿಳಿಯುತ್ತೀರಿ. ಆದರಂತೆ ನನ್ನ ಮನಸ್ಸು ಹ್ಯಾಗೆ ಅದೆ ಎಂಬದು ತಮಗೆ ತಿಳಿದಿದೆ. ಆದ್ದರಿಂದ ದೇವಾ, ನನ್ನನ್ನು ಸುಮ್ಮನೆ ಯಾಕೆ ಕೊಲ್ಲುತ್ತೀರಿ? ಎಂದು ಬೇಡಿಕೊಂಡನು. ॥ ೨೭ ॥ ಅವನ ವಿನಂತಿಯನ್ನು ಕೇಳಿ ಶ್ರೀಪಾದರು ಅವನ ಕೈಯಲ್ಲಿ ಅಭಿಮಂತ್ರಿತವಾದ ವಿಭೂತಿಯನ್ನು ಕೊಟ್ಟು— ಎಲೈ, ನೀನು ಆತನ ಶಿರಸ್ಸನ್ನು ದಿಂಡದಮೇಲೆ ಇರಿಸಿ ಈ ಭಸ್ಮವನ್ನು ಮೃತ ಬ್ರಾಹ್ಮಣ ಸರ್ವಾಂಗಕ್ಕೆ ಲೇಪಿಸು ಎಂದು ಹೇಳಿದರು. ॥ ೨೮ ॥ ಆಗ ಶ್ರೀಗುರುಗಳ ಅಪ್ಪಣೆಯ ಪ್ರಕಾರ ಆ ಮಂತ್ರದಿಂದ ಭಸ್ಮವನ್ನು ಅವನ ಕುತ್ತಿಗೆಗೆ ಹಚ್ಚಿದಕೂಡಲೆ ಆ ಬ್ರಾಹ್ಮಣನು ಸಜೀವನಾಗಿ ಎದ್ದು ಕುಳಿತನು. ಏಕಚಿತ್ತದಿಂದ ಕೇಳು. ॥ ೨೯ ॥ ಅಷ್ಟರಲ್ಲಿ ಸೂರ್ಯೋದಯವಾಯಿತು. ಕೂಡಲೆ ಶ್ರೀಪಾದ ಯತಿಗಳು ಗುಪ್ತರಾದರೂ. ಆ ಮನುಷ್ಯನು ಮಾತ್ರ ಆ ಬ್ರಾಹ್ಮಣನ ಹತ್ತರವೇ ಇದ್ದನು ॥ ೩೦ ॥ ಆಗ ಆ ಬ್ರಾಹ್ಮಣನು ಆ ಮನುಷ್ಯನನ್ನು ಕುರಿತು— ಎಲೈ ಮನುಷ್ಯನೇ, ನೀನು ನನ್ನನ್ನು ಯಾಕೆ ಹಿಡಿದು ನಿಂತಿರುತ್ತೀ? ಈ ಕಳ್ಳರನ್ನು ಯಾರು ಕೊಂದರು? ಎಂದು ಕೇಳಿದನು. ॥ ೩೧ ॥ ಆಗ ಅವನು— ಎಲೈ ಬ್ರಾಹ್ಮಣನೇ, ಒಂದು ಚಮತ್ಕಾರವಾಯಿತು ಹೇಳುತ್ತೇನೆ ಕೇಳು. ಒಮ್ಮಿಂದೊಮ್ಮೆ ಒಬ್ಬ ತಪಸ್ವಿಯು ಬಂದು ತ್ರಿಶೂಲದಿಂದ ಈ ಕಳ್ಳರನ್ನು ಕೊಂದು ॥ ೩೨ ॥ ನಿನ್ನ ಸಲುವಾಗಿ ನನ್ನನ್ನು ಉಳಿಸಿದರು. ಆಮೇಲೆ ನಾನು ನಿನ್ನನ್ನು ಹಿಡಿದು ಕೂತುಕೊಂಡು ಕೂತೆನು ಆಗ ಅವರು ಕೊಟ್ಟ ವಿಭೂತಿಯನ್ನು ನಿನ್ನ ಮೈಗೆ ಹಚ್ಚಿ ನಿನ್ನನ್ನು ಸಜೀವಗೊಳಿಸಿದರು. ॥ ೩೩ ॥ ಈಗ ಇಲ್ಲಿಯೇ ನಿಮ್ಮ ಹತ್ತರ ನಿಂತ ಆ ತಪಸ್ವಿಗಳು ಕೂಡಲೇ ಮಾಯವಾದರು. ಅವರು ಯಾವ ಬಲವಂತ ತಪಸ್ವಿಯೋ ಏನೋ ನನಗೆ ತಿಳಿಯದು. ಅವರೇ ನಿಮ್ಮ ಪ್ರಾಣವನ್ನು ಉಳಿಸಿದರು. ॥ ೩೪ ॥ ಜಟಾಧಾರಿಯೂ, ಭಸ್ಮಾಂಗಿಯೂ, ತ್ರಿಪುರಾರಿಯೂ ಆದ ಶಂಕರನೇ ನಿಮ್ಮ ಅತಿಶಯವಾದ ಭಕ್ತಿಗೆ ಮೆಚ್ಚಿ, ನಿಮ್ಮನ್ನು ಬದುಕಿಸಲಿಕ್ಕೆ ಕೂಡಲೆ ಬಂದಿರಬಹುದು ಎಂದನು. ॥ ೩೫ ॥ ಅವನ ಮಾತು ಕೇಳಿ ಆ ಬ್ರಾಹ್ಮಣನು

ವಿಶ್ವಾಸವನ್ನು ಹೊಂದಿ ಆ ಸತ್ತ ಕಳ್ಳರ ಹತ್ತರಿದ್ದ ತನ್ನ ದ್ರವ್ಯವನ್ನೆಲ್ಲ ತಕ್ಕೊಂಡು ಕುರವಪುರಕ್ಕೆ ಹೊರಟನು. || ೩೬ || ಅಲ್ಲಿ ಹೋಗಿ ಅವನು ಶ್ರೀ ಗುರುಗಳ ಪಾದುಕೆಗಳನ್ನು ಒಳ್ಳೇ ಭಕ್ತಿಯಿಂದಲೂ ಪ್ರೀತಿಯಿಂದಲೂ ನಾನಾರೀತಿಯಾಗಿ ಪೂಜಿಸಿ ಅಲ್ಲಿ ಬಂದ ನಾಲ್ಕು ಸಾವಿರ ಬ್ರಾಹ್ಮಣರ ಪೂಜೆ ಮಾಡಿ ಇಚ್ಛಾ ಭೋಜನ ಮಾಡಿಸಿದನು. || ೩೭ || ಅಲ್ಲಿ ಇವನಂತೆ ಅನೇಕ ಭಕ್ತರು ಕೂಡಿ ಶ್ರೀಪಾದ ಶ್ರೀ ವಲ್ಲಭರ ಚರಣಗಳನ್ನು ಪೂಜಿಸಿ, ಸೇವಿಸಿ, ತಮ್ಮ ಇಚ್ಛಿತ ಫಲಗಳನ್ನು ಹೊಂದುವರು. ಕುರವಪುರದ ಮಹಿಮೆಯು ಈ ಪ್ರಕಾರ ಪ್ರಖ್ಯಾತವಾಗಿಯೂ ಅಪಾರವಾಗಿಯೂ ಆಗಿರುವದು || ೩೮ || ಎಲೈ ನಾಮಧಾರಕನೇ, ಶ್ರೀಪಾದ ಶ್ರೀ ವಲ್ಲಭರು ಕುರವಪುರದಲ್ಲಿ ಅದೃಶ್ಯ ರೂಪದಿಂದ ನಿಶ್ಚಯವಾಗಿರುವರು ನೀನು ಮನಸ್ಸಿನಲ್ಲಿ ಏನೂ ಸಂಶಯ ತಕ್ಕೊಳ್ಳಬೇಡ || ೩೯ || ಮುಂದೆ ಅವತಾರ ತಕ್ಕೊಳ್ಳುವದಕ್ಕಾಗಿ ಶ್ರೀಪಾದ ಶ್ರೀ ವಲ್ಲಭರು ಕುರುವಪುರದಲ್ಲಿ ಗುಪ್ತವಾಗಿರುವರು ಅನಂತರೂಪಿ ನಾರಾಯಣನು ಎಲ್ಲಕಡೆಯಲ್ಲಿಯೂ ಪೂರ್ಣವಾಗಿ ವ್ಯಾಪಿಸಿರುವನು. || ೪೦ || ಈ ಪ್ರಕಾರ ಶ್ರೀಪಾದ ಗುರುಗಳು ಲೌಕಿಕಾರ್ಥವಾಗಿ ಪ್ರತ್ಯಕ್ಷ ತಮ್ಮ ಖ್ಯಾತಿಯನ್ನು ಪ್ರಕಟ ಮಾಡಿ, ಮುಂದೆ ನರಸಿಂಹ ಸರಸ್ವತಿಗಳೆಂಬ ಹೆಸರಿನಿಂದ ಅವತರಿಸಿ ಪ್ರಖ್ಯಾತರಾದರು. || ೪೧ || ಎಂದು ಸಿದ್ಧರು ಹೇಳಿದಂತೆ ಸರಸ್ವತಿ ಗಂಗಾಧರನು ಶ್ರೋತೃಗಳಿಗೆ ವಿಸ್ತಾರವಾಗಿ ಹೇಳಿ, ಮನೋಹರವಾದ ಈ ಗುರುಚರಿತ್ರೆಯನ್ನು ಕೇಳುತ್ತ ಹೋದರೆ ಸಕಲಾಭೀಷ್ಟಗಳು ಸಾಧಿಸುವವು ಎಂದು ಹೇಳಿದನು. || ೪೨ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಭಕ್ತ ಸಂಕಟ ಹರಣಂ ನಾಮ ದಶಮೋಧ್ಯಾಯಃ || ೧೦ || ಶ್ರೀ ಗುರುದೇವದತ್ತ ||

**— ೧೦ನೇ ಅಧ್ಯಾಯ ಸಮಾಪ್ತ —**

# ೧೧ನೇಯ ಅಧ್ಯಾಯ



## — ಶ್ರೀಪಾದ ಶ್ರೀ ವಲ್ಲಭರು ಶ್ರೀ ನರಸಿಂಹಸರಸ್ವತಿಯಾಗಿ ಹುಟ್ಟಿದ್ದು ಹಾಗು ಅವರ ಬಾಲ್ಯ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆ ಮೇಲೆ ನಾಮ ಧಾರಕನು ಸಿದ್ಧರನ್ನು ಕುರಿತು— ಸ್ವಾಮೀ, ಕೃಪಾಸಿಂಧುವೇ, ಶ್ರೀಪಾದ ಶ್ರೀ ವಲ್ಲಭರ ಅವತಾರ ಪರಂಪರೆಯು ಹ್ಯಾಗಾಯಿತೆಂಬದನ್ನು ನನಗೆ ವಿಸ್ತಾರವಾಗಿ ಹೇಳಬೇಕೆಂದು ಬೇಡಿಕೊಂಡನು. ॥ ೧ ॥ ಆಗ ಸಿದ್ಧರು—ವತ್ಸಾ, ನಾಮಧಾರಕಾ ಕೇಳು. ಶ್ರೀಪಾದರು ಮುಂದೆ ಹ್ಯಾಗೆ ಅವತಾರ ಮಾಡುವರೆಂಬ ಬಗ್ಗೆ ನಿನಗೆ ಈ ಮೊದಲು ಒಬ್ಬ ವಿಧವಾ ವಿಪ್ರಸ್ತ್ರೀಯು ಅವರನ್ನು ಕುರಿತು— ತಮ್ಮಂಥ ಪುತ್ರನೇ ತನಗೆ ಆಗಬೇಕೆಂದು ಕೇಳಿದ್ದಕ್ಕೆ ಶ್ರೀ ಗುರುಗಳು ಆಕೆಗೆ— ನೀನು ಶನಿಪ್ರದೋಷದಲ್ಲಿ ಶ್ರೀ ಶಂಕರನನ್ನು ಪೂಜಿಸು ಅದರಿಂದ ಶ್ರೀ ಹರಿಯು ನಿನ್ನ ಪುತ್ರನಾಗುವನೆಂದು ಹೇಳಿದ್ದಿಲ್ಲವೇ ? ॥ ೨ ॥ ಈಗ ಅದರ ಮುಂದಿನ ಕಥೆಯನ್ನು ನಿನಗೆ ಹೇಳುವೆನು ಕೇಳು. ಶ್ರೀಗುರುಗಳ ಉಪದೇಶದಂತೆ ಆ ವಿಪ್ರ ಸ್ತ್ರೀಯು ಶನಿಪ್ರದೋಷದಲ್ಲಿ ಶ್ರೀಶಂಕರನನ್ನು ಭಕ್ತಿಯಿಂದ ಪೂಜಿಸುತ್ತ ಮನಸ್ಸಿನಲ್ಲಿ ತನಗೆ ಗುರುಗಳಂಥ ಪುತ್ರನೇ ಆಗಬೇಕೆಂಬ ವಾಸನಾ ಇಟ್ಟುಕೊಂಡು ಕೆಲವು ದಿವಸಗಳ ಮೇಲೆ ಮರಣವನ್ನು ಹೊಂದಿದಳು ॥ ೩ ॥ ಮುಂದೆ ಅವಳು ಉತ್ತರ ದೇಶದಲ್ಲಿ " ಕರಂಜನಗರ " ಎಂಬ ಗ್ರಾಮದಲ್ಲಿ ವಾಜಸನೇಯ ಶಾಖೆಯ ಒಬ್ಬ ಬ್ರಾಹ್ಮಣ ವಂಶದಲ್ಲಿ ಹುಟ್ಟಿದಳು ॥ ೪ ॥ ಅವಳ ಜಾತಕದ ಪ್ರಕಾರ ಅವಳ ತಂದೆ–ತಾಯಿಗಳು " ಅಂಬಾಭವಾನಿ " ಎಂಬ ಹೆಸರನ್ನಿಟ್ಟು ಒಳ್ಳೇ ಪ್ರೀತಿಯಿಂದ ಸಲಹುತ್ತಿದ್ದರು. ॥ ೫ ॥ ಹೀಗೆ ಆಕೆಯು ತಂದೆ–ತಾಯಿಗಳ ಮನೆಯಲ್ಲಿ ಅತಿ ಪ್ರೀತಿಯಿಂದ ಬೆಳೆಯುತ್ತ ಲಗ್ನಕ್ಕೆ ಯೋಗ್ಯಳಾದಳು. ಆಗ ಆಕೆಯ ತಂದೆ–ತಾಯಿಗಳು ಅದೇ ಗ್ರಾಮದಲ್ಲಿ ಸದಾ ಶಿವಪೂಜೆಯನ್ನು ಮಾಡುತ್ತಿರುವಂಥ " ಮಾಧವ " ನೆಂಬ

ಬ್ರಾಹ್ಮಣನಿಗೆ ಅತಿ ಪ್ರೀತಿಯಿಂದ ಕನ್ಯಾದಾನ ಮಾಡಿಕೊಟ್ಟು ಒಳ್ಳೇ ಉತ್ಸಾಹದಿಂದ ಲಗ್ನ ಮಾಡಿದರು. ॥ ೬-೭ ॥ ಆಕೆಯು ಪತಿಗೃಹಕ್ಕೆ ಹೋಗಿ ಸದಾಚಾರದಿಂದ ನಡೆಯುತ್ತ ಪೂರ್ವಜನ್ಮದ ವಾಸನಾನುಸಾರವಾಗಿ ದಿನಾಲು ಭಕ್ತಿಯಿಂದ ಈಶ್ವರನ ಪೂಜಾ ಮಾಡುತ್ತಿದ್ದಳು. ॥ ೮ ॥ ಇದಲ್ಲದೆ ಆ ದಂಪತಿಗಳು ಶನಿಪ್ರದೋಷದಲ್ಲಿ ಸಹ ಅತಿ ಹರ್ಷದಿಂದಲೂ ಏಕಮನಸ್ಸಿನಿಂದಲೂ ಭಕ್ತಿಪುರಸ್ಸರವಾಗಿಯೂ ಈಶ್ವರನನ್ನು ಪೂಜಿಸುತ್ತಿದ್ದರು ॥ ೯ ॥ ಹೀಗೆ ಆಕೆಯು ಶನಿ ತ್ರಯೋದಶಿಯಲ್ಲಿ ಹದಿನಾರು ವರುಷ ವಿಶೇಷವಾಗಿ ಪೂಜಿಸಿದಮೇಲೆ ಗರ್ಭಿಣಿಯಾದಳು. ॥ ೧೦ ॥ ಆ ಮಾಧವ ಬ್ರಾಹ್ಮಣನು ಆಕೆಯ ೩ನೇ ಹಾಗು ೫ನೇ ತಿಂಗಳುಗಳಲ್ಲಿ ಬಹು ಹರ್ಷದಿಂದ ಉತ್ಸವ ಮಾಡಿದನು. ಆಗ ಆಕೆಗೆ ಉತ್ತಮ ಬಯಕೆಗಳಾಗಿ ಆವಳು ಬ್ರಹ್ಮಜ್ಞಾನವನ್ನು ಹೇಳಹತ್ತಿದಳು. ॥ ೧೧ ॥ ಆ ಶ್ರೇಷ್ಠ ಬ್ರಾಹ್ಮಣನು ಆಕೆಯ ೮ನೇ ತಿಂಗಳಲ್ಲಿ ಸೀಮಂತೋತ್ಸವ ಮಾಡಿದನು. ಆಗ ಆ ಊರ ಮುತ್ತೈದೆಯರೆಲ್ಲರಿಗೂ ಅಪರಿಮಿತ ಬಾಗಿಣಗಳನ್ನು ಕೊಡಿಸಿದನು. ಆಗ ಅವರೆಲ್ಲರೂ ಕೂಡಿ ಆಕೆಗೆ ಆರತಿಯನ್ನು ಮಾಡಿ ಉತ್ತಮ ಆಶೀರ್ವಾದವನ್ನು ಮಾಡಿದರು. ॥ ೧೨ ॥ ಈ ಪ್ರಕಾರ ಒಂಬತ್ತು ತಿಂಗಳು ತುಂಬಿದಮೇಲೆ ಆಕೆಯು ಒಂದು ಶುಭದಿವಸದಲ್ಲಿ ಸುಕುಮಾರನನ್ನು ಪಡೆದಳು. ಮಗನು ಹುಟ್ಟಿದನೆಂದು ಆ ದಂಪತಿಗಳು ಬಹಳ ಸಂತೋಷಬಟ್ಟರು. ॥ ೧೩ ॥ ಎಲೈ ನಾಮಧಾರಕನೇ ಕೇಳು, ಆ ಕೂಸು ಹುಟ್ಟಿದಕೂಡಲೆ "ಓಂ" ಎಂಬ ಶಬ್ದವನ್ನು ಉಚ್ಚರಿಸಿತು. ಅದನ್ನು ಕಂಡು ಅಲ್ಲಿ ಬಂದ ಯಾವತ್ತು ಜನರು ಬೆರಗಾಗಿ— ಇದು ಒಳ್ಳೇ ಆಶ್ಚರ್ಯವು ಎಂದನ್ನುತ್ತಿದ್ದರು. ॥ ೧೪ ॥ ಆ ಮಾಧವನು ಆಗ ಜಾತಕರ್ಮ ಮಾಡಿ ಬ್ರಾಹ್ಮಣರಿಗೆ ದಕ್ಷಿಣೆಯನ್ನು ಕೊಟ್ಟನು. ಆಮೇಲೆ ಜೋಯಿಸರು ಆ ಕೂಸಿನ ಜನ್ಮಲಗ್ನದ ಮೇಲಿಂದ ಜಾತಕವನ್ನು ಬರೆದು ಫಲವನ್ನು ಹೇಳಹತ್ತಿದರು. ॥ ೧೫ ॥ ಎಲೈ ಮಾಧವ ಬ್ರಾಹ್ಮಣನೇ ಈ ಹುಡುಗನು ಹುಟ್ಟಿದ ಮುಹೂರ್ತವು ಒಳ್ಳೇ ಅತ್ಯುತ್ತಮವಾಗಿದೆ. ಇವನು ನಿಶ್ಚಯವಾಗಿ ಅವತಾರಿ ಪುರುಷನಾಗಿದ್ದು ಯಾವತ್ತರಿಗೂ ಗುರುವಾಗುವನು. ॥ ೧೬ ॥ ಇವನ ಅನುಗ್ರಹವನ್ನು ಹೊಂದಿದವರು ಜಗತ್ತಿಗೆ ವಂದ್ಯರಾಗುವರು. ಈತನ ವಾಕ್ಯವೇ ಎಲ್ಲರಿಗೂ ಪ್ರಮಾಣವಾಗುವದು.

ಇವನ ಚರಣವು ಚಿಂತಾಮನಿಗೆ ಸಮಾನವಾಗುವದು. ॥ ೧೭ ॥ ಅಷ್ಟಸಿದ್ಧಿಗಳು ಯಾವಾಗಲೂ ಇವನ ಮನೆಯ ಬಾಗಿಲು ಕಾಯುವರು. ಇವನ ಮನೆಯಲ್ಲಿ ನವನಿಧಿಗಳು ಸದಾ ವಾಸವಾಗಿರುವವು. ॥ ೧೮ ॥ ಈತನಿಗೆ ಹೆಂಡಿರು-ಮಕ್ಕಳು ಮಾತ್ರ ಆಗುವದಿಲ್ಲ. ಈತನು ತ್ರಿಭುವನಗಳಲ್ಲಿ ಪೂಜ್ಯನಾಗುವನು. ಇವನ ದರ್ಶನಮಾತ್ರದಿಂದ ಪತಿತನು ಪುನೀತನಾಗುವನು. ॥ ೧೯ ॥ ಇವನು ನಿಶ್ಚಯವಾಗಿ ಅವತಾರಿ ಪುರುಷನೆಂದು ತಿಳಿದು ವಿಶ್ವಾಸಮಾಡಿರಿ. ನೀವು ಇದರಲ್ಲಿ ಸ್ವಲ್ಪಾದರೂ ಸಂಶಯ ಮಾಡಬೇಡಿರಿ ಎಂದು ನಮಸ್ಕರಿಸಿ ॥ ೨೦ ॥ ಆ ಜೋಯಿಸರು ಮತ್ತೆ ಆ ಬ್ರಾಹ್ಮಣನನ್ನು ಇವನು ಇದ್ದಲ್ಲಿ ದೈನ್ಯವೂ ಕಲಿಭಯವೂ ಇರುವದಿಲ್ಲ. ॥ ೨೧ ॥ ನೀವು ಮನಸ್ಸಿನಲ್ಲಿ ಏನೇನು ಇಚ್ಛಿಸುವಿರೋ ಅದೆಲ್ಲವೂ ಈತನಿಂದ ಸಾಧಿಸುವದು. ಇವನ ಪಾಲನ-ಪೋಷಣ ಮಾಡುವದರಿಂದ ನಿಮ್ಮ ಮನೆಯಲ್ಲಿ ಸೌಖ್ಯವುಂಟಾಗುವದು. ॥ ೨೨ ॥ ಎಂದು ಆ ಬಾಲಕನ ಜಾತಕದ ಫಲವನ್ನು ಕೊಟ್ಟು ಮನ್ನಿಸಿದರು. ॥ ೨೩ ॥ ಆಮೇಲೆ ಜೋಯಿಸರು ಹೋದರು ಇತ್ತ ಆ ತಾಯಿ-ತಂದೆಗಳು ಆನಂದಸಾಗರದಲ್ಲಿ ಮುಳುಗಿ ಕೂಸಿಗೆ ದೃಷ್ಟಿಯಾದೀತೆಂದು ಹಣ್ಣು-ಕಾಯಿ ಮುಂತಾದವುಗಳನ್ನು ನಿವಾಳಿಸಿದರು ॥ ೨೪ ॥ ಆಮೇಲೆ ಅಲ್ಲಿ ಬಂದ ಜನರು ಈ ದಿವಸ ಹುಡುಗನು ಹುಟ್ಟಿದಕೂಡಲೆ ಓಂಕಾರವನ್ನುಚ್ಚರಿಸುವ ಆಶ್ಚರ್ಯವನ್ನು ನೋಡಿದೆವು ಎಂದು ಆಡುವ ಸುದ್ದಿಯು ಊರತುಂಬ ಹಬ್ಬಲು ಎಲ್ಲರೂ ಆಶ್ಚರ್ಯಪಟ್ಟರು ॥ ೨೫ ॥ ಆ ಮೇಲೆ ಆ ಸಂಗತಿಯನ್ನು ಕೇಳಿದ ಆ ನಗರದ ಜನರೆಲ್ಲರೂ ಆ ವಿಚಿತ್ರ ಶಿಶುವನ್ನು ನೋಡಲಿಕ್ಕೆ ತಮ್ಮ ಇಷ್ಟಮಿತ್ರ, ಆಪ್ತೇಷ್ಟರೊಡನೆ ಬರುತ್ತಿದ್ದರು. ಆದರೆ ಆ ಕೂಸಿಗೆ ದೃಷ್ಟಿಯಾದೀತೆಂದು ಆ ತಂದೆ-ತಾಯಿಗಳು ಒಂದು ಪಳಸಹಿತ ಆ ಕೂಸನ್ನು ಯಾರಿಗೂ ತೋರಿಸುತ್ತಿದ್ದಿಲ್ಲ ॥ ೨೬ ॥ ಮತ್ತು ಮಾಯಾ-ಮೋಹದಿಂದ ಆ ತಂದೆ-ತಾಯಿಗಳು ದೃಷ್ಟಿಯಾದೀತೆಂದು ಆ ಕೂಸಿಗೆ ಅಂಗಾರವನ್ನು ಹಚ್ಚಿ, ಕರೇದಾರವನ್ನು ಮಂತ್ರಿಸಿ ರಕ್ಷಣೆಯನ್ನು ಕಟ್ಟುತ್ತಿದ್ದರು. ॥ ೨೭ ॥ ಪರಮಾತ್ಮನ ಅವತಾರವಾದವನಿಗೆ ದೃಷ್ಟಿಯೆಲ್ಲಿಂದಾಗಬೇಕು ? ಚಮತ್ಕಾರವಾದ ಲೌಕಿಕ ಧರ್ಮದಿಂದ ಆವರು ಆ ಕೂಸನ್ನು ರಕ್ಷಿಸುತ್ತಿದ್ದರು. ॥ ೨೮ ॥ ಈ ಪ್ರಕಾರ ಆ ಬಾಲಕನು ಬೆಳೆಯುತ್ತ ೧೦ ದಿವಸ

ಗಳಾದಮೇಲೆ ೧೧ನೇ ದಿವಸ ಶುದ್ಧರಾಗಿ ೧೨ನೇ ದಿವಸ ಆ ಉತ್ತಮ ಬ್ರಾಹ್ಮಣನು ನಾಮಕರಣವನ್ನು ಮಾಡಿ, || ೨೯ || ತೊಟ್ಟಿಲದಲ್ಲಿ ಹಾಕಿ ಆ ಕೂಸಿಗೆ ಜಾತಕದ ಪ್ರಕಾರ "ಶಾಲಿಗ್ರಾಮದೇವ" ಎಂಬ ವಿಖ್ಯಾತವಾದ ಜನ್ಮನಾಮವನ್ನೂ ಧರ್ಮ-ಕರ್ಮಸಾರ ನರಹರಿ ಅಥವಾ ನರಸಿಂಹ ಸರಸ್ವತಿ ಎಂದು ವ್ಯವಹಾರದಲ್ಲಿ ಕರೆಯುವ ಹೆಸರನ್ನೂ ಇಟ್ಟರು. || ೩೦ || ತಾಯಿಯು ಆ ಬಾಲಕನಮೇಲೆ ಬಹಳ ಮಮತ್ವ ತೋರಿಸುತ್ತ ಪ್ರೀತಿಯಿಂದ ಜೋಪಾನ ಮಾಡುತ್ತ ಮನಸ್ಸಿನಲ್ಲಿ— ನನ್ನ ಸ್ವಲ್ಪವಾದ ಮೊಲೆ ಹಾಲು ಈ ಕೂಸಿಗೆ ಸಾಲುವದಿಲ್ಲ. ಎಂದೆನ್ನುತ್ತ || ೩೧ || ಪತಿಯನ್ನು ಕುರಿತು— ಸ್ವಾಮೀ, ಈ ಕೂಸಿಗೆ ನನ್ನ ಸ್ತನ್ಯಪಾನವು ಸಾಲುವದಿಲ್ಲ ಕಾರಣ ಈ ಕೂಸಿಗೆ ಸ್ತನಪಾನಮಾಡಿಸಲಿಕ್ಕೆ ಬೇರೆ ಒಬ್ಬ ಹೆಂಗಸನ್ನಾದರೂ ನೇಮಿಸಿರಿ. || ೩೨ || ಅಥವಾ ಒಂದು ಆಡನ್ನಾದರೂ ಕೊಳ್ಳಿರಿ ಇಲ್ಲದಿದ್ದರೆ ನನ್ನ ಮೊಲೆಹಾಲಿನಿಂದ ಈ ಕೂಸಿನ ಹೊಟ್ಟೆ ತುಂಬುವದಿಲ್ಲ ಎಂದು ಅಂದಳು. ತಾಯಿಯ ಮಾತುಕೇಳಿ ಆ ಬಾಲಕನು ನಗುತ್ತ ತನ್ನ ಬಲಗೈಯಿಂದ ತಾಯಿಯ ಸ್ತನವನ್ನು ಮುಟ್ಟಿದನು. || ೩೩ || ಕೂಡಲೆ ಆಕೆಯ ಸ್ತನದಿಂದ ೩೨ ಧಾರೆಗಳಾಗಿ ಹಾಲು ಸುರಿಯಹತ್ತಿ ಆಕೆಯು ಉಟ್ಟ ವಸ್ತ್ರಗಳೆಲ್ಲ ತೋಯ್ದು ವಿಚಿತ್ರವಾಗಿ ಭೂಮಿಯಲ್ಲಿ ಹರಿಯಹತ್ತಿತು. || ೩೪ || ಆದನ್ನು ನೋಡಿ ಆ ತಾಯಿ-ತಂದೆಗಳು ಆಶ್ಚರ್ಯಬಟ್ಟು— ಎಲೈ ಬಾಲಕನೇ ಈಗಲೇ ಪ್ರಕಟನಾಗಬೇಡ ಗೌಪ್ಯವಾಗಿರು ಎಂದು ಹೇಳಿ ಆ ಬಾಲಕನ ಚರಣಕ್ಕೆ ನಮಸ್ಕಾರ ಮಾಡಿ ಆಡಿಸುತ್ತಿದ್ದರು. || ೩೫ || ತಾಯಿಯು ಕೆಲವು ವೇಳೆ ಆ ಬಾಲಕನನ್ನು ತೊಟ್ಟಿಲದಲ್ಲಿ ಮಲಗಿಸಿ ಒಳ್ಳೇ ಆನಂದದಿಂದ ಜೋಗಳ ಪದವನ್ನು ಹಾಡುತ್ತಿದ್ದಳು. ಆದರೆ ಆ ಕೂಸು ತೊಟ್ಟಿಲಪಲ್ಲಿ ಇರದೆ ಸದಾ ನೆಲದಮೇಲೆಯೇ ಆಡುತ್ತಿತ್ತು. || ೩೬ || ಈ ಪ್ರಕಾರ ಆ ಬಾಲಕನು ಬೆಳೆಯುತ್ತಿರಲು ತಂದೆ-ತಾಯಿಗಳು ಅವನಿಗೆ ನಮಸ್ಕರಿಸುತ್ತಿದ್ದರು. ಆ ಕೂಸು ಒಂದು ವರ್ಷದ್ವಾದರೂ ಏನೂ ಮಾತಾಡುತ್ತಿದ್ದಿಲ್ಲ ಆಗ ಆ ಮಾತಾಪಿತೃಗಳು ಕೂಸು ಇನ್ನೂ ಮಾತಾಡಲೊಲ್ಲದಲ್ಲ! ಏನು ಮಾಡಬೇಕು ಎಂದು ಚಿಂತಿಸುತ್ತಿದ್ದರು. || ೩೭ || ಒಮ್ಮೊಮ್ಮೆ ತಾಯಿಯು ಆ ಕೂಸನ್ನು ತೊಡೆಯಮೇಲೆ ಕೂಡ್ರಿಸಿಕೊಂಡು ಗಲ್ಲ ಹಿಡಿದು

ಮುದ್ದುಕೊಟ್ಟು— ಅಪ್ಪಾ! ಮಗುವೇ ಓಂಕಾರ ಶಬ್ದವನ್ನಾದರೂ ಉಚ್ಚರಿಸು ಎಂದು ಅನ್ನುತ್ತಿದ್ದಳು ಅಂದರೂ ಆ ಕೂಸು ಮಾತಾಡುತ್ತಿದ್ದಿಲ್ಲ. ಆದರಿಂದ ಆ ದಂಪತಿಗಳು— ಅಯ್ಯೋ! ನಮ್ಮ ದುರ್ದೈವದಿಂದ ಈ ಹುಡುಗನು ಮೂಕನಾದನು ಎಂದು ಮನಸ್ಸಿನಲ್ಲಿ ಚಿಂತಿಸುತ್ತ, ॥ ೩೮ ॥ ಮತ್ತೆ ಜೋಯಿಸರನ್ನು ಕರೆಯಿಸಿ— ಸ್ವಾಮೀ, ಜೋಯಿಸರೇ, ಈ ಬಾಲಕನು ಮಾತಾಡಲಿಕ್ಕೆ ವಿಶೇಷವಾಗಿ ಏನು ಉಪಾಯ ಮಾಡಬೇಕೆಂಬದನ್ನು ಹೇಳಿರಿ ಎಂದು ಮೇಲಿಂದಮೇಲೆ ಕೇಳುತ್ತಿದ್ದರು ॥ ೩೯ ॥ ಆಗ ಜೋಯಿಸರು— ನಿಮ್ಮ ಕುಲದೇವತೆಯ ಆರಾಧನೆ ಮಾಡಿರಿ ಮತ್ತು ಆದಿತ್ಯವಾರದಿವಸ ಅಶ್ವತ್ಥದೆಲೆಯಲ್ಲಿ ಕೂಸಿಗೆ ಮೂರುಸಾರೆ ಅನ್ನವನ್ನು ಹಾಕಿರಿ ಎಂದು ಹೇಳಿದರು ॥ ೪೦ ॥ ಆಗ ಕೆಲವರು ಇವನು ಮೂಕನಾದರೂ ಇವನಿಗೆ ವಿವೇಕದಿಂದ ಕಲಿಸಬೇಕು ಎಂದರು ಆದರಂತೆ ಬಾಲಭಾಷೆಯನ್ನು ಕಲಿಸಹತ್ತಿದರೂ ಆ ಕೂಸು ಏನೂ ಮಾತಾಡಲಿಲ್ಲ. ॥ ೪೧ ॥ ಆದರೆ ಆ ಬಾಲಕನು ನಗುತ್ತ ಓಂಕಾರವನ್ನು ಮಾತ್ರ ಉಚ್ಚರಿಸಿದರು ಬೇರೆ ಏನೂ ಮಾತಾಡಲಿಲ್ಲ ಆ ಓಂಕಾರ ಶಬ್ದವನ್ನು ಕೇಳಿ ಎಲ್ಲರೂ ಆಶ್ಚರ್ಯಹೊಂದಿದರು. ॥ ೪೨ ॥ ಆಗ ಕೆಲವರು— ಇದೊಂದು ಹೊಸ ಸಂಗತಿಯಾಯಿತು ಈ ಕೂಸಿಗೆ ಸರ್ವ ಜ್ಞಾನವೂ ಅದೆ. ಹೇಳಿದ ಎಲ್ಲ ಮಾತನ್ನು ಕಿವಿಯಿಂದ ಕೇಳಿ ತಿಳಕೊಂಡು ಯಾವ ಕಾರಣದಿಂದಲೂ ಉತ್ತಮವಾಗಿ ಬಾಯಿಂದ ಮಾತ್ರ ಏನೂ ಮಾತಾಡುವದಿಲ್ಲ ಎಂದೆನ್ನುತ್ತಿದ್ದರು. ॥ ೪೩ ॥ ಹೀಗೆ ಬರಬರುತ್ತ ಆ ಬಾಲಕನು ಏಳು ವರ್ಷದವನಾದರೂ ಮಾತಾಡಲಿಲ್ಲ. ಆಗ ಮಾತಾ-ಪಿತೃಗಳು ನಮ್ಮ ದುರ್ದೈವದಿಂದ ಮಗನು ಮೂಕನಾದನೆಂದು ಚಿಂತಿಸುತ್ತ, ॥ ೪೪ ॥ ಬ್ರಾಹ್ಮಣರನ್ನು ಕರೆದು— ಸ್ವಾಮೀ, ಈ ಮಗನು ಏಳು ವರ್ಷದವನಾಗಿ ಮುಂಜಿವಿಗೆ ಯೋಗ್ಯನಾದನು ಆದರೆ ಇವನು ಒಂದೂ ಮಾತಾಡುವದಿಲ್ಲ ಇವನ ಮುಂಜಿವೆಯನ್ನು ಹ್ಯಾಗೆ ಮಾಡಬೇಕೆಂದು ಕೇಳಿದರು. ॥ ೪೫ ॥ ಆಗ ಬ್ರಾಹ್ಮಣರು— ಈಗ ಬಿಡಿರಿ, ಎಂಟು ವರುಷದವನಾದಬಳಿಕ ಬ್ರಾಹ್ಮಣರ ಆಚಾರದಂತೆ ವಿಧಿಪ್ರಕಾರ ಉಪನಯವನ್ನು ಮಾಡಲೇಬೇಕೆಂದು ಎಂದು ಅಂದರು. ॥ ೪೬ ॥ ಆಗ ಆ ಮಾತಾ-ಪಿತೃಗಳು ಚಿಂತಿಸುತ್ತ ಇವರು ಆಶ್ಚರ್ಯವಾಗಿ ಮೂಕನಾದವನು ಇವ

ನಿಗೆ ಗಾಯತ್ರೀ ಮಂತ್ರವನ್ನು ಹ್ಯಾಗೆ ಉಪದೇಶ ಮಾಡಬೇಕು? ನಮ್ಮ ಅದೃಷ್ಟವು ಎಂಥಾದ್ದಾಯಿತಲ್ಲಾ? ॥ ೪೭ ॥ ನಾವು ಶಿವನನ್ನೂ ಗೌರಿಯನ್ನೂ ನಿತ್ಯ ಆರಾಧಿಸಿದೆವು ಮತ್ತು ಶನಿಪ್ರದೋಷದಲ್ಲಿ ಶಿವಪೂಜೆಯನ್ನು ಮಾಡಿದೆವು? ಅದು ವ್ಯರ್ಥವಾಯಿತೇನು? ॥ ೪೮ ॥ ಆಗ ಈಶ್ವರನಾದರೂ ವರವನ್ನು ಕೊಟ್ಟನು ಆದರಂತೆ ಸುಲಕ್ಷಣ ಮಗನೂ ಹುಟ್ಟಿದನು ಆದರೆ ಇವನು ಮಾತಾಡುವದಿಲ್ಲ ಈಗೇನು ಮಾಡಬೇಕು? ಎಂದು ಶಂಕರನನ್ನು ನೆನೆದು ॥ ೪೯ ॥ ದೇವಾ ಶಂಕರಾ, ನಮ್ಮ ವಂಶದಲ್ಲಿ ಇವನೊಬ್ಬನೇ ಮಗನಾಗಿದ್ದಾನೆ. ಇವನ ಹೊರತು ಸ್ವಪ್ನದಲ್ಲಿ ಸಹ ನಾವು ಬೇರೆ ಮಕ್ಕಳನ್ನು ಕಂಡಿಲ್ಲ ಇವನು ನಮ್ಮನ್ನು ರಕ್ಷಿಸುವನೆಂದು ಬಹಳ ಆಶಾ ಮಾಡಿದ್ದೆವು. ॥ ೫೦ ॥ ಆದರೆ ನಮ್ಮ ಮನಸ್ಸಿನ ಇಚ್ಛೆಯಂತೆ ಆಗಲಿಲ್ಲ. ನಮಗೆ ಇವನು ಅವತಾರಿ ಪುರುಷ ಇದ್ದೂ ನಿರ್ಗುಣ ರೂಪದಿಂದ ಇಲ್ಲದಂತಾಯಿತು. ನಾವು ಶನಿಪ್ರದೋಷ ವ್ರತ ಮಾಡಿದ್ದಕ್ಕೆ ಶ್ರೀ ಶಂಕರನು ಎಂಥ ವರ ಕೊಟ್ಟನಲ್ಲ? ಎಂದು ದುಃಖಿಸಿದರು ॥ ೫೧ ॥ ಈ ಪ್ರಕಾರ ತಾಯಿಯು ನಾನಾರೀತಿಯಾಗಿ ಬಹುವಾಗಿ ದುಃಖಿಸುವದನ್ನು ನೋಡಿ ಆ ಬಾಲಕನು ತಾಯಿಯ ಹತ್ತರ ಬಂದು ಸನ್ನೆಯಿಂದ ಆಕೆಯನ್ನು ಸಮಾಧಾನ ಪಡಿಸಿ ॥ ೫೨ ॥ ಮನೆಯಲ್ಲಿ ಹೋಗಿ ಒಂದು ಕಬ್ಬಿಣದ ಸಲಾಕಿಯನ್ನು ಕೈಯಲ್ಲಿ ಹಿಡಕೊಂಡು ಬಂದನು. ಕೂಡಲೆ ಅದು ನೂರು ನಂಬರಿನ ಶುದ್ಧ ಸುವರ್ಣದ್ದಾಯಿತು. ॥ ೫೩ ॥ ಆಗ ಅವನು ಅದನ್ನು ತಂದು ತಾಯಿಯ ಕೈಯಲ್ಲಿ ಕೊಟ್ಟನು. ಅವಳು ಅದನ್ನು ಕಂಡು ಬಹಳ ಆಶ್ಚರ್ಯಬಟ್ಟು— ಪತಿಯನ್ನು ಕರೆದು ಅದನ್ನು ತೋರಿಸಿ ॥ ೫೪ ॥ ಅದನ್ನು ಮುಚ್ಚಿಟ್ಟು, ಆ ಬಾಲಕನ ಲೀಲೆಯನ್ನು ನೋಡಬೇಕೆಂದು ಅವನನ್ನು ಮತ್ತೆ ಮನೆಯಲ್ಲಿ ಕರಕೊಂಡು ಹೋಗಿ ಅವನ ಕೈಯಲ್ಲಿ ಮತ್ತೊಂದು ಲೋಹವನ್ನು ಕೊಟ್ಟಳು. ॥ ೫೫ ॥ ಆ ಬಾಲಕನು ಅದನ್ನು ಅಮೃತ ದೃಷ್ಟಿಯಿಂದ ನೋಡಿದಕೂಡಲೆ ಆ ಲೋಹವೂ ಸುವರ್ಣದಾಯಿತು. ಆಗ ಆಕೆಯು ವಿಶ್ವಾಸವನ್ನು ಹೊಂದಿ— ಇವನು ನಿಶ್ಚಯವಾಗಿ ಅವತಾರಿ ಪುರುಷನು. ॥ ೫೬ ॥ ಎಂದು ಅಂದು ಆ ದಂಪತಿಗಳು ಮಗನನ್ನು ಅಪ್ಪಿಕೊಂಡು ವಿನಯದಿಂದ— ಎಲೈ ಮಗನೇ, ನೀನು ನಮ್ಮನ್ನು ಉದ್ಧರಿಸುವ ಶಿರೋಮಣಿಯೂ

ಕುಲದೀಪಕನೂ ಅವತಾರಿಪುರುಷನೂ ಆಗಿರುತ್ತೀ ‖ ೫೬-೫೭ ‖ ನಿನ್ನಿಂದ ನಾವು ಸರ್ವ ಸುಖವನ್ನು ಹೊಂದಿದೆವು. ನಾವು ಅಜ್ಞಾನದಿಂದ ಕೂಡಿದವರಾಗಿ ನೀನು ಮೂಕನಾದಿ ಎಂದು ಗಾಬರಿಯಾದೆವು. ಜನರಾದರೂ ನಿನಗೆ ಮೂಕನೆಂದೆನ್ನುವರು. ‖ ೫೮ ‖ ಎಲೈ ಮಗನೇ, ಪುತ್ರರಾಯಾ ನೀನು ನಮ್ಮ ಮನಸ್ಸಿನ ಇಚ್ಛೆಯನ್ನು ಪೂರ್ಣ ಮಾಡು. ನಿನ್ನ ಬಾಯಿಂದ ಎರಡು ಮುದ್ದು ಮಾತುಗಳನ್ನು ಕೇಳಬೇಕೆಂದಿರುತ್ತೇವೆ. ಎಲ್ಲಿ ಮಾತಾಡು ನೋಡೋಣ, ಎಂದು ಅಂದರು. ‖ ೫೯ ‖ ಆಗ ಆ ಬಾಲಕನು ಮಂದಹಾಸದಿಂದ ನಕ್ಕು ನನಗೆ ಉಪನಯನ ವನ್ನು ಮಾಡಿ ಕೊರಳಲ್ಲಿ ಯಜ್ಞೋಪವೀತವನ್ನೂ ಟೊಂಕಕ್ಕೆ ಮೌಂಜೀಮೇಖಳವನ್ನೂ ಧಾರಣ ಮಾಡಿರಿ ಎಂದು ಸಂಜ್ಞೆಯಿಂದ ತಾಯಿಗೆ ತೋರಿಸಿ— ಆಮೇಲೆ ನನಗೆ ಎಲ್ಲ ಮಾತುಗಳು ಬರುವವು ಎಂದು ತಿಳಿಸಿ ದನು. ‖ ೬೦-೬೧ ‖ ಆಗ ಆ ತಾಯಿ-ತಂದೆಗಳು ಸಂತೋಷಬಟ್ಟು ವಿದ್ವಾನ್ ಜೋಯಿಸರನ್ನು ಕರೆಯಿಸಿ, ಉತ್ತಮ ಮುಹೂರ್ತವನ್ನು ನೋಡಿ ಉಪನಯನ ಮಾಡುವದನ್ನು ನಿಶ್ಚಯಿಸಿ ಮುಂದೆ ಬಹುಪರಿಯಾಗಿ ಎಲ್ಲ ಸಾಮಗ್ರಿಯನ್ನು ಸಿದ್ಧಮಾಡಹತ್ತಿದರು. ‖ ೬೨ ‖ ಆಮೇಲೆ ಮಾಯಾ ಮೋಹದಿಂದ ಒಳ್ಳೇ ಪ್ರೀತಿಯಿಂದ ಮಗನಿಗೆ ರತ್ನಖಚಿತ ಅಲಂಕಾರಗಳನ್ನು ಮಾಡಿಸಿ ಸಮಾರಂಭವನ್ನು ಮಾಡಹತ್ತಿದರು. ‖ ೬೩ ‖ ಆಗ ನಾಲ್ಕೂ ವೇದಗಳನ್ನು ಬಲ್ಲ ಬ್ರಾಹ್ಮಣರು ಬಂದು ತಮ್ಮ ತಮ್ಮ ಶಾಖಾನುಸಾರವಾಗಿ ವೇದಪಠಣ ಮಾಡುತ್ತಿದ್ದರು. ಇಷ್ಟಮಿತ್ರರೂ ಸಮಸ್ತ ಗೋತ್ರಜರೂ ಬಂದು ‖ ೬೪ ‖ ಉಪನಯನ ಮಂಟಪವನ್ನು ನಾನಾರೀತಿಯಿಂದ ವಿಚಿತ್ರವಾಗಿ ಅಲಂಕರಿಸಿದರು ಆ ಬ್ರಾಹ್ಮಣನು ಅಪಾರ ದ್ರವ್ಯವನ್ನು ಖರ್ಚು ಮಾಡುತ್ತ ಆನಂದಪಡು ತ್ತಿದ್ದನು. ‖ ೬೫ ‖ ಮೂಕ ಹುಡುಗನಿಗೆ ಉಪನಯನ ಮಾಡುತ್ತಾರೆಂಬ ಸಂಗತಿಯನ್ನು ಕೇಳಿ ಆ ಊರ ಜನರು ಆಶ್ಚರ್ಯಬಟ್ಟು— ಮೂಕನ್ನ ಹುಡುಗನಿಗೆ ಇಷ್ಟು ಸಾಮಾನುಗಳ ಸಿದ್ಧತೆಯೇ? ಆ ಬ್ರಾಹ್ಮಣನಿಗೆ ಭ್ರಾಂತಿ ಬಂದಿರುತ್ತದೆ. ಸುಮ್ಮನೆ ದ್ರವ್ಯವನ್ನು ಖರ್ಚು ಮಾಡುವನು. ‖ ೬೬ ‖ ಇಷ್ಟು ಖರ್ಚು ಮಾಡಿ ಹುಡುಗನ ಮುಂಜಿಯನ್ನು ಮಾಡಿದರೂ ಗಾಯತ್ರೀ ಮಂತ್ರವನ್ನು ಹ್ಯಾಗೆ ಉಪದೇಶಿಸುವರು? ಆಚರಣೆಯನ್ನು ಯಾವ

ರೀತಿ ನಡಿಸುವರು ? ಎಂದೆನ್ನುತ್ತಿದ್ದರು. || ೬೭ || ಆಗ ಕೆಲವರು ತಮ್ಮ ಜನರನ್ನು ಕುರಿತು-- ಸುಮ್ಮನೆ ಏನಾದರೊಂದು ಯಾಕೆ ಮಾತಾಡುತ್ತೀರಿ ? ನಮಗೆ ಬೇಕಾದಷ್ಟು ಮಿಷ್ಟಾನ್ನ ಭೋಜನವೂ ದಕ್ಷಿಣೆಯೂ ವಸ್ತ್ರಗಳೂ ದೊರೆಯುವವು, ಇಷ್ಟೇ ಸಾಕು ಮಂತ್ರ ಬರಲಿ ಬರದಿರಲಿ, ಆ ಗೊಡವೆ ನಮಗೇನು ? ಎಂದು ಅನ್ನುತ್ತಿದ್ದರು. || ೬೮ || ಈ ರೀತಿಯಾಗಿ ನಾನಾಪ್ರಕಾರದ ಜನರು ಅನೇಕತರದ ವಿಚಾರ ಮಾಡುತ್ತಿದ್ದರು. ಆದರೆ ಆ ದಂಪತಿಗಳು ಮಾತ್ರ ಅತ್ಯಂತ ಆನಂದದಿಂದ ಕಾರ್ಯ ಮಾಡುತ್ತಿದ್ದರು ಉಪನಯನದ ಮುನ್ನಾದಿನ ದೇವತಾರಾಧನೆಯನ್ನು ಮಾಡಿದರು || ೬೯ || ಎರಡನೇಯ ದಿವಸ ಅಂದರೆ ಉಪನಯನದ ದಿವಸ ತಂದೆ-ತಾಯಿಗಳು ಆ ಬಾಲಕನೊಡನೆ ಅಭ್ಯಂಗಸ್ನಾನ ಮಾಡಿ ಪುಣ್ಯಾಹವಾಚನೆಯನ್ನು ಮಾಡಿಸಿಕೊಂಡು ನಾಂದೀ ಸ್ಥಾಪನಮಾಡಿ ಬಳಿಕ ಆ ಬಾಲಕನಿಗೆ ವಿಧಿಪ್ರಕಾರ ಚೌಲಕರ್ಮ ಮಾಡಿಸಿ, ಒಳ್ಳೇ ಪರ್ಷದಿಂದ ಪುನಃ ಅಭ್ಯಂಗ ಸ್ನಾನ ಮಾಡಿಸಿದರು. ಆಮೇಲೆ ಎಲ್ಲರೂ ಬಾಲಕನಿಗೆ ಮಂತ್ರಪೂರ್ವಕವಾಗಿ ಯಜ್ಞೋಪವೀತವನ್ನು ಧಾರಣ ಮಾಡಿಸಿದರು || ೭೦ || ಆಮೇಲೆ ತಾಯಿಯು ಬಂದು ತನ್ನೊಡನೆ ಊಟ ಮಾಡುವದಕ್ಕೆ (ಮಾತೃಭೋಜನಕ್ಕೆ) ಆ ಮಗನನ್ನು ಮನೆಯೊಳಗೆ ಕರಕೊಂಡು ಹೋದಳು || ೭೧ || ಆಗ ಆ ಬಾಲಕನು ಏಕಮನಸ್ಸಿನಿಂದ ತಾಯಿಯೊಡನೆ ಊಟಮಾಡಿ ಆಕೆಯ ಅಪ್ಪಣೆಯನ್ನು ತಕ್ಕೊಂಡು ಮೌಂಜೀಬಂಧನವನ್ನು ಹೀಗೆ ಮಾಡಬೇಕೆಂದು ಹೇಳುತ್ತ ತಂದೆಯ ಹತ್ತಿರ ಬಂದನು || ೭೨ || ಆಮೇಲೆ ಬ್ರಾಹ್ಮಣರು ವಿಧಿಪೂರ್ವಕವಾಗಿ ಆ ಬಾಲಕನಿಗೆ ಮೌಂಜೀಬಂಧನವನ್ನು ಮಾಡಿ ಕೂಡಲೆ ಮಂಗಳಾಷ್ಟಕಗಳನ್ನು ಅಂದು ಸುಮುಹೂರ್ತದಲ್ಲಿ ಅಕ್ಷತಾರೋಪಣ ಮಾಡಿ ತಂದೆಯ ಕಡೆಯಿಂದ ಗಾಯತ್ರೀ ಮಂತ್ರೋಪದೇಶವನ್ನು ಮಾಡಿಸಿದರು. || ೭೩ || ಕೂಡಲೆ ಆ ಬಾಲಕನು ಆ ಮಂತ್ರವನ್ನು ಮನಸ್ಸಿನಲ್ಲಿ ಮಾತ್ರ ಉಚ್ಚರಿಸಿದನು. ಯಾರ ಮುಂದೆಯೂ ಸ್ಪಷ್ಟವಾಗಿ ಅನ್ನಲಿಲ್ಲ. || ೭೪ || ಈಪ್ರಕಾರ ಗಾಯತ್ರೀ ಮಂತ್ರೋಪದೇಶವಾದಮೇಲೆ ತಾಯಿಯು ಉತ್ತಮ ವಸ್ತ್ರಗಳನ್ನೂ ರತ್ನಖಚಿತ ಆಭರಣಗಳನ್ನೂ ತಕ್ಕೊಂಡು ಭಿಕ್ಷಾ ಹಾಕಲಿಕ್ಕೆ ಬಂದಳು. || ೭೫ || ಆಕೆಯು ಮೊದಲನೆಯ ಭಿಕ್ಷೆ

ಯನ್ನು ಕೈಯಲ್ಲಿ ತಕ್ಕೊಂಡು ಆಶೀರ್ವಾದ ಮಾಡುತ್ತ ಮಗನೇ ಭಿಕ್ಷೆಯನ್ನು ಬೇಡು ಎಂದು ಪ್ರೀತಿಯಿಂದ ಹಾಕಲಿಕ್ಕೆ ಹೋಗಲು ಆ ಬಾಲಕನು ಋಗ್ವೇದದ "ಅಗ್ನಿಮೀಳೆ" ಎಂಬ ಮಂತ್ರವನ್ನು ಹೇಳಿ ಆಚಾರ ಧರ್ಮ ಪ್ರಕಾರ ನಡೆದು ಆ ಭಿಕ್ಷೆಯನ್ನು ಸ್ವೀಕರಿಸಿದನು. ॥ ೨೬-೨೭ ॥ ಆಮೇಲೆ ತಾಯಿಯು ೨ನೇ ಭಿಕ್ಷೆಯನ್ನು ಹಾಕಲಿಕ್ಕೆ ಹೋಗಲು ಅವನು ಯಜುರ್ವೇದದ "ಇಷೇತ್ವೋರ್ಜೇತ್ವಾ" ಎಂಬ ಮಂತ್ರವನ್ನು ಅಂದು ಆ ಭಿಕ್ಷೆ ಯನ್ನು ಸ್ವೀಕರಿಸಿದನು. ಅದನ್ನು ಕಂಡು ಯಾವತ್ತೂ ಜನರು ಆಶ್ಚರ್ಯಬಟ್ಟು ಇವನು ಸಾಮಾನ್ಯನಲ್ಲವೆಂದು ತಲೆದೂಗಿದರು. ॥ ೨೮ ॥ ಆ ಮೇಲೆ ತಾಯಿಯು ೩ನೇ ಭಿಕ್ಷೆಯನ್ನು ಹಾಕಲಿಕ್ಕೆ ಬರಲು ಆ ಬಾಲಕನು "ಅಗ್ನ ಆಯಾಹಿ" ಎಂಬ ಸಾಮವೇದದ ಮಂತ್ರವನ್ನು ಗಾಯನಪೂರ್ವಕ ಅಂದು ಆ ಭಿಕ್ಷೆಯನ್ನು ಸ್ವೀಕರಿಸಿದನು. ಈಪ್ರಕಾರ ಆ ಬಾಲಕನು ಮೂರು ವೇದಗಳನ್ನು ಅಂದನು. ॥೨೯॥ ಆಗ ಆ ಸಭೆಯಲ್ಲಿ ಕೂತ ಯಾವತ್ತು ಜನರು ವಿಸ್ಮಯಹೊಂದಿದರು. ಮೂಕನಾದ ಮಗನು ನಾಲ್ಕು ವೇದಗಳನ್ನು ಅಂದನೆಂದು ತಂದೆಯು ಸಂತೋಷಬಟ್ಟು— ಆಹಾ ! ಇವನು ನಿಶ್ಚಯವಾಗಿ ಅವತಾರಿ ಪುರುಷನು. ॥ ೩೦ ॥ ಇವನಿಗೆ ಮನುಷ್ಯನೆಂದು ಅನ್ನಬಾರದು. ಇವನು ದೇವಾವತಾರವು ಎಂದು ಆ ವೇಳೆಯಲ್ಲಿ ಜಗದ್ಗುರುವಿಗೆ ನಮಸ್ಕಾರ ಮಾಡಿದನು. ॥ ೩೧ ॥ ಇಷ್ಟೆಲ್ಲ ಆದಮೇಲೆ ಬ್ರಹ್ಮಚಾರಿಯಾದ ಆ ಬಾಲಕನು ತಾಯಿಯನ್ನು ಕರೆದು— ಅವ್ವಾ, ನೀನು ನನಗೆ ಭಿಕ್ಷೆಯನ್ನು ಬೇಡೆಂದು ಹೇಳಿದಿಯಷ್ಟೇ ? ॥ ೩೨ ॥ ನಿನ್ನ ಆ ಮಾತು ಎಂದೂ ಸುಳ್ಳಾಗುವದಿಲ್ಲ. ಈಗ ನಾನು ತೀರ್ಥ ಯಾತ್ರೆಗೆ ಹೋಗಬೇಕೆಂದು ಮನಸ್ಸಿನಲ್ಲಿ ನಿಶ್ಚಯಮಾಡಿಕೊಂಡಿರುವೆನು ಆದ್ದರಿಂದ ತೀವ್ರವಾಗಿ ನನಗೆ ಅಪ್ಪಣೆ ಯನ್ನು ಕೊಡು. ॥ ೩೩ ॥ ನಾನು ಸದಾಚಾರಿಯಾದ ಬ್ರಹ್ಮಚಾರಿ ಇದ್ದು ಮನೆಮನೆಗಳಲ್ಲಿ ಭಿಕ್ಷೆ ಬೇಡಿ ಮನೋಹರವಾದ ವೇದಾಭ್ಯಾಸ ಮಾಡುವೆನು ಎಂದನು. ॥ ೩೪ ॥ ಈ ಪ್ರಕಾರದ ಮಗನ ಮಾತು ಕೇಳಿ ತಾಯಿಯು ಅತ್ಯಂತ ದುಃಖದಿಂದ ಕಣ್ಣೀರು ಸುರಿಸುತ್ತ ಮೂರ್ಛೆ ಹೊಂದಿ ಕ್ಷಣದಲ್ಲಿ ಎಚ್ಚತ್ತು ॥ ೩೫ ॥ ಮಹಾಶೋಕ ಮಾಡುತ್ತ— ಎಲೈ ಮಗನೇ ನೀನು ಮುಪ್ಪಿನಲ್ಲಿ ನಮ್ಮನ್ನು ರಕ್ಷಿಸುವಿಯೆಂದು ಮನಸ್ಸಿನಲ್ಲಿ ಬಹಳ

ಆಶೆ ಮಾಡಿದ್ದೆನು. ॥ ೮೬ ॥ ನೀನು ಇವತ್ತಿನವರೆಗೆ ಮಾತಾಡದೆ ಮೂಕನೆಂದೆನಿಸಿಕೊಂಡದ್ದರಿಂದ ॥ ೮೭ ॥ ನಾನು ನಿನ್ನ ಬಾಯಿಂದ ಒಂದಾದರೂ ಮುದ್ದುಮಾತು ಕೇಳಲಿಲ್ಲ. ಈಗ ನಿನ್ನ ಮಾತುಕೇಳಿ ಸಂತೋಷಬಟ್ಟು— ನಮ್ಮ ಈಶ್ವರನ ಪೂಜೆಯು ಫಲಿಸಿತೆಂದು ವಿಶ್ವಾಸ ಹೊಂದಿದೆವು. ॥ ೮೮ ॥ ಎಂದು ಸಾನಾರೀತಿಯಾಗಿ ಹೇಳಿ ಆ ಕುಮಾರನನ್ನು ಅಪ್ಪಿಕೊಂಡು—ಎಲೈ ಪುತ್ರನೇ ನಮ್ಮಮೇಲೆ ಅಂತಃಕರಣ ಮಾಡು ಎಂದು ಅಂದಳು. ॥ ೮೯ ॥ ಈ ಪ್ರಕಾರ ತಾಯಿಯ ಮಾತು ಕೇಳಿ ಆ ಬಾಲಕನು ಬ್ರಹ್ಮಜ್ಞಾನವನ್ನು ಹೇಳುತ್ತ— ಅಮ್ಮಾ, ನನ್ನ ಸಲುವಾಗಿ ನೀನು ಮನಸ್ಸಿನಲ್ಲಿ ಸುಮ್ಮನೆ ದುಃಖಿಸಬೇಡ, ತೀರ್ಥಯಾತ್ರೆಗೆ ಹೋಗುವದೇ ನನ್ನ ಮುಖ್ಯ ಕೆಲಸವಾಗಿದೆ. ॥ ೯೦ ॥ ತಾಯೀ, ನಿನಗೆ ನಿಶ್ಚಯವಾಗಿ ಮತ್ತೆ ನಾಲ್ಕುಮಂದಿ ಪುತ್ರರಾಗುವರು. ಏನೂ ಚಿಂತೆ ಮಾಡಬೇಡ. ಅವರು ಒಳ್ಳೇ ಮನಸ್ಸಿನಿಂದ ನಿನ್ನ ಸೇವೆಯನ್ನು ಪರೋಪರಿಯಾಗಿ ಮಾಡುವರು. ॥ ೯೧ ॥ ನೀನು ಹಿಂದಿನ ಜನ್ಮದಲ್ಲಿ ಶ್ರೀ ಶಂಕರನನ್ನು ಆರಾಧಿಸಲಿಲ್ಲವೇ ? ಎಂದು ಆಕೆಯ ತಲೆಯ ಮೇಲೆ ವರದ ಹಸ್ತವನ್ನಿಟ್ಟು ಅನುಗ್ರಹಿಸಿದನು. ಕೂಡಲೆ ಆಕೆಗೆ ಹಿಂದಿನ ಜನ್ಮದ ಸಂಗತಿಯು ನೆನಪಾಯಿತು. ॥ ೯೨ ॥ ಆಗ ಆಕೆಯು ತನ್ನ ಹಿಂದಿನ ಜನ್ಮದ ಸವಿಸ್ತಾರ ಸಂಗತಿಯನ್ನು ಸ್ಮರಣೆಗೆ ತಂದುಕೊಂಡು ಅತ್ಯಂತ ವಿಸ್ಮಯ ಹೊಂದಿ - ಇವನು ಶ್ರೀಪಾದ ಶ್ರೀ ವಲ್ಲಭನು ಎಂದು ತಿಳಿದು. ॥ ೯೩ ॥ ಅವನನ್ನು ಕಣ್ತುಂಬ ನೋಡಿ ಅವನ ಚರಣಕಮಲಗಳಿಗೆ ನಮಸ್ಕಾರ ಮಾಡಿದಳು. ಕೂಡಲೇ ಶ್ರೀಪಾದರು ಅವಳನ್ನು ಲೀಲೆಯಿಂದ ಎಬ್ಬಿಸಿ ಸಮಾಧಾನ ಮಾಡಿ ॥ ೯೪ ॥— ಜ್ಞಾನವಂತ ತಾಯಿಯೇ ಕೇಳು ನಾನು ನಿನಗೆ ಒಂದು ಗುಪ್ತ ಸಂಗತಿಯನ್ನು ಹೇಳುವೆನು. ನೀನು ಮಾತ್ರ ಆ ಸಂಗತಿಯನ್ನು ಗುಪ್ತವಾಗಿಡು. ನಾನು ಸನ್ಯಾಸಿಯು ಹಾಗು ಯತಿಯು. ಈ ಸಂಸಾರದಿಂದ ನಾನು ಅಲಿಪ್ತನಾಗಿರುವೆನು. ॥ ೯೫ ॥ ಆದಕಾರಣ ಈಗ ನಾನು ತೀರ್ಥಯಾತ್ರೆಗಳನ್ನು ಮಾಡಬೇಕಾಗಿದೆ. ಇದಲ್ಲದೆ ಈಗ ನಾನು ಹೋಗುವದಕ್ಕೆ ಮತ್ತೊಂದು ಮುಖ್ಯ ಕಾರಣವೂ ಅದೆ. ಆದ್ದರಿಂದ ಈಗ ನಾನು ನಿನ್ನ ಅಪ್ಪಣೆಯನ್ನು ಕೇಳುವೆನು ಎಂದನು. ॥ ೯೬ ॥ ಎಲೈ ಶ್ರೋತೃಗಳೇ ಈ ಪ್ರಕಾರ ಗುರುವು

ತಾಯಿಗೆ ವಿನಯದಿಂದ ಹೇಳಿದಮೇಲೆ, ಆ ತಾಯಿಯು ಪುತ್ರನಿಗೆ ವಿನಯದಿಂದ ಹೇಳುವದನ್ನು ಎಚ್ಚರದಿಂದ ಕೇಳಿರಿ. ॥ ೯೭ ॥ ಎಲೈ ಮಗನೇ, ಈಗ ನೀನು ನಮ್ಮನ್ನು ಬಿಟ್ಟು ಹೋಗಬೇಕೆನ್ನುತ್ತೀ, ಆದರೆ ನಾವು ಮನೆಯಲ್ಲಿ ನಿನ್ನ ಹೊರತು ಬೇರೆ ಮಕ್ಕಳನ್ನಂತೂ ಕಾಣಲಿಲ್ಲ ಅಂದಮೇಲೆ ನಿನ್ನನ್ನು ಬಿಟ್ಟು ನಾನು ಹ್ಯಾಗೆ ಬದುಕಲಿ ಹೇಳು. ॥ ೯೮ ॥ ಈ ಚಿಕ್ಕ ವಯಸ್ಸಿನಲ್ಲಿ ನಿನಗೆ ಸನ್ಯಾಸವೇಕೆ? ಹೀಗೆ ಯಾವ ಧರ್ಮದಲ್ಲಿ ಹೇಳಿದೆ? ಬ್ರಾಹ್ಮಣರು ಕ್ರಮವಾಗಿ ನಾಲ್ಕು ಆಶ್ರಮಗಳನ್ನು ಆಚರಿಸಬೇಕೆಂದು ಧರ್ಮ ಶಾಸ್ತ್ರದಲ್ಲಿ ಪ್ರಸಿದ್ಧವಾಗಿ ಹೇಳಿದೆ. ॥ ೯೯ ॥ ಉಪನಯನವಾದಬಳಿಕ ಹನ್ನೆರಡು ವರುಷಗಳವರೆಗೆ ಗುರು ಕುಲದಲ್ಲಿದ್ದು ಉತ್ತಮ ರೀತಿಯಿಂದ ಬ್ರಹ್ಮಚರ್ಯವನ್ನು ಪಾಲಿಸುತ್ತ ವೇದಾಧ್ಯಯನ ಮಾಡಬೇಕು. ಮದುವೆಯಾದಮೇಲೆ ಗ್ರಹಸ್ಥಾಶ್ರಮವು ಬರುವದು. ಆ ಗೃಹಸ್ಥಾಶ್ರಮದಲ್ಲಿ ಅತಿಥಿ-ಅಭ್ಯಾಗತರನ್ನು ಪೂಜಿಸುತ್ತ, ಅನೇಕ ವ್ರತಾದಿಗಳನ್ನು ಮಾಡಿ, ಪುತ್ರರನ್ನು ಪಡೆದು ಯಜ್ಞಯಾಗಾದಿ ಕರ್ಮಗಳನ್ನು ಮಾಡಬೇಕು ಆದರಿಂದ ಅನಂತ ಪುಣ್ಯವು ಘಟಿಸುವದಲ್ಲದೆ ಅತ್ಯಂತ ಸೌಖ್ಯವೂ ಆಗುವದು. ॥ ೧೦೦ ॥ ಆದ್ದರಿಂದ ಗೃಹಸ್ಥಾಶ್ರಮವೇ ಮುಖ್ಯವಾದದ್ದು. ಆ ಗೃಹಸ್ಥಾಶ್ರಮದಲ್ಲಿ ಒಳ್ಳೇ ಆಚಾರದಿಂದ ನಡೆದು, ಯಾವತ್ತೂ ಇಂದ್ರಿಯಗಳನ್ನು ತೃಪ್ತಿಪಡಿಸಿ ಮನೋಭಿಲಾಷೆಯನ್ನು ಪೂರ್ಣ ಮಾಡಿಕೊಂಡಮೇಲೆ ಸಂಸಾರಭಾರವನ್ನು ಬಿಟ್ಟು ವಾನಪ್ರಸ್ಥಾಶ್ರಮವನ್ನು ಹೊಂದಿ, ಅಲ್ಲಿ ಕೆಲವು ದಿವಸ ನಿರ್ಮಲ ಮನಸ್ಸಿನಿಂದ ದೇವರ ಧ್ಯಾನ ತಪಶ್ಚರ್ಯಾದಿಗಳನ್ನು ಮಾಡುತ್ತ ಇದ್ದು ವಿರಕ್ತನಾದಮೇಲೆ ಸನ್ಯಾಸವನ್ನು ಹೊಂದಿ ತೀರ್ಥಯಾತ್ರೆಗಳನ್ನು ಮಾಡುತ್ತ ತಪಸ್ಸು ಮಾಡಬೇಕಂದು ವೇದಶಾಸ್ತ್ರದ ಮುಖ್ಯ ಗುಹ್ಯಾರ್ಥವಿರುತ್ತದೆ. ಆದ್ದರಿಂದ ಎಲೈ ಮಗನೇ, ನೀನು ಬಾಲ್ಯದಲ್ಲಿ ಸನ್ಯಾಸವನ್ನು ತಕ್ಕೊಳ್ಳಬಾರದು ಎಂದು ಹೇಳಿದಳು. ॥ ೧೦೧ ರಿಂದ ೧೦೪ ॥ ಎಲೈ ನಾಮಧಾರಕನೇ, ಆ ಬಾಲಗುರುವು ಈ ಪ್ರಕಾರ ತಾಯಿಯ ಮಾತು ಕೇಳಿ ಆಕೆಗೆ ಬ್ರಹ್ಮಜ್ಞಾನವನ್ನು ಉಪದೇಶಿಸುವನು. ಅದನ್ನು ಹೇಳುವೆನು, ನೀನು ಏಕಚಿತ್ತದಿಂದ ಕೇಳು. ಎಂದು ಸಿದ್ಧರು ಹೇಳಿದರು. ॥ ೧೦೫ ॥ ಆದರಂತೆ ಗಂಗಾಧರನ ಮಗನಾದ ಸರಸ್ವತಿಯು ಶ್ರೋತೃಗಳಿಗೆ ನಮಿಸಿ— ಎಲೈ ಶ್ರೋತೃಗಳೇ,

ಮುಂದೆ ನೀವು ಯಾವತ್ತರೂ ವಿಸ್ತಾರವಾದ ಗುರುಚರಿತ್ರೆಯನ್ನು ಕೇಳಿರಿ. || ೧೦೬ || ಮುಂದೆ ಅಪೂರ್ವ ಸಂಗತಿಯು ವರ್ತಿಸಿತು ಕೇಳು ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರು. ಆಗ ಗಂಗಾಧರಸುತನಾದ ನಾನು ಮಹಾರಾಷ್ಟ್ರ ಭಾಷೆಯಲ್ಲಿ ನಿಮಗೆ ಹೇಳುವೆನು ಎಂದನು. || ೧೦೭ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಶ್ರೀಪಾದಾವತಾರ ಶ್ರೀಗುರು ನರಸಿಂಹಸರಸ್ವತಿ ಬಾಲಚರಿತ್ರ ಲೀಲಾವರ್ಣನಂ ನಾಮ ಏಕಾದಶೋ-ಧ್ಯಾಯಃ || ೧೧ || ಶ್ರೀ ಗುರುದೇವದತ್ತ ||

**— ೧೧ನೇ ಅಧ್ಯಾಯ ಸಮಾಪ್ತ —**

# ೧೨ನೇಯ ಅಧ್ಯಾಯ

## — ಶ್ರೀ ಗುರುಗಳು ಸನ್ಯಾಸಗ್ರಹಣ ಮಾಡಿದ್ದು ಹಾಗು ಗುರುಪರಂಪರಕಥನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಗ ಸಿದ್ಧರು— ಎಲೈ ನಾಮಧಾರಕನೇ ಕೇಳು. ಆ ಮೇಲೆ ಶ್ರೀ ಗುರುಗಳು ತಾಯಿಯನ್ನು ಕುರಿತು— ಅವ್ವಾ, ನೀನು ನನಗೆ ಈ ಪ್ರಕಾರವಾಗಿ ಹೇಳುತ್ತೀ, ಈ ಶರೀರವು ಅನಿತ್ಯವೆಂಬದು ನಿನಗೆ ಗೊತ್ತದೆ. ಆಯುಷ್ಯದ ಭರವಸೆಯೇನು? ॥ ೧ ॥

**ಶ್ಲೋಕ—** ಅನಿತ್ಯಾನಿ ಶರೀರಾಣಿ ವಿಭವೋ ನೈವ ಶಾಶ್ವತಃ ।
ನಿತ್ಯಂ ಸನ್ನಿಹಿತೋ ಮೃತ್ಯುಃ ಕರ್ತವ್ಯೋ ಧರ್ಮಸಂಗ್ರಹಃ ॥ ೧ ॥ ॥ ೨ ॥

**ಅರ್ಥ—** ಈ ದೇಹವು ನಿತ್ಯವಾದದ್ದಲ್ಲ ಅನಿತ್ಯವಾದದ್ದು ಆದರಂತೆ ಐಶ್ವರ್ಯಾದಿಗಳೂ ಸಹ ಸ್ಥಿರವಲ್ಲ. ಮೃತ್ಯುವು ಸದಾ ನಮ್ಮ ಬೆನ್ನುಹತ್ತಿಯೇ ಇರುತ್ತದೆ. ಅದು ನಮ್ಮನ್ನು ಯಾವಾಗ ನುಂಗುತ್ತದೆಂಬ ನೇಮವಿಲ್ಲ. ಆದ ಕಾರಣ ಮನುಷ್ಯನು ಸಾಧಿಸಿದಷ್ಟು ಬೇಗ ಬೇಗ ಧರ್ಮಸಂಗ್ರಹ ಮಾಡಬೇಕು. ಎಂದು ಹೇಳಿರುತ್ತದೆ. ॥ ೨ ॥ ಅವ್ವಾ, ಚಿರಂಜೀವಿಯಾಗಿದ್ದವನಿಗೆ ಮಾತ್ರ ನೀನು ಇಷ್ಟೊತ್ತಿನವರೆಗೆ ಹೇಳಿದ ಬುದ್ಧಿವಾದವು ಯೋಗ್ಯವಾದದ್ದು ದೇಹ ಮತ್ತು ಐಶ್ವರ್ಯಾದಿ ವೈಭವಗಳು ಅನಿತ್ಯವಾದವುಗಳು. ಅಂದಮೇಲೆ ನಾವು ಮುಂದೆ ಯಾತರಮೇಲೆ ಭರವಸ ಮಾಡಬೇಕು. ॥ ೩ ॥ ದೇಹವು ಕ್ಷಣ ಭಂಗುರವಾದ್ದರಿಂದ ಇವತ್ತಿನವರೆಗೆ ಯಾರೂ ಸ್ಥಿರವಾಗಿ ಉಳದಿಲ್ಲ. ಆದಕಾರಣ ದೇಹವು ದೃಢವಾಗಿರುವಾಗಲೇ ಪುಣ್ಯ ಸಂಪಾದನೆ ಮಾಡಬೇಕು. ॥ ೪ ॥ ಯಾರು ಮೃತ್ಯುವನ್ನು ಗೆಲ್ಲುವರೋ ಅವರ ಶರೀರವು ಶಾಶ್ವತವಾದೀತು ಅವರಿಗೆ ನಿನ್ನ ಉಪ

ದೇಶವು ಸತ್ಯವಾದೀತು. ಅವರು ಮುಂದೆ ಧರ್ಮ ಮಾಡುವೆವು ಎಂದು ಅನ್ನಬಹುದು ॥ ೫ ॥ ಅಹೋರಾತ್ರಿ ಆಯುಷ್ಯವು ಕ್ಷಣಕ್ಷಣಕ್ಕೆ ಕಡಿಮೆಯಾಗುತ್ತಿರುವದರಿಂದ ಮನುಷ್ಯನು ಪೂರ್ವವಯಸ್ಸಿನಲ್ಲಿಯೇ ಧರ್ಮಸಂಗ್ರಹ ಮಾಡಬೇಕು. ॥ ೬ ॥ ಸೂರ್ಯನ ರಥವು ಒಂದು ನಿಮಿಷದಲ್ಲಿ ೨೨ ಸಾವಿರ ಗಾವುದ ದಾರಿಯನ್ನು ಕ್ರಮಿಸುವಂತೆ ಮನುಷ್ಯನ ಆಯುಷ್ಯವು ತೀವ್ರವಾಗಿ ಕ್ಷೀಣವಾಗುತ್ತಿರುವದು. ॥ ೭ ॥ ಮೀನವು ಸ್ವಲ್ಪ ನೀರಿನಲ್ಲಿ ಬಹುದಿವಸ ಹ್ಯಾಗೆ ಬದುಕಲಾರದೋ ಹಾಗೆ ಅಲ್ಪಾಯುಷ್ಯನಾದ ಮನುಷ್ಯನು ಈ ಭವಸಾಗರದಲ್ಲಿ ಬಹುದಿವಸ ಬದುಕಲಾರನು ಯಾವಾಗ ಮರಣ ಹೊಂದುವನೆಂಬ ನೇಮವಿಲ್ಲ. ಆದಕಾರಣ ಪ್ರಾಣವಿರುವತನಕ ಧರ್ಮ ಮಾಡಬೇಕು. ॥ ೮ ॥ ಮಳೆ ಬರುವಮುಂದೆ ಗಿಡಗಳ ಎಲೆಗಳ ಮೇಲೆ ನೀರು ನಿಂತರೂ ಅದು ನಿಶ್ಚಯವಾಗಿ ಸ್ಥಿರವಾಗಿ ನಿಲ್ಲದೆ ಕೂಡಲೆ ಭೂಮಿಯಮೇಲೆ ಬಿದ್ದುಹೋಗುತ್ತದೆ. ॥ ೯ ॥ ಆದರಂತೆ ಈ ಶರೀರವು ಸ್ಥಿರವಲ್ಲ. ಜೀವಿಗಳ ಶರೀರವು ನಾಶವಾಗುವಂಥಾದ್ದು ಅಂದರೆ ಜೀವಿಗಳ ಮರಣವೇ ನಿಶ್ಚಯವಾದದ್ದು. ಜೀವಿಗಳಿಗೆ ಯೌವನದಲ್ಲಾಗಲೀ ಮುಪ್ಪಿನಲ್ಲಾಗಲಿ ಮರಣವು ನಿಶ್ಚಯವಾಗಿರುವದು! ಮತ್ತು ಈ ದೇಹವು ಯಾವಾಗ ಬೀಳುತ್ತದೆಂಬದು ತಿಳಿಯುವದಿಲ್ಲ. ॥ ೧೦ ॥ ಆದ್ದರಿಂದ ಯಾರೂ ಈ ದೇಹದಮೇಲೆ ವಿಶ್ವಾಸವಿಡಬಾರದು ಮೃತ್ಯುವು ನಮ್ಮ ಬೆನ್ನುಹತ್ತಿಯೇ ಇರುವದು. ಆದ್ದರಿಂದ ಕೂಡಲೆ ಧರ್ಮವನ್ನು ಮಾಡಬೇಕು. ॥ ೧೧ ॥ ಗಿಡಗಳಲ್ಲಿ ಹಣ್ಣಾದ ಎಲೆಗಳು ಸೂಕ್ಷ್ಮವಾಗಿ ಅಂಟಿಕೊಂಡಿದ್ದು ಅಲ್ಲಿಯೇ ಸ್ಥಿರವಾಗಿರದೆ ಯಾವಾಗ ಉದರಿ ಬೀಳುವದೆಂಬ ಭರವಸೆಯಿಲ್ಲವೋ ಆದರಂತೆ ಈ ಶರೀರದ್ದು ಭರವಸೆಯಿಲ್ಲ. ॥ ೧೨ ॥ ಒಬ್ಬ ಮನುಷ್ಯನು ಜನರಿಗೆ ಬಡ್ಡೀ ವ್ಯವಹಾರಕ್ಕೆ ಹಣವನ್ನು ಕೊಟ್ಟು ದಿನಗಳನ್ನೆಣಿಸುವಂತೆ ಯಮನು ಅಹೋರಾತ್ರಿ ನಮ್ಮ ಆಯುಷ್ಯದ ದಿವಸಗಳನ್ನು ಎಣಿಸುತ್ತಿರುವನು. ॥ ೧೩ ॥ ಯಾವತ್ತು ನದಿಗಳು ತಮ್ಮ ನೀರನ್ನು ಹ್ಯಾಗೆ ಸಮುದ್ರಕ್ಕೆ ಒಯ್ಯುತ್ತವೆಯೋ ಹಾಗೆ ತಿರುಗಿ ಆ ನೀರನ್ನು ತಮ್ಮ ಹುಟ್ಟಿದ ಸ್ಥಳಕ್ಕೆ ತರುವದಿಲ್ಲ. ಆದರಂತೆ ಪ್ರಾಣಿಗಳ ಆಯುಷ್ಯವು ಹೋದದ್ದು ತಿರುಗಿ ಬರುವದಿಲ್ಲ. ॥ ೧೪ ॥ ಆಯುಷ್ಯವು ಅಹೋರಾತ್ರಿ ಓಡಿ ಹೋಗುತ್ತದೆಂದು ನಿಶ್ಚಯವಾಗಿ ತಿಳಿದೂ ತಿಳಿದೂ

ಯಾರು ಪುಣ್ಯ ಕಾರ್ಯವನ್ನು ಮಾಡುವದಿಲ್ಲವೋ ಅವರು ಪಶು ಸಮಾನವೆಂದು ತಿಳಿಯಬೇಕು. ॥ ೧೫ ॥ ಮನುಷ್ಯರು ಯಾವ ದಿವಸ ಪುಣ್ಯ ಮಾಡುವದಿಲ್ಲವೋ ಆ ದಿನವು ವ್ಯರ್ಥ ಹೋಯಿತೆಂದು ತಿಳಿಯಬೇಕು ಅವರ ಮೇಲೆ ಯಮನು ಕರುಣಾ ಮಾಡುವದಿಲ್ಲ. ಆದ್ದರಿಂದ ಎಲ್ಲರೂ ಕೂಡಲೆ ಪುಣ್ಯಮಾಡಬೇಕು. ॥ ೧೬ ॥ ಪುತ್ರ-ಕಲತ್ರ ಧನ-ಗೋ-ಆಯುಷ್ಯ-ಮನೆ ಇವು ನಿತ್ಯವೆಂದು ಯಾರು ತಿಳಿಯುತ್ತಾರೋ ಅವರು ಪಶುಸಮಾನವೆಂದು ತಿಳಿಯಬೇಕು. ॥ ೧೭ ॥ ಮೊಸಳೆಯು ಯಾವಪ್ರಕಾರ ಮನುಷ್ಯನನ್ನು ಹಿಡಿದು ತಿನ್ನುವದೋ ಅದರಂತೆ ಈ ಶರೀರವನ್ನು ವಾರ್ಧಿಕ್ಯವು (ಮೃತ್ಯುವು) ಹಿಡಿದು ತಿನ್ನುವದು. ॥ ೧೮ ॥ ಆದ್ದರಿಂದ ವಿದ್ವಾಂಸರಾದವರು ಯೌವನದಲ್ಲಿ ಪುಣ್ಯ ಮಾಡಬೇಕು. ಹೇ ತಾಯೀ, ನೀನು ತೀರ್ಥಯಾತ್ರಾ ಮಾಡಬೇಕೆಂಬ ಚಲೋ ಬುದ್ಧಿಯುಳ್ಳ ನನ್ನನ್ನು ಯಾಕೆ ಬಿಡಿಸುತ್ತೀ ? ॥ ೧೯ ॥ ಯಮನ ಹತ್ತರ ಹೋಗಬೇಕೆಂಬ ಇಚ್ಛೆ ಇದ್ದವರು ಮಾತ್ರ ಈ ರೀತಿಯಾಗಿ ಸಂಸಾರದಲ್ಲಿರಲಿಕ್ಕೆ ಹಟ ಮಾಡಬೇಕು. ಯಾವನು ನಿಶ್ಚಯವಾಗಿ ಅಮರನಾಗಿರುವನೋ ಅವನು ಮುಂದೆ ಬೇಕಾದಾಗ ಧರ್ಮ ಮಾಡಬಹುದು. ॥ ೨೦ ॥ ಸಂಸಾರವೆಂಬುದು ಸ್ವಪ್ನದಂತಿರುವದು. ಶುಷ್ಕವಾದ ನೀರಿನಿಂದ ಹೂವಿನ ಮೊಗ್ಗೆಯು ಕೂಡಲೇ ಹ್ಯಾಗೆ ನಾಶವಾಗುವದೋ ಹಾಗೆ ಈ ದೇಹವು ನಾಶವಾಗುವದೆಂದು ತಿಳಿ. ॥ ೨೧ ॥ ಮತ್ತು ಮಿಂಚು ಪಳಕ್ಕನೆ ಹೊಳೆದು ಕೂಡಲೇ ಹ್ಯಾಗೆ ಮಾಯವಾಗುವದೋ ಹಾಗೆ ಈ ದೇಹವು ಸ್ಥಿರವಾಗಿರದೆ ಮಾಯವಾಗುವದು. ॥ ೨೨ ॥ ಎಂಬ ಈಪ್ರಕಾರ ಶ್ರೀಗುರುಗಳು ನಾನಾ ರೀತಿಯಾಗಿ ತಂದೆ-ತಾಯಿಗಳಿಗೆ ಬೋಧಿಸುತ್ತಿರಲು ಅಲ್ಲಿ ಕೂಡಿದ ಜನರು ವಿಸ್ಮಯಪಟ್ಟು— ಈ ಬಾಲಕನು ಬ್ರಹ್ಮಜ್ಞಾನವನ್ನು ಹ್ಯಾಗೆ ಹೇಳಿದನಲ್ಲಾ! ಎಂದು ಅನ್ನುತ್ತಿದ್ದರು. ॥ ೨೩ ॥ ಈ ಪ್ರಕಾರ ಮಗನ ಮಾತು ಕೇಳಿ ತಾಯಿಯು ಆತನಿಗೆ ನಮಸ್ಕಾರ ಮಾಡಿ-- ದೇವಾ, ನೀನು ನನಗೆ ಜ್ಞಾನವನ್ನು ಬೋಧಿಸಿದಿ, ಆದರೆ ನೀನು ನನ್ನದೊಂದು ವಿನಂತಿಯನ್ನು ಕೇಳು. ॥ ೨೪ ॥ ಕುಲದೇವಾ, ಪುತ್ರರಾಯಾ, ಈ ಮೊದಲು ನೀನು ನನಗೆ ಇನ್ನು ನಾಲ್ಕುಮಂದಿ ಪುತ್ರರಾಗುವರೆಂದು ಹೇಳಿದಿ, ಆದರೆ ನನಗೆ ಇದರ ನಂಬಿಗೆಯು ಆಗುವದಿಲ್ಲ. ॥ ೨೫ ॥

ಆದ್ದರಿಂದ ನನಗೆ ಇನ್ನೊಬ್ಬ ಮಗನಾಗುವವರೆಗಾದರೂ ನೀನ್ನು ನನ್ನ ಹತ್ತಿರ ಇರಬೇಕು. ಅಲ್ಲಿಯವರೆಗೆ ನಾನು ಸತ್ಯವಾಗಿ ನಿನಗೆ ಹೋಗಲಿಕ್ಕೆ ಅಪ್ಪಣೆ ಕೊಡುವದಿಲ್ಲ. || ೨೬ || ಒಂದು ವೇಳೆ ನೀನು ನನ್ನ ವಚನ ಮೀರಿ ಹೊರಟು ಹೋದರೆ ಆ ಕೂಡಲೆ ನಾನು ಪ್ರಾಣ ಬಿಡುವೆನು. ಇದು ನಿಶ್ಚಯವೆಂದು ತಿಳಿ. || ೨೭ || ನೀನು ನನ್ನ ಪುತ್ರನಲ್ಲ, ನಮ್ಮ ಕುಲದೇವರಾಗಿರುತ್ತೀ, ಆದ್ದರಿಂದ ಎಲೈ ದಯಾನಿಧಿಯೇ ಈಗ ನಿನ್ನ ವಚನವನ್ನು ಸತ್ಯವನ್ನಾಗಿ ಮಾಡು. ಇದಕ್ಕೆ ನಿನ್ನ ಅಂಬೋಣವೇನದೆ ಹೇಳು ಅಂದಳು. || ೨೮ || ಈ ಪ್ರಕಾರ ತಾಯಿಯ ಮಾತು ಕೇಳಿ ಶ್ರೀಗುರುಗಳು ನಕ್ಕು— ಅವ್ವಾ, ನೀನು ನನ್ನ ಮಾತು ಸತ್ಯವೆಂದು ತಿಳಿ, ಅದರಂತೆ ನಿನ್ನ ಮಾತೂ ಸತ್ಯವಾಗಿರಲಿ. || ೨೯ || ಎಲೌ ಜನನಿಯೇ, ಇನ್ನುಮೇಲೆ ನಿನಗೆ ಇಬ್ಬರು ಮಕ್ಕಳಾದಮೇಲಾದರೂ ನನಗೆ ಸಂತೋಷದಿಂದ ಅಪ್ಪಣೆಯನ್ನು ಕೊಡು. ಆಮೇಲೆ ನಾನು ನಿಲ್ಲುವದಿಲ್ಲ, ನಿನ್ನ ಮಾತು ಸತ್ಯ ಮಾಡು. || ೩೦ || ತಾಯೀ, ನಾನು ನಿನ್ನ ಮಗನಾಗಿ ಇನ್ನು ಒಂದು ವರುಷ ನಿಮ್ಮ ಮನೆಯಲ್ಲಿದ್ದು ನಿನ್ನ ಇಚ್ಛೆಯನ್ನು ಪೂರ್ಣ ಮಾಡುವೆನು. ಆಮೇಲೆ ಮಾತ್ರ ನೀನು ನನಗೆ ಅಪ್ಪಣೆ ಕೊಡಬೇಕು || ೩೧ || ಎಂದು ಶ್ರೀಗುರುಗಳು ತಾಯಿಗೆ ನಿಶ್ಚಯವನ್ನು ಹೇಳಿ, ಅತಿ ಪ್ರೀತಿಯಿಂದ ಇದ್ದು ಶಿಷ್ಯರಿಗೆ ವೇದಾಭ್ಯಾಸ ಮಾಡಿಸಿ ಕೀರ್ತಿಯನ್ನು ಪಡೆದರು. || ೩೨ || ಅದನ್ನು ಕಂಡು ಆ ನಗರದ ಜನರು ಆಶ್ಚರ್ಯದಿಂದ— ಓಹೋ ! ನೋಡಿರಿ ! ಏಳು ವರ್ಷದ ಬ್ರಹ್ಮಚಾರಿಯಾದ ಬಾಲಕನು ನಾಲ್ಕು ವೇದಗಳನ್ನು ಹೇಳುತ್ತಾನೆ, ಇದು ಬಹು ಆಶ್ಚರ್ಯವು ಎಂದು ಹೊಗಳುತ್ತಿದ್ದರು. || ೩೩ || ಆಗ ವಿದ್ವಾಂಸರು ವಿದ್ಯಾರ್ಥಿಗಳಾಗಿ ಶ್ರೀಗುರುಗಳ ಹತ್ತಿರ ದಿನಾಲು ಮೂರು ಸಾರೆ ಬರುತ್ತಿದ್ದರು. ಸಕಲ ಶಾಸ್ತ್ರಜ್ಞರು ಸಹ ಕಲಿಯಲಿಕ್ಕೆ ಬರುತ್ತಿದ್ದರು. || ೩೪ || ಈ ಪ್ರಕಾರ ಶ್ರೀಗುರುಗಳು ಪ್ರೀತಿಯಿಂದ ಆ ಮನೆಯಲ್ಲಿ ಇರುವವರೊಳಗೆ ತಾಯಿಯು ಗರ್ಭಿಣಿಯಾಗಿ ಮಹಾ ಆನಂದಬಡುತ್ತ || ೩೫ || ಮನಸ್ಸಿನಲ್ಲಿ ಮಗನೇ ದೇವರೆಂದು ತಿಳಿದು ನಿತ್ಯ ಶ್ರೀಗುರುಗಳನ್ನು ಪೂಜಿಸುತ್ತ ಒಬ್ಬ ದರಿದ್ರನಿಗೆ ಧನರಾಶಿಯು ಸಿಕ್ಕರೆ ಎಷ್ಟು ಸಂತೋಷಪಡಬೇಕೋ ಅದಕ್ಕೂ ಹೆಚ್ಚು ಸಂತೋಷಬಡುತ್ತ ಸಮಾಧಾನದಿಂದಿದ್ದಳು. ಆಕೆಯ

ಸಂತೋಷವನ್ನು ಎಷ್ಟು ಹೇಳಲಿ ? ‖ ೩೬ ‖ ನವಮಾಸಗಳು ತುಂಬಿದ ಕೂಡಲೆ ಆಕೆಯು ಅತಿ ಸುಂದರವಾದ ಅವಳಿಜವಳಿ ಪುತ್ರರನ್ನು ಪಡೆದಳು. ‖ ೩೭ ‖ ಗುರುವಚನದಂತೆ ಇಬ್ಬರು ಪುತ್ರರಾದದ್ದಕ್ಕೆ ತಾಯಿ–ತಂದೆಗಳು ಅತ್ಯಂತ ಉಲ್ಲಾಸವನ್ನೂ ಸಂತೋಷವನ್ನೂ ಹೊಂದಿ ಗುರುಗಳ ಅಥವಾ ದೇವರ ಆಶೀರ್ವಾದವು ಸತ್ಯವಾಗುವದು ಅದು ಎಂದೂ ಸುಳ್ಳಾಗುವದಿಲ್ಲ ಎಂದು ಅಂದರು. ‖ ೩೮ ‖ ಆದಕಾರಣ ಎಲೈ ಶ್ರೋತೃಗಳೇ ನೀವಾದರೂ ಗುರು ವಾಕ್ಯವು ಸತ್ಯವೆಂದು ತಿಳಿಯಿರಿ. ಮತ್ತು ಅವರವರ ಮನಸ್ಸಿನ ಭಾವದಂತೆ ಫಲವಾಗುತ್ತದೆಂದು ನಂಬಿರಿ. ‖ ೩೯ ‖ ಈ ಪ್ರಕಾರ ಶ್ರೀ ಗುರುಗಳು ಮನೆಯಲ್ಲಿ ಒಂದು ವರುಷ ಇರುವಷ್ಟರಲ್ಲಿ ಆ ಕೂಸುಗಳು ಮೂರು ತಿಂಗಳದವಾದವು. ತಾಯಿಯು ಅವುಗಳನ್ನು ಆಡಿಸುತ್ತಿದ್ದಳು. ಆಗ ಶ್ರೀ ಗುರುಗಳು ತಾಯಿಯ ಹತ್ತರ ಬಂದು ‖ ೪೦ ‖— ಅವ್ವಾ, ನನ್ನಮಾತು ಕೇಳು ನಿನ್ನ ಇಚ್ಛೆಯಂತೆ ನಿನಗೆ ಪೂರ್ಣಾಯುಷ್ಯವುಳ್ಳ ಇಬ್ಬರು ಮಕ್ಕಳಾದರು ನನ್ನ ಮಾತಂತೂ ನಿಜವಾಯಿತು. ‖ ೪೧ ‖ ಅವ್ವಾ, ನಿನಗೆ ಮತ್ತೆ ಇಬ್ಬರು ಪುತ್ರರೂ ಒಬ್ಬ ಮಗಳೂ ಆಗುವರು ಆಗ ನಿಮ್ಮ ಇಚ್ಛೆಗಳೆಲ್ಲ ಪೂರ್ಣವಾಗುವವು. ‖ ೪೨ ‖ ಆಗ ನೀವು ಅತ್ಯಂತ ಸುಖಗಳ ನ್ನನುಭವಿಸುತ್ತ ಸಂತೋಷದಿಂದ ತಾಯೀ, ಈಗ ನನಗೆ ತೀವ್ರವಾಗಿ ಅಪ್ಪಣೆ ಕೊಡು ನಾನು ಸಹಜವಾಗಿ ಹೋಗುವೆನು, ನೀವು ಸಂತೋಷದಿಂದ ಇರ್ರಿ ಎಂದು ತಾಯಿಯಿಂದ ಅಪ್ಪಣೆಯನ್ನು ತಕ್ಕೊಂಡರು. ‖ ೪೩ ‖ ಆಗ ಮಾತಾ–ಪಿತೃಗಳು ಸಂತೋಷಬಟ್ಟು, ಅವರ ಚರಣಕ್ಕೆ ನಮಸ್ಕಾರಮಾಡಿ— ದೇವಾ, ನೀನು ನಮ್ಮ ಮನೆಯ ಕುಲದೇವರು, ನಿನಗೆ ಹೆಚ್ಚಾಗಿ ಹೇಳಲು ನಮಗೆ ಶಕ್ತಿಯಿಲ್ಲ ‖ ೪೪ ‖ ನಿನ್ನ ಸ್ವರೂಪ ಜ್ಞಾನವೂ ನಮಗಿಲ್ಲ. ಮಾಯಾ ಮೋಹದಿಂದ ವೇಷ್ಟಿತರಾದ ನಾವು ನಿನ್ನನ್ನು ಪೂರ್ಣ ಹ್ಯಾಗೆ ತಿಳಿಯಬೇಕು ? ನಿನ್ನ ಮಹಿಮೆಯು ನಮಗೆ ತಿಳಿಯುವದಿಲ್ಲ ‖ ೪೫ ‖ ದೇವಾ, ನಾವು ಮಾಯಾ ಪ್ರಪಂಚದಲ್ಲಿ ಸಿಕ್ಕು, ನೀನು ನಮ್ಮ ಮಗನೆಂದು ತಿಳಿದು, ಒಮ್ಮೊಮ್ಮೆ ನಿನಗೆ ನಿಷ್ಠುರ ಮಾತುಗಳನ್ನಾಡಿದೆವು ‖ ೪೬ ‖ ನಿನ್ನಸಂಗಡ ಭೋಜನವನ್ನೂ ಶಯನವನ್ನೂ ಮಾಡಿದೆವು, ನೀನು ಅಳುತ್ತಿದ್ದಾಗ ನಮಗೆ ಸಿಟ್ಟುಬಂದು ನಿನ್ನನ್ನೆತ್ತಿ ಬಗಲಲ್ಲಿ ಕೂಡ್ರಿಸಿಕೊಳ್ಳ

ಲಿಲ್ಲ. ಅದೆಲ್ಲವನ್ನೂ ಕ್ಷಮಿಸು. ॥ ೪೭ ॥ ಅಪ್ಪಾ ನೀನು ನಮ್ಮ ವಂಶವನ್ನು ಉದ್ಧರಿಸುವದಕ್ಕೆ ಅವತರಿಸಿರುತ್ತೀ, ನಾವು ಶನಿಪ್ರದೋಷದಲ್ಲಿ ಶ್ರೀಶಂಕರನನ್ನು ಪೂಜಿಸಿದ ಫಲದಿಂದ ನೀನು ನಮ್ಮ ಮಗನಾಗಿ ಅವತರಿಸಿರುತ್ತೀ. ॥ ೪೮ ॥ ಸ್ವಾಮೀ, ಗುರುಮೂರ್ತಿಯೇ ಈಗ ಹೊರಟುಹೋದರೆ ನಮ್ಮ ಗತಿಯೇನು? ದೇವರಾಯಾ ನಮಗೆ ಕಷ್ಟವಾಗದಂತೆ ನಮ್ಮಮೇಲೆ ಕೃಪಾಮಾಡು. ॥ ೪೯ ॥ ಮತ್ತು ನಮಗೆ ಆಗಾಗ್ಗೆ ದರ್ಶನವನ್ನು ಕೊಟ್ಟು, ಗಂಗಾದೇವಿಯು ಸಗರ ಪುತ್ರರಮೇಲೆ ಹರಿದು ಅವರ ನಾಲ್ವತ್ತೆರಡು ಕುಲಗಳನ್ನು ಪಾವನ ಮಾಡಿದಂತೆ ನೀನು ನಮ್ಮನ್ನೂ ನಮ್ಮ ೪೨ ಕುಲಗಳನ್ನೂ ಪಾವನಮಾಡು. ॥ ೫೦ ॥ ಎಲೈ ಮಗನೇ ಈ ಮಹಾ ಧುರಂದರವಾದ ಸಂಸಾರದಲ್ಲಿ ಇನ್ನು ನಮ್ಮನ್ನು ಯಾವ ರೀತಿಯಿಂದ ಇರಿಸುತ್ತೀ? ನಮಗೆ ನಿನ್ನ ದರ್ಶನವು ಮೇಲಿಂದಮೇಲೆ ಆಗುತ್ತಿದ್ದರೆ ಮಾತ್ರ ನಾವು ಬದುಕಿರುವೆವು ಎಂದು ಅಂದರು. ॥ ೫೧ ॥ ಈ ಪ್ರಕಾರ ತಾಯಿ–ತಂದೆಗಳ ಮಾತು ಕೇಳಿ ಶ್ರೀ ಗುರುಗಳು— ಮಾತಾ-ಪಿತೃಗಳಿರಾ, ನೀವು ಯಾವ ಯಾವ ವೇಳೆಯಲ್ಲಿ ನನ್ನನ್ನು ಸ್ಮರಿಸುತ್ತೀರೋ ॥ ೫೨ ॥ ಆ ಆ ಸಮಯದಲ್ಲಿ ಕೂಡಲೆ ನಾನು ನಿಮ್ಮಹತ್ತರ ಬಂದು ನಿಮಗೆ ದರ್ಶನ ಕೊಡುವೆನು. ಹೀಗೆಂದು ನೀವು ಮೇಲಿಂದಮೇಲೆ ಚಿಂತೆ ಮಾಡಬೇಡಿರಿ ಇದು ನನ್ನ ಸತ್ಯ ವಚನವು ಎಂದು ಮತ್ತೆ— ॥ ೫೩ ॥ ಹೇ ತಾಯೀ, ಅಂಬಾಭವಾನಿಯೇ, ನಾನು ಈ ಮೊದಲು ಹೇಳಿದಂತೆ ನಿನಗೆ ಮತ್ತೆ ಇಬ್ಬರು ಗಂಡಸುಮಕ್ಕಳೂ ಒಬ್ಬ ಹೆಣ್ಣು ಮಗಳೂ ಹೀಗೆ ಮೂವರು ಮಕ್ಕಳಾಗುವರು. ನಿಮ್ಮ ಮನೆಯಲ್ಲಿ ಬಡತನವು ಬರುವದಿಲ್ಲ ಯಾವಾಗಲೂ ಶ್ರೀಮಂತರಾಗಿ ಆನಂದಪಡುವಿರಿ. ॥ ೫೪ ॥ ನೀವು ಜನ್ಮಾಂತರದಲ್ಲಿ ಶನಿಪ್ರದೋಷದಲ್ಲಿ ಈಶ್ವರನನ್ನು ಪೂಜಿಸಿದ್ದರಿಂದ ಅದರ ಮಹಿಮೆಯು ಈ ಪ್ರಕಾರವಾಗುತ್ತಿರುವದು. ನೀವು ಮುಂದೆ ಪ್ರತಿ ಜನ್ಮದಲ್ಲಿಯೂ ಐಶ್ವರ್ಯವಂತರಾಗುವಿರಿ. ॥ ೫೫ ॥ ತಾಯೀ, ಕೇಳು ಈ ಜನ್ಮದಲ್ಲಿ ನೀವು ಸೌಖ್ಯವನ್ನು ಹೊಂದಿ ಅಂತ್ಯದಲ್ಲಿ ಮೋಕ್ಷವನ್ನು ಪಡೆಯುವಿರಿ. ಶಿವಪೂಜೆ ಮಾಡಿದವರಿಗೆ ಪುನರ್ಜನ್ಮವಿಲ್ಲ. ॥ ೫೬ ॥ ನೀವು ಪೂರ್ವಜನ್ಮದಿಂದಲೂ ಶ್ರೀ ಶಂಕರನನ್ನು ಆರಾಧಿಸಿದ್ದರಿಂದ ನಿಮ್ಮ ಇಷ್ಟಾರ್ಥವನ್ನು ನೆರವೇರಿಸುವದಕ್ಕೋಸ್ಕರ ನಾನು ನಿಮ್ಮ

ಉದರದಲ್ಲಿ ಅವತರಿಸಿದೆನು. ತಾಯೀ, ಒಂದುವೇಳೆ ನಿನ್ನ ಇಚ್ಛೆಯು ಪೂರ್ಣವಾಗಿದ್ದರೆ ಈಗ ನನಗೆ ಹೋಗಲಿಕ್ಕೆ ತೀವ್ರವಾಗಿ ಅಪ್ಪಣೆಕೊಡು. ॥ ೫೭ ॥ ಪುನಃ ಮೂವತ್ತು ವರ್ಷದಮೇಲೆ ನಾನು ನಿಮಗೆ ದರ್ಶನ ಕೊಡುವೆನು. ಈಗ ನಾನು ಬದರಿಕಾಶ್ರಮಕ್ಕೆ ಹೋಗಬೇಕು. ॥ ೫೮ ॥ ಎಂದು ಹೇಳಿ ಶ್ರೀ ಗುರುಗಳು ತಂದೆ-ತಾಯಿಗಳ ಅಪ್ಪಣೆ ಪಡೆದು ಸಹಜವಾಗಿ ಹೊರಟರು ಆಗ ಆ ಊರ ಯಾವತ್ತು ಸ್ತ್ರೀ-ಪುರುಷರೂ ಬಂದು ಆ ತಂದೆ-ತಾಯಿಗಳನ್ನು ಕುರಿತು— ॥ ೫೯ ॥ ನಿಮ್ಮ ಮಗನು ಬ್ರಹ್ಮಚಾರಿಯಾಗಿ ಈ ಚಿಕ್ಕ ವಯಸ್ಸಿನಲ್ಲಿಯೇ ತಪಸ್ಸಿಗಾಗಿ ಹೊರಟಿದ್ದರಿಂದ ಇವನು ನಿಶ್ಚಯವಾಗಿ ಅವತಾರಿ ಪುರುಷನಾಗಿರುವನು. ನಮಗೆ ಮಾತ್ರ ಮನುಷ್ಯನಾಗಿ ಕಾಣುತ್ತಾನೆ, ಎಂದು ಹೇಳಿ ಸಮಾಧಾನ ಮಾಡುತ್ತಿದ್ದರು ॥ ೬೦ ॥ ಮತ್ತು ಕೆಲವರು— ಈ ಆಶ್ಚರ್ಯವನ್ನು ನೋಡಿರಿ ! ಬಾಲಕನಾದ ತಪಸ್ವಿಯು ಕಾಶೀ ಯಾತ್ರೆಗೆ ಹೊರಡಲು ತಂದೆ-ತಾಯಿಗಳು ಸಹಿತ ಎಲ್ಲರೂ ಆತನಿಗೆ ಹೋಗಲಿಕ್ಕೆ ಕೌತುಕದಿಂದ ಅಪ್ಪಣೆ ಕೊಟ್ಟರು ॥ ೬೧ ॥ ಇವರ ಅಂತಃಕರಣವು ಎಂಥಾದ್ದೋ ತಿಳಿಯದು ! ಅವರು ಕಲ್ಲಿನಂತೆ ಮನಸ್ಸು ಗಟ್ಟಿ ಮಾಡಿ ಚಿಕ್ಕ ಮಗನನ್ನು ಸಮಾಧಾನದಿಂದ ಕಳಿಸುವರಲ್ಲಾ ? ಎಂದು ಅಂದರು ॥ ೬೨ ॥ ಮತ್ತು ಕೆಲವರು— ಇವನು ಬಾಲಕನಲ್ಲ ! ತ್ರೈಮೂರ್ತಿಗಳಂತೆ ಲೋಕವಂದ್ಯನಾಗಿರುವನು. ನಿಶ್ಚಯವಾಗಿ ಇದರಲ್ಲಿ ಏನೂ ಅನುಮಾನವಿಲ್ಲ ಹಾಗಿಲ್ಲದಿದ್ದರ ಈ ಬಾಲಕನು ವೇದವನ್ನು ಹ್ಯಾಗೆ ಅನ್ನುತ್ತಿದ್ದನು ? ಎಂದು ಅಂದರು. ॥ ೬೩ ॥ ಆಗ ಕೆಲವು ಸಾಧು ಜನರು— ಎಲೈ ಜನರುಗಳಿರಾ, ಏಳು ವರ್ಷದ ಬಾಲಕನು ಎಲ್ಲ ಶಾಖೆಯ ವೇದಗಳನ್ನೂ ಓದುತ್ತಾನೆಂದಮೇಲೆ ಇವನಿಗೆ ಮನುಷ್ಯನೆಂದು ಹ್ಯಾಗೆ ಅನ್ನಬೇಕು ಹೇಳಿರಿ ? ॥ ೬೪ ॥ ಎಂದು ಹೇಳಿ ಅವರು ಶ್ರೀಗುರುಮೂರ್ತಿಗೆ ಸಾ। ನ। ಮಾಡಿ ನಾನಾರೀತಿಯಾಗಿ ಸ್ತೋತ್ರ ಮಾಡಹತ್ತಿದರು. ॥ ೬೫ ॥ ಆಮೇಲೆ ಎಲ್ಲ ಜನರು ಶ್ರೀಗುರುಗಳಿಗೆ ನಮಸ್ಕಾರ ಮಾಡಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ತಂತೆ-ತಾಯಿಗಳು ಮಾತ್ರ ಮಗನಿಗೆ ಆಶೀರ್ವಾದ ಮಾಡುತ್ತ ಸ್ವಲ್ಪ ದೂರದವರೆಗೆ ಕಳಿಸಲಿಕ್ಕೆ ಹೋದರು. ॥ ೬೬ ॥ ಆಗ ಶ್ರೀಗುರುಗಳು ತಮ್ಮ ತಾಯಿಗೆ ಶ್ರೀ ದತ್ತಾತ್ರೇಯ-ಶ್ರೀಪಾದ

ಶ್ರೀವಲ್ಲಭರು ತಾವೇ ಎಂದು ತಮ್ಮ ನಿಜರೂಪವನ್ನು ತೋರಿಸಿದರು. ಆಗ ಆ ತಾಯಿ-ತಂದೆಗಳಿಬ್ಬರೂ ಆ ರೂಪವನ್ನು ನೋಡಹತ್ತಿದರು. ॥ ೧೭ ॥ ಮನುಷ್ಯರೂಪದಿಂದಿದ್ದ ನರಹರಿಯು ತ್ರೈಮೂರ್ತಿ ಅವತಾರವಾಗಿ ನಿಂತನು. ನಿಜರೂಪ ಹೊಂದಿದ ಆ ಕರ್ಪೂರಗೌರನನ್ನು ನೋಡಿದಕೂಡಲೆ ಅವರು ಆತನ ಚರಣಗಳಿಗೆ ನಮಸ್ಕಾರ ಮಾಡಿ— ॥ ೧೮ ॥ ಜಯ ಜಯ ಜಗದ್ಗುರುವೇ, ತ್ರಯಮೂರ್ತಿ ಅವತಾರಕನೇ, ನಾವು ಹೆಚ್ಚಿನ ಪುಣ್ಯವಂತರಾದ್ದರಿಂದಲೇ ನಮಗೆ ನಿನ್ನ ಚರಣದರ್ಶನವಾಯಿತು. ॥ ೧೯ ॥ ದೇವಾ, ನೀನು ಜಗತ್ತನ್ನು ಉದ್ಧರಿಸುವಂಥವನಿದ್ದು ನಿಶ್ಚಯವಾಗಿ ನಮ್ಮನ್ನು ಉದ್ಧಾರ ಮಾಡಿದಿ ನಮಗೆ ಪುನಃ ದರ್ಶನವನ್ನು ಕೊಡು ಎಂದು ಬೇಡಿಕೊಂಡು ಕೈಮುಗಿದು ॥ ೨೦ ॥ ಮತ್ತೆ ಶ್ರೀಗುರುಚರಣಗಳ ಮೇಲೆ ತಮ್ಮ ಮಸ್ತಕವನ್ನಿಟ್ಟು ನಮಸ್ಕರಿಸಿ, ಆಮೇಲೆ ಒಳ್ಳೇ ಪ್ರೀತಿಯಿಂದ ಶ್ರೀಗುರುವನ್ನು ಅಪ್ಪಿಕೊಂಡರು ॥ ೨೧ ॥ ಆಗ ಶ್ರೀಗುರುಗಳು ಸಂತೋಷಪಟ್ಟು ಅತಿ ಪ್ರೀತಿಯಿಂದ— ಮಾತಾ-ಪಿತೃಗಳಿರಾ, ನಾನು ನಿಮಗೆ ಪುನಃ ನಿಶ್ಚಯವಾಗಿ ದರ್ಶನ ಕೊಡುವೆನು. ಎಂದು ವಚನ ಕೊಟ್ಟು ॥ ೨೨ ॥ ಈ ಪ್ರಕಾರ ಶ್ರೀಗುರುಗಳು ತಾಯಿ-ತಂದೆಗಳನ್ನು ಸಮಾಧಾನ ಮಾಡಿ ಕೂಡಲೆ ಅವರ ಅಪ್ಪಣೆ ಪಡೆದು ಹೊರಟು ಹೋದರು. ಆಗ ತಾಯಿ-ತಂದೆಗಳು ಸಂತೋಷದಿಂದ ಪುನಃ ತಮ್ಮ ಮನೆಗೆ ಬಂದರು. ॥ ೨೩ ॥ ಇತ್ತ ವರದ ಮೂರ್ತಿಯಾದ ಗುರುರಾಯರು ಬದರಿಕಾಶ್ರಮಕ್ಕೆ ಹೋಗುವದರ ದೆಶೆಯಿಂದ ಹೊರಟು ಆನಂದದಿಂದ ಪೂರ್ಣವಾಗಿ ತುಂಬಿದಂಥ (ಆನಂದಕಾನನವೆಂಬ) ಶ್ರೀ ಕಾಶೀ ಕ್ಷೇತ್ರಕ್ಕೆ ಬಂದರು. ॥೨೪॥ ವಿಶ್ವೇಶ್ವರನಿದ್ದಂಥ ಆ ಕಾಶೀಕ್ಷೇತ್ರವು ಮುಕ್ತಿಯನ್ನು ಕೊಡುವಂಥಾದ್ದೂ, ಜಗತ್ತಿನಲ್ಲಿ ಒಳ್ಳೇ ಪ್ರಖ್ಯಾತವಾದದ್ದೂ, ಮತ್ತು ತ್ರಿಭುವನಗಳಲ್ಲಿ ಅನುಪಮ್ಯವಾದದ್ದೂ ಆಗಿರುವದು. ॥ ೨೫ ॥ ಶ್ರೀಗುರುಶಿರೋಮಣಿಗಳು ಆ ಸ್ಥಾನದಲ್ಲಿ ಅನುಷ್ಠಾನ ಮಾಡುತ್ತ, ಶ್ರೀ ವಿಶ್ವೇಶ್ವರನ ದರ್ಶನ ಮಾಡಿಕೊಂಡು ನಿಜಸ್ವರೂಪದಲ್ಲಿ ರಮಮಾಣರಾಗಿರುತ್ತಿದ್ದರು ॥ ೨೬ ॥ ಈ ಪ್ರಕಾರ ಶ್ರೀಗುರುಗಳು ಆ ಕಾಶಿಯಲ್ಲಿ ಸ್ವಲ್ಪ ಕಾಲ ಕಳೆದು ಆಮೇಲೆ ಅಷ್ಟಾಂಗ ಯೋಗದಿಂದ ತಪಸ್ಸು ಮಾಡುತ್ತಿದ್ದರು. ॥ ೨೭ ॥ ಆ ಕಾಶಿಯಲ್ಲಿ ಬೇರೆ ಎಷ್ಟೋ ಜನ ತಪಸ್ವಿಗಳೂ ಸನ್ಯಾಸಿಗಳೂ

ಅವಧೂತರೂ ಅನೇಕ ರೀತಿ ಅನುಷ್ಠಾನ ಮಾಡಿ ತಪಸ್ಸು ಮಾಡುತ್ತಿದ್ದರು. ॥ ೭೮ ॥ ಬ್ರಹ್ಮಚಾರಿಗಳಾದ ಶ್ರೀಗುರುಗಳು ಈ ಪ್ರಕಾರ ಯೋಗಾಭ್ಯಾಸ ದುರಂಧರರಾಗಿರುವದನ್ನು ನೋಡಿ ಆ ಎಲ್ಲ ತಪಸ್ವಿಗಳು ಮನಸ್ಸಿನಲ್ಲಿ ಬಹಳ ಆಶ್ಚರ್ಯಬಟ್ಟು— ॥ ೭೯ ॥ ಅಹೋ! ನೋಡಿರಿ! ಈ ಬಾಲಬ್ರಹ್ಮಚಾರಿಗಳು ನಾನಾರೀತಿಯಿಂದ ತಪಸ್ಸು ಮಾಡುತ್ತಿರುವರು. ಇವರ ಮನಸ್ಸಿನಲ್ಲಿ ಎಂಥ ವೈರಾಗ್ಯವಿರಬಹುದು ನೋಡಿರಿ! ಇವರ ವೈರಾಗ್ಯವು ನಿರ್ದೋಷವಾಗಿರುವದು. ॥ ೮೦ ॥ ಇವರಿಗೆ ಶರೀರದ ಮೇಲೆ ಆಶೆಯಿಲ್ಲ. ಈಗ ಯೋಗಿಯಾಗಿದ್ದರೂ ಸನ್ಯಾಸ ಧರ್ಮದ ಪ್ರಕಾರ ನಡೆಯುತ್ತ ತ್ರಿಕಾಲದಲ್ಲಿ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡುತ್ತಿರುವರು. ॥ ೮೧ ॥ ಎಂದು ಅನೇಕ ಪ್ರಕಾರವಾಗಿ ಸ್ತುತಿಸುತ್ತಿದ್ದರು. ಆ ಕಾಶೀ ಕ್ಷೇತ್ರದಲ್ಲಿರುವ ಯಾವತ್ತು ಸನ್ಯಾಸಿಗಳು, ಸಾಧುಗಳು, ಮುಂತಾದವರು ನಿತ್ಯ ಬಂದು ಶ್ರೀಗುರುಗಳ ದರ್ಶನ ತಕ್ಕೊಳ್ಳುತ್ತಿದ್ದರು. ಅವರಲ್ಲಿ ಕೇವಲ ಬ್ರಹ್ಮಜ್ಞಾನಿಯೂ, ತಪಸ್ವಿಯೂ, ಮಹಾಮುನಿಯೂ ಆದ ಕೃಷ್ಣಸರಸ್ವತಿ ಎಂಬ ಒಬ್ಬ ವೃದ್ಧ ಸನ್ಯಾಸಿಗಳಿರುತ್ತಿದ್ದರು. ಅವರು ಶ್ರೀಗುರುವನ್ನು ಒಳ್ಳೇ ಪ್ರೀತಿಯಿಂದಲೂ ಭಕ್ತಿಯಿಂದಲೂ ಪ್ರತ್ಯಕ್ಷವಾಗಿ ಕಂಡು ॥ ೮೨-೮೩ ॥ ಉಳಿದ ಎಲ್ಲ ಯತೀಶ್ವರರನ್ನು ಕುರಿತು— ಎಲೈ ಯತೀಶ್ವರರೇ, ಈ ಬ್ರಹ್ಮಚಾರಿಗಳು ಮನುಷ್ಯರೆಂದು ಮಾತ್ರ ತಿಳಿಯಬೇಡಿರಿ ಇವರು ಅವತಾರಿ ಪುರುಷರಾಗಿಯೂ, ಶ್ರೇಷ್ಠ ತಪಸ್ವಿಗಳಾಗಿಯೂ, ಜಗದ್ವಂದ್ಯರಾಗಿಯೂ ಇರುವರು ॥ ೮೪ ॥ ಇವರಿಗೆ ನಮಸ್ಕಾರ ಮಾಡುವದು ಎಲ್ಲರಿಗೂ ಭೂಷಣವು' ವೃದ್ಧರೂ ಆದರಲ್ಲಿ ವಿಶೇಷವಾಗಿ ಸನ್ಯಾಸಿಗಳೂ ಆದ ನಾವು ಈ ಬಾಲಬ್ರಹ್ಮಚಾರಿಗಳಿಗೆ ನಮಸ್ಕಾರ ಮಾಡಿದರೆ ಮೂರ್ಖರಾದ ಜನರು ನಮ್ಮನ್ನು ವಿಶೇಷವಾಗಿ ನಿಂದಿಸುವರು ॥ ೮೫ ॥ ಇವರ ವಪುಸ್ಸು ಸಣ್ಣದೆಂದು ತಿಳಿದರೂ ಮನಸ್ಸಿನಲ್ಲಾದರೂ ನಮಸ್ಕಾರ ಮಾಡಿರಿ. ಇವರು ತ್ರಿಭುವನಗಳಲ್ಲಿ ಪ್ರಖ್ಯಾತ ಮೂರ್ತಿಯಾಗಿ, ನಮಗಂತೂ ವಂದ್ಯರಾಗಿರುವರು. ॥ ೮೬ ॥ ಆದ್ದರಿಂದ ನಾವೆಲ್ಲರೂ ಕೂಡಿ ಹೋಗಿ ಪರೋಪಕಾರಾರ್ಥವಾಗಿ ಸನ್ಯಾಸವನ್ನು ತಕ್ಕೊಳ್ಳಲಿಕ್ಕೆ ಇವರಿಗೆ ವಿನಂತೀ ಮಾಡಿ ಕೊಳ್ಳೋಣ. ಆಮೇಲೆ ಇವರು ತಾವು ಮೊದಲು ಸನ್ಯಾಸವನ್ನು ತಕ್ಕೊಂಡು ಉಳಿದ ಎಲ್ಲರಿಗೂ ಸನ್ಯಾಸ

ವನ್ನು ಕೊಡಲಿಕ್ಕೆ ಇವರ ಬುದ್ಧಿಯು ಸ್ಥಿರವಾದೀತು. ॥ ೮೭ ॥ ಇವರು ಲೋಕಾನುಗ್ರಹ ಮಾಡುವ ಸಮರ್ಥ ಗುರುವಾಗುವರು. ಇವರ ದರ್ಶನ ಮಾತ್ರದಿಂದ ಪತೀತನು ಪುನೀತನಾಗುವನು. ॥ ೮೮ ॥ ಆದ್ದರಿಂದ ನಾವು ಈ ಬಾಲಬ್ರಹ್ಮಚಾರಿಗಳಿಗೆ ವಿನಯದಿಂದ ಸನ್ಯಾಸವನ್ನು ತಕ್ಕೊಳ್ಳಿರೆಂದು ಹೇಳಿ ಅವರು ಸನ್ಯಾಸವನ್ನು ತಕ್ಕೊಂಡ ಮೇಲೆ ಏಕಮನಸ್ಸಿನಿಂದ ಅವರ ಪೂಜೆ ಮಾಡೋಣ ಎಂದು ಅಂದರು. ॥ ೮೯ ॥ ಆಗ ಎಲ್ಲರೂ ಆ ಮಾತಿಗೆ ಒಪ್ಪಿ ಶ್ರೀಗುರುಗಳ ಹತ್ತರ ಬಂದು ವಿನಯದಿಂದ— ಸ್ವಾಮೀ, ಜಟಾಧಾರಿಯಾದ ಶ್ರೇಷ್ಠ ತಪಸ್ವಿಗಳೇ ತಮ್ಮಲ್ಲಿ ನಮ್ಮದೊಂದು ವಿನಂತಿ ಅದೆ ಕೇಳಬೇಕು. ॥ ೯೦ ॥ ಏನಂದರೆ, ಲೋಕಾನುಗ್ರಹಕ್ಕಾಗಿ ಈಗ ತಾವು ಸನ್ಯಾಸವನ್ನು ಹೊಂದಿ ನಮ್ಮ ಉದ್ಧಾರಕ್ಕೋಸ್ಕರ ನಮ್ಮ ಕಡೆಯಿಂದ ಪೂಜೆಯನ್ನು ತಕ್ಕೊಂಡು ಆಮೇಲೆ ನಮಗೆ ತಾವು ಸನ್ಯಾಸವನ್ನು ಕೊಡಬೇಕು. ॥ ೯೧ ॥ ಈ ಕಲಿಯುಗದಲ್ಲಿ ಸನ್ಯಾಸಿಯನ್ನು ಕಂಡರೆ ಎಲ್ಲರೂ ನಿಂದಿಸುವರು. ಈ ಸನ್ಯಾಸಧರ್ಮವನ್ನು ಪುನಃ ಸ್ಥಾಪಿಸುವವರು ತಮ್ಮ ಹೊರತು ಈ ಭೂಮಿಯಲ್ಲಿ ಯಾರೂ ಕಾಣುವದಿಲ್ಲ. ॥ ೯೨ ॥

**ಶ್ಲೋಕಃ—** ಅಗ್ನಿಹೋತ್ರಂ ಗವಾಲಂಭಂ ಸನ್ಯಾಸಂ ಪಲಪೈತೃಕಂ ।
ದೇವರಾಚ್ಚಸುತೋತ್ಪತ್ತಿಃ ಕಲೌ ಪಂಚವಿವರ್ಜಯೇತ್ ॥ ೧ ॥ ॥ ೯೩ ॥

**ಅರ್ಥ:—** ಅಗ್ನಿಹೋತ್ರವೂ ಗೋಮೇಧಯಾಗವೂ ಸನ್ಯಾಸವೂ ಮಾಂಸಶ್ರಾದ್ಧವೂ ಮೈದುನನಿಂದ ಸುತೋತ್ಪತ್ತಿಯೂ ಈ ಐದು ಕಲಿಯುಗದಲ್ಲಿ ನಿಷಿದ್ಧಗಳಾಗಿವೆ. ॥ ೯೪ ॥ ಈ ಕಲಿಯುಗದಲ್ಲಿ ಈ ಪ್ರಕಾರ ಮಾಡಿದರೆ ನಿಷಿದ್ಧವೆಂದೆನ್ನುವರು ಆದರೆ ಪೂರ್ವಕಾಲದಿಂದಲೂ ಸನ್ಯಾಸಮಾರ್ಗದ ಸಿದ್ಧಾಂತವು ವೇದ ಸಮ್ಮತವಾಗಿ ಪ್ರಖ್ಯಾತವಾಗಿರುವದು. ॥ ೯೫ ॥ ಇದನ್ನು ಈ ವರ್ತಮಾನಕಾಲದಲ್ಲಿ ಸಕಲ ಜನರು ನಿಷಿದ್ಧ ಮಾಡಿದರು. ಆದರೆ ಶ್ರೀ ಶಂಕರಾಚಾರ್ಯರು ಅವತರಿಸಿ ಈ ಸನ್ಯಾಸ ಧರ್ಮ ಮತ್ತೆ ಸ್ಥಾಪಿಸಿದರು. ॥ ೯೬ ॥ ಆ ಮೇಲೆ ಇವತ್ತಿನವರೆಗೆ ಆ ಸನ್ಯಾಸ ಧರ್ಮವು ಭೂಮಿಯಲ್ಲಿ ರೂಢಿಯಲ್ಲಿ ಬಂತು. ಆದರೆ ಕಲಿಯ ಪ್ರಾಬಲ್ಯದಿಂದ

ಪುನಃ ಜನರು ನಿಂದಿಸಹತ್ತಿದ್ದರಿಂದ ಮತ್ತೆ ಅದು ಬಹಳ ಕಡಿಮೆಯಾಗಿರುವದು. ॥ ೯೭ ॥ ಆದ್ದರಿಂದ ದಯಾಪರರಾದ ತಾವು ಸನ್ಯಾಸಧರ್ಮದ ಉದ್ಧಾರಕ್ಕೂ ಸರ್ವರ ಪರೋಪಕಾರಕ್ಕೂ ಈಗ ಸನ್ಯಾಸವನ್ನು ಸ್ವೀಕರಿಸಿ ಸ್ಥಾಪಿಸಬೇಕೆಂದು ಸಕಲ ಮುನಿಗಳು ಬೇಡಿಕೊಂಡರು. ॥ ೯೮ ॥ ಆಗ ಶ್ರೀ ಗುರುಗಳು ಅವರ ವಿನಂತಿಯಂತೆ ವೃದ್ಧರಾದ ಕೃಷ್ಣ ಸರಸ್ವತಿಗಳಿಂದ ಸನ್ಯಾಸವನ್ನು ಸ್ವೀಕರಿಸಿದರು. ॥ ೯೯ ॥ ಎಂದು ಸಿದ್ಧರು ಹೇಳಲು ನಾಮಧಾರಕನು ವಿನಯದಿಂದ— ಸ್ವಾಮೀ, ಕೃಪಾಮೂರ್ತಿಯಾದ ಸಿದ್ಧಗುರುರಾಯರೇ, ನನ್ನ ಮನಸ್ಸಿನಲ್ಲಿ ಒಂದು ಸಂಶಯ ಬಂದಿರುವದು ॥ ೧೦೦ ॥ ಏನಂದರೆ— ಶ್ರೀಗುರು ನರಸಿಂಹ ಸರಸ್ವತಿಗಳು ತ್ರಿಮೂರ್ತಿ ಅವತಾರವೆಂದೂ ಜಗದ್ಗುರುವೆಂದೂ ಹೇಳುತ್ತೀರಿ ಅಂದಮೇಲೆ ಅಂಥವರಿಗೆ ಬೇರೆ ಒಬ್ಬ ಗುರುಗಳು ಹ್ಯಾಗೆ ಆದರು ? ಎಂದು ಕೇಳಿದನು. ॥ ೧೦೧ ॥ ಆಗ ಸಿದ್ಧರು— ಎಲೈ ಶಿಷ್ಯನೇ ಅದರ ಸ್ಥಿತಿ ಹ್ಯಾಗೆಂಬದನ್ನು ಕೇಳು. ಪೂರ್ವದಲ್ಲಿ ಶ್ರೀ ರಾಮದೇವರಿಗೆ ವಸಿಷ್ಠರು ಹ್ಯಾಗೆ ಗುರುಗಳಾದರೋ ॥ ೧೦೨ ॥ ಮತ್ತು ಎಂಟನೇ ಅವತಾರವಾದ ಶ್ರೀ ಕೃಷ್ಣನಿಗೆ ಸಾಂದೀಪನಿಯು ಹ್ಯಾಗೆ ಗುರುವಾದನೋ ಹಾಗೆ ಶ್ರೀಪಾದ ಶ್ರೀ ವಲ್ಲಭ ನರಸಿಂಹ ಸರಸ್ವತಿಗಳಿಗೆ ಕೃಷ್ಣ ಸರಸ್ವತಿಗಳು ಗುರುಗಳಾದರು. ಪರಮಾತ್ಮನು ಮನುಷ್ಯಾವತಾರ ತಕ್ಕೊಂಡಮೇಲೆ ಮನುಷ್ಯ ರೀತಿಯಂತೆ ನಡೆಯಬೇಕಾಗುತ್ತದೆ. ॥ ೧೦೩ ॥ ಆದ್ದರಿಂದ ಆ ಕೃಷ್ಣ-ಸರಸ್ವತಿಗಳು ಬಹುಕಾಲದಿಂದ ಯೋಗ್ಯ ಸನ್ಯಾಸಿಗಳಾಗಿರುವರೆಂದು ತಿಳಿದು ಶ್ರೀ ಗುರು-ನರಸಿಂಹ-ಸರಸ್ವತಿಗಳು ಅವರನ್ನು ತಮ್ಮ ಗುರುಗಳನ್ನಾಗಿ ಮಾಡಿಕೊಂಡರು. ಎಂದು ಹೇಳಿದರು. ॥ ೧೦೪ ॥ ಆಗ ನಾಮಧಾರಕನು— ಸ್ವಾಮೀ, ಶ್ರೀ ಗುರುಗಳು ವೃದ್ಧ-ಕೃಷ್ಣ-ಸರಸ್ವತಿಗಳನ್ನು ಗುರುಗಳನ್ನಾಗಿ ಮಾಡಿಕೊಂಡರೆಂದೂ ॥ ೧೦೫ ॥ ಯಾವತ್ತೂ ಯತೀಶ್ವರರು ಕೂಡಿ ಅವರಿಗೆ ಬಹುಮಾನ ಮಾಡಿದರೆಂದೂ ಹೇಳಿದಿರಿ. ಆದರೆ ಪೂರ್ವದಲ್ಲಿ ಆ ಕೃಷ್ಣ-ಸರಸ್ವತಿಗಳ್ಯಾರು ? ಅದು ಯಾವ ಗುರುಗಳ ಮೂಲ ಪೀಠವು ? ॥ ೧೦೬ ॥ ಎಂಬದನ್ನು ತಾವು ನನ್ನಮೇಲೆ ಕೃಪಾಮಾಡಿ ವಿಸ್ತಾರವಾಗಿ ಹೇಳಬೇಕು ಆದರಿಂದ ನನ್ನ ಮನಸ್ಸಿಗೆ ಸಂತೋಷವಾಗುವದು ಎಂದು ವಿನಯದಿಂದ ಕೇಳಿದನು. ॥೧೦೭॥

ಈ ಪ್ರಕಾರ ಶಿಷ್ಯನ ವಿನಂತಿಯನ್ನು ಕೇಳಿ ಸಿದ್ಧರು— ಎಲೈ ನಾಮಧಾರಕನೇ, ಮೂಲ ಪೀರದಿಂದ ಆದ್ಯಂತವಾಗಿ ನಿನಗೆ ಗುರುಸಂತತಿಯನ್ನು ಹೇಳುವೆನು ಏಕಚಿತ್ತದಿಂದ ಕೇಳು. ‖ ೧೦೮ | ಆದಿ ಗುರುವು ಶ್ರೀ ಶಂಕರನು, ಆಮೇಲೆ ವಿಷ್ಣುವು, ಬಳಿಕ ಬ್ರಹ್ಮನು. ‖ ೧೦೯ ‖ ಆನಂತರ ವಸಿಷ್ಠರು, ಆಮೇಲೆ ಶಕ್ತಿವಂತರಾದ ಪರಾಶರರು, ಬಳಿಕ ಅವರ ಶ್ರೇಷ್ಠ ಶಿಷ್ಯರೂ ವಿಷ್ಣುವಿನ ಅವತಾರವೂ ಆದ ವ್ಯಾಸರು. ‖ ೧೧೦ ‖ ಆಮೇಲೆ ಶುಕಾಚಾರ್ಯರು, ಬಳಿಕ ಗೌಡ ಪಾದಾಚಾರ್ಯರು, ಆಮೇಲೆ ಗೋವಿಂದ ಪೂಜ್ಯ ಪಾದಾಚಾರ್ಯರು, ಬಳಿಕ ಶೃಂಗೇರಿಯಲ್ಲಿ ಶಾರದಾಂಬೆಯನ್ನು ಸ್ಥಾಪಿಸಿದ ಆದ್ಯ ಶಂಕರಾಚಾರ್ಯರು. ‖ ೧೧೧ ‖ ಆಮೇಲೆ ವಿಶ್ವರೂಪಾಚಾರ್ಯರು ಬಳಿಕ ಜ್ಞಾನ ಬೋಧಗಿರಿಯಾಚಾರ್ಯರು; ನಂತರ ಸಿದ್ಧಗಿರಿಯಾಚಾರ್ಯರು, ಆಮೇಲೆ ಕ್ರಮವಾಗಿ ಈಶ್ವರ ತೀರ್ಥರು. ‖ ೧೧೨ ‖ ನರಸಿಂಹ ತೀರ್ಥರು, ವಿದ್ಯಾತೀರ್ಥರು, ಶಿವತೀರ್ಥರು, ಭಾರತಿ ತೀರ್ಥರು. ‖ ೧೧೩ ‖ ವಿದ್ಯಾರಣ್ಯ ಶ್ರೀಪಾದ ಮುನಿಗಳು, ವಿದ್ಯಾತೀರ್ಥರು. ‖ ೧೧೪ ‖ ಆಮೇಲೆ ಮಲಯಾನಂದ ತೀರ್ಥರು, ದೇವ ತೀರ್ಥರು, ವೃದ್ಧ--ಸರಸ್ವತಿಗಳು, ಬಳಿಕ ಸರಸ್ವತಿ ಯಾದವೇಂದ್ರರು. ‖ ೧೧೫ ‖ ಈ ಸರಸ್ವತಿ ಯಾದವೇಂದ್ರರ ಮುಖ್ಯ ಶಿಷ್ಯರೇ ಈಗ ಹೇಳಿದ ಕೃಷ್ಣ-ಸರಸ್ವತಿಗಳು. ಅವರು ಬಹುದಿವಸದಿಂದ ಸನ್ಯಾಸಿಗಳಾಗಿ ಬ್ರಹ್ಮಜ್ಞಾನಿಗಳಾದ್ದರಿಂದ ಎಲ್ಲರೂ ಅವರನ್ನು ಬಹು ಮಾನಿಸುತ್ತಿದ್ದರು. ‖ ೧೧೬ ‖ ಆದ್ದರಿಂದ ಶ್ರೀ ಗುರು-ನರಸಿಂಹ-ಸರಸ್ವತಿಗಳು ಪುನಃ ಸನ್ಯಾಸ ಮಾರ್ಗವನ್ನು ಸ್ಥಾಪಿಸುವದಕ್ಕಾಗಿ ಆ ಕೃಷ್ಣ-ಸರಸ್ವತಿಗಳನ್ನೇ ಗುರುಗಳನ್ನಾಗಿ ಮಾಡಿಕೊಂಡು ಅವರಿಂದ ತಾವು ಸನ್ಯಾಸವನ್ನು ಸ್ವೀಕರಿಸಿದರು ‖ ೧೧೭ ‖ ಶ್ರೀ ಗುರುಗಳು ಸಮಸ್ತ ವೇದಗಳ ಅರ್ಥವನ್ನು ಹೇಳುತ್ತಿದ್ದದರಿಂದ ಆ ಕಾಶೀ ಕ್ಷೇತ್ರದಲ್ಲಿರುವ ಯಾವತ್ತೂ ಜನರು ಅವರನ್ನು ವಂದಿಸುತ್ತಿದ್ದರು. ‖ ೧೧೮ ‖ ಅವರ ಪ್ರಸಿದ್ಧಿಯು ಬಹಳವಾಗಲು ಆ ಕಾಶೀ ಕ್ಷೇತ್ರದಲ್ಲಿರುವ ಯಾವತ್ತು ಯತಿಗಳು ಅವರ ಶಿಷ್ಯರಾಗಿ ಶ್ರೀ ಗುರುಗಳ ಸೇವೆಯನ್ನು ಮಾಡುತ್ತಿದ್ದರು ‖ ೧೧೯ ‖ ಆಮೇಲೆ ಶ್ರೀ ಗುರುಗಳು ಆ ಸಕಲ ಶಿಷ್ಯರೊಡನೆ ಉತ್ತರದಿಕ್ಕಿನಲ್ಲಿ ಬದರಿಕಾಶ್ರಮದಲ್ಲಿರುವ ಅನಂತ ತೀರ್ಥಗಳನ್ನು ನೋಡುವದಕ್ಕೆ ಹೊರಟರು. ‖ ೧೨೦ ‖

ಆಮೇಲೆ ಮೇರು ಪರ್ವತವನ್ನು ಬಲಗಡೆ ಮಾಡಿಕೊಂಡು ಸಕಲ ಶಿಷ್ಯರೊಡನೆ ನವಖಂಡ ಕ್ಷಿತಿಯಲ್ಲಿರುವ ಸಕಲ ತೀರ್ಥಗಳನ್ನು ನೋಡುತ್ತ ಭೂ ಪ್ರದಕ್ಷಿಣೆಯನ್ನು ಮಾಡಿ “ಗಂಗಾಸಾಗರ ಸಂಗಮಕ್ಕೆ ಬಂದರು. ‖ ೧೨೧-೧೨೨ ‖ ಎಲೈ ನಾಮಧಾರಕಾ ಯಾವತ್ತು ತೀರ್ಥಗಳ ಸಂಗತಿಯನ್ನು ಹೇಳಹತ್ತಿದರೆ ವಿಸ್ತಾರವಾಗುವದು ಕಾರಣ ಸ್ವಲ್ಪ ಹೇಳುವೆನು ‖ ೧೨೩ ‖ ಆ ಎಲ್ಲ ತೀರ್ಥಗಳ ಎಲ್ಲ ಮಹಿಮೆಯನ್ನು ಹೇಳಲಿಕ್ಕೆ ನಮಗ ಶಕ್ಯವಿಲ್ಲ. ತ್ರಯಮೂರ್ತಿ ಅವತಾರವಾದ ಗುರುಗಳ ಮಹಿಮೆಯು ಅನಂತವಾಗಿರುವದು ಗುರುಚರಿತ್ರೆಯನ್ನು ಕೇಳು. ‖ ೧೨೪ ‖ ಮುಂದೆ ಶ್ರೀ ಗುರುಗಳು ಗಂಗಾಸಾಗರದಿಂದ ಹೊರಟು ತಟಾಕ ಯಾತ್ರೆ ಮಾಡುತ್ತ ಪ್ರಯಾಗಕ್ಕೆ ಬಂದರು. ‖ ೧೨೫ ‖ ಶ್ರೀ ಗುರುಗಳು ಅಲ್ಲಿರುವಾಗ ಮಾಧವನೆಂಬ ಒಬ್ಬ ಶ್ರೇಷ್ಠ ಬ್ರಾಹ್ಮಣನು ಗುರುಗಳ ದರ್ಶನಕ್ಕೆ ಬಂದನು. ‖ ೧೨೬ ‖ ಆಗ ಅವರು ಅವನಿಗೆ ಪ್ರೀತಿಯಿಂದ ಸನ್ಯಾಸವನ್ನು ಕೊಟ್ಟು ಬ್ರಹ್ಮೋಪದೇಶ ಮಾಡಿದರು. ‖ ೧೨೭ ‖ ಆಮೇಲೆ ಅವನಿಗೆ ಮಾಧವ-ಸರಸ್ವತಿ ಎಂಬ ಹೆಸರಿಟ್ಟು ಎಲ್ಲ ಶಿಷ್ಯರಿಗಿಂತಲೂ ಅವನ ಮೇಲೆ ಪ್ರೀತಿ ಮಾಡುತ್ತಿದ್ದರು. ‖ ೧೨೮ ‖ ಎಲೈ ನಾಮಧಾರಕನೇ, ಈ ಪ್ರಕಾರ ನರಸಿಂಹಸರಸ್ವತಿ ಗುರುಗಳಿಗೆ ಅನೇಕ ಮಂದಿ ಶಿಷ್ಯರಾದರು ಮುಂದೆ ಅವರ ಚರಿತ್ರೆಯು ಬರುವದು. ಎಂದು ಹೇಳಿದರು. ‖ ೧೨೯ ‖ ಎಂದು ಸರಸ್ವತೀಗಂಗಾಧರನು— ಈ ಗುರಚರಿತ್ರೆಯು ಕಾಮಧೇನು ಸಮಾನವಾಗಿರುವದು ಇದನ್ನು ಕೇಳುವವರು ಮಹಾಜ್ಞಾನಿಗಳಾಗಿ ನಾಲ್ಕೂ ಪುರುಷಾರ್ಥಗಳನ್ನು ಹೊಂದುವರು ಎಂದು ಹೇಳಿದನು. ‖ ೧೩೦ ‖ ಹೀಗೆ ಗುರು-ಚರಿತ್ರಾಮೃತದಲ್ಲಿ ಗುರುಪರಂಪರೆಯಾದ ನಿಶ್ಚಿತಾರ್ಥವನ್ನು ೧೨ನೇ ಅಧ್ಯಾಯದಲ್ಲಿ ಹೇಳಿದೆ—

ಇತಿ ಗುರುಚರಿತ್ರ ಪರಮ ಕಥಾ ಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ ಶ್ರೀ ಗುರು ಚತುರ್ಥಾಶ್ರಮಗ್ರಹಣಂ ಚ ಶ್ರೀ ಗುರು ಪರಂಪರಂ ಕಥನಂನಾಮ ದ್ವಾದಶೋ-ಧ್ಯಾಯಃ ‖ ೧೨ ‖ ಶ್ರೀ ಗುರುದೇವದತ್ತ ‖

**— ೧೨ನೇ ಅಧ್ಯಾಯ ಸಮಾಪ್ತ —**

# ೧೩ನೇಯ ಅಧ್ಯಾಯ

## — ಶ್ರೀ ಗುರುಗಳು ಬ್ರಾಹ್ಮಣನ ಹೊಟ್ಟೆಶೂಲೆಯನ್ನು ಕಳೆದು ಸಾಯಂದೇವನಿಗೆ ವರಕೊಟ್ಟದ್ದು —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಗ ಶಿಷ್ಯಶಿರೋಮಣಿಯಾದ ನಾಮಧಾರಕನು, ಸಿದ್ಧಮುನಿಗಳ ಚರಣಕ್ಕೆರಗಿ ಕೈಮುಗಿದು ವಿನಯದಿಂದ ॥ ೧ ॥ — ಸ್ವಾಮೀ, ಜಯಜಯ ಸಿದ್ಧಮುನಿಗಳೇ ನೀವು ನಮ್ಮನ್ನು ಈ ಸಂಸಾರ ಸಾಗರದಿಂದ ದಾಟಿಸುವಂಥವರಾಗಿದ್ದೀರಿ. ನೀವು ಜ್ಞಾನವನ್ನು ಪ್ರಕಾಶಮಾಡಿ ಹೇಳಿದಿರಿ ಅದನ್ನು ಕೇಳಿ ನನ್ನ ಮನಸ್ಸಿಗೆ ಬಹಳ ಸುಖವಾಯಿತು. ॥ ೨ ॥ ಸ್ವಾಮೀ, ನಾನು ಇಷ್ಟೊತ್ತಿನವರೆಗೆ ಗುರುಚರಿತ್ರ ಕಥಾಮೃತವನ್ನು ಸೇವಿಸಿದರೂ ಇನ್ನೂ ಸೇವಿಸಬೇಕೆಂಬ ಆಶೆಯು ಹೆಚ್ಚಾಗಿರುವದು. ಆ ನನ್ನ ಆಶೆಯನ್ನು ಶಮನ ಮಾಡಲಿಕ್ಕೆ ಕೃಪಾನಿಧಿಗಳಾದ ತಾವೊಬ್ಬರೇ ಸಮರ್ಥರು. ॥ ೩ ॥ ಗುರುಚರಿತ್ರೆಯು ಕಾಮಧೇನುವಿನಂತಿರುವದು. ನೀವು ಇಷ್ಟು ವಿಸ್ತಾರವಾಗಿ ಹೇಳಿದರೂ ನನ್ನ ಮನಸ್ಸು ಇನ್ನೂ ತೃಪ್ತಿಯಾಗಿಲ್ಲ. ಮತ್ತೂ ಕೇಳಬೇಕೆಂಬ ಅಪೇಕ್ಷೆಯಾಗುತ್ತದೆ. ॥ ೪ ॥ ಹಸಿವೆಯಿಂದ ಪೀಡಿತವಾದ ದನಗಳು ಹುಲ್ಲಿನರಾಶಿಯ ಹತ್ತರ ಹೋಗಿ ಹೊಟ್ಟೆತುಂಬ ತಿನ್ನದೆ ಹ್ಯಾಗೆ ತಿರುಗಿ ಬರುವದಿಲ್ಲವೋ ॥ ೫ ॥ ಮತ್ತು ಕನಸಿನಲ್ಲಿ ಮಜ್ಜಿಗೆಯನ್ನು ಕಾಣದಂಥವನಿಗೆ ಹಾಲು ತುಂಬಿದ ಪಾತ್ರೆಯು ಸಿಕ್ಕರೆ ಅವನು ಹೊಟ್ಟೆ ತುಂಬುವ ತನಕ ಕುಡಿಯದೆಹಾಗೇ ಬಿಟ್ಟು ಬರುವದಿಲ್ಲವೋ ॥ ೬ ॥ ಅದರಂತೆ ಸ್ವಾಮೀ ಅಲ್ಪಜ್ಞಾನಿಯಾದ ನಾನು ಅವಿದ್ಯಾಮೋಹದಿಂದ ಸುತ್ತುಗಟ್ಟಲ್ಪಟ್ಟವನಾಗಿ ಶ್ರೀ ಗುರುಗಳ ಸ್ವರೂಪವನ್ನು ತಿಳಿಯದೆ ಬಹಳ ಕಷ್ಟಬಡುತ್ತಿದ್ದೆನು. ॥ ೭ ॥ ನನ್ನ ಅಜ್ಞಾನವೆಂಬ ಕತ್ತಲೆಯನ್ನು ಕಳೆಯಲಿಕ್ಕೆ ಸೂರ್ಯಸಮಾನರಾದ ತಾವು ಬಂದು ಶ್ರೀ ಗುರುಗಳ ನಿಜ ಸ್ವರೂಪವನ್ನು ನನಗೆ ಪ್ರಕಾಶಗೊಳಿಸಿದಿರಿ. ॥ ೮ ॥ ನೀವು ಮಾಡಿದ ಉಪಕಾರ ತೀರಿಸುವದಕ್ಕೆ ಪ್ರತಿಯಾಗಿ

ಯಾವ ಉತ್ತಮ ಉಪಾಯ ಮಾಡಬೇಕು? ಕಲ್ಪವೃಕ್ಷವನ್ನು ಕೊಟ್ಟವರಿಗೆ ಪ್ರತಿಯಾಗಿ ಏನು ಕೊಡಲು ಬರುವದು! ಹೇಳುವಿರೊ? ॥ ೯ ॥ ಚಿಂತಾಮಣಿಯನ್ನು ಕೊಟ್ಟವರಿಗೆ ಪ್ರತಿಯಾಗಿ ಕೊಡಲು ಪ್ರಥ್ವಿಯಲ್ಲಿ ಯಾವ ಪದಾರ್ಥವಿದೆ! ಸಿದ್ಧರಾಯರೇ ಪ್ರತ್ಯುಪಕಾರಾರ್ಥವಾಗಿ ನಾನು ತಮಗೆ ಏನು ಕೊಡಬಲ್ಲೆನು? ॥ ೧೦ ॥ ನಿಮ್ಮ ಉಪಕಾರ ತೀರಿಸುವದು ನನ್ನ ವಂಶಪರಂಪರೆಯವರಿಗೂ ಆಗುವದಿಲ್ಲ. ಎಂದು ಅತ್ಯಂತ ಭಕ್ತಿಯಿಂದ ಅವರ ಚರಣಕ್ಕೆ ನಮಸ್ಕರಿಸಿ— ॥ ೧೧ ॥ ಸ್ವಾಮೀ ತಾವು ಧರ್ಮದ ಅರ್ಥವನ್ನು ನಿರೂಪಿಸಿದ್ದನ್ನು ಕೇಳಿ, ನನ್ನ ಸ್ವಾರ್ಥವು ಸಿದ್ಧಿಯನ್ನು ಹೊಂದಿ, ನನ್ನಲ್ಲಿ ಪರಮಾರ್ಥ ಬುದ್ಧಿಯು ಹುಟ್ಟಿತು ಆದರಿಂದ ನಾನು ನಿರಂತರ ಗುರುಭಜನೆಯನ್ನು ಮಾಡುತ್ತಿರುವೆನು. ॥ ೧೨ ॥ ಸ್ವಾಮೀ, ಶ್ರೀಗುರುಗಳು ಪ್ರಯಾಗದಲ್ಲಿದ್ದಾಗ ಮಾಧವ ಸರಸ್ವತಿಗಳಿಗೆ ಸನ್ಯಾಸವನ್ನು ಕೊಟ್ಟಮೇಲೆ ಮುಂದೆ ಅಲ್ಲಿಯ ಖ್ಯಾತಿಯು ಏನು ನಡೆಯಿತೆಂಬದನ್ನು ನನಗೆ ವಿಸ್ತಾರ ವಾಗಿ ಹೇಳಬೇಕು ಎಂದನು. ॥ ೧೩ ॥ ಅವನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು ಅವನ ತಲೆಯಮೇಲೆ ತಮ್ಮ ವರದ ಹಸ್ತವನ್ನಿಟ್ಟು ಆಶ್ವಾಸನಪೂರ್ವಕ— ॥ ೧೪ ॥ ಎಲೈ ಶಿಷ್ಯನೇ, ನೀನು ಒಳ್ಳೇ ಧನ್ಯನು! ನಿನಗೆ ಶ್ರೀ ಗುರುಚರಣದಲ್ಲಿ ನಿಜವಾದ ಭಕ್ತಿಯು ಉತ್ಪನ್ನವಾಯಿತು. ಈ ಭವಸಾಗರವನ್ನು ದಾಟುವವರಲ್ಲಿ ನೀನೊಬ್ಬ ನೆಂದು ತಿಳಿ. ॥ ೧೫ ॥ ನೀನು ಶ್ರೀಗುರುವಿನ ಮಹಿಮೆಯನ್ನು ತಿಳಕೊಂಡಿ, ನಿನ್ನ ಪ್ರಶ್ನೆಯನ್ನು ಕೇಳಿ ನನಗೆ ಅತ್ಯಂತ ಆನಂದವಾಗಿದೆ, ಎಂದು ಅಂದು ಮತ್ತೆ— ॥ ೧೬ ॥ ಎಲೈ ಶಿಷ್ಯನೇ, ನಿನಗೆ ಶ್ರೀಗುರುಗಳ ವಿಖ್ಯಾತ ವಾದ ಚರಿತ್ರೆಯನ್ನು ಹೇಳುವೆನು ಕೇಳು. ಶ್ರೀ ಗುರುಗಳು ಆ ಮಾಧವಸರಸ್ವತಿಗೆ ಜ್ಞಾನೋಪದೇಶ ಮಾಡಿದ ಮೇಲೆ ಕೆಲವು ದಿವಸ ಅಲ್ಲಿ ಇದ್ದರು. ॥ ೧೭ ॥ ಆ ಕಾಲದಲ್ಲಿ ಅವರ ಮಹಿಮೆಯು ಪ್ರಖ್ಯಾತವಾಗಿ ಪ್ರಕಟ ವಾಯಿತು. ಆಗ ನಾಲ್ಕೂ ಕಡೆಯಿಂದ ಅಸಂಖ್ಯ ಮುನಿಗಳು ಬಂದು ಅವರ ಶಿಷ್ಯರಾದರು. ಅವರಲ್ಲಿ ಮಾಧವ ಸರಸ್ವತಿಯೇ ಮುಖ್ಯನು. ॥ ೧೮ ॥ ಆ ಎಲ್ಲ ಶಿಷ್ಯರ ಹೆಸರು ಹೇಳಹತ್ತಿದರೆ ಕಥೆಯು ವಿಸ್ತಾರವಾಗುವದು, ಅವರಲ್ಲಿ ಏಳು ಜನ ಶಿಷ್ಯರು ಪ್ರಖ್ಯಾತರಿದ್ದರು, ಅವರ ಹೆಸರುಗಳನ್ನು ಹೇಳುತ್ತೇನೆ ಏಕಚಿತ್ತದಿಂದ ಕೇಳು. ॥ ೧೯ ॥

ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ

(೧) ಬಾಲಸರಸ್ವತಿ, (೨) ಕೃಷ್ಣಸರಸ್ವತಿ, (೩) ಉಪೇಂದ್ರಸರಸ್ವತಿ, (೪) ಮಾಧವಸರಸ್ವತಿ, (೫) ಸದಾನಂದ ಸರಸ್ವತಿ ॥ ೨೦ ॥ (೬) ಜ್ಞಾನಜ್ಯೋತಿಸರಸ್ವತಿ, ಈ ಪ್ರಕಾರ ಆರುಮಂದಿ ಏಳನೆಯವನು ಸಿದ್ಧನು ನಾನೇ, ನಾಮಧಾರಕಾ ಇನ್ನೂ ಅಸಂಖ್ಯ ಶಿಷ್ಯರಿದ್ದು ಅವರು ಒಬ್ಬರಿಗಿಂತ ಒಬ್ಬರು ಶ್ರೇಷ್ಠರಾಗಿದ್ದರು ॥ ೨೧ ॥ ಆಮೇಲೆ ಶ್ರೀಗುರುಗಳು ಆ ಎಲ್ಲ ಶಿಷ್ಯರೊಡನೆ ಪ್ರಯಾಗದಿಂದ ದಕ್ಷಿಣಕ್ಕೆ ಹೊರಟು ಹಾದಿಯಲ್ಲಿ ಹತ್ತುವ ಸಮಸ್ತ ಕ್ಷೇತ್ರಗಳನ್ನು ಪಾವನ ಮಾಡುತ್ತ ತಮ್ಮ ಜನ್ಮಭೂಮಿಯಾದ "ಕರಂಜ" ನಗರಕ್ಕೆ ಬಂದರು. ॥ ೨೨ ॥ ಅಲ್ಲಿ ಅವರ ತಂದೆ-ತಾಯಿಗಳು ದರ್ಶನ ತಕ್ಕೊಂಡು ಶ್ರೀಗುರುಗಳ ಪಾದಕ್ಕೆ ನಮಸ್ಕರಿಸಿದರು ಆಮೇಲೆ ಅವರ ನಾಲ್ಕುಮಂದಿ ತಮ್ಮಂದಿರೂ ಒಬ್ಬ ತಂಗಿಯೂ ಎಲ್ಲರೂ ಬಂದು ಗುರುಗಳ ದರ್ಶನ ಹೊಂದಿ ನಮಸ್ಕಾರ ಮಾಡಿದರು. ॥ ೨೩ ॥ ಆಗ ಶ್ರೀಗುರುಮೂರ್ತಿಯನ್ನು ನೋಡಿ ಆ ನಗರದ ಯಾವತ್ತೂ ಜನರು ಒಳ್ಳೇ ಹರ್ಷದಿಂದ ಬಂದು ದರ್ಶನ ತಕ್ಕೊಂಡು ನಮಸ್ಕರಿಸಿ ಪೂಜೆಯನ್ನು ಮಾಡಿದರು. ॥ ೨೪ ॥ ಆಗ ಪ್ರತಿಯೊಬ್ಬರು ತಮ್ಮ ತಮ್ಮ ಮನೆಗೆ ಭಿಕ್ಷೆಗೆ ಬರಬೇಕೆಂದು ಕರೆದರು. ಆಗ ಶ್ರೀಗುರುಗಳು ಅನಂತರೂಪ ತಕ್ಕೊಂಡು ಪ್ರತಿಯೊಂದು ಮನೆಯಲ್ಲಿ ಪೂಜೆಯನ್ನು ಸ್ವೀಕರಿಸಿದರು. ॥ ೨೫ ॥ ಅದನ್ನು ಕಂಡು ಯಾವತ್ತು ಜನರು ಆಶ್ಚರ್ಯಬಟ್ಟು— ಇವರು ನಿಶ್ಚಯವಾಗಿ ವಿಷ್ಣುವಿನ ಅವತಾರವು ! ಯತಿ ವೇಷವನ್ನು ಮಾತ್ರ ಧರಿಸಿರುವರು. ಇವರು ಪ್ರತ್ಯಕ್ಷ ಶಂಕರರು ! ॥ ೨೬ ॥ ಇವರಿಗೆ ಮನುಷ್ಯರೆಂದು ಯಾರು ಅನ್ನುತ್ತಾರೊ ಅವರಿಗೆ ನರಕವಾಗುತ್ತದೆ. ತ್ರಿಮೂರ್ತಿಗಳು ಅನೇಕ ಕಾರಣಗಳ ಸಲುವಾಗಿ ಈ ಪ್ರಕಾರ ಅವತಾರ ತಕ್ಕೊಳ್ಳುತ್ತಾರೆ, ಎಂದು ಅನ್ನುತ್ತಿದ್ದರು ॥ ೨೭ ॥ ಆಮೇಲೆ ಶ್ರೀಗುರುಗಳ ತಾಯಿ ತಂದೆಗಳು ಒಳ್ಳೇ ಭಕ್ತಿಯಿಂದ ತಾವೂ ಶ್ರೀಗುರುಗಳನ್ನು ಪೂಜಿಸಿದರು ಆಗ ಶ್ರೀಗುರುಗಳು ಶ್ರೀಪಾದ ಶ್ರೀವಲ್ಲಭರಾಗಿ ಯತಿ ರೂಪವನ್ನು ತಕ್ಕೊಂಡು ನಿಂತರು, ಆಗ ಅವರ ತಾಯಿಗೆ ಪೂರ್ವಜನ್ಮದ ಸ್ಮರಣೆಯಾಯಿತು. ॥ ೨೮ ॥ ಆಗ ಅವಳು ಶ್ರೀಗುರುಗಳ ಪಾದಕಮಲಗಳ ಮೇಲೆ ತನ್ನ ಮಸ್ತಕವನ್ನಿಟ್ಟು— ಎಲೈ ಸತ್ಯಸಂಕಲ್ಪನಾದ ಚಂದ್ರಮೌಳಿಯೇ ನಾನು ಮಾಡಿದ ಶನಿಪ್ರದೋಷ ಪೂಜೆಯ ಫಲವು ಈಗ ಲಭಿಸಿತು. ॥ ೨೯ ॥

ಎಂದು ತನ್ನ ಪತಿಯನ್ನು ಕುರಿತು, ತನ್ನ ಪೂರ್ವಜನ್ಮದ ಕಥೆಯನ್ನು ಹೇಳಿ— ಸ್ವಾಮೀ ನಾನು ಹಿಂದಿನ ಜನ್ಮದಲ್ಲಿ ನನಗೆ ಪ್ರಖ್ಯಾತನೂ ಜಗದ್ವಂದ್ಯನೂ ಆದ ತಮ್ಮಂಥ ಪುತ್ರನಾಗಬೇಕೆಂದು ಇದೇ ಶ್ರೀಪಾದೇಶ್ವರರನ್ನು ಏಕ ಮನಸ್ಸಿನಿಂದ ಪೂಜಿಸಿದೆನು || ೩೦ || ಅದೇ ಶ್ರೀಪಾದರೇ ಈಗ ನಮ್ಮ ಪುತ್ರರಾಗಿ ಅವತರಿಸಿ ನಮ್ಮ ಜನ್ಮವನ್ನು ಸಫಲ ಮಾಡಿದರು ಎಂದು ಎಲ್ಲ ಸಂಗತಿಯನ್ನು ಹೇಳಿದಳು. || ೩೧ || ಆಮೇಲೆ ಆ ದಂಪತಿಗಳಿಬ್ಬರೂ ಗುರು-ಚರಣಕ್ಕೆರಗಿ ಕರುಣಾಸ್ವರದಿಂದ— ಜಗನ್ನಾಥಾ, ಯತಿರಾಯಾ, ನೀನು ನಮ್ಮನ್ನು ಈ ಭವಸಾಗರದಿಂದ ಉದ್ಧಾರ ಮಾಡಬೇಕು ಎಂದು ವಿನಂತೀ ಮಾಡಿಕೊಂಡರು || ೩೨ || ಆಗ ಶ್ರೀಗುರುಗಳು— ತಾಯಿ-ತಂದೆಗಳಿರಾ ಕೇಳಿರಿ. ಒಂದುವೇಳೆ ಯಾರ ಮಗನು ಸನ್ಯಾಸಿಯಾಗುವನೋ ಅವರ ನಾಲ್ವತ್ತೆರಡು ಕುಲದವರು ಉದ್ಧಾರರಾಗುವರೆಂದು ಶಾಸ್ತ್ರವಚನವದೆ. || ೩೩ || ಮತ್ತು ಅವರು ಶಾಶ್ವತವಾದ ಬ್ರಹ್ಮಲೋಕವನ್ನೂ ಅಢಳ ಪದವಿಯನ್ನೂ ಹೊಂದುವರು ಮುಂದೆ ಅವರ ವಂಶದಲ್ಲಿ ಹುಟ್ಟಿದವರೂ ಸಹ ಶಾಶ್ವತವಾದ ಬ್ರಹ್ಮಲೋಕವನ್ನು ಪಡೆಯುವರು || ೩೪ || ಅವರಿಗೆ ಯಮಯಾತನೆಯ ಭಯವು ಎಂದೂ ಇಲ್ಲ. ಅವರ ವಂಶದ ಪೂರ್ವಜರು ಒಂದುವೇಳೆ ನರಕದಲ್ಲಿದ್ದರೆ ಅವರಿಗೂ ಶಾಶ್ವತವಾದ ಬ್ರಹ್ಮಲೋಕ ಪ್ರಾಪ್ತಿಯಾಗುವದು. || ೩೫ || ಆದಕಾರಣ ನಾನು ಈ ಮುಖ್ಯವಾದ ಸನ್ಯಾಸವನ್ನು ಸ್ವೀಕರಿಸಿದೆನು. ಇನ್ನು ನಿಮಗೆ ಸ್ವಲ್ಪಾದರೂ ಯಮನ ಭಯವಿಲ್ಲ. ನಿಮಗೆ ಸತ್ಯವಾಗಿ ಬ್ರಹ್ಮಪದ ಪ್ರಾಪ್ತವಾಗುವದು || ೩೬ || ಮತ್ತು ನಿಮಗೆ ವಚನ ಕೊಡುವದೇನಂದರೆ— ನಿಮ್ಮ ಮಕ್ಕಳು ಶತಾಯುಷಿಗಳಾಗಿ ಅಷ್ಟೈಶ್ವರ್ಯವನ್ನು ಹೊಂದಿ ಸದಾ ಆನಂದದಿಂದಿರುವರು || ೩೭ || ನೀವು ನಿಮ್ಮ ಮಕ್ಕಳು ಸಂಪತ್ತುಳ್ಳವರಾದದ್ದನ್ನೂ ಪುತ್ರ-ಪೌತ್ರರನ್ನೂ ನೋಡುತ್ತ ಸುಖದಿಂದ ಇದ್ದು ಅಂತ್ಯಕಾಲದಲ್ಲಿ ಶ್ರೀಕಾಶೀಕ್ಷೇತ್ರವನ್ನು ಹೊಂದುವಿರಿ || ೩೮ || ಕಾಶೀಕ್ಷೇತ್ರವು ಮುಕ್ತಿಸ್ಥಾನವೆಂದು ವೇದಶಾಸ್ತ್ರಗಳಲ್ಲಿ ಪ್ರಸಿದ್ಧಿಯಿದೆ. ನೀವು ಸ್ವಲ್ಪಾದರೂ ಮನಸ್ಸಿನಲ್ಲಿ ಚಿಂತಿಸಬೇಡಿರಿ, ಎಂದು ಬಹುಪರಿಯಿಂದ ಹೇಳಿದರು. || ೩೯ || ಆಗ ಶ್ರೀಗುರುಗಳ ತಂಗಿಯಾದ ರತ್ನಾಯಿಯು ಬಂದು ಅವರಿಗೆ ನಮಸ್ಕಾರ ಮಾಡಿ ವಿನಯದಿಂದ ಹೇಳಿಕೊಳ್ಳುತ್ತ ||೪೦||

+ ದಿಗಂಬರಾ ದಿಗಂಬರಾ +

+ ಶ್ರೀಪಾದವಲ್ಲಭ ದಿಗಂಬರಾ +

ಸ್ವಾಮೀ, ನಾನು ಈ ಸಂಸಾರ ಮಾಯೆಯಿಂದ ಸುತ್ತುಗಟ್ಟಲ್ಪಟ್ಟು ಈ ಭವಸಾಗರದಲ್ಲಿ ಮುಳುಗುತ್ತೇನೆ, ನನ್ನನ್ನು ರಕ್ಷಿಸಿರಿ, ರಕ್ಷಿಸಿರಿ. ‖ ೪೧ ‖ ಮೊದಲು ನನ್ನನ್ನು ನಿರ್ಲೇಪ ಮಾಡಿರಿ ಆಮೇಲೆ ನಾನು ತಪಸ್ಸಿಗೆ ಹೋಗುವೆನು. ಎಂದಳು. ಆಕೆಯ ಮಾತು ಕೇಳಿ ಗುರುಗಳು— ‖ ೪೨ ‖ ಅವ್ವಾ, ತಂಗಿ ರತ್ನಾಯಿಯೇ ಕೇಳು. ಸ್ತ್ರೀಯರಿಗೆ ನಿಶ್ಚಯವಾಗಿ ಪತಿಸೇವೆಯಿಂದಲೇ ಮೋಕ್ಷವುಂಟಾಗುವದು. ಆದಕಾರಣ ಸ್ತ್ರೀಯರು ಪತಿಸೇವೆಯ ಹೊರತು ಎರಡನೇ ವೃತ್ತಿಯನ್ನು ಹಿಡಿಯಬಾರದು. ‖ ೪೩ ‖ ಪತಿಸೇವೆಯಿಂದಲೇ ಅವರು ಈ ಭವಸಾಗರವನ್ನು ದಾಟಬೇಕಾಗುತ್ತದೆ. ಅವರು ಎಷ್ಟೆಷ್ಟು ಭಕ್ತಿಯಿಂದ ಪತಿಸೇವೆಯನ್ನು ಉತ್ತಮ ರೀತಿ ಮಾಡುತ್ತಾರೋ ಅಷ್ಟಷ್ಟು ಉತ್ತಮವಾದ ಫಲವನ್ನು ಹೊಂದುತ್ತಾರೆ. ‖ ೪೪ ‖ ಈ ಭವಸಾಗರವನ್ನು ದಾಟಲಿಕ್ಕೆ ಸ್ತ್ರೀಯರಿಗೆ ಪತಿಸೇವೆಯೇ ಮುಖ್ಯವು ಎಂದು ಮನಸ್ಸಿನಲ್ಲಿ ನಿರ್ಧಾರ ಮಾಡಿಕೊಂಡು ಪತಿಯು ಶಿವಸ್ವರೂಪನೆಂದು ಉತ್ತಮ ರೀತಿ ಸೇವಾ ಮಾಡಬೇಕು. ‖ ೪೫ ‖ ಪತಿಯಿಂದಲೇ ಸ್ತ್ರೀಯರ ಉದ್ಧಾರವಾಗುವದೆಂದು ವೇದ ಪುರಾಣಗಳಲ್ಲಿ ಪ್ರಸಿದ್ಧವಾಗಿ ಹೇಳಿದೆ. ತಂಗೀ ನೀನು ಮನಸ್ಸಿನಲ್ಲಿ ಖತಿಗೊಳ್ಳಬೇಡ. ನಿನಗೆ ಉತ್ತಮ ಗತಿಯಾಗುವದು ಎಂದು ಹೇಳಿದರು. ‖ ೪೬ ‖ ಶ್ರೀಗುರುಗಳ ಮಾತು ಕೇಳಿ ರತ್ನಾಯಿಯು ಮತ್ತೆ ವಿನಯದಿಂದ ಕೈಮುಗಿದು, ಶ್ರೀಗುರುಗಳಿಂದ ಬ್ರಹ್ಮಜ್ಞಾನವನ್ನು ಕೇಳುವಳು. ‖ ೪೭ ‖ ಸಾಮೀ, ನೀವು ಹ್ಯಾಗೂ ಭೂತ–ಭವಿಷ್ಯ ಕಾಲಗಳ ಸಂಗತಿಗಳನ್ನು ಹೇಳುವಿರಿ. ಆದರೆ ನನ್ನ ಪ್ರಾರಬ್ಧವು ಯಾವಪ್ರಕಾರವಾಗಿರುವದೆಂಬದನ್ನು ಹೇಳಿರಿ ಎಂದಳು. ‖ ೪೮ ‖ ಆಗ ಶ್ರೀಗುರುಗಳು— ಎಲೌ ರತ್ನಾಯಿಯೇ, ಈಗ ನೀನು ತಪಸ್ಸು ಮಾಡಲಿಚ್ಛಿಸುತ್ತೀ! ಆದರೆ ನೀನು ಮೊದಲು ಪೂರ್ವಜನ್ಮದ ಸಂಚಿತ ಕರ್ಮಫಲವನ್ನು ಅನುಭವಿಸುವದು ಅವಶ್ಯವಾಗಿದೆ. ಹೇಳುವೆನು ಕೇಳು ‖೪೯‖ ನೀನು ಪೂರ್ವಜನ್ಮದಲ್ಲಿ ಒಂದು ಆಕಳನ್ನು ಕಾಲಿನಿಂದ ಒದ್ದೆ, ಮತ್ತು ನಿಮ್ಮ ನೆರೆಹೊರೆಯಲ್ಲಿರುವ ದಂಪತಿಗಳಲ್ಲಿ ವಿರೋಧವನ್ನುಂಟು ಮಾಡಿ, ಅವರನ್ನು ಜಗಳಾಡಲಿಕ್ಕೆ ಹಚ್ಚಿದಿ. ‖ ೫೦ ‖ ಈ ದೋಷಗಳಿಂದ ಈಗ ನಿನಗೆ ಅನೇಕ ಬಾಧೆಗಳಾಗುವವು. ನೀನು ಆಕಳನ್ನು ಕಾಲಿನಿಂದ ಒದ್ದದ್ದರಿಂದ, ನಿನ್ನ ಸರ್ವಾಂಗದಲ್ಲಿ ಕುಷ್ಠರೋಗ

ಉಂಟಾಗುವದು. ‖ ೫೧ ‖ ಗಂಡಹೆಂಡರಲ್ಲಿ ಜಗಳ ಹಚ್ಚಿದ್ದರಿಂದ ನಿನ್ನ ಗಂಡನು ತಪಸ್ವಿಯಾಗಿ ನಿನ್ನನ್ನು ಬಿಟ್ಟುಹೋಗುವನು. ಇದೇ ನಿನ್ನ ಕರ್ಮಫಲವು ಎಂದು ಅಂದರು. ‖ ೫೨ ‖ ಆದನ್ನು ಕೇಳಿ ಆ ರತ್ನಾಯಿಯು ಬಹುರೀತಿಯಿಂದ ದುಃಖಿಸಿ— ಗುರುನಾಥಾ, ನನ್ನನ್ನು ತೀವ್ರವಾಗಿ ಉದ್ಧಾರ ಮಾಡು ಎಂದು ಅವರ ಪಾದಗಳ ಮೇಲೆ ಬಿದ್ದು ಹೊರಳಾಡುತ್ತ ಆ ಪಾದಗಳನ್ನು ಗಟ್ಟಿಯಾಗಿ ಹಿಡಿದಳು. ‖ ೫೩ ‖ ಆಗ ಶ್ರೀಗುರುಗಳು— ಎಲೌ ಬಾಲೆಯೇ ಕೇಳು. ಈಗಲೇ ನಿನ್ನ ಗಂಡನು ನಿನ್ನನ್ನು ಬಿಡುವದಿಲ್ಲ. ನೀನು ಇನ್ನೂ ಸ್ವಲ್ಪಕಾಲ ಆತನೊಡನೆ ಸುಖದಿಂದಿರುತ್ತೀ, ನಿನ್ನ ಮುಪ್ಪಿನ ಕಾಲಕ್ಕೆ ಮಾತ್ರ ನಿನ್ನ ಪತಿಯು ಸನ್ಯಾಸಿಯಾಗಿ ಹೋಗುವನು. ‖ ೫೪ ‖ ಆಮೇಲೆ ನಿನ್ನ ದೇಹವು ಕುಷ್ಠರೋಗದಿಂದ ಪೀಡಿತವಾಗುವದು. ಆಮೇಲೆ ನಿನ್ನ ದೇಹವು ಮತ್ತೆ ಶುದ್ಧವಾಗಿ ನಿನಗೆ ಉತ್ತಮ ಗತಿಯಾಗುವದು. ‖ ೫೫ ‖ ನೀನು ದೇಹವು ಕೆಟ್ಟಾಗ ನಿನಗೆ ನನ್ನ ಪೂರ್ಣದರ್ಶನವಾಗಿ, ಆಗ ನಿನ್ನ ಪಾಪವು ಸುಟ್ಟು ಹೋಗುವದು. ಅದಕ್ಕೆ ನಿನಗೆ ಒಂದು ಕ್ಷೇತ್ರವನ್ನು ಹೇಳುವೆನು ಚೆನ್ನಾಗಿ ಕೇಳು ‖ ೫೬ ‖ ದಕ್ಷಿಣ ದೇಶದಲ್ಲಿ ಭೀಮಾತೀರದಲ್ಲಿ "ಪಾಪವಿನಾಶ" ಎಂಬ ತೀರ್ಥವದೆ. ನಿನಗೆ ಆ ರೋಗವು ಪ್ರಾಪ್ತವಾದಮೇಲೆ ನೀನು ಭರವಸೆಮಾಡಿ ಅಲ್ಲಿಗೆ ಹೋಗು. ‖ ೫೭ ‖ ಈ ಭೂಮಂಡಲದಲ್ಲಿ ಅತಿ ವಿಖ್ಯಾತ ಹಾಗು ಸಮರ್ಥವಾದ ಗಂಧರ್ವಪುರ (ಗಾಣಗಾಪುರ) ವೆಂಬ ಅನೇಕ ತೀರ್ಥಗಳುಳ್ಳ ಕ್ಷೇತ್ರವು ಪ್ರಸಿದ್ಧವಾದ ಭೀಮಾ–ಅಮರಜಾ ನದಿಗಳ ಸಂಗಮದಲ್ಲಿರುವದು. ‖ ೫೮ ‖ ಎಂದು ಹೇಳಿ ಶ್ರೀಗುರುಗಳು ತಮ್ಮ ಸಕಲ ಶಿಷ್ಯರೊಡನೆ ದಕ್ಷಿಣಕ್ಕೆ ಹೊರಟು, ಗೋದಾವರಿ ಉಗಮಸ್ಥಾನವಾದ ತ್ರಿಯಂಬಕ ಕ್ಷೇತ್ರಕ್ಕೆ ಬಂದರು. ‖ ೫೯ ‖ ಆಮೇಲೆ ನಾಶಿಕ ಕ್ಷೇತ್ರಕ್ಕೆ ಬಂದರು. ಆ ತೀರ್ಥದ ಮಹಿಮೆಯು ಪುರಾಣದಲ್ಲಿ ಪ್ರಸಿದ್ಧವಾಗಿರುವದು. ‖ ೬೦ ‖ ಎಲೈ ನಾಮಧಾರಕನೇ ಆ ತೀರ್ಥದ ಎಲ್ಲ ಮಹಿಮೆಯನ್ನು ಹೇಳಹತ್ತಿದರೆ ಕಥೆಯು ವಿಸ್ತಾರವಾಗುವದು. ಈಗ ನಿನಗೆ ಸಂಕ್ಷೇಪವಾಗಿ ಹೇಳುವೆನು ಕೇಳು. ‖ ೬೧ ‖ ಬ್ರಹ್ಮಾಂಡವನ್ನು ಬಿಟ್ಟು ಹರಿಯುವಂಥ ಬಹರಾರ್ಣವವೆಂಬ ಹೆಸರುಳ್ಳ ಆ ಗೋದಾವರಿ ನದಿಯ ಮಹಿಮೆಯು ನಮಗೆ ಹೇಳಲಿಕ್ಕೆ ಅಪಾರವಾಗಿರುವದು. ‖ ೬೨ ‖

ಒಂದಾನೊಂದು ದಿವಸ ಸಕಲ ಮುನೀಶ್ವರರು ಕೂಡಿ ಮನಸ್ಸಿನಲ್ಲಿ— ಜಟಾಧಾರಿಯಾದ ಶ್ರೀಶಂಕರನು ಈ ಬ್ರಹ್ಮಾಂಡವನ್ನು ಬಿಟ್ಟು ಹರಿಯುವಂಥ ಗೋದಾವರಿಯನ್ನು ನಿರಂತರವಾಗಿ ತನ್ನ ತಲೆಯಲ್ಲಿ ಧರಿಸಿರುತ್ತಾನೆ. ಆ ಗೋದಾಗಂಗೆಯು ಭೂಮಿಗೆ ಬಂದರೆ, ಅದರಲ್ಲಿ ನಾವೆಲ್ಲರೂ ಸ್ನಾನ ಮಾಡಿ ಪಾವನರಾಗುವೆವು. ಅದು ಭೂಮಿಗೆ ಬರುವಂತೆ ಏನು ಉಪಾಯ ಮಾಡಬೇಕೆಂದು ಆಲೋಚಿಸುತ್ತಿದ್ದರು. || ೬೩ || ಎಲೈ ನಾಮಧಾರಕನೇ, ಪೂರ್ವದಲ್ಲಿ ಎಲ್ಲ ಮಹಾ ತಪಸ್ವಿಗಳೂ ಪುಣ್ಯವಂತರೂ ಆದ ಋಷಿಗಳೂ ಮುನಿಗಳೂ ತಮ್ಮ ಆಶ್ರಮದ ಹತ್ತರ ನಿತ್ಯ ಪ್ರಾತಃಕಾಲಕ್ಕೆ ಬತ್ತವನ್ನು ಬಿತ್ತಿ, ತಮ್ಮ ಮಂತ್ರ ಸಾಮರ್ಥ್ಯದಿಂದ ಅವುಗಳನ್ನು ಆಗ್ಗೇ ಬೆಳಿಸಿ, ಅವುಗಳಲ್ಲಿ ಕಾಳುಗಳಾಗುವಂತೆ ಮಾಡಿ ಮುಂದೆ ಆ ಬತ್ತದ ಅಕ್ಕಿಯಿಂದಲೇ ಅನ್ನಮಾಡಿ ಮಧ್ಯಾನದಲ್ಲಿ ಭೋಜನ ಮಾಡುತ್ತಿದ್ದರು. ಅದರಂತೆ ಬ್ರಹ್ಮರ್ಷಿಯೂ ಮಹಾ ತಪಸ್ವಿಯೂ ಆದ ಗೌತಮಮುನಿಯಾದರೂ ದಿನಾಲು ತಾನು ಅನುಷ್ಠಾನ ಮಾಡುವ ಪರ್ಣಶಾಲೆಯ ಹತ್ತರವೇ ಬತ್ತವನ್ನು ಬಿತ್ತಿ ಉಪಜೀವಿಸುತ್ತಿದ್ದನು. || ೬೪-೬೫ || ಅದನ್ನು ತಿಳಿದು ಆ ಋಷಿಗಳೆಲ್ಲರು— ಗೌತಮಮುನಿಯು ಮಹಾ ಜ್ಞಾನಿಯೂ ಮುಖ್ಯವಾಗಿ ಈಶ್ವರನ ಭಕ್ತರೂ ಆಗಿರುವರು. || ೬೬ || ಅವರಿಗೆ ಏನಾದರೊಂದು ಸಂಕಟ ತಂದರೆ ಆ ಗೋದಾನದಿಯನ್ನು ಭೂಮಿಯಲ್ಲಿ ನಮ್ಮ ಕಡೆಗೆ ತರುವರು ಆಗ ನಾವು ಅದರಲ್ಲಿ ಸ್ನಾನ ಮಾಡಿದರೆ ನಮಗೆ ಪುಣ್ಯ ಬರುವದು. || ೬೭ || ಯಾಕಂದರೆ:

**ಶ್ಲೋಕ—** ಯಾಗತಿರ್ಯೋಗ ಯುಕ್ತಾನಾಂ ಮುನೀನಾಂ ಊರ್ಧ್ವರೇತಸಾಂ ।
ಸಾಗರೇಸ್ಸರ್ವಭೂತಾನಾಂ ಗೌತಮೀತೀರ ವಾ ಸಿನಾಂ || ೧ || || ೬೮ ||

**ಅರ್ಥ—** ಊರ್ಧ್ವರೇತರಾಗಿ ಯೋಗಾಭ್ಯಾಸ ಮಾಡಿ ಕೋಟಿ ವರ್ಷಗಳವರೆಗೆ ಉತ್ತಮ ರೀತಿಯಿಂದ ತಪಸ್ಸು ಮಾಡುವ ಮುನಿಗಳಿಗೆ ಯಾವ ಗತಿಯಾಗುತ್ತದೋ ಅದೇ ಗತಿಯು ಈ ಗೌತಮೀತೀರದಲ್ಲಿ ವಾಸ ಮಾಡುವಂಥ ಯಾವತ್ತು ಪ್ರಾಣಿಗಳಿಗೆ ಆಗುತ್ತದೆ. || ೬೯ || ಎಂದು ಶಾಸ್ತ್ರವದೆ. ಆದಕಾರಣ ನಾವು

ಏನಾದರೂ ಯತ್ನಮಾಡಿ ಗೌತಮರಿಗೆ ಸಂಕಟವನ್ನು ತಂದರೆ ಆ ಗೋದಾವರಿಯು ಭೂಮಿಗೆ ಬರುವಳು. ಆಗ ಅದರಿಂದ ನಮಗೆ ಲಾಭವಾಗುವದು. || ೭೦ || ಎಂದು ಆ ಋಷಿಗಳೆಲ್ಲರು ಆಲೋಚನೆ ಮಾಡಿ ಮಾಯೆಯನ್ನು ರಚಿಸಿ ದರ್ಭೆಯಿಂದ ಸವತ್ಸವಾದ ಒಂದು ಆಕಳನ್ನು ಮಾಡಿ ಗೌತಮರ ಗದ್ದೆಯೊಳಗಿನ ಬತ್ತವನ್ನು ತಿನ್ನಲಿಕ್ಕೆ ಬಿಟ್ಟರು. || ೭೧ || ಆಗ ಕರ್ಮಾನುಷ್ಠಾನಪರರಾಗಿರುವ ಗೌತಮರು ಎದ್ದು ಬರುವಂತಿಲ್ಲದ್ದರಿಂದ ಆ ಸವತ್ಸ ಆಕಳನ್ನು ನೋಡಿ ಅವುಗಳನ್ನು ಓಡಿಸುವದಕ್ಕೆ ಕೂತಲ್ಲಿಯೇ ಒಂದು ದರ್ಭೆಯನ್ನು ಅಭಿಮಂತ್ರಿಸಿ ಬಿಟ್ಟರು. || ೭೨ || ಅದು ಭಯಂಕರ ವಜ್ರಾಸ್ತ್ರಕ್ಕೆ ಸಮಾನವಾದ ಶಸ್ತ್ರವಾಗಿ ಆ ಆಕಳಿಗೆ ಬಡಿದಕೂಡಲೆ ಅದು ಮರಣಹೊಂದಿತು ಆಗ ಗೌತಮರಿಗೆ ಗೋಹತ್ಯಾದೋಷವು ಬಂತು. || ೭೩ || ಅದನ್ನು ಕಂಡು ಆ ಋಷಿಗಳೆಲ್ಲರೂ ಗೌತಮರ ಹತ್ತಿರ ಬಂದು— ಸ್ವಾಮೀ, ಗೌತಮ ಮಹಾಮುನಿಗಳೇ ನಿಮಗೆ ಗೋಹತ್ಯಾ ದೋಷವು ಬಂತು ಅದನ್ನು ಕಳಕೊಳ್ಳಲಿಕ್ಕೆ ನೀವು ಗೋದಾವರಿಯನ್ನು ಭೂಮಿಗೆ ತರಬೇಕು ಅದರ ಹೊರತು ನಿಮಗೆ ಶುದ್ಧಿಯಿಲ್ಲ ಎಂದು ಪ್ರಾಯಶ್ಚಿತ್ತವನ್ನು ಹೇಳಿದರು || ೭೪ || ಎಲೈ ನಾಮಧಾರಕನೇ ಆ ಕಾರಣದಿಂದ ಗೌತಮರು ಶ್ರೀ ಶಂಕರನನ್ನು ಕುರಿತು ಸಹಸ್ರ ವರ್ಷಗಟ್ಟಲೆ ತಪಸ್ಸು ಮಾಡಲಾಗಿ ಆತನು ಅವರ ತಪಸ್ಸಿಗೆ ಮೆಚ್ಚಿ— ಎಲೈ ಗೌತಮನೇ ನಿನಗೇನು ವರವು ಬೇಕು ಬೇಡು ಕೊಡುವೆನು ಎಂದನು. || ೭೫ || ಆಗ ಗೌತಮರು-- ಸರ್ವೇಶ್ವರಾ, ದಯಾನಿಧಿಯಾದ ಶಂಕರಾ. ನೀನು ನನಗೆ ಪ್ರಸನ್ನನಾಗಿರುತ್ತೀ ಅಂದಮೇಲೆ ಯಾವತ್ತೂ ಚರಾಚರ ಪ್ರಾಣಿಗಳು ಉದ್ಧಾರವಾಗುವದಕ್ಕೆ ಆ ಗೋದಾಗಂಗೆಯನ್ನು ಈ ಭೂಮಿಗೆ ಕಳಿಸಬೇಕೆಂದು ನನ್ನ ಪ್ರಾರ್ಥನೆ ಯದೆ ಎಂದು ಅಂದರು. || ೭೬ || ಆ ಗೌತಮರ ವಿನಂತಿಯಂತೆ ಶ್ರೀ ಶಂಕರನು ಮನುಷ್ಯರ ಪಾಪ ಕ್ಷಾಲನಾರ್ಥವಾಗಿ ಆ ಗೋದಾವರಿಯನ್ನು ಭೂಮಂಡಲಕ್ಕೆ ಕಳಿಸಿದನು. || ೭೭ || ಈ ಪ್ರಕಾರ ಗೌತಮರು ಆ ಗೋದಾವರಿಯನ್ನು ಭೂಲೋಕಕ್ಕೆ ತಂದು ತಾವು ಆ ನದಿಯಲ್ಲಿ ಸ್ನಾನಮಾಡಿ ತಮ್ಮ ಗೋಹತ್ಯಾ ದೋಷವನ್ನು ಕಳಕೊಂಡರು. ಆಗ ಆ ಯಾವತ್ತು ಋಷಿಗಳು ಸಂತೋಷದಿಂದ ಅದರಲ್ಲಿ ಸ್ನಾನಮಾಡಿ ಪವಿತ್ರರಾದರು. ಅವರ

ಪುಣ್ಯದಿಂದ ಈಗ ಆ ನದಿಯಲ್ಲಿ ಸ್ನಾನಮಾಡಿದ ಪ್ರತಿಯೊಬ್ಬರು ತಮ್ಮ ಪಾಪಗಳನ್ನು ಕಳಕೊಳ್ಳುವರು. ಈ ಪ್ರಕಾರವಾಗಿರುವ ಆ ಗೋದಾವರಿಯನ್ನು ವರ್ಣಿಸಲು ಯಾರು ಶಕ್ಯರು? ಅದರ ಮಹತ್ವವನ್ನು ತಿಳಿದು ಶ್ರೀ ಗುರುಗಳು ಅಲ್ಲಿಗೆ ಬಂದರು. ॥ ೭೮ ॥ ಈ ಪ್ರಕಾರ ಶ್ರೀ ಗುರುಗಳು ಅತಿ ಪವಿತ್ರವಾದ ಆ ನದೀತೀರದ ಯಾತ್ರೆಯನ್ನು ಮಾಡಿ ಮುಂದೆ ಲೋಕಾನುಗ್ರಹಕ್ಕಾಗಿ ಮಂಜರಿಕಾ ಎಂಬಲ್ಲಿಗೆ ಬಂದರು. ಅಲ್ಲಿ ಮಾಧವಾರಣ್ಯ ನೆಂಬ ಒಬ್ಬ ವಿಖ್ಯಾತ ಮುನಿಯು ಇದ್ದನು. ॥ ೭೯-೮೦ ॥ ಅವನು ಸದಾ ಹೃದಯದಲ್ಲಿ ಶ್ರೀ ನರಸಿಂಹ ಮೂರ್ತಿ ಯನ್ನು ಧ್ಯಾನಿಸಿ ಮಾನಸ ಪೂಜೆಯನ್ನು ಮಾಡುತ್ತಿದ್ದನು. ಆಗ ಶ್ರೀ ಗುರುಗಳು ಅವನಿಗೆ ತನ್ನ ಮಾನಸಪೂಜ ಯಲ್ಲಿಯ ಮೂರ್ತಿಯಂತೆ ಕಂಡರು ॥ ೮೧ ॥ ಆಗ ಅವನು ಮನಸ್ಸಿನಲ್ಲಿ ಆಶ್ಚರ್ಯಪಟ್ಟು ಅತಿ ಭಕ್ತಿಯಿಂದ ಬಂದು ಶ್ರೀಗುರುಗಳಿಗೆ ನಮಸ್ಕಾರ ಮಾಡಿ ಬಹುರೀತಿಯಿಂದ ಸ್ತೋತ್ರ ಮಾಡಹತ್ತಿದನು ॥ ೮೨ ॥ ಹ್ಯಾಗಂದರೆ—

**ಶ್ಲೋಕ— ಯದ್ದಿವ್ಯ ಪಾದದ್ವಯ ಮೇವ ಸಾಕ್ಷಾತ್ ಅಧಿಸ್ಥಿತಾಂ ದೇವ ನದೀ ಸಮೀಪೇ ।**
**ಯದುತ್ತರೇ ತೀರ ನಿವಾಸಿ ರಾಮೋ ಲಕ್ಷ್ಮೀಪತಿಸ್ತ್ವಂ ನಿವಸಶ್ಚ ನಿತ್ಯಮ್ ॥**

**ಅರ್ಥ—**ಯಾವನ ದಿವ್ಯ ಚರಣದ್ವಯಗಳು, ಗೋದಾವರಿಯ ಸನ್ನಿಧಿಯಲ್ಲಿ ಪ್ರತ್ಯಕ್ಷವಾಗಿರುವವೋ, ಇಂಥ ಯಾವಾಗಲೂ ಉತ್ತರ ದಂಡೆಯಲ್ಲಿ ವಾಸಮಾಡುವ 'ರಾಮ, ನಾಮಕ ಲಕ್ಷ್ಮೀಪತಿ'ಯೇ ನೀನಿರುವಿ ಎಂದು ಮಾಧವಾರಣ್ಯನು ಹರ್ಷದಿಂದ ಸ್ತುತಿಸಿದನು. ಆಗ ಶ್ರೀ ಗುರುಗಳು ಆನಂದ ಹೊಂದಿ ಅವನನ್ನು ಕುರಿತು ॥ ೮೩ ॥—

**ಶ್ಲೋಕ— ಅತ್ಯಂತ ಮಾರ್ಗಸ್ಥಿತಿಮಾರ್ಗರೂಪಂ ಅತ್ಯಂತ ಯೋಗಾದಧಿಕಾರ ತತ್ವಂ ।**
**ಮಾರ್ಗಂಚ ಮಾರ್ಗಂಚ ವಿಚಿನ್ವತೋಮೇ ಮಾರ್ಗೋದಯಂ ಮಾಧವದರ್ಶನಯತೇ ॥ ೮೪ ॥**

**ಅರ್ಥ—** ಹೇ ಮಾಧವಾ ಯೋಗದೊಳಗಿನ ಸಂಹೃತಿಮಾರ್ಗ, ಸೃಷ್ಟಿಮಾರ್ಗ, ಮತ್ತು ಸ್ಥಿತಿಮಾರ್ಗ

ಗಳಲ್ಲಿ ನೀನು ಸ್ಥಿತಿಮಾರ್ಗಕ್ಕೆ ಯೋಗ್ಯನಿದ್ದು ಅದರ ಬಗ್ಗೆ ಅತ್ಯಂತವಾಗಿ ಶೋಧಿಸುತ್ತಿರುವಿ ನಿನಗೆ ಅಂಥ ಮಾರ್ಗ ವನ್ನು ನಾನು ತೋರಿಸುವೆ ಎಂದು ಅಂದರು ಮಾಧವಾರಣ್ಯನು ಈ ಪ್ರಕಾರ ಶ್ರೀ ಗುರುಗಳ ಸ್ವರೂಪವನ್ನು ಕಂಡು ಅತ್ಯಂತ ಆನಂದ ಹೊಂದಲು ಶ್ರೀ ಗುರುಗಳು ಆಶ್ವಾಸನಕೊಟ್ಟು ಅವನಿಗೆ ತಮ್ಮ ನಿಜರೂಪವನ್ನು ತೋರಿಸಿ ದರು. ॥ ೮೫ ॥ ಆಗ ಮಾಧವಾರಣ್ಯ ಮುನಿಯು ಸಂತುಷ್ಟನಾಗಿ ವಿನಯದಿಂದ ಕೈಮುಗಿದು ನಾನಾರೀತಿ ಯಿಂದ ಶ್ರೀ ಗುರುಗಳನ್ನು ಸ್ತುತಿಸಹತ್ತಿದನು ॥ ೮೬ ॥ ಜಯ ಜಯ ಜಗದ್ಗುರುವೇ, ತ್ರಯಮೂರ್ತಿ ಅವತಾ ರನೇ, ಪರಮಪುರುಷನೇ, ಜಗನ್ನಾಥನೇ' ನೀನು ವಿಶ್ವತಾರಕನಿದ್ದು, ಭೂಮಿಯಲ್ಲಿ ಮನುಷ್ಯನಾಗಿ ಅವತರಿ ಸಿರುತ್ತೀ, ಈಗ ನನಗೆ ತಮ್ಮ ಚರಣದರ್ಶನವನ್ನಿತ್ತು ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರಿ ಎಂದನು. ॥ ೮೭– ೮೮ ॥ ಈ ಪ್ರಕಾರ ಅವನ ಸ್ತುತಿಯನ್ನು ಕೇಳಿ ಶ್ರೀ ಗುರುಗಳು ಸಂತೋಷಬಟ್ಟು ಅತಿ ಹರ್ಷದಿಂದ— ಎಲೈ ಮಾಧವನೇ, ನಿನ್ನ ಮಂತ್ರವು ಸಿದ್ಧಿಯಾಯಿತೆಂದು ತಿಳಿ. ನಿನಗೆ ನಿಶ್ಚಯವಾಗಿ ಸದ್ಗತಿಯಾಗಿ ಬ್ರಹ್ಮಲೋಕ ಪ್ರಾಪ್ತಿಯಾಗುವದು. ॥ ೯೦ ॥ ನೀನು ನಿತ್ಯ ಮಾನಸ ಪೂಜೆಯಲ್ಲಿ ಶ್ರೀ ನರಸಿಂಹ ಮೂರ್ತಿಯನ್ನು ಪೂಜಿಸುತ್ತೀ ಯಷ್ಟೇ? ಅವನು ನಿನಗೆ ಪ್ರತ್ಯಕ್ಷನಾಗುವನು ಈ ಬಗ್ಗೆ ನೀನು ಮನಸ್ಸಿನಲ್ಲಿ ಏನೂ ಸಂಶಯಗೊಳ್ಳ ಬೇಡ. ॥ ೯೧ ॥ ಎಂದು ಅವನಿಗೆ ಹೇಳಿ ಶ್ರೀ ಗುರುಗಳು ಯಾವತ್ತು ಶಿಷ್ಯರು ಸಹಿತವಾಗಿ ಅಲ್ಲಿಂದ ಹೊರಟು ಅದೇ ಗೋದಾ ತಟಾಕದಲ್ಲಿರುವ ಮಹಾ ಕ್ಷೇತ್ರವಾದ "ವಾಸರ ಬ್ರಹ್ಮೇಶ್ವರ" ಕ್ಷೇತ್ರಕ್ಕೆ ಬಂದರು. ॥ ೯೨ ॥ ಆಮೇಲೆ ಶ್ರೀ ಗುರುಗಳು ಎಲ್ಲ ಶಿಷ್ಯರೊಡನೆ ಆ ನದಿಯಲ್ಲಿ ಸ್ನಾನ ಮಾಡುತ್ತಿರಲು ಅಲ್ಲಿಗೆ ಒಬ್ಬ ಬ್ರಾಹ್ಮಣನು ಬಂದು, ॥ ೯೩ ॥ ತನ್ನ ಅತಿಶಯವಾದ ಹೊಟ್ಟೆನೋವನ್ನು ತಡೆಯಲಾರದೆ ಕಷ್ಟಬಡುತ್ತ ಆ ನದಿಯ ದಂಡೆಯ ಮೇಲೆ ಬಿದ್ದು ಹೊರಳಾಡುತ್ತ, ಆ ನದಿಯಲ್ಲಿ ಬಿದ್ದು ಪ್ರಾಣಕೊಡಬೇಕೆಂದು ಯೋಚಿಸುತ್ತಿದ್ದನು. ॥ ೯೪ ॥ ಅವನಿಗೆ ನಿತ್ಯವೂ ಹೊಟ್ಟೆಶೂಲೆಯು ಬಹಳವಾಗಿರುತ್ತಿತ್ತು. ಊಟ ಮಾಡಿದರಂತೂ ಇದೇ ಪ್ರಕಾರ ಪ್ರಾಣಾಂತಿಕ ವಾದ ದುಃಖವಾಗುತ್ತಿತ್ತು. ಆದ್ದರಿಂದ ಅವನು ನಿತ್ಯ ಉಪವಾಸ ಮಾಡಿ, ॥ ೯೫ ॥ ಫಲಾಹಾರ ಮಾಡುತ್ತಿ

ದ್ದನು. ಈ ರೀತಿಯಾಗಿ ಅವನಿಗೆ ಅನ್ನವೇ ವೈರಿಯಾಗಿ ಊಟ ಮಾಡಿದ ಕೂಡಲೆ ಪ್ರಾಣ ಹೋಗುವಂತಾಗುತ್ತಿತ್ತು. ॥ ೯೬ ॥ ಆದರಿಂದ ಅವನು ಪಕ್ಷಕ್ಕೊಮ್ಮೆ, ಮಾಸಕ್ಕೊಮ್ಮೆ ಊಟ ಮಾಡಿದರೂ ಅವನ ಹೊಟ್ಟೆಯಲ್ಲಿ ಬಹಳ ವ್ಯಥೆಯಾಗುತ್ತಿತ್ತು. ಹೀಗೆ ಅವನು ಅನೇಕ ದಿವಸಗಳಿಂದ ಕಷ್ಟಬಡುತ್ತಿದ್ದನು ॥ ೯೭ ॥ ಆದರಿಂದ ಅವನು ಒಂದು ತಿಂಗಳು ಉಪವಾಸ ಮಾಡಿ, ಈಗ ಶ್ರೀಗುರುಗಳು ನೋಡಿದ ಹಿಂದಿನ ದಿವಸ ಮಹಾನವಮಿ ಹಬ್ಬ ಇದ್ದು ಅದೇ ಊರಲ್ಲಿ ಬಹಳ ಮಿಷ್ಟಾನ್ನವನ್ನುಂಡಿದ್ದನು ॥ ೯೮ ॥ ಆಗ ಅನ್ನವನ್ನು ಬಹಳ ಉಂಡದ್ದರಿಂದ ಅವನ ಹೊಟ್ಟೆಯು ಬಹಳವಾಗಿ ನೋಯುಹತ್ತಿತು, ಆದರಿಂದ ಅವನು ಆ ನದೀತೀರದಲ್ಲಿ ಉರುಳಾಡುತ್ತ ತೀವ್ರವಾಗಿ ಪ್ರಾಣಬಿಡಬೇಕೆಂದು ನೋಡುತ್ತಿದ್ದನು ॥ ೯೯ ॥ ಈ ಪ್ರಕಾರ ಅವನು ದುಃಖಬಡುತ್ತ— ಅಯ್ಯೋ! ಈ ಪಾಪರೂಪದಿಂದ ವರ್ತಿಸುವಂಥ ನನಗೆ ಈ ಸಂಸಾರವು ಬೇಡ ಇನ್ನು ನಾನು ಈ ಗಂಗೆಯಲ್ಲಿ ಹಾರಿಕೊಂಡು ಈ ಶರೀರವನ್ನು ಬಿಡುವೆನು. ॥ ೧೦೦ ॥ ಸರ್ವರಿಗೂ ಅನ್ನವೇ ಪ್ರಾಣವೂ ಜೀವನವೂ ಆಗಿದೆ. ಅನ್ನವಿಲ್ಲದೆ ಯಾರು ಬದುಕುವರು ? ನನಗೆ ಮಾತ್ರ ಅನ್ನವೇ ವೈರವಾಗಿರುವದರಿಂದ ಈಗ ನನಗೆ ಮರಣವೇ ಯೋಗ್ಯವು. ॥ ೧೦೧ ॥ ಎಂದು ಮನಸ್ಸಿನಲ್ಲಿ ನಿಶ್ಚಯ ಮಾಡಿ, ಗಂಗಾಪ್ರವೇಶ ಮಾಡುತ್ತೇನೆಂದು ಹೊಟ್ಟೆಗೆ ಒಂದು ಕಲ್ಲು ಕಟ್ಟಿಕೊಂಡು ನದಿಯಲ್ಲಿ ಹೊಕ್ಕು ॥ ೧೦೨ ॥ ಮನಸ್ಸಿನಲ್ಲಿ ಪರಮಾತ್ಮನಾದ ಶ್ರೀ ಶಂಕರನನ್ನು ಸ್ಮರಿಸಿ— ದೇವಾ, ಶಂಕರನೇ, ನಾನು ಹುಟ್ಟಿ ಭೂಭಾರ ಆದೆನು. ನಾನು ಎಂದೂ ಪರೋಪಕಾರವನ್ನೂ ಅನ್ನ ದಾನಾದಿಗಳನ್ನೂ ಮಾಡಲಿಲ್ಲ ॥ ೧೦೩ ॥ ಈ ಜನ್ಮದಲ್ಲಿ ಯಾವ ಪುಣ್ಯವನ್ನೂ ಮಾಡಲಿಲ್ಲ ಪೂರ್ವದ ನೂರಾರು ಜನ್ಮಗಳಿಂದಲೂ ನನಗೆ ಪುಣ್ಯದ ಫಲವಿಲ್ಲೆಂಬಂತೆ ಕಾಣುತ್ತದೆ. ಆದ್ದರಿಂದ ಈಗ ನಾನು ಈ ಕಷ್ಟವನ್ನು ಅನುಭವಿಸುತ್ತೇನೆ. ॥ ೧೦೪ ॥ ದೇವಾ ನಾನು ಪೂರ್ವದಲ್ಲಿ ಬ್ರಾಹ್ಮಣರ ಗ್ರಾಮಗಳನ್ನು ಅಪಹರಿಸಿದೆನೋ, ಇಲ್ಲವೆ ವಿಶ್ವಾಸ ಕೊಟ್ಟು ಕಪಿಲಧೇನುವನ್ನು ಕೊಂದೆನೋ, ॥ ೧೦೫ ॥ ಶಿವಪೂಜೆಯನ್ನು ಪೂರ್ಣವಾಗಿ ಮಾಡಲಿಲ್ಲೋ? ಗುರು ನಿಂದೆ ಮಾಡಿದೆನೋ? ತಾಯಿ-ತಂದೆಗಳ ಅಪ್ಪಣೆಯನ್ನು ಮೀರಿದೆನೋ? ॥ ೧೦೬ ॥

ಅಥವಾ ಪಶುಗಳನ್ನೇನಾದರೂ ಕೊಂದೆನೋ? ಅಡವಿಗೆ ಬೆಂಕಿಯನ್ನು ಹಚ್ಚಿದೆನೋ? ತಂದೆ–ತಾಯಿಗಳನ್ನು ಬಿಟ್ಟು ಬೇರೆಯಾಗಿ ಹೆಂಡತಿಯನ್ನು ಕೂಡಿಕೊಂಡು ಸುಖದಿಂದಿದ್ದೆನೋ? ‖ ೧೦೭ ‖ ಅಥವಾ ಪೂರ್ವಜನ್ಮದಲ್ಲಿ ಬ್ರಾಹ್ಮಣರ ಧಿಕ್ಕಾರ ಮಾಡಿದೆನೋ? ವೈಶ್ವದೇವ ಸಮಯದಲ್ಲಿ ಬಂದ ಅತಿಥಿಗೆ ಅನ್ನವನ್ನು ಹಾಕಲಿಲ್ಲವೋ? ‖ ೧೦೮ ‖ ನಾನು ಪೂರ್ವಜನ್ಮದಿಂದಲೂ ತಾಯಿ–ತಂದೆಗಳನ್ನು ಬಿಟ್ಟು, ನಾನೊಬ್ಬನೇ ಸುಖವಾಗಿ ಉಣ್ಣುತ್ತ ಬೇರೆಯಾಗಿದ್ದೆನೋ? ಏನೋ ಯಾವದೂ ತಿಳಿಯದು, ಪೂರ್ವದಲ್ಲಿ ಮಾಡಿದ ಕರ್ಮ ಫಲದಿಂದ ಈಗ ನಾನು ಈಪರಿ ಕಷ್ಟವನ್ನನುಭೋಗಿಸುವೆನು. ‖ ೧೦೯ ‖ ಎಂದು ಅವನು ತನ್ನ ಪಾಪವನ್ನು ನೆನಪಿಗೆ ತಂದುಕೊಂಡು ನದಿಯಲ್ಲಿ ಹೋಗಹತ್ತಿದನು ಅದನ್ನು ಕಂಡು ಶ್ರೀ ಗುರುಗಳು— ಎಲೈ ಶಿಷ್ಯರೇ ಆ ಬ್ರಾಹ್ಮಣನನ್ನು ತೀವ್ರವಾಗಿ ಕರೆಯಿರಿ. ‖ ೧೧೦ ‖ ಅವನು ನದಿಯಲ್ಲಿ ಮುಳುಗಿ ಪ್ರಾಣಬಿಡಲುದ್ಯುಕ್ತನಾಗಿರುವನು, ಅವನನ್ನು ತೀವ್ರವಾಗಿ ಇಲ್ಲಿಗೆ ಕರಕೊಂಡು ಬರ್ರಿ, ಆತ್ಮಹತ್ಯೆಯು ಮಹಾದೋಷಕರವು. ಅವನು ಯಾರು? ಅವನು ಸುಮ್ಮಸುಮ್ಮನೆ ಯಾಕೆ ಪ್ರಾಣಬಿಡುತ್ತಾನೆ ಕೇಳೋಣ ಎಂದು ಅಂದರು ‖ ೧೧೧ ‖ ಗುರುಗಳ ಮಾತು ಕೇಳಿ ಕೆಲವು ಶಿಷ್ಯರು ಓಡಿಹೋಗಿ, ನದಿಯೊಳಗಿಂದ ಆ ಬ್ರಾಹ್ಮಣನನ್ನು ಹೊರಗೆ ತೆಗೆದು ಗುರುಗಳ ಹತ್ತರ ಕರಕೊಂಡು ಬಂದರು. ‖ ೧೧೨ ‖ ಅನಾಥರಿಗೆ ಕಲ್ಪತರುವೂ ದುಃಖಿತರಿಗೆ ದಯಾನಿಧಿಯೂ ಆದ ಶ್ರೀ ಗುರುಗಳು ಆ ಬ್ರಾಹ್ಮಣನನ್ನು ಕುರಿತು— ಎಲೈ ಬ್ರಾಹ್ಮಣನೇ, ನೀನು ಪ್ರಾಣವನ್ನೇಕೆ ಬಿಡಬೇಕೆನ್ನುತ್ತೀ? ಆತ್ಮಹತ್ಯೆಯು ಮಹಾದೋಷವು ನಿನ್ನ ವೃತ್ತಾಂತವನ್ನಾದರೂ ನಮಗೆ ಹೇಳು ಎಂದರು ‖ ೧೧೩–೧೧೪ ‖ ಆಗ ಅವನು— ಸ್ವಾಮೀ ಯತಿರಾಯರೇ, ಅದನ್ನು ಕೇಳಿ ನೀವು ಏನುಮಾಡುವಿರಿ? ನಾನು ಜನ್ಮವನ್ನು ಹೊಂದಿ ಬದುಕಿ ಭೂ ಭಾರ ಆಗಿದ್ದೇನೆ. ‖ ೧೧೫ ‖ ಸ್ವಾಮೀ, ನಾನು ಉದರ ವ್ಯಥೆಯಿಂದ ಬಹು ಕಷ್ಟಬಡುತ್ತ ಪಕ್ಷಕ್ಕೊಮ್ಮೆ ಮಾಸಕ್ಕೊಮ್ಮೆ ಊಟ ಮಾಡುತ್ತೇನೆ. ಇನ್ನು ಈ ಹೊಟ್ಟೆಸೋವನ್ನು ಸಹನ ಮಾಡಲಿಕ್ಕೆ ನನ್ನಿಂದ ಶಕ್ಯವಿಲ್ಲ. ಆದ್ದರಿಂದ ನಾನು ಪ್ರಾಣಕೊಡುತ್ತೇನೆ. ಸ್ವಾಮಿಗಳೇ ಏನು ಹೇಳಲಿ? ‖ ೧೧೬ ‖ ನನಗೆ ಅನ್ನವೇ ವೈರಿಯಾಗಿ

ರುತ್ತದೆ. ಗುರುನಾಥಾ, ಜಗದ್ಗುರುವೇ, ಈ ಶರೀರವು ಅನ್ನದಿಂದ ರಕ್ಷಣವಾಗುವದು. ಅನ್ನವಿಲ್ಲದೆ ಬದುಕುವದಾದರೂ ಹೇಗೆ ? ಎಂದನು. || ೧೧೭ || ಅವನ ಮಾತು ಕೇಳಿ ಶ್ರೀ ಗುರುಗಳು — ಎಲೈ ಬ್ರಾಹ್ಮಣನೇ, ನಮ್ಮ ಹತ್ತರ ಒಂದು ಔಷಧವದೆ. ನಿನಗೆ ಒಂದು ಮಾತು ಹೇಳುತ್ತೇನೆ ಕ್ಷಣ ಹೊತ್ತು ಕೇಳು. ಇವತ್ತಿಗೆ ನಿನ್ನ ಉದರ ವ್ಯಥೆಯು ಹೋಯಿತೆಂದು ನಿಶ್ಚಯವಾಗಿ ತಿಳಿ || ೧೧೮ || ಮನಸ್ಸಿನಲ್ಲಿ ಸ್ವಲ್ಪಾದರೂ ಸಂಶಯ ಹಿಡಿಯಬೇಡ, ಅಂತಃಕರಣದಲ್ಲಿ ಹೆದರಬೇಡ. ಇನ್ನು ನಿನ್ನ ಬೇನೆಯು ಎಲ್ಲಿಯೋ ಓಡಿಹೋಯಿತು ಈ ದಿವಸ ನೀನು ಹೊಟ್ಟೆತುಂಬಾ ಊಟ ಮಾಡು ಎಂದು ಹೇಳಿದರು || ೧೧೯ || ಅವರ ಮಾತು ಕೇಳಿ ಆ ಬ್ರಾಹ್ಮಣನು ಆದರಂತೆ ನಡೆಯಲಿಕ್ಕೆ ಮನಸ್ಸು ಘಟ್ಟಿಮಾಡಿ, ಶ್ರೀ ಗುರು ಚರಣಗಳಲ್ಲಿ ತನ್ನ ಮಸ್ತಕವನ್ನಿಟ್ಟು ನಮಸ್ಕರಿಸಿದನು. || ೧೨೦ || ಅಷ್ಟರಲ್ಲಿ ಆ ಗ್ರಾಮದ ಅಧಿಕಾರಿಯಾದ ಒಬ್ಬ ಬ್ರಾಹ್ಮಣನು ನದಿಯ ಸ್ನಾನಕ್ಕಾಗಿ ಬಂದು, || ೧೨೧ || ಅಲ್ಲಿ ಕೂತಿರುವ ಶ್ರೀ ಗುರುಗಳನ್ನು ನೋಡಿ ಹತ್ತರ ಹೋಗಿ ತ್ರಿಕರಣ ಪೂರ್ವಕ ಒಳ್ಳೇ ಭಕ್ತಿಯಿಂದ ಅವರ ಚರಣಗಳಿಗೆ ನಮಸ್ಕಾರ ಮಾಡಿದನು. || ೧೨೨ || ಆಗ ಶ್ರೀ ಶಂಕರಾವತಾರಿಯಾದ ಶ್ರೀ ಗುರುಗಳು ಅವನಿಗೆ ಅಭಯವನ್ನು ಕೊಟ್ಟು— ಎಲೈ ಬ್ರಾಹ್ಮಣಾ, ನಿನ್ನ ಹೆಸರೇನು ? ನಿನ್ನ ಊರು ಯಾವದು ? ಈಗ ನೀನು ಎಲ್ಲಿ ಇರುತ್ತೀ ? ಎಂದು ಕೇಳಿದರು. || ೧೨೩ || ಆಗ ಆ ಬ್ರಾಹ್ಮಣನು ಕೈ ಮುಗಿದು— ಸ್ವಾಮೀ ನಾನು ಕೌಂಡಿಣ್ಯ ಗೋತ್ರದ ಆಪಸ್ತಂಭ ಶಾಖೆಯವನು || ೧೨೪ || ನನ್ನ ಹೆಸರು “ ಸಾಯಂದೇವ ”ನೆಂಬುವರು ನನ್ನ ವಾಸಸ್ಥಳವು ಕಡಗಂಚೀ ನಗರವು. ನಾನು ಒಬ್ಬ ಯವನನ ಸೇವೆಯಲ್ಲಿದ್ದು ಉದರ ನಿರ್ವಾಹಕ್ಕಾಗಿ ಈ ಗ್ರಾಮದ ಅಧಿಕಾರಿಯಾಗಿ ಬಂದು ಒಂದು ವರ್ಷವಾಯಿತು. ತಮ್ಮ ದರ್ಶನ ಮಾತ್ರದಿಂದ ನಾನು ಧನ್ಯನಾದೆನು. || ೧೨೫–೧೨೬ || ತಾವು ನಿಶ್ಚಯವಾಗಿ ಈ ವಿಶ್ವವನ್ನು ಉದ್ಧರಿಸುವಂಥವರಾದ್ದರಿಂದಲೇ, ಈಗ ನನಗೆ ದರ್ಶನ ಕೊಟ್ಟಿರಿ, ನಾನು ನಿಶ್ಚಯವಾಗಿ ಕೃತಾರ್ಥನಾದೆನು. ಇನ್ನು ನನ್ನ ಜನ್ಮಾಂತರದ ದೋಷಗಳೆಲ್ಲವೂ ಹೋದವು. || ೧೨೭ || ತಮ್ಮ ಅನುಗ್ರಹವನ್ನು ಹೊಂದಿದ ಯಾವತ್ತು

ಜನರು, ಈ ಸಂಸಾರಸಾಗರದಿಂದ ಮುಕ್ತರಾಗುವರು. ಸ್ವಾಮೀ, ಗುರುಗಳೇ, ಏನೂ ಪ್ರಯತ್ನವಿಲ್ಲದೆ ಈ ದಿವಸ ನನಗೆ ತಮ್ಮ ದರ್ಶನವಾಗಿ ನನಗೆ ಬಹಳ ಸಂತೋಷವಾಗಿದೆ. ‖ ೧೭೮ ‖

**ಶ್ಲೋಕ:— ಗಂಗಾಪಾಪಂ, ಶಶೀತಾಪಂ, ದೈನ್ಯಂ ಕಲ್ಪತರುಃ ತಥಾ ।**
**ಪಾಪಂ ತಾ ಪಂಚದೈನ್ಯಂಚ ಸದ್ಯಃ ಸಾಧುಸಮಾಗಮಃ ॥ ‖ ೧೭೯ ‖**

**ಅರ್ಥ —** ಗಂಗಾದರ್ಶನ ಹಾಗು ಸ್ನಾನದಿಂದ ಪಾಪವೂ, ಚಂದ್ರನಿಂದ, ತಾಪವೂ ಕಲ್ಪತರುವಿನಿಂದ ದೈನ್ಯವೂ ಒಂದೊಂದೇ ನಾಶವಾಗುವವು ಆದರೆ ಸಾಧುಗಳ ಸಮಾಗಮವಾದಕೂಡಲೆ ಪಾಪ-ತಾಪ-ದೈನ್ಯ ಈ ಮೂರು ಒಮ್ಮೆಲೇ ನಾಶವಾಗುವವು ‖ ೧೩೦ ‖ ಸ್ವಾಮೀ ಸಾಧುಗಳ ದರ್ಶನ ಹೊಂದಿದವನು ಧನ್ಯನಾಗುವನೆಂದು ಶಾಸ್ತ್ರಗಳು ಹೇಳುತ್ತವೆ. ಆದರಂತೆ ಈ ದಿವಸ ನಾನು ನನ್ನ ಪಾಪ-ತಾಪ-ದೈನ್ಯಗಳನ್ನು ದೂರ ಮಾಡುವಂಥ ತಮ್ಮ ಚರಣಗಳನ್ನು ಕಂಡು, ಚತುರ್ವಿಧ ಪುರುಷಾರ್ಥಗಳನ್ನು ಹೊಂದಿ ಧನ್ಯನಾದೆನು ‖ ೧೩೧ ‖ ಎಂದು ಸ್ತುತಿಮಾಡಿ ಪುನಃ ಅವರ ಚರಣಕ್ಕೆ ನಮಸ್ಕಾರ ಮಾಡಿದನು. ಆಗ ಶ್ರೀ ಜಗದ್ಗುರುಗಳು ಆ ನಾಯಂದೇವನಿಗೆ ಅಭಯವನ್ನು ಕೊಟ್ಟು ‖ ೧೩೨ ‖ --ಎಲೈ ನಾಯಂದೇವನೇ, ಈಗ ನೀನು ನೋಲು ನಮ್ಮ ಮಾತನ್ನು ಕೇಳು ಇಕೋ, ನಿನ್ನಹತ್ತರ ನಿಂತಿದ್ದ ಈ ಬ್ರಾಹ್ಮಣನು ಉದರವ್ಯಥೆಯಿಂದ ಪ್ರಾಣತ್ಯಾಗ ಮಾಡುತ್ತಾನೆ. ‖ ೧೩೩ ‖ ಆದಕಾರಣ ಇವನ ರೋಗ ಉಪಶಮನಾರ್ಥವಾಗಿ ನಾವು ನಿನಗೆ ಒಂದು ಔಷಧವನ್ನು ಹೇಳುವೆವು ಕೇಳು. ಈಗ ನೀನು ಇವನನ್ನು ನಿಮ್ಮ ಮನೆಗೆ ಕರಕೊಂಡು ಹೋಗಿ ಇವನಿಗೆ ಮೃಷ್ಟಾನ್ನ ಭೋಜನ ಮಾಡಿಸು ‖ ೧೩೪ ‖ ಇವನು ಆ ಅನ್ನವನ್ನುಂಡಕೂಡಲೇ ನಿಶ್ಚಯವಾಗಿ ಇವನ ವ್ಯಥೆಯೂ ರೋಗವೂ ಒಂದೂ ಉಳಿಯುವದಿಲ್ಲ. ಇವನು ಅತ್ಯಂತ ಹಸಿದಿದ್ದಾನೆ, ಕಾರಣ ನೀನು ತೀವ್ರವಾಗಿ ಇವನನ್ನು ನಿನ್ನ ಮನೆಗೆ ಕರಕೊಂಡು ಹೋಗು ಎಂದು ಹೇಳಿದರು. ‖ ೧೩೫ ‖ ಆಗ ಆ ನಾಯಂದೇವ ಬ್ರಾಹ್ಮಣನು— ಶ್ರೀ ಗುರುಗಳಿಗೆ ವಿನಯದಿಂದ ಕೈಮುಗಿದು—

ಸ್ವಾಮೀ ಇವನು ಊಟಮಾಡಿದ ಕೂಡಲೆ ಇವನಿಗೆ ಪ್ರಾಣಹೋಗುವಷ್ಟು ವ್ಯಥೆಯಾಗುತ್ತದೆ. ॥ ೧೩೬ ॥ ಇವನು ಒಂದು ತಿಂಗಳ ವರೆಗೆ ಊಟ ಬಿಟ್ಟು ನಿನ್ನೆ ಊಟ ಮಾಡಿದ್ದರಿಂದಲೇ, ಈ ಪ್ರಕಾರ ಇವನಿಗೆ ಉದರ ವ್ಯಥೆಯು ಹೆಚ್ಚಾಗಿ ಕಷ್ಟಪಡಲಾರದೆ ಸಾಯಲಿಕ್ಕೆ ಯತ್ನಿಸಿದ್ದಾನೆ. ಈಗ ನಾನು ಇವನಿಗೆ ಅನ್ನವನ್ನು ಹಾಕಿದರೆ ನನಗೆ ತೀವ್ರವಾಗಿ ಬ್ರಹ್ಮಹತ್ಯಾದೋಷವು ಬಂದೀತು ಎಂದು ಬಿನ್ನವಿಸಿದನು ॥ ೧೩೭ ॥ ಆಗ ಶ್ರೀಗುರುಗಳು— ಎಲೈ ಸಾಯಂದೇವನೇ, ಇವನಿಗೆ ನಾನು ಔಷಧ ಕೊಡುವೆನು. ಇವನನ್ನು ತೀವ್ರವಾಗಿ ಮನೆಗೆ ಕರಕೊಂಡು ಹೋಗಿ ಅಪೂಪಾದಿಗಳನ್ನೂ ಉದ್ದಿನಬೇಳೆ ಹಾಕಿದ ಒಡೆಗಳನ್ನೂ ಹಾಲು ಹಾಕಿದ ಪಾಯಸ ಮೊದಲಾದವನ್ನೂ ಊಟ ಮಾಡಿಸು ॥ ೧೩೮ ॥ ಅನ್ನವನ್ನುಂಡಕೂಡಲೆ ಇವನ ವ್ಯಾಧಿಯು ಹೋಗುವದು. ಸಾಯಂದೇವಾ, ನೀನು ಮನಸ್ಸಿನಲ್ಲಿ ಸ್ವಲ್ಪಾದರೂ ಸಂಶಯ ತಕ್ಕೊಳ್ಳದೆ ಇವನನ್ನು ತೀವ್ರವಾಗಿ ಮನೆಗೆ ಕರೆದುಕೊಂಡು ಹೋಗು ಎಂದು ಹೇಳಿದರು. ॥ ೧೩೯ ॥ ಆಗ ಸಾಯಂದೇವನು ಗುರುಗಳ ಮಾತಿಗೆ ಒಪ್ಪಿ, ಅವರ ಚರಣಕಮಲಗಳಿಗೆ ವಂದಿಸಿ, ಮತ್ತೆ ಅಂತಃಕರಣವು ಉಕ್ಕೇರಿ ಬರಲು ಅವನು-- ಸ್ವಾಮೀ, ತಾವೂ ನನ್ನ ಮನೆಗೆ ಭಿಕ್ಷೆಗೆ ದಯ-ಮಾಡಿಸಬೇಕೆಂದು ಬೇಡಿಕೊಂಡನು. ॥ ೧೪೦ ॥ ಅವನ ವಿನಂತಿಗೆ ಶ್ರೀಗುರುಗಳು ಒಪ್ಪಿ— ಎಲೈ ಸಾಯಂ-ದೇವನೇ ನೀನು ಮೊದಲು ತೀವ್ರವಾಗಿ ಮನೆಗೆ ನಡೆ ಎಂದು ಅಪ್ಪಣೆ ಮಾಡಿದರು ಎಲೈ ಶಿಷ್ಯೋತ್ತಮನಾದ ನಾಮಧಾರಕಾ ಕೇಳು ॥ ೧೪೧ ॥ ಆಗ ನಾನೂ ಅಲ್ಲಿಯೇ ಇದ್ದೆನು, ಮತ್ತು ಯಾವತ್ತೂ ಶಿಷ್ಯರೂ ಇದ್ದರು. ಆಮೇಲೆ ಶ್ರೀಗುರುಗಳು ಯಾವತ್ತೂ ಶಿಷ್ಯರೊಡನೆ ಹಾಗು ಆ ಉದರವ್ಯಥೆಯ ಬ್ರಾಹ್ಮಣನ ಸಹಿತವಾಗಿ ಆ ಸಾಯಂದೇವನ ಮನೆಗೆ ಭಿಕ್ಷೆಗೆ ಹೋದರು ॥ ೧೪೨ ॥ ಆಗ ಅವನ ಮನೆಯಲ್ಲಿ ವಿಚಿತ್ರವಾಯಿತು. ಆ ಸಾಯಂದೇವನ ಪತಿವ್ರತಾ ಪತ್ನಿಯಾದ ಜಾಖಾಯಿಯು ಪರೋಪರಿಯಿಂದ ಪೂಜೆ ಮಾಡಿದಳು ಹೇಳುವೆನು ಕೇಳು ॥ ೧೪೩ ॥ ಅವರು ಶ್ರೀಗುರುಗಳನ್ನು ಷೋಡಶೋಪಚಾರಗಳಿಂದ ಯಾವ ಪ್ರಕಾರವಾಗಿ ಪೂಜಿಸಿ ವಂದಿಸಿದರೋ ಅದೇ ಪ್ರಕಾರ ನನ್ನನ್ನೂ ಉಳಿದ ಯಾವತ್ತೂ ಶಿಷ್ಯರನ್ನೂ ಪೂಜಿಸಿ ವಂದಿಸಿದರು. ॥ ೧೪೪ ॥

ಆಮೇಲೆ ಆ ದಂಪತಿಗಳು ಗುರುಪೂಜೆಯ ವಿಧಾನವನ್ನು ಅತಿ ಗಹನವಾಗಿ ವಿಚಿತ್ರ ರೀತಿಯಿಂದ ಮಾಡಿದರು. ಹ್ಯಾಗೆಂಬುದನ್ನು ಹೇಳುತ್ತೇನೆ ಕೇಳು— ಸಾಯಂದೇವನ ಪತ್ನಿಯು ಪ್ರತಿಯೊಬ್ಬರಿಗೂ ಬೇರೆಬೇರೆಯಾಗಿ ಕೆಂಪು ವರ್ಣದ ಮಂಡಲವನ್ನು ಮಾಡಿ ॥ ೧೪೫ ॥ ಅಷ್ಟದಳ ಪದ್ಮವನ್ನು ಬರೆದು ಅದರಲ್ಲಿ ಪಂಚವರ್ಣದ ಪುಡಿಗಳನ್ನು ತುಂಬಿ ವಿಚಿತ್ರವಾಗಿ ನಾನಾರೀತಿಯಿಂದ ರಂಗವಲ್ಲಿಯನ್ನು ಹಾಕಿದಳು ॥ ೧೪೬ ॥ ಆಮೇಲೆ ಸಾಯಂದೇವನು ವಿಧಿಪ್ರಕಾರ ಸಂಕಲ್ಪ ಮಾಡಿ ಶ್ರೀಗುರುಚರಣಗಳಮೇಲೆ ಮಸ್ತಕವನ್ನಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದನು. ಅದರಂತೆ ಯಾವತ್ತು ಶಿಷ್ಯರಿಗೂ ಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೧೪೭ ॥ ಆಮೇಲೆ ಶ್ರೀಗುರುಗಳಿಗೆ ಚಿತ್ರಾಸನವನೂ ಶಿಷ್ಯರಿಗೆ ಬೇರೆ ಬೇರೆ ಆಸನಗಳನ್ನೂ ಕೊಟ್ಟು ಮೊದಲು ಶ್ರೀಗುರುಗಳ ಮುಂದಿರುವ ಮಂಡಲವನ್ನು ಗಂಧ-ಪುಷ್ಪ-ಅಕ್ಷತೆಗಳ ಸಹಿತವಾಗಿ ಷೋಡಶೋಪಚಾರ ವಿಧಿಯಿಂದ ಪೂಜಿಸಿ, ಬಳಿಕ ಎಲ್ಲ ಶಿಷ್ಯರ ಮಂಡಲಗಳನ್ನು ವಿಧಿಪ್ರಕಾರ ಪೂಜಿಸಿದನು ॥ ೧೪೮ ॥ ಆನಂತರ ಗುರುಚರಣಗಳನ್ನು ಪಂಚಾಮೃತದಿಂದಲೂ ರುದ್ರಸೂಕ್ತದಿಂದಲೂ ಅಭಿಷೇಕ ಮಾಡಿ ॥ ೧೪೯ ॥ ಅತಿ ಹರ್ಷದಿಂದ ಷೋಡಶೋಪಚಾರ ಪೂರ್ವಕವಾಗಿ ಪೂಜಿಸಿ ಅವನು ಆನಂದಪರವಶನಾದನು. ಆಮೇಲೆ ಗುರುಚರಣ ತೀರ್ಥವನ್ನು ಒಂದು ಪಾತ್ರೆಯಲ್ಲಿ ತುಂಬಿಟ್ಟು ॥ ೧೫೦ ॥ ಆ ತೀರ್ಥವನ್ನು ಒಳ್ಳೇ ಭಕ್ತಿಯಿಂದಲೂ ವಿಧಿಯಿಂದಲೂ ಪೂಜಿಸಿ ಶ್ರೀಗುರುಗಳಿಗೂ ಆ ತೀರ್ಥಕ್ಕೂ ಆನಂದದಿಂದಲೂ ಗೀತವಾದ್ಯಗಳಿಂದಲೂ ಆರತಿಯನ್ನು ಮಾಡಿದನು ॥ ೧೫೧ ॥ ಹೀಗೆ ಸಾಯಂದೇವನು ಅನುಕ್ರಮವಾಗಿ ಭಕ್ತಿಯಿಂದಲೂ ಷೋಡಶೋಪಚಾರ ವಿಧಿಯಿಂದಲೂ ಶ್ರೀಗುರುಗಳನ್ನು ಪೂಜಿಸಿ, ಅನೇಕತರದ ಅಕ್ಷಯವಾದ ಆರತಿಯನ್ನು ಮಾಡಿ, ಅನೇಕ ಮಂತ್ರಘೋಷದಿಂದ ಪುಷ್ಪಾಂಜಲಿಯನ್ನಿತ್ತು, ಅನೇಕತರದ ವಾದ್ಯಗಳಿಂದಲೂ ಪ್ರದಕ್ಷಿಣಾ ನಮಸ್ಕಾರದಿಂದಲೂ ಶ್ರೀಗುರುಗಳನ್ನು ಸಂತೋಷಪಡಿಸಿದನು. ॥೧೫೨-೧೫೩॥ ಆಮೇಲೆ ಅವನು ಪ್ರೀತಿಯಿಂದ ಅನೇಕ ರೀತಿ ಗಾಯನ ಮಾಡಿ ಶ್ರೀಗುರುಗಳಿಗೆ ನಮಸ್ಕಾರ ಮಾಡಿ ಆಮೇಲೆ ಪತಿವ್ರತೆಯಾದ ಹೆಂಡತಿಯಿಂದ ಕೂಡಿಕೊಂಡು ಪೂಜಿಸಿದನು. ॥ ೧೫೪ ॥ ಆಮೇಲೆ ಆ ದಂಪತಿಗಳು ಶ್ರೀಗುರು

ಗಳನ್ನು ಪೂಜಿಸಿದಂತೆ ವಿಧಿಪ್ರಕಾರವಾಗಿ ಎಲ್ಲ ಶಿಷ್ಯರನ್ನು ಪೂಜಿಸಿ, ಆರತಿಯನ್ನು ಮಾಡಿ ಪುಷ್ಪಾಂಜಲಿಯನ್ನು ಸಮರ್ಪಿಸಿ ಶ್ರೀಗುರುಗಳ ಸಹಿತವಾಗಿ ಎಲ್ಲರಿಗೂ ವಂದಿಸಿದರು. || ೧೫೫ || ಅದನ್ನು ಕಂಡು ಶ್ರೀಗುರುಗಳು ಸಂತೋಷಬಟ್ಟು ಅತಿ ಹರ್ಷದಿಂದ ಸಾಯಂದೇವನನ್ನು ಕುರಿತು— ಎಲೈ ಸಾಯಂದೇವನೇ, ನಿನಗೆ ಅನೇಕ ಪ್ರಖ್ಯಾತ ಸಂತತಿಯಾಗಿ ಆ ನಿನ್ನ ವಂಶದವರೆಲ್ಲರೂ ಗುರುಭಕ್ತಿಯುಳ್ಳವರಾಗುವರು. || ೧೫೬ || ನೀನು ಗುರುವನ್ನಂತೂ ಕಂಡಿರುವಿ. ಗುರುಭಕ್ತಿಯಿಂದ ನಿನಗೆ ಪುತ್ರರೂ ಪೌತ್ರರೂ ಆಗಿ ನಿನ್ನ ವಂಶಾಭಿವೃದ್ಧಿಯಾಗುವದು. || ೧೫೭ || ಎಂದು ಹೇಳಿ ಅತಿ ಹರ್ಷದಿಂದ ಅವನಿಗೆ ವರವನ್ನಿತ್ತು ಅಭಯ ಕೊಟ್ಟರು. ಆಗ ಸಾಯಂದೇವನು ಶ್ರೀಗುರುಗಳಿಗೆ ನಮಿಸಿ, ಶ್ರೀಗುರು-ಶಿಷ್ಯರು ಸಹಿತವಾಗಿ ಯಾವತ್ತರಿಗೂ ಎಲೆಗಳನ್ನು ಹಾಕಿ, || ೧೫೮ || ಆಮೇಲೆ ನಾನಾತರದ ಪಕ್ವಾನ್ನಗಳನ್ನೂ ಅಪೂಪಾದಿಗಳನ್ನೂ ಮಾಷಾನ್ನವನ್ನೂ ಸಕ್ಕರೆ ಹಾಲುಗಳಿಂದ ಕೂಡಿದ ಎಂಟು ತರದ ಪಾಯಸಗಳನ್ನೂ || ೧೫೯ || ಅನೇಕ ತರದ ಶಾಕ-ಪಾಕಗಳನ್ನೂ ಸವಿಸ್ತಾರವಾಗಿ ಬಡಿಸಿದರು. ಆಮೇಲೆ ಶ್ರೀಗುರುಗಳು ಸಹಿತವಾಗಿ ಎಲ್ಲರಿಗೂ ಆಪೋಷನವನ್ನು ಹಾಕಿದಮೇಲೆ ಎಲ್ಲರೂ ಪ್ರೀತಿಯಿಂದ ಭೋಜನ ಮಾಡಿದರು. || ೧೬೦ || ಆ ಉದರರೋಗಿಯಾದ ಬ್ರಾಹ್ಮಣನೂ ಪರಿಪೂರ್ಣವಾಗಿ ಊಟ ಮಾಡಿದನು. ಗುರುಕೃಪಾದೃಷ್ಟಿಯಿಂದ ಆಕ್ಷಣವೇ ಅವನ ರೋಗವು ಹೋಯಿತು. || ೧೬೧ || ಸ್ಪರ್ಶಮಣಿಯು ಲೋಹಕ್ಕೆ ತಗಲಿದ ಕೂಡಲೆ ಆ ಲೋಹವು ಕೂಡಲೆ ಸುವರ್ಣವಾಗುವಂತೆ, ಎಲೈ ನಾಮಧಾರಕಾ ಶ್ರೀಗುರುವಿನ ದರ್ಶನವಾದಮೇಲೆ ಅವನ ಬೇನೆಯು ಹ್ಯಾಗೆ ಉಳಿಯುವದು ಹೇಳು ನೋಡೋಣ! || ೧೬೨ || ಸೂರ್ಯನು ಉದಯವಾದಕೂಡಲೆ ಕತ್ತಲೆಯು ನಿಲ್ಲದೆ ಹ್ಯಾಗೆ ಹೋಗುತ್ತದೋ ಹಾಗೆ ಯಾವನಮೇಲೆ ಗುರುಕೃಪೆಯಾಗುತ್ತದೋ ಅವನ ಮನೆಯಲ್ಲಿ ಬಡತನವು ಹ್ಯಾಗೆ ನಿಂತೀತು ? || ೧೬೩ || ಈಪ್ರಕಾರ ಶ್ರೀಗುರುಗಳು ಯಾವತ್ತು ಶಿಷ್ಯರೊಡನೆ ಆ ಸಾಯಂದೇವನ ಮನೆಯಲ್ಲಿ ಭೋಜನ ಮಾಡಿ ಅತ್ಯಾನಂದವನ್ನು ಹೊಂದಿದರು. || ೧೬೪ || ಅನ್ನವೈರಿಯಾದ ಆ ಬ್ರಾಹ್ಮಣನಿಗೆ ಗುರುಕೃಪೆಯಿಂದ ಅನ್ನವೇ ಔಷಧವಾಗಿ ಕೂಡಲೆ ಅವನ ಬೇನೆಯು ನಿರ್ನಾಮ

ವಾಗಿ ಹೋಯಿತು. ಇದನ್ನು ಕಂಡು ಆ ಊರ ಯಾವತ್ತೂ ಜನರು ಆಶ್ಚರ್ಯಪಡುತ್ತಿದ್ದರು. ‖ ೧೬೫ ‖ ಎಲೈ ನಾಮಧಾರಕಾ, ಯಾವನಮೇಲೆ ಗುರುಕೃಪೆಯುಂಟಾಗುತ್ತದೋ ಅವನ ಜನ್ಮಾಂತರದ ರೋಗಗಳು ಹೋಗುತ್ತವೆಂದಮೇಲೆ ಗುರುಕೃಪಾದೃಷ್ಟಿಯಿಂದ ಆ ಬ್ರಾಹ್ಮಣನ ದೇಹದಲ್ಲಿ ಆ ಬೇನೆಯು ಹ್ಯಾಗೆ ಉಳಿದೀತು ? ಎಂದು ಸಿದ್ಧರು ಅಂದರು. ‖ ೧೬೬ ‖ ಎಂದು ಸರಸ್ವತೀ ಗಂಗಾಧರನು ತಾನೂ ವಿಸ್ತಾರವಾಗಿ ಹೇಳಿ— ಎಲೈ ಶ್ರೋತೃಗಳೇ, ಕಾಮಧೇನುವಿನಂತಿರುವ ಗುರುಚರಿತ್ರೆಯನ್ನು ವಿಸ್ತಾರವಾಗಿ ಕೇಳಿರಿ. ‖ ೧೬೭ ‖ ಯಾರು ಭಕ್ತಿಯಿಂದ ಕೇಳುತ್ತಾರೋ ಆಕೂಡಲೇ ಅಲ್ಲಿಯೇ ಅವರ ಬೇನೆಗಳು ಹೋಗಿ ಅವರು ಅಖಿಲ ಸೌಖ್ಯವನ್ನು ಹೊಂದುವರೆಂದು ನಾನು ತ್ರಿವಾರ ಸತ್ಯವಾಗಿ ಹೇಳುವೆನು ಎಂದನು ‖ ೧೬೮ ‖ ಹೀಗೆ ಗುರುಚರಿತ್ರಾಮೃತದಲ್ಲಿ ಶ್ರೀಗುರುಗಳು ಬ್ರಾಹ್ಮಣನ ವ್ಯಾಧಿಯನ್ನು ಕಳೆದು ಅವನಿಗೆ ಸುಖವನ್ನುಂಟುಮಾಡಿದರೆಂದು ಈ ಅಧ್ಯಾಯದ ಗುರುಚರಿತ್ರದ ವರ್ಣನ ಮಾಡಿದೆ ‖ ೧೬೯ ‖

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ ಶ್ರೀಗುರು ಕರಂಜನಗರಾಗಮನಂ, ವಿಪ್ರೋದರವ್ಯಥಾ ನಿರಸನಂ ಚ ನಾಯಂದೇವಾಯ ವರಪ್ರದಾನಂ ನಾಮ ತ್ರಯೋದಶೋಽಧ್ಯಾಯಃ ‖ ೧೩ ‖ ಶ್ರೀಗುರುದೇವದತ್ತ ‖

— ಶ್ರೀಗುರು ದತ್ತಾತ್ರೇಯಾರ್ಪಣಮಸ್ತು —

**— ೧೩ನೇ ಅಧ್ಯಾಯ ಸಮಾಪ್ತ —**

---

# ೧೪ನೇಯ ಅಧ್ಯಾಯ

## — ದುಷ್ಟ ಯವನ ಶಾಸನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಎಲೈ ಶ್ರೋತೃಗಳೇ ಆಮೇಲೆ ಶಿಷ್ಯನಾದ ನಾಮಧಾರಕನು ವಿನಯಪೂರ್ವಕ ಸಿದ್ಧರನ್ನು ಕುರಿತು ಕೌತುಕದಿಂದ ಅತಿ ವಿಶೇಷವಾದ ಒಂದು ಪ್ರಶ್ನೆ ಮಾಡಿದನು, ಅದನ್ನು ಏಕಚಿತ್ತದಿಂದ ಕೇಳಿರಿ. ॥ ೧ ॥ ಆಗ ಅವನು:— ಜಯ ಜಯ ಸಿದ್ಧ ಯೋಗೀಶ್ವರನೇ, ಜ್ಞಾನಸಾಗರನೇ, ಮುಂದಿನ ಕಥೆಯನ್ನು ವಿಸ್ತಾರವಾಗಿ ಹೇಳಿರಿ ಅದರಿಂದ ನನಗೆ ಜ್ಞಾನ ವುಂಟಾಗುವದು. ॥ ೨ ॥ ಶ್ರೀ ಗುರುಗಳ ಕೃಪೆಯಿಂದ ಉದರ ವ್ಯಥೆಯುಳ್ಳ ಬ್ರಾಹ್ಮಣನಿಗೆ ಪ್ರಸನ್ನರಾಗಿ ಅವನ ಬೇನೆಯನ್ನು ಕಳೆದಮೇಲೆ ಮುಂದೆ ಕಥೆಯು ಯಾವ ರೀತಿಯಾಗಿ ನಡೆಯಿತೆಂಬದನ್ನು ನನಗೆ ವಿಸ್ತಾರವಾಗಿ ಹೇಳಬೇಕೆಂದು ಪ್ರಾರ್ಥಿಸಿದನು. ॥ ೩ ॥ ಶಿಷ್ಯನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು— ಎಲೈ ಶಿಷ್ಯ ಶಿರೋಮಣಿಯೇ, ಗುರುಚರಿತ್ರೆಯು ಕಾಮಧೇನುವೆಂದು ತಿಳಿ, ಎಂದು ಅದನ್ನು ವಿಸ್ತಾರವಾಗಿ ಹೇಳಹತ್ತಿದರು. ॥ ೪ ॥ ಎಲೈ ನಾಮಧಾರಕಾ ಕೇಳು, ಶ್ರೀ ಗುರುಗಳು ಸಾಯಂದೇವನ ಮನೆಯಲ್ಲಿ ಈ ಪ್ರಕಾರ ಭಿಕ್ಷೆಯನ್ನು ಸ್ವೀಕರಿಸಿ ಅವನಮೇಲೆ ಪ್ರಸನ್ನರಾದರು. ॥ ೫ ॥ ಆ ದ್ವಿಜೋತ್ತಮನು ಗುರುಭಕ್ತಿಯ ಪ್ರಕಾರವನ್ನು ಪೂರ್ಣವಾಗಿ ತಿಳಿದು ವಿಚಿತ್ರಕರವಾಗಿ ತಮ್ಮ ಪೂಜಾ ಮಾಡಿದನೆಂದು ಅತ್ಯಾನಂದದಿಂದ ॥ ೬ ॥ ಸಂತೋಷದಿಂದ — ಎಲೈ ಸಾಯಂದೇವನೇ, ನೀನು ನಮ್ಮ ಭಕ್ತನು. ನಿನ್ನಮೇಲೆ ನಮ್ಮ ಅತಿ ಪ್ರೀತಿಯಾಗಿದೆ. ಆದ್ದರಿಂದ ನಿನ್ನ ವಂಶದವರೂ ನಮ್ಮ ಭಕ್ತರಾಗಲಿ ಎಂದು ಅನುಗ್ರಹಿಸಿದರು. ॥ ೭ ॥ ಅವರ ಮಾತು ಕೇಳಿ ಸಾಯಂದೇವನು ಗುರುಚರಣದಲ್ಲಿ ಮಸ್ತಕವನ್ನಿಟ್ಟು ಪುನಃ ಪುನಃ ನಮಸ್ಕರಿಸುತ್ತ ॥ ೮ ॥ ಜಯ ಜಯ

ಜಗದ್ಗುರುವೇ ತ್ರಯಮೂರ್ತಿ ಅವತಾರನೇ ಅವಿದ್ಯಾ ಮಾಯೆಯಿಂದ ನೀನು ನಮಗೆ ಮನುಷ್ಯನಾಗಿ ಕಾಣುತ್ತೀ ನಿನ್ನ ಮಹಿಮೆಯು ವೇದಗಳಿಗೂ ಅಗೋಚರವಾಗಿರುವದು. ॥ ೯ ॥ ನೀನು ವಿಶ್ವವ್ಯಾಪಕನಿದ್ದು ತ್ರಯಮೂರ್ತಿ ಅವತಾರವಾದ ನೀನು ಭಕ್ತೋದ್ಧಾರಕ್ಕಾಗಿ ಮನುಷ್ಯರೂಪವನ್ನು ಧರಿಸಿರುತ್ತೀ. ॥ ೧೦ ॥ ಗುರುರಾಯಾ, ನಿನ್ನ ಮಹಿಮೆಯನ್ನು ವರ್ಣಿಸಲಿಕ್ಕೆ ನಾನು ಶಕ್ತನಲ್ಲ. ಈಗ ನಾನು ತಮಗೆ ಒಂದು ಮಾತನ್ನು ಕೇಳಿಕೊಳ್ಳು ತ್ತೇನೆ. ಗುರುಮೂರ್ತಿಯೇ ನನ್ನಮೇಲೆ ಕೃಪೆ ಮಾಡಬೇಕು. ॥ ೧೧ ॥ ನನ್ನ ವಂಶ ಪರಂಪರೆಯಲ್ಲಿ ಎಲ್ಲರಿಗೂ ತಮ್ಮಮೇಲೆ ನಿಶ್ಚಲ ಭಕ್ತಿಯೂ ಇಹದಲ್ಲಿ ಪುತ್ರ-ಪೌತ್ರಾದಿ ಅಷ್ಟೈಶ್ವರ್ಯಗಳ ಸುಖವೂ ಪರದಲ್ಲಿ ಸದ್ಗತಿಯೂ ಉಂಟಾಗುವಂತೆ ಕರುಣಿಸಿರಿ ॥ ೧೨ ॥ ಎಂದು ವಿನಂತೀ ಮಾಡಿಕೊಂಡು ಪುನಃ ಕರುಣಾ ವಚನದಿಂದ ವಿನಂತೀ ಮಾಡಿಕೊಂಡು ಅವರ ಚರಣಕ್ಕೆ ನಮಸ್ಕಾರ ಮಾಡಿ— ಸ್ವಾಮೀ, ಸದ್ಗುರುವೇ ಈಗ ನಾನು ಒಬ್ಬ ಕ್ರೂರನಾದ ಯವನನ ಕೈಯೊಳಗಿದ್ದು "ಕುಗ್ರಾಮವಾಸಃಕುಲಹೀನ ಸೇವಾ" ಎಂಬಂತೆ ಅವನ ಸೇವೆ ಮಾಡುತ್ತಿರು ವೆನು. ॥ ೧೩ ॥ ಆ ಯವನನು ಪ್ರತಿ ವರುಷವೂ ಅನೇಕ ಬ್ರಾಹ್ಮಣರನ್ನು ಕೊಲ್ಲುತ್ತಿರುವನು ಈಗ ಅವನು ನನ್ನನ್ನೂ ಅದಕ್ಕಾಗಿಯೇ ಕರೆಯಿಸಿರುವನು. ॥ ೧೪ ॥ ಈಗ ನಾನು ಅವನ ಹತ್ತರ ಹೋದರೆ ಅವನು ನಿಶ್ಚಯ ವಾಗಿ ನನ್ನ ಪ್ರಾಣವನ್ನು ತಕ್ಕೊಳ್ಳುವನು ಆದರೆ ಈಗ ತಮ್ಮ ದರ್ಶನವಾದಮೇಲೆ ನನಗೆ ಮರಣವು ಹ್ಯಾಗೆ ಬರುವದು ? ಎಂದನು. ॥ ೧೫ ॥ ಅವನ ಮಾತು ಕೇಳಿ ಶ್ರೀ ಗುರುಗಳು ಸಂತೋಷಪಟ್ಟು, ಅವನಿಗೆ ಅಭಯ ವನ್ನು ಕೊಟ್ಟು— ಎಲೈ ಸಾಯಂದೇವನೇ, ನೀನು ಏನೂ ಚಿಂತೆಮಾಡಬೇಡ ಎಂದು ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟು— ॥ ೧೬ ॥ ಸಾಯಂದೇವಾ, ನೀನು ಮನಸ್ಸಿನಲ್ಲಿಯ ಅಂಜಿಕೆಯನ್ನು ಬಿಟ್ಟು ಹೋಗಿ ಆ ಕ್ರೂರ ಯವನನಿಗೆ ಭೆಟ್ಟಿಯಾಗು. ಅವನು ನಿನ್ನಮೇಲೆ ಪ್ರೇಮ ಮಾಡಿ ನಿನ್ನನ್ನು ಪುನಃ ನಮ್ಮಹತ್ತರ ಕಳಿಸು ವನು. ॥ ೧೭ ॥ ನೀನು ಸಂತೋಷದಿಂದ ತಿರುಗಿ ನಮ್ಮಹತ್ತರ ಬರುವತನಕ ನಾವು ನಿಶ್ಚಯವಾಗಿ ಇಲ್ಲಿಯೇ ಇರುವೆವು. ನೀನು ಬಂದಮೇಲೆ ನಾವು ಇಲ್ಲಿಂದ ಹೋಗುವೆವು. ॥ ೧೮ ॥ ನೀನು ನಮ್ಮ ನಿಜವಾದ ಭಕ್ತ

ನಾಗಿರುತ್ತೀ. ನೀನು ವಂಶ ಪರಂಪರೆಯಾಗಿ ಸಕಲಾಭೀಷ್ಟಗಳನ್ನು ಹೊಂದುತ್ತೀ, ನಿನ್ನ ಸಂತತಿಯು ಬಹಳವಾಗಿ ಬೆಳೆಯುವದು. ॥ ೧೯ ॥ ನಿನ್ನ ವಂಶ ಪರಂಪರೆಯವರೆಲ್ಲರೂ ಪುತ್ರ–ಪೌತ್ರಾದಿಗಳಿಂದ ಸುಖವಾಗಿರುವರು. ನಿನ್ನ ಮನೆಯಲ್ಲಿ ಅಖಂಡ ಲಕ್ಷ್ಮಿಯು ವಾಸವಾಗಿರುವಳು. ನೀವು ನಿರೋಗಿ ಹಾಗು ಶತಾಯುಷಿಗಳಾಗಿರುವಿರಿ. ಎಂದು ವರವನ್ನು ಕೊಟ್ಟನು. ॥ ೨೦ ॥ ಈ ಪ್ರಕಾರ ಸಾಯಂದೇವನು ಗುರುಗಳಿಂದ ವರವನ್ನು ಪಡೆದು ತೀವ್ರವಾಗಿ ಆ ಯವನನ ಹತ್ತರ ಹೋದನು. ॥ ೨೧ ॥ ಕಾಲಾಂತಕ ಯಮನಂತೆ ಇರುವ ಆ ದುಷ್ಟ ಯವನನು ಸಾಯಂದೇವನನ್ನು ನೋಡನೋಡುತ್ತ ಜ್ವಾಲಾರೂಪನಾಗಿ ॥ ೨೨ ॥ ಭಯಂಕರ ಸಿಟ್ಟಿಗೆದ್ದು ತನ್ನ ಉರಿ ಮೋರೆಯನ್ನು ತಿರುಗಿಸಿಕೊಂಡು ತನ್ನ ಮನೆಯೊಳಗೆ ಹೋದನು. ಆಗ ಸಾಯಂದೇವನು ಭಯಚಕಿತನಾಗಿ ಮನಸ್ಸಿನಲ್ಲಿ ಶ್ರೀ ಗುರುಗಳನ್ನು ಧ್ಯಾನಿಸುತ್ತಿದ್ದನು ॥ ೨೩ ॥ ದೀಪದ ಹುಳವು ಸಿಟ್ಟಿಗೆದ್ದು ಅಗ್ನಿಯನ್ನು ಮುಟ್ಟಿ ಹ್ಯಾಗೆ ಸಾಯುವದೋ ॥ ೨೪ ॥ ಹಾಗೆ ಗುರು ಕೃಪೆಯನ್ನು ಪಡೆದವನಿಗೆ ಆ ದುಷ್ಟ ಯವನನು ಏನು ಮಾಡ್ಯಾನು ? ಗರುಡನ ಮರಿಯನ್ನು ಹಾವು ಕಚ್ಚೀತೇ ? ॥ ೨೫ ॥ ಒಂದಾನೊಂದು ಸಮಯದಲ್ಲಾದರೂ ಐರಾವತವು ಸಿಂಹವನ್ನು ತಿಂದೀತೇ ? ಇವು ಎಂದೂ ಶಕ್ಯವಿಲ್ಲ. ಅದರಂತೆ ಗುರು ಕೃಪೆಯುಳ್ಳವನಿಗೆ ಕಲಿಕಾಲದ ಹಾಗು ಯಮನ ಭಯವಿಲ್ಲ ॥ ೨೬ ॥ ಯಾವನ ಮನಸ್ಸಿನಲ್ಲಿ ಸದಾ ಗುರುಸ್ಮರಣವಿರುತ್ತದೋ ಆವನಿಗೆ ಭಯಂಕರವಾದ ಭಯವು ಹ್ಯಾಗೆ ಬರಬೇಕು ? ಗುರುಕೃಪೆಯುಳ್ಳವನನ್ನು ಕಂಡು ಕಾಲಮೃತ್ಯುವೇ ಭಯಪಡುವದೆಂದಮೇಲೆ ಅಪಮೃತ್ಯುವು ಏನು ಮಾಡೀತು ? ॥ ೨೭ ॥ ಯಾರಿಗೆ ಮೃತ್ಯುವಿನ ಭಯವಿಲ್ಲವೋ ಆವನಿಗೆ ಯವನನು ಏನು ಮಾಡುವನು ? ಗುರುಕೃಪೆ ಇದ್ದವನಿಗೆ ಯಮನ ಭಯವಿಲ್ಲವೆಂದು ತಿಳಿ, ॥ ೨೮ ॥ ಎಲೈ ನಾಮಧಾರಕಾ ಕೇಳು ಈ ಪ್ರಕಾರ ಆ ಯವನನು ಭ್ರಮೆಯಿಂದ ತನ್ನ ಮನೆಯೊಳಗೆ ಹೋಗಿ ಅತಿ ಗಾಢವಾದ ನಿದ್ರೆಯನ್ನು ಹೊಂದಿ ಮೈಮೇಲೆ ಸ್ಮೃತಿಯಿಲ್ಲದೆ ಇದ್ದನು. ॥ ೨೯ ॥ ಆಗ ಅವನ ಹೃದಯದಲ್ಲಿ ಮಹಾ ಉರಿಯು ಉಂಟಾಗಲು ಅವನು ಎಚ್ಚತ್ತು ಪ್ರಾಣಾಂತವಾದ ಸಂಕಟವುಳ್ಳವನಾಗಿ ಬಹಳ ಕಷ್ಟಬಡುತ್ತಿದ್ದನು. ॥ ೩೦ ॥ ಆಗ ಮೈಮೇಲೆ

ಸ್ಮೃತಿಯಿಲ್ಲದೆ ಅವನು ವಿಕಾರ ಸ್ವರದಿಂದ— ಅಯ್ಯೋ! ಒಬ್ಬ ಬ್ರಾಹ್ಮಣನು ನನ್ನನ್ನು ಶಸ್ತ್ರದಿಂದ ಹೊಡೆದು ಘಾಯಮಾಡಿ ನನ್ನ ಅವಯವಗಳನ್ನು ಛೇದಿಸುತ್ತಾನೆ ಎಂದು ಕೂಗುತ್ತ, ॥ ೩೧ ॥ ಪೂರ್ಣ ಎಚ್ಚರ ಹೊಂದಿ ಓಡುತ್ತ ಸಾಯಂದೇವನ ಹತ್ತರ ಹೋಗಿ— ಅಯ್ಯಾ ಬ್ರಾಹ್ಮಣನೇ, ನೀನೇ ನನ್ನ ಒಡೆಯನು! ಎಂದು ಅವನ ಪಾದದಮೇಲೆ ಬಿದ್ದು ಉರುಳಾಡಹತ್ತಿ ॥ ೩೨ ॥— ಎಲೈ ಸಾಯಂದೇವಾ, ನಿನ್ನನ್ನು ಇಲ್ಲಿಗೆ ಯಾರು ಕರೆದರು? ನೀನು ತೀವ್ರವಾಗಿ ನಿನ್ನ ಮನೆಗೆ ಹೋಗು ಎಂದು ಅವನಿಗೆ ವಸ್ತ್ರ ಭೂಷಣಾದಿಗಳನ್ನು ಕೊಟ್ಟು ಕಳಿಸಿದನು. ॥ ೩೩ ॥ ಆಗ ಸಾಯಂದೇವನು ಸಂತೋಷದಿಂದ ಹೊರಟು ತೀವ್ರವಾಗಿ ತನ್ನ ಗ್ರಾಮಕ್ಕೆ ಬಂದು, ಗಂಗಾತೀರದಲ್ಲಿರುವ ಶ್ರೀಗುರುಗಳ ದರ್ಶನಕ್ಕೆ ಹೋಗಬೇಕೆಂದು ತೀವ್ರವಾಗಿ ಹೊರಟನು. ॥ ೩೪ ॥ ಆ ನದಿಯ ದಂಡೆಗೆ ಬಂದು ಶ್ರೀಗುರುಗಳನ್ನು ನೋಡಿ ಭಕ್ತಿಯಿಂದ ನಮಸ್ಕರಿಸಿ, ಆದ್ಯಂತವಾಗಿ ಯಾವತ್ತೂ ಸಂಗತಿಯನ್ನು ಹೇಳಿ ಬಹುರೀತಿಯಿಂದ ಶ್ರೀ ಗುರುಗಳ ಸ್ತೋತ್ರ ಮಾಡಿದನು. ॥ ೩೫ ॥ ಆಗ ಗುರುಗಳು ಸಂತೋಷಬಟ್ಟು ಆ ಸಾಯಂದೇವನನ್ನು ಸಮಾಧಾನಪಡಿಸಿ— ಎಲೈ ಸಾಯಂದೇವನೇ, ಇನ್ನು ನಾವು ದಕ್ಷಿಣದಿಕ್ಕಿನಲ್ಲಿರುವ ತೀರ್ಥಗಳ ಸ್ನಾನ ಮತ್ತು ಯಾತ್ರೆಗಳನ್ನು ಮಾಡುವದಕ್ಕೆ ಹೊರಡುವೆವು ಎಂದು ಹೇಳಿದರು. ॥ ೩೬ ॥ ಅವರ ಮಾತು ಕೇಳಿ ಸಾಯಂದೇವನು ವಿನಯದಿಂದ ಕೈಮುಗಿದು— ಸ್ವಾಮೀ, ಇನ್ನು ನಾನು ತಮ್ಮ ಚರಣವನ್ನು ಬಿಟ್ಟು ಒಂದು ಕ್ಷಣಸಹ ಇರಲಾರೆನು. ಆದ್ದರಿಂದ ತಮ್ಮ ಸಂಗಡ ನಾನೂ ಬರುವೆನು. ॥ ೩೭ ॥ ಸಂಸಾರ ಸಾಗರ ತಾರಕ ಸ್ವಾಮಿಯೇ, ದೇವಾ ಕೃಪಾಸಿಂಧುವೇ ಇನ್ನು ನಿಮ್ಮ ಚರಣವನ್ನು ಬಿಟ್ಟು ನಾನು ಒಂದು ಕ್ಷಣವಾದರೂ ಇರಲಿಕ್ಕೆ ಶಕ್ಯವಿಲ್ಲ. ॥ ೩೮ ॥ ಸಗರ ಪುತ್ರರನ್ನು ಉದ್ಧರಿಸಲಿಕ್ಕೆ ಗಂಗಾದೇವಿಯು ಭೂಮಿಗೆ ಬಂದಂತೆ ಸ್ವಾಮೀ ತಾವೂ ಮನುಷ್ಯರಾದ ನಮ್ಮನ್ನು ಉದ್ಧಾರ ಮಾಡಲಿಕ್ಕ ಅವತಾರ ತಕ್ಕೊಂಡು ಈ ಭೂಮಿಗೆ ಬಂದಿರುವಿರಿ, ತಮ್ಮ ದರ್ಶನದಿಂದ ನಮ್ಮ ಉದ್ಧಾರವಾಯಿತು. ॥ ೩೯ ॥ ತಾವು ಭಕ್ತವತ್ಸಲರೆಂದು ಪ್ರಸಿದ್ಧಿಯದೆ. ತಾವು ಈಗ ನನ್ನನ್ನು ಬಿಟ್ಟು ಹೋಗುವದು ಯಾವ ನ್ಯಾಯವು? ನಾನು ತಮ್ಮೊಡನೆ ಬರುವದು ನಿಶ್ಚಯವು

ಎಂದು ಆವರ ಚರಣಕ್ಕೆ ವಂದಿಸಿದನು. ॥ ೪೦ ॥ ಈ ಪ್ರಕಾರ ಸಾಯಂದೇವ ಬ್ರಾಹ್ಮಣನು ವಿನಯದಿಂದಲೂ ಸಂತೋಷದಿಂದಲೂ ಭಕ್ತಿಯಿಂದಲೂ ವಿನಂತೀ ಮಾಡಿಕೊಳ್ಳುವದನ್ನು ಕೇಳಿ ಶ್ರೀ ಗುರುಗಳು— ॥ ೪೧ ॥ ಅಪ್ಪಾ ಸಾಯಂದೇವನೇ, ಈಗ ನಾವು ಹೋಗುವದಕ್ಕೆ ಕಾರಣವೇನೆಂದರೆ ದಕ್ಷಿಣ ದೇಶದಲ್ಲಿ ಅನೇಕ ತೀರ್ಥಗಳು ಅವೆ. ಆ ಎಲ್ಲ ತೀರ್ಥಗಳಿಗೆ ಹೋಗಿ ೧೫ ವರ್ಷಗಳಮೇಲೆ ಪುನಃ ನಿನಗೆ ದರ್ಶನ ಕೊಡುವೆವು. ॥ ೪೧-೪೨ ॥ ಆಮೇಲೆ ನಿಮ್ಮ ಗ್ರಾಮದ ಸಮೀಪದಲ್ಲಿಯೇ ನಿಶ್ಚಯವಾಗಿ ವಾಸ ಮಾಡುವೆವು ಆಗ ನೀನು ನಿನ್ನ ಹೆಂಡತಿ, ಮಕ್ಕಳು, ಆಪ್ತರು, ಇಷ್ಟರು, ಬಂಧುಗಳು ಸಹಿತವಾಗಿ ನಮಗೆ ಭೆಟ್ಟಿಯಾಗಬೇಕು ॥ ೪೩ ॥ ನೀನು ಇನ್ನು ಚಿಂತೆ ಮಾಡಬೇಡ ಸುಖದಿಂದಿರು. ಇನ್ನು ನಿನ್ನ ಎಲ್ಲ ಅರಿಷ್ಟಗಳೂ ದುಃಖಗಳೂ ಹೋದವೆಂದು ತಿಳಿ ಎಂದು ವಚನವನ್ನು ಕೊಟ್ಟು ಅವನ ತಲೆಯಮೇಲೆ ತಮ್ಮ ವರದ ಹಸ್ತವನ್ನಿಟ್ಟರು ॥ ೪೪ ॥ ಈ ಪ್ರಕಾರ ಶ್ರೀಗುರುಗಳು ಸಾಯಂದೇವನಿಗೆ ಹೇಳಿ, ಅಲ್ಲಿಂದ ಸಮಸ್ತ ಶಿಷ್ಯರೊಡನೆ ಹೊರಟು ಮಾರ್ಗದಲ್ಲಿ ಹತ್ತಿರುವ ಸಕಲ ತೀರ್ಥಗಳನ್ನು ನೋಡಿ ಅವುಗಳ ಯಾತ್ರೆ ಮಾಡುತ್ತ ಆರೋಗ್ಯ ಭವಾನೀ ವೈಜನಾಥ ಕ್ಷೇತ್ರವು ಪ್ರಖ್ಯಾತವಾದದ್ದೆಂದು ತಿಳಿದು ಅಲ್ಲಿಗೆ ಬಂದು ಅಲ್ಲಿ ಗುಪ್ತವಾಗಿರುತ್ತಿದ್ದರು ॥ ೪೫-೪೬ ॥ ಎಂದು ಸಿದ್ಧರು ಹೇಳಿದರು ಆಗ ನಾಮಧಾರಕನು ಕೈಮುಗಿದು— ಸ್ವಾಮೀ ಶ್ರೀಗುರುಗಳು ಅಲ್ಲಿ ಗುಪ್ತವಾಗಿರಲಿಕ್ಕೆ ಕಾರಣವೇನು ? ಮತ್ತು ಅವರ ಹತ್ತಿರಇರುವ ಬಹುಮಂದಿ ಶಿಷ್ಯರನ್ನು ಎಲ್ಲಿ ಇಟ್ಟರು ? ಎಂಬ ಸಂಗತಿಯನ್ನು ಹೇಳಬೇಕೆಂದು ವಿನಂತೀ ಮಾಡಿಕೊಂಡನು. ॥ ೪೭ ॥ ಆಗ ಸರಸ್ವತಿಗಂಗಾಧರನು— ಎಲೈ ಶ್ರೋತೃಗಳೇ, ಈ ಪ್ರಕಾರ ಸಿದ್ಧಮುನಿಗಳು ನಾಮಧಾರಕನಿಗೆ ಗುರುಚರಿತ್ರೆಯ ವರ್ಣನವನ್ನು ಹೇಳಿ ॥ ೪೮ ॥ ಮುಂದಿನ ಕಥೆಯನ್ನು ವಿಸ್ತಾರವಾಗಿ ಹೇಳುತ್ತೇನೆ ಏಕಚಿತ್ತದಿಂದ ಕೇಳಿರಿ. ॥ ೪೯ ॥ ಗುರುಗಳ ಅಪ್ಪಣೆಯಂತೆ ಸದಾಚಾರವುಳ್ಳ ಸಾಯಂದೇವನು ಸರಸ್ವತೀ ತೀರದಲ್ಲಿ ವಾಸಮಾಡಿ ಶ್ರೀಗುರುಗಳಿಗೆ ನಿಶ್ಚಯವಾಗಿ ವಸ್ತ್ರಭೂಷಣಗಳನ್ನು ಕೊಟ್ಟನು. ॥ ೫೦ ॥ ಗುರುಚರಿತ್ರೆಯೆಂಬ

ಅಮೃತದ ಈ ಅಧ್ಯಾಯದಲ್ಲಿಯವನನಭಯದಿಂದ ರಕ್ಷಿಸಿದ ಸಾಯಂದೇವನ ಆಖ್ಯಾನವಿರುವದು. ಅವನ ಭಾಗ್ಯ ದೊಡ್ಡದು. ‖ ೫೧ ‖

ಇತಿ ಶ್ರೀ ಗುರುಚರಿತ್ರ ಪರಮಕಥಾ ಕಲ್ಪ ತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕಸಂವಾದೇ ಕ್ರೂರಯವನಶಾಸನಂ ಸಾಯಂದೇವ ವರಪ್ರದಾನಂ ನಾಮ ಚತುರ್ದಶೋಽಧ್ಯಾಯಃ ‖ ೧೪ ‖ ಶ್ರೀಗುರು ದತ್ತಾತ್ರೇಯಾರ್ಪಣ ಮಸ್ತು ‖ ಶ್ರೀಗುರುದೇವದತ್ತ ‖

— ೧೪ನೇ ಅಧ್ಯಾಯ ಸಮಾಪ್ತ —

---

# ೧೫ನೇಯ ಅಧ್ಯಾಯ

## — ಶ್ರೀಗುರುಗಳು ಶಿಷ್ಯರಿಗೆ ತೀರ್ಥಯಾತ್ರಾ ನಿರೂಪಿಸಿದ್ದು —

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋನಮಃ । ಆಮೇಲಿ ಸಿದ್ಧರು— ಎಲೈ ಶಿಷ್ಯಶಿರೋಮಣಿಯಾದ ನಾಮಧಾರಕನೇ ಕೇಳು. ನಿನ್ನ ವಾಣಿಯು ಧನ್ಯ! ಧನ್ಯ! ಗುರುಚರಣಗಳಲ್ಲಿ ನಿನ್ನ ಭಕ್ತಿಯು ಲೀನವಾಯಿತು ॥ ೧ ॥ ಅಪ್ಪಾ, ನೀನು ಕೇಳಿಕೇಳಿದಂತೆ ನನ್ನ ಮನಸ್ಸು ಸಂತೋಷ ಹೊಂದುವದು. ಶ್ರೀಗುರುಗಳು ವೈಜನಾಥದಲ್ಲಿ ಯಾಕೆ ಗುಪ್ತವಾಗಿದ್ದರೆಂಬದನ್ನು ಹೇಳುವೆನು ಕೇಳು. ॥ ೨ ॥ ಶ್ರೀಗುರುಗಳ ಮಹಿಮೆಯು ಎಲ್ಲ ಕಡೆಯಲ್ಲಿ ಬಹಳವಾಗಿ ಪ್ರಕಟವಾಯಿತು. ಆದರಿಂದ ಅಲ್ಲಿಗೆ ಯಾವತ್ತು ಭಕ್ತ ಜನರು ಮನಸ್ಸಿನಲ್ಲಿ ನಾನಾಪ್ರಕಾರದ ಇಚ್ಛೆಗಳನ್ನು ಮಾಡಿಕೊಂಡು ಶ್ರೀಗುರುಗಳ ದರ್ಶನಕ್ಕಾಗಿ ಬರುತ್ತಿದ್ದರು. ॥ ೩ ॥ ಸಾಧುಗಳು, ಅಸಾಧುಗಳು, ಧೂರ್ತರು, ಮೊದಲಾದ ಸರ್ವರೂ ಗುರುಗಳ ಹತ್ತರ ಬರುತ್ತಿದ್ದರು. ಈ ದುಷ್ಟ ಕಲಿಯುಗದಲ್ಲಿ ಎಲ್ಲರೂ ತಾವು ಶಿಷ್ಯರಾಗುತ್ತೇವೆಂದು ಅನ್ನುತ್ತಾರೆ. ॥ ೪ ॥ ಪೂರ್ವದಲ್ಲಿ ಪರಶು-ರಾಮನು ಅವತರಿಸಿ, ಭೂಮಿಯಲ್ಲಿ ಒಬ್ಬರೂ ದುಷ್ಟ ಕ್ಷತ್ರಿಯರು ಉಳಿಯದಂತೆ ಮಾಡಿ, ಯಾವತ್ತೂ ಭೂಮಿಯನ್ನು ಬ್ರಾಹ್ಮಣರಿಗೆ ದಾನ ಕೊಟ್ಟು, ಯಾರದೂ ಉಪದ್ರವ ಬೇಡೆಂದು ತಾನು ಪಶ್ಚಿಮ ಸಮುದ್ರತೀರದಲ್ಲಿ ವಾಸಿಸುತ್ತಿದ್ದನು. ॥ ೫ ॥ ಆದರೂ ಬ್ರಾಹ್ಮಣರು ಮತ್ತೆ ಮತ್ತೆ ಅವನ ಹತ್ತರ ಹೋಗಿ ಭೂಮಿಯನ್ನು ದಾನ ಕೊಡೆಂದು ಬೇಡುವದಕ್ಕೆ ಹೋಗುತ್ತಿದ್ದರು. ಈ ಕಾರಣದಿಂದ ಬಾಹ್ಮಣರ ಆಶೆಯು ಎಂದೂ ತಪ್ಪುವದಿಲ್ಲ. ॥ ೬ ॥ ಅವರು ಮತ್ತೆ ಬಂದು ಭೂಮಿಯನ್ನು ಬೇಡುತ್ತಾರೆಂದು ತಿಳಿದು ಅವರ ಉಪದ್ರವವನ್ನು ತಡೆಯಲಾರದೆ ಅಲ್ಲಿಂದ ಎದ್ದು ಸಮುದ್ರಮಧ್ಯ ಜಲದಲ್ಲಿ ಗುಪ್ತವಾಗಿರುತ್ತಾನೆ. ॥ ೭ ॥ ಆದರಂತೆ ಶ್ರೀಗುರುಗಳು ನಾನಾಜಾತಿಯ ಅನೇಕ

ಜನರು ಬಂದು ತಮಗೆ ವರ ಕೊಡಬೇಕೆಂದು ಪೀಡಿಸುತ್ತಾರೆಂದು ಅಲ್ಲಿ ಗುಪ್ತವಾಗಿದ್ದರು. ॥ ೮ ॥ ವಿಶ್ವವ್ಯಾಪಕನಾದ ಜಗದೀಶ್ವರನಾದಂಥವನೂ ಸಹ ಎಲ್ಲರಿಗೂ ಒಂದೇ ತರದ ವರ ಕೊಡಲಿಕ್ಕೆ ಶಕ್ಯವಿಲ್ಲ. ಅವರವರ ಭಕ್ತಿಯ ಯೋಗ್ಯತೆಯ ಪ್ರಕಾರ ಪಾತ್ರಾನುಸಾರ ಪ್ರಸನ್ನರಾಗಬೇಕಾಗುತ್ತದೆ. ॥ ೯ ॥ ಆದ್ದರಿಂದ ಶ್ರೀ ನರಸಿಂಹಸರಸ್ವತಿ ಗುರುಗಳು ತಾವು ಕೆಲವುದಿವಸ ಆರೋಗ್ಯಭವಾನೀ ವೈಜನಾಥ ಕ್ಷೇತ್ರದಲ್ಲಿ ಗುಪ್ತವಾಗಿರಬೇಕೆಂದು ಮನಸ್ಸಿನಲ್ಲಿ ಸಂಕಲ್ಪಿಸಿ ಯಾವತ್ತೂ ಶಿಷ್ಯರಿಗೆ ತೀರ್ಥಯಾತ್ರೆಗೆ ಹೋಗಲಿಕ್ಕೆ ಅಪ್ಪಣೆ ಕೊಡಬೇಕೆಂದು ॥ ೧೦ ॥ ಅವರನ್ನು ಕರೆದು— ಎಲೈ ಶಿಷ್ಯರಿರಾ, ನೀವು ಇನ್ನು ಇಲ್ಲಿಂದ ಹೊರಟು ಭೂಮಿಯಮೇಲಿನ ಸಮಸ್ತ ತೀರ್ಥಗಳಲ್ಲಿ ಸಂಚರಿಸಿ, ಆಮೇಲೆ ಶ್ರೀಶೈಲದಲ್ಲಿ ನಮ್ಮ ದರ್ಶನಕ್ಕೆ ಬರ್ರಿ, ಎಂದು ಅವರಿಗೆ ಅಪ್ಪಣೆ ಕೊಟ್ಟರು. ॥ ೧೧ ॥ ಆಗ ಆ ಶಿಷ್ಯರು ಗುರುಚರಣಗಳನ್ನು ಹಿಡಿದು— ಕೃಪಾಮೂರ್ತೀ, ಗುರುರಾಯಾ, ನಮ್ಮನ್ನೇಕೆ ಉಪೇಕ್ಷಿಸುತ್ತೀರಿ ? ॥ ೧೨ ॥ ತಮ್ಮ ದರ್ಶನಮಾತ್ರದಿಂದಲೇ ನಮಗೆ ಸಕಲ ತೀರ್ಥಗಳ ಫಲವು ಬರುವದು. ಆದಕಾರಣ ಗುರುಚರಣಗಳನ್ನು ಬಿಟ್ಟು ನಾವು ಎಲ್ಲಿಗೆ ಹೋಗೋಣ ? ॥ ೧೩ ॥ ಸ್ವಾಮೀ, ಗುರುಚರಣದಲ್ಲಿಯೇ ಸಮಸ್ತ ತೀರ್ಥಗಳಿರುವವೆಂದು ವೇದ-ಶಾಸ್ತ್ರ-ಪುರಾಣಗಳು ಪ್ರಸಿದ್ಧವಾಗಿ ಹೇಳುವವು. ॥ ೧೪ ॥ ಅಂಥ ಪಾದಗಳುಳ್ಳ ತಾವು ನಮ್ಮ ಹತ್ತರ ಇದ್ದು ಆ ಬೇರೆ ತೀರ್ಥಗಳಿಗಾಗಿ ನಾವು ಅಡವಿ ಅಡವಿ ಯಾಕೆ ತಿರುಗಬೇಕು ? ಸ್ವಾಮೀ ದೇವರಾಯರೇ, ಕಲ್ಪವೃಕ್ಷವಾದ ತಮ್ಮನ್ನು ಬಿಟ್ಟು ನಾವು ಎಲ್ಲಿಗೆ ಹೋಗೋಣ ? ಎಂದು ವಿನಂತೀ ಮಾಡಿಕೊಂಡರು. ॥ ೧೫ ॥ ಆಗ ಶ್ರೀಗುರುಗಳು— ಎಲೈ ಶಿಷ್ಯರಿರಾ, ನಾವೆಲ್ಲರೂ ಸನ್ಯಾಸಿಗಳಷ್ಟೇ ? ಸನ್ಯಾಸಿಗಳು ಐದು ದಿವಸ ಒಂದೇ ಕಡೆಗೆ ಇರಬಾರದು ॥ ೧೬ ॥ ಸನ್ಯಾಸಿಗಳಾದವರು ಸದಾ ತೀರ್ಥಯಾತ್ರೆ ಮಾಡುತ್ತಿರಬೇಕು. ಅಲ್ಲಿ ಮನಸ್ಸು ಸ್ಥಿರ ಮಾಡಿಕೊಂಡಮೇಲೆ ಒಂದೇಕಡೆಯಲ್ಲಿರಲಿಕ್ಕೆ ಅಡ್ಡಿಯಿಲ್ಲ. ॥ ೧೭ ॥ ನೀವು ಈಗ ಮುಖ್ಯವಾಗಿ ನನ್ನದೊಂದು ಮಾತು ಕೇಳಿದರೆ, ಅದು ಹೆಚ್ಚಿನದಾಗುವದು. ನೀವು ಸಕಲ ತೀರ್ಥಯಾತ್ರಾ ಮಾಡಿದಮೇಲೆ ನಮ್ಮ ಹತ್ತರ ಬರ್ರಿ. ॥ ೧೮ ॥ ಬಹುಧಾನ್ಯ ಸಂವತ್ಸರದಲ್ಲಿ ನಾವು ಶ್ರೀಶೈಲಕ್ಕೆ ಬರುವೆವು.

ಅಷ್ಟರಲ್ಲಿ ನೀವೆಲ್ಲರು ಎಲ್ಲ ತೀರ್ಥಯಾತ್ರೆ ಮುಗಿಸಿಕೊಂಡು ಅಲ್ಲಿಗೆ ಬರ್ರಿ. ॥ ೧೯ ॥ ಎಂದು ಹೇಳಿದರು. ಎಲೈ ನಾಮಧಾರಕಾ ಗುರುಗಳ ಮಾತನ್ನು ಕೇಳಿ ಆ ಯಾವತ್ತು ಶಿಷ್ಯರು ಅವರ ಚರಣಕ್ಕೆ ನಮಸ್ಕಾರ ಮಾಡಿ, ॥ ೨೦ ॥ ವಿನಯದಿಂದ— ಮಹಾಸ್ವಾಮೀ, ಗುರುಗಳೇ, ತಮ್ಮ ವಾಕ್ಯವೇ ನಮಗೆ ಪ್ರಮಾಣವು. ತಮ್ಮ ವಚನದಂತೆ ಈಗ ನಾವು ನಿಶ್ಚಯವಾಗಿ ಭೂಮಿಯ ಮೇಲಿರುವ ಸಕಲ ತೀರ್ಥಯಾತ್ರೆಗೆ ಹೋಗುವೆವು. ॥ ೨೧ ॥ ಗುರು ವಾಕ್ಯದಂತೆ ಯಾವನು ನಡೆಯುವದಿಲ್ಲವೋ ಅವನು ರೌರವ ನರಕವನ್ನು ಹೊಂದುವನು. ಅವನ ಮನೆಯು ಯಮಪುರವು. ಅವನು ಅಖಂಡ ನರಕವನ್ನು ಅನುಭೋಗಿಸುವನು. ॥ ೨೨ ॥ ಸ್ವಾಮೀ ಗುರುನಾಥರೇ, ನಾವು ಯಾವ ಯಾವ ತೀರ್ಥಗಳಿಗೆ ಹೋಗಬೇಕೆಂಬದಾಗಿ ಸಮರ್ಥರಾದ ತಾವು ನಮಗೆ ಅಪ್ಪಣೆಯನ್ನು ದಯ ಪಾಲಿಸಬೇಕು. ನಾವು ತಮ್ಮ ವಾಕ್ಯವನ್ನು ಮನಸ್ಸಿನಲ್ಲಿ ದೃಢವಾಗಿಟ್ಟುಕೊಂಡು ಹೊರಡುವೆವು. ॥ ೨೩ ॥ ಸ್ವಾಮೀ ನೀವು ಯಾವ ಯಾವ ಸ್ಥಳಕ್ಕೆ ಹೋಗೆನ್ನುತ್ತೀರೋ ನಾವು ನಿಶ್ಚವಾಗಿ ಆ ಸ್ಥಳಕ್ಕೆ ಹೋಗುವೆವು ತಮ್ಮ ವಾಕ್ಯವೇ ನಮಗೆ ಸಿದ್ಧಿಯನ್ನು ಕೊಡುವದು ಎಂದರು. ॥ ೨೪ ॥ ಆ ಶಿಷ್ಯರ ಮಾತು ಕೇಳಿ ಶ್ರೀಗುರುಗಳು ಪ್ರಸನ್ನರಾಗಿ ಅವರಿಗೆ ಸಾಧಾರಣ ರೀತಿಯಿಂದ ತೀರ್ಥಯಾತ್ರೆಯ ಕ್ರಮವನ್ನು ಹೇಳಿ ಅಪ್ಪಣೆ ಕೊಟ್ಟರು. ಅದನ್ನು ಕೇಳು. ॥ ೨೫ ॥ ಈ ಬ್ರಹ್ಮಾಂಡ ಗೋಲದಲ್ಲಿ "ತೀರ್ಥರಾಜ" ಎಂದೆನಿಸಿಕೊಂಡ ಕಾಶೀ ಕ್ಷೇತ್ರವೇ ಎಲ್ಲಕ್ಕೂ ಶ್ರೇಷ್ಠವು. ಗಂಗಾ-ಭಾಗೀರಥಿ ಸೇವೆ ಮಾಡಲಿಕ್ಕೆ ನೀವು ತೀವ್ರವಾಗಿ ಅಲ್ಲಿಗೆ ಹೋಗಿರಿ. ॥ ೨೬ ॥ ಆ ಭಾಗೀರಥಿ ತಟಾಕ ಯಾತ್ರೆಯು ಅರವತ್ತು ಯೋಜನದ ವರೆಗೆ ಪವಿತ್ರವಾಗಿರುವದು. ಈ ಯಾತ್ರೆಯನ್ನು ಮಾಡುವದರಿಂದ ೬೦ ಕೃಛ್ರಗಳ ಫಲವು ಬರುವದು. ಗಂಗಾ ಯಮುನಾ ಸಂಗಮವಾದ ಪ್ರಯಾಗದಲ್ಲಿ ಇವರ ದುಪ್ಪಟ್ಟು ಫಲ ಬರುವದು. ॥ ೨೭ ॥ ಯಮುನಾ ನದಿಯ ತಟಾಕದಲ್ಲಿ ಇಪ್ಪತ್ತೈದು ಗ್ರಾಮಗಳು ಅವೆ. ಅಲ್ಲಿಯೂ ವಿಶೇಷ ವಾಗಿ ಕೃಛ್ರ ಫಲವು ಬರುವದು ಕೇಳು. ॥ ೨೮ ॥ ಪ್ರಯಾಗದಲ್ಲಿ ಸರಸ್ವತಿ ಎಂಬ ನದಿಯೂ ಭೂಮಿಯಲ್ಲಿ ಪ್ರಸಿದ್ಧವಾಗಿರುವದು. ಆ ನದಿಯ ದಂಡೆಗುಂಟ ೨೪ ಗ್ರಾಮಗಳಲ್ಲಿ ಸ್ನಾನ ಮಾಡಬೇಕು. ॥ ೨೯ ॥ ಅದರಿಂದ

ಅಷ್ಟೇ ಕೃಛ್ರ ಫಲವು ಬರುವದಲ್ಲದೆ ಯಜ್ಞಫಲವೂ ಬಂದು, ಆ ಮನುಷ್ಯನು ತನ್ನ ಪಿತೃಗಳ ಸಹಿತ ಶಾಶ್ವತವಾಗಿ ಬ್ರಹ್ಮಲೋಕದಲ್ಲಿರುವನು. ॥ ೩೦ ॥ ವರುಣಾ, ಕುಶಾವರ್ತಿ, ಶ್ರುತ ಪ್ರಸಿದ್ಧವಾದ ಕೃಷ್ಣಾ, ವೇಣಿ, ಶರಾವತಿ, ವಿಪಾಶಕಾ, ವಿತಸ್ತಾ, ಶರಾವತಿ ॥ ೩೧ ॥ ಮರುದ್ವೃಧ್ದಾ, ಅಸಿಕ್ನೀ, ಮಧುಮತಿ, ಪಯಸ್ವತಿ, ಧೃತವತಿ, ದೇವನದಿ ಎಂಬ ಮೊದಲಾದ ನದಿಗಳು ಈ ಭೂಮಂಡಲದಲ್ಲಿ ಮನೋಹರವಾಗಿ ಪ್ರಸಿದ್ಧವಾಗಿರುವವು. ಈ ನದಿಗಳು ಇರುವ ೧೫ ಗ್ರಾಮಗಳಲ್ಲಿ ತಟಾಕಯಾತ್ರೆ ಮಾಡಿ ಸ್ನಾನಮಾಡಿ ಯಾತ್ರೆ ಮಾಡಬೇಕು. ॥ ೩೨-೩೩ ॥ ಯಾರು ಭಕ್ತಿಯಿಂದ ಎಷ್ಟು ಗ್ರಾಮಗಳಲ್ಲಿ ಸ್ನಾನ ಮಾಡುವರೋ ಅವರು ಪವಿತ್ರರಾಗಿ ಅಷ್ಟೇ ಕೃಛ್ರ ಫಲವನ್ನು ಹೊಂದುವರು. ಮತ್ತು ಅವರ ಬ್ರಹ್ಮಹತ್ಯಾದಿ ಪಾತಕಗಳು ನಾಶವಾಗುವವು. ॥ ೩೪ ॥ ಚಂದ್ರಭಾಗಾ, ರೇವತಿ, ಶರಯೂ, ಗೋಮತಿ, ವೇದಿಕಾ, ಕೌಶಿಕೆ, ನಿತ್ಯಜಲಾ, ಮಂದಾಕಿನಿ ॥ ೩೫ ॥ ಮಹಾನದಿ, ಸಹಸ್ರವಕ್ತ್ರಾ, ಪೂರ್ಣಾಯುಷ್ಯ, ಬಾಹುದಾ, ವರುಣಾ ಎಂಬ ನದಿಗಳುಳ್ಳ ೧೬ ಗ್ರಾಮಗಳಲ್ಲಿ ತಟಾಕಯಾತ್ರೆಯನ್ನು ಮಾಡಬೇಕು. ॥ ೩೬ ॥ ಎಲೈ ಶಿಷ್ಯರೇ ನದಿಗಳ ಸಂಗಮದಲ್ಲಿ ಸ್ನಾನ ಮಾಡಿದರೆ ಅನಂತ ಪುಣ್ಯವು ಬಂದು, ತ್ರಿವೇಣಿ ಸಂಗಮ ಸ್ನಾನದ ಫಲ ಬರುವದು. ಆದ್ದರಿಂದ ನೀವು ನದಿಗಳ ಸಂಗಮದಲ್ಲಿ ಸ್ನಾನ ಮಾಡಿರಿ. ॥ ೩೭ ॥ ಮತ್ತು ಸೇತುಬಂಧ, ಭೀಮೇಶ್ವರ, ಶ್ರೀರಂಗ, ಪದ್ಮನಾಭೇಶ್ವರ, ಮನೋಹರವಾದ ಪುರುಷೋತ್ತಮ, ನೈಮಿಷಾರಣ್ಯದಲ್ಲಿಯ ತೀರ್ಥ ॥ ೩೮ ॥ ಪುಷ್ಕರ, ವೈರೋಚನಿ ಎಂಬ ತೀರ್ಥಕ್ಷೇತ್ರಗಳಲ್ಲಿ ಸಂಚರಿಸಿ ಅಲ್ಲಲ್ಲಿ ಸಮೀಪವಾಗಿದ್ದ ಬೇರೆ ತೀರ್ಥಗಳನ್ನು ಗೊತ್ತುಮಾಡಿಕೊಂಡು ಅಲ್ಲಿಯ ಯೋಗ್ಯವಾದ ನಂದಿತೀರ್ಥ, ಗಂಗಾತೀರ್ಥಗಳಲ್ಲಿ ಸ್ನಾನ ಮಾಡಿರಿ. ॥ ೩೯ ॥ ಆಮೇಲೆ ಬದರೀನಾರಾಯಣ ತೀರ್ಥ, ಪುಣ್ಯಪಾವನವಾದ ನಂದಿತೀರ್ಥ, ಕುರುಕ್ಷೇತ್ರ, ಶ್ರೀಶೈಲವೆಂಬ ತೀರ್ಥಗಳಲ್ಲಿ ಸ್ನಾನ ಮಾಡಿ ಯಾತ್ರಾ ಮಾಡಿರಿ. ॥ ೪೦ ॥ ಮಹಾಲಯ ತೀರ್ಥದಲ್ಲಿ ಸ್ನಾನ ಮಾಡಿ ಬ್ರಾಹ್ಮಣನು ಪಿತೃಗಳಿಗೆ ತರ್ಪಣ ಕೊಟ್ಟರೆ ಅವರ ನಾಲ್ವತ್ತೆರಡು ಕುಲದವರು ನಿಶ್ಚಯವಾಗಿ ಸ್ವರ್ಗಕ್ಕೆ ಹೋಗುವರು. ॥ ೪೧ ॥ ಕೇದಾರತೀರ್ಥ, ಪುಷ್ಕರತೀರ್ಥ, ಕೋಟಿತೀರ್ಥ, ನರ್ಮದಾ

ತೀರ್ಥ, ಮಾತೃಕೇಶ್ವರತೀರ್ಥ, ಕುಬ್ಜತೀರ್ಥ, ವಿಶೇಷವಾದ ಕೋಕಾಮುಖಿತೀರ್ಥ, || ೪೨ || ಪ್ರಸಾದತೀರ್ಥ, ವಿಜಯತೀರ್ಥ, ಪುರೀಂದ್ರತೀರ್ಥ, ಚಂದ್ರನದೀತೀರ್ಥ, ಗೋಕರ್ಣ, ಪ್ರಖ್ಯಾತವಾದ ಶಂಖಕರ್ಣತೀರ್ಥಗಳಲ್ಲಿ ಸ್ನಾನ ಮಾಡುವದು ಯೋಗ್ಯವು. || ೪೩ || ಅಯೋಧ್ಯಾ, ಮಧುರಾ, ಕಾಂಚಿ, ದ್ವಾರಾವತಿ, ಗಯಾ, ಶಾಲಿಗ್ರಾಮ ತೀರ್ಥ, ಶಂಭಲತೀರ್ಥ ಇವು ಮುಕ್ತಿ ಕ್ಷೇತ್ರಗಳು. || ೪೪ || ಗೋದಾವರೀ ತಟಾಕದಲ್ಲಿ ಆರು ಯೋಜನದ ವರೆಗೆ ಸ್ನಾನ ಮಾಡಿದರೆ ಅದರ ಪುಣ್ಯವೆಷ್ಟೆಂದು ಹೇಳಲಿ? ವಾಜಪೇಯ ಯಜ್ಞದ ಸಮ ಫಲವು ಬರುವದು. || ೪೫ || ಮತ್ತು ಅಲ್ಲಿ ಸವ್ಯಾಪಸವ್ಯವಾಗಿ ಮೂರು ಸಾರೆ ಏಕಮನಸ್ಸಿನಿಂದ ತಟಾಕಯಾತ್ರೆ ಮಾಡಿ ಸ್ನಾನ ಮಾಡಿದರೆ ಮಹಾ ಪಾಪಿಯಾದರೂ ಶುದ್ಧನಾಗಿ ಜ್ಞಾನವನ್ನು ಹೊಂದುವನು. || ೪೬ || ಪ್ರಯಾಗಸಮಾನ ಪ್ರಖ್ಯಾತವಾದ ಎರಡು ತೀರ್ಥಗಳಲ್ಲಿ ಒಂದು ಭೀಮೇಶ್ವರ ತೀರ್ಥವು ವಂಜರಾ ನದಿಯ ಸಂಗಮದಲ್ಲಿ ಪ್ರಖ್ಯಾತವಾಗಿರುವದು. || ೪೭ || ಕುಶತೀರ್ಥ ಸ್ನಾನ ಮಾಡಿ ತರ್ಪಣ ಕೊಟ್ಟು ಹನ್ನೆರಡು ಊರುಗಳಲ್ಲಿ ತಟಾಕ ಯಾತ್ರಾ ಮಾಡಿ ಗೋದಾವರಿ ಸಂಗಮಕ್ಕೆ ಹೋಗಿ ಸ್ನಾನ ಮಾಡಿದರೆ ಹದಿನೆಂಟು ಕೃಚ್ಛ್ರಗಳ ಫಲವು ಬರುವದು. || ೪೮ || ಪೂರ್ಣಾನದಿಯ ತಟಾಕದಲ್ಲಿ ನಾಲ್ಕು ಗ್ರಾಮಗಳಲ್ಲಿಯೂ, ಕೃಷ್ಣಾ—ವೇಣೀ ತೀರದಲ್ಲಿ ೧೫ ಗ್ರಾಮಗಳಲ್ಲಿಯೂ ಹರ್ಷದಿಂದ ಸ್ನಾನ ಮಾಡಿ ಯಾತ್ರಾಮಾಡಬೇಕು. || ೪೯ || ತುಂಗಭದ್ರಾ ತೀರದ ಇಪ್ಪತ್ತು ಗ್ರಾಮಗಳಲ್ಲಿ ತಟಾಕ ಯಾತ್ರಾ ಮಾಡುವದು ಯೋಗ್ಯವು. ಇವಲ್ಲದೆ ಪಂಪಾ ಸರೋವರವು ಸ್ವಾಭಾವಿಕವಾಗಿ ಅನಂತ ಮಹಿಮೆಯುಳ್ಳದ್ದಿರುವದು. || ೫೦ || ಹರಿಹರ ಕ್ಷೇತ್ರವು ಮಹಾ ಖ್ಯಾತಿಯುಳ್ಳದ್ದು. ಅಲ್ಲಿ ಸ್ನಾನ ಮಾಡಿದರೆ ಸರ್ವ ಪಾಪಗಳೂ ಪರಿಹಾರವಾಗುವವು. ಅಷ್ಟೇ ಮಹತ್ವವುಳ್ಳ ಭೀಮರಥಿ ತೀರದಲ್ಲಿ ೧೦ ಗ್ರಾಮಗಳಲ್ಲಿ ತಟಾಕ ಯಾತ್ರಾ ಮಾಡಬೇಕು. || ೫೧ || ಅವುಗಳಲ್ಲಿ ಪಂಢರಪುರ, ಮಾತುಲಿಂಗ, ಮಹತ್ವವಾದ ಗಂಧರ್ವ ಅಥವಾ ಗಾಣಗಾಪುರ ಇವು ಶ್ರೇಷ್ಠವಾದವುಗಳಿರುತ್ತವೆ. ಆ ಗಾಣಗಾಪುರದಲ್ಲಿ ಉತ್ತಮ ಹಾಗು ಶ್ರೇಷ್ಠವಾದ ಅಷ್ಟತೀರ್ಥಗಳಿರುತ್ತವೆ. ಅಲ್ಲಿ ಸ್ನಾನಮಾಡಬೇಕು. || ೫೨ ||

ಭೀಮಾ-ಅಮರಜಾ ಸಂಗಮದಲ್ಲಿರುವ **ಕೋಟಿ** ತೀರ್ಥವು ಪ್ರಸಿದ್ಧವಾದದ್ದು. ಅಲ್ಲಿರುವ ಅಶ್ವತ್ಥ ವೃಕ್ಷವು ಕಲ್ಪ ವೃಕ್ಷಕ್ಕೆ ಸಮಾನವಾದದ್ದು. || ೫೩ || ಆ ಅಶ್ವತ್ಥದ ಎದುರಿನಲ್ಲಿ **ನರಸಿಂಹ** ತೀರ್ಥವದೆ. ಅದರ ಉತ್ತರಭಾಗ ದಲ್ಲಿ **ವಾರಾಣಸೀ** ತೀರ್ಥವೂ || ೫೪ || ಪೂರ್ವಭಾಗದಲ್ಲಿ **ಪಾಪವಿನಾಶೀ** ತೀರ್ಥವೂ ಅವೆ. ಅದರ ಮುಂದೆ ಕ್ರಮವಾಗಿ **ರುದ್ರಪಾದ** ತೀರ್ಥ, **ಚಕ್ರ**ತೀರ್ಥ, **ಕೇಶವದೇವವಿನಾಯಕ** ತೀರ್ಥ ವಿಶೇಷವಾದ ಕೋಟಿ ತೀರ್ಥ **ಮನ್ಮಥತೀರ್ಥ** ಎಂಬ ಎಂಟು ತೀರ್ಥಗಳು ಅವೆ. || ೫೫-೫೬ || ಆ ಮನ್ಮಥತೀರ್ಥದ ಎದುರಿಗೆ ಕಲ್ಲೇಶ್ವರ ದೇವಸ್ಥಾನವದೆ. ಗಾಂಧಾರಭುವನವೆಂಬ ಗಾಣಗಾಪುರವು ಅನುಪಮವಾದ ಸಿದ್ಧಮುನಿಯ ಸ್ಥಾನ ವಾಗಿರುವದು. || ೫೭ || ಅಲ್ಲಿ ಯಾರು ಅನುಷ್ಠಾನ ಮಾಡುತ್ತಾರೋ ಅವರು ತೀವ್ರವಾಗಿ ತಮ್ಮ ಎಲ್ಲ ಇಚ್ಛಿತ ಫಲಗಳನ್ನು ಹೊಂದುವರು. ಅಲ್ಲಿ ಕಲ್ಪವೃಕ್ಷದಂತೆ ಒಬ್ಬ ಯತಿಗಳಿರುವದರಿಂದ ಮನಸ್ಸಿನ ಇಚ್ಛೆಗಳು ಯಾಕೆ ಪೂರ್ಣವಾಗಲಿಕ್ಕಿಲ್ಲ ? || ೫೮ || ಕಾಂಕಿಣೀ ಸಂಗಮವೆಂಬ ಭೀಮಾತೀರದಲ್ಲಿರುವ ಯೋಗ್ಯ ಸ್ಥಳವು ಪ್ರಯಾ ಗಕ್ಕೆ ಸಮಾನವಾಗಿರುವದು. ಇದರಂತೆ ಅನಂತ ತೀರ್ಥಗಳು ಸ್ವಾಭಾವಿಕವಾಗಿ ಪುಣ್ಯಕರವಾಗಿರುವವು. || ೫೯ || ತುಂಗಭದ್ರಾ-ವರದಾ ನದಿಗಳ ಸಂಗಮದಲ್ಲಿ ಸ್ನಾನ ಮಾಡಿದರೆ ತಪೋನಿಧಿಯಾಗುವನು. ಮಲಪ್ರಭಾ ಸಂಗಮ ದಲ್ಲಿ ಸ್ನಾನಮಾಡಿದರೆ ನೂರುಜನ್ಮದ ಪಾಪಗಳು ಹೋಗುವವು. || ೬೦ || ಪ್ರಖ್ಯಾತವಾದ ನಿವೃತ್ತಿ ಸಂಗಮ ದಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯಾಪಾತಕವು ಹೋಗುವದು ಅಲ್ಲಿ ನೀವು ತೀವ್ರವಾಗಿ ಹೋಗಿರಿ. || ೬೧ || ಸಿಂಹರಾಶಿಗೆ ಬೃಹಸ್ಪತಿಯು ಬಂದಾಗ ಭಾಗೀರಥಿಯು ಎಲ್ಲಕಡೆಗೂ ಸಂತೋಷದಿಂದ ಬಂದು ಐಕ್ಯಳಾಗು ವಳು. || ೬೨ || ಬೃಹಸ್ಪತಿಯು ಕನ್ಯಾರಾಸಿಗೆ ಬರಲು ಭಾಗೀರಥಿಯು ಕೃಷ್ಣಾನದಿಗೆ ಬರುವಳು. ತುಲಾರಾಶಿ ಯಲ್ಲಿ ಭಾಗೀರಥಿಯು ತುಂಗಭದ್ರಾನದಿಗೆ ಬರುವಳು. || ೬೩ || ಕರ್ಕರಾಸಿಗೆ ಸೂರ್ಯನು ಬರಲು ಮಲಪ್ರಭಾ-ಕೃಷ್ಣಾ ಸಂಗಮದಲ್ಲಿ ಸ್ನಾನ ಮಾಡಿದ ಯಾವತ್ತು ಜನರ ಬ್ರಹ್ಮಹತ್ಯಾ ಪಾಪಗಳು ನಾಶವಾಗುವವು. || ೬೪ || ಭೀಮಾ-ಕೃಷ್ಣಾ ಸಂಗಮದಲ್ಲಿ ಸ್ನಾನ ಮಾಡಿದವನು ಏಳು ಜನ್ಮಗಳಲ್ಲಿ ಬ್ರಾಹ್ಮಣನಾಗಿ ಹುಟ್ಟುವನು. || ೬೫ ||

ತುಂಗಭದ್ರಾ-ಕೃಷ್ಣಾ ಸಂಗಮದಲ್ಲಿ ಸ್ನಾನ ಮಾಡಿದರೆ ಅದರ ಮೂರುಪಟ್ಟು ಫಲ ಬರುವದು. ನಿವೃತ್ತಿ ಸಂಗಮದಲ್ಲಿ ಸ್ನಾನ ಮಾಡಿದರೆ ಆದರ ನಾಲ್ಕಷ್ಟು ಫಲವುಂಟು. || ೬೬ || ಪಾತಾಳಗಂಗೆಯಲ್ಲಿ ಸ್ನಾನ ಮಾಡಿ ಮಲ್ಲಿಕಾರ್ಜುನನ ದರ್ಶನ ಮಾಡಿದರೆ ಆದರ ಆರಷ್ಟು ಫಲ ಬರುವದು. ಮತ್ತು ಆವರಿಗೆ ಪುನರ್ಜನ್ಮವಿಲ್ಲ. || ೬೭ || ಕೃಷ್ಣಾನದಿಯು ಸಮುದ್ರಕ್ಕೆ ಕೂಡುವ ಆಗಣ್ಯಸ್ಥಾನವಾದ **ಲಿಂಗಾಲಯು**ವೆಂಬಲ್ಲಿ ಸ್ನಾನ ಮಾಡಿದರೆ ದ್ವಿಗುಣ ಪುಣ್ಯ ಬರುವದು. ಕಾವೇರಿನದಿಯು ಸಮುದ್ರಕ್ಕೆ ಕೂಡುವಲ್ಲಿ ಸ್ನಾನ ಮಾಡಿದರೆ ಆದರ ೧೫ ಪಟ್ಟು ಪುಣ್ಯ ಉಂಟು. ಆದ್ದರಿಂದ ಅಲ್ಲಿ ಒಳ್ಳೇ ಭಕ್ತಿಯಿಂದ ಸ್ನಾನ ಮಾಡಿರಿ. || ೬೮ || ತಾಮ್ರಪರ್ಣಿ ನದಿಯಲ್ಲಿ ಸ್ನಾನ ಮಾಡಿದರೆ ಇದೇ ಪ್ರಕಾರದ ಪುಣ್ಯ ಬರುವದು. ಕೃತಮಾಲಾ ನದಿಯಲ್ಲಿ ಸ್ನಾನ ಮಾಡಿದರೆ ಸರ್ವ ಪಾಪ ಪರಿಹಾರವಾಗುವದು. || ೬೯ || ಅತಿ ವಿಶೇಷವಾದ ಪಯಸ್ವಿನೀ ಮತ್ತು ಭವನಾಶಿನೀ ನದಿಗಳು ಸಮುದ್ರಕ್ಕೆ ಕೂಡುವಲ್ಲಿ ಸ್ನಾನ ಮಾಡಿದರೆ ಸರ್ವ ಪಾಪ ಪರಿಹಾರವಾಗುವವು. || ೭೦ || ಅಲ್ಲಿಂದ ತೀವ್ರವಾಗಿ ಹೋಗಿ ಶೇಷಾದ್ರಿಕ್ಷೇತ್ರ, ಶ್ರೀ ರಂಗನಾಥ, ಶ್ರೀ ಮದನಂತ ಪದ್ಮನಾಭರನ್ನು ಪೂಜಿಸಿರಿ. ಅಲ್ಲಿಂದ ತೀವ್ರವಾಗಿ ತೃಣಮಾಲಾ ಕ್ಷೇತ್ರಕ್ಕೆ ಹೋಗಿರಿ. || ೭೧ || ಕುಂಭಕೋಣವು ಸರ್ವ ತೀರ್ಥ ಸಮಾನವಾಗಿದೆ. ಆಮೇಲೆ ಕನ್ಯಾಕುಮಾರಿ ದರ್ಶನ ಮಾಡಿಕೊಂಡು ಮತ್ಸ್ಯತೀರ್ಥದಲ್ಲಿ ಸ್ನಾನಮಾಡಿರಿ. || ೭೨ || ಶ್ರೇಷ್ಠವಾದ ಪಕ್ಷತೀರ್ಥ, ರಾಮೇಶ್ವರ ಧನುಷ್ಕೋಟಿತೀರ್ಥ, ಶ್ರೀರಂಗದಲ್ಲಿ ಕಾವೇರಿ ತೀರ್ಥವು ಯೋಗ್ಯವಾದದ್ದು. || ೭೩ || ಚಂದ್ರಕುಂಡದಲ್ಲಿ ಪುರುಷೋತ್ತಮತೀರ್ಥ, ಕೋಟಿತೀರ್ಥ, ಕೊಲ್ಹಾಪುರದಲ್ಲಿ ಮಹಾಲಕ್ಷ್ಮಿ ಸ್ಥಾನ ಇವು ಪ್ರಖ್ಯಾತ ಸ್ಥಾನಗಳು. ಕೊಲ್ಹಾಪುರವು ದಕ್ಷಿಣ ಕಾಶಿಯೆಂದು ಹೆಸರಾಗಿದೆ. || ೭೪ || ಅಲ್ಲಿ ನರಸಿಂಹನೂ ಪರಮಾತ್ಮನಾದ ಸದಾಶಿವನೂ ಪ್ರತ್ಯಕ್ಷವಾಗಿರುವರು. || ೭೫ || ಕೃಷ್ಣಾತೀರದಲ್ಲಿರುವ ಭಿಲ್ಲವಡಿಯಲ್ಲಿ ಭುವನೇಶ್ವರಿ ಎಂಬ ಶಕ್ತಿಯು ಇರುವಳು, ಅಲ್ಲಿ ಯಾರು ತಪಸ್ಸು ಮಾಡುತ್ತಾರೋ ಅವರು ಈಶ್ವರನಲ್ಲಿ ಐಕ್ಯರಾಗುವರು. || ೭೬ || ವರುಣಾಸಂಗಮವು ಯೋಗ್ಯವಾದದ್ದು, ಅಲ್ಲಿ ಸ್ನಾನಮಾಡಿ, ಅಲ್ಲಿರುವ ಮಾರ್ಕಾಂಡೇಯನೆಂಬ ಸಂಗಮೇಶ್ವರನನ್ನು ಪೂಜಿಸಿರಿ. ||೭೭||

ಕೃಷ್ಣಾತೀರದಲ್ಲಿರುವ ಉತ್ತಮವಾದ ಋಷ್ಯಾಶ್ರಮಗಳಲ್ಲಿ ಸ್ನಾನ ಮಾಡಿದರೆ ಜ್ಞಾನ ಸಿದ್ಧಿಯಾಗುವದು. ॥ ೭೮ ॥ ಕೃಷ್ಣಾ ಪ್ರವಾಹದಲ್ಲಿರುವ ಅಮರಪುರ ಅಂದರೆ ನರಸೋಬವಾಡಿ ಎದುರಿಗಿರುವ ಅವರವಾಡದ ಹತ್ತಿರ ಕೃಷ್ಣಾ-ಪಂಚಗಂಗಾ ಸಂಗಮದಲ್ಲಿ ಸ್ನಾನ ಮಾಡಿದರೆ ಪ್ರಯಾಗಕ್ಕಿಂತ ಅಧಿಕ ಪುಣ್ಯ ಬರುವದು. ॥ ೭೯ ॥ ಆ ಸ್ಥಳದಲ್ಲಿ ಎಲ್ಲ ತೀರ್ಥಗಳಿರುವದರಿಂದ ಯಾವತ್ತು ಮುನಿಗಳು ಅಲ್ಲಿ ತಪಸ್ಸು ಮಾಡಿ ತೀವ್ರವಾಗಿ ಜ್ಞಾನಸಿದ್ಧಿಯನ್ನು ಹೊಂದಿದರು. ಅದು ಅನುಪಮ ಕ್ಷೇತ್ರವಾಗಿರುವದು. ॥ ೮೦ ॥ ಈ ಪ್ರಕಾರ ಪ್ರಖ್ಯಾತವಾಗಿರುವ ಆ ಸ್ಥಳಗಳಲ್ಲಿ ಮೂರುದಿವಸ ಅನುಷ್ಠಾನ ಮಾಡಿದರೆ ಎಲ್ಲ ಇಷ್ಟಾರ್ಥಗಳು ಸಾಧಿಸುವವು. ಮತ್ತು ತೀವ್ರವಾಗಿ ಪರಮಾರ್ಥವು ಪ್ರಾಪ್ತವಾಗುವದು. ॥ ೮೧ ॥ ಯುಗಾಲಯ ತೀರ್ಥವು ಯೋಗ್ಯವಾದದ್ದು ಅದರ ದರ್ಶನ ಮಾತ್ರದಿಂದ ಮುಕ್ತಿಯಾಗುವದು. ಮುಂದೆ ಶೂರ್ಪಾಲಯವೆಂಬ ತೀರ್ಥವದೆ ॥ ೮೨ ॥ ಕೃಷ್ಣಾ-ಮಲಪ್ರಭಾ ಸಂಗಮದಲ್ಲಿ ಅಲ್ಲಿ ವಿಶ್ವಾಮಿತ್ರನು ಭಗತಿಯನ್ನು ತಪಸ್ಸು ಮಾಡಿ ಸಿದ್ಧಿ ಹೊಂದಿದ್ದರಿಂದ ಅಲ್ಲಿ ಸ್ನಾನಮಾಡಿದರೆ ಸಮಸ್ತ ದೋಷಗಳು ಪರಿಹಾರವಾಗುವವು. ॥ ೮೩ ॥ ಕೃಷ್ಣಾನದಿಯು ಉತ್ತರ ವಾಹಿನಿಯಾದ ಶ್ವೇತಶೃಂಗಿಯಲ್ಲಿ ವಿಷ್ಣುವಿನ ಅವತಾರವಾದ ಕಪಿಲ ಋಷಿಗಳಿಗೆ ಗಾಯತ್ರಿಯು ಪ್ರಸನ್ನಳಾದಳು ॥ ೮೪ ॥ ಅಲ್ಲಿ ಸ್ನಾನಮಾಡಿದರೆ ಕಾಶಿಗಿಂತಲೂ ಹೆಚ್ಚು ಪುಣ್ಯ ಬರುವದು. ಅಲ್ಲಿ ಒಮ್ಮೆ ಮಂತ್ರ ಜಪಿಸಿದರೆ ಕೋಟಿಪಟ್ಟು ಫಲ ಬರುವದು. ॥೮೫॥ ಆಮೇಲೆ ಯೋಗ್ಯವಾದ ಕೇದಾರೇಶ್ವರ ತೀರ್ಥದಲ್ಲಿ ಕೇದಾರೇಶ್ವರನನ್ನು ನೋಡಬೇಕು. ಪೀರಾಪುರದಲ್ಲಿ ಶ್ರೀ ದತ್ತಾತ್ರೇಯರು ಪ್ರತ್ಯಕ್ಷವಾಗಿ ವಾಸವಾಗಿದ್ದಾರೆ. ॥ ೮೬ ॥ ಮಹತ್ವವಾದ ತೀರ್ಥಗಳನ್ನೆಷ್ಟು ಹೇಳಲಿ? ಮಣಿಗಿರಿ ಎಂಬ ಪ್ರಖ್ಯಾತ ಸ್ಥಾನದಲ್ಲಿ ಸಪ್ತರ್ಷಿಗಳು ಪ್ರೀತಿಯಿಂದ ಬಹುಕಾಲ ತಪಸ್ಸನ್ನು ಮಾಡಿದರು. ॥ ೮೭ ॥ ವೃಷಭಾದ್ರಿ ಮತ್ತು ಕಲ್ಯಾಣ ನಗರಗಳಲ್ಲಿ ಅಸಂಖ್ಯ ತೀರ್ಥ ಕ್ಷೇತ್ರಗಳುಂಟು ಅಲ್ಲಿ ಸ್ನಾನ ಮಾಡಿದರೆ ಅವು ಸಂಸಾರ ಲಂಪಟವನ್ನು ಹೋಗಲಾಡಿಸುವವು. ಆದ್ದರಿಂದ ಎಲ್ಲ ಕ್ಷೇತ್ರಗಳಲ್ಲಿ ಕರ್ಮಾಚರಣೆ ಮಾಡಿರಿ. ॥ ೮೮ ॥ ಅಹೋಬಲ ಕ್ಷೇತ್ರದಲ್ಲಿ ನರಸಿಂಹನನ್ನು ದರ್ಶನ ಮಾಡಿದರೆ ೬೦ ಯಜ್ಞದ ಪುಣ್ಯ ಬರುವದು. ಕಾಲಿನಿಂದ

ನಡೆಯುತ್ತ ಶ್ರೀಗಿರಿಯ ದರ್ಶನ ಮಾಡಿದರೆ ಪುನರ್ಜನ್ಮವಿಲ್ಲ. ॥ ೮೯ ॥ ಎಲೈ ಶಿಷ್ಯರಿರಾ, ಈ ಪ್ರಕಾರ ಭೂಮಿಯಲ್ಲಿರುವ ಈ ಸಮಸ್ತ ತೀರ್ಥಗಳಲ್ಲಿ ಸಂಚರಿಸಬೇಕು. ಆದರೆ ರಜಸ್ವತಿಯಾದ ನದಿಯಲ್ಲಿ ಸ್ನಾನ ಮಾಡಿದರೆ ಮಹಾ ದೋಷವು ಬರುವದು ॥ ೯೦ ॥ ಕರ್ಕಾಟಕ ಸಂಕ್ರಮಣದಿಂದ ಎರಡು ತಿಂಗಳು ಸ್ನಾನ ಬಿಟ್ಟರೆ ದೋಷವಿಲ್ಲ. ಆದರೆ ನದೀತೀರದಲ್ಲಿರುವವರು ಮಾತ್ರ ಬೇಕಾದಾಗ ಸ್ನಾನ ಮಾಡಿದರೂ ದೋಷವಿಲ್ಲ. ॥ ೯೧ ॥ ಯಾವ ದಿವಸ ನದಿ ಮತ್ತು ಕೆರೆ-ಬಾವಿಗಳಿಗೆ ಹೊಸ ನೀರು ಬರುವದೋ ಆದಿವಸ ಅವು ರಜಸ್ವಲೆಯಾದವೆಂದು ತಿಳಿಯಬೇಕು. ನದಿಯು ರಜಸ್ವಲೆಯಾದಾಗ ಮಹಾನದಿಗಳಲ್ಲಿ ೩ ದಿವಸ ಸ್ನಾನ ಮಾಡಬಾರದು ॥ ೯೨ ॥ ಭಾಗೀ-ರಥಿ, ಗೋದಾವರಿ, ಚಂದ್ರಭಾಗಾ, ಸಿಂಧು, ನರ್ಮದಾ, ಶರಯೂ ಈ ಮಹಾನದಿಗಳಲ್ಲಿ ಮೂರು ದಿವಸ ಸ್ನಾನ ಮಾಡಬಾರದು. ॥ ೯೩ ॥ ಗ್ರೀಷ್ಮಕಾಲದಲ್ಲಿ ಎಲ್ಲ ನದಿಗಳಿಗೆ ರಜಸ್ವಲಾ ದೋಷವು ೧೦ ದಿವಸಗಳವರೆಗೆ ಇರುವದು. ಕೆರೆ-ಬಾವಿಗಳಿಗೆ ಒಂದು ರಾತ್ರಿ ದೋಷವಿರುವದು ॥ ೯೪ ॥ ಆದ್ದರಿಂದ ರಜಸ್ವಲೆಯಾದ ನದಿ-ಕೆರೆ-ಬಾವಿಗಳಲ್ಲಿ ಸ್ನಾನ ಮಾಡಿದರೆ ದೋಷಬರುವದು. ಕಾರಣ ಆ ವೇಳೆಯಲ್ಲಿ ಬಿಡಬೇಕು. ॥ ೯೫ ॥ ಎಲೈ ಶಿಷ್ಯರೇ ನಿಮಗೆ ಸಾಧಾರಣವಾಗಿ ಈ ಮುಖ್ಯ ತೀರ್ಥಗಳನ್ನು ಹೇಳಿದೆನು. ಇವಲ್ಲದೆ ನಿಮ್ಮ ಕಣ್ಣಿಗೆ ಕಂಡ ಬೇರೆ ತೀರ್ಥಗಳಲ್ಲೆಲ್ಲ ನೀವು ವಿಧಿಪೂರ್ವಕ ಆಚರಣೆ ಮಾಡಬೇಕು ಎಂದು ಆಜ್ಞೆ ಮಾಡಿದರು. ॥ ೯೬ ॥ ಈ ಪ್ರಕಾರ ಗುರುಗಳ ಮಾತು ಕೇಳಿ ಆ ಶಿಷ್ಯರು ಅವರಿಗೆ ನಮಸ್ಕಾರಮಾಡಿ ಅವರ ಅಪ್ಪಣೆ ಪಡೆದು ತೀರ್ಥಯಾತ್ರೆಗಾಗಿ ಹೊರಟರು. ॥ ೯೭ ॥ ಎಲೈ ನಾಮಧಾರಕನೇ, ಈ ಪ್ರಕಾರ ಎಲ್ಲ ಶಿಷ್ಯರು ಯಾತ್ರೆಗೆ ಹೋದಮೇಲೆ ಶ್ರೀ ಗುರುಗಳು ಆ ವೈಜನಾಥದಲ್ಲಿ ಗುಪ್ತವಾಗಿದ್ದರು. ॥ ೯೮ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಎಲೈ ಶ್ರೋತೃಗಳೇ ಮನೋಹರವಾದ ಗುರುಚರಿತ್ರೆಯ ಮುಂದಿನ ಕಥೆಯನ್ನು ವಿಸ್ತಾರವಾಗಿ ಕೇಳುತ್ತ ಹೋದರೆ ಸಕಲಾಭೀಷ್ಟಗಳು ಸಾಧಿಸುವವು. ॥ ೯೯ ॥ ಯಾರು ಬ್ರಹ್ಮರಸದ ಸವಿಯನ್ನು ಕ್ಷಣಕ್ಷಣಕ್ಕೆ ಸೇವಿಸುವರೋ ಅವರಿಗೆ ಇದರಲ್ಲಿ ಪ್ರೀತಿ ಹುಟ್ಟಿ, ಪರಮಾರ್ಥವು ಶೀವ್ರವಾಗಿ ಸಾಧಿಸುವದು. ॥ ೧೦೦ ॥ ಕಾಮಧೇನು ಸಮಾನ

ವಾದ ಗುರುಚರಿತ್ರೆಯನ್ನು ಭಕ್ತರಾದ ಯಾವ ಶ್ರೋತೃ ಜನರು ಸಮಾಧಾನದಿಂದಲೂ ಸಾವಕಾಶವಾಗಿಯೂ ಕೇಳುತ್ತಾರೋ ಅವರು ನಾಲ್ಕು ಪುರುಷಾರ್ಥಗಳನ್ನು ಹೊಂದುವರು. ॥ ೧೦೧ ॥ ಎಂದನು.

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನೃಸಿಂಹ ಸರಸ್ವತ್ಯುವಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ ಕ್ಷೇತ್ರ ತೀರ್ಥ ವರ್ಣನಂನಾಮ ಪಂಚದಶೋಧ್ಯಾಯಃ ॥ ೧೫ ॥ ಶ್ರೀ ಗುರುದೇವದತ್ತ ॥

— ೧೫ನೇ ಅಧ್ಯಾಯ ಸಮಾಪ್ತ —

---

# ೧೬ನೇಯ ಅಧ್ಯಾಯ

## — ಧೌಮ್ಯ ಮುನಿಯ ಮೂರುಜನ ಶಿಷ್ಯರು ಗುರುಸೇವಾ ಮಾಡಿದ ಕಥೆ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕನು ಮತ್ತೆ ಸಿದ್ಧರನ್ನು ಕುರಿತು— ಸ್ವಾಮೀ, ಶ್ರೀ ಗುರುಗಳು ಯಾತ್ರೆಗೆ ಹೊರಟಮೇಲೆ ಅವರ ಹತ್ತಿರ ಯಾರ್‍ಯಾರು ಇದ್ದರು ? ಮುಂದಿನ ಸಂಗತಿಯು ಹ್ಯಾಗೆ ನಡೆಯಿತು ? ಎಂಬ ಗುರುಚರಿತ್ರೆಯ ವೃತ್ತಾಂತವನ್ನು ವಿಸ್ತಾರವಾಗಿ ನನಗೆ ಹೇಳಬೇಕು ಎಂದು ವಿನಂತೀ ಮಾಡಿಕೊಂಡನು ॥ ೧-೨ ॥ ಶಿಷ್ಯನ ಮಾತು ಕೇಳಿ ಸಿದ್ಧರು ಸಂತೋಷ ಬಟ್ಟು— ಎಲೈ ಶಿಷ್ಯಶಿರೋಮಣಿ, ಗುರುಭಕ್ತಾ, ನಾಮಧಾರಕಾ, ನೀನು ಧನ್ಯನು ॥ ೩ ॥ ನನ್ನ ಮನಸ್ಸು ಅವಿದ್ಯಾಮಾಯೆಯ ಗುಂಗಿನಿಂದ ಎಚ್ಚರವಿಲ್ಲದಂತಾಗಿತ್ತು ನಾನು ನಿನ್ನ ಸಲುವಾಗಿ ಎಚ್ಚರಾದೆನು ನನ್ನಲ್ಲಿ ಜ್ಞಾನಜ್ಯೋತಿಯುಂಟಾಯಿತು ॥ ೪ ॥ ಎಲೈ ನಾಮಧಾರಕಾ, ನೀನು ನನ್ನ ಪ್ರಾಣಸಖನು ! ನಿನ್ನ ದೆಶೆಯಿಂದ ಗುರುಚರಿತ್ರೆಯು ನನ್ನ ನೆನಪಿಗೆ ಬಂದು ನಿನ್ನಂತೆ ನಾನು ಸುಖ ಹೊಂದಿದೆನು ॥ ೫ ॥ ನಾನು ಅಜ್ಞಾನವೆಂಬ ಕತ್ತಲೆಯ ರಾತ್ರಿಯಲ್ಲಿ ಬಹಳ ಕಷ್ಟಬಡುತ್ತಿದ್ದೆನು ನೀನು ಸುಧಾಮೃತವೆಂಬ ಸಾಗರದಲ್ಲಿ ನನ್ನನ್ನು ಮುಳುಗಿಸಿದಿ ॥ ೬ ॥ ನೀನು ಮಾಡಿದ ಉಪಕಾರದಿಂದ ನನಗೆ ಬಹಳ ಸಂತೋಷವಾಯಿತು ಇನ್ನು ನೀನು ಪುತ್ರ-ಪೌತ್ರರಿಂದ ಕೂಡಿಕೊಂಡು ಆನಂದದಿಂದಿರುತ್ತೀ, ನಿನ್ನ ಮನೆಯಲ್ಲಿ ಬಡತನವು ಉಳಿಯುವದಿಲ್ಲ ॥ ೭ ॥ ನೀನು ಗುರುಕೃಪೆಯನ್ನು ಪಡೆದ ಕೂಸು ! ಇನ್ನು ನಿನ್ನನ್ನು ಎಲ್ಲರೂ ಮನ್ನಿಸುವರು. ನನ್ನ ಮಾತಿನ ಮೇಲೆ ನಿನಗೆ ಸಂಶಯ ಬರುತ್ತಿದ್ದರೆ ನಾನು ನಿನಗೆ ವಚನ ಕೊಡುತ್ತೇನೆ ತೆಗೆದುಕೋ, ನೀನು ಅಷ್ಟೈಶ್ವರ್ಯದಿಂದ ಸಂತೋಷವನ್ನು ಹೊಂದುವಿ. ॥ ೮ ॥ ಕಾಮಧೇನುಸ್ವರೂಪವಾದ ಗುರುಚರಿತ್ರೆಯನ್ನು ನಿನಗೆ ವಿಸ್ತಾರವಾಗಿ ಹೇಳುವೆನು

ಕೇಳು. ಶ್ರೀಗುರುಗಳು ವೈಜನಾಥೇಶ್ವರ ಸನ್ನಿಧಿಯಲ್ಲಿ ಗುಪ್ತವಾಗಿದ್ದದ್ದು ॥ ೯ ॥ ಮತ್ತು ಅವರು ತಮ್ಮ ಎಲ್ಲ ಶಿಷ್ಯರಿಗೆ ತೀರ್ಥಯಾತ್ರೆಗೆ ಹೋಗಲಿಕ್ಕೆ ಅಪ್ಪಣೆ ಕೊಟ್ಟು ಕಳಿಸಿದ್ದನ್ನೂ ಕೇಳಿರುವಿ. ಆಗ ನಾನೊಬ್ಬನೇ ಮಾತ್ರ ಶ್ರೀಗುರುಗಳ ಹತ್ತಿರ ಇದ್ದು ಅನುಕ್ರಮವಾಗಿ ಅವರ ಸೇವೆ ಮಾಡುತ್ತಿದ್ದೆನು. ॥ ೧೦ ॥ ಆ ವೈಜನಾಥದಲ್ಲಿ ಅಂಬಾ ಆರೋಗ್ಯಭವಾನಿ ಮಂದಿರದ ಸ್ಥಾನವು ಮನೋಹರ ಹಾಗೂ ಉತ್ತಮವಾದದ್ದೆಂದು ತಿಳಿದು ಶ್ರೀಗುರುಗಳು ಅಲ್ಲಿ ಒಂದು ವರ್ಷದ ವರೆಗೆ ಗುಪ್ತವಾಗಿದ್ದರು ॥ ೧೧ ॥ ಈ ಪ್ರಕಾರ ಶ್ರೀಗುರುಗಳು ಅಲ್ಲಿ ಇರುತ್ತಿರಲು ಒಂದು ದಿವಸ ಒಬ್ಬ ಬ್ರಾಹ್ಮಣ ಮುನಿಯು ಬಂದು, ಗುರುಗಳಿಗೆ ಭೆಟ್ಟಿಯಾಗಿ ಒಳ್ಳೇ ಭಕ್ತಿಯಿಂದ ನಮಸ್ಕಾರ ಮಾಡಿದನು. ॥ ೧೨ ॥ ಆಮೇಲೆ ಅವರ ಚರಣಗಳ ಮೇಲೆ ಮಸ್ತಕವನ್ನಿಟ್ಟು ಪರೋಪರಿಯಾಗಿ ಸ್ತೋತ್ರ ಮಾಡುತ್ತ— ಸ್ವಾಮೀ, ನಾನು ಅಜ್ಞಾನಸಾಗರದಲ್ಲಿ ಮುಳುಗಿರುವೆನು ನನ್ನನ್ನು ಉದ್ಧರಿಸಿರಿ, ಉದ್ಧರಿಸಿರಿ ॥ ೧೩ ॥ ನಾನು ಬಹುಕಾಲ ತಪಸ್ಸು ಮಾಡಿದರೂ ನನ್ನ ಮನಸ್ಸು ಸ್ಥಿರವಾಗದೆ ಇದ್ದಕಾರಣ ನನಗೆ ಜ್ಞಾನದ ಮಾರ್ಗವೇ ತಿಳಿಯಲಿಲ್ಲ. ॥ ೧೪ ॥ ನನ್ನದು ಜ್ಞಾನವಿಲ್ಲದ ತಪಸ್ಸಾಗಿ ನಾನು ಬಹಳ ಕಷ್ಟಬಟ್ಟೆನು ಸ್ವಾಮೀ, ಈಗ ತಮ್ಮನ್ನು ನೋಡಿ ನನಗೆ ಬಹಳ ಸಂತೋಷವಾಯಿತು ॥ ೧೫ ॥ ನಾನು ಬಹಳದಿವಸ ಕಷ್ಟಬಟ್ಟು ಗುರುಸೇವೆಯನ್ನು ಮಾಡಲಿಲ್ಲ ಆ ಕಾರಣದಿಂದ ನನ್ನ ಮನಸ್ಸು ಸ್ಥಿರವಾಗಲಿಲ್ಲ ॥ ೧೬ ॥ ಸ್ವಾಮೀ, ನೀವು ಜಗದುದ್ಧಾರಕರೆಂದು ತಿಳಿದು ನಾನು ತಮ್ಮ ದರ್ಶನಕ್ಕೆ ಬಂದಿರುವೆನು ಅದಕಾರಣ ಈಗ ನೀವು ನನಗೆ ಉಪದೇಶ ಮಾಡಬೇಕು ಅದರಿಂದ ನನಗೆ ತೀವ್ರ ಜ್ಞಾನ ಉಂಟಾದೀತು ಎಂದನು ॥ ೧೭ ॥ ಆ ಬ್ರಾಹ್ಮಣ ಮುನಿಯ ಮಾತು ಕೇಳಿ ಶ್ರೀಗುರುಗಳು ನಕ್ಕು— ಎಲೈ ಬ್ರಾಹ್ಮಣಾ, ನೀನು ಗುರುವಿಲ್ಲದೆ ಹ್ಯಾಗೆ ಮುನಿಯಾದಿ? ಅದನ್ನು ನನಗೆ ಮೊದಲು ಹೇಳು ಎಂದರು. ॥ ೧೮ ॥ ಈ ಪ್ರಕಾರ ಶ್ರೀಗುರುಗಳು ಕೇಳಿದ ಕೂಡಲೆ ಆ ಬ್ರಾಹ್ಮಣನು ಮನಸ್ಸಿನಲ್ಲಿ ದುಃಖದಿಂದ ಕಣ್ಣೀರು ಸುರಿಸುತ್ತ— ಸ್ವಾಮೀ, ಗುರುರಾಯರೇ ಕೇಳಿರಿ ॥ ೧೯ ॥ ನನಗೊಬ್ಬರು ಗುರುಗಳಿರುವರು. ಅವರ ಮಾತುಗಳು ಒಳ್ಳೇ ನಿಷ್ಠುರವಾಗಿರುವವು. ಅವರು ನನಗೆ ಬಹಳ ತ್ರಾಸ ಕೊಟ್ಟು

ಮಾಡಬಾರದಂಥ ಅನೇಕ ಸೇವೆಗಳನ್ನು ಹೇಳಿದರು. ॥ ೨೦ ॥ ಆಗ ಅವರು— ಎಲೈ ಬ್ರಾಹ್ಮಣಾ, ಇವತ್ತಿನ ವರೆಗೂ ನಿನ್ನ ಅಂತಃಕರಣವು ಸ್ಥಿರವಾಗಲಿಲ್ಲ. ಆದ್ದರಿಂದ ನಾನು ನಿನಗೆ ವೇದಶಾಸ್ತ್ರ, ತರ್ಕಭಾಷ್ಯ, ವ್ಯಾಕರಣ ಮೊದಲಾದವುಗಳನ್ನು ಹೇಳುವದಿಲ್ಲ. ॥ ೨೧ ॥ ಎಂದು ಮತ್ತೆ ಏನೇನೋ ಅಂದರು. ಸ್ವಾಮೀ, ನನ್ನ ಮನಸ್ಸು ಸ್ಥಿರವಿಲ್ಲದ್ದರಿಂದ ನಾನು ಅವರ ಯಾವ ಮಾತನ್ನೂ ಕೇಳಲಿಲ್ಲ. ಆಗ ಆವರು ಮತ್ತೆ ನನ್ನಮೇಲೆ ಸಿಟ್ಟಾದರು. ॥ ೨೨ ॥ ಆದರೂ ಆಮೇಲೆ ನಾನು ಬಹುದಿವಸ ಅವರಹತ್ತರ ಇದ್ದೆನು. ಅವರು ಮತ್ತೆ ನನಗೆ ನಿಷ್ಠುರ ಮಾತುಗಳನ್ನಾಡಿದರು ಆದ್ದರಿಂದ ನಾನು ಅವರಮೇಲೆ ಸಿಟ್ಟಾಗಿ, ಇತ್ತ ತಮ್ಮಕಡೆಗೆ ಬಂದೆನು ಎಂದನು. ॥ ೨೩ ॥ ಅವನ ಮಾತು ಕೇಳಿ ಶ್ರೀ ನರಸಿಂಹಸರಸ್ವತಿ ಗುರುಗಳು ನಕ್ಕು— ಎಲೈ ನೀನೆಂಥ ಬ್ರಾಹ್ಮಣನೋ! ನೀನು ಆತ್ಮಘಾತಕಿಯಾಗಿರುತ್ತೀ ॥ ೨೪ ॥ —ಎಲೈ ಒಬ್ಬ ಮೂರ್ಖನು ತನ್ನ ಮೈಮೇಲೆ ಮಲವಿಸರ್ಜನೆ ಮಾಡಿಕೊಂಡು, ಹೀಗೆ ಆದದ್ದು ನನ್ನ ಅದೃಷ್ಟವೆಂದು ಹೇಳುವಂತೆ ॥ ೨೫ ॥ ನಿನ್ನ ಅಂತಃಕರಣವಿರುವದು. ಮತ್ತು ನೀನು ಮೂಗನ್ನು ಕೊಯ್ದುಕೊಂಡು, ಮುಂದಿರುವವರಿಗೆ ಅಪಶಕುನವನ್ನು ತೋರಿಸುವವರಲ್ಲಿ ಒಬ್ಬನಾಗಿರುತ್ತೀ. ॥ ೨೬ ॥ ನೀನು ನಿನ್ನ ಗುಣವನ್ನು ಮನಸ್ಸಿನಲ್ಲಿ ವಿಚಾರಿಸಲಿಲ್ಲ ಆದ್ದರಿಂದ ನಿನಗೆ ಜ್ಞಾನ ಹ್ಯಾಗೆ ಆಗಬೇಕು? ನೀನು ಅಲ್ಪಬುದ್ಧಿಯವನೂ ಗುರುದ್ರೋಹಿಯೂ ಆಗಿರುತ್ತೀ. ॥ ೨೭ ॥ ಮತ್ತು ನೀನು ನಿನ್ನ ಗುರುಗಳ ಗುಣದೋಷಗಳನ್ನು ಸದಾ ಆನಂದದಿಂದ ಉಚ್ಚರಿಸುತ್ತೀ. ಅಂದಮೇಲೆ ನಿನ್ನ ಮನಸ್ಸು ಹ್ಯಾಗೆ ಸ್ಥಿರವಾದೀತು? ಅದರಿಂದ ನಿನಗೆ ಜ್ಞಾನವು ಹೇಗಾಗಬೇಕು ಹೇಳು? ॥ ೨೮ ॥ ಉತ್ತಮನಾದ ಗುರುವು ನಿನ್ನ ಹತ್ತರ ಇರಲು, ನೀನು ಅಡವಿ ಅಡವಿ ಯಾಕೆ ತಿರುಗುತ್ತೀ? ಕಾಮಧೇನುವಿನಂಥ ಗುರುವನ್ನು ಬಿಟ್ಟು ನನ್ನ ಹತ್ತರ ಯಾಕೆ ಬಂದಿ? ॥ ೨೯ ॥ ಯಾವ ಮನುಷ್ಯನು ಗುರುದ್ರೋಹಿಯಾಗುವನೋ ಅವನಿಗೆ ಇಹ–ಪರಗಳೆರಡರಲ್ಲಿ ಸುಖವಿಲ್ಲ. ಆ ದಿವಾಂಧ ಮನುಷ್ಯನಿಗೆ ಜ್ಞಾನವು ಹೇಗಾಗಬೇಕು? ॥ ೩೦ ॥ ಆದರಂತೆ ನೀನೂ ದಿವಾಂಧನೇ ಆಗಿರುತ್ತೀ. ಗುರುವಿನ ಅನುಗ್ರಹವನ್ನು ಪಡೆದವನಿಗೆ ವೇದಶಾಸ್ತ್ರ ಮೊದಲಾದವುಗಳು ತೀವ್ರವಾಗಿ

ಬರುವವು. ಶ್ರೀಗುರುವು ಸಂತುಷ್ಟನಾದರೆ ಆ ಶಿಷ್ಯನು ತೀವ್ರ ಸರ್ವಜ್ಞನಾಗುವನು. ॥ ೩೧ ॥ ಯಾವ ಶಿಷ್ಯನು ತನ್ನ ಸೇವೆಯಿಂದ ಶ್ರೀಗುರುವನ್ನು ಸಂತೋಷಪಡಿಸಿದ ಕ್ಷಣದಲ್ಲಿಯೇ ಅಷ್ಟಸಿದ್ಧಿಗಳು ಅವನ ಮನೆಯ ದಾಸಿಯರಾಗುವರು. ಅವನಿಗೆ ವೇದಶಾಸ್ತ್ರಗಳಂತೂ ತೀವ್ರಸಾಧ್ಯವಾಗುವವು ಎಂದು ಹೇಳಿದರು. ॥ ೩೨ ॥ ಈಪ್ರಕಾರ ಶ್ರೀಗುರುಗಳ ಮಾತು ಕೇಳಿ ಆ ಬ್ರಾಹ್ಮಣ ಮುನಿಯು ಅವರ ಪಾದಕ್ಕೆ ಬಿದ್ದು, ಕೈಮುಗಿದು ಕರುಣಾವಚನದಿಂದ ವಿನಂತೀ ಮಾಡಿಕೊಳ್ಳುತ್ತಾನೆ. ॥ ೩೩ ॥ ಜಯ ಜಯ ಜಗದ್ಗುರುವೇ, ನಿರ್ಗುಣನೇ, ನಿರ್ವಿಕಾರನೇ, ಅಪರಂಪಾರ ಜ್ಞಾನಸಾಗರನೇ, ನನ್ನನ್ನು ತಾವೇ ಉದ್ಧಾರ ಮಾಡಬೇಕು ॥ ೩೪ ॥ ಅಜ್ಞಾನ ಮಾಯಾ ಮೋಹಿತನಾದ ನನಗೆ ಗುರುಗಳು ಯಾವ ರೀತಿ ಇರುತ್ತಾರೆಂಬುದು ತಿಳಿಯುವದಿಲ್ಲ ಆದಕಾರಣ ಸ್ವಾಮಿಗಳಾದ ತಾವು ನನಗೆ ಜ್ಞಾನವಾಗುವಂತೆ ಪ್ರಕಾಶವಾಗಿ ಹೇಳಿರಿ ॥ ೩೫ ॥ ವಿಶ್ವವಂದ್ಯನೇ, ಗುರುಮೂರ್ತಿಯೇ, ಗುರುವನ್ನು ಗುರ್ತಿಸುವದು ಹ್ಯಾಗೆ? ಮತ್ತು ಅವರ ಸೇವೆಯನ್ನು ಮಾಡುವದು ಹ್ಯಾಗೆ? ಎಂಬದನ್ನು ನನಗೆ ಪ್ರಕಾಶವಾಗಿ ಹೇಳಬೇಕು ॥ ೩೬ ॥ ಮತ್ತು ನನ್ನ ಮನಸ್ಸು ಹ್ಯಾಗೆ ಸ್ಥಿರವಾದೀತು? ಮತ್ತು ನಾನು ಗುರುವನ್ನು ಹ್ಯಾಗೆ ತಿಳಿದೇನು? ಎಂಬಪ್ರಗಳನ್ನು ಹೇಳಿ ನನ್ನಮೇಲೆ ಉಪಕಾರ ಮಾಡಬೇಕು ಎಂದು ಅವರ ಚರಣಕ್ಕೆ ನಮಸ್ಕಾರ ಮಾಡಿದನು ॥ ೩೭ ॥ ಅವನ ಕರುಣಾವಚನವನ್ನು ಕೇಳಿ ಶ್ರೀಗುರುಗಳು— ಎಲೈ ವಿಪ್ರಮುನಿಯೇ ಕೇಳು ಗುರುಸೇವಾ ವಿಧಾನವನ್ನು ನಿನಗೆ ವಿಸ್ತಾರವಾಗಿ ಹೇಳುವೆನು. ॥ ೩೮ ॥ ತಂದೆ-ತಾಯಿಗಳಿಬ್ಬರೂ ಗುರುಗಳು ಮತ್ತು ಉಪದೇಶಕರ್ತನು ಪರಮ ಗುರುವು ॥ ೩೯ ॥ ಶ್ರೀಗುರುವೇ ತ್ರೈಮೂರ್ತಿಸ್ವರೂಪನೂ ಹಾಗೂ ನಾರಾಯಣಸ್ವರೂಪನೂ ಎಂದು ತಿಳಿದು ಮನಸ್ಸು ಗಟ್ಟಿಮಾಡಿ, ಆ ಗುರುವಿನ ಯಾವ ಮಾತನ್ನೂ ಮೀರದೆ, ಭಕ್ತಿಯಿಂದ ಅವರ ಸೇವೆ ಮಾಡಬೇಕು. ॥ ೪೦ ॥ ಭಕ್ತಿಯಿಂದ ಗುರುಸೇವೆಯನ್ನು ಹ್ಯಾಗೆ ಮಾಡಬೇಕೆಂಬ ಬಗ್ಗೆ, ನಿನಗೆ ಮಹಾಭಾರತ ಆದಿಪರ್ವದಲ್ಲಿಯ ಒಂದು ಕಥೆಯನ್ನು ಹೇಳುವೆನು ಕೇಳು. ॥ ೪೧ ॥

ಪೂರ್ವದಲ್ಲಿ ದ್ವಾರಾವತೀ ತೀರ್ಥದಲ್ಲಿ ಧೌಮ್ಯರೆಂಬ ಒಬ್ಬ ಮುನಿಗಳಿದ್ದರು. ಅವರ ಹತ್ತಿರ ವೇದಾಭ್ಯಾಸ ಮಾಡುವದಕ್ಕಾಗಿ ಅರುಣಿ ಪಾಂಚಾಳ, ಬೈದ, ಉಪಮನ್ಯು ಎಂಬ ಮೂರುಮಂದಿ ಶಿಷ್ಯರು ಗುರುಸೇವಾ ಮಾಡಿಕೊಂಡಿದ್ದರು. ॥ ೪೨-೪೩ ॥ ಪೂರ್ವದಲ್ಲಿ ಗುರುಸೇವೆಯು ಹ್ಯಾಗಿತ್ತೆಂದರೆ— ಗುರುಗಳು ಶಿಷ್ಯರಿಂದ ಅನೇಕತರದ ಸೇವಾ ತಕ್ಕೊಳ್ಳುತ್ತ, ತಮ್ಮ ಸೇವೆಯಲ್ಲಿ ಆ ಶಿಷ್ಯನ ಮನಸ್ಸು ಎಷ್ಟು ದೃಢವಾಗಿದೆ ಎಂಬದನ್ನು ಪರೀಕ್ಷಿಸುತ್ತ, ಅವನ ಮನಸ್ಸು ಹಾಗು ಭಕ್ತಿಗಳನ್ನು ನೋಡಿ ಕೃಪಾಮಾಡುತ್ತಿದ್ದರು ಕೂಡಲೆ ಆ ಶಿಷ್ಯನಿಗೆ ಸಕಲ ವಿದ್ಯೆಗಳೂ ಬಂದು ಅವನ ಬಯಕೆಗಳೆಲ್ಲವೂ ಪೂರ್ಣವಾಗುತ್ತಿದ್ದವು ॥ ೪೪-೪೫ ॥ ಅದರಂತೆ ಧೌಮ್ಯರು ಶ್ರೇಷ್ಠರಾಗಿದ್ದರು. ಅವರು ಒಂದು ದಿವಸ "ಅರುಣಿ ಪಾಂಚಾಳ" ನೆಂಬ ಶಿಷ್ಯನನ್ನು ಕರೆದು ಆಜ್ಞೆ ಮಾಡುತ್ತಾರೆ. ಎಲೈ ಶಿಷ್ಯನೇ, ಕೇಳು. ನಮ್ಮ ಗದ್ದೆಯು ಈ ಅಡವಿಯಲ್ಲಿ ಕೆರೆಯಕೆಳಗಿರುವದು ಈಗ ಅದರಲ್ಲಿ ಬತ್ತವನ್ನು ಬಿತ್ತಿರುವದು. ಆ ಗದ್ದೆಗೆ ನೀರು ಹಾಯಿಸಬೇಕಾಗಿದೆ. ಆದಕಾರಣ ಈಗ ನೀನು ತೀವ್ರವಾಗಿ ಅಲ್ಲಿಗೆ ಹೋಗಿ, ನಮ್ಮ ಗದ್ದೆಯು ಪೂರಾ ನೀರಿನಿಂದ ತುಂಬಿ ಹಸಿಯಾಗುವಂತೆ ಆ ಕೆರೆಯಿಂದ ನೀರು ಒಯ್ದು ಬಿಡು. ಎಂದು ಹೇಳಿದರು. ॥ ೪೬-೪೭-೪೮ ॥ ಗುರುಗಳ ಅಪ್ಪಣೆಯಂತೆ ಆ ಶಿಷ್ಯನು ಅಡವಿಗೆ ಹೋಗಿ ನೋಡಲು, ಕಾಲುವೆಯು ತುಂಬಿ ಒಳ್ಳೇವೇಗದಿಂದ ತಗ್ಗಿನಲ್ಲಿ ಧಡಧಡ ಎಂದು ಹರಿಯುತ್ತಿತ್ತು. ॥ ೪೯ ॥ ಆದರೆ ಗುರುಗಳ ಗದ್ದೆಯು ಅದಕ್ಕಿಂತ ಸ್ವಲ್ಪ ಎತ್ತರವಾಗಿತ್ತು. ನೀರು ಮೇಲೆ ಏರಲಿಕ್ಕೆ ಸಾಧ್ಯವಿದ್ದಿಲ್ಲ ॥ ೫೦ ॥ ಆಗ ಶಿಷ್ಯನು ಮನಸಿನಲ್ಲಿ— ಅಹಾ! ಈಗ ನಾನು ಏನು ಮಾಡಲಿ ? ಈ ಕಾಲುವೆಯ ನೀರು ತಗ್ಗಿನಲ್ಲಿ ಒಳ್ಳೇವೇಗದಿಂದ ಹರಿಯುತ್ತದೆ. ಗದ್ದೆಗೆ ನೀರು ಬಿಡದಿದ್ದರೆ ಗುರುಗಳು ಸಿಟ್ಟಾಗುವರು ಇದನ್ನು ಹ್ಯಾಗೆ ಕಟ್ಟಬೇಕು ? ಎಂದು ವಿಚಾರಿಸುತ್ತಿದ್ದನು. ॥ ೫೧ ॥ ಆಮೇಲೆ ಅವನು ಅಲ್ಲಿಬಿದ್ದ ಕಲ್ಲು-ದುಂಡಿಗಳನ್ನು ತಂದು ಆ ನೀರಿಗೆ ಅಡ್ಡವಾಗಿಡುತ್ತಿದ್ದನು. ಆದರೆ ಆ ನೀರಿನ ಸೆಳವಿಗೆ ಆ ಕಲ್ಲುಗಳು ಸಹ ಹರಿದು ಹೋಗಹತ್ತಿದವು. ॥ ೫೨ ॥ ಅವನು ಮತ್ತೆ ನಾನಾರೀತಿಯಿಂದ ಪ್ರಯತ್ನ ಮಾಡಿದರೂ ನೀರು ಮೇಲೆ ಏರಲಿಲ್ಲ. ಆಗ ಅವನು ಮನಸಿನಲ್ಲಿ— ದೇವಾ,

ಗುರುರಾಯಾ, ಈಗ ಏನುಮಾಡಲಿ? ‖ ೫೩ ‖ ಎಂದು ಮತ್ತೆ ಮನಸ್ಸಿನಲ್ಲಿ— ಏನು ಪ್ರಯತ್ನ ಮಾಡಿದರೂ ಗುರುಗಳ ಗದ್ದೆಗೆ ನೀರು ಏರುವದಿಲ್ಲ. ಇದರ ಸಲುವಾಗಿ ನಾನು ನಿಶ್ಚಯ ಪ್ರಾಣ ಕೊಡುವೆನು. ‖ ೫೪ ‖ ಎಂದು ಮನಸ್ಸು ಗಟ್ಟಿಮಾಡಿ ಗುರುಗಳನ್ನು ಧ್ಯಾನಿಸುತ್ತ— ಸ್ವಾಮೀ ಇದಕ್ಕೆ ಏನಾದರೂ ಉಪಾಯವನ್ನು ಯೋಚಿಸಿ ಪ್ರಯತ್ನ ಮಾಡುವೆನು ‖ ೫೫ ‖ ನೀರಿನ ಪ್ರವಾಹದಗುಂಟ ಕಲ್ಲುಗಳು ತೇಲಿ ಹೋಗುತ್ತವೆಂದಬಳಿಕ ಆ ನೀರಿಗೆ ನಾನೇ ಅಡ್ಡವಾಗಿ ಮಲಗಿಬಿಡುವದೇ ಯೋಗ್ಯ ಉಪಾಯವು ಎಂದು ನಿಶ್ಚಯಮಾಡಿ ‖ ೫೬ ‖ ಎರಡೂ ಕೈಗಳಿಂದ ಆ ಕಾಲುವೆಯ ಒಂದು ದಂಡೆಯನ್ನು ಗಟ್ಟಿಗಾಗಿ ಒತ್ತಿ ಹಿಡಿದು ಇನೇ ದಂಡೆಗೆ ತನ್ನ ಎರಡೂ ಕಾಲುಗಳನ್ನು ಕೊಟ್ಟು ಗಟ್ಟಿಯಾಗಿ ಒತ್ತಿ ಹಿಡಿದು, ಆ ಪ್ರವಾಹಕ್ಕೆ ತನ್ನ ದೇಹವನ್ನು ಅಡ್ಡವಾಗಿಟ್ಟು ಮಲಗಿಕೊಂಡು ಮನಸ್ಸಿನಲ್ಲಿ ಗುರುಗಳನ್ನು ಧ್ಯಾನಿಸುತ್ತಿದ್ದನು. ‖ ೫೭ ‖ ಈ ಪ್ರಕಾರ ಆ ಶಿಷ್ಯ ಶಿರೋಮಣಿಯು ಆ ನೀರಿಗೆ ಅಡ್ಡಿ ಮಾಡಿದಕೂಡಲೆ ಆ ಕಾಲುವೆಯ ಅರ್ಧ ನೀರು ಅವನ ಮೈಮೇಲೆ ಹಾದು ಗುರುಗಳ ಗದ್ದೆಗೆ ಬರಹತ್ತಿತು ‖ ೫೮ ‖ ಉಳಿದ ಅರ್ಧ ನೀರು ಅವನ ಕೆಳಗೆ ಹರಿದುಹೋಗುತ್ತಿತ್ತು. ಹೀಗಾಗಿ ಆ ಶಿಷ್ಯನ ದೇಹವೆಲ್ಲ ಆ ನೀರಲ್ಲಿ ಮುಳುಗಿಹೋಯಿತು. ‖ ೫೯ ‖ ಈ ಪ್ರಕಾರ ಆ ಶಿಷ್ಯನು ಅಲ್ಲಿ ನೀರಿನ ಪ್ರವಾಹದಲ್ಲಿ ಮುಳುಗಿರುತ್ತಿರಲು ಇತ್ತ ಸ್ವಲ್ಪ ಹೊತ್ತಿನಲ್ಲಿ ಗುರುಗಳ ಗದ್ದೆಯು ನೀರಿನಿಂದ ತುಂಬಿ ಹಸಿಯಾಯಿತು ‖ ೬೦ ‖ ಅಷ್ಟರಲ್ಲಿ ಸೂರ್ಯಾಸ್ತವಾಯಿತು ಆಗ ಗುರುಗಳಾದ ಧೌಮ್ಯರು ಮನಸ್ಸಿನಲ್ಲಿ— ಸೂರ್ಯಾಸ್ತವಾದರೂ ಶಿಷ್ಯನು ಇನ್ನೂ ಮನೆಗೆ ಯಾಕೆ ಬರಲಿಲ್ಲ? ‖ ೬೧ ‖ ಎಂದು ವಿಚಾರಿಸುತ್ತ ಸ್ವತಃ ಗದ್ದೆಗೆ ಹೋದರು. ಆಗ ಅದು ನೀರಿನಿಂದ ತುಂಬಿರುವದನ್ನು ಕಂಡು ಬಹಳ ಸಂತೋಷಪಟ್ಟರು. ‖ ೬೨ ‖ ಆದರೆ ಆಗ ಶಿಷ್ಯನು ಮಾತ್ರ ಕಾಣದ್ದರಿಂದ ಅವರು ಮನಸ್ಸಿನಲ್ಲಿ ಚಿಂತಿಸುತ್ತ— ಅಯ್ಯೋ! ನನ್ನ ಶಿಷ್ಯನನ್ನು ಹೆಬ್ಬಾವು ನುಂಗಿತೋ ಅಥವಾ ಹುಲಿ ಏನಾದರೂ ತಿಂದಿತೋ, ನನ್ನ ಪ್ರಿಯ ಶಿಷ್ಯನು ಎಲ್ಲಿ ಇದ್ದಿದ್ದಾನು? ‖ ೬೩ ‖ ಎಂದು ಅಂತಃಕರಣದಿಂದಲೂ ಪ್ರೇಮಭಾವದಿಂದಲೂ— ಏ! ಶಿಷ್ಯಾ ಆರುಣಿಪಂಚಾಳಾ, ಎಲ್ಲಿದ್ದೀ ಬೇಗ ಬಾ ಎಂದು ಗಟ್ಟಿಯಾಗಿ ಒದರಿ ಕರೆಯಹತ್ತಿ

ದರು. ‖ ೬೪ ‖ ಈ ಪ್ರಕಾರ ಧೌಮ್ಯರು ಕರುಣಾ ಸ್ವರದಿಂದ ಕರೆಯುವ ಧ್ವನಿಯು ಆ ಶಿಷ್ಯನ ಕಿವಿಗೆ ಬಿದ್ದ ಕೂಡಲೆ ಅವನು ಅಲ್ಲಿಂದ ಎದ್ದುಬಂದು ಶ್ರೀ ಗುರುಗಳಿಗೆ ಭಕ್ತಿಯಿಂದ ನಮಿಸಿದನು. ಆಗ ಧೌಮ್ಯರು ಅವನನ್ನು ಅಪ್ಪಿಕೊಂಡು ಸಮಾಧಾನಮಾಡಿ— ಎಲೈ ಶಿಷ್ಯಶಿರೋಮಣಿಯೇ, ನೀನು ಬಹಳ ಕಷ್ಟಬಟ್ಟೆ ಇನ್ನು ನಿನಗೆ ಸಕಲ ವೇದಶಾಸ್ತ್ರ, ವ್ಯಾಕಾರಣ ಮುಂತಾದ ಸರ್ವ ವಿದ್ಯೆಗಳೂ ಬಂದವು. ‖ ೬೫–೬೬–೬೭ ‖ ನೀನು ಏನೂ ಚಿಂತೆ ಮಾಡಬೇಡ ಎಂದು ವರವನ್ನು ಕೊಟ್ಟು ಆಶೀರ್ವಾದ ಮಾಡಿದಕೂಡಲೆ ಎಲೈ ಬ್ರಾಹ್ಮಣಮುನಿಯೇ ಕೇಳು, ಅವನಿಗೆ ಸರ್ವ ವಿದ್ಯೆಗಳೂ ಬಂದು ಜ್ಞಾನವಂತನಾಗಿ ಗುರುಗಳಾದ ಧೌಮ್ಯರಿಗೆ ಒಳ್ಳೇ ಭಕ್ತಿಯಿಂದ ನಮಸ್ಕಾರ ಮಾಡಿದನು ‖ ೬೮ ‖ ಆಗ ಕೃಪಾನಿಧಿಯಾದ ಧೌಮ್ಯರು ಸಂತೋಷದಿಂದ ಅವನನ್ನು ಆಶ್ರಮಕ್ಕೆ ಕರಕೊಂಡು ಹೋಗಿ— ಎಲೈ ಶಿಷ್ಯನೇ, ಇನ್ನು ನೀನು ನಿನ್ನ ಊರಿಗೆ ಹೋಗಿ ವಿವಾಹ ಮಾಡಿಕೊಂಡು ಸುಖವಾಗಿರು ಎಂದು ಆಜ್ಞೆಮಾಡಿದರು. ‖ ೬೯ ‖ ಅಪರಂತೆ ಅವನು ಗುರುಗಳ ಅಪ್ಪಣೆ ಪಡೆದು ತನ್ನ ಊರಿಗೆ ಹೋದನು ಅಲ್ಲಿ ಇನ್ನು ಇಬ್ಬರು ಶಿಷ್ಯರು ಉಳಿದರು. ‖ ೭೦ ‖

ಎಲೈ ಬ್ರಾಹ್ಮಣನೇ ಕೇಳು. ಆಮೇಲೆ ಧೌಮ್ಯರು, ತಮ್ಮ ಸೇವೆ ಮಾಡುತ್ತಿರುವ ೨ನೇ ಶಿಷ್ಯನಾದ "ಬೈದ" ಎಂಬವನ ಮನಸ್ಸನ್ನು ಪರೀಕ್ಷಿಸಬೇಕೆಂದು ಅವನನ್ನು ಕರೆದು—ಎಲೈ ಶಿಷ್ಯನೇ, ನಿನಗೊಂದು ಮಾತು ಹೇಳುವೆನು ಕೇಳು. ನೀನು ನಮ್ಮ ಗದ್ದೆಗೆ ಹೋಗಿ ಹಗಲಿರಳು ಅದನ್ನು ರಕ್ಷಿಸುತ್ತಿರಬೇಕು. ‖ ೭೧–೭೨ ‖ ಆಮೇಲೆ ಅದರಲ್ಲಿರುವ ಧಾನ್ಯವನ್ನು ಮನೆಗೆ ತರಬೇಕು ಎಂದು ಹೇಳಿದರು. ಅವರ ಮಾತು ಕೇಳಿ ಕೂಡಲೆ ಸಂತೋಷದಿಂದ ಅವನು ಗದ್ದೆಗೆ ಹೋಗಿ, ‖ ೭೩ ‖ ಆಗ ಗದ್ದೆಯೊಳಗಿನ ಪೀಕು ಬರುವವರೆಗೆ ಅಹೋರಾತ್ರಿ ಕಷ್ಟಬಟ್ಟು ಅದನ್ನು ಕಾಯುತ್ತಿದ್ದು, ಕೆಲವು ದಿವಸಗಳ ಮೇಲೆ ಆ ಪೀಕನ್ನು ಕೊಯ್ದು ತುಳಿದು, ತೂರಿ, ರಾಸಿಯನ್ನು ಮಾಡಿದನು, ಅಷ್ಟರಲ್ಲಿ ಕತ್ತಲಾಯಿತು. ಆಗ ಅವನು ಓಡುತ್ತ ಗುರುಗಳ ಹತ್ತರ ಬಂದು ಕೈಮುಗಿದು—

ಸ್ವಾಮೀ, ಧಾನ್ಯವು ಬಹಳವಾಗಿ ಬೆಳೆದು ಕಾಳಿನ ರಾಸಿಯಿಂದ ಗದ್ದೆಯು ತುಂಬಿಹೋಗಿದೆ, ಆ ರಾಸಿಯನ್ನು ತರಲಿಕ್ಕೆ ಏನು ಅಪ್ಪಣೆಯಾಗುತ್ತದೆ? ಎಂದು ಕೇಳಿದನು. ‖ ೭೪-೭೫ ‖ ಆಗ ಧೌಮ್ಯರು— ಎಲೈ ಶಿಷ್ಯಶಿರೋಮಣಿಯೇ, ಅಪ್ಪಾ ನೀನು ಅಡವಿಯಲ್ಲಿ ಬಹಳ ಕಷ್ಟಬಟ್ಟೆ! ಈಗಂತೂ ಧಾನ್ಯವನ್ನು ಮನೆಗೆ ತರಬೇಕು. ‖೭೬‖ ಎಂದು ಒಂದು ಗಾಡಿಯನ್ನು ಅದನ್ನು ಎಳೆಯಲಿಕ್ಕೆ ಒಂದು ಕೋಣವನ್ನು ಕೊಟ್ಟರು. ಈ ಪ್ರಕಾರ ಅವನು ಆ ಗಾಡಿಯನ್ನು ತಕ್ಕೊಂಡು ಆ ಗದ್ದೆಯ ಹತ್ತರ ಬಂದು, ‖ ೭೭ ‖ ಆ ಗಾಡಿಯೊಳಗೆ ಎರಡು ಖಂಡಿ ಧಾನ್ಯವನ್ನು ತುಂಬಿ, ಆ ನೊಗದ ಒಂದು ಕಡೆ ಕೋಣವನ್ನು ಹೂಡಿ ಎರಡನೇ ಕಡೆಗೆ ತಾನು ಹಿಡಿದು ಎಳೆಯಹತ್ತಿದನು. ‖ ೭೮ ‖ ಆ ಕೋಣವು ತೀವ್ರವಾಗಿ ಎಳೆಯಹತ್ತಲು, ಆದರ ಸಂಗಡ ನಡೆಯುವದು ಅವನಿಗೆ ಆಗದ್ದರಿಂದ ಅವನು ಜತಿಗೆಯಿಂದ ತನ್ನ ಕುತ್ತಿಗೆಗೆ ಆ ನೊಗವನ್ನು ಕಟ್ಟಿಕೊಂಡು ‖ ೭೯ ‖ ಶ್ರಮಬಟ್ಟು ಆ ಕೋಣದ ಸಂಗಡ ಎಳಕೊಂಡು ಹೋಗಹತ್ತಿದನು, ಆಗ ಮಾರ್ಗದಲ್ಲಿ ಆ ಕೋಣವು ಕೆಸರಿನಲ್ಲಿ ಸಿಕ್ಕಿತು. ಕೋಣವು ಕೆಸರಿನಲ್ಲಿ ಸಿಕ್ಕಿತಲ್ಲಾ! ಏನು ಮಾಡಲಿ? ಎಂದು ಅವನು ಬಹಳವಾಗಿ ಚಿಂತಿಸುತ್ತ ಕುತ್ತಿಗೆಗೆ ಉರುಲು ಬೀಳುವಂತೆ ಕಸುವಿನಿಂದ ತಾನೊಬ್ಬನೇ ಎಳೆಯಹತ್ತಿದನು. ‖ ೮೦-೮೧ ‖ ಅದೂಸಹಿತ ನೆಟ್ಟಗಾಗಲಿಲ್ಲ. ಆಗ ಅವನು ಆ ಕೋಣವನ್ನು ಬಿಚ್ಚಿ ಬಿಟ್ಟು, ಗಾಡಿಯನ್ನು ಕಡೆಗೆ ತೆಗೆದು ತಾನೊಬ್ಬನೇ ಎಳೆಯಹತ್ತಲು ಅವನ ಕುತ್ತಿಗೆಗೆ ಉರಲು ಬಿದ್ದು ಅವನಿಗೆ ಜೀವ ಹೋಗುವಂತಾಯಿತು ‖ ೮೨ ‖ ಧೌಮ್ಯರು ಇದನ್ನೆಲ್ಲ ಜ್ಞಾನ ದೃಷ್ಟಿಯಿಂದ ತಿಳಿದು ಕೂಡಲೆ ಅವನ ಎದುರಿಗೆ ಬಂದು ನಿಂತು, ಶಿಷ್ಯನನ್ನು ನೋಡಿ ಅತ್ಯಂತ ಕೃಪೆಯಿಂದ ಅವನ ಕುತ್ತಿಗೆಯ ಹಗ್ಗವನ್ನು ಬಿಚ್ಚಿ, ಅವನನ್ನು ಎಬ್ಬಿಸಿ, ಬಹಳ ಅಂತಃಕರಣದಿಂದ ಅವನನ್ನು ಅಪ್ಪಿಕೊಂಡು— ಎಲೈ ಶಿಷ್ಯನೇ, ನೀನು ಇನ್ನು ವೇದಶಾಸ್ತ್ರ ಸಂಪನ್ನನಾಗು ಎಂದು ಬಹುರೀತಿಯಾಗಿ ವರವನ್ನು ಕೊಟ್ಟರು. ‖ ೮೩-೮೪ ‖ ಆ ಕೂಡಲೆ ಆ ಬೈದ ಶಿಷ್ಯನಿಗೆ ಸಕಲ ವಿದ್ಯೆಗಳೂ ಬಂದವು. ಆ ಮೇಲೆ ಅವನು ಗುರುಗಳ ಅಪ್ಪಣೆ ಪಡೆದು ತನ್ನ ಊರಿಗೆ ಹೋದನು. ‖ ೮೫ ‖

ಎಲೈ ಬ್ರಾಹ್ಮಣನೇ ಮತ್ತೆ ಕೇಳು. ಆ ಧೌಮ್ಯರ ಮೂರನೆಯ ಶಿಷ್ಯನಾದ "ಉಪಮನ್ಯು"ವು ಗುರುಸೇವಾ ವಿಷಯವನ್ನು ಬಲ್ಲವನಾಗಿ, ಬಹುಪರಿಯಾಗಿ ಗುರುಸೇವೆ ಮಾಡುತ್ತ, ಬಹಳ ಊಟ ಮಾಡುತ್ತಿದ್ದನು. ಆದರಿಂದ ಆವನಿಗೆ ವಿದ್ಯೆಯು ಸ್ಥಿರವಾಗಲಿಲ್ಲ. ಆಗ ಗುರುಗಳು ಇದನ್ನು ತಿಳಿದು, ಇದಕ್ಕೇನು ಉಪಾಯ ಮಾಡಬೇಕೆಂದು ಆಲೋಚಿಸುತ್ತ ಅವನನ್ನು ಕರೆದು— ಎಲೈ ಉಪಮನ್ಯುವೇ, ನಿನಗೊಂದು ಮಾತು ಹೇಳುವೆನು ಕೇಳು. ನೀನು ದಿನಾಲು ನಮ್ಮ ಆಕಳುಗಳನ್ನು ಅಡವಿಗೆ ಹೊಡಕೊಂಡು ಹೋಗಿ, ಅವುಗಳನ್ನು ಕಾಯುತ್ತ ಮೇಯಿಸಿಕೊಂಡು ಬಾ ಎಂದು ಹೇಳಿದರು. ||೮೬-೮೭-೮೮|| ಅದಕ್ಕೆ ಅವನು ಒಪ್ಪಿಕೊಂಡು ಗುರುಗಳಿಗೆ ನಮಸ್ಕಾರ ಮಾಡಿ, ಕೂಡಲೆ ಆ ದನಗಳನ್ನು ಹೊಡಕೊಂಡು ಅಡವಿಗೆ ಹೋಗಿ ಮೇಯಿಸುತ್ತ ತನಗೆ ಹಸಿವೆಯಾದಕೂಡಲೆ ಆ ದನಗಳನ್ನು ಹೊಡಕೊಂಡು ಬೇಗನೆ ಮನೆಗೆ ಬರುತ್ತಿದ್ದನು. ಇದರಂತೆ ಬಹುದಿವಸ ನಡೆಯಿತು. ||೮೯|| ಅವನು ಈ ಪ್ರಕಾರ ಮಾಡುವವನ್ನು ಗುರು ಧೌಮ್ಯರು ತಿಳಿದು ಅವನ ಮೇಲೆ ಸಿಟ್ಟಾಗಿ— ಎಲೈ ಉಪಮನ್ಯುವೇ ನೀನು ಬೇಗನೆ ಯಾಕೆ ಮನೆಗೆ ಬರುತ್ತೀ ? ||೯೦|| ಇನ್ನುಮೇಲೆ ನೀನು ದಿನಾಲು ಸೂರ್ಯಾಸ್ತವಾಗುವ ವರೆಗೂ ಅಡವಿಯಲ್ಲಿ ದನಗಳನ್ನು ಮೇಯಿಸಿಕೊಂಡು ಬಾ ಎಂದು ಅಂದರು. ||೯೧|| ಆಗ ಆ ಶಿಷ್ಯನು ಹಾಗೇ ಆಗಲಿ ಎಂದು ದನಗಳನ್ನು ಹೊಡಕೊಂಡು ಅಡವಿಗೆ ಹೋಗಿ, ಮಧ್ಯಾಹ್ನ ಸಮಯದಲ್ಲಿ ಹಸಿವೆಯಿಂದ ಬಳಲುತ್ತ, ಮನಸ್ಸಿನಲ್ಲಿ ಗುರುಗಳನ್ನು ನೆನಿಸುತ್ತ ||೯೨|| ದನಗಳು ನದೀತೀರದಲ್ಲಿ ಮೇಯುತ್ತಿರಲು ಅವನು ಆ ನದಿಯಲ್ಲಿ ಸ್ನಾನಮಾಡಿ ಅಲ್ಲಿಯೇ ಸಮೀಪವಾಗಿರುವ ನಾಲ್ಕು ಬ್ರಾಹ್ಮಣ ಆಶ್ರಮಗಳಿಗೆ ಹೋಗಿ ಭಿಕ್ಷೆಯನ್ನು ಬೇಡಿ ಊಟಮಾಡಿ, ದನಗಳನ್ನು ಕಾಯುತ್ತ ಸಂಜೆಗೆ ಅವುಗಳನ್ನು ಹೊಡಕೊಂಡು ಮನೆಗೆ ಬರುತ್ತಿದ್ದನು. ಇದರಂತೆ ಪ್ರತಿದಿವಸವೂ ಮಾಡುತ್ತಿದ್ದನು. ಹೀಗೆ ಕೆಲವು ದಿವಸಗಳಾದಮೇಲೆ ಒಂದು ದಿವಸ ಧೌಮ್ಯರು ಅವನನ್ನು ಕರೆದು— ಎಲೈ ಉಪಮನ್ಯುವೇ, ನೀನು ನಿತ್ಯ ಉಪವಾಸವಾಗಿದ್ದರೂ ನಿನ್ನ ದೇಹವು ಇಷ್ಟು ಪುಷ್ಟವಾಗಿರುವ ಕಾರಣವೇನು ? ಎಂದು ಕೇಳಿದರು. ||೯೩ ರಿಂದ ೯೬|| ಆಗ ಅವನು— ಸ್ವಾಮೀ, ನಾನು

ದಿನಾಲು ಅಲ್ಲಿಯೇ ಸಮೀಪದಲ್ಲಿರುವ ನಾಲ್ಕು ಬ್ರಾಹ್ಮಣರ ಮನೆಗಳಲ್ಲಿ ಭಿಕ್ಷೆ ಬೇಡಿ ಊಟ ಮಾಡುವೆನು. ॥ ೯೭ ॥ ಆಮೇಲೆ ಸಂಜೆಯಾಗುವ ವರೆಗೆ ದನಗಳನ್ನು ಮೇಯಿಸಿಕೊಂಡು ಮನೆಗೆ ಬರುವೆನು ಎಂದನು. ಆಗ ಅವರು— ಎಲೈ ಶಿಷ್ಯನೇ, ನೀನು ನಮ್ಮನ್ನು ಬಿಟ್ಟು ಹ್ಯಾಗೆ ಊಟ ಮಾಡಿದಿ ? ॥ ೯೮ ॥ ಇನ್ನುಮೇಲೆ ನೀನು ಪ್ರತಿದಿವಸ ಆ ಭಿಕ್ಷೆ ಬೇಡಿದ್ದನ್ನು ಮನೆಗೆ ತಂದು ಕೊಟ್ಟು, ಆಮೇಲೆ ಮತ್ತೆ ದನಗಳ ಹತ್ತರ ಹೋಗಿ ಮೇಯಿಸಿ ಸಂಜಯಾದ ಮೇಲೆ ಅವುಗಳನ್ನು ಹೊಡಕೊಂಡು ಮನೆಗೆ ಬಾ ಎಂದರು. ॥ ೯೯ ॥ ಗುರುಗಳ ಅಪ್ಪಣೆಯಂತೆ ಅವನು ಮರು ದಿವಸ ದನಗಳನ್ನು ಅಡವಿಗೆ ಒಯ್ದು, ದಿನಾಲು ಭಿಕ್ಷೆ ಬೇಡುವಂತೆ ಬೇಡಿ ಅದನ್ನು ಗುರುಗಳಿಗೆ ತಂದು ಕೊಡುತ್ತಿದ್ದನು. ॥ ೧೦೦ ॥ ಆದರೆ ಮನೆಯಲ್ಲಿ ಅವನ ಊಟವು ಎಂದೂ ಪೂರ್ಣವಾಗುತ್ತಿದ್ದಿಲ್ಲ. ಆದ್ದರಿಂದ ಅವನು ಮತ್ತೆ ಅಡವಿಗೆ ಹೋಗಿ ಬೇರೆ ಮನೆಗಳಲ್ಲಿ ಭಿಕ್ಷ ಬೇಡಿ ಊಟ ಮಾಡುತ್ತಿದ್ದನು ॥ ೧೦೧ ॥ ಹೀಗೆ ಅವನು ನಿತ್ಯ ಎರಡು ವೇಳೆ ಭಿಕ್ಷೆ ಬೇಡಿ ಮೊದಲನೇ ಭಿಕ್ಷೆಯನ್ನು ಮನೆಗೆ ತಂದು ಕೊಡುತ್ತ, ಎರಡನೇ ಭಿಕ್ಷೆಯನ್ನು ತಾನು ಊಟ ಮಾಡುತ್ತ ಕಾಲಕಳೆಯುತ್ತಿದ್ದನು ॥ ೧೦೨ ॥ ಹೀಗೆ ಕೆಲವು ದಿವಸ ನಡೆದಮೇಲೆ ಅವನು ಮತ್ತಿಷ್ಟು ಪುಷ್ಟನಾದನು. ಆಗ ಒಂದು ದಿವಸ ಆ ಕೃಪಾವಂತ ಗುರುಗಳು ಮತ್ತೆ ಅವನನ್ನು ಕರೆದು— ಎಲೈ ಶಿಷ್ಯನೇ, ನಿನ್ನ ದೇಹವು ಇಷ್ಟು ಪುಷ್ಟವಾಗಲಿಕ್ಕೆ ಕಾರಣವೇನು ಎಂದು ಕೇಳಿದರು. ॥ ೧೦೩ ॥ ಆಗ ಅವನು— ಸ್ವಾಮೀ, ನಾನು ಪ್ರತಿದಿವಸ ನನ್ನ ಹಸಿವೆಯ ನಿಮಿತ್ತವಾಗಿ ಎರಡು ವೇಳೆ ಭಿಕ್ಷೆ ಬೇಡಿ, ಮೊದಲನೇ ಭಿಕ್ಷೆಯನ್ನು ಮನೆಗೆ ತಂದುಕೊಟ್ಟು, ಎರಡನೇ ಭಿಕ್ಷೆಯನ್ನು ನಾನು ಭೋಜನ ಮಾಡುವೆನು ಎಂದನು. ॥ ೧೦೪-೧೦೫ ॥ ಅವನ ಮಾತು ಕೇಳಿ ಗುರುಗಳು ಅವನಮೇಲೆ ಸಿಟ್ಟಾಗಿ— ಎಲೈ ಶಿಷ್ಯನೇ, ಇನ್ನುಮೇಲೆ ನೀನು ಆ ಎರಡನೆ ಭಿಕ್ಷೆಯನ್ನೂ ಮನೆಗೆ ತಂದು ಕೊಡಬೇಕು ಎಂದರು. ॥ ೧೦೬ ॥ ಎಲೈ ಬ್ರಾಹ್ಮಣನೇ ಕೇಳು. ಗುರುಗಳ ಅಪ್ಪಣೆಯಂತೆ ಆ ಶಿಷ್ಯಶಿರೋಮಣಿಯು ಎರಡೂ ವೇಳೆಯ ಭಿಕ್ಷೆಯನ್ನು ಮನೆಗೆ ತಂದು ಕೊಡಹತ್ತಿದನು. ಅವನು ಎಂಥಾ ನಿಶ್ಚಯದ ಶಿಷ್ಯನು ನೋಡು! ಅವನು ಮನಸ್ಸಿನಲ್ಲಿ ಸ್ವಲ್ಪಾದರೂ ದುಃಖಿಸುತ್ತಿದ್ದಿಲ್ಲ. ॥ ೧೦೭ ॥ ಅವನು

ಈ ಪ್ರಕಾರ ಗುರುಗಳ ಅಪ್ಪಣೆ ಪಡೆದು ನಿತ್ಯದಂತೆ ದನಗಳನ್ನು ಅಡವಿಗೆ ಹೊಡಕೊಂಡು ಹೋಗಿ ಎರಡೂ ವೇಳೆಯು ಭಿಕ್ಷೆಯನ್ನು ಭಕ್ತಿಯಿಂದ ಮನೆಗೆ ತಂದು ಕೊಡುತ್ತ ತಾನು ಕ್ಷುಧಾಕ್ರಾಂತನಾಗಿರಲು ಕರುಗಳು ತಮ್ಮ ತಾಯಿಯ ಮೊಲೆ ತಿನ್ನುವದನ್ನೂ, ಆ ಕರುಗಳ ಬಾಯಿಂದ ಕೆಲವು ಹಾಲು ಸುಮ್ಮನೆ ಭೂಮಿಯಮೇಲೆ ಬಿದ್ದು ಹೋಗುತ್ತಿರುವದನ್ನು ಕಂಡು, ಅವನು ಹಸಿವೆಯಿಂದ ಓಡುತ್ತ ಆ ಆಕಳ ಹತ್ತರ ಹೋಗಿ ಎರಡೂ ಕೈಗಳನ್ನು ಒಡ್ಡಿ, ಕೆಚ್ಚಲದಿಂದ ಬೀಳುವ ಆ ಹಾಲನ್ನು ಕುಡಿದು ಹೊಟ್ಟೆತುಂಬಿಕೊಳ್ಳುತ್ತಿದ್ದನು. ॥ ೧೦೮ ರಿಂದ ೧೧೧ ॥ ಆದರಿಂದ ಅವನು ಬರಬರುತ್ತ ಒಳ್ಳೇ ಪುಷ್ಟನಾದನು. ಅದನ್ನು ಕಂಡು ಗುರುಗಳು ಎಲ್ಲ ಜನರ ಮುಂದೆ— ಇವನ ಶರೀರ ರಕ್ಷಣೆಯನ್ನು ನೋಡಿರಿ! ಹ್ಯಾಗೆ ಪುಷ್ಟನಾಗುತ್ತಾನೆ. ॥ ೧೧೨ ॥ ಎಂದು ಅವನನ್ನು ಕರೆದು— ಎಲೈ ಶಿಷ್ಯನೇ ನೀನು ಎರಡೂ ವೇಳೆ ಭಿಕ್ಷೆಯನ್ನು ನಮಗೆ ತಂದು ಕೊಟ್ಟೂ ಕೊಟ್ಟೂ ನೀನು ಇಷ್ಟು ಪುಷ್ಟನಾಗಲಿಕ್ಕೆ ಕಾರಣವೇನು? ಆ ನಿನ್ನ ಎಲ್ಲ ಸಂಗತಿಯನ್ನು ನಮಗೆ ವಿಸ್ತಾರವಾಗಿ ಹೇಳು ಎಂದರು. ಆಗ ಅವನು— ಸ್ವಾಮೀ, ಅಡವಿಯಲ್ಲಿ ಕರುಗಳು ತಮ್ಮ ತಾಯಿಯ ಮೊಲೆ ತಿನ್ನುವಾಗ ಅವುಗಳ ಬಾಯಿಂದ ಬೀಳುವ ಉಚ್ಛಿಷ್ಟ ಹಾಲನ್ನು ಕುಡಿಯುತ್ತೇನೆ ಎಂದು ಹೇಳಿದನು. ॥ ೧೧೩ ॥ ಅವನ ಮಾತು ಕೇಳಿ ಧೌಮ್ಯರು— ಎಲೈ ಶಿಷ್ಯನೇ, ಉಚ್ಛಿಷ್ಟ ಸೇವನದಿಂದ ಮತಿಹೀನನಾಗುವದಲ್ಲದೆ, ಆದರಿಂದ ಮಹಾ ದೋಷವು ಬರುವದು. ಆದ್ದರಿಂದ ನೀನು ಎಂಜಲ ಹಾಲು ಕುಡಿಯಬೇಡ ಎಂದು ಹೇಳಿದರು. ॥ ೧೧೪ ॥ ಇದರಿಂದ ಅವನಿಗೆ ನಿತ್ಯವೂ ಆಹಾರವಿಲ್ಲದಂತಾಯಿತು. ಆದಿವಸ ಹ್ಯಾಗಾದರೂ ಮಾಡಿ ತಡಕೊಂಡು ದನ ಕಾಯುತ್ತಿದ್ದನು. ಆದರೆ ೨ನೇ ದಿವಸ ಅವನು ಬಹಳ ಹಸಿದು— ಇನ್ನೇನು ಮಾಡಲಿ? ಎಂದೆನ್ನುತ್ತ ॥ ೧೧೫ ॥ ದನಗಳನ್ನು ಮೇಯಿಸುತ್ತ ಅಡವಿಯಲ್ಲಿ ಹೋಗುತ್ತಿರಲು ಅಲ್ಲಿ ಒಂದು ಯಕ್ಕೀಗಿಡದಿಂದ ಬಹಳವಾಗಿ ಹಾಲು ಸೋರುತ್ತಿತ್ತು. ॥ ೧೧೬ ॥ ಅದನ್ನು ಕಂಡು ಅವನು ಮನಸ್ಸಿನಲ್ಲಿ— ಈ ಹಾಲು ಯೋಗ್ಯವದೆ. ಇದು ನಿಜವಾಗಿ ಉಚ್ಛಿಷ್ಟವಲ್ಲ! ಇದನ್ನು ಹೊಟ್ಟೆತುಂಬ ಕುಡಿಯಬೇಕೆಂದು ಆ ಯಕ್ಕಿಯಗಿಡದ ಹತ್ತರ ಕೂತು ॥ ೧೧೭ ॥ ಆದರ ಒಂದು ಎಲೆ ಹರಿದು

ಅ ೧೬

ದೊನ್ನೆಯನ್ನು ಮಾಡಿ ಅದರಲ್ಲಿ ಹಾಲು ತುಂಬಿ ಹೊಟ್ಟೆತುಂಬ ಕುಡಿಯುತ್ತಿದ್ದನು. ಆಗ ಆ ಹಾಲು ಕಣ್ಣುಗಳಲ್ಲಿ ಬಿದ್ದು ಎರಡೂ ಕಣ್ಣುಗಳು ಕಾಣದಂತಾದವು. ಅದರಿಂದ ಅವನು ಅಡವಿ ಅಡವಿ ತಿರುಗುತ್ತ ಮನಸ್ಸಿನಲ್ಲಿ— ನನಗೆ ಕಣ್ಣುಗಳು ಕಾಣದಂತಾದವು. ದನಗಳ ಸುಳುವು ಕಾಣಲೊಲ್ಲದು ಏನು ಮಾಡಲಿ ? ಎಂದು ಆ ಆಕಳುಗಳ ಸಲುವಾಗಿ ಚಿಂತಿಸುತ್ತ ಕಷ್ಟಬಡುತ್ತ ಅವುಗಳನ್ನು ಹುಡುಕುತ್ತ ಹೋಗಿ ಒಂದು ಹಾಳಭಾವಿಯಲ್ಲಿ ಬಿದ್ದನು. ॥ ೧೧೮–೧೧೯–೧೨೦ ॥ ಆದರೂ ಅವನು ಮನಸ್ಸಿನಲ್ಲಿ— ಸತ್ಯವಾಗಿ ದನಗಳು ಎಲ್ಲಿಯೋ ಹೋದವು. ಗುರುಗಳು ಸಿಟ್ಟು ಮಾಡುವರು, ಏನು ಮಾಡಲಿ ? ಎಂದು ಅತ್ಯಂತ ಚಿಂತಿಸುತ್ತಿದ್ದನು. ॥ ೧೨೧ ॥ ಹೀಗೆ ಅವನು ತಗ್ಗಿನಲ್ಲಿ ಬೀಳಲು ಅಷ್ಟರಲ್ಲಿ ಅಸ್ತಮಯವಾಯಿತು. ಎಲೈ ಬ್ರಾಹ್ಮಣಮುನಿಯೇ ಕೇಳು ನಿಜವಾದ ಶಿಷ್ಯರಮೇಲೆ ಗುರುಗಳ ಪ್ರೀತಿಯು ಅನಿವಾರ್ಯವಾಗಿರುತ್ತದೆ. ಆಗ ಧೌಮ್ಯರು ಮನಸ್ಸಿನಲ್ಲಿ— ಶಿಷ್ಯನು ಇನ್ನೂ ಬರಲಿಲ್ಲ ಎಂದು ಚಿಂತಿಸುತ್ತ ॥ ೧೨೨ ॥ ಅಡವಿಗೆ ಹೋಗಿ ಅಲ್ಲಿರುವ ಆಕಳ ಹಿಂಡನ್ನು ನೋಡಿ— ಅಹಾ ! ನಮ್ಮ ಶಿಷ್ಯನು ಕಾಣಲೊಲ್ಲನಲ್ಲ ! ಎಂದು ದುಃಖದಿಂದ— ಎಲೈ ಶಿಷ್ಯನಾದ ಉಪಮನ್ಯುವೇ, ಉಪಮನ್ಯುವೇ, ಎಲ್ಲಿರುತ್ತೀ ? ಬೇಗ ಬಾ ಎಂದು ಗಟ್ಟಿಯಾಗಿ ಕೂಗಿ ಕರೆದರು ॥ ೧೨೩ ॥ ಗುರುಗಳ ಧ್ವನಿಯು ಕಿವಿಯಲ್ಲಿ ಬಿದ್ದ ಕೂಡಲೇ ಆ ಶಿಷ್ಯನು— ಸ್ವಾಮೀ, ಗುರುಗಳೇ, ನಾನು ಒಂದು ದೊಡ್ಡ ತಗ್ಗಿನಲ್ಲಿ ಬಿದ್ದಿದ್ದೇನೆ ಎಂದು ಉತ್ತರವನ್ನು ಕೊಟ್ಟನು. ಆಗ ಕೃಪಾಳುವಾದ ಗುರುಗಳು ಅವನ ಹತ್ತರ ಹೋಗಿ ॥ ೧೨೪ ॥ ಅವನ ಎಲ್ಲ ಸಂಗತಿಯನ್ನು ಕೇಳಿ ಅತ್ಯಂತ ಕೃಪಾಭರಿತರಾಗಿ— ಎಲೈ ಶಿಷ್ಯನೇ, ಈಗ ನೀನು ಅಶ್ವಿನೀ ದೇವತೆಗಳನ್ನು ಧ್ಯಾನಿಸು. ಅಂದರೆ ನಿನ್ನ ಕಣ್ಣುಗಳು ಬರುವವು ಎಂದು ಹೇಳಿದರು. ॥ ೧೨೫ ॥ ಗುರುಗಳ ಅಪ್ಪಣೆಯಂತೆ ಅವನು ಅಶ್ವಿನೀ ದೇವತೆಗಳನ್ನು ಧ್ಯಾನಿಸಿದನು. ಅವರ ಕರುಣೆಯಿಂದ ಕೂಡಲೆ ಅವನ ಎರಡೂ ಕಣ್ಣುಗಳು ಬಂದವು. ಆಮೇಲೆ ಆ ಶಿಷ್ಯೋತ್ತಮನು ಆ ತೆಗ್ಗಿನಿಂದ ಮೇಲೆ ಬಂದು ಅವರ ಎದುರಿಗೆ ನಿಂತು ಭಕ್ತಿಯಿಂದ ಅವರಿಗೆ ನಮಸ್ಕಾರಮಾಡಿ ಬಹುರೀತಿಯಿಂದ ಸ್ತುತಿಸಿದನು. ॥ ೧೨೬–೧೨೭ ॥ ಆದರಿಂದ ಧೌಮ್ಯಮುನಿಗಳು ಸಂತೋಷ ಹೊಂದಿ ಪ್ರಸನ್ನ

ರಾಗಿ ಶಿಷ್ಯನನ್ನು ಅಪ್ಪಿಕೊಂಡು— ಎಲೈ ಶಿಷ್ಯಶಿರೋಮಣಿಯೇ, ನಿನ್ನ ಭಕ್ತಿಗೆ ಮೆಚ್ಚಿದೆನು. ॥ ೧೨೮ ॥ ಎಂದು ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟರು ಆ ಕ್ಷಣದಲ್ಲಿಯೇ ಅವನಿಗೆ ಸಕಲ ವೇದಶಾಸ್ತ್ರಗಳು ಬಂದವು. ॥೧೨೯॥ ಆಗ ಗುರುಗಳು-- ಎಲೈ ಶಿಷ್ಯನೇ, ಇನ್ನು ನೀನು ನಿನ್ನ ಮನೆಗೆ ಹೋಗಿ ವಿವಾಹಮಾಡಿಕೊಂಡು ಸುಖವಾಗಿ ಸಂತೋಷದಿಂದಿರು. ॥ ೧೩೦ ॥ ನಿನ್ನ ಕೀರ್ತಿಯು ಬಹಳವಾಗಿ ಬೆಳೆಯುವದು ಈ ಜಗತ್ತಿನಲ್ಲಿ ನಿನಗೆ ಬಹುಜನ ಶಿಷ್ಯರಾಗುವರು. ಅವರಲ್ಲಿ ಉತ್ತಂಕನೆಂಬವನು ಒಳ್ಳೇ ಪ್ರಖ್ಯಾತನಾಗುವನು ॥ ೧೩೧ ॥ ಅವನೇ ನಿನಗೆ ಗುರು ದಕ್ಷಿಣೆ ಕೊಡುವದರದೆಶೆಯಿಂದ ನಿನ್ನ ಹೆಂಡತಿಯ ಅಪೇಕ್ಷೆಯಂತೆ ಸೌದಾಸರಾಯನ ಹೆಂಡತಿಯ ಕರ್ಣಕುಂಡಲ ಗಳನ್ನು ತಕ್ಕೊಂಡು ಬರುವಾಗ ಮಾರ್ಗದಲ್ಲಿ ಅವುಗಳನ್ನು ಒಂದು ಗಿಡದ ಮೇಲಿಟ್ಟು ಅಲ್ಲಿರುವ ಕೆರೆಯಲ್ಲಿ ನೀರು ಕುಡಿಯಲಿಕ್ಕೆ ಹೋಗುವನು. ಆಗ ಅವು ಗಾಳಿಯಿಂದ ಕೆಳಗೆ ಬೀಳಲು ಅವುಗಳನ್ನು ಒಂದು ಹಾವು ಒಂದು ತಕ್ಕೊಂಡು ಹೋಗಿ ಆದಿಶೇಷನ ಹತ್ತರ ಕೊಡಲು, ಆಗ ಉತ್ತಂಕನು ಆ ಹಾವು ಹೋದ ಬಿಲವನ್ನು ಕಟ್ಟಿಗೆಯಿಂದ ಕೆದರುತ್ತ ಕುಳಿತಿರಲು ಇಂದ್ರನು ಅವನ ಗುರುಭಕ್ತಿಗೆ ಮೆಚ್ಚಿ ಅದಕ್ಕೆ ವಜ್ರಾಯುಧದ ಶಕ್ತಿಯನ್ನು ಕೊಡುವನು. ಆದರಿಂದ ಉತ್ತಂಕನು ಆದಿಶೇಷನ ಹತ್ತರ ಹೋಗಿ ಅವನನ್ನು ಗೆದ್ದು ಆ ಕುಂಡಲಗಳನ್ನು ತಂದು ಕೊಟ್ಟು ಅವನೂ ಕೀರ್ತಿವಂತನಾಗುವನು. ॥ ೧೩೨ ॥ ಅವನೇ ಮುಂದೆ ಜನಮೇಜಯರಾಯನನ್ನು ಕುರಿತು- ಸರ್ಪಯಾಗ ಮಾಡಿ ಎಲ್ಲ ಸರ್ಪಗಳನ್ನು ನಾಶಮಾಡೆಂದು ಉಪದೇಶ ಮಾಡುವನು. ॥ ೧೩೩ ॥ ಅವನು ಮುಂದೆ ತಾನೇ ಹೋಗಿ ಜನಮೇಜಯನ ಕಡಿಂದ ಯಜ್ಞ ಮಾಡಿಸಿ ಎಲ್ಲ ಸರ್ಪಗಳನ್ನು ಕೊಲ್ಲಿಸುವನು. ॥ ೧೩೪ ॥ ಮತ್ತು ಯಜ್ಞ ಕುಂಡದಲ್ಲಿ ಇಂದ್ರಸಹಿತವಾಗಿ ತಕ್ಷಕನು ಬಂದು ಬೀಳುವಂತೆ ಮಂತ್ರೋಚ್ಚಾರಣೆ ಮಾಡಿ ತ್ರಿಭುವನದಲ್ಲಿ ಬಹಳ ಖ್ಯಾತಿವಂತನಾಗುವನು ಎಂದು ಹೇಳಿದರು. ಎಲೈ ಬ್ರಾಹ್ಮಣ ಮುನಿಯೇ ಕೇಳು. ಗುರುಕೃಪೆಯ ಸಾಮರ್ಥ್ಯವು ಈಪ್ರಕಾರವಾಗಿರುತ್ತದೆ. ॥ ೧೩೫ ॥ ಗುರುದ್ವೇಷ ಮಾಡುವವನಿಗೆ ಪರಲೋಕವಿಲ್ಲ. ಗುರುದ್ರೋಹದಿಂದ ಪಾಪರಾಶಿಯುಂಟಾಗಿ, ಕಡೆಗೆ ಅವನಿಗೆ ಕುಂಭೀಪಾಕ ನರಕವಾಗುವದು. ॥ ೧೩೬ ॥ ಗುರುಗಳು ಸಂತುಷ್ಟ

ರಾಗುವಂತೆ ನಡೆದಂಥ ಶಿಷ್ಯನಿಗೆ ಯಾವದು ಸಾಧ್ಯವಾಗಲಿಕ್ಕಿಲ್ಲ ? ಎಲ್ಲವೂ ಸಾಧ್ಯವಾಗಿ ಆ ಕ್ಷಣವೇ ಅವನಿಗೆ ವೇದಶಾಸ್ತ್ರಗಳ ರಾಶಿಯ ಜ್ಞಾನವಾಗುವದು. ॥ ೧೩೭ ॥ ಎಲೈ ಬ್ರಾಹ್ಮಣನೇ, ಈ ಪ್ರಕಾರ ನೀನು ತಿಳಿಯದೆ ಅವಿದ್ಯಾಮಾಯೆಯಿಂದ ವ್ಯರ್ಥವಾಗಿ ತಿರುಗಿದಿ ಈಗ ನೀನು ನಿನ್ನ ಗುರುವಿನ ಹತ್ತರ ಹೋಗು, ಅವರೇ ನಿನ್ನನ್ನು ಉದ್ಧರಿರಿಸುವರು. ॥ ೧೩೮ ॥ ನೀನು ಅವರ ಮನಸ್ಸನ್ನು ಸಂತೋಷಪಡಿಸಿದ ಕೂಡಲೆ, ನಿನಗೆ ತೀವ್ರವಾಗಿ ಮಂತ್ರಗಳು ಬರುವವು ಆದಕಾರಣ ನೀನು ಮನಸ್ಸು ಗಟ್ಟಿ ಮಾಡಿಕೊಂಡು ತೀವ್ರವಾಗಿ ಅವರ ಹತ್ತರ ಹೋಗು ಎಂದು ಅಪ್ಪಣೆ ಮಾಡಿದರು. ॥ ೧೩೯ ॥ ಈಪ್ರಕಾರ ನರಸಿಂಹಸರಸ್ವತಿ ಗುರುಗಳು ಆ ಬ್ರಾಹ್ಮಣ ಮುನಿಗೆ ಆಜ್ಞೆ ಮಾಡಲು ಅವನು ವಿಶೇಷವಾದ ಜ್ಞಾನವನ್ನು ಹೊಂದಿ ಅವರ ಪಾದಕ್ಕೆ ನಮಸ್ಕರಿಸಿ ವಿನಯದಿಂದ ॥ ೧೪೦ ॥ ಜಯ ಜಯ ಗುರುಮೂರ್ತಿಯೆ, ನೀವೇ ಪರಮಾರ್ಥಕ್ಕೆ ಸಹಾಯವು ನೀವು ಪ್ರೀತಿಯಿಂದಲೂ, ಕೃಪೆಯಿಂದಲೂ ನನಗೆ ತತ್ವಬೋಧ ಮಾಡಿದಿರಿ ॥ ೧೪೧ ॥ ನಾನು ನಿಜವಾಗಿ ಗುರುದ್ರೋಹಿಯು. ನನ್ನಿಂದ ಅನೇಕ ಅಪರಾಧ ಗಳಾದವು. ನಾನು ಗುರುಗಳ ಮನಸ್ಸನ್ನು ದುಃಖಪಡಿಸಿದೆನು. ಸ್ವಾಮೀ, ಈಗ ಅವರ ಮನಸ್ಸು ಹ್ಯಾಗೆ ಸಂತೋಷಗೊಳಿಸಬೇಕು ? ಹೇಳಿರಿ. ॥ ೧೪೨ ॥ ಸುವರ್ಣಾದಿ ಯಾವತ್ತು ಧಾತುಗಳು ಬೇರೆ ಬೇರೆಯಾದರೂ ಕರಗಿಸಿದರೆ ಎಲ್ಲವೂ ಕೂಡುವವು ಆದರೆ ಸ್ವಾಮೀ ಮುತ್ತು ಒಡೆದರೆ ಅದು ಪುನಃ ಒಂದೇ ಹ್ಯಾಗೆ ಆಗು ವದು ? ॥ ೧೪೩ ॥ ಸ್ವಾಮೀ, ಮನಸ್ಸು ಭಿನ್ನವಾಗಿರುತ್ತಿರಲು ಅದನ್ನು ಕೂಡಿಸಲಿಕ್ಕೆ ಬಹಳ ಕಷ್ಟವಾಗುವದು. ಈ ಪ್ರಕಾರ ದ್ರೋಹಿಯಾದ ನನ್ನ ಮನಸ್ಸು ಮತ್ತು ದೇಹವು ಇರುತ್ತಿರಲು, ಇನ್ನು ನಾನು ಬದುಕಿದ್ದು ಉಪ ಯೋಗವೇನು ? ಇನ್ನು ನನಗೆ ಜೀವದಮೇಲೆ ಆಶೆಯಿಲ್ಲ. ಈಗ ತಮ್ಮ ಎದುರಿನಲ್ಲಿಯೇ ಪ್ರಾಣ ಬಿಡು ವೆನು. ॥ ೧೪೪–೧೪೫ ॥ ಎಂದು ಆ ಬ್ರಾಹ್ಮಣನು ಅತಿ ಹರ್ಷದಿಂದ ಶ್ರೀ ಗುರುಗಳಿಗೆ ವಿನಂತೀ ಮಾಡಿಕೊಂಡು ನಮಸ್ಕಾರ ಮಾಡಿ ವೈರಾಗ್ಯದಿಂದ ಹೊರಟು ಪ್ರಾಣ ಬಿಡುವ ನಿಶ್ಚಯವನ್ನು ಮಾಡಿದನು. ॥ ೧೪೬ ॥ ಹುಲ್ಲಿಗೆ ಮತ್ತು ಅರಳಿಗೆ ಬೆಂಕಿಹತ್ತಿದ ಕೂಡಲೇ ಅವು ಆಕ್ಷಣವೇ ಹ್ಯಾಗೆ ಸುಟ್ಟು ಹೋಗುವವೋ, ಹಾಗೆ ಪಶ್ಚಾತ್ತಾಪ

ಹೊಂದಿದ ಆ ಬ್ರಾಹ್ಮಣನ ಸರ್ವ ಪಾಪಗಳು ಸುಟ್ಟುಹೋಗಿ ಅವನು ನಿರ್ಮಲಚಿತ್ತನಾದನು. || ೧೪೬-೧೪೮ || ಆದ್ದರಿಂದ ನಾಮಧಾರಕನೇ, ಪಾಪ ಮಾಡಿದವನು ತನ್ನ ಪಾಪದ್ದೆಶೆಯಿಂದ ಪಶ್ಚಾತ್ತಾಪ ಹೊಂದಿದಕೂಡಲೇ ಅವನ ನೂರು ಜನ್ಮದ ಪಾಪಗಳು ನಾಶವಾಗುವವು. || ೧೪೯ || ಆ ಬ್ರಾಹ್ಮಣನು ಒಳ್ಳೇ ನಿಶ್ಚಯದಿಂದ ಪ್ರಾಣ ಕೊಡಲಿಕ್ಕೆ ಹೋಗುವದನ್ನು ಶ್ರೀ ಗುರುಗಳು ನೋಡಿ ಕೃಪೆಯಿಂದ ಅವನನ್ನು ಕರೆದು || ೧೫೦ ||-- ಎಲೈ ವಿಪ್ರನೇ, ಇವತ್ತಿಗೆ ನಿನ್ನ ಪಾಪಗಳು ನಾಶವಾದವು. ನೀನು ಇನ್ನು ಮನಸ್ಸಿನಲ್ಲಿ ಏನೂ ಚಿಂತೆಮಾಡ ಬೇಡ. || ೧೫೧ || ಈಗ ನಿನ್ನ ಮನಸ್ಸಿನಲ್ಲಿ ವೈರಾಗ್ಯವುಂಟಾದ್ದರಿಂದ, ಇನ್ನುಮೇಲೆ ನಿನ್ನ ದುಷ್ಕೃತಿಗಳೆಲ್ಲ ಸುಟ್ಟುಹೋದವು. ಇನ್ನು ನೀನು ಏಕಚಿತ್ತದಿಂದ ನಿನ್ನ ಗುರುಚರಣವನ್ನು ಸ್ಮರಿಸು ಎಂದರು. || ೧೫೨ || ಆಗ ಆ ಬ್ರಾಹ್ಮಣನು ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳ ಚರಣಕ್ಕೆ ಅತಿ ಭಕ್ತಿಯಿಂದ ನಮಸ್ಕಾರ ಮಾಡಿ— ಸ್ವಾಮೀ, ತ್ರೈಮೂರ್ತಿ ಅವತಾರನೇ, ನೀನು ಜಗದ್ಗುರುವಾಗಿರುತ್ತೀ || ೧೫೩ || ಸೂರ್ಯನು ಉದಯವಾದಮೇಲೆ ಕತ್ತಲೆಯು ಹ್ಯಾಗೆ ನಿಲ್ಲದೆ ಓಡಿಹೋಗುತ್ತದೋ ಆದರಂತೆ ತವ್ಮ ಕೃಪೆಯಾದಮೇಲೆ ಈ ಶರೀರದಲ್ಲಿ ಪಾಪವು ಹೇಗೆ ಉಳಿಯಬೇಕು? ಎಂದೂ ಉಳಿಯಲಿಕ್ಕೆ ಶಕ್ಯವಿಲ್ಲ. || ೧೫೪ || ಎಂದು ಭಕ್ತಿಯಿಂದ ಶ್ರೀ ಗುರುಗಳನ್ನು ಸ್ತುತಿಸುತ್ತಿರುವಾಗ ಅವನ ಮೈಮೇಲೆ ರೋಮಾಂಚಗಳೆದ್ದು ಕಂಠವು ಸದ್ಗದಿತವಾಯಿತು. || ೧೫೫ || ಆಗ ಅವನು ನಿರ್ಮಲ ಮನಸ್ಸಿನಿಂದ ಶ್ರೀ ಗುರುಗಳ ಚರಣಗಳ ಮೇಲೆ ತನ್ನ ಮಸ್ತಕವನ್ನಿಟ್ಟು— ಶ್ರೀ ಗುರುರಾಯಾ, ನನ್ನನ್ನು ರಕ್ಷಿಸು, ರಕ್ಷಿಸು ಎಂದು ಕರುಣಾವಚನದಿಂದ ವಿನಂತೀ ಮಾಡಿಕೊಂಡನು. || ೧೫೬ || ಆಗ ಶ್ರೀ ಗುರುಗಳು ಅವನ ಮನಸ್ಸಿನ ನಿಶ್ಚಯವನ್ನೂ, ಭಕ್ತಿ ವೈರಾಗ್ಯಗಳನ್ನೂ ಕಂಡು ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟರು. ಕೂಡಲೆ ಅವನಿಗೆ ಜ್ಞಾನೋದಯವಾಗಿ ಸಕಲ ವೇದ ಶಾಸ್ತ್ರಗಳೂ ಮಂತ್ರ ಶಾಸ್ತ್ರಗಳೂ ಬಂದವು. ಎಲೈ ನಾಮಧಾರಕನೇ, ದಯಾಳುವಾದ ಶ್ರೀ ಗುರುಗಳು ಪ್ರಸನ್ನರಾದಮೇಲೆ ಆ ಬ್ರಾಹ್ಮಣನಿಗೆ ಏನು ಕಡಿಮೆಯಾಗಬೇಕಾಗಿದೆ? || ೧೫೭-೧೫೮ || ಪರಿಸಮಣಿಯು ತಗಲಿದ ಕೂಡಲೆ ಲೋಹವು ಅತ್ಯುತ್ತಮ ಬಂಗಾರ

ವಾಗುವಂತೆ ಶ್ರೀ ಗುರುಗಳ ಕೃಪೆಯಿಂದ ಆ ಬ್ರಾಹ್ಮಣನಿಗೆ ಕೂಡಲೆ ಜ್ಞಾನೋದಯವಾಯಿತು. || ೧೪೯ || ಆದರಿಂದ ಅವನು ಆನಂದ ಹೊಂದಿದನು. ಆಗ ಮತ್ತೆ ಗುರುಗಳು— ಎಲೈ ಬ್ರಾಹ್ಮಣನೇ, ನೀನು ನಮ್ಮ ಅಪ್ಪಣೆ ಯಂತೆ ತೀವ್ರವಾಗಿ ನಿನ್ನ ಗುರುವಿನಹತ್ತರ ಹೋಗಿ, ನಾನೇ ಅವರೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಭಕ್ತಿಯಿಂದ ಅವರಿಗೆ ನಮಸ್ಕಾರ ಮಾಡು ಅಂದರೆ ಅವರು ನಿಶ್ಚಯವಾಗಿ ಸಂತೋಷಪಡುವರು ಎಂದು ಹೇಳಿದರು. || ೧೫೦–೧೫೧ || ಈ ಪ್ರಕಾರ ಶ್ರೀ ಗುರುಗಳು ಆ ಬ್ರಾಹ್ಮಣನನ್ನು ಸಮಾಧಾನ ಮಾಡಿದರು ಆ ಮೇಲೆ ಆ ಬ್ರಾಹ್ಮಣನು ಶ್ರೀ ಗುರುಗಳಿಂದ ಅಪ್ಪಣೆ ಪಡೆದು ತೀವ್ರವಾಗಿ ತನ್ನ ಗುರುವಿನಕಡೆಗೆ ಹೋದನು. || ೧೫೨ || ಎಲೈ ನಾಮಧಾರಕನೇ ಏಕಚಿತ್ತದಿಂದ ಕೇಳು ಈ ಪ್ರಕಾರ ಶ್ರೀ ಗುರುಗಳು ಆ ಬ್ರಾಹ್ಮಣನಿಗೆ ಅಪ್ಪಣೆ ಕೊಟ್ಟು ಕಳಿಸಿ ಆಮೇಲೆ ತಾವು ವೈಜನಾಥದಿಂದ ಹೊರಟು ಭುವನೇಶ್ವರಿಯ ಸ್ಥಾನವಾದ ಭಿಲ್ಲವಡಿಗೆ ಬಂದರು. || ೧೫೩ || ಅಲ್ಲಿ ಕೃಷ್ಣಾನದಿಯ ಪಶ್ಚಿಮ ದಂಡೆಯಲ್ಲಿರುವ ಔದುಂಬರ ವೃಕ್ಷದಲ್ಲಿ ಗುಪ್ತವಾಗಿದ್ದರು. || ೧೫೪ || ಶ್ರೀ ಗುರುಗಳು ಭಿಲ್ಲವಡಿಯಲ್ಲಿರುತ್ತಿರಲು ಅಲ್ಲಿ ಮಹಿಮೆಯು ಅಪರಂಪಾರವಾಗಿ ಬೆಳದು ಪ್ರಖ್ಯಾತವಾಯಿತು ಹೇಳುವೆನು ಕೇಳು ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರು. || ೧೫೫ || ಎಂದು ಸರಸ್ವತೀ ಗಂಗಾಧರನು— ಶ್ರೋತೃಗಳೇ ಮನೋಹರವಾದ ಈ ಗುರುಚರಿತ್ರೆಯನ್ನು ವಿಸ್ತಾರವಾಗಿ ಕೇಳುವದರಿಂದ ಸಕಲಾಭೀಷ್ಟಗಳೂ ಸಾಧಿಸುವವು. || ೧೫೬ || ಹೀಗೆ ಶ್ರೀ ಗುರುಗಳ ವಿವೇಕ ಬೋಧದಿಂದ ಶಿಷ್ಯನು ಪವಿತ್ರನಾಗಿ ಸರ್ವ ವಿದ್ಯೆಗಳನ್ನು ಸಂಪಾದಿಸಿದನು. || ೧೫೭ || ಎಂದು ಹೇಳಿದನು—

ಇತಿ ಶ್ರೀ ಗುರು ಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧ ನಾಮಧಾರಕ ಸಂವಾದೇ ಧೌಮ್ಯಮುನಿಗಳ ಮೂರುಜನ ಸೇವಾ ಮತ್ತು ಬ್ರಾಹ್ಮಣ ಮುನಿಯ ಪಾಪ ನಾಶವಾಗಿ ಜ್ಞಾನ ಸಂಪಾದನೆ ಮಾಡಿದನೆಂಬ ೧೫ನೇ ಅಧ್ಯಾಯ ಸಮಾಪ್ತವು. || ೧೫ || ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು ||

**— ೧೫ನೇ ಅಧ್ಯಾಯ ಸಮಾಪ್ತ —**

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

# ೧೭ನೇಯ ಅಧ್ಯಾಯ

## — ನಾಲಿಗೆ ಕೊಯ್ದುಕೊಂಡ ಮೂರ್ಖ ಬ್ರಾಹ್ಮಣನ ಉದ್ಧಾರ —

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕನೇ, ನೀನು ಗುರುಭಕ್ತ ಶಿರೋಮಣಿ ಇರುತ್ತೀ ಗುರುಚರಣಗಳಲ್ಲಿ ನಿನ್ನ ಭಕ್ತಿಯು ನಿಶ್ಚಯವಾಗಿ ಲೀನವಾಗಿದೆ. ॥ ೧ ॥ ಮಳೆ ಬರುವ ಮುಂದೆ ಸೂಚನೆಗಾಗಿ ಮೊದಲು ತಂಗಾಳಿಯು ಬರುವಂತೆ ನಿನ್ನ ದೈನ್ಯವು ಹೋಗುವದಕ್ಕಾಗಿ ಗುರುಕೃಪೆಯಿಂದ ಗುರುಚರಿತ್ರೆಯನ್ನು ಕೇಳಲಿಕ್ಕೆ ನಿನ್ನಲ್ಲಿ ಭಕ್ತಿಯುಂಟಾಗಿರುವದು ॥ ೨ ॥ ಈ ಪ್ರಕಾರ ಗುರುಚರಿತ್ರೆಯು ಕಾಮಧೇನುವಿಗೆ ಸಮಾನವಾದದ್ದು. ಅದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು. ॥ ೩ ॥

ಶ್ರೀ ಗುರುಗಳು ಕೃಷ್ಣಾ-ವೇಣೀ ತಟಾಕದಲ್ಲಿ ಭುವನೇಶ್ವರೀ ಪಶ್ಚಿಮಕ್ಕಿರುವ ಔದುಂಬರ ವೃಕ್ಷದ ಹತ್ತರ ಗೌಪ್ಯವಾಗಿದ್ದರೆಂದು ನೀನು ಕೇಳಿರುತ್ತೀ. ॥ ೪ ॥ ಅವರು ಇದ್ದ ಸ್ಥಾನವು ಯಾರಿಗೂ ಕಾಣಿಸುತ್ತಿದ್ದಿಲ್ಲ. ಅಲ್ಲಿ ಚಾತುರ್ಮಾಸ್ಯದಲ್ಲಿ ದುರಂಧರವಾಗಿ ಈ ಪ್ರಕಾರ ಅನುಷ್ಠಾನವು ನಡೆಯಿತು. ॥ ೫ ॥ ಆ ಭುವನೇಶ್ವರಿ ಸನ್ನಿಧಾನದಲ್ಲಿ ಒಂದು ಗಹನವಾದ ಸಿದ್ಧಸ್ಥಾನವಿತ್ತು ಅದು ವಿಶೇಷ ಮಹತ್ವದ್ದೆಂದು ತಿಳಿದು ಶ್ರೀಗುರುಗಳು ಅಲ್ಲಿ ಇರುತ್ತಿರಲು ಅಲ್ಲಿಯೂ ಅವರ ಮಹಿಮೆಯು ಅತಿಶಯ ಉತ್ಕೃಷ್ಟ ರೀತಿಯಿಂದ ಬೆಳೆಯಹತ್ತಿತು ಎಂದು ಹೇಳಿದರು. ॥ ೬ ॥ ಅವರ ಮಾತು ಕೇಳಿ ನಾಮಧಾರಕನು ಅವರಿಗೆ ನಮಸ್ಕರಿಸಿ— ಸ್ವಾಮೀ, ಶ್ರೀಗುರುಗಳು ಸ್ವತಃ ಪರಮಾತ್ಮರಿದ್ದು ಗೌಪ್ಯವಾಗಿ ಯಾಕೆ ಇದ್ದರು ? ॥ ೭ ॥ ಅವರ ತಪಸ್ಸಿನ ಉದ್ದೇಶವೇನು ? ಭಿಕ್ಷೆ ಬೇಡುವದರಲ್ಲಿ ಏನು ಸುಖವುಂಟು ? ಎಂಬ ಸಂದೇಹವು ನನ್ನ ಮನಸ್ಸಿನಲ್ಲಿ ಬರುತ್ತದೆ. ಅದನ್ನು ತಾವು

ನಿವಾರಣೆ ಮಾಡಬೇಕು ಎಂದನು. ॥ ೮ ॥ ಆಗ ಸಿದ್ಧರು— ಎಲೈ ನಾಮಧಾರಕನೇ ಕೇಳು. ಶ್ರೀ ಶಿವನು ಭಿಕ್ಷೆಯನ್ನು ಬೇಡಲಿಲ್ಲವೇ? ಮತ್ತೊಂದು ಮಾತು ಹೇಳುವೆನು ಕೇಳು. ಶ್ರೀದತ್ತಾತ್ರೇಯರನ್ನು ಬಲ್ಲೆಯಷ್ಟೇ? ಕೃಪಾಸಾಗರರಾದ ಆ ದತ್ತಾತ್ರೇಯ ಮೂರ್ತಿಗಳು ಭಿಕ್ಷುಕ ರೂಪದಲ್ಲಿದ್ದಂತೆ ಕಾಣುತ್ತಿರುವರು. ಆದರೆ ಅವರು ಭಕ್ತರನ್ನು ಅನುಗ್ರಹಿಸುವದಕ್ಕಾಗಿಯೇ ಆ ಭಿಕ್ಷುಕ ರೂಪದಿಂದ ತೀರ್ಥಯಾತ್ರೆ ಮಾಡುತ್ತಿರುವರು ॥ ೯-೧೦ ॥ ಅದರಂತೆ ಪರೋಪಕಾರಿಗಳಾದ ನಮ್ಮ ಶ್ರೀಗುರು ನರಸಿಂಹಸರಸ್ವತಿ ಸ್ವಾಮಿಗಳು ಭೂಮಿಯಮೇಲೆ ಗೌಪ್ಯವಾಗಿದ್ದ ಅನುಪಮ ಹಾಗು ಅಪಾರವಾದ ತೀರ್ಥಗಳನ್ನು ಭಕ್ತರ ಉದ್ಧಾರಕ್ಕಾಗಿ ಪ್ರಸಿದ್ಧಿಗೆ ತರಬೇಕೆಂದು ತಾವು ತೀರ್ಥ ಯಾತ್ರೆ ಮಾಡುತ್ತ ಅಲ್ಲಿಗೆ ಬಂದರು ॥ ೧೧ ॥ ಈ ಪ್ರಕಾರ ಶ್ರೀಗುರುಗಳು ತೀರ್ಥಯಾತ್ರೆ ಮಾಡಿದರೂ ಯಾವತ್ತು ಜಾತಿಯ ಜನರು ಬಂದು ವರವನ್ನು ಬೇಡುತ್ತಾರೆಂದು ತಿಳಿದು ಅಲ್ಲಿ ಗುಪ್ತವಾಗಿದ್ದರು. ॥ ೧೨ ॥ ಮೋಡವು ಸೂರ್ಯನನ್ನು ಮುಚ್ಚಿದರೂ ಅವನ ತೇಜೋರಾಸಿಯು ಹ್ಯಾಗೆ ಮುಚ್ಚೀತು? ಕಸ್ತೂರಿಯನ್ನು ಮುಚ್ಚಿಟ್ಟರೂ ಅದರ ಸುಗಂಧವು ಹ್ಯಾಗೆ ಗೌಪ್ಯವಾದೀತು? ॥ ೧೩ ॥ ನಿನಗೆ ಮತ್ತೊಂದು ಹೇಳುವೆನು. ಕಲ್ಪವೃಕ್ಷವು ಭೂಮಿಯಮೇಲೆ ಎಲ್ಲಿ ಬೇಕಾದಲ್ಲಿ ಇದ್ದರೂ ಅದು ಅಲ್ಲಿಯೇ ಕಲ್ಪಿಸಿದ ಫಲವನ್ನು ಕೊಡುವದು ಅದರ ಮಹಿಮೆಯಲ್ಲವೇ? ॥ ೧೪ ॥ ಅದರಂತೆ ಗೌಪ್ಯವಾಗಿದ್ದ ಶ್ರೀಗುರುಗಳು ಮುಂದೆ ಅಲ್ಲಿಯೇ ಪ್ರಕಟ ರಾದರು, ಅದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು ॥ ೧೫ ॥

ಕರವೀರ ಕ್ಷೇತ್ರದ ಒಂದು ಊರಲ್ಲಿ ಯಾವತ್ತು ವಿದ್ವಜ್ಜನರಿಂದ ವೇದ ಶಾಸ್ತ್ರ-ಪುರಾಣಗಳನ್ನು ಬಲ್ಲವ ನೆಂದೆನಿಸಿಕೊಳ್ಳುವಂಥ ಒಬ್ಬ ಬ್ರಾಹ್ಮಣನಿದ್ದನು ॥ ೧೬ ॥ ಅವನು ಋಗ್ವೇದಿ ಇದ್ದು, ತರ್ಕ-ವ್ಯಾಕರಣಗಳನ್ನು ತಿಳಿದವನಾಗಿ ಐಹ್ನಿಕ ಪದ್ಧತಿಯಂತೆ ಆಚರಿಸುತ್ತ ಕರ್ಮಮಾರ್ಗದಲ್ಲಿ ನಿರತನಾಗಿದ್ದನು. ॥ ೧೭ ॥ ಅವನಿಗೆ ಮಂದಮತಿಯಾದ ಒಬ್ಬ ಮಗನು ಹುಟ್ಟಿದನು ಅವನು ಹುಟ್ಟಿದ ಸ್ವಲ್ಪ ದಿವಸಗಳಲ್ಲಿ ತಾಯಿ-ತಂದೆಗಳೆಲ್ಲರೂ ಮರಣಹೊಂದಿದರು. ॥ ೧೮ ॥ ಆ ಬಾಲಕನು ದಿನದಿನಕ್ಕೆ ಬೆಳೆಯುತ್ತ ಏಳು ವರ್ಷದವನಾದನು. ಆಗ ಕುಲ-

ಧರ್ಮದ ಪ್ರಕಾರ ಅವನ ಉಪನಯನವನ್ನು ಮಾಡಿದರು. ‖ ೧೯ ‖ ಆದರೆ ಅವನಿಗೆ ಸ್ನಾನ-ಸಂಧ್ಯಾದಿಗಳೂ ಗಾಯತ್ರೀ ಮಂತ್ರವೂ ಬರಲಿಲ್ಲ. ಅಂದಮೇಲೆ ಅವನಿಗೆ ವೇದವು ಹ್ಯಾಗೆ ಬರಬೇಕು? ಅವನು ಪಶುಸಮಾನನಾಗಿರುತ್ತಿದ್ದನು. ‖ ೨೦ ‖ ಅವನು ವೇದಾಧ್ಯಯನ ಹೇಳುವಲ್ಲಿಗೆ ಹೋಗಿ ಸ್ವಲ್ಪ ಸ್ವಲ್ಪ ಕಲಿತರೂ ಅವು ಕೂಡಲೆ ಮರೆತು ಹೋಗುತ್ತಿದ್ದವು. ‖ ೨೧ ‖ ಆ ಗ್ರಾಮದ ವಿದ್ವಜ್ಜನರು ಅವನನ್ನು ಕುರಿತು— ಎಲೈ ಬಾಲಕನೇ ನೀನು ಬ್ರಾಹ್ಮಣ ಕುಲದಲ್ಲಿ ಹುಟ್ಟಿದರೂ ನಿನಗೆ ವಿದ್ಯೆಯು ಬರುವದಿಲ್ಲ. ‖ ೨೨ ‖ ನಿಮ್ಮ ತಂದೆಯು ಮಹಾಜ್ಞಾನಿಯೂ ವೇದಶಾಸ್ತ್ರ ಸಂಪನ್ನನೂ ಆಗಿದ್ದನು. ಅವನ ಉದರದಲ್ಲಿ ನೀನು ಕಲ್ಲಿನಂತೆ ಹ್ಯಾಗೆ ಹುಟ್ಟಿರುತ್ತೀಯಲ್ಲಾ? ‖ ೨೩ ‖ ನಿನ್ನ ಬಾಳು ಸುಡಲಿ! ಸುಡಲಿ! ನೀನು ನಿನ್ನ ತಂದೆಯ ಹೆಸರಿಗೆ ಕಲಂಕವನ್ನು ತಂದೆ, ನೀನು ಹೊಟ್ಟೆಗೆ ಕಲ್ಲು ಕಟ್ಟಿಕೊಂಡು ಕೆರೆ-ಬಾವಿಗಳಲ್ಲಿ ಯಾಕೆ ಬಿದ್ದು ಸಾಯುವದಿಲ್ಲ? ‖ ೨೪ ‖ ನೀನು ಈ ಜಗತ್ತಿನಲ್ಲಿ ವ್ಯರ್ಥವಾಗಿ ಹುಟ್ಟಿ ಹಂದಿಯಂತೆ ಅನಾಚಾರಿಯಾಗಿರುತ್ತೀ, ನಿನಗೆ ಯಮಪುರಿಯೇ ಗತಿಯಾಗುವದು. ‖ ೨೫ ‖ ವಿದ್ಯಾವಂತನಾದವನು ಮನುಷ್ಯರಲ್ಲಿ ಶ್ರೇಷ್ಠನು. ವಿದ್ಯೆಯು ಚಿಂತಾಮಣಿಯಂತೆ ಇರುವದು. ‖ ೨೬ ‖ ವಿದ್ಯಾವಂತರಿಗೆ ಸಕಲ ಸುಖಗಳೂ, ಕೀರ್ತಿಯೂ, ಸಂಪತ್ತೂ ಉಂಟಾಗಿ, ಅವರೇ ಎಲ್ಲರಲ್ಲಿಯೂ ಪೂಜ್ಯರಾಗುವರು. ‖ ೨೭ ‖ ಒಂದು ವೇಳೆ ವಿದ್ಯಾವಂತ ಮನುಷ್ಯನು ಪರದೇಶಕ್ಕೆ ಹೋದರೂ ಸಹ ಅಲ್ಲಿಯೂ ಅವನನ್ನು ಪೂಜಿಸುವರು. ಆಗ ಅವನಿಗೆ ವಿದೇಶವೇ ಸ್ವದೇಶವಾಗುವದು ‖ ೨೮ ‖ ಮನುಷ್ಯನು ವಯಸ್ಸಿನಿಂದ ದೊಡ್ಡವನಾದರೂ ಅವನಲ್ಲಿ ವಿದ್ಯೆಯಿಲ್ಲದಿದ್ದರೆ ಅವನು ಪೂಜ್ಯನಾಗಲಾರನು. ಆದರೆ ವಯಸ್ಸಿನಿಂದ ಸಣ್ಣವನಾದವನು ವಿದ್ಯಾವಂತನಿದ್ದರೆ ಅವನು ಎಲ್ಲರಿಗೂ ಪೂಜ್ಯನಾಗುವನು. ‖ ೨೯ ‖ ಸಹೋದರರಿಲ್ಲದವರಿಗೆ ಅವರ ವಿದ್ಯೆಯೇ ಸಹೋದರನಂತಾಗುವದು. ಅವನು ಎಲ್ಲರಿಗೂ ವಂದ್ಯನಾಗುವನು. ಎಲೈ ಮಂದಮತಿ ಬಾಲಕನೇ, ವಿದ್ಯೆಯ ಮಹಿಮೆಯು ಈ ಪ್ರಕಾರವಾಗಿರುವದು. ‖ ೩೦ ‖ ಬಹುತರವಾಗಿ ವಿದ್ಯೆಯುಳ್ಳವನೇ ಜ್ಞಾನವಂತನಾಗುವನು. ಅವನ ದೇಹದಲ್ಲಿ ದೇವತ್ವವು ಬಂದು, ಅವನು ಎಲ್ಲರಿಂದಲೂ ಪೂಜೆಗೊಳ್ಳು-

ವನು. ॥ ೩೧ ॥ ಒಂಮುವೇಳೆ ಅರಸನಿಗೆ ಸಮಸ್ತರೂ ವಂದಿಸುತ್ತಾರೆ. ಆದರೆ ಆ ರಾಜನು ವಿದ್ಯಾವಂತನನ್ನು ಪೂಜಿಸುತ್ತಾನೆ. ॥ ೩೨ ॥ ಧನವಿಲ್ಲದವರ ಮನೆಯಲ್ಲಿ ವಿದ್ಯೆಯೇ ಧನವಾಗಿರುವದು. ಎಲೈ, ವಿದ್ಯೆ ಕಲಿಯು-ವದರ ಕಾರಣವು ಇದೇ ಆಗಿರುವದೆಂದು ತಿಳಿ. ಎಂದು ನಿಂದಿಸಿ ಹೇಳಿದರು. ॥ ೩೩ ॥ ಅವರ ಮಾತು ಕೇಳಿ ಆ ಬ್ರಹ್ಮಚಾರಿಯು ಅವರಿಗೆ ನಮಸ್ಕಾರ ಮಾಡಿ— ಸ್ವಾಮೀ, ನನಗೆ ನೀವು ವಿದ್ಯಾಭ್ಯಾಸ ಮಾಡೆಂದು ಹೇಳಿದಿರಿ. ॥ ೩೪ ॥ ಆದರೆ ನಾನು ಜನ್ಮಾಂತರದಲ್ಲಿ ವಿದ್ಯಾದಾನ ಮಾಡಿದಂತೆ ಕಾಣುವದಿಲ್ಲ. ಆದರಿಂದ ಈಗ ನನಗೆ ವಿದ್ಯೆಯು ಬರಲೊಲ್ಲದು. ಏನು ಮಾಡಲಿ? ॥ ೩೫ ॥ ನಾನು ಒಂದು ವೇಳೆ ಈ ಪ್ರಕಾರ ದೋಷಿ ಇದ್ದದ್ದಾದರೆ ತಾವೆಲ್ಲರು ನನ್ನಮೇಲೆ ಕೃಪೆಮಾಡಿ, ನನಗೇನಾದರೊಂದು ಉಪಾಯವನ್ನು ಹೇಳಿ ನನ್ನನ್ನು ಉದ್ಧರಿಸಿರಿ ಎಂದನು. ॥ ೩೬ ॥ ಅವನ ಮಾತು ಕೇಳಿ ಆ ಯಾವತ್ತು ಜನರು ನಕ್ಕು— ಎಲೈ ಮಂದಮತಿಯೇ, ನಿನಗೆ ಮುಂದಿನ ಜನ್ಮದಲ್ಲಿಯೇ ವಿದ್ಯೆ ಬರುವದು. ॥ ೩೭ ॥ ಈ ಜನ್ಮದಲ್ಲಿ ನಿನಗೆಲ್ಲಿಯ ವಿದ್ಯೆಯು! ಮನುಷ್ಯರಲ್ಲಿ ನೀನು ಕೇವಲ ಪಶುಸಮಾನನು ಎಲಾ ಮೂರ್ಖಾ, ಕುಲನಾಶಕಾ, ನೀನು ಭಿಕ್ಷೆ ಬೇಡಿ ಹೊಟ್ಟೆ ತುಂಬಿಕೋ, ಎಂದು ಅಂದರು. ॥ ೩೮ ॥ ಈ ಪ್ರಕಾರ ಅವರು ನಾನಾಪ್ರಕಾರವಾಗಿ ನಿಂದಿಸುವದನ್ನು ಕೇಳಿ ಆ ಬ್ರಹ್ಮಚಾರಿಯು ಮನಸ್ಸಿನಲ್ಲಿ ದುಃಖಪಟ್ಟು, ಖಿನ್ನನಾಗಿ ವೈರಾಗ್ಯವನ್ನು ಹೊಂದಿ ಮನಸ್ಸಿನಲ್ಲಿ— ಯಾವತ್ತೂ ಜನರು ನನ್ನನ್ನು ದೂಷಿಸುತ್ತಾರೆ. ನನ್ನ ಬಾಳು ಸುಟ್ಟು ಹೋಗಲಿ! ನಾನು ಪಶುವಿನಂತೆ ಬುದ್ಧಿಹೀನನಾದೆನು. ಇನ್ನು ನಾನು ಯಾವ ಕಾರಣದಿಂದ ಬದುಕಿರಬೇಕು? ಅದರಿಂದ ಫಲವೇನು? ಈಗ ನಾನು ಪ್ರಾಣ ಬಿಡುವೆನು ಎಂದು ಅವನು ಉಪವಾಸದಿಂದ ಅರಣ್ಯದಲ್ಲಿ ಹೊರಟು, ದೈವವಶದಿಂದ ಆ ದಿವಸ ರಾತ್ರಿ ಭಿಲ್ಲವಡಿ ಗ್ರಾಮಕ್ಕೆ ಬಂದನು. ॥ ೩೯-೪೦-೪೧-೪೨ ॥ ಆಮೇಲೆ ಅಲ್ಲಿ ವಿಖ್ಯಾತ ಜಗನ್ಮಾತೆಯಾದ ಭುವನೇಶ್ವರೀದೇವೀ ಗುಡಿಗೆ ಬಂದು, ತೀವ್ರವಾಗಿ ದೇವೀದರ್ಶನವನ್ನು ತಕ್ಕೊಂಡನು ॥ ೪೩ ॥ ಅವನು ಸ್ನಾನ-ಸಂಧ್ಯಾದಿಗಳನ್ನು ಸಹ ಮಾಡದೆ, ಬಹು ದುಃಖ ಮಾಡುತ್ತ ಸತ್ಯಾಗ್ರಹ ಮಾಡಿ, ಮನಸ್ಸು ಗಟ್ಟಿ ಮಾಡಿ ಅನ್ನೋದಕಗಳನ್ನು ಸಹ ಬಿಟ್ಟು ದೇವಿಯ

ಬಾಗಿಲ ಮುಂದೆ ಧರಣೆಹಾಕಿ ಮೂರು ದಿವಸ ಕೂತುಬಿಟ್ಟನು. ॥ ೪೪-೪೫ ॥ ಅಷ್ಟುದಿವಸವಾದರೂ ಸ್ವಪ್ನವಾಗಲಿಲ್ಲ. ಆಗ ಆವನು ಸಿಟ್ಟಾಗಿ— ಎಲೈ ಅಂಬಾಭವಾನಿಯೇ, ನನ್ನನ್ನು ಯಾಕೆ ಉಪೇಕ್ಷಿಸುತ್ತೀ ? ॥ ೪೬ ॥ ಎಂದು ಆಕ್ರೋಶದಿಂದ ಒಂದು ಪ್ರಬಲವಾದ ಶಸ್ತ್ರವನ್ನು ತಕ್ಕೊಂಡು ಕೂಡಲೆ ತನ್ನ ನಾಲಿಗೆಯನ್ನು ಕೊಯ್ದು ದೇವಿಯ ಚರಣದ ಮೇಲಿಟ್ಟು ಮತ್ತೆ— ದೇವೀ, ಒಂದುವೇಳೆ ನೀನು ಮತ್ತೂ ನನ್ನನ್ನು ಉಪೇಕ್ಷಿಸಿದರೆ ನನ್ನ ರುಂಡವನ್ನು ಕತ್ತರಿಸಿ ನಿನ್ನ ಪಾದಕ್ಕೆ ಏರಿಸುವೆನು. ॥ ೪೭-೪೮ ॥ ಈ ಪ್ರಕಾರ ಆವನು ನಿಶ್ಚಯ ಮಾಡಿ ಆ ರಾತ್ರಿ ಮಲಗಿಕೊಂಡನು. ಮುಂದೆ ಅವನಿಗೆ ಒಂದು ಸ್ವಪ್ನ ಬಿತ್ತು, ಎಲೈ ಸಮಸ್ತ ಶ್ರೋತೃಗಳೇ ಕೇಳಿರಿ. ॥ ೪೯ ॥ ಆಗ ಆವನ ಸ್ವಪ್ನದಲ್ಲಿ ಭುವನೇಶ್ವರಿಯು ಬಂದು— ಎಲೈ ಬಾಲಕನಾದ ಬ್ರಹ್ಮಚಾರಿಯೇ, ನೀನು ನನ್ನಮೇಲೆ ಇಷ್ಟ್ಯಾಕೆ ಆಕ್ರೋಶ ಮಾಡುತ್ತೀ ? ಈ ಕೃಷ್ಣಾನದಿಯ ಪಶ್ಚಿಮ ತೀರದಲ್ಲಿ ಒಂದು ಔದುಂಬರ ವೃಕ್ಷವದೆ ನೀನು ತೀವ್ರವಾಗಿ ಅಲ್ಲಿಗೆ ಹೋಗು ॥ ೫೦ ॥ ಆ ವೃಕ್ಷದ ಬುಡದಲ್ಲಿ ಶ್ರೀಶಂಕರನ ಅವತಾರವಾದ ಒಬ್ಬ ಮಹಾ ತಪಸ್ವಿಗಳಿರುವರು. ನೀನು ಅವರ ಬಳಿಗೆ ಹೋಗು. ಅಂದರೆ ಅವರು ನಿನ್ನ ಇಚ್ಛೆಯನ್ನು ಪೂರ್ಣ ಮಾಡುವರು ಎಂದು ಹೇಳಿದಳು. ॥ ೫೧ ॥ ಅವನು ಈ ಪ್ರಕಾರವಾದ ಸ್ವಪ್ನವನ್ನು ಕಂಡು— ಇದೊಂದು ವಿಚಿತ್ರವಾದ ಸಂಗತಿಯು ಎಂದು ಕೂಡಲೆ ಎಚ್ಚರವನು ಹೊಂದಿ ॥ ೫೨ ॥ ಅಲ್ಲಿಂದ ತೀವ್ರವಾಗಿ ಓಡುತ್ತ ನದಿಯ ಪ್ರವಾಹದೊಳಗೆ ಹೊಕ್ಕು ಕೂಡಲೆ ಆಚೆಯ ದಂಡೆಗೆ ಹೋಗಿ ಭಕ್ತಿಯಿಂದ ಅತ್ತಿತ್ತ ನೋಡುತ್ತ ಔದುಂಬರದ ಬುಡದಲ್ಲಿ ಕುಳಿತ ಶ್ರೀಗುರುಗಳನ್ನು ಕಂಡನು. ॥ ೫೩ ॥ ಕೂಡಲೆ ಹೋಗಿ ಅವರ ಚರಣಗಳಲ್ಲಿ ಮಸ್ತಕವನ್ನಿಟ್ಟು ಸ್ತೋತ್ರ ಮಾಡಹತ್ತಿದನು. ಅದನ್ನು ಕೇಳಿ ಶ್ರೀಗುರುಗಳು ಸಂತೋಷಬಟ್ಟು, ಆಶೀರ್ವಾದ ಮಾಡಿ, ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟರು. ಕೂಡಲೆ ಅವನ ನಾಲಿಗೆಯು ಬಂದು ದಿವ್ಯ ಜ್ಞಾನೋದಯವಾಯಿತು. ॥ ೫೪-೫೫ ॥ ಮಾನಸಸರೋವರಕ್ಕೆ ಹೋದ ಕಾಗೆಯು ಕೂಡಲೆ ರಾಜಹಂಸವಾಗುವಂತೆಯೂ, ಚಿಂತಾಮಣಿಯ ಸ್ಪರ್ಶದಿಂದ ಲೋಹವು ಸುವರ್ಣವಾಗುವಂತೆಯೂ, ಜಾಂಬೂ ನದಿಯಲ್ಲಿ ಬಿದ್ದ ಮಣ್ಣು ಬಂಗಾರವಾಗುವಂತೆಯೂ ಶ್ರೀಗುರು

ಗಳ ಪಾದಸ್ಪರ್ಶವಾದಕೂಡಲೆ ಆ ಬ್ರಾಹ್ಮಣ ಬಾಲಕನಿಗೆ ವೇದ–ಶಾಸ್ತ್ರ–ತರ್ಕ–ಭಾಷ್ಯ ಮೊದಲಾದ ವಿದ್ಯೆಗಳು ಬಂದವು. || ೫೬–೫೭–೫೮ || ಎಲೈ ನಾಮಧಾರಕನೇ, ಗುರುಮಹಿಮೆಯು ಈ ಪ್ರಕಾರವಾಗಿರುತ್ತದೆ. ಶ್ರೀಗುರುಗಳು ಯಾವ ಯಾವ ಸ್ಥಳಗಳಲ್ಲಿರುತ್ತಾರೋ ಆ ಸ್ಥಳಗಳಲ್ಲಿ ಈ ಪ್ರಕಾರದ ಮಹಿಮೆಗಳು ಆಗುತ್ತಿರುತ್ತವೆ. ಎಂದು ಸಿದ್ಧರು ಹೇಳಿದರೆಂದು ಸರಸ್ವತೀಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ಮನೋಹರವಾದ ಈ ಗುರುಚರಿತ್ರೆಯನ್ನು ಕೇಳಲು ಸಕಲಾಭೀಷ್ಟಗಳು ಸಾಧಿಸುವವು. || ೫೯-೬೦ || ಈ ಅಧ್ಯಾಯದಲ್ಲಿ ಶ್ರೀ ಗುರುಗಳ ಅನುಗ್ರಹದಿಂದ ಮೂರ್ಖನಿಗೆ ಜ್ಞಾನಪ್ರಾಪ್ತಿಯಾದ ಕಥೆಯು ಹೇಳಿದೆ. || ೬೧ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಭಿಲ್ಲವಡಿಸ್ಥಾನ ಮಹಿಮಾವರ್ಣನಂ, ಮಂದಮತಿ ಬ್ರಾಹ್ಮಣ ವರಪ್ರದಾನಂ ನಾಮ ಸಪ್ತದಶೋಽಧ್ಯಾಯಃ || ೧೭ || ಶ್ರೀಗುರುದೇವದತ್ತ ||

— ೧೭ನೇ ಅಧ್ಯಾಯ ಸಮಾಪ್ತ —

# ೧೮ನೇಯ ಅಧ್ಯಾಯ





## ಶ್ರೀಗುರುಗಳು ಅಯಾಚಿತ ಬ್ರಾಹ್ಮಣನ ಮನೆಯ ಅವರೀಬಳ್ಳಿಯನ್ನು ಕಿತ್ತಿ ಧನದಕುಂಭ ಕೊಟ್ಟದ್ದು

ಶ್ರೀ ಗಣೇಶಾಯನಮಃ ! ಶ್ರೀ ಸರಸ್ವತ್ಯೈನಮಃ ಶ್ರೀ ಗುರುಭ್ಯೋನಮಃ । ಆ ಮೇಲೆ ನಾಮಧಾರಕನು— ಜಯ ಜಯ ಸಿದ್ಧಮುನಿಗಳೇ, ನೀವು ಭವತಾರಕರು. ಗುರುಚರಿತ್ರವೆಂಬ ಅಮೃತರಸವನ್ನು ನನ್ನ ಕಿವಿಗಳಲ್ಲಿ ಹಾಕಿ ಪೂರ್ಣ ಮಾಡಿದಿರಿ. ‖ ೧ ‖ ಕಾಮಧೇನು ಸಮಾನವಾದ ಗುರುಚರಿತ್ರೆಯನ್ನು ಇಷ್ಟು ಕೇಳಿದರೂ ನನ್ನ ಮನಸ್ಸು ಶಾಂತವಾಗಲಿಲ್ಲ. ಗುರು ಕಥಾಮೃತವನ್ನು ಇನ್ನೂ ಕೇಳಬೇಕೆಂದು ನನ್ನ ಮನಸ್ಸು ಅಪೇಕ್ಷಿಸುತ್ತದೆ. ‖ ೨ ‖ ಗುರುಚರಣದಲ್ಲಿ ನನ್ನ ಧ್ಯಾನವು ನಿಂತಿದೆ. ಸಂಜೀವಿಯಂಥ ಕಥೆಯನ್ನು ಕೇಳಿ ನನಗೆ ಇನ್ನೂ ತೃಪ್ತಿಯಾಗಿಲ್ಲ. ದಯಾನಿಧಿಯೇ ಕೃಪಾಮಾಡಿ ನನಗೆ ಮುಂದಿನ ಕಥೆಯನ್ನು ಹೇಳಿರಿ. ‖ ೩ ‖ ಎಂದು ಬೇಡಿಕೊಂಡು ವಿನಯ ಮತ್ತು ಭಕ್ತಿಗಳಿಂದ ಅವರ ಚರಣಕ್ಕೆ ನಮಸ್ಕಾರ ಮಾಡಿದನು. ‖ ೪ ‖ ಆಗ ಸಿದ್ಧರು ಅವನ ಮಾತಿಗೆ ಸಂತೋಷಬಟ್ಟು ಮುಂದಿನ ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳುವರು. ಶ್ರೋತೃಗಳೇ ಚಿತ್ತಗೊಟ್ಟು ಕೇಳಿರಿ. ‖ ೫ ‖ ಏನೆಂದರೆ— ಎಲೈ ಶಿಷ್ಯಶಿಖಾಮಣಿಯೇ ಕೇಳು. ನೀನೂ ಧನ್ಯ ! ನಿನ್ನ ಮಾತುಗಳೂ ಧನ್ಯ ! ಶ್ರೀ ಗುರು ಚರಣಗಳಲ್ಲಿ ನಿನ್ನ ಭಕ್ತಿಯು ನಿಶ್ಚಯವಾಗಿ ತಲ್ಲೀನವಾಗಿದೆ. ‖ ೬ ‖ ನಿನ್ನ ದೆಶೆಯಿಂದ ನನಗೂ ಚೇತನವುಂಟಾಗಿ ಆದ್ಯಂತ ಗುರುಚರಿತ್ರೆಯು ನನ್ನ ಸ್ಮರಣೆಗೆ ಬಂತು. ‖ ೭ ‖ ನಿನಗೆ ಅನುಪಮವಾದ ಭಿಲ್ಲವಡಿಯ ಸ್ಥಾನ ಮಹಿಮೆಯನ್ನು ಹೇಳಿವನಷ್ಟೇ ? ಮುಂದೆ ಉತ್ತಮ ಚರಿತ್ರೆಯನ್ನು ಹೇಳುವೆನು ಚಿತ್ತುಗೊಟ್ಟುಕೇಳು. ‖ ೮ ‖ ಶ್ರೀ ಗುರುಗಳು ಭಿಲ್ಲವಡಿಯ ಹತ್ತರ ಔದುಂಬರಲ್ಲಿ ಕೆಲವು ದಿವಸ ಗುಪ್ತವಾಗಿದ್ದಾಗ ಅಲ್ಲಿಯೂ ತಮ್ಮ ಮಹಿಮೆಯು ಪ್ರಗಟವಾಯಿತೆಂದು ತಿಳಿದು, ಆವರು ಅಲ್ಲಿಂದ ಮುಂದೆ

ಹೊರಟು, ॥ ೯ ॥ ದಕ್ಷಿಣ ಕಾಶಿ ಎಂದೆನಿಸಿಕೊಳ್ಳುವಂಥ ವರುಣಾ ಸಂಗಮಸ್ಥಾನವು ಪ್ರಖ್ಯಾತವಾದದ್ದೆಂದು ತಿಳಿದು ನೋಡಿ ಭಕ್ತೋದ್ಧಾರಕ್ಕಾಗಿ ಅಲ್ಲಿಗೆ ಬಂದರು. ॥ ೧೦ ॥ ಆಮೇಲೆ ಶ್ರೀ ಗುರುಗಳು ಮುಂದೆ ಹೊರಟು ಕೃಷ್ಣಾಪ್ರವಾಹದಲ್ಲಿರುವ ಸಕಲ ತೀರ್ಥಗಳನ್ನು ಪಾವನ ಮಾಡುತ್ತ ಪ್ರಖ್ಯಾತವೂ, ಮನೋಹರವೂ, ಅನುಪಮವೂ, ಮುಕ್ತಿ ಕ್ಷೇತ್ರವಾದ ಕಾಶಿಗೂ, ಶ್ರೇಷ್ಠ ತೀರ್ಥವಾದ ಪ್ರಯಾಗಕ್ಕೂ, ಮಾನಸ ಸರೋವರಕ್ಕೂ, ಕುರುಕ್ಷೇತ್ರಕ್ಕೂ ಸಮಾನವೂ, ಅತ್ಯುತ್ತಮವೂ, ಹಾಗು ಪ್ರಸಿದ್ಧವೂ ಆದಂಥ ಕೃಷ್ಣಾ–ಪಂಚಗಂಗಾ ಸಂಗಮ ಸ್ಥಾನದಲ್ಲಿರುವ ನರಸೋಬವಾಡಿಯಲ್ಲಿ (ಕುರವಪುರ) ಹನ್ನೆರಡುವರುಷ ವಾಸವಾಗಿದ್ದರು. ॥ ೧೧–೧೨–೧೩ ॥ ಕುರುಕ್ಷೇತ್ರದಲ್ಲಿ ವಾಸ ಮಾಡಿದ ಪುಣ್ಯಕ್ಕಿಂತ, ಕುರವಪುರದಲ್ಲಿ ಅಂದರೆ ಕೃಷ್ಣಾ–ಪಂಚಗಂಗಾ ಸಂಗಮ ಸ್ಥಾನದಲ್ಲಿರುವ ನರಸೋಬವಾಡಿಯಲ್ಲಿ ವಾಸಮಾಡಿದರೆ ಹೆಚ್ಚು ಪುಣ್ಯವು ಬರುವದೆಂದು ಮತ್ತು ಅಲ್ಲಿ ಅಗಮ್ಯವಾದ ಅನೇಕ ತೀರ್ಥಗಳಿರುವವೆಂದು ತಿಳಿದು ಶ್ರೀ ಗುರುಗಳು ಅಲ್ಲಿ ಇದ್ದರು. ॥ ೧೪ ॥ ಪಂಚಗಂಗಾ ನದಿಯ ತೀರವು ಪುರಾಣ ಪ್ರಸಿದ್ಧವಾಗಿರುತ್ತದೆ. ಅದು ಶಿವಾ, ಭದ್ರಾ, ಭೋಗವತಿ, ಕುಂಭಿ, ಸರಸ್ವತಿ ಎಂಬ ಐದು ದೊಡ್ಡ ನದಿಗಳು ಕೂಡಿ ಆಗಿ ಈಗ ಪಂಚಗಂಗಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ. ॥ ೧೫ ॥ ಅದರಲ್ಲಿ ಸ್ನಾನ ಮಾಡಿದರೆ ಸಕಲ ಮಹಾ ಪಾಪಗಳು ನಾಶವಾಗುತ್ತವೆ. ॥ ೧೬ ॥ ಈ ಪ್ರಕಾರ ಪ್ರಖ್ಯಾತವಾದ ಪಂಚಗಂಗಾನದಿಯು ಕೃಷ್ಣಾನದಿಗೆ ಕೂಡಿ ಬಂದಿರುವದರಿಂದ ಆ ಮನೋಹರವಾದ ಸಂಗಮ ಸ್ಥಾನವು ಪ್ರಯಾಗಕ್ಕಿಂತ ಶ್ರೇಷ್ಠವಾಗಿರುತ್ತದೆ. ॥ ೧೭ ॥ ಅಲ್ಲಿ ಅಮರಪುರ ಅಥವಾ ಅವರವಾಡ ಎಂಬ ಮತ್ತೊಂದು ಗ್ರಾಮವು ಪ್ರಯಾಗ ಸಂಗಮದಂತೆ ಮನೋಹರವೂ ಅನುಪಮವೂ ಆಗಿರುವದು. ॥ ೧೮ ॥ ಆ ಸಂಗಮದಲ್ಲಿರುವ ಔದುಂಬರವೃಕ್ಷವು ಕಲ್ಪವೃಕ್ಷದಂತೆ ಪ್ರಖ್ಯಾತವಾಗಿರುವದು. ಆ ಸಂಗಮದಲ್ಲಿ ಅಮರೇಶ್ವರನ ದೇವಾಲಯುವದೆ. ॥ ೧೯ ॥ ಗಂಗಾನದಿಯ ದಂಡೆಯ ಮೇಲೆ ಕಾಶಿಯು ಪ್ರಸಿದ್ಧವಾದಷ್ಟೇ, ಪಂಚನದೀ ಸಂಗಮಸ್ಥಾನವೂ ತತ್ಸಮಾನ ಪ್ರಸಿದ್ಧವದೆ. ॥ ೨೦ ॥ ಆ ಅಮರೇಶ್ವರನ ಸನ್ನಿಧಾನದಲ್ಲಿ ೬೪ ಮಂದಿ ಯೋಗಿನಿಯರು ಇರುವರು. ಅಲ್ಲಿ ಶಕ್ತಿತೀರ್ಥವು ಗುಪ್ತವಾಗಿ ಪ್ರಖ್ಯಾತ

ವಾಗಿರುವದು. || ೨೧ || ಆ ಉತ್ತಮವಾದ ಅಮರೇಶ್ವರನ ಲಿಂಗವು ಕಾಶೀ ವಿಶ್ವೇಶ್ವರನಿಗೆ ಸಮಾನವಾದದ್ದು. ಆತನಿಗೆ ನಮಸ್ಕಾರ ಮಾಡಿ ಆತನನ್ನು ಪೂಜಿಸಿದಂಥ ಮನುಷ್ಯನು ಅಮರನಾಗುವನು. || ೨೨ || ಆ ಪಂಚ ಗಂಗಾ ಸಂಗಮದಲ್ಲಿ ಒಂದುಸಾರಿ ಸ್ನಾನಮಾಡಿದರೆ ಸಾಕು ಪ್ರಯಾಗದಲ್ಲಿ ಮಾಘ ಸ್ನಾನಮಾಡಿದ ಪುಣ್ಯದ ನೂರು ಪಟ್ಟು ಪುಣ್ಯ ಬರುವದು. || ೨೩ || ಆ ಸಂಗಮಸ್ಥಾನವು ಪ್ರಯಾಗ ಸಮಾನ ಪ್ರಸಿದ್ಧವಾದದ್ದೆಂದು ಸತ್ಯಪರ ಬ್ರಹ್ಮನಾದ ಅಮರೇಶ್ವರನು ಅಲ್ಲಿ ವಾಸವಾಗಿದ್ದಾನೆ || ೨೪ || ಆ ಸ್ಥಾನದಲ್ಲಿ ಪ್ರಖ್ಯಾತವಾದ **ಕೋಟಿ**ತೀರ್ಥವು ಗುಪ್ತವಾಗಿದೆ. ಅಲ್ಲಿ ಕೃಷ್ಣಾನದಿಯು ವೇಣೀಸಹಿತವಾಗಿ ದಕ್ಷಿಣಕ್ಕೆ ಹರಿಯುತ್ತದೆ. || ೨೫ || ಆ ಸ್ಥಳದಲ್ಲಿ ಅಸಂಖ್ಯ ತೀರ್ಥಗಳು ಅವೆ. ಅವುಗಳನ್ನೆಲ್ಲ ಹೇಳಹತ್ತಿದರೆ ಬಹಳ ವಿಸ್ತಾರವಾಗುವದು. ಆ ಕೃಷ್ಣಾನದಿಯಲ್ಲಿ ಮುಖ್ಯವಾಗಿ ೮ ತೀರ್ಥಗಳು ಅವೆ || ೨೬ || ಉತ್ತರದಲ್ಲಿ ಕೃಷ್ಣೆಯು ಪಶ್ಚಿಮವಾಹಿನಿ ಆದಲ್ಲಿಯೇ **ಶುಕ್ಲತೀರ್ಥ**ವದೆ ಅದರಲ್ಲಿ ಸ್ನಾನಮಾಡಿದರೆ ಬ್ರಹ್ಮಹತ್ಯಾ ದೋಷವು ಹೋಗುವದು. || ೨೭ || ಔದುಂಬರದ ಸನ್ನಿಧಿಯಲ್ಲಿ **ಪಾಪವಿನಾಶಿ**ತೀರ್ಥ, **ಕಾಮ್ಯ**ತೀರ್ಥ, **ಸಿದ್ಧವರದ** ತೀರ್ಥಗಳೆಂಬ ಒಂದರಕ್ಕಿಂತ ಒಂದು ಶ್ರೇಷ್ಠವಾದ ಮೂರು ಮನೋಹರವಾದ ತೀರ್ಥಗಳು ಅವೆ. ಅಮರೇಶ್ವರನ ಸನ್ನಿಧಿಯಲ್ಲಿ ಅನುಪಮವಾದ ಅನೇಕ ತೀರ್ಥಗಳು ಅವೆ. || ೨೮-೨೯ || ಮುಂದೆ ಸಂಗಮ ಷಟ್ಕುಲದಲ್ಲಿ ಪ್ರಖ್ಯಾತವಾದ **ಪ್ರಯಾಗ**ತೀರ್ಥವದೆ. ಇವಲ್ಲದೆ ಶಕ್ತಿ ತೀರ್ಥ, ಅಮರತೀರ್ಥ, ಕೋಟಿತೀರ್ಥಗಳೆಂಬ ಬೇರೆ ಮೂರು ತೀರ್ಥಗಳು ಅವೆ. || ೩೦ || ಇನ್ನೂ ಅನೇಕ ತೀರ್ಥಗಳುಂಟು, ಹೇಳಲಿಕ್ಕೆ ವಿಸ್ತಾರವಾಗುವದು. ಆದ್ದರಿಂದ ಶ್ರೀ ನರಸಿಂಹ ಸರಸ್ವತಿ ಗುರುಗಳು ಆ ಪಂಚ ಗಂಗಾ ಸಂಗಮದಲ್ಲಿ ಹನ್ನೆರಡುವರುಷ ಇದ್ದರು. ಅದರಿಂದ ಆ ಕುರವಪುರಕ್ಕೆ ಈಗ ನರಸೋಬವಾಡಿ ಅಥವಾ ನೃಸಿಂಹವಾಡಿ ಎಂದು ಹೆಸರು ಪ್ರಸಿದ್ಧವಾಗಿರುತ್ತದೆ. || ೩೧ || ಕೃಷ್ಣಾ-ವೇಣೀನದಿಗಳು ಕೂಡಿ ಬರಲು ಅಲ್ಲಿ ೫ ನದಿಗಳು ಕೂಡಿದ ಪಂಚಗಂಗಾನದಿಯು ಕೂಡಿದ್ದರಿಂದ ಅದು ಏಳು ನದಿಗಳ ಸಂಗಮಸ್ಥಾನವಾಗಿದೆ. ಅದರ ಮಹಿಮೆಯನ್ನು ಎಷ್ಟು ಹೇಳಲಿ ? || ೩೨ || ಆ ಸ್ಥಳದಲ್ಲಿ ಒಮ್ಮೆ ಸ್ನಾನ ಮಾಡಿದರೆ ಬ್ರಹ್ಮಹತ್ಯಾ ಪಾತಕಗಳು

ನಾಶವಾಗುತ್ತವೆ. ಅದು ಮಹಾ ಸಿದ್ಧಸ್ಥಾನವು ಅಲ್ಲಿ ಸಕಲಾಭೀಷ್ಟಗಳು ಸಿದ್ಧಿಸುವವು. || ೩೩ || ಅದಕ್ಕೆ ಸರಿಯಾದ ಬೇರೆ ತೀರ್ಥವು ಯಾವದೂ ಇಲ್ಲ. ಆ ತೀರ್ಥ ದರ್ಶನ ಮಾತ್ರದಿಂದ ಕಾಮ್ಯಗಳು ಸಿದ್ಧಿಸುವವು. ಅಂದ ಮೇಲೆ ಅದರಲ್ಲಿ ಸ್ನಾನಮಾಡಿದ ಫಲವನ್ನೆಷ್ಟು ಹೇಳಲಿ? || ೩೪ || ಅಲ್ಲಿರುವ ಔದುಂಬರ ವೃಕ್ಷವು ಸಾಕ್ಷಾತ್ ಕಲ್ಪವೃಕ್ಷವಾದ್ದರಿಂದ ಶ್ರೀ ಗುರುಗಳು ಅಲ್ಲಿ ಕಾಣದಂತೆ ಗುಪ್ತವಾಗಿದ್ದರು. || ೩೫ || ಮುಂದೆ ಆ ತೀರ್ಥವು ಭಕ್ತ ಜನರ ಉದ್ಧಾರಕ್ಕಾಗಿ ಪ್ರಖ್ಯಾತವಾಗತಕ್ಕದ್ದೆಂದು ತಿಳಿದು ಗುಪ್ತವಾಗಿದ್ದ ಶ್ರೀ ಗುರುಗಳು ಅಲ್ಲಿ ಪ್ರಗಟರಾದರು || ೩೬ || ಹೀಗೆ ಶ್ರೀ ಗುರುಗಳು ಪ್ರಗಟರಾಗಿ ಮುಂದೆ ನಿತ್ಯದಲ್ಲಿ ಅಮರಾಪುರವೆಂಬಲ್ಲಿಗೆ ಭಿಕ್ಷೆಗೆ ಹೋಗುತ್ತಿದ್ದರು. || ೩೭ ||

ಆ ಗ್ರಾಮದಲ್ಲಿ ವೇದಾಭ್ಯಾಸ ಮಾಡಿದ ಒಬ್ಬ ಬ್ರಾಹ್ಮಣನಿದ್ದನು. ಅವನ ಹೆಂಡತಿಯು ಪತಿವ್ರತಾ ಶಿರೋಮಣಿಯಾಗಿ ಪತಿ ಸೇವೆ ಮಾಡುತ್ತಿದ್ದಳು. || ೩೮ || ಆ ಬ್ರಾಹ್ಮಣನು ಸುಶೀಲನಾಗಿ ಶುಷ್ಕ ಭಿಕ್ಷೆಯನ್ನು ಬೇಡುತ್ತ, ಕರ್ಮ ಮಾರ್ಗವನ್ನು ಆಚರಿಸುತ್ತ ಸಾತ್ವಿಕವೃತ್ತಿಯಿಂದಿರುತ್ತಿದ್ದನು. || ೩೯ || ಅವನ ಮನೆಯಲ್ಲಿ ಒಂದು ಚಪ್ಪರ ಅವರಿಯ ಬಳ್ಳಿಯು ಬಹಳ ಎತ್ತರವಾಗಿ ಬೆಳೆದಿತ್ತು. ಅದರಲ್ಲಿ ನಿತ್ಯವೂ ಅತಿಶಯ ಅವರೀಕಾಯಿಗಳು ಆಗುತ್ತಿದ್ದವು ಅದರಿಂದ ಅವರು ಉದರಂಭರಣ ಮಾಡುತ್ತಿದ್ದರು. || ೪೦ || ಒಂದೊಂದು ದಿವಸ ಆ ಬ್ರಾಹ್ಮಣನಿಗೆ ಭಿಕ್ಷೆಯಲ್ಲಿ ಅಕ್ಕಿ ಸಿಗದಿದ್ದರೆ ಕೇವಲ ಆ ಅವರೀಕಾಯಿ ಪಲ್ಯೆಯನ್ನೇ ತಿಂದು ಎಲ್ಲರೂ ಹರ್ಷದಿಂದ ಕಾಲಕಳೆಯುತ್ತಿದ್ದರು. || ೪೧ || ಆ ದರಿದ್ರನಾದ ಬ್ರಾಹ್ಮಣನು ಈ ರೀತಿಯಾಚಕವೃತ್ತಿಯಿಂದ ಉಪಜೀವಿಸುತ್ತ, ಒಳ್ಳೇ ರೀತಿಯಿಂದ ಪಂಚಮಹಾಯಜ್ಞ ಮಾಡುತ್ತ, ದಿನಾಲು ಭಕ್ತಿಯಿಂದ ಅತಿಥಿ ಪೂಜೆಯನ್ನು ಮಾಡುತ್ತಿದ್ದನು. || ೪೨ || ಮತ್ತು ಭಕ್ತಿಪೂರ್ವಕ ಶ್ರೀ ಗುರುಗಳನ್ನು ನೇಮದಿಂದ ಪೂಜಿಸುತ್ತ ಅವರ ಭಿಕ್ಷೆಗೆ ಒಂದೊಂದುದಿವಸ ಆ ಅವರೀಕಾಯಿ ಪಲ್ಲೆಯನ್ನೇ ಹಾಕುತ್ತಿದ್ದನು. || ೪೩ || ಹೀಗೆ ನಡೆದಿರಲು ಒಂದುದಿವಸ ಶ್ರೀ ಗುರುಗಳು ಅವನ ಮನೆಗೆ ಹೋದರು. ಆಗ ಆ ಬ್ರಾಹ್ಮಣನು ಭಕ್ತಿಯಿಂದ ಅವರನ್ನು ಒಳಗೆ ಕರಕೊಂಡು

ಹೋಗಿ ಶುಭಾಸನದಲ್ಲಿ ಕೂಡ್ರಿಸಿ ಪೂಜೆ ಮಾಡಿ ಭಿಕ್ಷೆಯನ್ನು ಮಾಡಿಸಿದನು. ‖ ೪೪ ‖ ಈ ಪ್ರಕಾರ ಶ್ರೀ ಗುರುಗಳು ಆವನ ಮನೆಯಲ್ಲಿ ಭಿಕ್ಷೆಯನ್ನು ಮಾಡಿ, ಅತಿ ಸಂತೋಷದಿಂದ ಆ ಬ್ರಾಹ್ಮಣನನ್ನು ಕುರಿತು— ಎಲೈ ಬ್ರಾಹ್ಮಣನೇ, ಇನ್ನು ನಿನ್ನ ದರಿದ್ರತನವು ಹೋಯಿತು ಎಂದು ವರವನ್ನು ಕೊಟ್ಟು ಹೊರಗೆ ಬಂದರು. ‖ ೪೫ ‖ ಆಮೇಲೆ ಆವನ ಮನೆಯಲ್ಲಿ ಅಂಗಳತುಂಬ ಎತ್ತರವಾಗಿ ಬೆಳೆದಂಥ ಆ ಅವರೀಬಳ್ಳಿಯನ್ನು ನೋಡಿ ಕೂಡಲೆ ಅದನ್ನು ಬೇರಿನವರೆಗೆ ಕತ್ತರಿಸಿ ಹಾಕಿ ಸಂಗಮಕ್ಕೆ ಹೊರಟುಹೋದರು. ‖ ೪೬–೪೭ ‖ ಆಗ ಆ ಬ್ರಾಹ್ಮಣ ಪತ್ನಿಯು ಮಕ್ಕಳೊಡನೆ ದುಃಖಿಸುತ್ತ— ಅಹಾ! ನಮ್ಮ ದೈವಬಲವು ಹ್ಯಾಗೆ ಆದೆ ನೋಡಿರಿ! ದೇವರು ನಮ್ಮನ್ನು ಹ್ಯಾಗೆ ಮಾಡಿದನಲ್ಲಾ? ‖ ೪೮ ‖ ನಾವು ಆ ಯತೀಶ್ವರರಿಗೆ ಏನು ಉಪದ್ರವ ಮಾಡಿದ್ದೇವು? ನಮ್ಮ ನಿತ್ಯ ಆಹಾರವಾದ ಅವರೀಬಳ್ಳಿಯನ್ನು ಕತ್ತರಿಸಿ ಭೂಮಿಯಮೇಲೆ ಒಗೆದುಬಿಟ್ಟರಲ್ಲಾ? ‖ ೪೯ ‖ ಎಂದು ಆ ಸ್ತ್ರೀಯು ಅತಿಯಾಗಿ ದುಃಖಿಸುತ್ತಿದ್ದಳು. ಆಗ ಆಕೆಯ ಪತಿಯು ಸಿಟ್ಟುಮಾಡಿ— ಎಲೈ ಸ್ತ್ರೀಯೇ ಇದು ನಮ್ಮ ಪ್ರಾರಬ್ಧ ಕರ್ಮವು. ‖ ೫೦ ‖ ಯಾವ ಕಾಲದಲ್ಲಿ ಏನು ಆಗಬೇಕೋ ಅದು ಆಗೇ ತೀರುವದು. ಆದರೆ ಈ ಬಳ್ಳಿಯನ್ನು ಕಿತ್ತಲಿಕ್ಕೆ ಚಂದ್ರಮೌಳಿಗಳಾದ ಶ್ರೀ ಗುರುಗಳು ಕಾರಣರಾದರು. ಜಗತ್ತೆಲ್ಲವೂ ಅವರ ಆಧೀನವಾಗಿದೆ. ‖ ೫೧ ‖ ವಿಶ್ವವ್ಯಾಪಕನಾದ ನಾರಾಯಣನು ಸೃಷ್ಟಿಯ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಕಾರಣನು. ಆತನು ಅತಿ ಸೂಕ್ಷ್ಮ ಪ್ರಾಣಿಗಳಾದ ಇರುವೆ ಮೊದಲು ಮಾಡಿ ಸ್ಥೂಲ ಶರೀರವುಳ್ಳ ಆನೆ ಮೊದಲಾದ ಯಾವತ್ತು ಪ್ರಾಣಿಗಳಿಗೆ ತಕ್ಕಂತೆ ಆಹಾರವನ್ನು ಒದಗಿಸಿಕೊಡುವನು. ‖ ೫೨ ‖ "ಆ ಯುರನ್ನಂಪ್ರಯಚ್ಛತಿ" ಎಂದು ವೇದಗಳು ಹೇಳುವವು. ಮುಖ್ಯವಾಗಿ ಸಿಂಹಕ್ಕೆ ಆನೆಯು ಆಹಾರವು. ಹುಲಿಗೆ ಮುಖ್ಯವಾಗಿ ಆಕಳು, ತೋಳಕ್ಕೆ ಮುಖ್ಯವಾಗಿ ಕುರಿಯು ಆಹಾರವು. ಇದರಂತೆ ಪ್ರತಿಯೊಂದು ಪ್ರಾಣಿಗೆ ಆಹಾರವನ್ನು ಹ್ಯಾಗೆ ಕಲ್ಪಿಸಿರುತ್ತಾನೆ ನೋಡು. ‖ ೫೩ ‖ ಪರಮಾತ್ಮನು ಸೂಕ್ಷ್ಮದಿಂದ ಆರಂಭ ಮಾಡಿ ಸ್ಥೂಲದವರೆಗಿರುವ ೮೪ ಲಕ್ಷ ಪ್ರಾಣಿ ಜಾತಿಗಳಿಗೆ ತಕ್ಕ ಆಹಾರವನ್ನು ಮೊದಲು ಹುಟ್ಟಿಸಿ ಆಮೇಲೆ ಆಯಾಪ್ರಾಣಿಗಳನ್ನು ಹುಟ್ಟಿಸಿರು

ವನು. || ೫೪ || ಪರಮಾತ್ಮನು ಈ ಸೃಷ್ಟಿಯಲ್ಲಿ ರಾಜನನ್ನೂ ದರಿದ್ರನನ್ನೂ ಒಂದೇ ದೃಷ್ಟಿಯಿಂದ ಸಂರಕ್ಷಿಸುತ್ತಾನೆ. ಆದರೆ ನಮ್ಮ ಪ್ರಾರಬ್ಧವು ಖೊಟ್ಟಿ ಇದ್ದದರಿಂದ ಆದರಂತೆ ಫಲವಾಯಿತು. || ೫೫ || ನಮ್ಮ ಪೂರ್ವ ಜನ್ಮದ ಸುಕೃತ-ದುಷ್ಕೃತಗಳಂತೆ ಈಗ ನಾವು ಸುಖ-ದುಃಖಗಳನ್ನು ಅನುಭವಿಸಬೇಕಾಗುತ್ತದೆ. ಇದು ನಿನಗೆ ಗೊತ್ತದೆ. ಇದರಮೇಲೆ ನಿನಗೆ ನಾನು ಮುಂದೆ ಏನು ಹೇಳಲಿ ? || ೫೬ || ನಮ್ಮ ದೈವವು ಕಡಿಮೆಯಾಗಿರಲು ನೀನು ಮೂರ್ಖತನದಿಂದ ಏನಾದರೂ ಮಾತಾಡುತ್ತೀ, ನಾವು ಏನು ಬಿತ್ತಿರುವೆವೋ ಅದನ್ನು ತಿನ್ನಬೇಕು. ಇದಕ್ಕೆ ನೀನು ಮತ್ತೆ ಏನನ್ನು ಅನ್ನುತ್ತೀ ಹೇಳು. || ೫೭ || ನೀನು ನಮ್ಮ ಪೂರ್ವ ಕರ್ಮದ ಫಲವನ್ನು ವಿಚಾರಿಸದೆ ಅವಿದ್ಯಾ ಮಾಯೆಯಿಂದ ಸುತ್ತಿಕೊಂಡು, ಆ ಯತಿಗಳು ನಮ್ಮ ಆಹಾರವನ್ನು ತಕ್ಕೊಂಡರೆಂದು ಅನ್ನುತ್ತ ಪರಮಾತ್ಮನಿಗೆ ದೋಷಕೊಡುತ್ತೀಯಾ ? || ೫೮ || ಅವರು ನಮ್ಮನ್ನು ಉದ್ಧಾರ ಮಾಡಬೇಕೆಂದೇ ತಿಳಿದು ನಮ್ಮ ಮನೆಗೆ ಭಿಕ್ಷೆಗೆ ಬಂದು ನಮ್ಮ ದಾರಿದ್ರ್ಯವನ್ನು ಕಳೆದರೆಂದು ತಿಳಿಯಬೇಕು. ಮತ್ತು ಕಡೆಗೆ ಅವರೇ ನಮ್ಮನ್ನು ಈ ಭವಸಾಗರದಿಂದ ದಾಟಿಸುವರು ಎಂದು ತಿಳಿಯಬೇಕು. || ೫೯ || ಎಂದು ಹೇಳಿ ಆ ಬ್ರಾಹ್ಮಣನು ಹೆಂಡತಿಯನ್ನು ಸಮಾಧಾನ ಮಾಡಿ ಗುರುಗಳು ಕತ್ತರಿಸಿ ಒಗೆದ ಮೇಲಿನ ಬಳ್ಳಿಯನ್ನು ನದಿಯಲ್ಲಿ ಒಗೆದು, || ೬೦ || ಮನಸ್ಸಿನಲ್ಲಿ— ಮೇಲಿನ ಬಳ್ಳಿಯೇ ಹೋದಮೇಲೆ ನಮ್ಮ ಮನೆಯಮುಂದೆ ಅದರ ಬೇರಾದರೂ ಯಾತಕ್ಕೆಬೇಕು ? ಅದನ್ನೂ ಕಿತ್ತಿ ಒಗೆಯುವೆನೆಂದು ಅಗಿಯಹತ್ತಿದನು. || ೬೧ || ಅಗಿದು ಆ ಬೇರನ್ನು ಮೇಲಕ್ಕೆ ತೆಗೆದಕೂಡಲೆ ಅದರ ಬುಡದಲ್ಲಿ ಹೊನ್ನು ತುಂಬಿದ ಕೊಡವು ಕಾಣಿಸಿತು. ಅದನ್ನು ಕಂಡು ಆವನು ಅತ್ಯಾನಂದದಿಂದ ಅದನ್ನು ಮನೆಯೊಳಗೆ ತೆಗೆದುಕೊಂಡುಹೋಗಿ || ೬೨ || ಹೆಂಡತಿಯನ್ನು ಕರೆದು— ಎಲೈ ಪ್ರಿಯೇ ಕೇಳು, ಈದಿನ ಒಂದು ಆಶ್ಚರ್ಯದ ಸಂಗತಿಯಾಯಿತು, ಎಂದು ಆಕೆಗೆ ಆ ಹೊನ್ನಿನ ಕೊಡವನ್ನು ತೋರಿಸಿ— ಆ ಯತೀಶ್ವರರು ನಮ್ಮಮೇಲೆ ಪ್ರಸನ್ನರಾಗಿ ಆ ಬಳ್ಳಿಯನ್ನು ಕತ್ತರಿಸಿ ಒಗೆದದ್ದರಿಂದ ಆದರ ಬುಡದಲ್ಲಿ ನಮಗೆ ಈ ದ್ರವ್ಯವು ಸಿಕ್ಕಿತು. || ೬೩ || ಆ ಯೋಗೀಶ್ವರರು ಮನುಷ್ಯರಲ್ಲ ! ಅವರು ನಿಶ್ಚಯವಾಗಿ

ಈಶ್ವರಾವತಾರವು. ಈ ನಮ್ಮ ಬಡತನವನ್ನು ಕಳೆಯಬೇಕೆಂದೇ ಅವರು ನಮ್ಮ ಮನೆಗೆ ಬಂದು ನಮಗೆ ದರ್ಶನ ಕೊಟ್ಟರು. ಈಗ ನಾವು ಅವರ ದರ್ಶನಕ್ಕೆ ಹೋಗೋಣ ನಡೆ ಎಂದನು. ॥ ೬೪ ॥ ಆಮೇಲೆ ಬ್ರಾಹ್ಮಣನು ಪೂಜಾಸಾಮಾನ ತಕ್ಕೊಂಡು ಹೆಂಡತಿಯೊಡನೆ ಸಂಗಮದಲ್ಲಿರುವ ಗುರುಗಳಹತ್ತರ ಹೋಗಿ, ಭಕ್ತಿಯಿಂದ ಅವರ ಪೂಜೆ ಮಾಡಿ ಆನಂದದಿಂದ ತನಗೆ ಸುವರ್ಣ ತುಂಬಿದ ಕುಂಭವು ಸಿಕ್ಕ ಸಂಗತಿಯನ್ನು ಹೇಳಿದನು. ॥ ೬೫ ॥ ಆಗ ಶ್ರೀಗುರುಗಳು— ಎಲೈ ಬ್ರಾಹ್ಮಣನೇ, ಈ ಸಂಗತಿಯನ್ನು ನೀನು ಯಾರಿಗೂ ಹೇಳಬೇಡ. ನಿಮ್ಮ ವಂಶದಲ್ಲಿ ಅಖಂಡೈಶ್ವರ್ಯವು ಸ್ಥಿರವಾಗಿರುವದು. ನಮ್ಮನ್ನು ಪ್ರಗಟಮಾಡಿದರೆ ಮಾತ್ರ ಅದು ಹೋದೀತು ॥ ೬೬ ॥ ನೀನು ನಿನ್ನ ಮನೆಯಲ್ಲಿ ಸುಖದಿಂದಿದ್ದು ಪುತ್ರ-ಪೌತ್ರರನ್ನು ಪಡೆದು ಆನಂದ ಹೊಂದು ಎಂದು ವರವನ್ನು ಕೊಟ್ಟರು ॥ ೬೭ ॥ ಈ ಪ್ರಕಾರ ಆ ಬ್ರಾಹ್ಮಣನು ವರವನ್ನು ಪಡೆದು ತನ್ನ ಮನೆಗೆ ಹೋದನು. ಎಲೈ ನಾಮಧಾರಕನೇ, ಗುರುಕೃಪೆಯು ಈ ಪ್ರಕಾರವಾಗಿರುತ್ತದೆ. ಅವರ ದರ್ಶನ ಮಾತ್ರದಿಂದಲೇ ದೈನ್ಯವು ದೂರವಾಗುತ್ತದೆ ॥ ೬೮ ॥ ಗುರುಕೃಪೆಯನ್ನು ಪಡೆದವನಿಗೆ ಬಡತನವು ಬರುವದಿಲ್ಲ. ಕಲ್ಪವೃಕ್ಷವನ್ನು ಆಶ್ರಯಿಸಿದವನ ಮನೆಯಲ್ಲಿ ವಿಘ್ನಗಳು ಹ್ಯಾಗೆ ಬರುವವು ? ॥ ೬೯ ॥ ಆ ಅದೃಷ್ಟಹೀನನಾದವನು ಶ್ರೀಗುರುಗಳನ್ನು ಭಜಿಸಬೇಕು ಆದರಿಂದ ಅವನು ಉದ್ಧಾರವಾಗಿ ಯಾವತ್ತರಿಗೂ ಪೂಜ್ಯನಾಗುವನು. ॥ ೭೦ ॥ ಕೇವಲ ಗುರುಭಕ್ತನಾದವನಿಗೆ ಇಹ-ಪರಗಳಲ್ಲಿ ಸುಖವುಂಟಾಗುವದು. ಅವನ ಮನೆಯಲ್ಲಿ ಅಖಂಡ ಲಕ್ಷ್ಮಿಯು ಪ್ರಾಪ್ತವಾಗಿ ಅವನು ಅಷ್ಟೈಶ್ವರ್ಯದಿಂದ ಆನಂದಪಡುವನು. ॥ ೭೧ ॥ ಎಲೈ ನಾಮಧಾರಕಾ, ಗುರುಮಹಿಮೆಯು ಈ ಪ್ರಕಾರವಾಗಿರುತ್ತದೆ. ಆದ್ದರಿಂದ ನೀನು ಏಕಚಿತ್ತದಿಂದ ಶ್ರೀಗುರುಗಳನ್ನು ಭಜಿಸು, ಅಂದರೆ ಮನೆಯಲ್ಲಿ ಕಾಮಧೇನುವಿದ್ದಂತೆಯೇ ಸರಿ, ಯಾವದಕ್ಕೂ ಕೊರತೆಯಾಗುವದಿಲ್ಲ. ಅತ್ಯಂತ ಸುಖವಾಗುವದು. ॥ ೭೨ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತಿ ಗಂಗಾಧರನು ಹೇಳಿ— ಎಲೈ ಶ್ರೋತೃಗಳೇ

ಮುಂದಿನ ಗುರುಚರಿತ್ರೆಯು ಅಮೃತಪಾನದಂತಿರುವದು. ಅದನ್ನು ವಿಸ್ತಾರದಿಂದ ಹೇಳುವೆನು ಏಕಚಿತ್ತದಿಂದ ಕೇಳಿರಿ ಎಂದು ಅಂದನು. || ೭೩ ||

ಇತಿ ಶ್ರೀಗುರುಚರಿತ್ರ ಪರಮಕಥಾ ಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ವಿವೇಕಸಾರ ಅಯಾಚಿತ ಬ್ರಾಹ್ಮಣ ದೈನ್ಯಹರಣಂನಾಮ ಅಷ್ಟಾದಶೋಽಧ್ಯಾಯಃ || ೧೮ || ಶ್ರೀಗುರು ದತ್ತಾತ್ರೇಯಾರ್ಪಣಮಸ್ತು || ಶ್ರೀ ಗುರುದೇವದತ್ತ ||

— ೧೮ನೇ ಅಧ್ಯಾಯ ಸಮಾಪ್ತ —

---

# ೧೯ನೇಯ ಅಧ್ಯಾಯ

## — ಔದುಂಬರ ವೃಕ್ಷದ ಹಾಗು ಔದುಂಬರ ವೃಕ್ಷ ವರ್ಣನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ಶಿಷ್ಯಶ್ರೇಷ್ಠನಾದ ನಾಮಧಾರಕನು ಸಿದ್ಧರ ಚರಣಕ್ಕೆ ನಮಸ್ಕಾರ ಮಾಡಿ ಕೈಮುಗಿದು ವಿನಯದಿಂದ ॥ ೧ ॥ ಜಯ ಜಯ ಯೋಗೀಶ್ವರನೇ, ಭಕ್ತಜನ ಮನೋಹರನೇ, ಕತ್ತಲೆಯನ್ನೋಡಿಸುವ ಜ್ಯೋತಿ ಸ್ವರೂಪನೇ, ಭವಸಾಗರ ತಾರಕನೇ ॥ ೨ ॥ ನಾನು ಅಜ್ಞಾನವೆಂಬ ಕತ್ತಲೆಯಲ್ಲಿ ನಿದ್ರಿಸಿ ಮದೋನ್ಮತ್ತನಾಗಿದ್ದೆನು. ದಯಾನಿಧಿಯೇ ನೀವು ನನಗೆ ಗುರುಚರಿತ್ರೆ ಎಂಬ ಅಮೃತವನ್ನು ಪಾನಮಾಡಿಸಿದಿರಿ. ॥ ೩ ॥ ಆದರಿಂದ ನನ್ನ ಮನಸ್ಸಿನಲ್ಲಿ ಜ್ಞಾನವೆಂಬ ಸೂರ್ಯೋದಯವಾಯಿತು. ಸ್ವಾಮೀ, ತಮ್ಮ ಕೃಪೆಯಿಂದ ನಾನು ಎಚ್ಚತ್ತೆನು. ॥ ೪ ॥ ಯೋಗೀಶ್ವರನೇ ದಾತಾರನೇ, ದಯಮಾಡಿ ನನಗೆ ಮುಂದಿನ ಕಥೆಯನ್ನು ವಿಸ್ತಾರವಾಗಿ ಹೇಳಬೇಕೆಂದು ಅವರ ಚರಣಕ್ಕೆ ನಮಸ್ಕಾರ ಮಾಡಿದನು. ॥ ೫ ॥

ಈ ಪ್ರಕಾರವಾದ ಶಿಷ್ಯನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು, ಅನುಪಮವಾದ ಗುರುಮಹಿಮೆಯನ್ನು ವಿಸ್ತಾರವಾಗಿ ಹೇಳಹತ್ತಿದರು. ॥ ೬ ॥ ಹ್ಯಾಗಂದರೆ,— ಎಲೈ ಶಿಷ್ಯೋತ್ತಮಾ ನಾಮಧಾರಕಾ, ಗುರುವಿನ ಕಥೆಯನ್ನು ಹೇಳುವೆನು ಕೇಳು. ಶ್ರೀ ಗುರುಗಳು ಔದುಂಬರ ವೃಕ್ಷದ ಬುಡದಲ್ಲಿ ಕೂತಿದ್ದರೆಂಬದನ್ನು ಕೇಳಿರುವಿಯಷ್ಟೇ ? ಎಂದರು. ॥ ೭ ॥ ಆಗ ನಾಮಧಾರಕನು— ಸ್ವಾಮೀ, ಶ್ರೀ ಗುರುಗಳು ಅನೇಕ ಪುಣ್ಯ ವೃಕ್ಷಗಳನ್ನು ಬಿಟ್ಟು ಔದುಂಬರವೃಕ್ಷವನ್ನೇಕೆ ಪ್ರೀತಿಸಿದರು. ॥ ೮ ॥ ಅಶ್ವತ್ಥವೃಕ್ಷವು ಶ್ರೇಷ್ಠವೆಂದು ನಾಲ್ಕು ವೇದಗಳು ಹೇಳುವವು. ಆದರೆ ಶ್ರೀ ಗುರುಗಳು ತಾವು ವಾಸಮಾಡಲಿಕ್ಕೆ ಔದುಂಬರವನ್ನು ಪ್ರೀತಿಸಿದ ಕಾರಣ

ವೇನೆಂಬದನ್ನು ಹೇಳಬೇಕು ಎಂದು ಬಿನ್ನೈಸಿದನು. ॥ ೯ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ಅದರ ಸಮಗ್ರ ವೃತ್ತಾಂತವನ್ನು ಹೇಳುವೆನು ಏಕಚಿತ್ತದಿಂದ ಕೇಳು. ಪೂರ್ವದಲ್ಲಿ ಪರಮಾತ್ಮನು ಹಿರಣ್ಯಕಶ್ಯಪನ ವಧಾರ್ಥವಾಗಿ ನರಸಿಂಹಾವತಾರವನ್ನು ತಕ್ಕೊಂಡನಷ್ಟೇ ? ॥ ೧೦ ॥ ಆಗ ಆ ನರಸಿಂಹನು ಸಿಟ್ಟಿನಿಂದ ತನ್ನ ಉಗುರುಗಳಿಂದ ಆ ದೈತ್ಯನ ಉದರವನ್ನು ಶೀಳಿ, ಒಳಗಿನ ಕರಳನ್ನು ಹೊರಗೆ ತೆಗೆದು ಅದನ್ನು ಹರ್ಷದಿಂದ ಮಾಲೆಯಂತೆ ತನ್ನ ಕೊರಳಲ್ಲಿ ಹಾಕಿಕೊಂಡನು. ॥ ೧೧ ॥ ಆ ದೈತ್ಯನ ಹೊಟ್ಟೆಯಲ್ಲಿ ಸಮುದ್ರದಲ್ಲಿರುವ ವಡವಾಗ್ನಿಯಂತೆ ಪ್ರಖರವಾದ ಕಾಳಕೂಟ ವಿಷವು ಇತ್ತು. ॥ ೧೨ ॥ ಆ ವಿಷವು ನರಸಿಂಹನ ಉಗುರುಗಳಿಗೆ ಹತ್ತಿ ಆತನಿಗೆ ಬಹಳ ಉರುಪು ಬಿತ್ತು. ಎಲೈ ಶಿಷ್ಯನೇ ಕೇಳು. ॥ ೧೩ ॥ ಆಗ ಆ ಉಗುರುಗಳ ಉರುವನ್ನು ಶಾಂತ ಮಾಡಲಿಕ್ಕೆ ಮಹಾಲಕ್ಷ್ಮಿಯು ಅತಿ ಪ್ರೇಮದಿಂದ ಔದುಂಬರ ಫಲಗಳನ್ನು ( ಅತ್ತಿಯಹಣ್ಣುಗಳನ್ನು ) ತಂದಳು ॥ ೧೪ ॥ ಆಗ ನರಸಿಂಹನು, ತನ್ನ ಉಗುರುಗಳು ಶೀತಲವಾಗುವದರದೆಶೆಯಿಂದ ಆ ಹಣ್ಣುಗಳಲ್ಲಿ ತನ್ನ ಉಗುರುಗಳನ್ನು ಊರಿದನು. ಅದರಿಂದ ಆ ವಿಷಾಗ್ನಿಯು ಶಾಂತವಾಯಿತು. ಆಗ ಉಗ್ರ ನರಸಿಂಹನು ಶಾಂತನಾಗಿ ॥ ೧೫ ॥ ಲಕ್ಷ್ಮೀದೇವಿಯನ್ನು ಆಲಿಂಗಿಸಿದನು. ಆಗ ಇಬ್ಬರೂ ಸಂತೋಷಭರಿತರಾದರು. ಆಗ ಶ್ರೀ ನರಸಿಂಹನು ಆ ಔದುಂಬರವನ್ನು ಕುರಿತು— ಎಲೈ ಔದುಂಬರ ವೃಕ್ಷವೇ, ನೀನು ಕಲ್ಪವೃಕ್ಷಕ್ಕೆ ಸಮಾನವಾಗಿ ನಿನ್ನಲ್ಲಿ ಸದಾ ಫಲಗಳುಂಟಾಗಲಿ. ॥ ೧೬ ॥ ಯಾರು ನಿನ್ನನ್ನು ಭಕ್ತಿಯಿಂದ ಸೇವಿಸುವರೋ ಅವರ ಇಚ್ಛೆಗಳು ಪೂರ್ಣವಾಗಲಿ. ನಿನ್ನ ದರ್ಶನದಿಂದ ಅವರಲ್ಲಿದ್ದ ಉಗ್ರವಿಷವು ಶಾಂತವಾಗಲಿ ॥ ೧೭ ॥ ಯಾವ ಮನುಷ್ಯರು ನಿನ್ನನ್ನು ಯಾವ ಯಾವ ಇಚ್ಛೆಯಿಂದ ಸೇವಿಸುವರೋ ಅವರು ಸಕಲ ಪಾಪಗಳಿಂದ ಮುಕ್ತರಾಗಿ ಅವರ ಆಯಾ ಇಚ್ಛೆಗಳು ನಿಶ್ಚಯವಾಗಿ ಸಿದ್ಧಿಸಲಿ. ॥ ೧೮ ॥ ಬಂಜೆ ಸ್ತ್ರೀಯು ನಿನ್ನನ್ನು ಭಕ್ತಿಯಿಂದ ಸೇವಿಸಿದರೆ ಅವಳು ನಿಶ್ಚಯವಾಗಿ ಪುತ್ರನನ್ನು ಪಡೆಯುವಳು. ದರಿದ್ರರು ನಿನ್ನನ್ನು ಸೇವಿಸಿದರೆ ಅವರು ಐಶ್ವರ್ಯವಂತರಾಗುವರು. ॥ ೨೦ ॥ ನಿನ್ನ ನೆರಳು ಬಿದ್ದ ನೀರಿನಲ್ಲಿ ಸ್ನಾನಮಾಡಿದರೆ ಭಾಗೀರಥಿಯಲ್ಲಿ ಸ್ನಾನ ಮಾಡಿದ್ದರಕಿಂತ

ಹೆಚ್ಚು ಪುಣ್ಯ ಬರುವದು. ॥ ೨೧ ॥ ನಿನ್ನ ನೆರಳಿನಲ್ಲಿ ಕೂತು ಯಾರು ಅನುಷ್ಠಾನ ಮಾಡುತ್ತಾರೋ ಅವರಿಗೆ ಅನಂತ ಫಲವಾಗುವದಲ್ಲದೆ ಅವರು ಜ್ಞಾನವಂತರಾಗಿ ಮನಸ್ಸಿನಲ್ಲಿ ಇಚ್ಛಿಸಿದ ಫಲವನ್ನು ಹೊಂದುವರು. ॥ ೨೨ ॥ ನಿನ್ನನ್ನು ಸೇವಿಸಿದವರಿಗೆ ಎಂದೂ ರೋಗಭಯವಿಲ್ಲ. ಅವರ ಬ್ರಹ್ಮಹತ್ಯಾದಿ ಪಾಪಗಳು ನಾಶವಾಗಿ ಅವರು ಪುನೀತರಾಗುವರು. ॥ ೨೩ ॥ ಇನ್ನು ನೀನು ನಿಶ್ಚಯವಾಗಿ ಕಲ್ಪವೃಕ್ಷವಾಗಿರುತ್ತೀ ಯಾವ ಜನರು ನಿನ್ನನ್ನು ಭಕ್ತಿಯಿಂದ ಅಪೇಕ್ಷೆಯಿಂದ ಪೂಜಿಸುತ್ತಾರೋ ಅವರ ಆ ಅಪೇಕ್ಷೆಗಳು ನಿಶ್ಚಯವಾಗಿ ಪೂರ್ಣವಾಗುತ್ತವೆ. ॥೨೪॥ ನಾನು ಲಕ್ಷ್ಮೀಸಹಿತವಾಗಿ ಸಂತೋಷದಿಂದ ನಿನ್ನಲ್ಲಿ ವಾಸಮಾಡುವೆನು ಎಂದು ಶ್ರೀ ನರಸಿಂಹನು ವರವನ್ನು ಕೊಟ್ಟನು. ॥ ೨೫ ॥ ಎಲೈ ನಾಮಧಾರಕನೇ, ಈ ಪ್ರಕಾರ ಔದುಂಬರ ವೃಕ್ಷವು ಕಲಿಯುಗದಲ್ಲಿ ಕಲ್ಪವೃಕ್ಷವಾಗಿದೆ. ಅದರದೆಶೆಯಿಂದ ಉಗ್ರನಾದ ನರಸಿಂಹಮೂರ್ತಿಯು ಶಾಂತನಾದನು. ॥ ೨೬ ॥ ಆದ್ದರಿಂದ ಎಲೈ ನಾಮಧಾರಕಾ, ಶ್ರೀ ಗುರು ನರಸಿಂಹ ಸರಸ್ವತಿಗಳು ನರಸಿಂಹ ಮಂತ್ರವನ್ನು ಜಪಿಸುತ್ತ ಅದರ ಉಗ್ರತ್ವವನ್ನು ಶಾಂತಮಾಡುವದಕ್ಕಾಗಿ ತಾವೂ ಆ ಔದುಂಬರದಲ್ಲಿಯೇ ವಾಸಿಸಿದರು. ॥ ೨೭ ॥ ಶ್ರೀ ಗುರುಗಳು ತಾವು ನರಸಿಂಹ ಮೂರ್ತಿಯ ಅವತಾರವಾದ್ದರಿಂದ ಔದುಂಬರವು ನಿಶ್ಚಯವಾಗಿ ತಮ್ಮ ಸ್ಥಾನವೆಂದು ಆ ಉಗ್ರತೆಯನ್ನು ಶಾಂತಮಾಡುವದಕ್ಕಾಗಿ ಅದರಲ್ಲಿ ವಾಸವಾಗಿದ್ದರು. ॥ ೨೮ ॥ ಔದುಂಬರವು ಸಹಜವಾದ ವೃಕ್ಷವಾಗಿದ್ದರೂ ಅದು ಕಲ್ಪವೃಕ್ಷಕ್ಕೆ ಸಮಾನವಾಗಿ ಕಲ್ಪಿತ ಫಲವನ್ನು ಕೊಡುತ್ತದೆಂದು ಶ್ರೀ ಗುರುಗಳು ವಿಶೇಷವಾಗಿ ಅಲ್ಲಿ ವಾಸಮಾಡಿದರು ॥ ೨೯ ॥ ಚಂದ್ರಮೌಳಿಗಳಾದ ಶ್ರೀ ಗುರುಗಳು ತ್ರೈಮೂರ್ತಿ ಅವತಾರವಾಗಿದ್ದು, ಮನುಷ್ಯದೇಹಧಾರಣ ಮಾಡಿ ಕಲ್ಪವೃಕ್ಷವಾದ ಔದುಂಬರದ ಬುಡದಲ್ಲಿದ್ದು ॥ ೩೦ ॥ ಭಕ್ತರನ್ನು ಉದ್ಧಾರ ಮಾಡುವದಕ್ಕೂ, ಯಾವತ್ತೂ ತೀರ್ಥಗಳನ್ನು ಪಾವನ ಮಾಡುವದಕ್ಕೂ ಭೂಮಿಯಮೇಲೆ ಸಂಚರಿಸುತ್ತಿದ್ದರು. ॥ ೩೧ ॥ ಎಲೈ ನಾಮಧಾರಕನೇ, ಈ ಪ್ರಕಾರ ಶ್ರೀ ಗುರುಗಳು ಔದುಂಬರ ಬುಡದಲ್ಲಿ ಅಹೋರಾತ್ರಿ ಗೌಪ್ಯವಾಗಿದ್ದರು. ಆದರೆ ಅಲ್ಲಿ ಮಧ್ಯಾಹ್ನದಲ್ಲಿ ಒಂದು ಸಮಾರಂಭವು ನಡೆಯುತ್ತಿತ್ತು, ಅದನ್ನು ನಿನಗೆ ಹೇಳುವೆನು ಕೇಳು. ॥ ೩೨ ॥

ಅಮರೇಶ್ವರನ ಸನ್ನಿಧಿಯಲ್ಲಿ ೬೪ ಮಂದಿ ಯೋಗಿನಿಯರು ವಾಸಿಸುತ್ತಿದ್ದರೆಂದು ಈ ಮೊದಲು ನಿನಗೆ ಹೇಳಿದ್ದೇನೆ ಅವರು ನಿತ್ಯ ಮಧ್ಯಾಹ್ನ ಸಮಯದಲ್ಲಿ ಶ್ರೀಗುರುಗಳನ್ನು ಪೂಜಿಸುವದಕ್ಕೋಸ್ಕರ ನಿತ್ಯ ಅವರ ಹತ್ತಿರ ಬರುತ್ತಿದ್ದರು || ೩೩ || ಅವರು ಬಂದು ಭಕ್ತಿಯಿಂದ ನಮಸ್ಕರಿಸಿ ಅವರನ್ನು ತಮ್ಮ ಮಂದಿರಕ್ಕೆ ಕರೆದೊಯ್ದು ಗಂಧ ಪುಷ್ಪಾದಿ ಸುಗಂಧ ಪದಾರ್ಥಗಳಿಂದ ವಿಧಿಪೂರ್ವಕವಾಗಿ ಪೂಜಿಸಿ, ಅವರಿಗೆ ಮಿಷ್ಟಾನ್ನ ಭೋಜನ ಮಾಡಿಸುತ್ತಿದ್ದರು || ೩೪ || ಶ್ರೀಗುರುಗಳು ಅವರ ಮನೆಯಲ್ಲಿ ಭೋಜನ ಮಾಡಿ ತಿರುಗಿ ಆ ಔದುಂಬರದ ಕೆಳಗೆ ಬರುತ್ತಿದ್ದರು. ಹೀಗೆ ನಡೆದಿರಲು ಒಂದಾನೊಂದು ದಿವಸ ಒಬ್ಬ ಬ್ರಾಹ್ಮಣನು ಶ್ರೀಗುರುಗಳನ್ನು ಕಂಡು ಆಶ್ಚರ್ಯಬಟ್ಟು || ೩೫ || ಮನಸ್ಸಿನಲ್ಲಿ— ಇವರೆಂಥ ಚಮತ್ಕಾರವಾದ ಯತಿಗಳು ? ಇವರು ಒಂದು ದಿವಸವಾದರೂ ಈ ಪ್ರಕಾರ ನಮ್ಮ ಗ್ರಾಮದಲ್ಲಿ ಭಿಕ್ಷೆಗೆ ಬರುವದಿಲ್ಲ ಯಾವಾಗಲೂ ಅರಣ್ಯದಲ್ಲಿ ವಾಸಿಸುವರಲ್ಲಾ ! ಇವರು ಯಾವ ರೀತಿಯಿಂದ ಕಾಲ ಕಳೆಯುವರು ? || ೩೬ || ಒಬ್ಬ ಮನುಷ್ಯನನ್ನಿಟ್ಟು ಈ ಯತೀಶ್ವರರ ಸಂಗತಿಯನ್ನು ತಿಳಕೊಂಡು ಇವರಿಗೆ ನಿತ್ಯ ಭಿಕ್ಷೆ ಎಲ್ಲಿಂದ ಬರುತ್ತದೆಂಬ ಇವರ ಅಂತವನ್ನು ನೋಡೋಣ || ೩೭ || ಎಂದು ಮನಸ್ಸಿನಲ್ಲಿ ಯೋಚಿಸಿ ಕೃಷ್ಣಾ-ಪಂಚಗಂಗಾ ಸಂಗಮಕ್ಕೆ ಹೋದನು. ಆದರೆ ಮಧ್ಯಾಹ್ನದಲ್ಲಿ ಅವನ ಮನಸ್ಸಿನಲ್ಲಿ ಒಂದು ತರದ ಭಯವು ಹುಟ್ಟಿತು || ೩೮ || ಎಲೈ ನಾಮಧಾರಕನೇ, ಯಾರು ಶ್ರೀಗುರುಗಳ ಅಂತವನ್ನು ನೋಡಬೇಕೆನ್ನುತ್ತಾರೋ ಅವರು ಯಮನ ಹಾದಿಯನ್ನ ಹಿಡಿಯುತ್ತಾರೆ ಮತ್ತು ಆ ಮನುಷ್ಯನು ಮತ್ತು ಈ ಪ್ರಕಾರ ಇದ್ದ ಮದೋನ್ಮತ್ತರಾದ ಬ್ರಾಹ್ಮಣರು ಅಧೋಗತಿಯನ್ನು ಹೊಂದುತ್ತಾರೆ || ೩೯ || ಈ ಪ್ರಕಾರ ಆ ಬ್ರಾಹ್ಮಣನಿಗೆ ಭಯಹುಟ್ಟಲು ಅವನು ತಿರುಗಿ ತನ್ನ ಮನೆಗೆ ಹೋದನು. ಆಗ ಒಬ್ಬ ಅಂಬಿಗರವನು ಮಾತ್ರ ಆ ನದಿಯ ದಂಡೆಯಲ್ಲಿರುವ ತನ್ನ ಹೊಲವನ್ನು ಕಾಯುತ್ತಿದ್ದನು. || ೪೦ || ಅವನು ಔದುಂಬರದ ಬುಡದಲ್ಲಿರುವ ಗುರುಗಳನ್ನು ನೋಡಿದನು. ಅಷ್ಟರಲ್ಲಿ ಆ ಯೋಗಿನಿಯರು ಪೂಜೆಗಾಗಿ ಶ್ರೀಗುರುಗಳನ್ನು ಕರೆಯಲಿಕ್ಕೆ ನದಿಯೊಳಗಿಂದ ಬಂದರು. ಅದನ್ನು ಕಂಡು ಅವನು— ಇವರು ನದಿಯ ಮಧ್ಯದಲ್ಲಿ ಹ್ಯಾಗೆ ಬಂದರು ?

ನೀರಿನಲ್ಲಿ ಮಾರ್ಗವು ಹ್ಯಾಗೆ ಆಯಿತು ? || ೪೧ || ಎಂದು ಅವನು ಆಶ್ಚರ್ಯಬಟ್ಟು— ಇವರೆಂಥ ಮಹಿಮೆಯುಳ್ಳ ಯತೀಶ್ವರರು ? ಇವರನ್ನು ಕಂಡು ನದಿಯು ಎರಡು ಭಾಗವಾಯಿತಲ್ಲಾ ! ಇವರು ಗಂಗೆಯೊಳಗೆ ಹ್ಯಾಗೆ ಹೋದರು ? ಎಂದೆನ್ನುತ್ತಿದ್ದನು. || ೪೨ || ಅತ್ತ ಯೋಗಿನಿಯರು ಶ್ರೀಗುರುಗಳಿಗೆ ನಮಿಸಿ ಅವರನ್ನು ಕರಕೊಂಡು ತಮ್ಮ ಸ್ಥಾನಕ್ಕೆ ಹೋಗಿ ಪೂಜೆಯನ್ನು ಮಾಡಿ ಭಿಕ್ಷೆ ಮಾಡಿಸಿದರು. ಶ್ರೀಗುರುಗಳು ಅಲ್ಲಿ ಭಿಕ್ಷೆಯನ್ನು ತಕ್ಕೊಂಡು, ಆ ನದಿಯೊಳಗಿಂದ ಹಾದು ತಿರುಗಿ ಹೊರಗೆ ಬಂದರು. || ೪೩ || ಆಗ ಅಂಬಿಗನು ಇದನ್ನೆಲ್ಲ ನೋಡುತ್ತ— ಎಂಥ ಆಶ್ಚರ್ಯವಾಯಿತಲ್ಲಾ ! ಈ ಯತೀಶ್ವರರು ನಿಶ್ಚಯವಾಗಿ ಈಶ್ವರನ ಅವತಾರವೆಂದು ತಿಳಿದು, ಆ ಯೋಗಿನಿಯರು ಇವರನ್ನು ಪೂಜಿಸುತ್ತಾರೆ ಎಂದು ಮನಸ್ಸಿನಲ್ಲಿ ಅಂದು ಸುಮ್ಮನಾದನು. || ೪೪ || ಮರುದಿವಸ ಎಂದಿನಂತೆ ಆ ಯೋಗಿನಿಯರು ಆರತಿಯನ್ನು ತಕ್ಕೊಂಡು ಬಂದು, ಶ್ರೀಗುರುಗಳಿಗೆ ನಮಸ್ಕಾರ ಮಾಡಿ ಆರತಿಯನ್ನು ಮಾಡಿದರು. || ೪೫ || ಆಗ ಶ್ರೀಗುರುಗಳು ಆ ಯೋಗಿನಿಯರ ಸಹಿತವಾಗಿ ಪುನಃ ನದಿಯ ಪ್ರವಾಹದೊಳಗೆ ಹೋಗಲಿಕ್ಕೆ ಹೊರಟರು. ಇದನ್ನು ನೋಡುತ್ತ ನಿಂತ ಆ ಅಂಬಿಗನು ತಾನೂ ಅವರ ಸಂಗಡ ನಡೆದನು. || ೪೬ || ಶ್ರೀಗುರುಗಳು ನದಿಯತೀರಕ್ಕೆ ಹೋದಕೂಡಲೆ, ಆ ನದಿಯ ನೀರು ಎರಡು ಭಾಗವಾಯಿತು. ಮತ್ತು ಆ ನದಿಯ ಮಧ್ಯದಲ್ಲಿ ರತ್ನಖಚಿತವಾದ ಗೋಪುರಗಳಿಂದ ಒಪ್ಪುವ ಒಂದು ನಗರವು ಕಾಣಿಸಿತು. || ೪೭ || ಅದು ಸೂರ್ಯನಂತೆ ಪ್ರಕಾಶಮಾನವಾಗಿ ಅಮರಾವತಿಗೆ ಸಮಾನವಾಗಿತ್ತು. ಗುರುಗಳು ಹೋದಕೂಡಲೆ ಆ ಪಟ್ಟಣದ ಯಾವತ್ತು ಯೋಗಿನಿಯರು ಆರತಿಯನ್ನು ತಂದರು. ||೪೮|| ಆಮೇಲೆ ಎಲ್ಲರೂ ಗುರುಗಳಿಗೆ ಆರತಿಯನ್ನು ಮಾಡಿ ಅವರನ್ನು ತಮ್ಮ ಮನೆಗೆ ಕರಕೊಂಡು ಹೋಗಿ, ರತ್ನಖಚಿತವಾದ ಸಿಂಹಾಸನದಲ್ಲಿ ಕೂಡ್ರಿಸಿದರು. || ೪೯ || ಬಳಿಕ ಷೋಡಶೋಪಚಾರ ವಿಧಿಯಿಂದ ಅವರ ಪೂಜೆಯನ್ನು ಮಾಡಿದರು. ಆಗ ಅವರು ಪ್ರತ್ಯಕ್ಷ ಈಶ್ವರನಂತೆ ಕಂಡರು. ಆಮೇಲೆ ಆ ಯೋಗಿನಿಯರು ಷಡ್ರಸೋಪೇತವಾದ ಪಕ್ವಾನ್ನಗಳಿಂದ ಭಿಕ್ಷೆಯನ್ನು ಮಾಡಿಸಿದರು. || ೫೦ || ಈ ಪ್ರಕಾರ ಪೂಜಾ ಭಿಕ್ಷಾದಿಗಳು ಮುಗಿದಕೂಡಲೇ

ಶ್ರೀಗುರುಗಳು ಆ ಮನುಷ್ಯನನ್ನು ನೋಡಿ— ಎಲೈ ನೀನು ಇಲ್ಲಿಗ್ಯಾಕೆ ಬಂದಿ? ಎಂದು ಕೇಳಿದರು. ಆಗ ಅವನು ವಿನಯದಿಂದ— ಸ್ವಾಮೀ, ನಾನು ಸಹಜವಾಗಿ ತಮ್ಮ ದರ್ಶನಕ್ಕೆ ಬಂದೆನು. ॥ ೫೧ ॥ ಎಂದು ಹೇಳಿ ಅನನ್ಯ ಭಕ್ತಿಯಿಂದ ಅವರಿಗೆ ಶರಣು ಹೋಗಿ ತಲ್ಲೀನಮನಸ್ಕನಾಗಿ— ಸ್ವಾಮೀ, ಗಿರಿಜಾರಮಣನೇ, ನೀವೇ ತ್ರೈಮೂರ್ತಿ ಅವತಾರವು ॥ ೫೨ ॥ ನಾನು ಈ ಸಂಸಾರಮಾಯೆಯಲ್ಲಿ ಸಿಕ್ಕದ್ದರಿಂದ ನನಗೆ ನಿಮ್ಮ ಸ್ವರೂಪ ಜ್ಞಾನವಾಗಲಿಲ್ಲ. ನೀವು ಭವಸಮುದ್ರವನ್ನು ದಾಟಿಸುವಂಥವರಾಗಿದ್ದೀರಿ. ಸ್ವಾಮೀ ತಾವು ನನ್ನನ್ನು ಉದ್ಧರಿಸಬೇಕು. ॥ ೫೩ ॥ ನೀವು ಜಗದುದ್ಧಾರಕರೆಂದು ಭೂಮಿಯಲ್ಲಿ ಅವತರಿಸಿ, ಅಜ್ಞಾನವೆಂಬ ಕತ್ತಲೆಗೆ ಜ್ಯೋತಿ ಸ್ವರೂಪರಾಗಿರುತ್ತೀರಿ. ॥ ೫೪ ॥ ನಿಮ್ಮ ದರುಶನ ಮಾಡಿದವರ ಸರ್ವಾಭೀಷ್ಟಗಳು ಸಾಧಿಸುವವು. ಮತ್ತು ತತ್ಕ್ಷಣವೇ ಅವರಿಗೆ ಇಹ-ಪರಗಳಲ್ಲಿ ಸುಖವಾಗುವದು. ॥ ೫೫ ॥ ಎಂದು ನಾನಾರೀತಿಯಾಗಿ ಸ್ತೋತ್ರ ಮಾಡಿದನು. ಆಗ ಶ್ರೀಗುರುಗಳು ಸಂತೋಷದಿಂದ ಅವನಿಗೆ ಅಭಯ ಕೊಟ್ಟು— ॥ ೫೬ ॥ ಎಲೈ ಮನುಷ್ಯನೇ, ಇನ್ನು ನಿನ್ನ ಬಡತನವು ಹೋಯಿತು. ಇನ್ನು ನೀನು ಮನಸ್ಸಿನಲ್ಲಿ ಏನೇನು ಇಚ್ಛಿಸುತ್ತೀಯೋ, ಅವೆಲ್ಲವುಗಳನ್ನು ಹೊಂದುತ್ತೀ. ॥ ೫೭ ॥ ಈಗ ನೀನು ನೋಡಿದ್ದನ್ನು ಮಾತ್ರ ಯಾರಿಗೂ ಹೇಳಬಾರದು. ಯಾವ ದಿವಸ ನೀನು ಇದನ್ನು ಪ್ರಗಟಮಾಡುತ್ತೀಯೋ ಆಕೂಡಲೆ ನಿನಗೆ ಮರಣ ಬರುವದು. ॥ ೫೮ ॥ ಎಂದು ಹೇಳಿ ಶ್ರೀಗುರುಗಳು ಆ ಅಂಬಿಗನ ಸಹಿತವಾಗಿ ಆ ಔದುಂಬರ ವೃಕ್ಷದ ಹತ್ತರ ಬಂದರು ॥ ೫೯ ॥ ಆಮೇಲೆ ಅವನು ಗುರುಗಳ ಆಜ್ಞೆಯನ್ನು ಹೊಂದಿ ತನ್ನ ಹೊಲದ ಹತ್ತರ ಹೋದನಂತರ ಅವನಿಗೆ ರೇವು ಸಿಕ್ಕಿತು. ॥ ೬೦ ॥ ಆಮೇಲೆ ಅವನು ಜ್ಞಾನವಂತನಾಗಿ ನಿತ್ಯ ಗುರುಸೇವೆಯನ್ನು ಮಾಡುತ್ತ, ಪುತ್ರ-ಪೌತ್ರರಿಂದ ಧನ್ಯನಾಗಿ ಆನಂದದಿಂದಿರುತ್ತ ॥ ೬೧ ॥ ನಿತ್ಯವೂ ಭಕ್ತಿಯಿಂದ ಶ್ರೀಗುರುಗಳಿಗೆ ನಮುಸ್ಕರಿಸುತ್ತ ಹೆಂಡತಿಯೊಡನೆ ಏಕಚಿತ್ತದಿಂದ ಸೇವೆ ಮಾಡುತ್ತಿದ್ದನು. ॥ ೬೨ ॥ ಹೀಗಿರಲು ಒಂದು ದಿವಸ ಮಾಘಶುದ್ಧ ಹುಣ್ಣಿವೆಯು ಬಂತು. ಆಗ ಆ ಭಕ್ತನು ಗುರುಗಳಿಗೆ ವಿನಯದಿಂದ ವಂದಿಸಿ— ॥ ೬೩ ॥ ಸ್ವಾಮೀ, ಜಗದ್ಗುರುವೇ, ವಿದ್ವಜ್ಜನರು ಪ್ರಯಾಗದಲ್ಲಿ

ಮಾಘಸ್ನಾನವು ಶ್ರೇಷ್ಠವೆಂದೂ ಕಾಶೀ ಕ್ಷೇತ್ರವು ಶ್ರೇಷ್ಠವೆಂದೂ ಹೇಳುವರು. || ೧೪ || ಇವುಗಳಲ್ಲಿ ಯಾವದು ದೊಡ್ಡದೆಂದು ಬುದ್ಧಿಹೀನನಾದ ನನಗೆ ತಿಳಿಯುವದಿಲ್ಲ. ಸ್ವಾಮಿಗಳಾದ ತಾವು ನನ್ನಮೇಲೆ ಕೃಪಾಮಾಡಿ ಹೇಳಿರಿ. ಎಂದು ಬೇಡಿಕೊಂಡನು. || ೧೫ || ಆಗ ಶ್ರೀಗುರುಗಳು— ಎಲೈ ಭಕ್ತನೇ ಕೇಳು. ಈ ಪಂಚಗಂಗಾಸಂಗಮ ಸ್ಥಾನವೇ ನಿಜವಾದ ಪ್ರಯಾಗವೆಂದೂ, ಈ ಗುರುಸ್ಥಳವೇ ಶ್ರೀ ಕಾಶೀಕ್ಷೇತ್ರವೆಂದೂ ತಿಳಿ. || ೧೬ || ಕೊಲ್ಹಾಪುರವು ದಕ್ಷಿಣಪ್ರಯಾಗಕ್ಕೆ ಸಮಾನವು. ಇಲ್ಲಿಯೇ ಈ ಮೂರೂಸ್ಥಳಗಳೂ ಮನೋಹರವಾಗಿರುತ್ತವೆ ಒಂದುವೇಳೆ ನೀನು ನೋಡುತ್ತಿದ್ದರೆ ನಿನಗೆ ಪ್ರತ್ಯಕ್ಷವಾಗಿ ತೋರಿಸುವೆವು ಈಗ ಹೊರಡು || ೧೭ || ಎಂದು ತಾವು ವ್ಯಾಘ್ರಾಸನದಲ್ಲಿ ಕುಳಿತು—ಎಲೈ ಭಕ್ತನೇ, ನೀನು ಈ ವ್ಯಾಘ್ರಾಸನವನ್ನು ಗಟ್ಟಿಯಾಗಿ ಹಿಡಿ ಎಂದು ಹೇಳಿ ಶ್ರೀಗುರುಗಳು ಕೂಡಲೇ ಮನೋವೇಗದಿಂದ ಆದಿನ ಪ್ರಾತಃಕಾಲದಲ್ಲಿ ಪ್ರಯಾಗಕ್ಷೇತ್ರಕ್ಕೆ ಹೋಗಿ || ೧೮ || ಅಲ್ಲಿ ಸ್ನಾನ ಮಾಡಿ, ಮಧ್ಯಾಹ್ನಕ್ಕೆ ಕಾಶಿಗೆ ಹೋಗಿ, ಅಲ್ಲಿ ವಿಶ್ವನಾಥನನ್ನು ತೋರಿಸಿ, ಹಾಗೆಯೇ ಗಯೆಗೆ ಹೋದರು. || ೧೯ || ಈಪ್ರಕಾರ ಮೂರುಸ್ಥಳಗಳ ಯಾತ್ರೆಮಾಡಿ ತಿರುಗ ಅಸ್ತಮಾನಕ್ಕೆ ಸರಿಯಾಗಿ ಕೃಷ್ಣಾ–ಪಂಚಗಂಗಾ ಸಂಗಮಕ್ಕೆ ಬಂದರು. ಈ ಪ್ರಕಾರ ಆ ಮನುಷ್ಯನು ಅದೇ ಸ್ಥಳದಲ್ಲಿ ಮೂರು ಸ್ಥಾನಗಳನ್ನು ನೋಡುತ್ತ ಆಶ್ಚರ್ಯಚಕಿತನಾದನು. ||೨೦|| ಆಗ ವಿಶ್ವನಾಟಕ ಗುರುಮೂರ್ತಿಯು ಮನಸ್ಸಿನಲ್ಲಿ— ಇಲ್ಲಿ ನಮ್ಮ ಕೀರ್ತಿಯು ಪ್ರಗಟವಾಯಿತು. ಆದಕಾರಣ ನಾವು ಈಗ ಇಲ್ಲಿಯೇ ಗೌಪ್ಯವಾಗಿರಬೇಕೋ ಹ್ಯಾಗೆ ಎಂದು ವಿಚಾರಿಸಹತ್ತಿದರು. || ೨೧ || ಈ ಪ್ರಕಾರ ವಿಚಾರಿಸಿ ಅದೇ ಸ್ಥಳದಲ್ಲಿ ಗುಪ್ತವಾಗಿ ಬಳಿಕ ಅಮರೇಶ್ವರನ ಅಪ್ಪಣೆಯನ್ನು ಕೇಳಿ ಅಲ್ಲಿಂದ ಬೇರೆಕಡೆಗೆ ಹೊರಡಲಿಕ್ಕೆ ಸಿದ್ಧರಾದರು. || ೨೨ || ಆಗ ಆ ೬೪ ಮಂದಿ ಯೋಗಿನಿಯರು ಬಂದು ಕರುಣಾ ಸ್ವರದಿಂದ— ಸ್ವಾಮೀ, ನಮ್ಮನ್ನು ಇಲ್ಲಿ ಬಿಟ್ಟು ತಾವು ಎಲ್ಲಿಗೆ ಹೋಗುವಿರಿ ? || ೨೩ || ನಿತ್ಯ ತಮ್ಮ ದರ್ಶನದಿಂದ ನಮ್ಮ ತಾಪತ್ರಯಗಳು ಕ್ಷಣದಲ್ಲಿ ನಾಶವಾಗುವವು. ಸ್ವಾಮೀ, ಅನ್ನಪೂರ್ಣೆಯು ನಿಮ್ಮ ವಶಳಾಗಿರುವಳು ಅಂದಮೇಲೆ ಇನ್ನು ನಾವು ಇಲ್ಲಿ ಹ್ಯಾಗೆ ಇರೋಣ ? || ೨೪ || ಎಂದು ಭಕ್ತಿಯಿಂದ ವಿನಂತೀ ಮಾಡಿಕೊಂಡರು. ಆಗ ಭಕ್ತವತ್ಸಲ

ರಾದ ಶ್ರೀ ಗುರುಗಳು ಸಂತೋಷದಿಂದ ಅವರಿಗೆ ವರವನ್ನು ಕೊಟ್ಟರು. ॥ ೭೫ ॥ ಎಲೈ ಯೋಗಿನಿಯರೇ, ನಾನು ಸದಾ ಪ್ರಗಟನಾಗಿ ಈ ಔದುಂಬರದ ಪೂರ್ವ ಭಾಗದಲ್ಲಿರುವೆನು. ನಮ್ಮ ಮುಖ್ಯ ಸ್ಥಾನವು ಇಲ್ಲಿಯೇ ಇರುತ್ತದೆ. ॥ ೭೬ ॥ ನೀವೂ ಈ ಅಮರಪುರದ ಪಶ್ಚಿಮ ತೀರದಲ್ಲಿ ಈ ಔದುಂಬರದಲ್ಲಿಯೇ ವಾಸವಾಗಿರಿ. ಈ ಔದುಂಬರದಲ್ಲಿಯೇ ನಿಶ್ಚಯವಾಗಿ ಅನ್ನಪೂರ್ಣೆಯನ್ನು ಸ್ಥಾಪಿಸುವೆನು. ॥ ೭೭ ॥ ಈ ಔದುಂಬರವು ಕಲ್ಪ ವೃಕ್ಷಕ್ಕೆ ಸಮಾನವು! ಆದ್ದರಿಂದ ನೀವು ಇಲ್ಲಿಯೇ ಸ್ಥಿರವಾಗಿ ವಾಸಮಾಡಿರಿ. ಅಮರಪುರದ ಪಶ್ಚಿಮತೀರ ಗ್ರಾಮವಾದ ನರಸೋಬವಾಡಿಯೇ ನಮ್ಮ ವಾಸಸ್ಥಾನವೆಂದು ತಿಳಿಯಿರಿ. ॥ ೭೮ ॥ ಈ ಸ್ಥಾನವು ಬಹು ಪ್ರಖ್ಯಾತವಾಗುವದು. ಸಮಸ್ತ ಜನರು ಈ ಔದುಂಬರವನ್ನು ಪೂಜಿಸಿ, ತೀವ್ರವಾಗಿ ತಮ್ಮ ಇಚ್ಛೆಯ ಫಲ ವನ್ನು ಹೊಂದುವರು. ನೀವು ಅವರಿಗೆ ಸಹಾಯ ಮಾಡಬೇಕು. ॥ ೭೯ ॥ ಇನ್ನು ಮೇಲೆ ನಾವು ಇಲ್ಲಿ ಗುಪ್ತ ರಾಗಿ ನಮ್ಮ ಪಾದುಕೆಗಳನ್ನಿಡುವೆವು. ನಿಮ್ಮನ್ನು ಕೂಡಿಕೊಂಡಿರುವ ಈ ಔದುಂಬರವನ್ನು ನಮ್ಮ ಮನೋ ಹರ ಪಾದುಕೆಗಳನ್ನೂ ಯಾರು ನಿತ್ಯ ಭಕ್ತಿಯಿಂದ ಪೂಜಿಸುವರೋ ಅವರ ಇಚ್ಛೆಗಳು ತೀವ್ರವಾಗಿ ಪೂರ್ಣವಾಗು ವವು. ॥ ೮೦ ॥ ಇಲ್ಲಿ ಅನ್ನಪೂರ್ಣೆಯು ವಾಸಿಸುತ್ತಿರುವಳು. ನಿತ್ಯ ಆರಾಧನಾ ಮಾಡಿದರೆ ಆದರಿಂದ ಅವರ ಇಚ್ಛೆಗಳು ಪೂರ್ಣವಾಗಿ ಚತುರ್ವಿಧ ಪುರುಷಾರ್ಥಗಳೂ ಸಿದ್ಧಿಸುವವು. ॥ ೮೧ ॥ ಯಾವ ಸ್ತ್ರೀಯು ಇಲ್ಲಿರುವ ಪಾಪವಿನಾಶತೀರ್ಥ, ಕಾಮ್ಯತೀರ್ಥ, ಸಿದ್ಧತೀರ್ಥಗಳಲ್ಲಿ ಸ್ನಾನಮಾಡಿ, ನೀವು ಸಹಿತವಾದ ಈ ಔದುಂಬರಕ್ಕೆ ಏಳುಸಾರೆ ಸ್ನಾನಮಾಡಿಸಿ ಪೂಜಿಸುತ್ತಾರೋ ॥ ೮೨ ॥ ಆಕೆಯು ಅರವತ್ತು ವರುಷದ ಬಂಜೆಯಾದರೂ ಶತಾ ಯುಷ್ಯನಾದ ಪುತ್ರನನ್ನು ಪಡೆಯುವಳು. ಆ ತೀರ್ಥಗಳ ಸ್ನಾನ ಮಾತ್ರದಿಂದಲೇ ಬ್ರಹ್ಮಹತ್ಯಾದಿ ಪಾತಕಗಳು ನಾಶವಾಗುವವು. ॥ ೮೩ ॥ ಸೂರ್ಯ-ಚಂದ್ರ ಗ್ರಹಣಗಳಲ್ಲಿಯೂ, ಅಮವಾಸ್ಯಾ ಸಂಕ್ರಮಣಗಳಲ್ಲಿಯೂ ಇಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ಅನಂತ್ಯ ಪುಣ್ಯ ಬರುವದು. ॥ ೮೪ ॥ ಸೋಮವಾರ ಅಮಾವಾಸ್ಯೆಯಲ್ಲಿಯೂ ವ್ಯತೀಪಾತಾದಿ ಪರ್ವಣಿಗಳಲ್ಲಿಯೂ ಇಲ್ಲಿ ಸ್ನಾನಮಾಡಿದರೆ ಎಷ್ಟು ಫಲಬರುತ್ತದೆಂಬದನ್ನು ಶ್ರೀ ಗುರುಗಳು ಹೇಳು

ತ್ತಾರೆ. ಎಲೈ ಶ್ರೋತೃಗಳೇ ಕೇಳಿರಿ. ‖ ೮೫ ‖ ಸುವರ್ಣ ಕೋಡುಗಳಿಂದಲೂ ಬೆಳ್ಳಿಯ ಖುರಗಳಿಂದಲೂ ಅಲಂಕರಿಸಿದ ಸಾವಿರಾರು ಕಪಿಲಾಗೋಗಳನ್ನು ಗಂಗಾತೀರದಲ್ಲಿ ಬ್ರಾಹ್ಮಣರಿಗೆ ದಾನಕೊಟ್ಟಷ್ಟು ಫಲವು ಇಲ್ಲಿಯ ಸ್ನಾನದಿಂದ ಬರುವದು. ‖ ೮೬ ‖ ಔದುಂಬರ ಛಾಯೆಯಲ್ಲಿ ಭಕ್ತಿಭಾವದಿಂದ ಒಬ್ಬ ಬ್ರಾಹ್ಮಣನಿಗೆ ಊಟಕ್ಕೆ ಹಾಗದರೆ ಕೋಟಿವಂದಿ ಬ್ರಾಹ್ಮಣರಿಗೆ ಊಟಕ್ಕೆ ಹಾಕಿದಷ್ಟು ಪುಣ್ಯ ಬರುವದು ‖ ೮೭ ‖ ಮತ್ತು ಈ ಔದುಂಬರದ ಬುಡಕ್ಕೆಕೂತು ನಿರ್ಮಲ ಮನಸ್ಸಿನಿಂದ ಜಪ ಮಾಡಿದರೆ ಮತ್ತು ಹೋಮಹವನಾದಿಗಳನ್ನು ಮಾಡಿದರೆ ಕೋಟಿ ಪಟ್ಟು ಫಲವು ಬರುವದು ‖ ೮೮ ‖ ಹಾಗು ಔದುಂಬರದ ಬುಡಕ್ಕೆ ಕೂತು ಹನ್ನೊಂದುಸಾರೆ ರುದ್ರವನ್ನು ಜಪಿಸಿ ಮಾನಸ ಪೂಜೆ ಮಾಡಿದರೆ ಅತಿ ರುದ್ರದಷ್ಟು ಪುಣ್ಯ ಬರುವದು. ‖ ೮೯ ‖ ದಿನತುಂಬಿದ ಗರ್ಭಿಣಿ ಸ್ತ್ರೀಯು ತುಂಬಿದ ಕೊಡವನ್ನು ಹೊತ್ತುಕೊಂಡು ನಡೆಯುವಷ್ಟು ಮಂದಗತಿಯಿಂದ ಔದುಂಬರಕ್ಕೆ ಪ್ರದಕ್ಷಿಣೆ ಹಾಕಿದರೆ ಅನಂತಪುಣ್ಯ ಬರುವದಲ್ಲದೆ, ಹೆಜ್ಜೆಜ್ಜಿಗೆ ವಾಜಪೇಯ ಯಜ್ಞದ ಫಲವು ಬರುವದು. ‖ ೯೦ ‖ ಈ ಪ್ರಕಾರ ಪ್ರದಕ್ಷಿಣೆ ಹಾಕುತ್ತ ಎರಡು ಅಥವಾ ನಾಲ್ಕು ಪ್ರದಕ್ಷಿಣೆ ಮಾಡಿ ಒಂದು ನಮಸ್ಕಾರ ಮಾಡಬೇಕು, ಅದರಿಂದ ಅಪರಂಪಾರ ಪುಣ್ಯ ಬರುವದು. ‖ ೯೧ ‖ ಕುಷ್ಠರೋಗಿಯೂ ಅಂಗಹೀನನೂ ಲಕ್ಷಸಾರೆ ಪ್ರದಕ್ಷಿಣೆ ಹಾಕಿದರೆ ಅವನ ದೇಹವು ದೇವಸಮಾನವಾಗುವದು ‖ ೯೨ ‖ ಎಲೈ ಯೋಗಿನಿಯರೇ, ಈ ಪ್ರಕಾರವಾದ ಸ್ಥಾನವು ಮನೋಹರವಾದದ್ದಿರುತ್ತದೆ. ಮತ್ತು ಇಲ್ಲಿರುವ ಸಹಜವಾದ ಔದುಂಬರ ವೃಕ್ಷವು ಕಲ್ಪವೃಕ್ಷಕ್ಕೆ ಸಮಾನವಾಗಿರುವದು. ನೀವು ಇಲ್ಲಿಯೇ ವಾಸಮಾಡಿರಿ, ಇನ್ನು ನನಗೆ ಹೋಗಲಿಕ್ಕೆ ಅಪ್ಪಣೆ ಕೊಡಿರಿ ಎಂದರು. ‖ ೯೩ ‖ ಆಗ ಆ ಯೋಗಿನಿಯರು ಹಾಗೇ ಆಗಲೆಂದು ಕೈಮುಗಿದರು. ಎಲೈ ನಾಮಧಾರಕನೇ, ಈ ಪ್ರಕಾರ ಶ್ರೀ ಗುರುಗಳು ಆ ಯೋಗಿನಿಯರಿಂದ ನಿರೋಪ ತಕ್ಕೊಂಡು ಅಲ್ಲಿಂದ ಹೊರಟು ಭೀಮಾತೀರದಲ್ಲಿರುವ ಅನುಪಮವಾದ ಗಾಂಧಾರ ಭುವನವೆಂಬ ಗಾಣಗಾಪುರಕ್ಕೆ ಬಂದರು. ‖ ೯೪ ‖ ವಿಶ್ವರೂಪನಾದ ಜಗನ್ನಾಥನು ಎಲ್ಲ ಸ್ಥಳಗಳಲ್ಲಿ ವಾಸವಾಗಿರುತ್ತಾನೆ. ಆದರೆ ಔದುಂಬರವು ಅವರ ಪ್ರೀತಿಯ ಸ್ಥಾನವಾದ್ದರಿಂದ ಅವರು ನಿತ್ಯ ಅಲ್ಲಿಯೂ ಔದುಂಬರದಲ್ಲಿಯೇ

ವಾಸವಾಗಿರುತ್ತಿದ್ದರು. || ೯೫ || ಶ್ರೀ ಗುರುಗಳು ಔದುಂಬರದಲ್ಲಿ ಗೌಪ್ಯವಾಗಿದ್ದರೂ ಪ್ರೀತಿಯಿಂದ ಗಾಣಗಾಪುರದಲ್ಲಿ ಪ್ರಗಟವಾಗಿರುತ್ತಿದ್ದರು. ಅಲ್ಲಿಯೂ ಅವರ ಮಹಿಮೆಯು ಪ್ರಖ್ಯಾತವಾಯಿತು. || ೯೬ || ಎಲೈ ನಾಮಧಾರಕನೇ ಕೇಳು, ಗುರುಮಹಿಮೆಯು ಈ ಪ್ರಕಾರವಾಗಿರುತ್ತದೆ. ಗಾಣಗಾಪುರದಲ್ಲಿ ಅವರ ಖ್ಯಾತಿಯು ಬಹಳವಾಯಿತು ಎಂದು ಸಿದ್ಧರು ಹೇಳಿದರು. || ೯೭ || ಹೀಗೆ ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ಇದನ್ನು ಭಕ್ತಿಪೂರ್ವಕ ಕೇಳಿದಂಥ ಮನುಷ್ಯನು ಚತುರ್ವಿಧ ಪುರುಷಾರ್ಥಗಳನ್ನು ಹೊಂದುವನು. || ೯೮ || ಕಾಮಧೇನುವಿನಂತಿರುವ ಗುರುಚರಿತ್ರೆಯನ್ನು ಭಕ್ತಿಯಿಂದ ಕೇಳುವಂಥವರ ಮನೆಯಲ್ಲಿ ನಿಶ್ಚಯವಾಗಿ ಐಶ್ವರ್ಯವುಂಟಾಗಿ ಅವರ ಸಕಲಾಭೀಷ್ಟಗಳೂ ಸಿದ್ಧಿಸುವವು || ೯೯ || ಹೀಗೆ ಗುರುಚರಿತ್ರದ ಈ ಅಧ್ಯಾಯದಲ್ಲಿ ಶ್ರೀ ಗುರುಗಳು ಕಲ್ಪವೃಕ್ಷದಂತಿರುವ ಔದುಂಬರದಲ್ಲಿ ಯಕ್ಷಿಣಿಯರನ್ನೂ ಯೋಗಿನಿಯರನ್ನೂ ಸ್ಥಾಪಿಸಿ ತಾವು ಅಲ್ಲಿ ಗುಪ್ತವಾಗಿದ್ದರೆಂದು ಹೇಳಿದೆ. || ೧೦೦ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ ಔದುಂಬರ ವೃಕ್ಷ, ಔದುಂಬರ ಕ್ಷೇತ್ರ, ಯೋಗಿನೀ ನಿತ್ಯದರ್ಶನಂ ತಥಾ ವರಪ್ರದಾನಂ ನಾಮ ಏಕೋನ ವಿಂಶೋಽಧ್ಯಾಯಃ || ೧೯ || ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು ||

— ೧೯ನೇ ಅಧ್ಯಾಯ ಸಮಾಪ್ತ —

# ೨೦ನೇಯ ಅಧ್ಯಾಯ

**ಶ್ರೀಗುರುಗಳು ಒಬ್ಬ ಸ್ತ್ರೀಯಳ ಪಿಶಾಚಬಾಧೆಯನ್ನು ಬಿಡಿಸಿ ಆಕೆಗೆ ಮಕ್ಕಳು ಬದುಕುವಂತೆ ವರವನ್ನು ಕೊಟ್ಟರೂ ಆಕೆಗೆ ಒಂದು ಮಗನು ಹುಟ್ಟಿ ಅದು ಸಾಯಲು ಆಕೆಯು ಶೋಕಮಾಡಿದ್ದು, ಆಕೆಗೆ ಬೋಧಮಾಡಲಿಕ್ಕೆ ಬ್ರಹ್ಮಚಾರಿಯು ಬಂದದ್ದು.**

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಶಿಷ್ಯ ಶಿರೋಮಣಿಯಾದ ನಾಮಧಾರಕನು ಸಿದ್ಧರ ಚರಣಗಳನ್ನು ಹಿಡಿದು, ಒಳ್ಳೇ ಭಕ್ತಿಯಿಂದಲೂ ವಿನಯದಿಂದಲೂ ಅವರ ಚರಣಗಳಮೇಲೆ ತನ್ನ ಮಸ್ತಕವನ್ನಿಟ್ಟು ಕೈಮುಗಿದು— ಜಯಜಯ ಸಿದ್ಧಮುನಿಗಳೇ ನಾನು ತಮಗೊಂದು ಮಾತು ಕೇಳುತ್ತೇನೆ. || ೧-೨ || ಶ್ರೀಗುರುಗಳು ಅಮರಾಪುರದಲ್ಲಿ ಔದುಂಬರದಲ್ಲಿ ಗುಪ್ತವಾಗಿದ್ದು ಯೋಗಿನಿಯರಿಗೆ ವರವನ್ನು ಕೊಟ್ಟು, ಗಾಣಗಾಪುರಕ್ಕೆ ಬಂದು ಅಲ್ಲಿ ಪ್ರಕಟವಾಗುತ್ತಿದ್ದರೆಂದು ಹೇಳಿದಿರಿ. ಮುಂದೆ ಆ ಔದುಂಬರ ಸ್ಥಾನದ ಕೀರ್ತಿಯು ಯಾವ ಪ್ರಕಾರವಾಗಿ ಬೆಳೆಯಿತೆಂಬದನ್ನು ನನಗೆ ವಿಸ್ತಾರವಾಗಿ ಹೇಳಿರಿ. ||೩-೪|| ಮತ್ತು ಆ ಔದುಂಬರವು ಸಹಜ ವೃಕ್ಷವಾಗಿದ್ದರೂ ಪರಮಾತ್ಮನ ಕೃಪೆಯಿಂದ ಅದು ನಿಶ್ಚಯವಾಗಿ ಕಲ್ಪವೃಕ್ಷವಾಗಿರುತ್ತದೆಂದು ಹೇಳುತ್ತೀರಿ. ಮುಂದೆ ಅಲ್ಲಿ ಯಾರಿಗೆ ವರವು ಸಿಕ್ಕಿತೆಂಬದನ್ನು ದಯಮಾಡಿ ನನಗೆ ಹೇಳಿರಿ ಎಂದನು. || ೫ ||

ಶಿಷ್ಯನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು— ಆ ನರಸೋಬವಾಡಿಯಲ್ಲಿರುವ ಔದುಂಬರ ಸ್ಥಾನದ ಮಹಿಮೆಯನ್ನು ವಿಸ್ತಾರವಾಗಿ ಹೇಳಹತ್ತಿದರು— || ೬ || ಎಲೈ ಬಾಲಕಾ ಕೇಳು, ಗುರುಗಳ ಲೀಲೆಯನ್ನು ಎಷ್ಟು ಹೇಳಲಿ? ಅವರು ಯಾವಾಗಲೂ ಔದುಂಬರದಲ್ಲಿ ವಾಸವಾಗಿರುತ್ತಾರೆಂದು ತಿಳಿ. || ೭ ||

ಯಾವದಕ್ಕೆ ಔದುಂಬರ ಎಂದು ಹೆಸರಿದೆಯೋ, ಯಾವದರಲ್ಲಿ ಗುರುಗಳು ವಾಸಿಸುತ್ತಾರೋ ಅದರ ಮಹತ್ವವನ್ನೇನು ಕೇಳುತ್ತೀ! ಶ್ರೀಗುರುಗಳು ಬೇಕಾದ ಸ್ಥಳದಲ್ಲಿದ್ದರೂ ಭಕ್ತರು ಅವರನ್ನು ಧ್ಯಾನಿಸಿ ಆ ಔದುಂಬರವನ್ನು ಭಕ್ತಿಯಿಂದ ಸೇವಿಸಿದರೆ ಅದು ಕಲ್ಪಿಸಿದ ಫಲವನ್ನು ಕೊಡುತ್ತದೆ. ‖ ೮ ‖ ಆ ಸ್ಥಳದಲ್ಲಿ ಅನೇಕ ಮಹಿಮೆಗಳಾದವು. ಅವೆಲ್ಲವುಗಳನ್ನು ಹೇಳಲಿಕ್ಕೆ ನನಗೆ ಶಕ್ತಿಯು ಸಾಲದು. ಶಿಷ್ಯೋತ್ತಮನಾದ ನಾಮಧಾರಕನೇ ನಿನಗೆ ಅಲ್ಲಿ ಆದ ಒಂದು ದೃಷ್ಟಾಂತವನ್ನು ಹೇಳುತ್ತೇನೆ ಕೇಳು. ‖ ೯ ‖

ಆ ಔದುಂಬರಕ್ಕೆ ಸಮೀಪವಾದ ಶಿರೋಳ ಎಂಬ ಗ್ರಾಮದಲ್ಲಿ ಗಂಗಾಧರನೆಂಬ ವೇದಶಾಸ್ತ್ರ ಬಲ್ಲಂಥ ಒಬ್ಬ ಬ್ರಾಹ್ಮಣನಿದ್ದನು. ‖ ೧೦ ‖ ಅವನ ಪತಿವ್ರತೆಯಾದ ಹೆಂಡತಿಯು ಬಹು ಸುಶೀಲೆಯಾಗಿ ಶಾಂತಳಿದ್ದಳು. ಆದರೆ ಆಕೆಗೆ ಮಕ್ಕಳು ಹುಟ್ಟಿದ ಕೂಡಲೆ ಸಾಯುತ್ತಿದ್ದವು ಅದರಿಂದ ಅವಳು ಬಹಳ ಕಷ್ಟಪಡುತ್ತಿದ್ದಳು. ‖ ೧೧ ‖ ಈ ಪ್ರಕಾರ ಅವಳಿಗೆ ೫ ಮಕ್ಕಳು ಹುಟ್ಟಿದ ಕೂಡಲೆ ಮರಣಹೊಂದಿದವು. ಅವಳು ಅನೇಕ ದೇವರನ್ನು ಆರಾಧಿಸಿದಳು, ಆದರೂ ಒಂದೂ ಬದುಕಲಿಲ್ಲ. ‖ ೧೨ ‖ ಹೀಗೆ ಆಕೆಯು ದುಃಖದಿಂದ ಅತಿಶಯ ವ್ರತ-ಉಪವಾಸಾದಿಗಳನ್ನು ಮಾಡಿದಳು. ಆಕೆಯು ಪೂರ್ವಜನ್ಮದಲ್ಲಿ ಮಾಡಿದ ಭಯಂಕರ ದುಷ್ಟಕರ್ಮದ ಫಲದಿಂದ ಆಕೆಗೆ ಮಕ್ಕಳು ಬದುಕುತ್ತಿದ್ದಿಲ್ಲ. ‖ ೧೩ ‖ ಆಗ ಆಕೆಯು ಜ್ಯೋತಿಷ್ಯವನ್ನು ಬಲ್ಲ ಒಬ್ಬ ಬ್ರಾಹ್ಮಣನ ಹತ್ತರ ಹೋಗಿ— ಸ್ವಾಮೀ, ಜೋಯಿಸರೇ ಪುತ್ರಶೋಕವುಂಟಾಗುವದಕ್ಕೆ ಕರ್ಮವಿಪಾಕದಲ್ಲಿ ಯಾವ ದೋಷವನ್ನು ಹೇಳಿರುವದು ? ಎಂದು ವಿಚಾರಿಸಿದಳು ಆಗ ಆ ವಿದ್ವಾನ್ ಜೋಯಿಸರು, ಮಕ್ಕಳು ಬದುಕದೆ ಇರುವದಕ್ಕ ಏನು ಕಾರಣ ಎಂಬ ಪೂರ್ವಜನ್ಮದ ದೋಷವನ್ನು ವಿಸ್ತಾರವಾಗಿ ಹೇಳಹತ್ತಿದರು ‖ ೧೪-೧೫ ‖ ಅವರು— ಎಲಾ ಸ್ತ್ರಿಯಳೇ ಕೇಳು. ಯಾವ ದುಷ್ಟ ಸ್ತ್ರೀಯರು ಈ ಜನ್ಮದಲ್ಲಿ ಗರ್ಭಿಣಿ ಸ್ತ್ರೀಯರ ಗರ್ಭಪಾತ ಮಾಡಿಸುವರೋ ಅವರು ಮುಂದೆ ಬಂಜೆಯಾಗುವರು. ಒಂದುವೇಳೆ ಅವರಿಗೆ ಮಕ್ಕಳು ಹುಟ್ಟಿದರೆ ಅವು ಕೂಡಲೆ ಸಾಯುವವು. ‖ ೧೬ ‖ ಮತ್ತು ಅಶ್ವ-ಗೋಗಳನ್ನು ವಧ ಮಾಡಿದವರು ಬಂಜೆಗಳಾಗಿ ಸದಾ ಜ್ವರದಿಂದ ಪೀಡಿತರಾಗುವರು. ಹಾಗು ಒಂದುವೇಳೆ

ಪರದ್ರವ್ಯವನ್ನು ಅಪಹರಿಸಿದವರಿಗೂ ಮಕ್ಕಳಾಗುವದಿಲ್ಲ. ಆದರೂ ಅವು ಬದುಕುವದಿಲ್ಲ, ಕೂಡಲೆ ಸಾಯುವವು. ॥ ೧೭ ॥ ಎಲೌ ಸ್ತ್ರೀಯಳೇ, ನೀನು ಪೂರ್ವಜನ್ಮದಲ್ಲಿ ಒಂದು ದೋಷವನ್ನು ಮಾಡಿದಂತೆ ನನಗೆ ತಿಳಿಯುತ್ತದೆ. ಅದರಿಂದ ನಿನಗೆ ಮಕ್ಕಳು ಬದುಕುವದಿಲ್ಲ. ಆ ಕಾರಣವನ್ನು ಹೇಳುತ್ತೇನೆ ಏಕಚಿತ್ತದಿಂದ ಕೇಳು ॥ ೧೮ ॥ ಎಲೌ ಸ್ತ್ರೀಯಳೇ, ನೀನು ಪೂರ್ವಜನ್ಮದಲ್ಲಿ ಶೌನಕ ಗೋತ್ರದವನೊಬ್ಬ ಬ್ರಾಹ್ಮಣನ ಬಳಿಯಲ್ಲಿ ಸಾಲವನ್ನು ತಂದು ತಿರುಗಿ ಅವನಿಗೆ ಆ ಹಣವನ್ನು ಕೊಡಲಿಲ್ಲ. ಅದರಿಂದ ಅವನು ಬಹಳ ಕಷ್ಟಬಟ್ಟನು. ॥ ೧೯ ॥ ಮತ್ತು ಅವನು ದ್ರವ್ಯದಮೇಲೆ ಅತಿ ಲೋಭಿಯಿದ್ದದರಿಂದ, ತನ್ನ ದುಡ್ಡು ಮುಳುಗಿ ಹೋಯಿತೆಂದು ಅವನು ಆತ್ಮಹತ್ಯೆ ಮಾಡಿಕೊಂಡು ಪ್ರಾಣ ಬಿಟ್ಟನು, ಮುಂದೆ ಅವನೇ ಪಿಶಾಚಿಯಾಗಿ ನಿನಗೆ ವೃತ್ಯುವಾಗಿ ನಿನ್ನ ಗರ್ಭವನ್ನು ನಾಶ ಮಾಡುವನು. ಎಲೌ ಸ್ತ್ರೀಯಳೇ, ಈ ಪ್ರಕಾರ ನಿನ್ನ ಪೂರ್ವಜನ್ಮದ ದೋಷವಿರುವದು. ಆದ್ದರಿಂದ ನೀನು ನಿನ್ನ ಕರ್ಮದ ಫಲವನ್ನು ಅನುಭವಿಸು ಎಂದು ಹೇಳಿದನು. ॥ ೨೦-೨೧ ॥ ಜೋಯಿಸರ ಮಾತು ಕೇಳಿ ಆಕೆಯು ಖೇದಬಟ್ಟು ಮನಸ್ಸಿನಲ್ಲಿ ಅನುತಪ್ತಳಾಗಿ ಆ ಬ್ರಾಹ್ಮಣನಿಗೆ ವಂದಿಸಿ ಕೈಮುಗಿದು, ಅವರ ಚರಣಗಳಮೇಲೆ ಮಸ್ತಕವನ್ನಿಟ್ಟು ವಿನಯದಿಂದಲೂ ಕರುಣಾವಚನದಿಂದಲೂ-- ಸ್ವಾಮೀ, ಜೋಯಿಸರೇ, ನಾನು ಈ ಪ್ರಕಾರವಾದ ದುರಾಚಾರಿ ಪಾಪಿಯು! ನಾನು ಪಾಪಸಾಗರದಲ್ಲಿ ಮುಳುಗಿರುವೆನು ಸ್ವಾಮೀ, ಇದರ ಪರಿಹಾರಕ್ಕಾಗಿ ನನಗೇನಾದರೊಂದು ಉಪಾಯವನ್ನು ಹೇಳಿ ನನ್ನನ್ನು ರಕ್ಷಿಸಿರಿ. ॥ ೨೨-೨೩-೨೪ ॥ ಚಾಂಡಾಲಿಯಾದ ನಾನು ಈ ಪ್ರಕಾರ ಪಾಪವೆಂಬ ಹಾಲಾಹಲ ವಿಷದಿಂದ ಮಕ್ಕಳನ್ನು ತಿಂದೆನು. ಇದಕ್ಕೆ ಯಾವದಾದರೊಂದು ಔಷಧವನ್ನು ಹೇಳಿರಿ ಎಂದು ಬೇಡಿಕೊಂಡಳು. ॥ ೨೫ ॥

ಆಗ ಬ್ರಾಹ್ಮಣನು— ಎಲೌ ಸ್ತ್ರೀಯಳೇ, ನೀನು ಬ್ರಹ್ಮಹತ್ಯಾ ಮಾಡಿ, ಅವನ ಧನವನ್ನು ಅಪಹರಿಸಿದ್ದರಿಂದ ಅವನು ಪಿಶಾಚಿಯಾಗಿರುವನು. ॥ ೨೬ ॥ ಅವನು ಸತ್ತಮೇಲೆ ಅವನ ಉತ್ತರ ಕ್ರಿಯೆಸಹ ಆಗಿಲ್ಲ, ॥ ೨೭ ॥ ಅವನು ಉದ್ಧಾರವಾಗುವಂತೆ ನೀನು ವಿಧಿಪೂರ್ವಕ ಷೋಡಶ ಕರ್ಮಗಳನ್ನು ಮಾಡಿ, ಆ

ಗೋತ್ರದ ಬ್ರಾಹ್ಮಣರಿಗೆ ನೂರು ರೂಪಾಯಿಗಳನ್ನು ಕೊಡಬೇಕು. || ೨೮ || ಮತ್ತು ನೀನು ಉಪವಾಸದಿಂದ ಒಂದು ತಿಂಗಳು ಕೃಷ್ಣಾತೀರದಲ್ಲಿದ್ದು ಏಕೋಭಾವದಿಂದ ಅಲ್ಲಿರುವ ಔದುಂಬರ ಸಹಿತವಾದ ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳ ಪಾದುಕಾಗಳನ್ನು ಪೂಜಿಸಿ ಸೇವಾ ಮಾಡಬೇಕು ಅದರಿಂದ ನಿನಗೆ ಒಳ್ಳೇದಾಗುವದು. || ೨೯ || ಅದರ ವಿಧಾನವನ್ನು ಹೇಳುವೆನು ಕೇಳು. ಕೃಷ್ಣಾ-ಪಂಚಗಂಗಾ ಸಂಗಮದಲ್ಲಿ ಬಹಳ ತೀರ್ಥಗಳುಂಟು, ನೀನು ಅಲ್ಲಿರುವ ಔದುಂಬರ ವೃಕ್ಷವನ್ನು ಆರಾಧಿಸಬೇಕು. || ೩೦ || ಹ್ಯಾಗಂದರೆ ಅಲ್ಲಿರುವ ಪಾಪವಿನಾಶಿ ತೀರ್ಥದಲ್ಲಿ ಸ್ನಾನಮಾಡಿ, ಆ ಔದುಂಬರಕ್ಕೆ ಏಳುಸಾರೆ ಸ್ನಾನಮಾಡಿಸಿ, ಆ ಔದುಂಬರದ ಕೆಳಗಿರುವ ಗುರುಚರಣಗಳಿಗೆ ಅಭಿಷೇಕ ಮಾಡಿ, ಪುನಃ ಕಾಮ್ಯತೀರ್ಥದಲ್ಲಿ ಸ್ನಾನಮಾಡಿ ಏಕ ಮನಸ್ಸಿನಿಂದಲೂ ವಿಧಿಯಿಂದಲೂ ಶ್ರೀ ಗುರುಚರಣಗಳನ್ನು ಪೂಜಿಸಬೇಕು. ಇದರಂತೆ ಭಕ್ತಿಪೂರ್ವಕ ಒಂದು ತಿಂಗಳು ಉಪವಾಸದಿಂದ ಆಚರಿಸಬೇಕು. || ೩೧-೩೨ || ಅದು ಶ್ರೀ ಗುರು ನರಸಿಂಹ ಸರಸ್ವತಿಗಳ ಸ್ಥಾನವದೆ ಎಲೌ ಸ್ತ್ರೀಯಳೇ, ನೀನು ಅಲ್ಲಿಗೆ ಹೋಗಿ ಸೇವಾ ಮಾಡಿದರೆ ಸತ್ಯವಾಗಿ ನಿನ್ನ ದೋಷವು ಹೋಗಿ ನಿನಗೆ ಶತಾಯುಷ್ಯನಾದ ಪುತ್ರನು ಹುಟ್ಟುವನು. || ೩೩ || ಎಲೌ ಸ್ತ್ರೀಯಳೇ, ನಾನು ಹೇಳಿದಂತೆ ನೀನು ಒಂದು ತಿಂಗಳು ಸೇವಾ ಮಾಡಿದ ಮೇಲೆ ಆ ಶೌನಕ ಗೋತ್ರದ ಬ್ರಾಹ್ಮಣರನ್ನು ಕರೆದು ಅವರಿಗೆ ಒಂದುನೂರು ರೂಪಾಯಿಗಳನ್ನು ಕೊಡು. || ೩೪ || ಮತ್ತು ನೀನು ನಿರ್ಮಲ ಮನಸ್ಸಿನಿಂದ ಆ ಬ್ರಾಹ್ಮಣನ ಹೆಸರಿನಿಂದ ಸಕಲ ಕರ್ಮಗಳನ್ನು ಮಾಡು. ಆಗ ಶ್ರೀ ಗುರುಗಳು ನಿನ್ನ ಎಲ್ಲ ಕಷ್ಟಗಳನ್ನು ಪರಿಹರಿಸಿ ನಿನ್ನನ್ನು ಉದ್ಧರಿಸುವರು. || ೩೫ || ಆಗ ನೀನು ಸದಾ ಮನಸಿನಲ್ಲಿ ಶ್ರೀ ಗುರುಸ್ಮರಣೆ ಮಾಡುತ್ತ, ಅವರ ಚರಣಗಳ ಜಪಮಾಡು ಅದರಿಂದ ನಿನ್ನ ಆ ಬ್ರಹ್ಮಹತ್ಯಾ ಪಾಪವೂ ಉಳಿದ ಸಕಲ ಪಾಪಗಳೂ ನಾಶವಾಗುವವು ಎಂದು ಹೇಳಿದನು. || ೩೬ || ಈ ಪ್ರಕಾರ ಆ ಜೋಯಿಸನ ಮಾತು ಕೇಳಿ ಆಕೆಯು ಚಿಂತಿಸುತ್ತ— ಸ್ವಾಮೀ, ಜೋಯಿಸರೇ, ನಮ್ಮ ಮನೆಯಲ್ಲಿ ನೂರುರೂಪಾಯಿಗಳು ಎಂದೂ ಸಿಗುವದಿಲ್ಲ. || ೩೭ || ಆದರೆ ನನ್ನ ದೇಹವನ್ನು ಕಷ್ಟಪಡಿಸಿ, ಒಂದು ತಿಂಗಳವರೆಗೆ ಉಪವಾಸದಿಂದ

ಇದ್ದು ಭಕ್ತಿಯಿಂದ ಪೂಜಾ ಮೊದಲಾದ ಗುರುಸೇವಾಗಳನ್ನು ಮಾತ್ರ ಮಾಡುವೆನು ಎಂದಳು. ‖ ೩೮ ‖ ಈ ಪ್ರಕಾರದ ಆಕೆಯ ನಿಶ್ಚಯದ ಮಾತುಗಳನ್ನು ಕೇಳಿ ಆ ಜೋಯಿಸನು ಆಕೆಗೆ ಆಜ್ಞೆ ಮಾಡುತ್ತಾನೆ. ‖ ೩೯ ‖ ಎಲೌ ಸ್ತ್ರೀಯಳೇ, ನಿನ್ನಲ್ಲಿ ಅಷ್ಟು ದ್ರವ್ಯವು ಸಿಗದಿದ್ದರೆ, ನೀನು ನಿರ್ಮಲ ಮನಸ್ಸಿನಿಂದ ಇವತ್ತಿನಿಂದಲೇ ಗುರು ಚರಣಗಳ ಸೇವೆಯನ್ನು ಮಾಡು. ‖ ೪೦ ‖ ಅವರು ನಿನ್ನ ಪಾಪಕ್ಕೆ ಪ್ರಾಯಶ್ಚಿತ್ತಮಾಡಿ ಪಾಪವನ್ನು ಕಳೆಯುವರು. ಅವರು ನಿರಂತರ ಆ ಔದುಂಬರ ಸನ್ನಿಧಾನದಲ್ಲಿ ವಾಸಿಸುತ್ತಾರೆ ‖ ೪೧ ‖ ಅವರು ಭಕ್ತರಮೇಲೆ ಕೃಪೆಮಾಡುವಂಥವರಿದ್ದು, ನಿನ್ನ ಬ್ರಹ್ಮಹತ್ಯೆಯನ್ನು ನಿವಾರಿಸುವರು ಆ ಮೇಲೆ ನೀನು ಶ್ರೀ ಗುರುಗಳ ನಿರೋಪದಂತೆ ನಿನಗೆ ಶಕ್ತಿಯಿದ್ದಷ್ಟು ಖರ್ಚುಮಾಡು ಎಂದನು ‖ ೪೨ ‖ ಆ ಬ್ರಾಹ್ಮಣನ ಮಾತು ಕೇಳಿ ಆ ಸ್ತ್ರೀಯು ಸಂತೋಷದಿಂದ ತೀವ್ರವಾಗಿ ಔದುಂಬರ ಹಾಗು ಅದರ ಮುಂದೆ ಗುರುಪಾದುಕಾಗಳಿರುವ ಸ್ಥಳಕ್ಕೆ ಹೋಗಿ ‖೪೩‖ ಆಕೆಯು ಮೊದಲು ಪಂಚಗಂಗಾ ಸಂಗಮದಲ್ಲಿ ಸ್ನಾನಮಾಡಿ, ಬಳಿಕ ಪಾಪವಿನಾಶಿ ತೀರ್ಥದಲ್ಲಿ ವಿಧಿಪ್ರಕಾರ ಸ್ನಾನಮಾಡಿ ಆ ಔದುಂಬರಕ್ಕೆ ಏಳುಸಾರೆ ಸ್ನಾನಮಾಡಿಸಿ ‖ ೪೪ ‖ ಆ ಮೇಲೆ ಕಾಮ್ಯ ತಿರ್ಥದಲ್ಲಿ ಸ್ನಾನಮಾಡಿ ಉಪವಾಸದಿಂದ ಶ್ರೀ ಗುರುಪಾದುಕಾಗಳನ್ನು ಪೂಜಿಸಿ, ಪ್ರದಕ್ಷಿಣಾ ನಮಸ್ಕಾರ ಮಾಡುತ್ತಿದ್ದಳು. ‖ ೪೫ ‖ ಈ ಪ್ರಕಾರ ಆಕೆಯು ಮೂರುದಿವಸ ಸೇವಾಮಾಡಲು ೩ನೇ ದಿವಸ ರಾತ್ರಿ ಆಕೆಯ ಸ್ವಪ್ನದಲ್ಲಿ ಆ ಸಾಲಕೊಟ್ಟ ಬ್ರಾಹ್ಮಣನು ಬಂದು— ಎಲೌ ಸ್ತ್ರೀಯೇ ನೀನು ಇವತ್ತಿನವರೆಗೂ ನನ್ನ ನೂರುರೂಪಾಯಿ ಹಣವನ್ನು ಕೊಡಲಿಲ್ಲ. ಆದ್ದರಿಂದ ಈಗ ನಿನ್ನ ಪ್ರಾಣ ತಕ್ಕೊಳ್ಳುವೆನು. ಮುಂದೆ ನಿನ್ನ ವಂಶವನ್ನು ಎಂದೂ ಬೆಳೆಯಗೊಡುವದಿಲ್ಲ. ‖ ೪೬–೪೭ ‖ ನೀನು ವ್ಯರ್ಥವಾಗಿ ಆಯಾಸಪಡುತ್ತೀ. ನಿನ್ನ ವಂಶದಲ್ಲಿ ಮಗನು ಹ್ಯಾಗೆ ಹುಟ್ಟುವನು ? ಎಂದು ಸಿಟ್ಟಿನಿಂದ ಆಕೆಯನ್ನು ಹೊಡೆಯಲಿಕ್ಕೆ ಬಂದನು. ‖ ೪೮ ‖ ಆಗ ಆಕೆಯು ಹೆದರಿ ಆ ಔದುಂಬರದ ಹತ್ತರ ಅಡಗಲಿಕ್ಕೆ ಹೋಗಿ, ಅಲ್ಲಿ ನಿಂತಿರುವ ಶ್ರೀ ಗುರುಗಳನ್ನು ಕಂಡು ಅವರ ಹಿಂದೆ ಹೋಗಿ ಅಡಗಿಕೊಂಡಳು. ‖ ೪೯ ‖ ಆಗ ಶ್ರೀ ಗುರುಗಳು ಆಕೆಗೆ ಅಭಯವನ್ನುಕೊಟ್ಟು, ಆ ಬ್ರಾಹ್ಮಣನನ್ನು ದೂರಓಡಿಸಿ,

ಅವನನ್ನು ಕುರಿತು— ಎಲೈ ಪಿಶಾಚಿಯೇ ನೀನು ಈ ಸ್ತ್ರೀಯನ್ನು ಯಾಕೆ ಹೊಡೆಯುತ್ತೀ ? ಎಂದು ಕೇಳಿದರು. ॥ ೫೦ ॥ ಆಗ ಅವನು— ಸ್ವಾಮೀ, ಈಕೆಯು ಪೂರ್ವಜನ್ಮದಲ್ಲಿ ನನ್ನಲ್ಲಿ ಸಾಲವನ್ನು ತೆಗೆದುಕೊಂಡು ಅದನ್ನು ತಿರುಗಿ ಕೊಡದೆ ನನ್ನ ದ್ರವ್ಯವನ್ನು ಅಪಹರಿಸಿದಳು. ಅದಕ್ಕಾಗಿ ನಾನು ಆತ್ಮಹತ್ಯೆ ಮಾಡಿಕೊಂಡು ಪ್ರಾಣಬಿಟ್ಟೆನು. ॥ ೫೧ ॥ ಸ್ವಾಮೀ, ತಾವು ಸರ್ವರಲ್ಲಿಯೂ ದಯಾ ತೋರಿಸುವಂಥವರಾಗಿದ್ದು ಈಗ ನನ್ನ ಶತ್ರುವಿನ ಪಕ್ಷ ಕಟ್ಟುವಿರಿ. ಯತೀಶ್ವರರೂ ತಪಸ್ವಿಗಳೂ ಆದ ತಾವು ಹೀಗೆ ಪಕ್ಷಪಾತ ಮಾಡಬಾರದು ಎಂದನು. ॥ ೫೨ ॥

ಈ ಪ್ರಕಾರ ಆ ಪ್ರೇತ ಬ್ರಾಹ್ಮಣನ ಮಾತು ಕೇಳಿ ಶ್ರೀ ಗುರುಗಳು ಸಿಟ್ಟಿನಿಂದ— ಎಲೈ ವಿಪ್ರನೇ, ನೀನು ನಮ್ಮ ಭಕ್ತರನ್ನು ಯಾಕೆ ಕಾಡುವಿ ? ನಾನು ನಿನ್ನನ್ನು ಶಿಕ್ಷಿಸುವೆನು. ॥ ೫೩ ॥ ನೀನು ಈಗ ನಾನು ಹೇಳುವ ಹಿತದ ಮಾತು ಕೇಳಿದರೆ ನಿನ್ನ ಪಿಶಾಚತ್ವವು ಹೋಗಿ, ನಿನಗೆ ಸದ್ಗತಿಯಾಗುವದು. ॥ ೫೪ ॥ ಈ ಬ್ರಾಹ್ಮಣ ಪತ್ನಿಯು ಕೊಟ್ಟಿದ್ದನ್ನು ನೀನು ಸಂತೋಷದಿಂದ ಸ್ವೀಕರಿಸಬೇಕು. ಒಂದುವೇಳೆ ಅದು ನಿನ್ನ ಮನಸ್ಸಿಗೆ ಬರದಿದ್ದರೆ ನೀನು ಇಲ್ಲಿಂದ ಹೊರಟುಹೋಗು ॥ ೫೫ ॥ ವಂಶಾಭಿವೃದ್ಧಿಗಾಗಿ ನಾನು ನಮ್ಮ ಭಕ್ತರನ್ನು ರಕ್ಷಿಸುವೆನು. ಒಂದುವೇಳೆ ನೀನು ತಿರುಗಿಬಂದರೆ ನಿನ್ನನ್ನು ಶಿಕ್ಷಿಸುವೆನೆಂದು ತಿಳಿ ಎಂದು ಅಪ್ಪಣೆ ಮಾಡಿದರು. ॥ ೫೬ ॥ ಗುರುಗಳ ಮಾತು ಕೇಳಿ ಆ ಪಿಶಾಚಿಯು ನಮಸ್ಕಾರಮಾಡಿ— ಸ್ವಾಮೀ, ನಾನು ನಿಮ್ಮ ಚರಣಗಳನ್ನು ಕಂಡೆನು ನನ್ನನ್ನು ಉದ್ಧರಿಸಿರಿ ॥ ೫೭ ॥ ಮತ್ತು ನನಗೆ ಸದ್ಗತಿಯಾಗುವಂಥ ಒಂದು ಉಪಾಯವನ್ನು ಹೇಳಿರಿ. ನಾನು ನಿಮ್ಮ ಆಜ್ಞೆಯನ್ನು ಶಿರಸಾ ವಹಿಸುವೆನು ಎಂದನು ॥ ೫೮ ॥ ಆಗ ಶ್ರೀ ಗುರುಗಳು ಆ ಸ್ತ್ರೀಯಳನ್ನು ಕುರಿತು— ಎಲೌ ಸ್ತ್ರೀಯಳೇ, ನಿನ್ನ ಹತ್ತರ ಇದ್ದಷ್ಟು ಹಣವನ್ನು ಈ ಬ್ರಾಹ್ಮಣನ ಹೆಸರಿನಿಂದ ಕೊಟ್ಟುಬಿಡು ಎಂದು ಹೇಳಿ ॥ ೫೯ ॥ ಆ ಮೇಲೆ ಆ ಪಿಶಾಚಿಯನ್ನು ಕುರಿತು— ಎಲೈ ಪಿಶಾಚಿಯೇ, ಈ ಬ್ರಾಹ್ಮಣ ಪತ್ನಿಯು ಭಕ್ತಿಯಿಂದ ನಿನ್ನ ಕರ್ಮಮಾಡಿದ ೧೦ನೇ ದಿವಸ ನಿನಗೆ ಸದ್ಗತಿಯಾಗುವದು ಎಂದು

ಹೇಳಿ ॥ ೬೦ ॥ ಮತ್ತೆ ಆ ಸ್ತ್ರೀಯಳನ್ನು ಕುರಿತು— ಎಲೌ ಸ್ತ್ರೀಯಳೇ, ಈ ಪಿಶಾಚಿಯ ಹೆಸರಿನಿಂದ ಇಲ್ಲಿರುವ ಅಷ್ಟತೀರ್ಥಗಳಲ್ಲಿ ಸ್ನಾನಮಾಡು. ಆಮೇಲೆ ಔದುಂಬರಕ್ಕೂ ದಿನಾಲು ಸ್ನಾನಮಾಡಿಸು, ಈ ಪ್ರಕಾರ ಏಳುದಿವಸ ಔದುಂಬರವನ್ನು ಪೂಜಿಸು. ॥ ೬೧ ॥ ಆದರಿಂದ ನಿನ್ನ ಬ್ರಹ್ಮಹತ್ಯಾ ದೋಷವು ತೀವ್ರವಾಗಿ ನಿಶ್ಶೇಷವಾಗಿ ಹೋಗಿ ಮುಂದೆ ನಿನಗೆ ಪೂರ್ಣಾಯುಷ್ಯವುಳ್ಳ ಒಬ್ಬ ಮಗನೂ ಆಮೇಲೆ ಒಬ್ಬ ಮಗಳೂ ಹುಟ್ಟುವರು ಎಂದು ಹೇಳಿದರು. ॥ ೬೨ ॥ ಆಕೆಯು ಈ ಪ್ರಕಾರ ಸ್ವಪ್ನವನ್ನು ಕಂಡು ಹೆದರಿ ಎಚ್ಚತ್ತು, ಶ್ರೀ ಗುರುಗಳನ್ನು ಧ್ಯಾನಿಸಿ, ಜ್ಞಾನದಿಂದ ಅವರನ್ನು ನೋಡಿ ಅವರು ಹೇಳಿದ್ದನ್ನು ಮರೆಯದೆ ॥ ೬೩ ॥ ಅವರ ಅಪ್ಪಣೆಯಂತೆ ೧೦ ದಿವಸಗಳವರೆಗೆ ಆ ತೀರ್ಥಗಳಲ್ಲಿ ಸ್ನಾನ ಮಾಡಿದಳು. ಆಗ ಆಕೆಯ ಬ್ರಹ್ಮಹತ್ಯಾ ದೋಷವೂ ಹೋಯಿತು, ಆ ಪಿಶಾಚಿಗೆ ಸದ್ಗತಿಯೂ ಆಯಿತು. ॥ ೬೪ ॥ ಮರದಿವಸ ಶ್ರೀ ಗುರುಗಳು ಆಕೆಯ ಸ್ವಪ್ನದಲ್ಲಿ ಪ್ರತ್ಯಕ್ಷವಾಗಿ ಬಂದು, ಎರಡು ತೆಂಗಿನಕಾಯಿಗಳನ್ನು ತಕ್ಕೊಂಡು ಆಕೆಯ ಉಡಿಯನ್ನು ತುಂಬಿ, ॥ ೬೫ ॥— ಎಲೌ ಸ್ತ್ರೀಯಳೇ ಇನ್ನು ನೀನು ಪಾರಣೆಯನ್ನು ಮಾಡು ನಿನಗೆ ನಿಶ್ಚಯವಾಗಿ ಗಂಡು-ಹೆಣ್ಣು ಮಕ್ಕಳು ಆಗುವರು ಮುಂದೆ ಅವರ ಸಂತತಿಯು ಬಹಳವಾಗುವದು. ನೀನು ಮನಸ್ಸಿನಲ್ಲಿ ಏನೂ ಚಿಂತೆ ಮಾಡಬೇಡ ಎಂದು ಹೇಳಿದರು. ॥ ೬೬ ॥ ಶ್ರೀ ಗುರುಗಳ ನಿರೋಪದಂತೆ ಆ ದಂಪತಿಗಳು ಆರಾಧನೆ ಮಾಡಲು ಅವರು ಪ್ರಸನ್ನರಾದರು. ॥ ೬೭ ॥ ಪರಿಸವು ಲೋಹಕ್ಕೆ ಸ್ಪರ್ಶವಾದ ಕೂಡಲೆ ಆ ಲೋಹವು ಬಂಗಾರವಾಗುವಂತೆ, ಚಿಂತಾಮಣಿಯು ಸ್ಪರ್ಶವಾದ ಕಲ್ಲು ಬಂಗಾರವಾಗುವಂತೆ, ಶ್ರೀ ಗುರುಗಳು ಪ್ರಸನ್ನರಾದ ಕೂಡಲೆ ಆ ಸ್ತ್ರೀಯಳು ಕೂಡಲೆ ಪಾಪರಹಿತಳಾದಳು. ॥ ೬೮ ॥ ಮುಂದೆ ಆ ಸ್ತ್ರೀಯಳಿಗೆ ಗುರುಕೃಪೆಯಿಂದ ಮೊದಲು ಒಬ್ಬ ಮಗನೂ ಆಮೇಲೆ ಒಬ್ಬ ಮಗಳೂ ಹೀಗೆ ಪೂರ್ಣಾಯುಷ್ಯವುಳ್ಳ ಇಬ್ಬರು ಮಕ್ಕಳಾದರು. ಎಲೈ ನಾಮಧಾರಕಾ, ಮುಂದಿನ ಸಂಗತಿಯನ್ನು ಏಕಚಿತ್ತದಿಂದ ಕೇಳು. ॥ ೬೯ ॥ ಹೀಗೆ ಶ್ರೀ ಗುರುಗಳ ಆಶೀರ್ವಾದದಂತೆ ಆ ದಂಪತಿಗಳಿಗೆ ಮೊದಲು ಒಬ್ಬ ಮಗನು ಹುಟ್ಟಿದನು. ಆಗ ಅವರು ಒಳ್ಳೇ ಹರ್ಷದಿಂದ ಸಂರಕ್ಷಿಸುತ್ತಿದ್ದರು. ಮುಂದೆ ಆ

ಕೂಸಿಗೆ ೨ ವರುಷ ತುಂಬಲು ಆ ದಂಪತಿಗಳು— ಈ ಜೇಷ್ಠಪುತ್ರನ ವ್ರತಬಂಧ ಸಮಾರಂಭವನ್ನು ಒಳ್ಳೇ ಆನಂದದಿಂದಲೂ ವೈಭವದಿಂದಲೂ ಮಾಡೋಣ. ಈಗ ಮೊದಲು ಚೌಲಕರ್ಮ ಮಾಡೋಣ ಎಂದು. ॥ ೨೦ ॥ ಆ ಬಾಲಕನ ಮೂರನೇ ವರ್ಷದಲ್ಲಿ ಆ ಚೌಲಕರ್ಮದ ಸಮಾರಂಭವನ್ನು ಉಲ್ಲಾಸದಿಂದ ಮಾಡಬೇಕೆಂದು ಗೊತ್ತು ಮಾಡಿದರು. ॥ ೨೧ ॥ ಮುಂದೆ ಒಂದು ಉತ್ತಮ ಮುಹೂರ್ತವನ್ನು ನೋಡಿ ಪ್ರೀತಿಯಿಂದ ಆ ಸಮಾರಂಭದ ಸಿದ್ಧತೆಯನ್ನು ನಡಿಸಿದರು. ಆದರೆ ಆ ಚೌಲಕರ್ಮದ ಹಿಂದಿನ ದಿವಸ ಮಧ್ಯರಾತ್ರಿಯಲ್ಲಿ ಆ ಹುಡುಗನಿಗೆ ಒಂದು ಬೇನೆಯು ಬಂತು. ॥ ೨೨ ॥ ವ್ಯಾಧಿಗಳು ಅನೇಕ ಇರುವವು ಅವುಗಳಲ್ಲಿ ಒಂದರಕ್ಕಿಂತ ಒಂದು ಹೆಚ್ಚಿನವಿರುತ್ತವೆ. ಅವುಗಳಲ್ಲಿ ಆ ಹುಡುಗನಿಗೆ ತೀವ್ರ ದುಃಖವನ್ನು ಕೊಡುವಂಥ ಧನುರ್ವಾಯುವು ಬಂತು. ॥ ೨೩ ॥ ಅದರಿಂದ ಆ ಬಾಲಕನು ಬಿಲ್ಲು ಮಣಿದಂತೆ ಮಣಿಯಹತ್ತಿದ್ದರಿಂದ ಅವನ ಅವಯವಗಳೆಲ್ಲ ಡೊಂಕಾದವು, ಕಣ್ಣುಗಳು ಭಯಂಕರವಾಗಿ ಕಾಣಹತ್ತಿದವು ಈ ಪ್ರಕಾರ ಆ ಕೂಸು ಮೂರುದಿವಸ ಬಹಳ ಕಷ್ಟಬಟ್ಟಿತು ॥ ೨೪ ॥ ಆ ಕೂಸು ಮೂರನೇ ದಿವಸ ಅಸ್ತಮಾನಕಾಲವಾದ ಕ್ಷಣದಲ್ಲಿಯೇ ಮೃತಪಟ್ಟಿತು. ಕೂಡಲೆ ತಾಯಿಯು ಶೋಕ ಮಾಡಹತ್ತಿದಳು. ಶ್ರೋತೃಗಳೇ ಏಕಚಿತ್ತದಿಂದ ಕೇಳಿರಿ. ॥ ೨೫ ॥ ಆ ಸ್ತ್ರೀಯು ಆಕ್ರೋಶ ಮಾಡುತ್ತ— ಅಯ್ಯೋ! ನನ್ನ ಮಗನೇ! ಎಂದು ಕಸುವಿನಿಂದ ಭೂಮಿಗೆ ತನ್ನ ತಲೆಯನ್ನು ಹಚ್ಚಿ ಅಪ್ಪಳಿಸುತ್ತ, ಕಲ್ಲು ತಕ್ಕೊಂಡು ಎದೆಗೆ ಹೊಡಕೊಳ್ಳುತ್ತಿದ್ದಳು. ॥ ೨೬ ॥ ಅದರಿಂದ ಅವಳು ಕ್ಷಣಕಾಲ ಎಚ್ಚರದಪ್ಪಿ ಭೂಮಿಯಲ್ಲಿ ಬಿದ್ದು ಅಪಾರವಾದ ದುಃಖವನ್ನು ಹೊಂದಿ ಕಣ್ಣೀರು ಸುರಿಸುತ್ತಿದ್ದಳು. ॥ ೨೭ ॥ ಆಮೇಲೆ ಅವಳು ಎಚ್ಚತ್ತು ಆ ಸತ್ತ ಕೂಸಿನ ಮೇಲೆ ಉರುಳಾಡುತ್ತ ಮಾಯಾಜಾಲದಿಂದ ಕೂಡಿದವಳಾಗಿ ಆ ಪ್ರೇತವನ್ನು ಗಟ್ಟಿಯಾಗಿ ಅಪ್ಪಿಕೊಳ್ಳುತ್ತ ಪ್ರಳಾಪ ಮಾಡುತ್ತಿದ್ದಳು. ॥ ೨೮ ॥ ಅಪ್ಪಾ ಮಗನೇ! ಪ್ರಾಣರಕ್ಷನೇ, ನನ್ನ ಪ್ರಿಯನೇ! ಬಾಳಾ! ನನ್ನನ್ನು ಬಿಟ್ಟು ಎಲ್ಲಿಗೆ ಹೋದಿ ಹೇಳು? ॥ ೨೯ ॥ ಅಥವಾ ಎಲ್ಲಿಗಾದರೂ ಆಡಲಿಕ್ಕೆ ಹೋದೆಯಾ? ನನ್ನ ಮೊಲೆಗಳಿಂದ ಹಾಲು ಸುಮ್ಮನೆ ಹರಿದುಹೋಗುತ್ತವಲ್ಲಾ? ನನ್ನ ಪ್ರಾಣಪ್ರಿಯಾ? ಆ ಆಟವನ್ನು ಬಿಟ್ಟು

ತೀವ್ರ ಓಡಿಬಾ. ॥ ೮೦ ॥ ಮಗನೇ, ನಿನ್ನ ಗುಣವನ್ನು ನಾನು ಹೇಗೆ ಮರೆಯಲಿ ? ॥ ೮೧ ॥ ನಿನ್ನಷ್ಟು ಸುರೂಪವುಳ್ಳ ಮಗನನ್ನು ನಿಶ್ಚಯವಾಗಿ ಇನ್ನು ನಾನು ಹ್ಯಾಗೆ ಕಂಡೇನು ? ಅಯ್ಯೋ ! ಇನ್ನು ನಾನು ನಿನ್ನ ರೂಪವನ್ನು ಸ್ವಪ್ನದಲ್ಲಿ ನೋಡುವಹಾಗಾಯಿತಲ್ಲಾ ? ॥ ೮೨ ॥ ಅಯ್ಯೋ ! ಈ ಮೊದಲು ನನಗೆ ಐದು ಜನ ಮಕ್ಕಳು ಸತ್ತರು. ಆದರೆ ಈಗ ನೀನೊಬ್ಬನು ಬದುಕಿದಿ ಎಂದು ತಿಳಿದಿದ್ದೆನು. ನಾನು ನಿನ್ನ ಗರ್ಭಧಾರಣ ಮಾಡಿದಂದಿನಿಂದ ನಾನು ಬಹಳ ಆನಂದಸಾಗರದಲ್ಲಿ ಮುಳುಗಿದ್ದೆನು. ॥ ೮೩ ॥ ನನಗೆ ಬಯಕೆಗಳಾದರೂ ಉತ್ತಮ ರೀತಿ ಆದವು. ನನ್ನ ಮನಸ್ಸಿನಲ್ಲಿ ಯಾವ ಚಿಂತಿಯೂ ಇದ್ದಿಲ್ಲ. ಪುತ್ರನು ಹುಟ್ಟುವನೆಂದು ಅತಿ ಉಲ್ಹಾಸ ದಿಂದ್ದೆನು. ॥ ೮೪ ॥ ಶ್ರೀ ಗುರುಗಳು ನಿಶ್ಚಯವಾಗಿ ನಿನಗೆ ಪುತ್ರನಾಗುವನೆಂದು ಪ್ರೀತಿಯಿಂದ ವರವನ್ನು ಸಹ ಕೊಟ್ಟಿದ್ದರು. ಅದರಂತೆ ನೀನು ಹುಟ್ಟಿದಿ ಅದರಿಂದ ಇದು ವರದ ಪಿಂಡವಾಗುವದೆಂದು ಸಂತೋಷಬಟ್ಟೆನು. ॥೮೫॥ ಎಲೈ ಪುತ್ರನೇ, ನಿನ್ನನ್ನು ಹಡೆದಬಳಿಕ ನಾನು ಅನಂತ ಸುಖಗಳನ್ನು ಹೊಂದಿದೆನು. ಎಲೈ ಪ್ರಾಣಪ್ರಿಯನೇ, ನೀನು ಮುಪ್ಪಿನಕಾಲದಲ್ಲಿ ನಮ್ಮನ್ನು ರಕ್ಷಿಸುವಿ ಎಂದು ನಾನು ಮನಸ್ಸಿನಲ್ಲಿ ಭರವಸೆಮಾಡಿ ನಿನ್ನನ್ನು ಸಂರಕ್ಷಿಸಿದೆನು. ॥೮೬॥ ಪುತ್ರರಾಯಾ ! ಈಗ ನೀನು ಆ ನನ್ನ ಭರವಸವನ್ನು ಸುಳ್ಳುಮಾಡಿ ನಮ್ಮನ್ನು ಬಿಟ್ಟುಹೋಗುವದು ಯೋಗ್ಯವಾದ ಧರ್ಮವಲ್ಲ. ॥ ೮೭ ॥ ನನಗೆ ಹಿಂದಕ್ಕೆ ಬಹಳಮಂದಿ ಮಕ್ಕಳು ಸತ್ತು ನನಗೆ ಬಹಳ ದುಃಖವಾಗಿತ್ತು, ಬಾಳಾ, ನಿನ್ನನ್ನು ನೋಡಿ ಆ ಹಿಂದಿನ ದುಃಖವನ್ನು ಮರೆತಿದ್ದೆನು. ನೀನು ಸತ್ಯವಾಗಿ ನಮ್ಮನ್ನು ಉದ್ಧರಿಸುವಿಯೆಂದು ನಮಗೆ ವಿಶ್ವಾಸವಿತ್ತು. ॥ ೮೮ ॥ ಎಂದು ಆಕೆಯು ನಾನಾರೀತಿಯಾಗಿ ದುಃಖಿಸುತ್ತಿದ್ದಳು. ಅದನ್ನು ಕಂಡು ಆ ಊರ ಯಾವತ್ತೂ ಜನರು ಬಂದು— ಎಲೌ ಸ್ತ್ರೀಯೇ, ಆಗಬಾರದು ಆದಮಾತಿಗೆ ಯಾಕೆ ದುಃಖ ಮಾಡುತ್ತೀ ? ಮಾಡಬೇಡ. ॥ ೮೯ ॥ ದೇವ-ದಾನವ-ಋಷೀಶ್ವರರಿಗೆ ಸಹ ಆಗತಕ್ಕ ಕೇಡು ತಪ್ಪುವದಿಲ್ಲ. ಬ್ರಹ್ಮನು ಹಣೆಯಲ್ಲಿ ಬರೆದಂತೆ ನಿಶ್ಚಯವಾಗಿ ಆಗುವದು. ॥ ೯೦ ॥ ಹರಿ-ಹರರು ಅನೇಕ ಅವತಾರ ಮಾಡಿದರು. ಈಗ ಅವು ಒಂದಾದರೂ ಸ್ಥಿರವಾಗಿರುವವೇ ? ನಾವಂತೂ ನರಮನುಷ್ಯರಾದ್ದರಿಂದ ನಮ್ಮ ಹಣೇಬರಹವು ಹ್ಯಾಗೆ

ತಪ್ಪೀತು ? ದುಃಖ ಮಾಡಬೇಡ ಎಂದು ಸಮಾಧಾನ ಮಾಡುತ್ತಿದ್ದರು. ॥ ೯೧ ॥ ಜನರು ಈ ಪ್ರಕಾರವಾಗಿ ಹೇಳುತ್ತಿರಲು ಆಕೆಯು ಮನಸ್ಸಿನಲ್ಲಿ ಮತ್ತೊಂದು ಮಾತನ್ನು ನೆನಿಸಿಕೊಂಡು— ಎಲೈ ಜನರುಗಳಿರಾ, ನೀವು ಹೇಳುವದೆಲ್ಲಾ ಖರೆ. ಆದರೆ ಶ್ರೀನರಸಿಂಹಸರಸ್ವತಿ ಸ್ವಾಮಿಗಳು ಈ ಭೂಮಿಯಲ್ಲಿ ಪ್ರಸಿದ್ಧರಾಗಿ ಔದುಂಬರದಲ್ಲಿ ವಾಸಿಸುತ್ತಿದ್ದು, ನಾನು ಅವರ ಸೇವಾ ಮಾಡಿದೆನು. ಆಗ ಅವರು ನನ್ನನ್ನು ಕುರಿತು— ಎಲೌ ಸ್ತ್ರೀಯೇ, ನಿನಗೆ ಶತಾಯುಷಿಗಳಾದ ಪುತ್ರರಾಗುವರೆಂದು ವರವನ್ನು ಕೊಟ್ಟು ಎರಡು ಫಲಗಳನ್ನು ನನ್ನ ಉಡಿ ತುಂಬಿದರು, ಆದರಿಂದ ಈ ಮಗನು ಹುಟ್ಟಿದನು. ಆದರೆ ಅವರ ಮಾತು ಯಾಕೆ ಸುಳ್ಳಾಯಿತು ? ನನ್ನ ಮಗನು ಶತಾಯುಷಿ ಯಾಕೆ ಆಗಲಿಲ್ಲ ? ಅವರು ನನಗೆ ವರವನ್ನು ಕೊಟ್ಟು, ಈಗ ನನ್ನ ಮಗನನ್ನು ಕೊಂದು ನನಗೆ ಪುತ್ರಶೋಕ ವನ್ನುಂಟು ಮಾಡಿ ನನ್ನನ್ನು ಕೊಲ್ಲುವರಲ್ಲಾ ? ಇದಕ್ಕೇನು ಹೇಳುವಿರಿ ? ಈಗ ನಾನು ನನ್ನ ಮಗನ ಸಂಗಡ ಪ್ರಾಣ ಬಿಡುವೆನು. ಆದರಿಂದ ಆ ಗುರುಗಳಿಗೆ ನನ್ನನ್ನು ಕೊಂದ ದೋಷವು ಬರುವದು ॥ ೯೨—೯೩—೯೪ ॥ ಎಂದು ಹೇಳಿ, ಶ್ರೀ ಗುರುಗಳನ್ನು ನೆನಿಸಿ— ದೇವಾ, ಶ್ರೀ ಗುರುಗಳೇ, ನೀವು ನನಗೆ ಬಹಳ ದುಃಖ ಕೊಟ್ಟಿರಿ ! ನಿಮ್ಮ ವಾಕ್ಯವು ಸತ್ಯವೆಂದೂ ನೀವು ಸತ್ಯಸಂಕಲ್ಪರಿರುತ್ತೀರೆಂದೂ ನಾನು ನಿಮ್ಮಮೇಲೆ ವಿಶ್ವಾಸವಿಟ್ಟೆನು. ॥ ೯೫ ॥ ಆದರೆ ನೀವು ನನ್ನ ಘಾತ ಮಾಡಿದಿರಿ. ನಿಮಗೆ ವಿಶ್ವಾಸಘಾತಕಿಗಳೆಂದು ಯಾಕೆ ಅನ್ನಬಾರದು ? ॥ ೯೬ ॥ ನೀವು ತ್ರಿಮೂರ್ತಿಗಳ ಅವತಾರವಾಗಿದ್ದು ನರಸಿಂಹಸರಸ್ವತಿಗಳೆಂಬ ಹೆಸರಿನಿಂದ ಮನುಷ್ಯರಾಗಿದ್ದೀರಿ ನೀವು ಹಿಂದಿನ ಯುಗದಲ್ಲಿ ವಿಭೀಷಣನಿಗೂ, ಧ್ರುವನಿಗೂ, ವರ ಕೊಟ್ಟದ್ದು ಸತ್ಯವೆಂದು ಈಗ ನಾನು ಹ್ಯಾಗೆ ತಿಳಿ ಯಲಿ ? ॥ ೯೭ ॥ ನಿಮ್ಮ ಮಾತಿನಮೇಲೆ ವಿಶ್ವಾಸವಿಟ್ಟ ನನ್ನನ್ನು ಈಗ ನೀವು ನನ್ನ ಮನಸ್ಸನ್ನು ಬಹಳ ನಿಷ್ಠುರ ಮಾಡಿದಿರಿ. ಗುರುಗಳೇ, ನಿಮ್ಮ ಸಲುವಾಗಿ ನಾನು ಈಗ ಪ್ರಾಣ ಕೊಡುವೆನು. ॥ ೯೮ ॥ ನಿಮ್ಮ ಸ್ಥಳಕ್ಕೆ ಅನೇಕ ಜನರು ಬಂದು ಅಲ್ಲಿಯೇ ಇದ್ದು ನಿಮ್ಮನ್ನು ಸೇವಿಸಿ, ಔದುಂಬರವನ್ನು ಪೂಜಿಸಿ ಪ್ರದಕ್ಷಿಣೆ ಹಾಕಿ ಅನು ಷ್ಠಾನ ಮಾಡುವರು. ॥ ೯೯ ॥ ಅವರಿಗೆ ಫಲಗಳಾದವು. ಅವರಂತೆ ನಾನೂ ಪುನಶ್ಚರಣೆ ಮಾಡಿದೆನು. ಆದರೆ

ನನಗೆ ಮಾತ್ರ ಈ ರೀತಿ ಫಲವಾಯಿತು. ಆದ್ದರಿಂದ ನಿಮ್ಮ ಸ್ಥಳದಲ್ಲಿ ಏನು ವಿಶ್ವಾಸ ಉಳಿಯಿತು ಹೇಳಿರಿ ! ಈಗ ನಾನು ನಿಮ್ಮ ಸಲುವಾಗಿ ಪ್ರಾಣ ಬಿಡುವೆನು. || ೧೦೦ || ಈ ಸೃಷ್ಟಿಯಲ್ಲಿ ನಿಮ್ಮ ಕೀರ್ತಿಯು ಬಹಳವಾಗಿದೆ. ಆದರೆ ನೀವು ನನಗೆ ಈ ಪ್ರಕಾರ ಘಾತ ಮಾಡಿದ್ದರಿಂದ ಮುಂದೆ ನಿಮ್ಮನ್ನು ಭಜಿಸುವಂಥ ಭಕ್ತರಿಗೆ ನಿಮ್ಮಮೇಲೆ ಭರವಸವು ಹ್ಯಾಗೆ ಉಂಟಾಗಬೇಕು ? || ೧೧೧ || ಬ್ರಹ್ಮಹತ್ಯಾ ಪಾಪದಿಂದ ಪೀಡಿತಳಾದ ನಾನು ನಿಮ್ಮ ಚರಣವನ್ನು ಮರೆಹೊಕ್ಕೆನು. ನೀವು ಅದನ್ನು ಸ್ವೀಕರಿಸಿ, ಈಗ ಮಧ್ಯ ಕಾಲದಲ್ಲಿ ನಮ್ಮನ್ನು ಬಿಟ್ಟು ದೂರ ಒಗೆದರೆ ನಿಮಗೆ ಯಾವ ಧರ್ಮವು ಬರುವದು ? || ೧೦೨ || ಗುರುವೇ ಹುಲಿಯ ದೆಶೆಯಿಂದ ಅಂಜಿದಂಥ ಆಕಳು ಬದುಕಬೇಕೆಂಬ ಆಶೆಯಿಂದ ಕಟುಕನ ಮನೆಯನ್ನು ಹೊಗಲು, ಅವನು ಅದನ್ನು ಕೊಲ್ಲುವಂತೆ ಈಗ ನನ್ನ ಸ್ಥಿತಿಯಾಯಿತು. || ೧೦೩ || ಪೂಜೆಗೆಂದು ದೇವಾಲಯಕ್ಕೆ ಹೋದಂಥ ಮನುಷ್ಯನ ಮೇಲೆ ಆ ದೇವಾಲಯವೇ ಮೃತ್ಯುರೂಪವಾಗಿ ಬಿದ್ದಂತೆ ಈಗ ನನ್ನ ಅವಸ್ಥೆಯಾಯಿತು. || ೧೦೪ || ದೇವಾ, ಆದರಂತೆ ನೀನೂ ಆಗಿ, ಈಗ ನನ್ನ ಮಗನನ್ನು ಬದುಕಿಸಲಿಲ್ಲ ಏನು ಮಾಡಲಿ ? || ೧೦೫ || ಎಂದು ಅನ್ನುತ್ತ ಯಾರನ್ನೂ ಕೇಳದೆ ಅಹೋ-ರಾತ್ರಿ ದುಃಖಿಸುತ್ತಿದ್ದಳು. ಅಷ್ಟರಲ್ಲಿ ಸೂರ್ಯೋದಯವಾಯಿತು || ೧೦೬ || ಆಗ ಅನೇಕ ಬ್ರಾಹ್ಮಣರು ಆಕೆಯ ಹತ್ತರ ಬಂದು— ಎಲೌ ಸ್ತ್ರೀಯಳೇ, ನೀನು ಮೂರ್ಖತನದಿಂದ ಸುಮ್ಮನೆ ವ್ಯರ್ಥವಾಗಿ ಸದಾ ಯಾಕೆ ದುಃಖಿಸುತ್ತೀ ? || ೧೦೭ || ಯಾವ ಯಾವ ಕಾಲದಲ್ಲಿ ಯಾರ್ಯಾರಿಗೆ ಏನೇನು ಆಗಬೇಕೋ ಅದು ಆಗೇ ಆಗುತ್ತದೆ. ಅದು ಬ್ರಹ್ಮಾದಿಗಳಿಗೂ ತಪ್ಪುವದಿಲ್ಲ ಆದಕಾರಣ ಪ್ರೇತಸಂಸ್ಕಾರ ಮಾಡುವದಕ್ಕೆ ನದಿಯಹತ್ತರ ಹೋಗೋಣ ನಡೆ ಎಂದು ಅಂದರು || ೧೦೮ || ಅವರ ಮಾತು ಕೇಳಿ ಆಕೆಯು ಆಕ್ರೋಶ ಮಾಡಿ ಆ ಪ್ರೇತವನ್ನು ತನ್ನ ಹೊಟ್ಟೆಗೆ ಅವಚಿಕೊಂಡು ದೀರ್ಘಸ್ವರದಿಂದ ಅಳುತ್ತ, || ೧೦೯ || ಆ ಬ್ರಾಹ್ಮಣರನ್ನು ಕುರಿತು— ಎಲೈ ಬ್ರಾಹ್ಮಣರೇ, ಈ ಪ್ರೇತದ ಸಂಗಡ ನನ್ನನ್ನೂ ಸುಟ್ಟುಬಿಡಿರಿ ! ಇಲ್ಲದಿದ್ದರೆ ಈ ಪ್ರೇತವನ್ನು ನಾನು ಕೊಡುವದಿಲ್ಲ, ಎಂದು ಅದನ್ನು ಹೊಟ್ಟೆಗೆ ಕಟ್ಟಿಕೊಂಡಳು. || ೧೧೦ || ಆಗ ಆ ಜನರು ಆಕೆಯನ್ನು ಕುರಿತು—

ಎಲೌ, ನೀನು ಸ್ತ್ರೀಯಲ್ಲ, ಮಹಾಕರ್ಕಶಿಯು! ಪ್ರೇತದ ಸಂಗಡ ಪ್ರಾಣ ಕೊಡುತ್ತೇನೆನ್ನುತ್ತೀ, ಇದು ಯಾವ ಧರ್ಮವೆಂಬದನ್ನು ನನಗೆ ಹೇಳು. ॥ ೧೧೧ ॥ ಸತ್ತ ಮಗನ ಸಂಗಡ ಯಾವ ತಾಯಿಯೂ ಸತ್ತದ್ದನ್ನು ನಾವು ಇವತ್ತಿನ ವರೆಗೆ ಎಲ್ಲಿಯೂ ಕೇಳಿಲ್ಲ ಮತ್ತು ನೋಡಿಲ್ಲ. ಮೂರ್ಖತನದಿಂದ ನೀನು ಸುಮ್ಮನೆ ಬಡಬಡಿಸುತ್ತೀ, ಆತ್ಮಹತ್ಯೆಯು ಮಹಾ ದೋಷವೆಂದು ತಿಳಿ, ಎಂದು ಹೇಳಿದರು. ॥ ೧೧೨ ॥ ಈ ಪ್ರಕಾರ ಅವರು ನಾನಾರೀತಿ ಯಾಗಿ ಹೇಳಿದರೂ ಅವಳು ಮಗನ ಸಂಗಡ ಪ್ರಾಣ ಬಿಡುವದಕ್ಕೆ ನಿಶ್ಚಯ ಮಾಡಿದಳು. ॥ ೧೧೩ ॥ ಆ ದಿನ ಎರಡು ಪ್ರಹರ ಹೊತ್ತಾದರೂ ಆಕೆಯು ಸಂಸ್ಕಾರ ಮಾಡುವದಕ್ಕೆ ಪ್ರೇತವನ್ನು ಕೊಡಲಿಲ್ಲ, ಗಂಗಾತೀರಕ್ಕೂ ಬರಲಿಲ್ಲ. ಆಗ ಆ ಗ್ರಾಮದಲ್ಲಿ ಗೋಳಾಟ ನಡೆಯಿತು ॥ ೧೧೪ ॥ ಅಷ್ಟರಲ್ಲಿ ಒಬ್ಬ ಬ್ರಹ್ಮಚಾರಿಗಳು ಅಲ್ಲಿಗೆ ಬಂದು ಆಕೆಗೆ ವಿಸ್ತಾರವಾಗಿ ಆತ್ಮಜ್ಞಾನವನ್ನು ಹೇಳಹತ್ತಿದರು ॥ ೧೧೫ ॥ ಎಲೈ ನಾಮಧಾರಕನೇ ಮುಂದೆ ಬಹಳ ಅಪೂರ್ವ ಕಥೆಯಾಯಿತು ಹೇಳುವೆನು ಕೇಳು. ಆ ಬ್ರಹ್ಮಚಾರಿಗಳು ಎಂದೂ ಬರದಿದ್ದವರು ಈಗ ಬಂದು ಆಕೆಗೆ ಬ್ರಹ್ಮಜ್ಞಾನವನ್ನು ಹೇಳಹತ್ತಿದರು. ॥ ೧೧೬ ॥ ಆದರೆ ಅವರು ಬ್ರಹ್ಮಚಾರಿಗಳಲ್ಲ ಅವರೇ ಭಕ್ತವತ್ಸಲ ರಾದ ಶ್ರೀ ನರಸಿಂಹ ಸರಸ್ವತಿ ಗುರುಗಳು ಅವರು ಮನುಷ್ಯರಾಗಿ ಬ್ರಹ್ಮಚಾರಿ ವೇಷದಿಂದ ಅಲ್ಲಿಗೆ ಬಂದಿದ್ದರು ॥ ೧೧೭ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿ ಮನೋಹರವಾದ ಈ ಗುರುಚರಿತ್ರೆಯನ್ನು ಕೇಳುವದರಿಂದ ಶತಾಯುಷಿ ಪುತ್ರನಾಗುವನು. ॥ ೧೧೮ ॥ ಭಕ್ತಿಪೂರ್ವಕ ಈ ಗುರುಚರಿತ್ರೆಯನ್ನು ಪೂರ್ಣವಾಗಿ ಶ್ರವಣ ಮಾಡುವದರಿಂದ ಅವರಿಗೆ ರೋಗಾದಿಗಳು ಬರುವದಿಲ್ಲ. ಅವರು ಪೂರ್ಣಾಯುಷಿಗಳಾಗುವರು. ಈ ನನ್ನ ಮಾತು ಸತ್ಯವೆಂದು ತಿಳಿಯಿರಿ ಎಂದು ಹೇಳಿದನು. ॥ ೧೧೯ ॥ ಗುರುಚರಿತ್ರಾಮೃತದ ಈ ಅಧ್ಯಾಯದಲ್ಲಿ ಶ್ರೀ ನರಸಿಂಹ ಸರಸ್ವತಿ ಗುರುಗಳು ಬ್ರಾಹ್ಮಣ ಸ್ತ್ರೀಯಳ ಬ್ರಹ್ಮಹತ್ಯಾ ದೋಷವನ್ನು ಕಳೆದು ಆಕೆಗೆ ಸಂತಾನವನ್ನು ಕೊಟ್ಟರೆಂದು ಹೇಳಿದೆ. ॥ ೧೨೦ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಬ್ರಹ್ಮಸಂಬಂಧ ಪರಿಹಾರ-ಕ್ಷೇತ್ರ ಜನನೀ ಶೋಕನಂ ನಾಮ ವಿಂಶೋಽಧ್ಯಾಯಃ || ೨೦ ||
ಶ್ರೀ ಗುರುದೇವದತ್ತ ||

— ೨೦ನೇ ಅಧ್ಯಾಯ ಸಮಾಪ್ತ —

# ೨೧ನೇಯ ಅಧ್ಯಾಯ

## — ಬಾಲ ಸಂಜೀವನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕನೇ, ಅವತಾರಿಗಳಾದ ಆ ಬ್ರಹ್ಮಚಾರಿಗಳು ಆ ಪ್ರೇತಜನನಿಗೆ ಜ್ಞಾನವನ್ನು ಹೇಳಿದ್ದನ್ನು ಕೇಳು ‖ ೧ ‖— ಎಲೌ ಸ್ತ್ರೀಯಳೇ, ನೀನು ಮೂರ್ಖತನದಿಂದ ದುಃಖ ಮಾಡುತ್ತೀ ಈ ಸಂಸಾರಸಾಗರ ಭೂಮಿಯಲ್ಲಿ ಹುಟ್ಟಿದವರು ಒಬ್ಬರಾದರೂ ಬದುಕಿರುತ್ತಾರೋ? ಅದನ್ನು ನನಗೆ ಹೇಳು ‖ ೨ ‖ ಹುಟ್ಟುವವರ್‍ಯಾರು? ಸಾಯುವವರ್‍ಯಾರು? ಈ ದೇಹವು ಎಲ್ಲಿಂದ ಉತ್ಪತ್ತಿಯಾಯಿತು? ಇದನ್ನು ತಿಳಿದು ನೋಡು. ನೀರ ಮೇಲೆ ಹುಟ್ಟಿದ ಗುಳ್ಳಿಯು ಕಡೆತನಕ ಹಾಗೇ ಎಲ್ಲಿ ಸ್ಥಿರವಾಗಿ ಉಳಿಯುತ್ತದೆ? ‖ ೩ ‖ ಅದರಂತೆ ಈ ದೇಹವು ಪಂಚಭೂತಗಳಿಂದ ಕೂಡಿ ಆಗಿರುವದು. ಆ ಪಂಚಭೂತಗಳು ಬೇರೆ ಬೇರೆಯಾದರೆ ಆಗ ಈ ದೇಹವು ಸ್ಪಷ್ಟ ಕಾಣುವದಿಲ್ಲವೆಂದು ತಿಳಿ. ‖ ೪ ‖ ಆ ಪಂಚಭೂತಗಳ ಗುಣಗಳು ಮಾಯಾಪಾಶದಿಂದ ಸುತ್ತಿ, ಈ ದೇಹವೇ ನಾನೆಂಬ ಭ್ರಾಂತಿಯನ್ನುಂಟುಮಾಡುವವು. ಈ ಪುತ್ರ-ಮಿತ್ರ-ಕಲತ್ರಾದಿಗಳೂ ಅದರಂತೆಯೇ ಸರಿ. ‖ ೫ ‖ ಸತ್ವ-ರಜ-ತಮೋ ಗುಣಗಳು ಈ ಪಂಚಭೂತಗಳಿಂದಾಗಿವೆ. ಅವುಗಳ ಲಕ್ಷಣಗಳು ಬೇರೆ ಬೇರೆಯಾಗಿರುವವು ಅವನ್ನು ಹೇಳುವೆನು ಕೇಳು. ‖ ೬ ‖ ಸತ್ವಗುಣದಿಂದ ದೇವತೆಗಳೂ, ರಜೋಗುಣದಿಂದ ಮನುಷ್ಯರೂ, ತಮೋಗುಣದಿಂದ ದೈತ್ಯ-ದಾನವರೆಂಬ ರಾಕ್ಷಸರೂ ಆಗುವರು. ಆಮೇಲೆ ಅವರವರ ಗುಣಾನುಸಾರವಾಗಿ ಕರ್ಮಗಳುಂಟಾಗುವವು. ‖ ೭ ‖ ನಾವು ಪೂರ್ವಜನ್ಮದಲ್ಲಿ ಸುಕೃತ-ದುಷ್ಕೃತಗಳನ್ನು ಮಾಡಿದಂತೆ ಈಗ ಚಲೋ ಅಥವಾ ಕೆಟ್ಟ ಫಲವಾಗುವದು. ಆ ಫಲಗಳನ್ನು ನಾವೇ ಅನುಭವಿಸಬೇಕು. ‖ ೮ ‖ ಆ ಗುಣಗಳ

ವಾಸನಾದಂತೆ ಇಂದ್ರಿಯಗಳು ಅವುಗಳ ಅಧೀನವಾಗಿ ಹಾಗೆ ಹಾಗೆ ಕರ್ಮಗಳನ್ನು ಮಾಡುತ್ತವೆ. ಆದರಿಂದ ಎಲ್ಲರೂ ಮಾಯಾಪಾಶದಿಂದ ಸುತ್ತಲ್ಪಟ್ಟು, ಸುಖ-ದುಃಖಗಳಲ್ಲಿ ಮುಳುಗುವರು. ‖ ೯ ‖ ಈ ಸಂಸಾರದಲ್ಲಿ ಯಾವತ್ತು ಪ್ರಾಣಿಗಳು ತಮ್ಮ ಪೂರ್ವಕರ್ಮದ ಗುಣಾನುಸಾರವಾಗಿ ಆಯಾ ಜಾತಿಗಳಲ್ಲಿ ಹುಟ್ಟುವವು ಹಾಗು ಆ ಕರ್ಮ ಫಲದಂತೆ ಸುಖ-ದುಃಖಗಳನ್ನು ಅನುಭವಿಸುವವು. ‖ ೧೦ ‖ ಕೋಟಿ ಕಲ್ಪಗಳವರೆಗ ಆಯುಷ್ಯವುಳ್ಳ ದೇವರ್ಷಿಗಳಿಗಾದರೂ ಕರ್ಮಫಲವು ತಪ್ಪುವದಿಲ್ಲ ಹೀಗಿರಲು ನಮ್ಮಂಥ ಮನುಷ್ಯರ ಪಾಡೇನು ? ‖ ೧೧ ‖ ದೇಹಾಧೀನನಾದಂಥವನು ತನ್ನ ಕರ್ಮದ ಗುಣದಂತೆ ಫಲವನ್ನು ಹೊಂದುವನು. ಕರ್ಮಗಳು ಅನೇಕವಾಗಿದ್ದಂತೆ ದೇಹಗಳೂ ಅನೇಕ ಪ್ರಕಾರವಾಗಿರುವವು. ‖ ೧೨ ‖ ದೇಹಧಾರಿಯಾದವರಿಗೆ ನಾನಾವಿಕಾರಗಳುಂಟಾಗುವವು. ಅವು ತನ್ನ ಪಾಪದಿಂದ ಆಗುವವೆಂದು ನಿಶ್ಚಯವಾಗಿ ಸ್ಥಿರವಾದವುಗಳಲ್ಲಿ ಆ ವಿಕಾರಗಳು ತಮ್ಮ ಪಾಪದಿಂದುಂಟಾಗಿವೆ ಎಂದು ತಿಳಿಯಬೇಕು. ‖ ೧೩ ‖ ಆ ಕಾರಣದಿಂದ ಜ್ಞಾನಿಗಳಾದವರು ಮನುಷ್ಯನು ಹುಟ್ಟಿದರೆ ಸಂತೋಷಬಡುವದಿಲ್ಲ. ಸತ್ತರೆ ದುಃಖಬಡುವದಿಲ್ಲ. ‖ ೧೪ ‖ ಎಲೌ ಸ್ತ್ರೀಯಳೇ ಗರ್ಭೋತ್ಪತ್ತಿಯಾದಾಗ ಯಾವ ಆಕಾರವು ಕಾಣುವದು ಹೇಳು. ಆಗ ಅವ್ಯಕ್ತವಾಗಿದ್ದದ್ದು, ಮುಂದೆ ಅದು ಅಲ್ಲಿ ದೇಹವನ್ನು ಹೊಂದಿ ವ್ಯಕ್ತವಾಗಿ ಕಾಣುವದು. ಅದು ಮುಂದೆ ಹಾಗೇ ಬೆಳೆದು ಮೃತಿಯನ್ನು ಹೊಂದಿ ಮತ್ತೆ ಕಾಣದಂತಾಗುವದು. ‖ ೧೫ ‖ ನೀರಿನಲ್ಲಿ ಉಂಟಾದ ಗುಳ್ಳೆಗಳು ಆ ಕ್ಷಣವೇ ನಾಶವಾಗುವಂತೆ, ಈ ದೇಹವು ಸರ್ವಥಾ ಎಂದೂ ಸ್ಥಿರವಾಗಿರುವದಿಲ್ಲ. ‖ ೧೬ ‖ ಈ ದೇಹವು ಹುಟ್ಟಿದಾಗಲೇ ಇದಕ್ಕೆ ನಾಶವುಂಟೆಂದು ತಿಳಿಯಬೇಕು. ನಾವು ಕರ್ಮಾನುಗುಣವಾಗಿ ಈ ದೇಹದಲ್ಲಿ ಫಲಗಳನ್ನು ಅನುಭವಿಸಬೇಕು. ‖ ೧೭ ‖ ಒಬ್ಬನು ತಾನು ಚಿಕ್ಕ ವಯಸ್ಸಿನಲ್ಲಾಗಲಿ, ಮುಪ್ಪಿನಲ್ಲಾಗಲಿ ಸಾಯುವದು, ತನ್ನ ಪೂರ್ವಜನ್ಮದ ಕರ್ಮದಂತೆ ಫಲವಾಗುವದೆಂದು ತಿಳಿಯಬೇಕು. ‖ ೧೮ ‖ ನಾವು ಮಾಯಾಪಾಶದಿಂದ ಕೂಡಿದವರಾಗಿ ಇವರು ತಂದೆ, ತಾಯಿ, ಮಗ, ಹೆಂಡತಿ, ಮಿತ್ರ ಇವರೆಲ್ಲರು ನಮ್ಮವರೆಂದು ಮೂಢತನದಿಂದ ಹೇಳಿಕೊಳ್ಳುವೆವು. ‖ ೧೯ ‖ ಮನುಷ್ಯನು ಒಂದು ವೇಳೆ

ಮೇಲೆ ನಿರ್ಮಲ ದೇಹವುಳ್ಳವನಾಗಿ ಕಂಡರೂ ಅವನು ಮಾಂಸ, ರಕ್ತ, ಮಲ, ಮೂತ್ರಾದಿಗಳು ತುಂಬಿದ ಘೋರವಾದ ಸ್ಥಾನದಿಂದ ಹುಟ್ಟಿರುವನು. ಅವನ ದೇಹದಲ್ಲಿಯೂ ಮಾಂಸಾದಿಗಳು ತುಂಬಿರುತ್ತವೆ. ॥ ೨೦ ॥ ಹುಟ್ಟುವವರು ತಮ್ಮ ಕರ್ಮಾನುಸಾರವಾಗಿ ಸುಖದುಃಖಗಳನ್ನು ಅನುಭವಿಸಲೆಂದು ಬ್ರಹ್ಮನು ಮೊದಲೇ ನಮ್ಮ ಹಣೆಯಲ್ಲಿ ಬರೆದಿರುವನು. ಆದರಂತೆ ನಾವು ಅನುಭವಿಸಲಿಕ್ಕೆ ಬೇಕು. ॥ ೨೧ ॥ ಈ ಪ್ರಕಾರ ಕರ್ಮಕಾಲವನ್ನು ಗೆದ್ದವರಾರೂ ಇಲ್ಲ. ಆದಕಾರಣ ಈ ದೇಹಕ್ಕೆ ನಿತ್ಯತ್ವವಿಲ್ಲ ಇದು ಅಸ್ಥಿರವಾದದ್ದು ॥ ೨೨ ॥ ಸ್ವಪ್ನದಲ್ಲಿ ಸತ್ಯವಾಗಿ ಕಂಡದ್ದನ್ನು ಎಚ್ಚರವಾದ ಬಳಿಕೂ ಅದು ಸತ್ಯವೆಂದು ಯಾರು ತಿಳಿಯುವರು? ಇಂದ್ರಜಾಲ ಗಾರುಡದ ಹಾಗೆ ಇದ್ದ ಈ ದೇಹವು ಸ್ಥಿರವಾದದ್ದೆಂದು ಹ್ಯಾಗೆ ತಿಳಿಯಬೇಕು? ಹಾಗೆ ಎಂದೂ ತಿಳಿಯಬಾರದು. ॥ ೨೩ ॥ ಎಲೌ ಸ್ತ್ರೀಯಳೇ ಈಗ ಮೊದಲು ನಿನ್ನದು ನೀನೇ ಹೇಳು! ನೀನು ಇದುವರೆಗೆ ಕೋಟಿಗಟ್ಲೆ ಪಶು, ಪಕ್ಷಿ, ಕ್ರಿಮಿ, ಕೀಟಕ, ಮನುಷ್ಯ ಮೊದಲಾದ ಯೋನಿಗಳಲ್ಲಿ ಜನ್ಮಹೊಂದಿದಿ ॥ ೨೪ ॥ ನೀನು ಈ ಮೊದಲು ಮನುಷ್ಯ ದೇಹದಲ್ಲಿ ಅನೇಕ ಸಾರೆ ಹುಟ್ಟಿ ಯಾರ್ಯಾರಿಗೆ ತಾಯಿಯಾಗಿದ್ದಿ? ಯಾರ್ಯಾರಿಗೆ ಹೆಂಡತಿಯಾಗಿದ್ದಿ? ಇದನ್ನು ನಿಜವಾಗಿ ನನಗೆ ಹೇಳು ॥ ೨೫ ॥ ನಿನ್ನ ಹಿಂದಿನ ತಾಯಿತಂದೆಗಳ್ಯಾರು? ಈಗ ನೀನು ಮಗನು ಸತ್ತನೆಂದು ಸುಮ್ಮನೆ ಯಾಕೆ ದುಃಖಿಸುತ್ತೀ? ॥ ೨೬ ॥ ಈ ಪಂಚಭೂತಾತ್ಮಕ ದೇಹವು ಚರ್ಮ, ಮಾಂಸ, ಅಸ್ಥಿ, ಮಜ್ಜಾಗಳ ಸಮೂಹದಿಂದ ಕೂಡಿ ಮಲಬದ್ಧವಾದ ಈ ಹೊಸ ದೇಹವುಂಟಾಯಿತು. ॥ ೨೭ ॥ ಎಲ್ಲಿಯ ಮಗನು? ಎಲ್ಲಿಯ ನಾವು? ಭ್ರಮದಿಂದ ಸುಮ್ಮನೆ ಯಾಕೆ ಅಳುತ್ತೀ? ನೀನು ದುಃಖವನ್ನು ಬಿಟ್ಟು, ಲೋಕರೂಢಿಯಾಗಿ ಸಂಸ್ಕಾರ ಮಾಡುವದಕ್ಕೆ ಈ ಪ್ರೇತವನ್ನು ಕೊಡು ॥ ೨೮ ॥ ಎಂದು ಆ ಬ್ರಹ್ಮಚಾರಿಗಳು ಆಕೆಗೆ ತತ್ವಬೋಧವನ್ನು ಮಾಡಿದರು. ಅವರ ಮಾತು ಕೇಳಿ ಆ ಸ್ತ್ರೀಯು ವಿನಯದಿಂದ— ಸ್ವಾಮೀ, ನೀವು ನನಗೆ ಸಕಲ ಧರ್ಮಗಳನ್ನು ಹೇಳಿದಿರಿ. ಆದರೆ ನನ್ನ ಅಂತಃಕರಣವು ಇನ್ನೂ ಸ್ಥಿರವಾಗಲಿಲ್ಲ. ॥ ೨೯-೩೦ ॥ ಸ್ವಾಮೀ, ನನ್ನ ಪ್ರಾರಬ್ಧಕರ್ಮವೇ ಪ್ರಮಾಣವಾದಮೇಲೆ ನಾವು ಹರಿಯನ್ನೇಕೆ

ಪೂಜಿಸಬೇಕು ? ಲೋಹಕ್ಕೆ ಪರಿಸವು ಸಂಪರ್ಕವಾದಮೇಲೆ ಅದು ಬಂಗಾರವಾಗುವದಿಲ್ಲವೆಂದು ಯಾರು ಹೇಳುವರು ? ॥ ೩೧ ॥ ನಾವು ಮೊದಲು ದೈವಹೀನರೆಂದೇ ತಿಳಿದು ಶ್ರೀಗುರು ಚರಣಗಳನ್ನು ಹಿಡಿದೆವು. ಆಗ ಅವರು— ಇನ್ನು ಹುಟ್ಟುವ ನಿನ್ನ ಮಕ್ಕಳು ಪೂರ್ಣಾಯುಷಿಯಾದವುಗಳೆಂದು ಅಭಯ ಕೊಟ್ಟರು. ಸ್ವಾಮೀ, ಅದನ್ನು ನಾನು ನಂಬಿದೆನು ॥ ೩೨ ॥ ಒಬ್ಬಾನೊಬ್ಬ ಮನುಷ್ಯನಿಗೆ ಜ್ವರ ಬಂದರೆ, ಅವನು ಓಡುತ್ತ ವೈದ್ಯನ ಮನೆಗೆ ಹೋಗಿ ಪ್ರತೀಕಾರಕ್ಕಾಗಿ ಔಷಧವನ್ನು ತಕ್ಕೊಂಡು ಕೂಡಲೆ ಆರೋಗ್ಯತೆಯನ್ನು ಹೊಂದುತ್ತಾ ನಲ್ಲವೇ ? ॥ ೩೩ ॥ ಶ್ರೀಗುರುಗಳು ಅನೇಕ ಸಾರಿ ಅಂತಃಕರಣದಿಂದ ಅನೇಕ ಭಕ್ತರಿಗೆ ಆಶ್ರಯ ಕೊಟ್ಟು ಸಹಾಯ ಮಾಡಿದರು ಅದರಿಂದ ಅವರು ನಿಶ್ಚಯವಾಗಿ ತಮ್ಮ ಕಷ್ಟಗಳನ್ನು ಪರಿಹರಿಸಿಕೊಂಡರು ॥ ೩೪ ॥ ತ್ರೈಮೂರ್ತಿ ಅವತಾರವಾದ ಶ್ರೀ ನರಸಿಂಹಸರಸ್ವತಿಗಳ ಸೇವೆಯನ್ನು ನಾನೂ ಮಾಡಿದೆನು. ಅವರು ನನಗೂ ಈ ಪ್ರಕಾರ ವರ ಕೊಟ್ಟರು. ಆದರೆ ಈಗ ಅದು ಅಸತ್ಯವ್ಯಾಕೆ ಆಯಿತು ಹೇಳಿರಿ ॥ ೩೫ ॥ ಎಲ್ಲರಂತೆ ನಾನೂ ಅವರನ್ನು ಆರಾಧಿಸಿದೆನು ಆಗ ಅವರು ನನಗೆ ವರವನ್ನು ಕೊಟ್ಟರು ಆ ವರವನ್ನು ನಂಬಿ ನಾನು ಸ್ವಸ್ಥ ಚಿತ್ತಳಾಗಿದ್ದೆನು ॥ ೩೬ ॥ ಅವರು ನನಗೆ ವಿಶ್ವಾಸ ಕೊಟ್ಟು ಸುಳ್ಳು ಹ್ಯಾಗೆ ಮಾಡಿದರು ? ಸ್ವಾಮೀ, ಇದರಲ್ಲಿ ನನ್ನ ಮೂಢತನವೇನು ಹೇಳಿರಿ. ॥ ೩೭ ॥ ಆದಕಾರಣ ಈಗ ನಾನು ನಿಶ್ಚಯವಾಗಿ ಪ್ರಾಣ ಕೊಟ್ಟು ಈ ದೇಹ ವನ್ನು ಗುರುಗಳಿಗೆ ಸಮರ್ಪಿಸುವೆನು ಆಮೇಲೆ ಇದೇಪ್ರಕಾರ ಗುರುಗಳ ಕೀರ್ತಿಯು ಬೆಳೆಯಲಿ ಎಂದು ಅಂದಳು. ॥ ೩೮ ॥ ಆಕೆಯ ಮಾತು ಕೇಳಿ ಆ ಬ್ರಹ್ಮಚಾರಿಗಳು ಆಕೆಯ ನಿಶ್ಚಯದ ಮನಸ್ಸನ್ನು ತಿಳಿದು ಆಕೆಗೆ ಬುದ್ಧಿ-ಜ್ಞಾನ ಮತ್ತು ಉಪಾಯಗಳನ್ನು ಹೇಳುತ್ತಾರೆ ॥ ೩೯ ॥ ಏನಂದರೆ— ಎಲೌ ಸ್ತ್ರೀಯಳೇ, ನೀನು ಗುರುವನ್ನು ನಂಬಿ ಪೂರ್ಣಾಯುಷ್ಯವುಳ್ಳ ಪುತ್ರನನ್ನು ಪಡೆದಿದ್ದಿ ಖರೆ ಆದರೆ ಅವನಿಗೆ ಮರಣ ಬಂತು. ಅದು ಇರಲಿ. ಈಗ ನೀನು ಈ ಪ್ರೇತವನ್ನು ಗುರುಸ್ಥಾನಕ್ಕೆ ತಕ್ಕೊಂಡು ಹೋಗು ॥ ೪೦ ॥ ಅಲ್ಲಿ ನಿನಗೆ ಎಲ್ಲಿ ವರ ಸಿಕ್ಕಿತ್ತೋ, ಆ ಪಂಚಗಂಗಾ ಸಂಗಮದ ಹತ್ತರ ಕೃಷ್ಣಾ ತೀರದಲ್ಲಿರುವ ಔದುಂಬರ ವೃಕ್ಷದ ಬುಡಕ್ಕೆ ಈ ಪ್ರೇತ

ವನ್ನಿಡು, ಎಂದು ಉಪಾಯವನ್ನು ಹೇಳಿ ಹೋದರು. ॥ ೪೧ ॥ ಈ ಪ್ರಕಾರ ಆ ಬ್ರಹ್ಮಚಾರಿಗಳ ಮಾತು ಕೇಳಿ ಆ ಸ್ತ್ರೀಯು ವಿಶ್ವಾಸದಿಂದ ಆ ಪ್ರೇತವನ್ನು ತನ್ನ ಬೆನ್ನಿಗೆ ಕಟ್ಟಿಕೊಂಡು ಬಂದು, ॥ ೪೨ ॥ ಆ ಔದುಂಬರದ ಬುಡದಲ್ಲಿರುವ ಶ್ರೀಗುರುಗಳ ಪಾದುಕೆಗಳ ಮೇಲೆ ತನ್ನ ತಲೆಯನ್ನು ಅಪ್ಪಳಿಸಿದಳು. ಆಗ ಅವಳ ತಲೆ ಒಡೆದು ಆ ಪಾದುಕೆಗಳು ರಕ್ತಮಯವಾದವು ಹಾಗು ಆಕೆಯು ಆಕ್ರೋಶ ಮಾಡುತ್ತ ಅಳುತ್ತಿದ್ದಳು. ॥ ೪೩ ॥ ಎಲೈ ನಾಮಧಾರಕನೇ ಕೇಳು, ಎಲ್ಲ ಶೋಕಗಳಿಗಿಂತಲೂ ಪುತ್ರಶೋಕವು ಸಹಿಸಲಾರದಷ್ಟು ಬಲವಾದದ್ದು. ತಂದೆ-ತಾಯಿಗಳು ನೊರಗಿ ನೊರಗಿ ಸಾಯಲಿಕ್ಕೆ ಆ ಪುತ್ರಶೋಕವು ಕ್ಷಯರೋಗದಂತೆ ಇರುವದು. ॥ ೪೪ ॥ ಈ ಪ್ರಕಾರ ಆಕೆಯು ಶೋಕ ಮಾಡುತ್ತಿರುವಷ್ಟರಲ್ಲಿ ಸಂಜೆಯಾಯಿತು ಆಗ ಮತ್ತೆ ಆ ಬ್ರಾಹ್ಮಣರು ಬಂದು— ಎಲೌ ಸ್ತ್ರೀಯಳೇ, ಆಕ್ರೋಶವನ್ನೇಕೆ ಮಾಡುತ್ತೀ? ಪ್ರೇತವನ್ನು ಕೊಡು, ಸಂಸ್ಕಾರ ಮಾಡಿ ಮನೆಗೆ ಹೋಗೋಣ. ॥ ೪೫ ॥ ಈ ಅರಣ್ಯದಲ್ಲಿ ಒಬ್ಬರೂ ಮನುಷ್ಯರಿಲ್ಲ. ನಾವು ಇಲ್ಲಿ ಹ್ಯಾಗೆ ಇರೋಣ? ಎಂದು ಅಂದರು ಆಗ ಆ ಕರ್ಕಶ ಸ್ತ್ರೀಯು ಅಜ್ಞಾತಿ ಜನರನ್ನು ಕುರಿತು— ಎಲೈ ಬಂಧುಗಳೇ, ನಾನು ಈ ಪ್ರೇತವನ್ನು ದಹನಕ್ಕೆ ಕೊಡುವದಿಲ್ಲ ಇದರೊಡನೆ ನನ್ನನ್ನೂ ಸುಡಿರಿ ಎಂದು ಆ ಪ್ರೇತವನ್ನು ಹೊಟ್ಟೆಗೆ ಕಟ್ಟಿಕೊಂಡು ಗುರುಗಳ ಪಾದುಕೆಗಳ ಮೇಲೆ ಹೊರಳಾಡುತ್ತಿದ್ದಳು ॥ ೪೭ ॥ ಆಗ ಆಕೆಯ ಬಾಂಧವರು— ಎಲೌ ಸ್ತ್ರೀಯೇ ಕೇಳು. ಈಗ ನಾವು ಈ ಅಡವಿಯಲ್ಲಿರಬಾರದು. ಯಾಕಂದರೆ ಇಲ್ಲಿ ಕಳ್ಳರ ಉಪದ್ರವವು ಬಹಳವಾದೀತು. ನಡೆ, ಏಳು ಮನೆಗೆ ಹೋಗೋಣ ॥ ೪೮ ॥ ಎಂದು ಹೇಳಿ ಅವರು ತಮ್ಮ ತಮ್ಮೊಳಗೆ— ಈ ಕರ್ಕಶಿಯು ಈಗ ಈ ಹೆಣವನ್ನು ದಹನಕ್ಕೆ ಕೊಡುವದಿಲ್ಲ. ಈ ದಿನ ರಾತ್ರಿ ಈ ಪ್ರೇತಕ್ಕೆ ದುರ್ಗಂಧ ನಾತ ಹುಟ್ಟುವದು. ಆಗ ದಹನಕ್ಕೆ ತಾನೇ ಬಿಟ್ಟು ಕೊಟ್ಟಾಳು ॥ ೪೯ ॥ ಈ ದಿನ ನಮಗೆ ಉಪವಾಸವಾಯಿತು. ಆಗಲಿ, ಈಗ ಸ್ನಾನ ಮಾಡಿ ಮನೆಗೆ ಹೋಗೋಣ. ನಾಳೆ ಮುಂಜಾನೆ ಬಂದು ಈ ಶವವನ್ನು ದಹನ ಮಾಡೋಣ ॥ ೫೦ ॥ ಎಂದು ಹೇಳಿ ಎಲ್ಲರೂ ಹೊರಟುಹೋದರು. ಆದರೆ ಆ ಪ್ರೇತದ ತಾಯಿ-ತಂದೆಗಳು ಮಾತ್ರ ಅಲ್ಲಿಯೇ ಇದ್ದು

ಆ ಪ್ರೇತವನ್ನು ನೋಡಿ ದುಃಖಿಸುತ್ತಿದ್ದರು. ಅಷ್ಟರಲ್ಲಿ ರಾತ್ರಿಯು ಬಹಳವಾಯಿತು. ॥ ೫೧ ॥ ಆ ತಾಯಿ-ತಂದೆಗಳು ಎರಡು ದಿವಸ ನಿದ್ರೆಯಿಲ್ಲದೇ ಶೋಕಮಾಡುತ್ತಿದ್ದುದರಿಂದ ೩ನೇ ದಿವಸ ರಾತ್ರಿ ೩ ಯಾಮ ಆದನಂತರ ಅವರಿಗೆ ನಿದ್ರೆ ಬಂತು. ॥ ೫೨ ॥ ಆಗ ಆ ಸ್ತ್ರೀಯಳಿಗೆ ಒಂದು ಸ್ವಪ್ನ ಬಿತ್ತು. ಆ ಸ್ವಪ್ನದಲ್ಲಿ ಜಟಾಧಾರಿಯೂ ಸರ್ವಾಂಗ ಭಸ್ಮಲೇಪಿತನೂ, ವ್ಯಾಘ್ರ ಚರ್ಮ, ರುದ್ರಾಕ್ಷಮಾಲೆ, ಯೋಗದಂಡ, ತ್ರಿಶೂಲಧರನೂ ಆದ ಒಬ್ಬ ಯತಿಯು ಆ ಔದುಂಬರದ ಹತ್ತಿರ ಬಂದು— ಎಲೌ ಸ್ತ್ರೀಯಳೇ, ನಮ್ಮ ಮೇಲಿನ ಆಕ್ರೋಶದಿಂದ ಯಾಕೆ ದುಃಖಿಸುತ್ತೀ ? ॥೫೩-೫೪॥ ನಿನ್ನ ಮಗನಿಗೆ ಏನಾಯಿತು ? ಅದಕ್ಕೆ ಪ್ರತೀಕಾರ ಮಾಡೋಣ ಎಂದು ಭಕ್ತವತ್ಸಲನಾದ ಶ್ರೀಗುರುವು ಅಭಯವನ್ನು ಕೊಟ್ಟು, ॥ ೫೫ ॥ ಆಮೇಲೆ ತಮ್ಮ ಹತ್ತಿರಿದ್ದ ಭಸ್ಮವನ್ನು ತೆಗೆದು ಆ ಪ್ರೇತದ ಸರ್ವಾಂಗದಲ್ಲಿಯೂ ಹಚ್ಚಿ, ಆಕೆಯನ್ನು ಕುರಿತು— ಹೇ ಸ್ತ್ರೀಯೇ, ಆ ಪ್ರೇತದ ಬಾಯಿಯನ್ನು ತೆಗೆ, ಊದಿ ಸರ್ವಾಂಗದಲ್ಲಿಯೂ ವಾಯುವನ್ನು ತುಂಬುತ್ತೇನೆ ॥೫೬॥ ಪ್ರಾಣ ಅಂದರೆ ವಾಯುವು ಆ ಪ್ರಾಣವಾಯುವು ಈಗ ಹೊರಗೆ ಹೋಗಿದೆ ಅದನ್ನು ಮತ್ತೆ ತಂದು ಹಾಕುತ್ತೇನೆ ನಿನ್ನ ಮಗನು ಬದುಕುವನು. ಎಂದು ಆಜ್ಞೆಮಾಡಿ ಅದೃಶ್ಯರಾದರು ॥೫೭॥ ಈ ರೀತಿಯಾದ ಸ್ವಪ್ನವನ್ನು ಕಂಡು ಆಕೆಯು ಹೆದರಿ ಎಚ್ಚತ್ತು ಆ ಪ್ರೇತದಮೇಲೆ ಬಿದ್ದು— ನಾನಾಭ್ರಾಂತಳಾಗಿ ಹ್ಯಾಗೆ ಸ್ವಪ್ನವನ್ನು ಕಂಡೆನಲ್ಲಾ ? ॥ ೫೮ ॥ ನಾವು ನಮ್ಮ ಮನಸ್ಸಿನಲ್ಲಿ ಹಗಲೆಲ್ಲ ಯಾವದನ್ನು ಚಿಂತಿಸುತ್ತಿರುವೆವೋ, ಆ ರಾತ್ರಿ ಸ್ವಪ್ನದಲ್ಲಿ ಅದನ್ನೇ ಕಾಣುವೆವು. ಈಗಿನ ಸ್ವಪ್ನದಲ್ಲಿ ದೇವರಾದ ಶ್ರೀ ನರಸಿಂಹ ಮುನಿಗಳು ಹ್ಯಾಗೆ ಬಂದರು ? ನನಗೆ ಭ್ರಾಂತಿಯಾಗಿರಬಹುದೇನು ? ॥ ೫೯ ॥ ನಮ್ಮ ಪ್ರಾರಬ್ಧವು ಕಡಿಮೆಯಾಗಿರಲು ನಾವು ದೇವರಮೇಲೆ ಯಾಕೆ ದೋಷ ಹೊರಿಸಬೇಕು ? ಅಜ್ಞಾನಿಗಳಾದ ನಾವು ಮೂರ್ಖತನದಿಂದ ಶ್ರೀ ಗುರುಗಳಿಗೆ ಏನಾದರೊಂದು ಯಾಕೆ ಮಾತಾಡಬೇಕು ? ॥ ೬೦ ॥ ಎಂದು ಚಿಂತಿಸುತ್ತಿರುವಷ್ಟರಲ್ಲಿ ಆ ಪ್ರೇತದ ಸರ್ವಾಂಗವೂ ಬಿಸಿಯಾಗುತ್ತಾ ಬಂತು, ಸರ್ವಸಂಧಿ ಪ್ರದೇಶಗಳಲ್ಲಿ ಜೀವಕಳೆಯು ತುಂಬಿ ಕೂಡಲೆ ಆ ಪ್ರೇತವು ಸಜೀವವಾಯಿತು. ॥ ೬೧ ॥ ಆಗ ಆಕೆಯು ಮನಸ್ಸಿನಲ್ಲಿ ಗಾಬರಿಯಾಗಿ— ಅಹಾ ! ಈ ಹೆಣಕ್ಕೇನಾ

ಯಿತು ? ಭೂತಸಂಚಾರವಾಯಿತೋ ಏನೋ ಎಂಬ ಸಂಶಯವನ್ನು ಹೊಂದಿ ಹೆದರಿ ಆ ಪ್ರೇತವನ್ನು ಬಿಟ್ಟು ದೂರ ಓಡಿಹೋದಳು. ‖ ೬೨ ‖ ಸರ್ವಾಂಗದಲ್ಲಿ ಜೀವತುಂಬಲು ಆ ಬಾಲಕನು ಎದ್ದು ಕುಳಿತು ಅತ್ತಿತ್ತ ನೋಡಿ— ಅವ್ವಾ ನನಗೆ ಹಸಿವೆಯಾಗಿದೆ ಅನ್ನವನ್ನು ಕೊಡು ಎಂದು ಅಳುತ್ತ ಓಡುತ್ತ ತಾಯೀಹತ್ತರ ಬಂದನು. ಆಗ ಅವಳು ಅವನ ಬಾಯಿಯಲ್ಲಿ ಸ್ತನವನ್ನು ಹಾಕಲು ಆಗ ಆಕೆಯ ಸ್ತನದಿಂದ ಮೂವತ್ತೆರಡು ಧಾರೆಗಳಾಗಿ ಹಾಲು ಬರಹತ್ತಿದವು. ‖ ೬೩–೬೪ ‖ ಅದನ್ನು ಕಂಡು ಸಂತೋಷ ಹಾಗು ಭಯಗಳಿಂದ ಕೂಡಿದ ಅವಳು— ಇದೇನಾಶ್ಚರ್ಯವು ? ಎಂದು ಸಂಶಯದಿಂದ ಆ ಹುಡುಗನನ್ನು ತನ್ನ ಬಗಲಲ್ಲಿ ಎತ್ತಿಕೊಂಡು, ತನ್ನ ಗಂಡನ ಹತ್ತರ ಬಂದು, ‖ ೬೫ ‖ ಆತನನ್ನು ಎಬ್ಬಿಸಿ, ಅವನಿಗೆ ಈ ಎಲ್ಲ ಸಂಗತಿಯನ್ನು ಹೇಳಿದಳು. ಆಗ ಅವನು— ಎಲೈ ಸತಿಯೇ ಇದು ಗುರುಗಳ ಚರಿತ್ರೆಯು ಎಂದು ಹೇಳಿದನು ‖ ೬೬ ‖ ಆಮೇಲೆ ಆಕೆಯು ತನ್ನ ಪತಿಯೊಡನೆ ಆ ಔದುಂಬರಕ್ಕೆ ಪ್ರದಕ್ಷಿಣೆಯನ್ನು ಹಾಕಿ, ಶ್ರೀ ಗುರುಗಳ ಪಾದುಕೆಗಳಿಗೆ ಸಾಷ್ಟಾಂಗವಾಗಿ ವಂದಿಸಿ— ಜಯ ಜಯ ವರದಮೂರ್ತಿಯೇ, ತ್ರೈಮೂರ್ತಿ ಅವತಾರನಾದ ಯತಿವರ್ಯನೇ, ಭಕ್ತವತ್ಸಲನೇ, ನಿನ್ನ ಖ್ಯಾತಿಯು ಬಹಳವಾಗಿರುವದು. ನೀನು ಭಕ್ತರ ಇಚ್ಛೆಯನ್ನು ನೋಡುತ್ತಿ ‖ ೬೭–೬೮ ‖ ನೀನು ವಿಶ್ವವನ್ನು ಉದ್ಧರಿಸ ಲಿಕ್ಕೆ ಈ ಭೂಮಿಯಲ್ಲಿ ಅವತರಿಸಿರುತ್ತೀ ನಿನ್ನ ಮಹಿಮೆಯನ್ನು ವರ್ಣಿಸಲಿಕ್ಕ ನಮಗೆ ಅಶಕ್ಯವಾಗಿದೆ. ಸ್ವಾಮೀ, ನಮ್ಮ ತಪ್ಪನ್ನು ಕ್ಷಮಿಸಬೇಕು. ‖ ೬೯ ‖ ಸಣ್ಣ ಬಾಲಕನು ಸಿಟ್ಟಿನಿಂದ ತಾಯಿಗೆ ನಿಷ್ಠುರ ಮಾತಗಳನ್ನಾಡು ವಂತೆ ಮಾಯೆಯಿಂದ ಮೋಹಿತರಾದ ನಾವು ನಿನಗೆ ನಿಷ್ಠುರ ಮಾತುಗಳನ್ನಾಡಿದೆವು ‖ ೭೦ ‖ ದೇವಾ, ಎಲ್ಲ ರೀತಿಯಿಂದಲೂ ನಮ್ಮನ್ನು ಕ್ಷಮಿಸು ಎಂದು ಸಾಷ್ಟಾಂಗ ನಮಸ್ಕಾರ ಮಾಡಿ ಕರುಣಾಸ್ವರದಿಂದ ವಿನಂತೀ ಮಾಡಿ ಕೊಂಡು ನದಿಗೆ ಸ್ನಾನಕ್ಕೆ ಹೋಗಿ ‖ ೭೧ ‖ ಅವರು ಆ ಬಾಲಕನಸಹಿತವಾಗಿ ಆ ನದಿಯಲ್ಲಿ ಸ್ನಾನಮಾಡಿ ಬಂದು ಗುರುಗಳ ಪಾದುಕಗಳಮೇಲಿನ ರಕ್ತವನ್ನು ತೊಳೆದು ಭಕ್ತಿಯಿಂದ ಔದುಂಬರ ಸಹಿತವಾಗಿ ಆ ಪಾದುಕೆ ಗಳಿಗೆ ಅಭಿಷೇಕ ಮಾಡಿ ದೀಪಗಳನ್ನು ಹಚ್ಚಿದರು. ‖ ೭೨ ‖ ಆಮೇಲೆ ಮಂತ್ರಪೂರ್ವಕವಾಗಿ ವಿಧಿಯಿಂದಲೂ

ಶಮೀಪತ್ರ ಹಾಗು ಉಳಿದ ಅನೇಕ ಪುಷ್ಪಗಳಿಂದಲೂ ಪೂಜಿಸಿ || ೭೩ || ಆರತಿಯನ್ನು ಮಾಡುವಾಗ ಆಕೆಯು ಬಹು ಭಕ್ತಿಯಿಂದಲೂ ಸಂತೋಷದಿಂದಲೂ ಶ್ರೀ ಗುರುಗಳನ್ನು ಸ್ತುತಿಸುತ್ತ ಹಾಡಿದಳು. || ೭೪ || ಅಷ್ಟರಲ್ಲಿ ಬೆಳಗಾಗಿ ಸೂರ್ಯೋದಯವಾಯಿತು. ಆಗ ಆ ಊರ ಬ್ರಾಹ್ಮಣರು ಪ್ರೇತದ ಸಂಸ್ಕಾರ ಮಾಡಬೇಕೆಂದು ಬಂದು || ೭೫ || ಅಲ್ಲಿ ಬದುಕಿ ಆಡುತ್ತಿರುವ ಬಾಲಕನನ್ನು ಕಂಡು, ಆಶ್ಚರ್ಯಬಟ್ಟು ಸಂತೋಷದಿಂದ ಆ ದಂಪತಿಗಳನ್ನು ಸಮಾಧಾನಬಡಿಸಿದರು. ಆಗ ಮಹಾ ಆನಂದವು ನಡೆಯಿತು. || ೭೬ || ಎಲೈ ನಾಮಧಾರಕನೇ, ಶ್ರೀ ಗುರುಸ್ಥಾನದ ಮಹಿಮೆಯು ಈ ಪ್ರಕಾರವಾಗಿರುವದು ಅಲ್ಲಿಗೆ ಹೋಗಿ ಸೇವೆ ಮಾಡಿದ ಯಾವತ್ತು ಜನರು ತಮ್ಮ ಕಾಮನಾಗಳನ್ನು ಪಡೆದರು ಒಬ್ಬೊಬ್ಬರ ಮಹಿಮೆಯನ್ನು ಹೇಳಹತ್ತಿದರೆ ಗ್ರಂಥವು ವಿಸ್ತಾರವಾಗುವದು. || ೭೭ || ಈ ಪ್ರಕಾರದ ಗುರುಸ್ಥಾನದ ಮಹಿಮೆಯನ್ನು ಕೇಳುವದರಿಂದ ಬಂಜೆಯು ಪುತ್ರನನ್ನು ಪಡೆಯುವಳು. ದರಿದ್ರನಿಗೆ ಲಕ್ಷ್ಮೀ ಪ್ರಾಪ್ತಿಯಾಗುವದು, ರೋಗಿಗೆ ಆರೋಗ್ಯವಾಗುವದು ಅಪಮೃತ್ಯುವು ಪರಿಹಾರವಾಗುವದು. || ೭೮ || ಗುರುಸ್ಥಾನದ ಮಹಿಮೆಯು ಈ ಪ್ರಕಾರವಾಗಿರುವದು ಹೇಳಹತ್ತಿದರೆ ಅದು ಅಪಾರವಾಗುವದು. ಅದನ್ನು ನಿನಗೆ ಸಾಧಾರಣವಾಗಿ ಹೇಳಿದೆನು || ೭೯ || ಆ ಔದುಂಬರದ ಬುಡದಲ್ಲಿ ಶ್ರೀ ಗುರುಗಳು ಸದಾ ವಾಸಿಸುವರು. ನರಹರಿ ಸ್ವರೂಪರಾದ ಶ್ರೀ ಗುರುಗಳನ್ನೂ ಗುರುಚರಣಗಳನ್ನೂ ಭಕ್ತಿಯಿಂದ ಪೂಜಿಸಿ ಸೇವಿಸಿದವರ ಎಲ್ಲ ಕೋರಿಕೆಗಳು ತೀವ್ರವಾಗಿ ಪೂರ್ಣವಾಗುವವು. || ೮೦-೮೧ || ಶ್ರೀ ಗುರುಗಳ ಪಾದುಕಾಗಳನ್ನು ಪೂಜಿಸಿದರೆ ಹೊಟ್ಟೆನೋವು, ಗಂಡಮಾಲೆ, ಅಪಸ್ಮಾರ ಮುಂತಾದ ರೋಗಗಳೆಲ್ಲವೂ ಕೂಡಲೆ ಪರಿಹಾರವಾಗುವವು. || ೮೨ || ಮಂದಮತಿಯೂ, ಕಿವುಡನೂ, ಮೂಕನೂ, ಹೆಳವನೂ ಗುರುಪಾದುಕಾ ಸಹಿತ ಔದುಂಬರವನ್ನು ಸೇವಿಸಿದರೆ ಅವರು ಸತ್ಯವಾಗಿ ಸುದೇಹಿಗಳಾಗಿ || ೮೩ || ಅವರು ನಿಶ್ಚಯವಾಗಿ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವರು. ಅಲ್ಲಿ ಸನಾತನ ಕಲ್ಪವೃಕ್ಷವಾದ ಔದುಂಬರದಲ್ಲಿ ಶ್ರೀ ಗುರುಗಳು ನಿಶ್ಚಯವಾಗಿ ಪ್ರತ್ಯಕ್ಷವಾಗಿ ವಾಸಮಾಡಿರುವರು. || ೮೪ || ಮನುಷ್ಯರು ಯಾವ ಯಾವ ಇಚ್ಛೆಯಿಂದ ಆ

ಔದುಂಬರವನ್ನು ಸೇವಿಸುವರೋ ಅವರ ಇಚ್ಛೆಗಳೆಲ್ಲ ಪೂರ್ಣವಾಗುವವು. ॥ ೮೫ ॥ ಅಲ್ಲಿಯ ಮಹಿಮೆಯನ್ನು ಎಷ್ಟು ವರ್ಣಿಸಲಿ ? ನನಗೆ ಹೇಳಲಿಕ್ಕೆ ಅಶಕ್ಯವಾಗಿರುವದು. ಶ್ರೀ ಗುರು ನರಸಿಂಹ ಸರಸ್ವತಿಗಳೆಂಬ ಹೆಸರು ಪ್ರಖ್ಯಾತವಾಗಿರುವದು. ॥ ೮೬ ॥ ಎಂದು ಸಿದ್ಧರು ನಾಮಧಾರಕನಿಗೆ ಹೇಳಿದಂತೆ ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿ ಈ ಗುರುಚರಿತ್ರೆಯನ್ನು ಭಕ್ತಿಪೂರ್ವಕ ಯಾರು ಕೇಳುತ್ತಾರೋ ಅವರು ಸಕಲಾಭೀಷ್ಟಗಳನ್ನು ಹೊಂದುವರು ॥ ೮೭ ॥ ಸದಾ ಗುರುಚರಣದಲ್ಲಿ ಭಕ್ತಿಯನ್ನಿಟ್ಟವರಿಗೆ ಇಹದಲ್ಲಿ ಸೌಖ್ಯವಾಗಿ ಈ ಸಂಸಾರಸಾಗರವನ್ನು ದಾಟಿ ಪರದಲ್ಲಿ ಉತ್ತಮಗತಿಯಾಗುವದು. ॥ ೮೮ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ " ಬಾಲಸಂಜೀವನಂ " ನಾಮ ಏಕವಿಂಶೋಽಧ್ಯಾಯಃ ॥ ೨೧ ॥ ಶ್ರೀ ಗುರುದೇವದತ್ತ ॥

— ೨೧ನೇ ಅಧ್ಯಾಯ ಸಮಾಪ್ತ —

ಇಲ್ಲಿಗೆ ೨ನೇ ದಿವಸದ ಸಪ್ತಾಹವು ಮುಗಿದುದು

---

# ೨೨ನೇಯ ಅಧ್ಯಾಯ





## — ಶ್ರೀ ಗುರುಗಳು ಬರಡೆಮ್ಮೆಯಿಂದ ಹಾಲನ್ನು ಹಿಂಡಿಸಿದ್ದು —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಗ ಶಿಷ್ಯಶ್ರೇಷ್ಠನಾದ ನಾಮಧಾರಕನು ಸಿದ್ಧರ ಚರಣಕ್ಕೆ ನಮಸ್ಕಾರ ಮಾಡಿ ಕೈಮುಗಿದು ವಿನಯದಿಂದ ॥ ೧ ॥ —ಸ್ವಾಮೀ, ಜಯ ಜಯ ಸಿದ್ಧಯೋಗೀಶ್ವರನೇ, ಶಿಷ್ಯಜನ ಮನೋಹರನೇ, ಭವಸಾಗರ ತಾರಕನೇ, ಅಜ್ಞಾನವೆಂಬ ಕತ್ತಲೆಗೆ ದೀಪದಂತಿರುವವನೇ ॥ ೨ ॥ ನಿಮ್ಮ ಪಾದಸ್ಪರ್ಶದಿಂದ ನನಗೆ ಈಗ ಜ್ಞಾನವಾಯಿತು ಮತ್ತು ನಿಮ್ಮ ಕೃಪೆಯಿಂದ ಪರಮಾರ್ಥ ತತ್ವದಲ್ಲಿ ನನ್ನ ಮನಸ್ಸು ಐಕ್ಯವಾಯಿತು ॥ ೩ ॥ ನೀವು ಗುರುಮಾರ್ಗವನ್ನು ಸುಲಭವಾಗಿ ತೋರಿಸಿದಿರಿ. ಅದರಿಂದ ನನಗೆ ಸಕಲ ಜ್ಞಾನವಾಯಿತು. ಪರಮ ಪುರುಷನೇ, ಸಿದ್ಧರಾಯನೇ, ನೀವು ನನ್ನನ್ನು ಉದ್ಧಾರ ಮಾಡುವ ಯೋಗಿಯಾಗಿದ್ದೀರಿ. ॥ ೪ ॥ ಇವೊತ್ತಿನ ವರೆಗೆ ನೀವು ಕಾಮಧೇನುವಿಗೆ ಸಮಾನವಾದ ಗುರುಚರಿತ್ರೆಯನ್ನು ವಿಸ್ತಾರವಾಗಿ ನಿರೂಪಿಸಿದಿರಿ. ಆದರೂ ನನ್ನ ಮನಸ್ಸು ಇನ್ನೂ ತೃಪ್ತಿ ಹೊಂದಿಲ್ಲ. ನನಗೆ ಇನ್ನೊಂದು ಇಚ್ಛೆಯಾಗಿದೆ. ॥ ೫ ॥ ದಯಾನಿಧಿಯೇ, ಈ ಮೊದಲು ತಾವು ಶ್ರೀ ಗುರುಗಳು ಗಾಣಗಾಪುರಕ್ಕೆ ಬಂದರೆಂದು ಹೇಳಿದಿರಿ. ಮುಂದೇನಾಯಿತೆಂಬದನ್ನು ವಿಸ್ತಾರವಾಗಿ ನನಗೆ ಹೇಳಬೇಕೆಂದು ಕೈಮುಗಿದನು. ॥ ೬ ॥

ಆ ಶಿಷ್ಯನ ಮಾತು ಕೇಳಿ ಸಿದ್ಧರು ಸಂತೋಷದಿಂದ— ಎಲೈ ನಾಮಧಾರಕನೇ, ನೀನು ನಿಶ್ಚಯವಾಗಿ ಗುರುಕೃಪೆಯನ್ನು ಹೊಂದಿದ ಬಾಲಕನಿರುತ್ತೀ ॥ ೭ ॥ ನಿನ್ನ ಮನಸ್ಸು ವ ನಿನ್ನ ಜೀವನವು ಧನ್ಯ ! ಧನ್ಯ ! ಈ ಸಮಸ್ತ ಲೋಕದಲ್ಲಿ ನೀನು ಪೂಜ್ಯನಾಗುವಿ. ॥ ೮ ॥ ನಿನ್ನ ಪ್ರಶ್ನೆಯನ್ನು ಕೇಳಿ, ನನ್ನ ಮನಸ್ಸು ಸಂತೋಷ ಹೊಂದಿ, ಕಾಮಧೇನುವಿನಂತಿರುವ ಗುರುಚರಿತ್ರೆಯನ್ನು ಹೇಳಲಿಕ್ಕೆ ನನಗೆ ಉಲ್ಲಾಸ ವುಂಟಾಗಿರುವದು. ॥ ೯ ॥

ಮುಂದೆ ಗುರುಮಹಿಮೆಯು ಅನಂತವಾಯಿತು. ಹೇಳಲಿಕ್ಕೆ ಅನುಪಮವಾಗಿರುವದು. ಹೇಳುವೆನು ಕೇಳು. ಶ್ರೀ ಗುರುಗಳು ಗಾಣಗಾಪುರಕ್ಕೆ ಬಂದು ಸಂಗಮದಲ್ಲಿ ಗುಪ್ತವಾಗಿರುತ್ತಿದ್ದರು. ॥ ೧೦ ॥ ಭೀಮಾನದಿಯಲ್ಲಿ ಉತ್ತರ ವಾಹಿನಿಯಲ್ಲಿರುವ ಮಹತ್ವವಾದ ಅಮರಜಾನದಿಯ ಸಂಗಮ ಸ್ಥಾನವು ಶ್ರೇಷ್ಠವಾದದ್ದು ಮತ್ತು ಅದರ ಹತ್ತರ ಇರುವ ಅಶ್ವತ್ಥವೃಕ್ಷವು ಮಹಾ ವರದ ಸ್ಥಾನವು. ॥ ೧೧ ॥ ಹಾಗೂ ಆ ಸಂಗಮ ಸ್ಥಾನವು ಪ್ರಯಾಗ ಸಮಾನ ಕ್ಷೇತ್ರವೆಂದೂ, ಆ ಭೀಮಾತೀರದಲ್ಲಿ ಮಹತ್ವವಾದ ಅಷ್ಟ ತೀರ್ಥಗಳು ಇರುತ್ತವೆಂದೂ ತಿಳಿದು ಶ್ರೀ ಗುರುಗಳು ಆ ಸಂಗಮದಲ್ಲಿ ಗುಪ್ತವಾಗಿದ್ದರು. ॥ ೧೨ ॥ ಎಲೈ ನಾಮಧಾರಕನೇ, ಆ ತೀರ್ಥಗಳ ಮಹಿಮೆಯ ವರ್ಣನೆಯು ಅಪಾರವಾಗಿದೆ. ಅದನ್ನು ನಿನಗೆ ಮುಂದೆ ವಿಸ್ತಾರವಾಗಿ ಹೇಳುವೆನು ॥ ೧೩ ॥ ಭಕ್ತ ಜನರ ಉದ್ಧಾರಕ್ಕಾಗಿಯೂ ಆ ತೀರ್ಥಗಳ ಮಹಿಮೆಯನ್ನು ಪ್ರಗಟಮಾಡುವದಕ್ಕಾಗಿಯೂ ಶ್ರೀ ಗುರುಗಳು ಆ ಸ್ಥಳದಲ್ಲಿ ಗುಪ್ತವಾಗಿರುತ್ತಿದ್ದರು. ॥ ೧೪ ॥ ಶ್ರೀ ಗುರುಚರಣಗಳಲ್ಲಿ ಸಮಸ್ತ ತೀರ್ಥಗಳಿರುತ್ತವೆಂದು ವೇದಗಳು ಹೇಳಿದರೂ ಆ ಕ್ಷೇತ್ರದ ಹಾಗೂ ಆ ತೀರ್ಥಗಳ ಮಹಿಮೆಯು ಎಷ್ಟೆಂಬದನ್ನು ಶ್ರೀ ಗುರುಗಳು ಪ್ರಗಟ ಮಾಡಿದರು. ॥ ೧೫ ॥ ಶ್ರೀ ಗುರುಗಳು ಭಕ್ತ ಜನರ ಉದ್ಧಾರಕ್ಕಾಗಿ ತೀರ್ಥಯಾತ್ರೆ ಮಾಡುತ್ತ ಹಿಂದಕ್ಕೆ ಈ ಕಲಿಯುಗದಲ್ಲಿ ಗುಪ್ತವಾಗಿದ್ದ ತೀರ್ಥ ಕ್ಷೇತ್ರಗಳನ್ನು ಹ್ಯಾಗೆ ಪ್ರಗಟಮಾಡಿದರೆಂಬದನ್ನೂ, ಅಲ್ಲಿಯ ಮಹಿಮೆಯನ್ನೂ, ಅನುಕ್ರಮವಾಗಿಯೂ ಹಾಗೂ ವಿಸ್ತಾರವಾಗಿಯೂ ಹೇಳುವೆನು ಚಿತ್ತಗೊಟ್ಟು ಕೇಳು. ॥ ೧೬-೧೭ ॥ ತ್ರಯಮೂರ್ತಿ ಅವತಾರವಾದ ಶ್ರೀ ಗುರುಗಳು ಈ ಪ್ರಕಾರ ಮನೋಹರವಾದ ಸಂಗಮ ಸ್ಥಾನದಲ್ಲಿ ಗುಪ್ತವಾಗಿದ್ದರೆಂದರೆ ಹ್ಯಾಗೆ ॥ ೧೮ ॥ ಸಹಸ್ರ ಕಿರಣಗಳುಳ್ಳ ಸೂರ್ಯನು ಎಂದಾದರೂ ಗೌಪ್ಯವಾಗಿರುವನೇ ಒಂದೇಸವನೇ ಪ್ರಕಾಶ ಕೊಡುವದು ಅವನ ಸಹಜ ಗುಣವಾಗಿದೆ ॥ ೧೯ ॥ ಅದರಂತೆ ಶ್ರೀ ಗುರುಗಳು ಅರಣ್ಯವಾಗಿರುವ ಸಂಗಮದಲ್ಲಿ ಗುಪ್ತವಾಗಿದ್ದರೂ ನಿತ್ಯ ಮಧ್ಯಾಹ್ನದಲ್ಲಿ ಪ್ರಗಟರೂಪದಿಂದ ಗಾಣಗಾಪುರಕ್ಕೆ ಭಿಕ್ಷೆಗೆ ಹೋಗುತ್ತಿದ್ದರು. ॥ ೨೦ ॥ ಪೂರ್ವದಲ್ಲಿ ಆ ಊರಲ್ಲಿ ವೇದ ಪಾಠಕ ಬ್ರಾಹ್ಮಣರ ನೂರು ಮನೆಗಳ ಅಗ್ರಹಾರವಿತ್ತು. ॥ ೨೧ ॥ ಆ ಬ್ರಾಹ್ಮಣ

ರಲ್ಲಿ ಅತಿ ದಾರಿದ್ರ್ಯದಿಂದ ಪೀಡಿತನಾದ ಒಬ್ಬ ಬ್ರಾಹ್ಮಣನಿದ್ದನು. ಅವನ ಹೆಂಡತಿಯು ಅತ್ಯಂತ ಪತಿ ಸೇವಕಳಾಗಿ ಪತಿವ್ರತಾ ಶಿರೋಮಣಿಯೆಂದು ಹೆಸರಾಗಿದ್ದಳು. || ೨೨ || ಅವರು ಹೀಗೆ ಬಡತನದಿಂದಿರುತ್ತಿರಲು ಅವರ ಮನೆಯಲ್ಲಿ, ಬಂಜೆಯಾದ, ಹಲ್ಲಿಲ್ಲದ, ಅತಿ ಮುದಿಯಾದ, ಮೂಗಿನಲ್ಲಿ ಮುಗಿದಾಣ ಹಾಕಿದ ಒಂದು ಬರಡೆಮ್ಮೆಯು ಇತ್ತು. || ೨೩ || ಆ ಊರ ಒಬ್ಬ ಆಗಸನು ಅದನ್ನು ಆ ನದೀತೀರದ ಹೊಲದಲ್ಲಿ ಹಾಳು ಮಣ್ಣನ್ನು ಹೇರಿಕೊಂಡು ಬರಲಿಕ್ಕೆ ನಿತ್ಯ ಬಾಡಿಗೆಯಿಂದ ಒಯ್ದು ಸ್ವಲ್ಪ ದ್ರವ್ಯವನ್ನು ಕೊಡುತ್ತಿದ್ದನು. || ೨೪ || ಆ ಬ್ರಾಹ್ಮಣನು ಆ ಅಲ್ಪ ದ್ರವ್ಯಕ್ಕೆ ಬಂದಷ್ಟು ಧಾನ್ಯಾದಿಗಳನ್ನು ತಂದು ಉಪಜೀವಿಸುತ್ತಿದ್ದನು. ಶ್ರೀ ಗುರುಗಳು ಪ್ರೀತಿಯಿಂದ ನಿತ್ಯ ಅವನ ಮನೆಗೇ ಭಿಕ್ಷೆಗೆ ಹೋಗುತ್ತಿದ್ದರು. || ೨೫ || ಅದನ್ನು ಕಂಡು ಆ ಅಗ್ರಹಾರದ ಉಳಿದ ಬ್ರಾಹ್ಮಣರು— ಈ ಯತಿಗಳು ಎಲ್ಲಿಂದ ಬಂದರು ? ನಾವು ಶ್ರೋತ್ರೀಯ ಬ್ರಾಹ್ಮಣರಾಗಿದ್ದು || ೨೬ || ನಮ್ಮ ಮನೆಯಲ್ಲಿ ಸುಗ್ರಾಸ ಅನ್ನ, ಅನೇಕತರದ ಪಲ್ಯೆಗಳು ಇರುತ್ತಿದ್ದರೂ ಇವರು ನಮ್ಮ ಮನೆಗೆ ಭಿಕ್ಷೆಗೆ ಬರದೆ ಆ ದರಿದ್ರ ಬ್ರಾಹ್ಮಣನ ಮನೆಗೆ ಹೋಗುತ್ತಾರಲ್ಲಾ ? ಎಂದು ನಿಂದಿಸುತ್ತಿದ್ದರು. || ೨೬–೨೭ || ಎಲೈ ನಾಮಧಾರಕನೇ ಭಕ್ತ ವತ್ಸಲರಾದ ಶ್ರೀ ಗುರುಗಳ ಮನಸ್ಸಿನಲ್ಲಿ ಪ್ರಪಂಚಬಿಟ್ಟು ಪರಮಾರ್ಥ ಮಾಡಬೇಕೆಂದಿದೆ. ||೨೮|| ಪೂರ್ವದಲ್ಲಿ ಶ್ರೀ ಕೃಷ್ಣನು ಯಾವ ಪ್ರೀತಿಯಿಂದ ಬಡವನಾದ ವಿದುರನ ಮನೆಗೆ ಹೋದನೋ ಹಾಗೆ ರಾಜನಾದ ದುರ್ಯೋಧನನ ಮನೆಗೆ ಎಂದೂ ಹೋಗಲಿಲ್ಲ. || ೨೯ || ಸಾತ್ವಿಕ ಬುದ್ಧಿಯಿಂದ ಯಾರು ವರ್ತನ ಮಾಡುತ್ತಾರೋ ಶ್ರೀ ಗುರುಗಳು ಅವರಮೇಲೆ ಅತಿ ಪ್ರೀತಿಮಾಡುತ್ತಾರೆ. ಮತ್ತು ಅವರು ತಮ್ಮ ಭಕ್ತ ಜನರಿಗೆ ಇಹದಲ್ಲಿಯೂ ಪರದಲ್ಲಿಯೂ ಸುಖವನ್ನು ಕೊಡುತ್ತಾರೆ. || ೩೦ || ಪರಮಪುರುಷರೂ ಕೃಪಾಳುಗಳೂ ಆದ ನಮ್ಮ ಗುರುಗಳು ತಮ್ಮ ಭಕ್ತರ ಬಡತನವು ಅವರ ದೋಷವಲ್ಲೆಂದು ಅವರ ಸಾತ್ವಿಕ ಗುಣವನ್ನು ನೋಡಿ ಒಳ್ಳೇ ಹರ್ಷದಿಂದ ಅವರನ್ನು ಪ್ರೀತಿಸುವರು. ಶ್ರೀ ಗುರುಗಳು ಪ್ರೇಮದಿಂದ ರಂಕಗೂ (ಬಡವನಿಗೂ) ರಾಜ್ಯವನ್ನು ಕೊಡಲಿಕ್ಕೆ ಸಮರ್ಥರು. || ೩೧ || ಮತ್ತು ದರಿದ್ರನಾದ ಭಕ್ತನಿಗೆ ವರವನ್ನು ಕೊಟ್ಟು ಅವನಿಗೆ ರಾಜ್ಯವನ್ನು ಕೊಡ

ಬಲ್ಲರು. ಒಂದುವೇಳೆ ಅವರಿಗೆ ಒಬ್ಬನಮೇಲೆ ಸಿಟ್ಟು ಬಂದರೆ ಆ ದುಷ್ಟನನ್ನು ಭಸ್ಮಮಾಡಲಿಕ್ಕೂ ಸಮರ್ಥರು. ‖ ೩೨ ‖ ಒಂದುವೇಳೆ ಬ್ರಹ್ಮನು ತನ್ನ ಕೈಯಿಂದ ಒಬ್ಬನ ಹಣೆಯಲ್ಲಿ ದುಷ್ಟ ಅಕ್ಷರ ಬರೆದಿದ್ದರೂ ಆ ಮನುಷ್ಯನಿಗೆ ಶ್ರೀ ಗುರು ಚರಣಗಳ ಸ್ಪರ್ಶವಾದರೆ ಸಾಕು. ಆ ಅಕ್ಷರಗಳು ಶುಭಕರವಾಗುವವು. ‖ ೩೩ ‖ ಇಂಥ ಬಿರುದುಳ್ಳ ಶ್ರೀ ಗುರುಗಳನ್ನು ನನ್ನ ವಾಣಿಯಿಂದ ವರ್ಣಿಸುವದು ಶಕ್ಯವಿಲ್ಲ. ಆ ಬಡಬ್ರಾಹ್ಮಣನು ಬಹಳ ಪುಣ್ಯವಂತನಾದ್ದರಿಂದ ಶ್ರೀ ಗುರುಗಳು ಅವನ ಬಡತನವನ್ನು ನೋಡದೆ ಅವನ ಸಾತ್ವಿಕತನಕ್ಕೆ ಮೆಚ್ಚಿ ಅವನ ಮನೆಗೆ ಭಿಕ್ಷೆಗೆ ಹೋಗುತ್ತಿದ್ದರು. ‖ ೩೪ ‖ ಹೀಗೆ ನಡೆದಿರಲು ಒಂದುದಿವಸ ಆ ಬ್ರಾಹ್ಮಣನಿಗೆ ಭಿಕ್ಷೆಯಲ್ಲಿ ಧಾನ್ಯವು ಸಿಗಲಿಲ್ಲ ಮತ್ತು ಆದಿವಸ ಆ ಅಗಸನು ಆ ಗೊಡ್ಡೆಮ್ಮೆಯನ್ನು ಮಣ್ಣುಹೇರಲಿಕ್ಕೆ ಸಹ ಒಯ್ಯಲಿಲ್ಲ. ಆದರಿಂದ ಆ ದಿವಸ ಬ್ರಾಹ್ಮಣನಿಗೆ ಬಾಡಿಗೆಯ ಹಣವು ಬರಲಿಲ್ಲ ಆಗ ಅವನು ಧಾನ್ಯವನ್ನೂ ತರಲಿಲ್ಲ. ‖ ೩೫ ‖ ಆ ದಿನ ವೈಶಾಖಮಾಸ ಮಧ್ಯಾನ್ಹ ಕಾಲ ಒಳ್ಳೇ ಬಿಸಿಲು ಸುರಿಯುತ್ತಿತ್ತು. ಆಗ ಶ್ರೀ ಗುರುಗಳು ನಿತ್ಯದಂತೆ ಆ ದರಿದ್ರ ಬ್ರಾಹ್ಮಣನ ಮನೆಗೆ ಭಿಕ್ಷೆಗೆ ಬಂದರು. ‖ ೩೬ ‖ ಕೃಪಾಮೂರ್ತಿಗಳಾದ ಶ್ರೀ ಗುರುಗಳು ಬಂದಾಗ ಆ ಬ್ರಾಹ್ಮಣನು ಮನೆಯಲ್ಲಿದ್ದಿಲ್ಲ. ಊರಲ್ಲಿ ಭಿಕ್ಷೆಗೆ ಹೋಗಿದ್ದನು. ಅವನ ಹೆಂಡತಿಯು ಮಾತ್ರ ಮನೆಯಲ್ಲಿದ್ದಳು. ‖ ೩೭ ‖ ಶ್ರೀ ಗುರುಗಳು ಮನೆಯೊಳಗೆ ಹೋಗಿ "ಭಿಕ್ಷಾಂದೇಹಿ" ಎಂದು ಅಂದರು. ಆಗ ಆ ಪತಿವ್ರತೆಯು ಒಳಗಿಂದ ಓಡಿಬಂದು ಶ್ರೀ ಗುರುಗಳಿಗೆ ಸಾಷ್ಟಾಂಗ ನಮಸ್ಕಾರಮಾಡಿ ‖ ೩೮ ‖ ಎದ್ದು ಭಕ್ತಿಯಿಂದಲೂ ವಿನಯದಿಂದಲೂ— ಸ್ವಾಮೀ ನನ್ನ ಪತಿಯು ಊರಲ್ಲಿ ಯಾಚಕವೃತ್ತಿಗೆ ಹೋಗಿರುವರು. ‖ ೩೯ ‖ ಈಗ ಅನೇಕರ ಮನೆಯಿಂದ ಉತ್ತಮವಾದ ಧಾನ್ಯವನ್ನು ತರುವರು ಕೂಡಲೇ ಅಡಿಗೆಯನ್ನು ಮಾಡಿ ತಮಗೆ ಭಿಕ್ಷೆ ಹಾಕುವೆನು. ತಾವು ದಯಮಾಡಿ ಅಲ್ಲಿಯವರೆಗೆ ಸ್ವಲ್ಪ ಕೂಡ್ರಬೇಕೆಂದು ಅವರಿಗೆ ಕೂಡ್ರಲಿಕ್ಕೆ ಮಣೆಯನ್ನು ಹಾಕಿದಳು. ‖ ೪೦ ‖ ಆಗ ಶ್ರೀ ಗುರುಗಳು ನಗುತ್ತ ಆ ಶುಭಾಸನದಮೇಲೆ ಕುಳಿತು ಆ ಸ್ತ್ರೀಯನ್ನು ಕುರಿತು— ಎಲೌ ಸ್ತ್ರೀಯೇ! ನಮಗೆ ಹಾಲು ಯಾಕೆ ಭಿಕ್ಷಾ ಹಾಕುವದಿಲ್ಲ. ‖ ೪೧ ‖ ನಿಮ್ಮ ಮನೆಯ ಬಾಗಿಲಲ್ಲಿ

ಎಮ್ಮೆಯು ಇರಲು ಭಿಕ್ಷೆ ಹಾಕಲಿಕ್ಕೆ ಏನೂ ಧಾನ್ಯವಿಲ್ಲವೆಂದು ನೀನು ನನಗೆ ಸುಮ್ಮನೇ ತ್ರಾಸಕೊಡುತ್ತಿ ಎಂದು ಅಂದರು. ॥ ೪೨ ॥

ಅವರ ಮಾತು ಕೇಳಿ ಆ ಪತಿವ್ರತೆಯು ನಮಸ್ಕಾರ ಮಾಡಿ— ಸ್ವಾಮೀ, ಇದು ಬಂಜೆ ಎಮ್ಮೆಯು. ಇದರ ಹಲ್ಲು ಬಿದ್ದುಹೋಗಿ ಬಹಳ ಮುದಿಯಾಗಿ ಗೊಡ್ಡಾಗಿದೆ. ॥ ೪೩ ॥ ಇದು ನಮ್ಮ ಮನೆಯಲ್ಲಿ ಹುಟ್ಟಿದಂದಿನಿಂದಲೂ ಕಲ್ಲಿನಂತೆ ಬಂಜೆಯಾಗಿದೆ ಎಂದೂ ಗಬ್ಬಾಗಿಲ್ಲ. ಇದನ್ನು ಕೋಣನಂತೆ ಸಂರಕ್ಷಿಸುತ್ತೇವೆ. ॥ ೪೪ ॥ ಆದ್ದರಿಂದ ಇದಕ್ಕೆ ಮುಗದಾಣವನ್ನು ಹಾಕಿರುತ್ತೇವೆ ಮತ್ತು ಬಾಡಿಗೆ ತಕ್ಕೊಂಡು ಇದನ್ನು ದಿನಾಲು ಆಗಸನಿಗೆ ಸೌಳುಮಣ್ಣು ಹೇರಲಿಕ್ಕೆ ಕೊಡುತ್ತೇವೆ ಆ ಬಾಡಿಗೆಯಿಂದ ನಮ್ಮ ಉಪಜೀವನವು ಸಾಗುವದು. ಆದರೆ ಈ ದಿವಸ ಆ ಆಗಸನು ಒಯ್ದಿಲ್ಲ. ಆದ್ದರಿಂದ ಇದನ್ನು ಮನೆಯಲ್ಲಿ ಕಟ್ಟಿರುವೆವು ಎಂದಳು. ॥ ೪೫ ॥ ಆಕೆಯ ಮಾತು ಕೇಳಿ ಶ್ರೀ ಗುರುಗಳು— ಎಲೌ ಸ್ತ್ರೀಯಳೇ, ಈ ಎಮ್ಮೆಯು ಹಾಲು ಹಿಂಡುತ್ತಿದ್ದರೂ ಅದು ಹಿಂಡುವದಿಲ್ಲವೆಂದು ನೀನು ಸುಳ್ಳು ಹೇಳುವಿ ಈಗ ನೀನು ತೀವ್ರವಾಗಿ ಆ ಎಮ್ಮೆಯಹತ್ತಿರ ಹೋಗಿ ಹಾಲನ್ನು ಹಿಂಡಿಕೊಂಡು ನಮ್ಮ ಹತ್ತರ ತಕ್ಕೊಂಡು ಬಾ ಎಂದು ಅಂದರು. ॥ ೪೬ ॥

ಈ ಪ್ರಕಾರದ ಗುರುಗಳ ಮಾತು ಕೇಳಿ ಆಕೆಯು ವಿಶ್ವಾಸ ಹೊಂದಿ ಒಂದು ಕಟ್ಟಿಗೆಯ ಪಾತ್ರೆಯನ್ನು ತಕ್ಕೊಂಡು ಹಿಂಡಲಿಕ್ಕೆ ಹೋದಳು. ॥ ೪೭ ॥ ಆಕೆಯು ಆ ಎಮ್ಮೆಯ ಹತ್ತಿರ ಹೋಗಿ, ಸಂತೋಷದಿಂದ ಹಿಂಡಹತ್ತಿದ ಕೂಡಲೇ ಎರಡು ಪಾತ್ರೆಗಳ ತುಂಬ ಹಾಲು ಬಂದವು. ॥ ೪೮ ॥ ಆಗ ಆಕೆಯು ಆಶ್ಚರ್ಯಬಟ್ಟು— ಈ ಯತಿವರ್ಯರು ನಿಶ್ಚಯವಾಗಿ ದೇವರೇ ಸರಿ ! ಇವರ ಮಾತು ಕೇಳಿದ್ದು ಸತ್ಯವಾಯಿತು. ॥ ೪೯ ॥ ಎಂದು ಆ ಹಾಲನ್ನು ಮನೆಯೊಳಗೆ ತಕ್ಕೊಂಡು ಬಂದು ತೀವ್ರವಾಗಿ ಕಾಸಲಿಕ್ಕೆ ಇಟ್ಟು, ಹಾಗೆಯೇ ಹೊರಗೆ ಬಂದು— ಸ್ವಾಮೀ. ತಮ್ಮ ಮಾತಿನಂತೆ ಎಮ್ಮೆಯು ಹಿಂಡಿತು ಎಂದು ವಿನಂತಿ ಮಾಡಿಕೊಂಡಳು. ॥ ೫೦ ॥

ಆಗ ಶ್ರೀ ಗುರುಗಳು— ಎಲೌ ಸ್ತ್ರೀಯಳೇ, ನಮಗೆ ಆ ಹಾಲನ್ನೇ ಭಿಕ್ಷೆ ಹಾಕು ಅವನ್ನು ಕುಡಿದು ನಾವು ನಮ್ಮ ಸ್ಥಾನಕ್ಕೆ ಹೋಗುತ್ತೇವೆ ಎಂದು ಅಂದರು. || ೫೧ || ಆಗ ಅವಳು ಆ ಹಾಲು ತುಂಬಿದ ಪಾತ್ರೆಗಳನ್ನು ತಂದು ಅವರ ಮುಂದೆ ಇಟ್ಟಳು. ಆಗ ಶ್ರೀ ಗುರುಗಳು ಅತಿ ಸಂತೋಷದಿಂದ ಆ ಹಾಲನ್ನು ಕುಡಿದರು. || ೫೨ || ಈ ಪ್ರಕಾರ ಶ್ರೀ ಗುರುಗಳು ಹಾಲು ಕುಡಿದು ಸಂತೋಷದಿಂದಲೂ, ಒಳ್ಳೇ ಪ್ರೀತಿಯಿಂದಲೂ— ಎಲೌ ಸ್ತ್ರೀಯಳೇ, ಇನ್ನು ನಿಮ್ಮ ಮನೆಯಲ್ಲಿ ನಿರಂತರ ಅಖಂಡ ಲಕ್ಷ್ಮಿ ವಾಸ ಮಾಡುವಳು. ಮತ್ತು ಸೌಖ್ಯವು ಲಭಿಸುವದು. || ೫೩ || ನೀನು ಪುತ್ರ, ಪೌತ್ರ, ಐಶ್ವರ್ಯಗಳಿಂದ ಕೂಡಿ ಆನಂದದಿಂದ ಇರು ಎಂದು ವರವನ್ನು ಕೊಟ್ಟು ತಮ್ಮ ಸ್ಥಾನವಾದ ಸಂಗಮಕ್ಕೆ ಹೊರಟು ಹೋದರು || ೫೪ ||

ಇತ್ತ ಶ್ರೀ ಗುರುಗುಗಳು ಸಂಗಮಕ್ಕೆ ಹೋದ ಕೂಡಲೆ ಆ ಬ್ರಾಹ್ಮಣನು ಮನೆಗೆ ಬಂದು ತನ್ನ ಹೆಂಡತಿಯಿಂದ ಶ್ರೀಗುರುಗಳ ಎಲ್ಲ ಮಹಿಮೆಯನ್ನು ಕೇಳಿ ಆನಂದಬಟ್ಟು— || ೫೫ || ಎಲೈ ಸ್ತ್ರೀಯೇ, ಇದು ಬಹಳ ಆಶ್ಚರ್ಯವಾಯಿತು ! ಆ ಯತಿಗಳು ನಿಶ್ಚಯವಾಗಿ ಈಶ್ವರನ ಅವತಾರವು. ನಮ್ಮ ದೃಷ್ಟಿಗೆ ಮನುಷ್ಯರಾಗಿರುತ್ತಾರೆ. ಅವರು ಸತ್ಯವಾಗಿ ಪರಮಾತ್ಮನೇ ಆಗಿರುವರು. || ೫೬ || ಶ್ರೀ ಗುರುಗಳು ಈ ದಿನ ನಮಗೆ ವಿಶೇಷ ರೀತಿಯಿಂದ ದರ್ಶನ ಕೊಟ್ಟದ್ದರಿಂದ ನಮ್ಮ ದಾರಿದ್ರ ದೋಷವು ಹೋಯಿತು. ಇನ್ನುಮೇಲೆ ನಮ್ಮ ಸಕಲಾಭೀಷ್ಟಗಳೂ ಸಾಧಿಸುವವು || ೫೭ || ಎಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು ಆ ಯತಿಗಳ ದರ್ಶನಕ್ಕೆ ಹೋಗಬೇಕೆಂದು ಹೆಂಡತಿಗೆ ಹೇಳಿ ಆ ದಂಪತಿಗಳು ಕೈಯಲ್ಲಿ ಆರತಿಯನ್ನು ತಕ್ಕೊಂಡು ಶುದ್ಧ ಮನಸ್ಸಿನಿಂದ ಸಂಗಮಕ್ಕೆ ಹೋಗಿ || ೫೮ || ಒಳ್ಳೇ ಭಕ್ತಿಯಿಂದಲೂ ಗಂಧಾಕ್ಷತ ಧೂಪ-ದೀಪ-ನೈವೇದ್ಯ ಫಲ ತಾಂಬೂಲ, ಪ್ರದಕ್ಷಿಣೆ, ನಮಸ್ಕಾರಗಳಿಂದಲೂ ಸದ್ಭಾವದಿಂದಲೂ ಶ್ರೀ ಗುರುಗಳನ್ನು ಪೂಜಿಸಿದರು. || ೫೯ || ಆಮೇಲೆ ಶ್ರೀಗುರುಗಳ ಅನುಗ್ರಹದಿಂದ ಅವರಿಗೆ ಪೂರ್ಣಾಯುಷ್ಯವುಳ್ಳ ಒಬ್ಬ ಮಗನೂ ಒಬ್ಬ ಮಗಳೂ ಹುಟ್ಟಿದರು. ಅವರ ಮನೆಯಲ್ಲಿ

ಸ್ಥಿರವಾದ ಐಶ್ವರ್ಯವುಂಟಾಯಿತು. ॥ ೬೦ ॥ ಎಲೈ ನಾಮಧಾರಕನೇ, ಯಾರ ಮೇಲೆ ಗುರುಕೃಪೆಯುಂಟಾವದೋ ಅವರಿಗೆ ಬಡತನವು ಎಲ್ಲಿಯದು ? ಅವರು ಅಷ್ಟೈಶ್ವರ್ಯವನ್ನು ಭೋಗಿಸುವರು. ॥ ೬೧ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತೀಗಂಗಾಧರನು ಶ್ರೋತೃಗಳನ್ನು ಕುರಿತು ವಿಸ್ತಾರವಾದ ಗುರುಚರಿತ್ರೆಯನ್ನು ಹೇಳಿ ಮನೋಹರವಾದ ಈ ಕಥೆಯನ್ನು ಕೇಳುತ್ತ ಹೋದರೆ ಬಡತನವು ತೀವ್ರವಾಗಿ ದೂರವಾಗುವದು ಎಂದನು. ॥ ೬೨ ॥ ಈ ಅಧ್ಯಾಯದಲ್ಲಿ ಗೊಡ್ಡೆಮ್ಮೆಯು ಹಾಲುಕರೆಯಿತು ಮತ್ತು ಆ ವಿಪ್ರನಿಗೆ ಐಶ್ವರ್ಯವು ಪ್ರಾಪ್ತವಾಯಿತೆಂದು ಹೇಳಿದೆ. ॥ ೬೩ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ, ವಂಧ್ಯಾ ಮಹಿಷಿ ದೋಹನಂ ನಾಮ ದ್ವಾವಿಂಶೋಧ್ಯಾಯಃ ॥ ೨೨ ॥ ಶ್ರೀ ಗುರು ದತ್ತಾತ್ರೇಯ ಶ್ರೀಪಾದಶ್ರೀವಲ್ಲಭ ಶ್ರೀನರಸಿಂಹ ಸರಸ್ವತ್ಯರ್ಪಣಮಸ್ತು.

— ಶ್ರೀಗುರು ದತ್ತಾತ್ರೇಯಾರ್ಪಣಮಸ್ತು —

— ೨೨ನೇ ಅಧ್ಯಾಯ ಸಮಾಪ್ತ —

# ೨೩ನೇಯ ಅಧ್ಯಾಯ

## — ಬ್ರಹ್ಮರಾಕ್ಷಸನು ಮುಕ್ತನಾದದ್ದು —

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ನಾಮ-ಧಾರಕನು ವಿನಯದಿಂದ— ಸ್ವಾಮೀ, ದಯಾನಿಧಿಯಾದ ಸಿದ್ಧಮುನಿಗಳೇ ಮುಂದಿನ ಕಥೆಯನ್ನು ವಿಸ್ತಾರವಾಗಿ ಹೇಳಿರಿ ಎಂದನು. ॥ ೧ ॥ ಆಗ ಸಿದ್ಧರು ಎಲೈ ಶಿಷ್ಯನೇ ಕೇಳು. ಮುಂದೆ ಆ ಬ್ರಾಹ್ಮಣನು ತನ್ನ ಬಂಜಿ ಎಮ್ಮೆಯು ಹಿಂಡಿತೆಂದು ಶ್ರೀ ಗುರುಗಳ ಅಗಮ್ಯ ಲೀಲೆಯನ್ನು ಊರಲ್ಲಿ ಪ್ರಗಟ ಮಾಡಿದನು. ॥ ೨ ॥ ಹ್ಯಾಗಂವರೆ- ಮರುದಿವಸ ಆ ಗ್ರಾಮದಲ್ಲಿಯ ಆ ಆಗಸನು ಆ ಬ್ರಾಹ್ಮಣನ ಮನೆಗೆ ಬಂದು— ಸ್ವಾಮೀ, ಈ ದಿನ ಸೌಳು ಮಣ್ಣನ್ನು ಹೇರುವದಕ್ಕಾಗಿ ನಿಮ್ಮ ಎಮ್ಮೆಯನ್ನು ಕೊಡಿರಿ, ಅದರ ಬಾಡಿಗೆಯನ್ನು ಕೊಡುತ್ತೇನೆ ಎಂದನು. ॥ ೩ ॥ ಆಗ ಆ ಬ್ರಾಹ್ಮಣನು— ಎಲೈ ಆಗಸನೇ, ಈಗ ನಮ್ಮ ಎಮ್ಮೆಯು ಹಿಂಡುತ್ತಿರುವದು, ಇನ್ನುಮೇಲೆ ಅದನ್ನು ಬಾಡಿಗೆಗೆ ಕೊಡುವದಿಲ್ಲ ಎಂದು ಆ ಎಮ್ಮೆಯನ್ನು ಹಿಂಡಿ ಎರಡು ಭರಣಿ ಹಾಲನ್ನು ತಂದು ಎಲ್ಲರಿಗೂ ತೋರಿಸಹತ್ತಿದನು. ॥ ೪ ॥ ಅದನ್ನು ಕಂಡು ಎಲ್ಲ ಜನರು ಆಶ್ಚರ್ಯಪಡುತ್ತ— ಬಂಜೆಯಾದ, ಹಲ್ಲಿಲ್ಲದ, ಮೂಗಿನಲ್ಲಿ ಮುಗದಾಣ ಹಾಕಿದ ಗೊಡ್ಡೆಮ್ಮೆಯು ಹಾಲು ಕರೆಯಿತೆಂಬುದು ಆಶ್ಚರ್ಯಕರವು. ॥ ೫ ॥ ಈ ಎಮ್ಮೆಯು ಎಂದೂ ಗಬ್ಬಾಗಿಲ್ಲ. ಕರವೂ ಇಲ್ಲ ಹ್ಯಾಗೆ ಹಿಂಡಿತು ? ಎಂದೆನ್ನುತ್ತಿದ್ದರು. ಈ ಸುದ್ದಿಯು ಹಬ್ಬುತ್ತ, ಹಬ್ಬುತ್ತ ಆ ಗ್ರಾಮದ ಅಧಿಪತಿಗೆ ತಿಳಿಯಿತು ॥ ೬ ॥ ಆಗ ಅವನು ಆಶ್ಚರ್ಯಬಟ್ಟು ಆ ಬ್ರಾಹ್ಮಣನ ಮನೆಗೆ ಬಂದು ಅವನ ಚರಣಕ್ಕೆ ನಮಸ್ಕಾರ ಮಾಡಿ, ಆ ಸಂಗತಿಯನ್ನು ವಿಚಾರಿಸಿದನು. ॥ ೭ ॥ ಆಗ ಆ ಬ್ರಾಹ್ಮಣನು— ರಾಜನೇ, ಸಂಗಮದಲ್ಲಿ ಒಬ್ಬ ಯತಿಗಳಿರುವರು. ಅವರಿಂದ ಈ ಪ್ರಕಾರ ಮಹಿಮೆಯು

ಆಗಿರುವದು. ಅವರು ಈಶ್ವರನ ಅವತಾರವು ॥ ೮ ॥ ಆ ಶ್ರೀಗುರುಗಳು ನಿತ್ಯವೂ ನಮ್ಮ ಮನೆಗೆ ಭಿಕ್ಷೆಗೆ ಬರುವರು. ಅವರು ನಮ್ಮ ಮನೆಗೆ ನಿನ್ನೆ ಭಿಕ್ಷೆಗೆ ಬಂದಾಗ ಅವರಿಗೆ ಭಿಕ್ಷೆ ಹಾಕಲಿಕ್ಕೆ ನಮ್ಮ ಮನೆಯಲ್ಲಿ ಧಾನ್ಯವೇ ಇದ್ದಿಲ್ಲ ಆಗ ಅವರು ನನ್ನ ಹೆಂಡತಿಗೆ ಹಾಲನ್ನು ಕೊಡೆಂದು ಕೇಳಿದರು. ॥ ೯ ॥ ಆಗ ನನ್ನ ಪತ್ನಿಯು— ಸ್ವಾಮೀ, ನಮ್ಮ ಮನೆಯಲ್ಲಿರುವ ಈ ಎಮ್ಮೆಯು ಗೊಡ್ಡು ಅದೆ ಇದು ಹಾಲು ಹಿಂಡುವದಿಲ್ಲ. ಇದನ್ನು ನಿತ್ಯ ಬಾಡಿಗೆಗೆ ಕೊಡುತ್ತೇವೆ ಎಂದು ಹೇಳಿದಳು. ಶ್ರೀ ಗುರುಗಳು ಸಿಟ್ಟಿಗೆದ್ದು— ಎಲೌ ಸ್ತ್ರೀಯೇ, ಈ ಎಮ್ಮೆಯು ನಿಶ್ಚಯವಾಗಿ ಹಾಲು ಹಿಂಡುತ್ತದೆ. ಗೊಡ್ಡು ಇದೆ ಎಂದು ನೀನು ಸುಳ್ಳು ಹೇಳುತ್ತೀ. ಈಗ ಅದನ್ನು ತೀವ್ರವಾಗಿ ಹಿಂಡು ಹೋಗು ಎಂದು ಹೇಳಿದರು. ಆಗ ನನ್ನ ಹೆಂಡತಿಯು ಗುರುಗಳ ಆಜ್ಞೆಯಂತೆ ಆ ಎಮ್ಮೆಯ ಹತ್ತಿರ ಹೋಗಿ ಹಾಲನ್ನು ಕರೆಯಹತ್ತಿದಳು. ಆಗ ಅದು ಕಾಮಧೇನುವಿನಂತೆ ಆಗಿ ಬೇಕಾದಷ್ಟು ಹಾಲು ಕೊಟ್ಟಿತು ಎಂದು ಹೇಳಿದನು. ॥ ೧೦ ॥ ಆ ಬ್ರಾಹ್ಮಣನ ಮಾತು ಕೇಳಿ ಆ ರಾಜನು ಶೃಂಗಾರದಿಂದ ತನ್ನ ಪುತ್ರ, ಕಲತ್ರರು ಮತ್ತು ಚತುರಂಗ ಬಲ ಸಹಿತವಾಗಿ ಓಡುತ್ತ ಸಂಗಮದಲ್ಲಿರುವ ಗುರುಗಳ ಬಳಿಗೆ ಹೋಗಿ ॥ ೧೧ ॥ ಭಕ್ತಿಯಿಂದ ಉಳ್ಳಾಡುತ್ತ ಸಾಷ್ಟಾಂಗವಾಗಿ ವಂದಿಸಿ ಎದ್ದು ಏಕಭಾವದಿಂದ ಕೈಮುಗಿದುಕೊಂಡು ನಿಂತು ॥ ೧೨ ॥ ಜಯ ಜಗದ್ಗುರುವೇ, ತ್ರೈಮೂರ್ತಿ ಅವತಾರನೇ, ನಿಮ್ಮ ಮಹಿಮೆಯು ಅಪರಂಪಾರವಾಗಿದೆ. ಇದನ್ನು ವರ್ಣಿಸಲು ಮನುಷ್ಯರಾದ ನಮ್ಮಿಂದ ಶಕ್ಯವಿಲ್ಲ. ॥ ೧೩ ॥ ನಾವು ಮಾಯಾಮೋಹದಿಂದ ಅಂಧರಾದ ಮಂದಮತಿಗಳು. ನೀವು ಜಗಜ್ಜ್ಯೋತಿ ಸ್ವರೂಪರೂ ಭವಸಾಗರ ತಾರಕರೂ ಆಗಿರುವಿರಿ. ನಮ್ಮನ್ನು ಉದ್ಧರಿಸಿರಿ. ॥ ೧೪ ॥ ನಾವು ಅವಿದ್ಯೆಯೆಂಬ ಘೋರ ಮಾಯಾ ಸಾಗರದಲ್ಲಿ ಮುಳುಗಿದ್ದೇವೆ. ವಿಶ್ವಕರ್ತನೇ ನಮ್ಮನ್ನು ರಕ್ಷಿಸು, ರಕ್ಷಿಸು. ॥ ೧೫ ॥ ಶ್ರೀ ಗುರುವೇ ನೀನು ಸೃಷ್ಟಿಕರ್ತನಿದ್ದು, ಲೀಲಾಮಾತ್ರದಿಂದ ಸೃಷ್ಟಿಯನ್ನು ಮಾಡಿರುತ್ತೀ, ನೀನು ನಮಗೆ ಮನುಷ್ಯರೂಪ ಧರಿಸಿದಂತೆ ತೋರುತ್ತೀ. ॥ ೧೬ ॥ ನಿಮ್ಮ ಮಹಿಮೆಯನ್ನು ವರ್ಣಿಸಲಿಕ್ಕೂ ಸ್ತೋತ್ರ ಮಾಡಲಿಕ್ಕೂ ನಾವು ಶಕ್ತರಲ್ಲ. ವ್ಯೋಮಕೇಶನೇ, ಜಯ ಚಿನ್ಮಯಾತ್ಮನೇ, ಜಗದ್ಗುರುವೇ ನಮ್ಮನ್ನು

ರಕ್ಷಿಸು. ॥ ೧೭ ॥ ಎಂದು ಬಹುರೀತಿಯಿಂದ ಸ್ತುತಿಸಿ ನಮಸ್ಕರಿಸಿದನು. ಆಗ ಶ್ರೀಗುರುಗಳು ಸಂತೋಷದಿಂದ ಅವನಿಗೆ ಆಶ್ವಾಸನ ಕೊಟ್ಟು— ಎಲೈ ಅಧಿಪತಿಯೇ, ನಾವು ಯತಿಗಳಾದ ತಪಸ್ವಿಗಳು. ಅರಣ್ಯದಲ್ಲಿ ವಾಸಿಸುತ್ತಿರುವೆವು. ॥ ೧೮–೧೯ ॥ ನೀನು ಪುತ್ರ, ಮಿತ್ರ, ಕುಲತ್ರರೊಂದಿಗೆ ನಮ್ಮ ಹತ್ತರ ಯಾವ ಕಾರಣದಿಂದ ಬಂದೆ? ಹೇಳು ಎಂದು ಕೇಳಿದರು. ॥ ೨೦ ॥ ಶ್ರೀಗುರುಗಳ ಮಾತು ಕೇಳಿ ಆ ರಾಜನು ಕೈಮುಗಿದು ವಿನಯದಿಂದ— ಸ್ವಾಮೀ, ತಾವು ಭಕ್ತರನ್ನು ಉದ್ಧಾರ ಮಾಡುವಂಥವರಿದ್ದು ತಮಗೆ ಈ ಕಷ್ಟಕರವಾದ ಅರಣ್ಯವಾಸವೇಕೆ? ॥ ೨೧ ॥ ಭಕ್ತರನ್ನು ರಕ್ಷಿಸುವದಕ್ಕೆ ಅವತಾರ ಮಾಡಿದಂಥ ನಾರಾಯಣನೇ, ನೀವು ಭಕ್ತರ ಇಚ್ಛೆಗಳನ್ನು ಪೂರೈಸುವಂಥವರಿರುತ್ತೀರೆಂಬ ನಿಮ್ಮ ಬಿರುದಿನ ಖ್ಯಾತಿಯು ವೇದ ಪುರಾಣಗಳಲ್ಲಿ ವರ್ಣಿಸಿರುತ್ತದೆ. ಶ್ರೀ ಗುರುಮೂರ್ತಿಯೇ, ಭಕ್ತವತ್ಸಲನೇ, ನನ್ನ ವಿನಂತಿಯನ್ನು ಕೇಳಿರಿ. ॥ ೨೨–೨೩ ॥ ಸ್ವಾಮೀ, ಗಾಣಗಾಪುರವು ಮಹಾಸ್ಥಾನವು. ಅಲ್ಲಿ ತಾವು ವಾಸಮಾಡಿ ಅಲ್ಲಿಯೇ ಒಂದು ಮಠವನ್ನು ಕಟ್ಟಿಕೊಂಡು ನಿತ್ಯ ಅನುಷ್ಠಾನ ಮಾಡುತ್ತ ನಮ್ಮನ್ನು ಉದ್ಧರಿಸುತ್ತಿರಬೇಕು ಎಂದು ಆವನು ಭಕ್ತಿಪೂರ್ವಕ ಗುರುಚರಣಗಳಿಗೆ ನಮಸ್ಕರಿಸಿದನು. ॥ ೨೪–೨೫ ॥ ಆಗ ಭಕ್ತ ಜನರ ಉದ್ಧಾರಕ್ಕಾಗಿ ಅವತರಿಸಿದ ಶ್ರೀ ಗುರುನಾಥನು ಮನಸ್ಸಿನಲ್ಲಿ— ಈ ರಾಜನ ಮನೋರಥವನ್ನು ಪೂರ್ಣ ಮಾಡುವದಕ್ಕಾಗಿ ಕೆಲವು ದಿವಸ ಈ ಸ್ಥಳದಲ್ಲಿ ಪ್ರಕಟವಾಗಿ ಇರತಕ್ಕದ್ದು ಯೋಗ್ಯವು ॥ ೨೬–೨೭ ॥ ಎಂದು ವಿಚಾರಿಸಿ— ಎಲೈ ರಾಜನೇ, ನಿನ್ನ ಮನಸ್ಸಿನಲ್ಲಿ ಯಾವ ಪ್ರಕಾರ ಭಕ್ತಿ ಅದೆಯೋ ಆ ಪ್ರಕಾರವೇ ಆಗಲಿ ಎಂದು ಅನುಜ್ಞೆಯನ್ನು ಕೊಟ್ಟರು ॥ ೨೮ ॥ ಶ್ರೀ ಗುರುಗಳ ಮಾತು ಕೇಳಿ ಆ ರಾಜನು ಸಂತೋಷಬಟ್ಟು ಪಾಲಿಕೆಯನ್ನು ಸಿದ್ಧಮಾಡಿ ಅದರಲ್ಲಿ ಶ್ರೀ ಗುರುಗಳನ್ನು ಕೂಡಿಸಿ, ನಾನಾಪ್ರಕಾರದ ಬಜಂತ್ರಿಯ ವಾದ್ಯ ಮತ್ತು ಮಂಗಳಕರವಾದ ಗೀತಾವಾದ್ಯಗಳಿಂದಲೂ ತಾಳಮದ್ದಲೆಗಳ ಮನೋಹರವಾದ ನಾದದಿಂದಲೂ, ಶೃಂಗರಿಸಿದ ಚತುರಂಗ ಬಲದಿಂದಲೂ ಮತ್ತು ಛತ್ರ, ಚಾಮರ, ಪತಾಕೆಗಳಿಂದಲೂ ಶೃಂಗಾರರಾದ ಪುತ್ರ, ಮಿತ್ರ, ಕಲತ್ರಾದಿಗಳಿಂದಲೂ ಬ್ರಾಹ್ಮಣರ ಸಮೂಹದಿಂದಲೂ ಸಹಿತವಾಗಿ ಗುರುಗಳಿಗೆ ಆರತಿ

ಯನ್ನು ಮಾಡಿ, ಸಮಾರಂಭದಿಂದ ಶ್ರೀ ಗುರುಗಳನ್ನು ಕರಕೊಂಡು ತನ್ನ ಊರಿಗೆ ನಡೆದನು. ॥ ೨೯-೩೦-೩೧ ॥ ಆಗ ಬ್ರಾಹ್ಮಣರು ನಾನಾರೀತಿಯಿಂದ ವೇದಘೋಷ ಮಾಡುತ್ತಿದ್ದರು. ಬಂದಿಕಾರರು ಶ್ರೀ ಗುರುಗಳ ಬಿರುದನ್ನು ಹೊಗಳುತ್ತಿದ್ದರು. ॥ ೩೨ ॥ ಈ ಪ್ರಕಾರ ಶ್ರೀ ಗುರುಗಳು ಆ ಗ್ರಾಮದ ಸಮೀಪಕ್ಕೆ ಬರಲು ಆ ಊರ ಯಾವತ್ತೂ ಜನರು ಎದುರಾಗಿ ಬಂದು ಪ್ರೀತಿಯಿಂದ ಅನೇಕತರದ ಆರತಿಗಳನ್ನು ಮಾಡಿದರು. ॥ ೩೩ ॥ ಈ ಪ್ರಕಾರ ಆ ರಾಜನು ಮಹಾ ಸಮಾರಂಭವನ್ನು ಮಾಡಿದನು. ಆಗ ಶ್ರೀ ಗುರುಗಳು ಸಂತೋಷದಿಂದ ಊರಲ್ಲಿ ಪ್ರವೇಶಿಸಿದರು. ॥ ೩೪ ॥ ಆ ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಒಂದು ಉನ್ನತವಾದ ಅಶ್ವತ್ಥವೃಕ್ಷವೂ ಅದರ ಹತ್ತರ ಒಂದು ದೊಡ್ಡ ಭಯಂಕರ ಹಾಳು ಮನೆಯೂ ಇದ್ದವು ॥ ೩೫ ॥ ಆ ವೃಕ್ಷದಮೇಲೆ ಮಹಾ ಭಯಾನಕನಾದ ಒಬ್ಬ ಬ್ರಹ್ಮರಾಕ್ಷಸನು ಇದ್ದನು. ಅವನು ಅಲ್ಲಿ ಓಡಾಡುವ ಮನುಷ್ಯರನ್ನೂ ದನ-ಕರುಗಳನ್ನೂ ಹಿಡಿದು ತಿನ್ನುತ್ತಿದ್ದನು. ಅದರಿಂದ ಅವನ ಅಂಜಿಕೆಯು ಆ ಊರ ಸರ್ವ ಜನರಿಗೂ ಮತ್ತು ಸರ್ವ ಪ್ರಾಣಿಗಳಿಗೂ ಇತ್ತು. ॥ ೩೬ ॥ ಅದರಿಂದ ಆ ಮನೆಯವರು ಹೆದರಿ ಅದನ್ನು ಬಿಟ್ಟು ಹೋದ್ದರಿಂದ ಆ ಮನೆಯು ಬಹು ದಿವಸಗಳಿಂದ ಹಾಳುಬಿದ್ದಿತ್ತು. ॥ ೩೭ ॥ ಈ ಪ್ರಕಾರ ಶ್ರೀ ಗುರುಗಳು ಊರಲ್ಲಿ ಪ್ರವೇಶಿಸಿ ಆ ಗಿಡದ ಹತ್ತರ ಬಂದಕೂಡಲೇ ಆ ಬ್ರಹ್ಮರಾಕ್ಷಸನು ಬಂದು ಗುರುಗಳ ಪಾದಕ್ಕೆ ನಮಸ್ಕಾರಮಾಡಿ ಎದ್ದು ಕೈಜೋಡಿಸಿ, ಭಕ್ತಿಯಿಂದಲೂ ವಿನಯದಿಂದಲೂ— ಸ್ವಾಮೀ ಗುರುಗಳೇ ॥ ೩೮ ॥ ನಾನು ಘೋರವಾದ ಕತ್ತಲೆಯಲ್ಲಿ ಮುಳುಗಿರುವೆನು ದಯಮಾಡಿ ನನ್ನನ್ನು ಉದ್ಧರಿಸಿರಿ. ॥ ೩೯ ॥ ಈಗ ತಮ್ಮ ದರ್ಶನ ಮಾತ್ರದಿಂದ ನನ್ನ ಪೂರ್ವಾರ್ಜಿತ ಪಾಪಗಳು ನಾಶವಾದವು. ತಾವು ಎಲ್ಲರಮೇಲೂ ದಯೆ ತೋರಿಸುತ್ತೀರಿ. ಆದ್ದರಿಂದ ಈಗ ನನ್ನನ್ನು ಉದ್ಧಾರ ಮಾಡಬೇಕು ಎಂದನು. ॥ ೪೦ ॥ ಆಗ ಕೃಪಾಳುವಾದ ಶ್ರೀ ಗುರುಗಳು ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟರು. ಅವನು ಕೂಡಲೇ ಮನುಷ್ಯರೂಪವನ್ನು ಹೊಂದಿ ಅವರ ಪಾದದಮೇಲೆ ಉರಳಾಡಹತ್ತಿದನು. ॥೪೧॥ ಆಗ ಗುರುಗಳು— ಎಲೈ ಬ್ರಹ್ಮರಾಕ್ಷಸನೇ, ನೀನು ಶೀಘ್ರವಾಗಿ ಸಂಗಮಕ್ಕೆ ಹೋಗಿ ಸ್ನಾನಮಾಡು ಅಂದರೆ

ಮುಕ್ತನಾಗುವಿ. ನಿನಗೆ ಪುನರಾವೃತ್ತಿಯು ಇಲ್ಲ ಎಂದು ಅಂದರು. ॥ ೪೨ ॥ ಎಲೈ ನಾಮಧಾರಕಾ ಕೇಳು ಗುರುವಚನದಂತೆ ಆ ರಾಕ್ಷಸನು ಸಂಗಮದಲ್ಲಿ ಸ್ನಾನಮಾಡಿ ತನ್ನ ದೇಹವನ್ನು ಬಿಟ್ಟು, ಕೂಡಲೇ ಮೋಕ್ಷವನ್ನು ಹೊಂದಿದನು. ॥ ೪೩ ॥ ಆಗೆ ಯಾವತ್ತು ಜನರು ವಿಸ್ಮಿತರಾಗಿ— ಶ್ರೀ ಗುರುಗಳು ಸತ್ಯವಾಗಿ ಬ್ರಹ್ಮ-ವಿಷ್ಣು-ಮಹೇಶ್ವರ ಅವತಾರಿಗಳು ನಮಗೆ ಒಂದೇ ಮೂರ್ತಿಯಾಗಿ ಕಾಣುವರು ಎಂದು ಅನ್ನುತ್ತಿದ್ದರು. ॥ ೪೪ ॥ ಆ ಮೇಲೆ ಶ್ರೀ ಗುರುಗಳು ಗಾಣಗಾಪುರದಲ್ಲಿಯೇ ಇರಹತ್ತಿದರು. ಆಗ ಯಾರೂ ಇರದ ಮನೆಯೇ ಈಗ ಗುರುಗಳ ವಾಸಸ್ಥಳ (ಮಠ)ವಾಯಿತು. ಆ ರಾಜನು ಅಲ್ಲಿ ದಿನಾಲು ಶ್ರೀ ಗುರುಗಳನ್ನು ಭಕ್ತಿಭಾವದಿಂದ ಸೇವೆಗೈಯುತ್ತಿದ್ದನು. ॥ ೪೫ ॥ ಈ ಪ್ರಕಾರ ಪೂಜಿಸುತ್ತ ಅನೇಕತರದ ವಾದ್ಯಗಳನ್ನು ಬಾರಿಸುವದರಿಂದಲೂ ಅನೇಕತರದ ಗಾಯನ ವಾದ್ಯಗಳಿಂದಲೂ ಮಂತ್ರಗಳಿಂದಲೂ ಶ್ರೀ ಗುರುಗಳನ್ನು ಸಂತೋಷಪಡಿಸುತ್ತಿದ್ದನು. ॥ ೪೬ ॥ ಶ್ರೀ ಗುರುಗಳು ನಿತ್ಯ ಸಂಗಮಕ್ಕೆ ಸ್ನಾನಾನುಷ್ಠಾನಗಳಿಗೆ ಹೋಗುವಾಗ ಆ ರಾಜನು ತಾನೂ ಸೈನ್ಯಸಹಿತ ಭಕ್ತಿಯಿಂದ ಅವರ ಸಂಗಡ ಹೋಗುತ್ತಿದ್ದನು. ॥ ೪೭ ॥ ಒಮ್ಮೊಮ್ಮೆ ವೈಭವದಿಂದ ಶ್ರೀಗುರುಗಳನ್ನು ತನ್ನ ಪಾಲಿಕೆಯಲ್ಲಿ ಕೂಡಿಸಿಕೊಂಡು ಸರ್ವ ಸೈನ್ಯಸಹಿತವಾಗಿ ಸಂಗಮಕ್ಕೆ ಕರಕೊಂಡು ಹೋಗುತ್ತಿದ್ದನು. ॥ ೪೮ ॥ ಮಧ್ಯಾಹ್ನದಲ್ಲಿ ಶ್ರೀ ಗುರುಗಳು ಮಠಕ್ಕೆ ಬಂದಕೂಡಲೇ ಅವನು ಆನಂದದಿಂದ ಸೈನ್ಯಸಹಿತ ಬಂದು ನಮಸ್ಕಾರ ಮಾಡುತ್ತಿದ್ದನು. ॥ ೪೯ ॥ ಭಕ್ತವತ್ಸಲರಾದ ಶ್ರೀ ಗುರುಗಳು ಭಕ್ತಾಧೀನರಿದ್ದು, ಆ ರಾಜನ ಮನಸ್ಸಿಗೆ ಸಂತೋಷವಾಗುವಂತೆ ಇರುತ್ತಿದ್ದರು. ॥ ೫೦ ॥ ಈ ಪ್ರಕಾರ ನಿತ್ಯ ಸಮಾರಂಭ ನಡೆಯುವದನ್ನೂ ಆ ಊರ ಜನರು ಕೇಳಿ, ನೋಡಿದ್ದಲ್ಲದೆ ಸುತ್ತುಮುತ್ತಲಿನ ಗ್ರಾಮಗಳ ಜನರು ಕೇಳುತ್ತ ಕೇಳತ್ತ ಅದು ಲೋಕದಲ್ಲೆಲ್ಲ ಪ್ರಸಿದ್ಧಿಯಾಯಿತು. ॥ ೫೧ ॥ ಆ ಗಾಣಗಾಪುರದ ಸಮೀಪದಲ್ಲಿರುವ ಕುಮಶಿ ಎಂಬ ಗ್ರಾಮದಲ್ಲಿ ಮೂರು ವೇದಗಳನ್ನು ಬಲ್ಲಂಥ ತ್ರಿವಿಕ್ರಮ ಭಾರತಿಗಳೆಂಬ ಒಬ್ಬ ತಪಸ್ವಿಗಳು ಇರುತ್ತಿದ್ದರು. ॥ ೫೨ ॥ ಅವರು ನಿತ್ಯ ಶ್ರೀ ನರಸಿಂಹನನ್ನು ಧ್ಯಾನಿಸುತ್ತ ಮಾನಸಪೂಜೆಯನ್ನು ಮಾಡುತ್ತಿದ್ದರು. ಅವರು ಗಾಣಗಾಪುರದಲ್ಲಿ ಶ್ರೀ ಗುರು ನರಸಿಂಹ ಸರಸ್ವತಿ

ಸ್ವಾಮಿಗಳಿರುವದನ್ನೂ ಅವರ ಲೀಲೆಗಳನ್ನೂ ಕೇಳುತ್ತಿದ್ದರು. ॥ ೫೩ ॥ ಈ ಪ್ರಕಾರ ಕೇಳಿ ಮನಸ್ಸಿನಲ್ಲಿ— ಈ ನರಸಿಂಹ ಸರಸ್ವತಿಗಳು ಸನ್ಯಾಸಗಳಾಗಿದ್ದು ಢಾಂಭಿಕರಾಗಿ ಕಾಣುತ್ತಾರೆ. ಈ ಸನ್ಯಾಶಾಶ್ರಮದಲ್ಲಿ ಈ ವಿಚಿತ್ರ ಲೀಲೆಗಳನ್ನು ಯಾಕೆ ಮಾಡಬೇಕು ? ಎಂದು ಅವರ ನಿಂದೆಯನ್ನು ಮಾಡಲಾರಂಭಿಸಿದರು. ॥ ೫೪ ॥ ಎಲ್ಲರ ಮನಸ್ಸಿನೊಳಗಿನ ಇಂಗಿತವನ್ನು ತಿಳಿಯುತ್ತಿದ್ದಂಥ ಜ್ಞಾನ ಮೂರ್ತಿಗಳಾದ ಶ್ರೀ ಗುರುನಾಥರು ಆ ತ್ರಿವಿಕ್ರಮಯತಿಯು ತಮ್ಮ ನಿಂದೆ ಮಾಡುವನೆಂದು ಮನಸ್ಸಿನಲ್ಲಿ ತಿಳಿದರು. ॥ ೫೫ ॥— ಎಲೈ ನಾಮಧಾರಕನೇ, ಮುಂದೆ ಕಥೆಯು ಅಪೂರ್ವವಾಗಿರುವದು. ಮನಸ್ಸನ್ನು ನಿರ್ಮಲ ಮಾಡಿಕೊಂಡು ಏಕಚಿತ್ತದಿಂದ ಕೇಳು. ॥ ೫೬ ॥ ಎಂದು ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ಮನೋಹರವಾದ ಈ ಗುರುಚರಿತ್ರೆಯನ್ನು ಕೇಳಿದವರು ಸಕಲಾಭೀಷ್ಟಗಳನ್ನು ಹೊಂದುವರು. ॥ ೫೭ ॥ ಗುರುಚರಿತ್ರೆಯ ಈ ಅಧ್ಯಾಯದಲ್ಲಿ ಪವಿತ್ರವಾದ ಗಾಣಗಾಪುರದಲ್ಲಿ ಶ್ರೀ ಗುರುಗಳು ಬ್ರಹ್ಮರಾಕ್ಷಸನಿಗೆ ಮುಕ್ತಿಯನ್ನಿತ್ತರೆಂಬದನ್ನು ಹೇಳಿದೆ. ॥ ೫೮ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ " ರಾಕ್ಷಸ " ಮುಕ್ತಕರಣಂ ನಾಮ ತ್ರಯೋವಿಂಶೋಽಧ್ಯಾಯಃ ॥ ೨೩ ॥

—: ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು :—

— ೨೩ನೇ ಅಧ್ಯಾಯ ಸಮಾಪ್ತ —

# ೨೪ನೇಯ ಅಧ್ಯಾಯ

## — ಶ್ರೀ ಗುರುಗಳು ತ್ರಿವಿಕ್ರಮ ಯತಿಗೆ ವಿಶ್ವರೂಪವನ್ನು ತೋರಿಸಿದ್ದು —

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಗ ಸಿದ್ಧರು— ಎಲೈ ನಾಮಧಾರಕನೇ, ಮುಂದೆ ಕಥೆಯು ಅಪೂರ್ವವಾಗಿ ನಡೆಯಿತು. ಆ ಕಥಾಕೌತುಕವನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಎಂದರು. ॥ ೧ ॥ ಆಗ ನಾಮಧಾರಕನು ಕೈಮುಗಿದು— ಸ್ವಾಮೀ, ಮುಂದಿನ ಕಥೆಯು ಯಾವ ಪ್ರಕಾರವಾಗಿ ನಡೆಯಿತೆಂಬದನ್ನು ದಯಮಾಡಿ ನನಗೆ ವಿಸ್ತಾರವಾಗಿ ಹೇಳಬೇಕು ಎಂದನು. ॥ ೨ ॥ ಅವನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು— ಎಲೈ ವತ್ಸಾ, ಶಿಷ್ಯಾ ನಾಮಧಾರಕನೇ, ಗುರುಚರಿತ್ರೆಯು ಆಶ್ಚರ್ಯಕರವಾಗಿರುವದು. ॥ ೩ ॥ ಆ ಕುಮಶೀ ಗ್ರಾಮದಲ್ಲಿದ್ದಂಥ ತ್ರಿವಿಕ್ರಮಭಾರತಿ ಮುನಿಯು ಸರ್ವ ಜನರ ಮುಂದೆ ಶ್ರೀಗುರುಗಳು ದಾಂಭಿಕ ಸನ್ಯಾಸಿಗಳೆಂದು ನಿಂದಿಸುತ್ತಿದ್ದನು. ॥ ೪ ॥ ಜ್ಞಾನಿಗಳಾದ ಹಾಗೂ ವಿಶ್ವದ ಜನರ ಮನಸ್ಸಿನಲ್ಲಿದ್ದದ್ದನ್ನು ತಿಳಿಯುವ ಶ್ರೀಗುರುಗಳು ಅದನ್ನು ತಿಳಿದು ಗಾಣಗಾಪುರದ ರಾಜನನ್ನು ಕರೆದು— ತ್ರಿವಿಕ್ರಮ ಯತಿಯು ನಿಂದೆ ಮಾಡುತ್ತಾರೆಂದು ಹೇಳಿ— ॥ ೫ ॥ ಎಲೈ ರಾಜನೇ, ನಾವು ಇವೊತ್ತೇ ಈಗಲೇ ಆ ಕುಮಶೀ ಗ್ರಾಮದಲ್ಲಿರುವ ಆ ತ್ರಿವಿಕ್ರಮಭಾರತಿ ಯತಿಯ ಹತ್ತರ ಹೋಗಬೇಕಾಗಿದೆ ಎಂದು ಅಂದರು. ॥ ೬ ॥ ಅದಕ್ಕೆ ಆ ರಾಜನು ಸಂತೋಷಬಟ್ಟು, ತಾನು ನಾನಾಲಂಕಾರಗಳನ್ನು ಧರಿಸಿ ಚತುರಂಗ ದಳವನ್ನು ಸಿಂಗರಿಸಿದನು. ॥ ೭ ॥ ಆಮೇಲೆ ಅನೇಕ ತರದ ವಾದ್ಯಗಳು ಬಾರಿಸುತ್ತಿರಲು ಸಮಾರಂಭದಿಂದ ಶ್ರೀ ಗುರುಗಳನ್ನು ಪಾಲಕಿಯಲ್ಲಿ ಕೂಡ್ರಿಸಿಕೊಂಡು ಹೊರಟನು. ॥ ೮ ॥ ಈ ಪ್ರಕಾರ ಶ್ರೀ ಗುರುಗಳು ಆ ಕುಮಸೀ ಗ್ರಾಮಕ್ಕೆ ಬರಲು ॥ ೯ ॥ ಆ ತ್ರಿವಿಕ್ರಮ ಭಾರತಿಯು ನಿತ್ಯ ಭಕ್ತಿಯಿಂದ ಮಾನಸಪೂಜೆಯಲ್ಲಿ ಮಾಡುತ್ತಿದ್ದ ಅವರ ಇಷ್ಟ

ದೇವರಾದ ಶ್ರೀ ನರಸಿಂಹ ಮೂರ್ತಿಯು ಆ ದಿವಸ ಸ್ಥಿರವಾಗಲಿಲ್ಲ. ॥ ೧೦ ॥ ಆಗ ಅವರು ಮನಸ್ಸಿನಲ್ಲಿ ಚಿಂತಿಸಿ- ಏನಿದು ? ಈ ದಿವಸ ನನ್ನ ಧ್ಯಾನದಲ್ಲಿ ಶ್ರೀ ನರಸಿಂಹ ಮೂರ್ತಿಯು ಯಾಕೆ ಬಂದಿರಲಿಕ್ಕಿಲ್ಲ ? ನನ್ನ ತಪಸ್ಸು ವ್ಯರ್ಥ-ವಾಗಲಿಕ್ಕೆ ಏನು ಕಾರಣವಾಯಿತು ? ॥ ೧೧ ॥ ನಾನು ಶ್ರೀ ನರಸಿಂಹನನ್ನು ಬಹುದಿವಸ ಆರಾಧಿಸಿದೆನು. ಆತನು ಈ ದಿನ ನನ್ನನ್ನು ಯಾಕೆ ಉಪೇಕ್ಷಿಸಿದ್ದಾನು ? ಈಗ ನನ್ನ ತಪಃಫಲವು ವ್ಯರ್ಥವಾಯಿತು ! ಏನು ಮಾಡಲಿ ? ಎಂದು ಚಿಂತಿಸುತ್ತಿದ್ದನು. ॥ ೧೨ ॥ ಅಷ್ಟರಲ್ಲಿ ಶ್ರೀಗುರುಗಳು ಆ ತ್ರಿವಿಕ್ರಮ ಯತಿಯ ಮಾನಸ ಪೂಜೆಯಲ್ಲಿಯ ಮೂರ್ತಿಯಂತೆ ಆಗಿ ದೂರ ನದೀ ತೀರದಲ್ಲಿ ಬರುತ್ತಿದ್ದರು. ॥ ೧೩ ॥ ಆ ಯಾವತ್ತೂ ಸೈನ್ಯ ದವರೂ ಸಹ ದಂಡಧಾರಿಗಳಾಗಿ ಶ್ರೀ ನರಸಿಂಹ ಮೂರ್ತಿಯಂತೆ ಕಂಡರು. ಆಗ ಆ ತ್ರಿವಿಕ್ರಮ ಮುನಿಯು ಅದನ್ನು ಕಂಡು ಆಶ್ಚರ್ಯವನ್ನು ಹೊಂದಿ ನಮಸ್ಕಾರ ಮಾಡುತ್ತ ಮಾಡುತ್ತ ಹೋಗಿ ॥ ೧೪ ॥ ಪಾಲಕಿಯಲ್ಲಿ ಕೂತ ಶ್ರೀ ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತ ಅವರ ಚರಣಗಳನ್ನು ಹಿಡಿದನು. ಸೈನ್ಯದವರೆಲ್ಲರೂ ದಂಡಧಾರಿಗಳಾದ ಯತಿಗಳಂತೆ ಕಂಡರು ॥ ೧೫ ॥ ಆಮೇಲೆ ಅವನಿಗೆ ಇವರಲ್ಲಿ ಗುರುಗಳ್ಯಾರು ? ಶಿಷ್ಯರಾರು ? ಎಂಬದನ್ನು ತಿಳಿಯದೆ ॥ ೧೬ ॥ ಭ್ರಾಂತನಾಗಿ ಪುನಃ ಗುರುಚರಣಗಳಿಗೆ ವಂದಿಸುತ್ತ— ಸ್ವಾಮೀ, ನೀವು ತ್ರಿಮೂರ್ತಿ ಸ್ವರೂಪರಾಗಿದ್ದು ಜಗದ್ಗುರುಗಳಾಗಿದ್ದೀರಿ ॥ ೧೭ ॥ ನಾನು ಅವಿದ್ಯಾ ಮಾಯೆ ಯಿಂದ ಕೂಡಿದವನಾದ್ದರಿಂದ ಈಗ ನಿಮ್ಮ ಸ್ವರೂಪವನ್ನು ತಿಳಿಯಲಾರೆನು. ನನ್ನಮೇಲೆ ಕೃಪೆ ಮಾಡಿ, ತಮ್ಮ ನಿಜ ರೂಪವನ್ನು ನನಗೆ ತೋರಿಸಿರಿ. ॥ ೧೮ ॥ ಶ್ರೀಗುರುವೇ, ಈ ಚರ್ಮ ಚಕ್ಷುವಿನಿಂದ ನಿಮ್ಮ ಸ್ವರೂಪವನ್ನು ತಿಳಿಯಲಿಕ್ಕೆ ನನಗೆ ಶಕ್ಯವಿಲ್ಲ. ॥ ೧೯ ॥ ನೀವು ಸರ್ವ ಪ್ರಾಣಿಗಳಲ್ಲಿ ವ್ಯಾಪಕರಾಗಿಯೂ ಯತಿಗಳಾಗಿ ಶ್ರೀ ನರಸಿಂಹ ಮೂರ್ತಿಗಳಾಗಿಯೂ ಇರುವಿರಿ. ನೀವು ನಿಮ್ಮ ನರಸಿಂಹ ಸರಸ್ವತಿ ರೂಪವನ್ನು ನನಗೆ ಪ್ರಗಟ ಮಾಡಿ ತೋರಿಸಿರಿ. ನಿಮ್ಮ ಯತಿ ರೂಪವನ್ನು ಎಲ್ಲರೂ ನೋಡುವರು. ॥ ೨೦ ॥ ಸ್ವಾಮೀ, ಈಗ ನಾನು ಯಾರಿಗೆ ನಮಿಸಲಿ ? ಹೇಳಿರಿ. ಯಾರಮುಂದೆ ನನ್ನ ಕರುಣಾವಚನವನ್ನು ಹೇಳಲಿ ? ತ್ರಿಮೂರ್ತಿಗಳಾದ

ನೀವು ನಿಮ್ಮ ಗುರ್ತನ್ನು ತೋರಿಸಿರಿ. ಈಗ ತಾವು ನಿಜರೂಪದಿಂದಲೇ ದರ್ಶನ ಕೊಡಬೇಕು. ॥ ೨೧ ॥ ಸ್ವಾಮೀ, ನಾನು ಬಹಳ ದಿವಸ ತಪಸ್ಸು ಮಾಡಿ ನಿಮ್ಮ ಮಾನಸಪೂಜೆ ಮಾಡಿದೆನು ಈ ದಿನ ಅದರ ಫಲವು ಆಗಿ ಸಾಕ್ಷಾತ್ತಾಗಿ ತಮ್ಮ ಮೂರ್ತಿ ದರ್ಶನವಾಯಿತು ॥ ೨೨ ॥ ನೀವು ವಿಶ್ವತಾರಕರಿದ್ದು ನಮ್ಮನ್ನು ಉದ್ಧಾರ ಮಾಡುವದರ ದೆಶೆಯಿಂದ ಈ ಭೂಮಿಯಲ್ಲಿ ಅವತರಿಸಿರುತ್ತೀರಿ. ಸ್ವಾಮೀ, ನಿಮ್ಮ ಚಿನ್ಮಯ ರೂಪವನ್ನು ತೋರಿಸಿರಿ. ॥ ೨೩ ॥ ಎಂದು ಅನೇಕ ರೀತಿಯಾಗಿ ತ್ರಿವಿಕ್ರಮ ಭಾರತಿಯು ಭಕ್ತಿಯಿಂದ ಶ್ರೀಗುರುಗಳನ್ನು ಸ್ತುತಿಸಲು ಗುರುಗಳು ಸಂತೋಷಬಟ್ಟು ಕೂಡಲೆ ಏಕರೂಪರಾಗಿ ತೋರಿದರು ॥ ೨೪ ॥ ಈಗ ಸ್ಪಷ್ಟ ರೂಪದಿಂದ ಸೈನ್ಯವು ಬೇರೆ, ಆ ಸೈನ್ಯಮಧ್ಯದಲ್ಲಿ ಭಕ್ತವರದರಾದಂಥ ಶ್ರೀಗುರುಗಳು ಬೇರೆಯಾಗಿ ಕಾಣಿಸಿದರು ॥ ೨೫ ॥ ಆಗ ಅವರು ಆ ತ್ರಿವಿಕ್ರಮ ಯತಿಯನ್ನು ಕುರಿತು— ಎಲೈ ಯತೀಯೇ, ನೀನು ಮಂದಬುದ್ಧಿಯಿಂದ ನಿತ್ಯವೂ ನನ್ನನ್ನು ಡಾಂಭಿಕ ಯತಿ, ಡಾಂಭಿಕ ಯತಿ ಎಂದು ನಿಂದಿಸುತ್ತೀ ॥ ೨೬ ॥ ಮತ್ತು ನೀನು ಮಾನಸಪೂಜಯಲ್ಲಿ ಶ್ರೀನರಸಿಂಹ ಮೂರ್ತಿಯನ್ನು ಪೂಜಿಸುತ್ತೀ. ಆದಕಾರಣ ನಿನ್ನ ಭಕ್ತಿಯನ್ನು ಪರೀಕ್ಷಿಸುವದಕ್ಕೆ ಬಂದೆನು. ॥ ೨೭ ॥ ಡಂಭ ಅಂದರೆ ಯಾವ ಪ್ರಕಾರದ್ದಿರುವದು ? ಅದನ್ನು ವಿಸ್ತಾರವಾಗಿ ನನಗೆ ಹೇಳು. ನಿನ್ನ ಮನಸ್ಸಿನಲ್ಲಿಯೂ ಹರಿಯು ಇರುವನು. ಅವನೇ ನಿನಗೆ ನಿರೂಪಿಸುವನು ಎಂದು ಅಂದರು. ॥ ೨೮ ॥

ಈ ಪ್ರಕಾರ ಶ್ರೀ ಗುರುಗಳ ಮಾತು ಕೇಳಿ ಆ ತ್ರಿವಿಕ್ರಮ ಯತಿಯು ನಮಸ್ಕರಿಸಿ— ಸ್ವಾಮೀ ಸದ್ಗುರುರಾಯನೇ ನಾನೊಬ್ಬ ಅವಿದ್ಯಾರೂಪಿಯು. ನನ್ನ ಅವಿದ್ಯಾರೂಪವನ್ನು ನಾಶಮಾಡಬೇಕು. ॥ ೨೯ ॥ ನೀನು ವಿಶ್ವವನ್ನು ರಕ್ಷಿಸುತ್ತೀ ನೀನು ತ್ರಯಮೂರ್ತಿ ಅವತಾರನು. ನಾನು ಅಜ್ಞಾನದಿಂದ ಕೂಡಿದವನಾಗಿ ಮಾಯಾರೂಪದಿಂದ ವರ್ತಿಸುವೆನು. ॥ ೩೦ ॥ ಸ್ವಾಮೀ ನಾನು ಮಾಯಾಮೋಹಾಂಧಕಾರದಿಂದ ಅವಿದ್ಯಾಸಾಗರದಲ್ಲಿ ಮುಳುಗಿದೆನು. ನಾನು ಪರಮಾರ್ಥ ವಿಚಾರವನ್ನು ಅರಿಯೆನು. ಸ್ವಾಮೀ, ನಾನು ದಿವಾಂಧನಾಗಿದ್ದೇನೆ. ॥ ೩೧॥ ನೀವು ಜ್ಯೋತಿಸ್ವರೂಪರಾಗಿ ಪ್ರಕಾಶಿಸುತ್ತಿರಿ. ಸ್ವಾಮೀ ಈಗ ತಾವು ಅಂತಃಕರಣಮಾಡಿ ನನಗೆ ದರ್ಶನ ಕೊಟ್ಟಿರಿ.

ದಯಾನಿಧಿಯೇ ತಾವು ಈ ಸೇವಕನ ತಪ್ಪನ್ನು ಕ್ಷಮಿಸಿ ನನ್ನನ್ನು ಉದ್ಧಾರಮಾಡಿರಿ. ‖ ೩೨ ‖ ನಾನು ಅವಿದ್ಯಾ ಸಾಗರದಲ್ಲಿ ಮುಳುಗಿ ಪಾರುಗಾಣದೆ ತೇಲಾಡುತ್ತಿರುವೆನು ನನಗೆ ಥಡವು ಸಿಗಲೊಲ್ಲದು. ಮುಳುಗುತ್ತಿರುವೆನು. ‖ ೩೩ ‖ ಸ್ವಾಮೀ, ಕೃಪಾನಿಧಿಯೇ ಈಗ ತಾವು ನನ್ನನ್ನು ಜ್ಞಾನವೆಂಬ ನಾವೆಯಲ್ಲಿ ಕೂಡ್ರಿಸಿ, ಕರುಣವೆಂಬ ವಾಯುವನ್ನು ಬೀಸಿ, ನನ್ನನ್ನು ನಿಜ ಸ್ಥಾನವೆಂಬ ದಡಕ್ಕೆ ಮುಟ್ಟಿಸಿರಿ. ‖ ೩೪ ‖ ಸ್ವಾಮೀ, ತಮ್ಮ ಕೃಪೆಯುಂಟಾದವರಿಗೆ ದೈನ್ಯವೆಲ್ಲಿಯದು ? ಅವನು ಕಲಿಯನ್ನು ಗೆದ್ದು ಪರಮಾರ್ಥದಲ್ಲಿ ಐಕ್ಯನಾಗುವನು. ‖೩೫‖ ಸ್ವಾಮೀ, ನಾನು ಪೂರ್ವದಲ್ಲಿ ಮಹಾಭಾರತ ಕಥೆಯನ್ನು ವಿಸ್ತಾರವಾಗಿ ಕೇಳಿದ್ದೇನೆ. ಅದರಲ್ಲಿ ಶ್ರೀ ಕೃಷ್ಣನು ಅರ್ಜುನನಿಗೆ ಪ್ರಸನ್ನನಾಗಿ ವಿಶ್ವರೂಪವನ್ನು ತೋರಿಸಿದನು. ‖ ೩೬ ‖ ಅದರಂತೆ ಈಗ ತಾವು ನನಗೆ ವಿಶ್ವರೂಪವನ್ನು ತೋರಿಸಿದಿರಿ ಭಕ್ತವತ್ಸಲಾ, ಗುರುರಾಯಾ, ನಿನ್ನ ಅನಂತ ಮಹಿಮೆಯು ಆಶ್ಚರ್ಯವುಳ್ಳದ್ದಾಗಿದೆ. ‖೩೭‖ ಜಯ ಜಯ ಜಗದ್ಗುರುವೇ, ಭವಸಾಗರ ತಾರಕನೇ, ತ್ರಯಮೂರ್ತಿ ಅವತಾರನೇ, ನರಸಿಂಹ ಸರಸ್ವತಿಯೇ ‖೩೮‖ ನಿಮ್ಮ ಚರಣದರ್ಶನ ಮಾತ್ರದಿಂದ ಈ ಹೊತ್ತು ನಾನು ಕೃತಾರ್ಥನಾದೆನು. ಏನೂ ಪ್ರಯತ್ನ ಮಾಡದಲೇ ಈ ದಿನ ರತ್ನಚಿಂತಾಮಣಿಯಾದ ತಮ್ಮ ದರ್ಶನವಾಯಿತು. ‖ ೩೯ ‖ ಸಗರ ಪುತ್ರರನ್ನು ಈ ಭವಸಾಗರದಿಂದ ಮುಕ್ತಮಾಡಲಿಕ್ಕೆ ಗಂಗಾನದಿಯು ಈ ಭೂಲೋಕಕ್ಕೆ ಬಂದಂತೆಯೂ, ಶ್ರೀ ಕೃಷ್ಣನು ವಿದುರನ ಮನೆಗೆ ಬಂದಂತೆಯೂ ದಯಾಪರರಾದ ತಾವು ನನ್ನ ಎದುರಿಗೆ ಬಂದು ದರ್ಶನ ಕೊಟ್ಟಿರಿ. ‖ ೪೦ ‖ ಭಕ್ತವತ್ಸಲರಾದ ತಮ್ಮ ಕೀರ್ತಿಯು ಲೋಕದಲ್ಲಿ ಹಬ್ಬಿದೆ. ನನಗೂ ಪ್ರಚೀತಿಯನ್ನು ತೋರಿಸಿದಿರಿ. ಜಗುದ್ಗುರುವೇ ನಿನ್ನ ಅನಂತ ಮಹಿಮೆಯನ್ನು ವರ್ಣಿಸಲಿಕ್ಕೆ ನನ್ನ ಬುದ್ಧಿಯು ಸಾಲದು. ‖ ೪೧ ‖ ಎಂದು ಬಹುರೀತಿಯಿಂದ ಸ್ತೋತ್ರ ಮಾಡಲು ಶ್ರೀ ಗುರುಗಳು ಸಂತೋಷಬಟ್ಟು— ಎಲೈ, ತ್ರಿವಿಕ್ರಮ ಭಾರತಿ ಮುನಿಯೇ, ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೆ ನಿಶ್ಚಯವಾಗಿ ಸದ್ಗತಿಯಾಗುವದು. ನಿನಗೆ ಇನ್ನು ಪುನರ್ಜನ್ಮವಿಲ್ಲ. ‖ ೪೨-೪೩ ‖ ನಿನಗೆ ಪರಮಾರ್ಥವು ಸಾಧಿಸುವದು. ನೀನು ಈಶ್ವರನಲ್ಲಿ ಐಕ್ಯನಾಗುವಿ ಎಂದು ವರವನ್ನು ಕೊಟ್ಟು ಶ್ರೀ ಗುರುಗಳು ಆ ಕುಮಶೀ

ಗ್ರಾಮದಲ್ಲಿ ತ್ರಿವಿಕ್ರಮಯತಿಯನ್ನು ಬಿಟ್ಟು ಅಲ್ಲಿಂದ ಕೂಡಲೇ ಹೊರಟು ಒಂದು ಕ್ಷಣದಲ್ಲಿ ತಮ್ಮ ಸ್ಥಾನವಾದ ಗಾಣಗಾಪುರಕ್ಕೆ ಬಂದರು. ॥ ೪೪–೪೫ ॥ ಎಲೈ ನಾಮಧಾರಕನೇ ಗುರುಮಹಿಮೆಯು ಈ ಪ್ರಕಾರವಾಗಿರುವದು. ಅವರು ತ್ರಯಮೂರ್ತಿ ಅವತಾರವು. ಈಗ ಮನುಷ್ಯರೂಪದಿಂದ ವರ್ತಿಸುವರು. ॥ ೪೬ ॥ ಇಂಥ ಅವತಾರಿಕ ರಾದವರಿಗೆ ಮನುಷ್ಯರೆಂದು ಯಾರು ಅನ್ನುತ್ತಾರೋ ಅವರು ಏಳು ಜನ್ಮಗಳವರೆಗೆ ಯಮಪಟ್ಟಣದಲ್ಲಿ ಇರುವರೆಂದು ತಿಳಿ. ॥ ೪೭ ॥ ಶ್ರೀ ಗುರುವೇ ಬ್ರಹ್ಮನು, ಶ್ರೀ ಗುರುವೇ ವಿಷ್ಣುವು, ಶ್ರೀ ಗುರುವೇ ಗಿರಿಜಾರಮಣನು ಎಂದು ವೇದ ಶಾಸ್ತ್ರ ಪುರಾಣಗಳು ಪ್ರಸಿದ್ಧವಾಗಿ ಹೇಳುವವು. ॥ ೪೮ ॥ ಆ ಕಾರಣದಿಂದ ಶ್ರೀ ಗುರುಗಳು ನಿಶ್ಚಯವಾಗಿ ತ್ರೈಮೂರ್ತಿ ಅವತಾರವೆಂದು ತಿಳಿದು ಅವರಿಗೆ ಶರಣುಹೋಗಬೇಕು ನನ್ನ ಮಾತನ್ನು ನಂಬಿ ನೀನು ಗುರು ಚರಣದಲ್ಲಿ ಲೀನನಾಗು. ॥ ೪೯ ॥ ಜ್ಞಾನಿಗಳು ಗುರುಚರಿತ್ರೆ ಎಂಬ ಕಾಮಧೇನುವಿನ ಅಮೃತವನ್ನು ಸುಂದರ ವಾದ ಅಮೃತದ ಅರವಟ್ಟಿಗೆಯಲ್ಲಿ ಕುಡಿಯುವರು ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು ಇದನ್ನು ಭಕ್ತಿಯಿಂದ ಕೇಳುವ ಜನರು ಚತುರ್ವಿಧ ಪುರುಷಾರ್ಥ ಗಳನ್ನು ಹೊಂದುವರು. ॥ ೫೦–೫೧ ॥

ಇತಿ ಶ್ರೀ ಗುರುಚರಿತ್ರಾಮೃತೇ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧ ನಾಮಧಾರಕ ಸಂವಾದೇ " ತ್ರಿವಿಕ್ರಮ ಭಾರತಿ ವಿಶ್ವರೂಪ ದರ್ಶನಂ " ನಾಮ ಚತುರ್ವಿಂಶೋಧ್ಯಾಯಃ ॥ ೨೪ ॥

— ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು :—

**— ೨೪ನೇ ಅಧ್ಯಾಯ ಸಮಾಪ್ತ —**

# ೨೫ನೇಯ ಅಧ್ಯಾಯ

## — ವೇದವಾದಿಗಳಾದ ಇಬ್ಬರು ವಿಪ್ರರು ಆತ್ಮಪ್ರಶಂಸೆ ಮಾಡಿಕೊಂಡದ್ದು —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕನು— ಸ್ವಾಮೀ, ಜಯ ಜಯ ಸಿದ್ಧಮುನಿಗಳೇ, ನೀವು ಶ್ರೇಷ್ಠ ಗುರುಗಳಾಗಿದ್ದೀರಿ. ನೀವು ಹೇಳಿದ ಪಾರಮಾರ್ಥವು ಸಾಕ್ಷೀರೂಪವಾಗಿ ನನ್ನ ಅಂತಃಕರಣದಲ್ಲಿ ಉಳಿಯಿತು ॥ ೧ ॥ ಈ ಪ್ರಕಾರ ಕೃಪಾಳುವಾದ ಪರಮೇಶ್ವರನು ಶ್ರೀ ಗುರು ನರಸಿಂಹ ಸರಸ್ವತಿ ರೂಪದಿಂದ ಮನುಷ್ಯರಾಗಿ ಅವತರಿಸಿದ್ದು ಸತ್ಯವು ಅಜ್ಞಾನಿಗಳು ಮಾತ್ರ ಅವರಿಗೆ ಮನುಷ್ಯರೆಂದೆನ್ನುವರು ॥ ೨ ॥ ಆದರೆ ಜ್ಞಾನಿಗಳು ಮಾತ್ರ ಅವರನ್ನು ಪ್ರತ್ಯಕ್ಷ ಪರಮಾತ್ಮನೆಂದೇ ತಿಳಿಯುವರು ಶ್ರೀ ಗುರುಗಳು ಆ ತ್ರಿವಿಕ್ರಮಭಾರತಿಯತಿಗೆ ಪ್ರತ್ಯಕ್ಷವಾಗಿ ಪರಮಾತ್ಮ ಸ್ವರೂಪವನ್ನು ತೋರಿಸಿದರು ಎಂದು ಹೇಳಿದಿರಿ ಮುಂದೆ ಕಥೆಯು ಹ್ಯಾಗೆ ನಡೆಯಿತೆಂಬದನ್ನು ದಯಮಾಡಿ ನನಗೆ ಹೇಳಬೇಕೆಂದು ಬೇಡಿಕೊಂಡನು ॥ ೩ ॥

ಆಗ ಸಿದ್ಧರು— ಎಲೈ ಬಾಲಶಿಷ್ಯನೇ ಕೇಳು. ಶ್ರೀ ಗುರುಗಳ ಯಾವತ್ತೂ ಆಗಮ್ಯ ಲೀಲೆಗಳನ್ನು ಹೇಳುತ್ತಹೋದರೆ ಬಹಳ ವೇಳೆಯು ಹತ್ತುವದಲ್ಲದೆ ಕಥೆಯು ವಿಸ್ತಾರವಾಗುವದು ಆದಕಾರಣ ನಿನಗೆ ಸಾಧಾರಣವಾಗಿ ಸ್ವಲ್ಪ ಹೇಳುವೆನು. ॥ ೪ ॥ ಮುಂದೆ ಅಪೂರ್ವ ಕಥೆಯಾಯಿತು ಕೇಳು.

ವಿದುರಾ ಎಂಬ ನಗರದಲ್ಲಿ ಒಬ್ಬ ಯವನ ರಾಜನಿದ್ದನು. ॥ ೬ ॥ ಆವನು ಅತಿಕ್ರೂರನೂ, ಬ್ರಹ್ಮದ್ವೇಷಿಯೂ, ಸದಾ ಜೀವ ಹಿಂಸೆ ಮಾಡುವಂಥವನೂ ಇದ್ದು ಅವನು— ತನ್ನ ಎದುರಿಗೆ ವೇದಗಳನ್ನೆಲ್ಲ ಅನ್ನಿರೆಂದು

ಬ್ರಾಹ್ಮಣರ ಸಂಗಡ ವಾದಿಸುತ್ತಿದ್ದನು. ॥ ೭ ॥ ಮತ್ತು ಬ್ರಾಹ್ಮಣರನ್ನು ಕರೆದು— ಎಲೈ, ಬ್ರಾಹ್ಮಣರೇ, ವಿದ್ವಾಂಸರಿದ್ದವರು ನಮ್ಮ ಸಭೆಗೆ ಬಂದು ನನ್ನಮುಂದೆ ಸರ್ವ ವೇದಗಳನ್ನು ಅನ್ನಿರಿ. ॥ ೮ ॥ ಅವರಿಗೆ ಬಹು ದ್ರವ್ಯವನ್ನು ಕೊಡುವೆನು ಅವರು ಸರ್ವರಲ್ಲಿಯೂ ಮಾನ್ಯವಂತನಾಗಿ ವೇದಾರ್ಥಗಳನ್ನು ಯಾವನು ಹೇಳುತ್ತಾನೋ ಅವರನ್ನು ನಾನು ಪೂಜಿಸಿ ಅವರಿಗೆ ವಿಶೇಷವಾಗಿ ದಕ್ಷಿಣೆಯನ್ನು ಕೊಡುವೆನು ಎಂದು ಅನ್ನುತ್ತಿದ್ದನು. ॥ ೯ ॥ ಅದನ್ನು ಕೇಳಿ ಜ್ಞಾನೀಜನರು— ನಮಗೆ ವೇದವು ಗೊತ್ತಿಲ್ಲವೆಂದೆನ್ನುತ್ತಿದ್ದರು. ಆದರೆ ಮತಿಹೀನ ಹಾಗು ಜ್ಞಾನಹೀನರಾದ ಬ್ರಾಹ್ಮಣರು ಮಾತ್ರ ದಕ್ಷಿಣೆಯ ಆಶೆಯಿಂದ ॥ ೧೦ ॥ ಅವನ ಮುಂದೆ ಹೋಗಿ ಒಳ್ಳೇ ಸಂಭ್ರಮದಿಂದ ವೇದ ಶಾಸ್ತ್ರಗಳನ್ನು ಹೇಳುತ್ತಿದ್ದರು. ಆ ರಾಜನು ಕಪಟಿಯಾಗಿದ್ದು, ಯಜ್ಞಕಾಂಡದ ಅರ್ಥವನ್ನು ಕೇಳಿ ॥ ೧೧ ॥ ತಮ್ಮ ಜಾತಿಯ ಜನರೆದುರಿಗೆ-- ಬ್ರಾಹ್ಮಣರು ಯಜ್ಞ ಮಾಡುತ್ತೇವೆಂದು ಅನ್ನುತ್ತಾರೆ, ಆದರೆ ಅವರ ಪಶುವಧದ ರೀತಿಯು ಹ್ಯಾಗಿದೆ ನೋಡಿರಿ! ವ್ಹೀಂಥರಾದ ನಮ್ಮನ್ನು ಪಶುಘಾತಕಿಗಳೆಂದು ನಿಂದಿಸುತ್ತಾರೆ. ॥ ೧೨ ॥ ಎಂದು ಬಹುರೀತಿಯಿಂದ ನಿಂದಿಸುತ್ತ ಯೋಗ್ಯತೆಯಿದ್ದ ಬ್ರಾಹ್ಮಣರಿಗೆ ಅಪಾರ ದ್ರವ್ಯವನ್ನು ಕೊಡುತ್ತಿದ್ದನು. ॥ ೧೩ ॥ ಈ ಪ್ರಕಾರ ಅವನು ದ್ರವ್ಯವನ್ನು ಕೊಡುತ್ತಾನೆಂದು ಯಾವತ್ತೂ ದೇಶದ ಬ್ರಾಹ್ಮಣರು ಕೇಳಿದರು ॥ ೧೪ ॥ ಆಗ ವೇದಶಾಸ್ತ್ರಗಳಲ್ಲಿ ನಿಪುಣರಾದ ಕೆಲವು ಬ್ರಾಹ್ಮಣರು ದ್ರವ್ಯದ ಆಶೆಯಿಂದ ಅಲ್ಲಿಗೆ ಬಂದು ಆ ಯವನರಾಜನಿಗೆ ಭೆಟ್ಟಿಯಾಗಿ ಅವನ ಮುಂದೆ ವೇದವನ್ನು ಅನ್ನುತ್ತಿದ್ದರು. ॥ ೧೫ ॥ ಎಲೈ ನಾಮಧಾರಕನೇ, ಈ ಪ್ರಕಾರದ ಮಂದಮತಿ ಜನರು ಯಮುನ ನಗರದಲ್ಲಿ ಇದ್ದಂತೆಯೇ ಸರಿ. ಈ ರೀತಿ ದುರಾಚಾರಿಗಳೂ ಮದೋನ್ಮತ್ತರೂ ಆದ ಜನರೇ ಕಲಿಗೆ ಪ್ರೀತಿಯುಳ್ಳವರಾಗಿದ್ದಾರೆ. ಇರಲಿ. ಮುಂದೆ ಕೇಳು. ॥ ೧೬ ॥

ಹೀಗೆ ಕೆಲವು ಕಾಲ ಕಳೆಯುತ್ತಿರಲು ಒಂದುದಿವಸ ಉತ್ತರದೇಶದ ಮಂದ ಭಾಗ್ಯರಾದ ಇಬ್ಬರು ಬ್ರಾಹ್ಮಣರು ಬಂದು ಆ ರಾಜನಿಗೆ ಭೆಟ್ಟಿಯಾಗಿ ॥ ೧೭ ॥— ಮಹಾರಾಜ, ನಮಗೆ ಮೂರು ವೇದಗಳೂ ಆರು ಶಾಸ್ತ್ರ

ಗಳೂ ಬರುತ್ತವೆ. ಈ ನಾಲ್ಕೂ ರಾಷ್ಟ್ರಗಳಲ್ಲಿ ನಮ್ಮಸಂಗಡ ವೇದದಲ್ಲಿ ವಾದ ಮಾಡಲಿಕ್ಕೆ ನಮ್ಮ ಸಮಾನ ಯೋಗ್ಯತೆಯವರು ಯಾರೂ ಇಲ್ಲ. || ೧೮–೧೯ || ಒಂದುವೇಳೆ ನಿಮ್ಮ ಊರಲ್ಲಿ ಅಂಥ ಜನರು ಯಾರಾದರೂ ಇದ್ದರೆ ಅವರನ್ನು ತೀವ್ರವಾಗಿ ಕರೆಯಿಸು. ಅವರು ನಮ್ಮಸಂಗಡ ನಾಲ್ಕು ವೇದಗಳಲ್ಲಿ ವಾದಮಾಡಲಿ ಎಂದು ತಮ್ಮ ಕೀರ್ತಿಯನ್ನು ತಾವೇ ಹೇಳಹತ್ತಿದರು || ೨೦ || ಆ ವಿಪ್ರರ ಮಾತು ಕೇಳಿ ಆ ರಾಜನು ದುರುಭಿಮಾನದಿಂದ ತನ್ನ ನಗರದಲ್ಲಿರುವ ಯಾವತ್ತೂ ಬ್ರಾಹ್ಮಣರನ್ನು ಕರೆಯಿಸಿ— ಎಲೈ ವಿಪ್ರರೇ, ನೀವು ಈ ಬ್ರಾಹ್ಮಣರ ಸಂಗಡ ವೇದದಲ್ಲಿ ವಾದಮಾಡಿರಿ. ಆ ವೇದದಲ್ಲಿ ಯಾರು ಗೆದೆಯುತ್ತಾರೋ ಅವರಿಗೆ ನಾನು ಅಪಾರ ದ್ರವ್ಯವನ್ನು ಕೊಡುತ್ತೇನೆ ಎಂದನು || ೨೧–೨೨ || ಆ ಮಾತು ಕೇಳಿ ಜ್ಞಾನಿ ಜನರು ಮಹಾರಾಜನೇ, ಈ ಬ್ರಾಹ್ಮಣರನ್ನು ನೋಲಿಸುವಷ್ಟು ಸಾಮರ್ಥ್ಯವು ನಮ್ಮಲ್ಲಿರುವದಿಲ್ಲ. ಈ ಬ್ರಾಹ್ಮಣರನ್ನು ಹ್ಯಾಗೆ ಗೆದಿಯೋಣ. || ೨೩ || ನಮ್ಮ ಬ್ರಾಹ್ಮಣರಲ್ಲಿ ಇವರೇ ಶ್ರೇಷ್ಠರು. ಮತ್ತು ಒಳ್ಳೇ ವಿದ್ವಾಂಸರಿರುವರು. ಇವರನ್ನು ಪ್ರಸಿದ್ಧರನ್ನಾಗಿ ಮಾಡಿ ಇವರಿಗೇ ಬಹುಮಾನವನ್ನು ಕೊಡಬೇಕು. ಎಂದು ಹೇಳಿದರು || ೨೪ || ಅವರ ಮಾತು ಕೇಳಿ ರಾಜನು ವಿಚಿತ್ರತರವಾದ ವಸ್ತ್ರಾಲಂಕಾರಗಳಿಂದ ಆ ಇಬ್ಬರು ಬ್ರಾಹ್ಮಣರನ್ನು ಸನ್ಮಾನಿಸಿ ಅವರನ್ನು ಆನೆಯಮೇಲೆ ಕೂಡ್ರಿಸಿ ನಮ್ಮ ನಗರದಲ್ಲಿ ಈ ಬ್ರಾಹ್ಮಣರಿಗೆ ಸರಿಯಾದವರು ಯಾರೂ ಇಲ್ಲವೆಂದು ಚಾರರಿಂದ ಹೇಳಿಸುತ್ತ ಮೆರವಣಿಗೆ ಮಾಡಿಸಿದನು. || ೨೫–೨೬ || ಎಲೈ ನಾಮಧಾರಕನೇ ಕೇಳು, ಈ ಪ್ರಕಾರ ತಾಮಸಗುಣದವರಾದ ಆ ಬ್ರಾಹ್ಮಣರು ಯವನರಾಜನಿಂದ ಸನ್ಮಾನಿತರಾಗಿ ಅವನ ಮುಂದೆ ವೇದವನ್ನು ಅನ್ನುತ್ತ, ಉಳಿದ ಬ್ರಾಹ್ಮಣರ ನಿಂದೆಯನ್ನು ಮಾಡುತ್ತ ಅವನ ರಾಜ್ಯದಲ್ಲಿ ಅಡ್ಡಾಡುತ್ತಿದ್ದರು. || ೨೭–೨೮ || ಈ ಪ್ರಕಾರ ಕೆಲವು ದಿವಸ ನಡೆಯಲು ಮದಾಂಧರಾದ ಆ ಬ್ರಾಹ್ಮಣರು ಒಂದುದಿವಸ ಆ ರಾಜನನ್ನು ಕುರಿತು ವಿನಯದಿಂದ || ೨೯ ||— ಮಹಾರಾಜನೇ, ನಮ್ಮ ಯೋಗ್ಯತೆಯು ಬಹಳ ಹೆಚ್ಚಿನದದೆ. ನಿನ್ನ ರಾಜ್ಯದಲ್ಲಿ ನಮ್ಮೊಡನೆ ವಾದಮಾಡಲಿಕ್ಕೆ

ಒಬ್ಬನೂ ಸಿಗಲಿಲ್ಲ. ನಾವು ಕಲಿತದ್ದು ವ್ಯರ್ಥವಾಯಿತು. ‖ ೩೦ ‖ ವೇದ ಶಾಸ್ತ್ರದಲ್ಲಿ ವಾದ ಮಾಡಲೇಬೇಕೆಂದು ನಮ್ಮ ಮನಸ್ಸಿನಲ್ಲಿ ಬಹಳ ಅಪೇಕ್ಷೆ ಇದೆ. ನಿಮ್ಮ ದೇಶದಲ್ಲಿ ಸಂಚರಿಸಲಿಕ್ಕೆ ಅಪ್ಪಣೆ ಕೊಡು ವಾದಕ್ಕೆ ಬರುವವರನ್ನು ವಿಚಾರಿಸುವೆವು. ‖ ೩೧ ‖ ಒಬ್ಬನಾದರೂ ವಾದಕ್ಕೆ ಸಿಕ್ಕರೆ ಅವನಸಂಗಡ ವಾದ ಮಾಡುವೆವು. ಯಾರೂ ಸಿಗದಿದ್ದರೆ ಅಲ್ಲಿಯ ಬ್ರಾಹ್ಮಣರಕಡೆಯಿಂದ ಜಯಪತ್ರವನ್ನು ಬರೆಯಿಸಿಕೊಂಡು ಹೋಗುವೆವು ಎಂದರು ‖ ೩೨ ‖ ಆಗ ರಾಜನು, ವಿಪ್ರರೇ, ನೀವು ನಮ್ಮ ದೇಶದಲ್ಲಿ ತೀವ್ರವಾಗಿ ಸಂಚರಿಸಿ ಎಲ್ಲ ಬ್ರಾಹ್ಮಣರನ್ನು ಜಯಸಿರಿ. ಎಂದು ಅವರಿಗೆ ಅಪ್ಪಣೆ ಕೊಟ್ಟನು. ‖ ೩೩ ‖ ಆ ಯವನರಾಜನ ಅಪ್ಪಣೆಯಂತೆ ಆ ಮದೋನ್ಮತ್ತ ಬ್ರಾಹ್ಮಣರು, ಅಲ್ಲಿಂದ ಹೊರಟು ಆ ರಾಜ್ಯದಲ್ಲಿ ಅಡ್ಡಾಡುತ್ತ ಪ್ರತಿಯೊಂದು ಗ್ರಾಮದಲ್ಲಿ ತಮ್ಮಸಂಗಡ ವಾದಕ್ಕೆ ಬರುವವರನ್ನು ವಿಚಾರಿಸುತ್ತ ಯಾರೂ ಸಿಗದಿದ್ದರೆ ಅಲ್ಲಿಯ ಬ್ರಾಹ್ಮಣರಕಡೆಯಿಂದ ಜಯಪತ್ರವನ್ನು ಬರಿಸಿಕೊಳ್ಳುತ್ತ ತಿರಗಾಡುತ್ತಿದ್ದರು. ಇವರಮುಂದೆ ವಾದಕ್ಕೆ ಬಂದು ನಿಲ್ಲುವ ಶಕ್ತಿಯು ಯಾರಿಗೆ ಬರಬೇಕು ? ಯಾರೂ ಬರಲಿಲ್ಲ. ‖ ೩೪-೩೫ ‖ ಈ ಪ್ರಕಾರ ಅವರು ಸಮಸ್ತ ನಗರಗಳಲ್ಲಿ ತಿರಗುತ್ತ ದಕ್ಷಿಣ ದಿಕ್ಕಿನಲ್ಲಿ ಪ್ರಖ್ಯಾತವಾದ ಭೀಮಾನದಿಯ ದಂಡೆಯಲ್ಲಿರುವ ಉತ್ತಮವಾದ " ಕುಮಶಿ " ಗ್ರಾಮಕ್ಕೆ ಬಂದರು. ‖ ೩೬ ‖ ಅಲ್ಲಿ ತಮ್ಮಸಂಗಡ ವಾದಕ್ಕೆ ಬರುವವರನ್ನು ವಿಚಾರಿಸಲು ಆಗ ಆ ಊರ ಬ್ರಾಹ್ಮಣರು— ಎಲೈ ಬ್ರಾಹ್ಮಣರೇ ಇಲ್ಲಿ ತ್ರಿವಿಕ್ರಮ ಭಾರತಿಗಳೆಂಬ ಯತಿಗಳೊಬ್ಬರು ಇರುವರು ಅವರಿಗೆ ಮೂರು ವೇದಗಳು ಬರುತ್ತವೆ. ಅವರು ಅನೇಕ ಶಾಸ್ತ್ರಗಳನ್ನು ಬಲ್ಲವರಾಗಿರುವರು. ಆ ಮಹಾ ಮುನಿಗಳು ಬಹಳ ಕೀರ್ತಿವಂತರಾಗಿರುವರು ಎಂದು ಅಂದರು. ಅದನ್ನು ಕೇಳಿ ಆ ಮದೋನ್ಮತ್ತ ಬ್ರಾಹ್ಮಣರು ಆ ತ್ರಿವಿಕ್ರಮ ಭಾರತಿ ಮುನಿಯು ಹತ್ತರ ಬಂದು. ‖ ೩೭-೩೮ ‖ ಎಲೈ ತ್ರಿವಿಕ್ರಮಯತಿಗಳೇ, ನಿಮಗೆ ಮೂರು ವೇದಗಳು ಬರುತ್ತವೆಂದು ಅನ್ನುತ್ತಾರೆ. ನಮಗೂ ಸಕಲ ವೇದಗಳು ಬರುತ್ತವೆ. ಈಗ ನೀವು ನಮ್ಮಸಂಗಡ ವಾದಮಾಡಬೇಕು. ಇಲ್ಲವೆ ಜಯಪತ್ರವನ್ನು ಕೊಡಬೇಕು ಎಂದು ಅಂದರು. ‖ ೩೯ ‖.

ಆವರ ಮಾತು ಕೇಳಿ ತ್ರಿವಿಕ್ರಮ ಮುನಿಯು— ಅಯ್ಯಾ ವಿಪ್ರರೇ, ನನಗೆ ಮೂರು ವೇದಗಳಂತೂ ಬರುವದಿಲ್ಲ. ಒಂದು ವೇದವಾದರೂ ಬರುವದಿಲ್ಲ. ॥ ೪೦ ॥ ಒಂದು ವೇಳೆ ನನಗೆ ವೇದ ಶಾಸ್ತ್ರಗಳು ಬರುತ್ತಿದ್ದರೆ ನಾನು ಅರಣ್ಯದಲ್ಲಿ ಯಾಕೆ ಇರುತ್ತಿದ್ದೆ ? ಎಲ್ಲ ರಾಜರೂ ನನಗೆ ವಂದಿಸುತ್ತಿದ್ದರು. ನಿಮ್ಮ ಹಾಗೆ ನಾನು ವೇದ ಶಾಸ್ತ್ರಗಳನ್ನು ಬಲ್ಲವನಾಗಿದ್ದರೆ ನನಗೆ ಎಲ್ಲ ಕಡೆಯಲ್ಲಿ ಎಲ್ಲರೂ ನಮಸ್ಕರಿಸುತ್ತಿದ್ದರು ನಿಮ್ಮಂತೆ ನಾನೂ ಸುಖ ವನ್ನು ಹೊಂದುತ್ತಿದ್ದೆನು. ॥ ೪೧ ॥ ನನಗೆ ಏನೂ ಬರುವದಿಲ್ಲವೆಂದು ತಿಳಿದು ನಾನು ಅರಣ್ಯವಾಸಿಯಾಗಿ ಸಂನ್ಯಾಸವನ್ನು ತಕ್ಕೊಂಡು ಈಗ ನಾನು ತಪಸ್ವಿಯೂ ಭಿಕ್ಷುಕನೂ ಆಗಿದ್ದೇನೆ ನಾನು ನಿಮ್ಮ ಸಮಾನ ಅಲ್ಲ ವೆಂದು ತಿಳಿಯಿರಿ. ॥ ೪೨ ॥ ನನಗೆ ವೇದಗಳು ಬರುತ್ತವೆಂಬ ಅಭಿಮಾನದಿಂದ ನಾನು ಯಾರನ್ನೂ ಸೋಲಿಸಿಲ್ಲ. ಜಯಪತ್ರವನ್ನೂ ಹೊಂದಿಲ್ಲ. ನೀವು ಉತ್ಕೃಷ್ಟ ವಿದ್ವಾಂಸರಿರುತ್ತೀರಿ ನನ್ನ ಸಂಗಡ ನಿಮಗೆ ಯಾಕೆ ಬೇಕು ? ಎಂದು ಅಂದರು. ॥ ೪೩ ॥ ಈ ಪ್ರಕಾರ ಆ ಮುನಿಯ ಮಾತು ಕೇಳಿ ಆ ಮದ ವಿಪ್ರರು ಸಿಟ್ಟಿಗೆ ಬಂದು— ಯತಿವರ್ಯರೇ, ನಮ್ಮ ಸಂಗಡ ವಾದ ಮಾಡುವಂಥವರು ಈ ತ್ರಿಭುವನದಲ್ಲಿ ಯಾರೂ ಇಲ್ಲ. ॥ ೪೪ ॥ ನಾವು ಎಷ್ಟೋ ದೇಶಗಳನ್ನು ತಿರುಗಾಡಿ ಬಂದೆವು. ನಮ್ಮ ಸಮಾನ ಮನುಷ್ಯರಿಲ್ಲವೆಂದು ಅಸಂಖ್ಯ ಮನುಷ್ಯರು ಜಯಪತ್ರಗಳನ್ನು ಕೊಟ್ಟಿರುವರು ನೋಡಿರಿ. ॥ ೪೫ ॥ ಎಂದು ಆ ಜಯಪತ್ರಗಳನ್ನು ತೋರಿಸಿ— ಎಲೈ, ತ್ರಿವಿಕ್ರಮ ಯತಿಗಳೇ ಅದರಂತೆ ನೀವಾದರೂ ನಮಗೆ ಜಯಪತ್ರವನ್ನು ಕೊಡಿರಿ, ಇಲ್ಲವೆ ನಿಮ್ಮ ಮನಸ್ಸಿನಲ್ಲಿ ಅಭಿಮಾನವಿದ್ದರೆ ನಮ್ಮ ಸಂಗಡ ವಾದವನ್ನು ಮಾಡಿರಿ ಎಂದರು. ॥ ೪೬ ॥ ಆಮೇಲೆ ಆ ತ್ರಿವಿಕ್ರಮ ಮುನಿಯು ಆ ಬ್ರಾಹ್ಮಣರಿಗೆ ಅನೇಕ ರೀತಿಯಿಂದ ತಿಳಿಸಿ ಹೇಳಿದರೂ ಮಹಾದ್ವೇಷಿಯಾದ ಆ ದ್ವಿಜರು ಕೇಳದೇ ಜಯಪತ್ರ ವನ್ನು ಕೊಡಬೇಕೆಂದು ಪೀಡಿಸಿದರು. ॥ ೪೭ ॥ ಆಗ ಆ ತ್ರಿವಿಕ್ರಮ ಮುನಿಯು ಮನಸ್ಸಿನಲ್ಲಿ— ಈ ವಿಪ್ರರನ್ನು ಗಾಣಗಾಪುರಕ್ಕೆ ಕರಕೊಂಡು ಹೋಗಿ ಅಲ್ಲಿ ಇವರಿಗೆ ತಕ್ಕ ಶಿಕ್ಷೆಯನ್ನು ಮಾಡಿಸಬೇಕು. ॥ ೪೮ ॥ ಇವರು ಮಧಾಂದರಾಗಿ ಅನೇಕ ಬ್ರಾಹ್ಮಣರನ್ನು ಧಿಕ್ಕರಿಸುತ್ತಾರೆ. ಕಾರಣ ಇವರಿಗೆ ಶಿಕ್ಷೆಯಾಗುವದೇ ತಕ್ಕ ಉಪಾಯವು

ಎಂದು ಅಂದುಕೊಂಡು || ೪೯ || ಬಹಿರಂಗವಾಗಿ ಆ ವಿಪ್ರರನ್ನು ಕುರಿತು— ಎಲೈ ವಿಪ್ರರೇ, ನೀವು ಗಾಣಗಾಪುರಕ್ಕೆ ನಡೆಯಿರಿ. ಅಲ್ಲಿ ನಿಮಗೆ ಜಯಪತ್ರವನ್ನು ವಿಸ್ತಾರವಾಗಿ ಕೊಡುವೆನು. || ೫೦ || ಅಲ್ಲಿ ನಮ್ಮ ಗುರುಗಳಿರುವರು. ಅಲ್ಲಿ ಅವರೆದುರಿಗೆ ನಿಮಗೆ ನಿಶ್ಚಯವಾಗಿ ಜಯಪತ್ರವನ್ನು ಕೊಡುವೆನು ಅಥವಾ ಅವರಿಂದ ವಾದ ಮಾಡಿಸಿ ನಿಮ್ಮ ಮನಸ್ಸಿನ ಇಚ್ಛೆಯನ್ನು ಪೂರ್ಣ ಮಾಡಿ (ಒಜ್ಜೆಯನ್ನು ಕಳೆದು) ನಿಮ್ಮ ಮನಸ್ಸಿಗೆ ಶಾಂತಿಯನ್ನುಂಟು ಮಾಡುವೆನು ಎಂದು || ೫೧ || ಯುಕ್ತಿಯನ್ನು ಮಾಡಿ ಆ ತ್ರಿವಿಕ್ರಮ ಮುನಿಯು ಮುಂದೆ ಹೊರಟನು. ಎಲೈ ನಾಮಧಾರಕಾ, ಅಜ್ಞಾನಿಗಳೂ ಮೂಢರೂ ಆದ ಆ ವಿಪ್ರರು ತಾವು ಮಾತ್ರ ಪಾಲಿಕೆಯಲ್ಲಿ ಕೂತು ತಮ್ಮ ಮುಂದೆ ಯತಿಗಳನ್ನು ನಡೆಯಲಿಕ್ಕೆ ಹಚ್ಚಿದರು. ಅದರಿಂದ ಅವರು ಕೂಡಲೇ ಅಲ್ಪಾಯುಷಿಗಳಾದರು. || ೫೨-೫೩ || ಹೀಗೆ ತ್ರಿವಿಕ್ರಮ ಯತಿಗಳು ನಡೆಯುತ್ತ ಶ್ರೀಗುರು ನರಸಿಂಹಸರಸ್ವತಿಗಳ ಸ್ಥಾನವಾದಂಥ ಭೀಮಾತೀರದಲ್ಲಿರುವ ರಮ್ಯವಾದ ಗಾಣಗಾಪುರಕ್ಕೆ ಬಂದರು || ೫೪ || ಆಮೇಲೆ ಶ್ರೀ ಗುರುಗಳಿಗೆ ಭಕ್ತಿಯಿಂದಲೂ ವಿನಯದಿಂದಲೂ ವಂದಿಸಿ— ಸ್ವಾಮೀ, ಕೃಪಾಮೂರ್ತಿಯೇ, ವ್ಯೋಮಕೇಶನೇ ಭಕ್ತವತ್ಸಲನೇ ಪರಮ ಪುರುಷನೇ || ೫೫ || ಜಯ ಜಯ ಜಗದ್ಗುರುವೇ, ನಿರ್ಗುಣನೇ, ನಿರ್ವಿಕಾರನೇ, ತ್ರೈಮೂರ್ತಿಸ್ವರೂಪನೇ, ಅನಾಥ ರಕ್ಷಕನೇ || ೫೬ || ನಿಮ್ಮ ಚರಣದರ್ಶನ ಮಾತ್ರದಿಂದ ನಾವು ಈ ಸಂಸಾರಸಾಗರದಿಂದ ಮುಕ್ತರಾಗುವೆವು. ಮೂಢರಾದ ಅಜ್ಞಾನಿ ಜನರು ಇದನ್ನು ತಿಳಿಯದೆ ಅಧೋಗತಿಗೆ ಹೋಗುವರು. || ೫೭ || ಎಂದು ಸದ್ಗದಿತ ಕಂಠರಾಗಿಯೂ ರೋಮಾಂಚನವುಳ್ಳವರಾಗಿಯೂ ಆನಂದಭಾಷ್ಪಗಳುಳ್ಳವರಾಗಿಯೂ ಗುರುಚರಣಗಳಲ್ಲಿ ಮಸ್ತಕವನ್ನಿಟ್ಟರು. || ೫೫-೫೬-೫೭-೫೮ || ಆಗ ಶ್ರೀಗುರುಗಳು ತ್ರಿವಿಕ್ರಮ ಮುನಿಯನ್ನು ಎಬ್ಬಿಸಿ, ಸಂತೈಸಿ, ಆಲಿಂಗಿಸಿ ಅಂತಃಕರಣದ ಮಾತಿನಿಂದ— || ೫೯ || ಎಲೈ ತ್ರಿವಿಕ್ರಮ ಮುನಿಯೇ, ನೀನು ಯಾವದೋ ಒಂದು ಕಾರ್ಯದ ಸಲುವಾಗಿ ಬಂದಿರುತ್ತೀ. ಅದನ್ನು ನನಗೆ ವಿಸ್ತರವಾಗಿ ಹೇಳೆಂದರು. || ೫೯-೬೦ ||

ಶ್ರೀ ಗುರುಗಳ ಮಾತು ಕೇಳಿ ತ್ರಿವಿಕ್ರಮ ಮುನಿಯು— ಸ್ವಾಮೀ, ಮದೋನ್ಮತ್ತರಾದ ಇಬ್ಬರು ಬ್ರಾಹ್ಮಣರು ವೇದವಾದಕ್ಕಾಗಿ ಬಂದಿರುವರು ‖ ೬೧ ‖ ಅವರು ನನಗೆ ವೇದಶಾಸ್ತ್ರಗಳಲ್ಲಿ ಹರ್ಷದಿಂದ ಚರ್ಚೆ ಮಾಡಿರಿ. ನಾಲ್ಕು ವೇದಗಳು ತಮ್ಮ ನಾಲಿಗೆಯಮೇಲೆ ಇವೆ ಎಂದು ಆ ಮೂರ್ಖ ಬ್ರಾಹ್ಮಣರು ಅನ್ನುತ್ತಾರೆ ‖೬೨‖ ಮತ್ತು ಒಂದುವೇಳೆ ವಾದ ಮಾಡದಿದ್ದರೆ ಜಯಪತ್ರ ಕೊಡಿರಿ ಎಂದು ಕೇಳುತ್ತಾರೆ. ಅವರಿಗೆ ನಾನು ಅನೇಕ ರೀತಿಯಿಂದ ಹೇಳಿದರೂ ಆ ಉನ್ಮತ್ತರು ಕೇಳಲೊಲ್ಲರು. ‖ ೬೩ ‖ ಆದಕ್ಕಾಗಿ ಅವರನ್ನು ತಮ್ಮ ಹತ್ತರ ಕರಕೊಂಡು ಬಂದೆನು. ಗುರುಶ್ರೇಷ್ಠರಾದ ತಮ್ಮ ಮಾತು ನನಗೆ ಮಾನ್ಯವದೆ. ನಾನು ತಾವು ಹೇಳಿದಂತೆ ಕೇಳುವೆನು. ಮುಂದೇನು ಮಾಡಬೇಕೆಂಬದನ್ನು ಹೇಳಬೇಕೆಂದು ಬೇಡಿಕೊಂಡನು. ‖ ೬೪ ‖

ಆ ಮುನಿಯ ಮಾತುಕೇಳಿ ಶ್ರೀ ಗುರುಗಳು ಮಂದಹಾಸದಿಂದ ನಕ್ಕು— ಎಲೈ ತ್ರಿವಿಕ್ರಮ ಮುನಿಯೇ, ಆ ಇಬ್ಬರು ಬ್ರಾಹ್ಮಣರನ್ನು ಕರೆ, ಅವರ ವೃತ್ತಾಂತವನ್ನು ಕೇಳುವೆನು ಅಂದರು. ‖ ೬೫ ‖ ಆಗ ತ್ರಿವಿಕ್ರಮ ಯತಿಯು ಕರೆಯಲು ಆ ಬ್ರಾಹ್ಮಣರು ಬಂದರು. ಆಗ ಗುರುಗಳು ಅವರನ್ನು ಕುರಿತು— ಎಲೈ, ವಿಪ್ರರೇ, ನೀವು ಯಾವ ಕಾರ್ಯಕ್ಕೆ ಬಂದಿರುವಿರಿ ? ನಮ್ಮ ಸಂಗಡ ವಾದನೇಕೆ ? ಈ ವಾದದಿಂದ ನಿಮಗೆ ಆಗತಕ್ಕ ಲಾಭ ವೇನು ? ‖ ೬೬ ‖ ನಾವು ತಪಸ್ವಿಗಳಾದ ಯತಿಗಳು. ನಿಮಗೆ ಜಯಪತ್ರನೇಕೆ ? ಯತಿಗಳನ್ನು ಜಯಿಸಿದರೆ ನಿಮಗೆ ಬರುವ ದೊಡ್ಡಿಸ್ತನವೇನು ? ಎಂದು ಕೇಳಿದರು. ‖ ೬೭ ‖ ಆಗ ಆ ಇಬ್ಬರು ಬ್ರಾಹ್ಮಣರು— ಸ್ವಾಮೀ ನಾವು ಪೃಥ್ವಿಯನ್ನೆಲ್ಲ ಸಂಚರಿಸಿ, ಯಾವತ್ತೂ ಬ್ರಾಹ್ಮಣರನ್ನು ಜಯಿಸಿ ಬಂದೆವು ‖ ೬೮ ‖ ವೇದ ಶಾಸ್ತ್ರಗಳಲ್ಲಿ ನಮ್ಮ ಸಂಗಡ ವಾದ ಮಾಡಲಿಕ್ಕಾಗದೆ ಇದ್ದದ್ದರಿಂದ, ಯಾರೂ ನಮ್ಮ ಎದುರಿಗೆ ಬರಲಿಲ್ಲ. ಎಂದು ತಮಗೆ ಸಿಕ್ಕ ಅನೇಕ ಜಯಪತ್ರಗಳೆಲ್ಲವನ್ನೂ ತೋರಿಸಿ ‖ ೬೯ ‖ —ಸ್ವಾಮೀ, ನಾವು ಈ ತ್ರಿವಿಕ್ರಮ ಯತಿಗಳನ್ನು ಕುರಿತು— ವಾದಕ್ಕಾದರೂ ಬರ್ರಿ, ಜಯಪತ್ರವನ್ನಾದರೂ ಕೊಡಿರಿ ಎಂದು ಕೇಳಲು ಇವರು ಸಿಟ್ಟಿಗೆ ಬಂದು

ನಮ್ಮನ್ನು ತಮ್ಮ ಹತ್ತರ ಕರಕೊಂಡು ಬಂದರು. ‖ ೨೦ ‖ ಒಂದು ವೇಳೆ ನಿಮಗೂ ಅಭಿಮಾನವಿದ್ದರೆ ನೀವಿಬ್ಬರೂ ವೇದ, ಶಾಸ್ತ್ರ-ವ್ಯಾಕರಣಗಳಲ್ಲಿ ನಮ್ಮ ಸಂಗಡ ವಾದ ಮಾಡಿರಿ ‖ ೨೧ ‖ ನಮಗೆ ನಾಲ್ಕು ವೇದಗಳು ಬರುತ್ತವೆ. ನಮ್ಮ ಸಮಾನ ಯಾರೂ ಇಲ್ಲ. ನೀವಿಬ್ಬರು ಯತೀಶ್ವರರು ಯಾವ ವೇದಶಾಸ್ತ್ರಗಳನ್ನು ತಿಳಿದಿರುವಿರಿ ? ಎಂದು ಕೇಳಿದರು ‖ ೨೨ ‖

ಆಗ ಶ್ರೀ ಗುರುಗಳು— ಎಲೈ ವಿಪ್ರರೇ, ಸಮಸ್ತರಿಗೆ ಗರ್ವವೇ ನಾಶಕರವಾಗಿರುವದು ಗರ್ವದಿಂದ ದೇವದಾನವರೆಲ್ಲರೂ ನಾಶವನ್ನೂ ಮೃತ್ಯುವನ್ನೂ ಹೊಂದಿದರು ‖ ೨೩ ‖ ಗರ್ವದಿಂದ ಬಲಿಯು ಏನಾದನು ? ಗೊತ್ತಿದೆಯೋ ? ಗರ್ವದಿಂದ ಬಾಣಾಸುರನಿಗೆ ಏನಾಯಿತು ? ಗರ್ವದಿಂದ ರಾವಣನೂ ಕೌರವರೂ ಯಮನಾಲಯಕ್ಕೆ ಹೋದರು ‖ ೨೪ ‖ ವೇದಗಳ ಅಂತವನ್ನು ತಿಳಿದವರಾರು ? ಬ್ರಹ್ಮನೇ ಮೊದಲಾದವರಿಗೆ ಸಹ ಆ ವೇದದ ಅಂತ ತಿಳಿಯಲಿಲ್ಲ. ವೇದಗಳು ಅನಂತವಾಗಿರುತ್ತವೆ ಅಂದಮೇಲೆ ನೀವು ಸುಮ್ಮನೆ ಗರ್ವಪಡುತ್ತೀರಿ ‖ ೨೫ ‖ ನಿಮ್ಮ ಗರ್ವವು ವ್ಯರ್ಥವಾದದು ನೀವು ನಾಲ್ಕು ವೇದಗಳನ್ನು ಬಲ್ಲೆವೆಂದೆನ್ನುತ್ತೀರಿ. ನೀವು ವೇದದ ಅಂತವನ್ನು ಏನು ತಿಳಿದಿರುವಿರಿ ? ಹೇಳಿರಿ ನೀವು ಈಗ ಗರ್ವಭ್ರಾಂತಿಯನ್ನು ಬಿಟ್ಟು ನಿಮ್ಮ ಹಿತವನ್ನು ವಿಚಾರಿಸಿರಿ ಎಂದರು. ‖ ೨೬ ‖

ಈ ಪ್ರಕಾರದ ಗುರುಗಳ ಮಾತು ಕೇಳಿ ಒಳ್ಳೇ ಗರ್ವಯುಕ್ತರಾದ ಆ ಬ್ರಾಹ್ಮಣರು ಸ್ವಾಮೀ ನಾವು ಮೂರು ವೇದಗಳನ್ನು ಬಲ್ಲೆವು. ಸಂಹಿತಾ ಹೇಳುತ್ತೇವೆ ಕೇಳಿರಿ ಎಂದರು. ‖ ೨೭ ‖

ಎಲೈ ನಾಮಧಾರಕನೇ ಆ ಬ್ರಾಹ್ಮಣರು ಈ ಪ್ರಕಾರವಾಗಿ ಅನ್ನಲು ಮುಂದೆ ಅಪೂರ್ವ ಸಂಗತಿಯಾಯಿತು. ‖ ೨೮ ‖ ಶ್ರೀ ಗುರುಗಳು ಆ ಬ್ರಾಹ್ಮಣರಿಗೆ ನಾಲ್ಕು ವೇದಗಳ ಆದ್ಯಂತಗಳನ್ನು ಹೇಳಿದರು. ಅದನ್ನು

ನಿನಗೆ ಹೇಳುವೆನು ಏಕಚಿತ್ತದಿಂದ ಕೇಳು ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಶ್ರೋತೃಗಳಿಗೆ ಹೇಳಿದನು. || ೭೯ || ಗುರುಚರಿತ್ರಾಮೃತದ ಈ ಅಧ್ಯಾಯದಲ್ಲಿ ಮದೋನ್ಮತ್ತ ವಿಪ್ರರು ತ್ರಿವಿಕ್ರಮ ಯತಿಗೆ ಜಯಪತ್ರವನ್ನು ಕೇಳಿದ ಸಂಗತಿಯು ಇದೆ. || ೮೦ ||

ಇತಿ ಶ್ರೀ ಗುರುಚರಿತ್ರ ಪರಮಕಥಾ ಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ, ವಿಪ್ರ ಆತ್ಮ ಪ್ರಶಂಸಾನಾಮ ಪಂಚವಿಂಶೋಽಧ್ಯಾಯಃ || ೨೫ || ಶ್ರೀ ಗುರು ದತ್ತಾತ್ರೇಯಾರ್ಪಣ ಮಸ್ತು ||

— ೨೫ನೇ ಅಧ್ಯಾಯ ಸಮಾಪ್ತ —



ದಿಗಂಬರಾ ದಿಗಂಬರಾ

ಶ್ರೀಪಾದ ವಲ್ಲಭ ದಿಗಂಬರಾ

# ೨೬ನೇಯ ಅಧ್ಯಾಯ

## — ವೇದ ವಿಸ್ತಾರ ಕಥನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕನೇ ಕೇಳು. ಬಳಿಕ ಶ್ರೀ ಗುರುಗಳು ಆ ಮದೋನ್ಮತ್ತ ವಿಪ್ರರನ್ನು ಕುರಿತು ಹೇಳುತ್ತಾರೆ— ಎಲೈ ವಿಪ್ರರೇ, ವೇದಗಳನ್ನು ಬಲ್ಲೆವೆಂಬದರಲ್ಲಿ ನಿಮಗೆ ಭ್ರಾಂತಿಯ್ಯಾಕೆ? ವೇದದ ಅಂತವನ್ನು ಬ್ರಹ್ಮನುಸಹ ಪೂರ್ಣವಾಗಿ ತಿಳಿದಿಲ್ಲ. ವೇದಗಳು ಅನಂತವಾಗಿರುವವು. ॥ ೧ ॥ ಶ್ರೀ ನಾರಾಯಣನ ಅವತಾರವಾದ ಮತ್ತು ಮಹಾತ್ಮರಾದ ವೇದವ್ಯಾಸರು ವೇದಗಳನ್ನು ವ್ಯಸ್ತಮಾಡಿ ವೇದವ್ಯಾಸರೆಂಬ ಹೆಸರನ್ನು ಪಡೆದರು. ॥ ೨ ॥ ಆದರೆ ಅವರೂ ಪೂರ್ಣವಾಗಿ ವೇದಗಳನ್ನು ಹೇಳಲಿಲ್ಲ ಸಾಧಾರಣವಾಗಿ ಹೇಳಿದ್ದಾರೆ ಅವರಲ್ಲಿ ವೇದಾಭ್ಯಾಸ ಮಾಡಲಿಕ್ಕೆ ಪೈಲ, ವೈಶಂಪಾಯನ, ಜೈಮಿನಿ, ಸುಮಂತ ಎಂಬ ನಾಲ್ಕುಮಂದಿ ಶಿಷ್ಯರಿದ್ದರು. ಆಗ ವ್ಯಾಸರು ಅವರನ್ನು ಕುರಿತು— ಎಲೈ ಶಿಷ್ಯರೇ, ನಿಮಗೆ ಸರ್ವ ವೇದಗಳನ್ನು ಕಲಿಸುವದು ಅಶಕ್ಯವು. ॥ ೩-೪-೫ ॥ ಒಂದು ವೇದವನ್ನು ಕಲಿಯಬೇಕಾದರೆ ಒಂದು ಕಲ್ಪಕಾಲ ಬೇಕು ಅಂದಮೇಲೆ ನಾಲ್ಕೂ ವೇದಗಳನ್ನು ಕಲಿಯುವದು ಹ್ಯಾಗೆ? ವೇದಗಳ ಮಹಿಮೆಯೂ ಅನಂತವಾಗಿದೆ ॥ ೬ ॥ ನಿಮಗೆ ಆ ವೇದಗಳ ಆದ್ಯಂತ ಲಕ್ಷಣಗಳನ್ನು ಹೇಳುವೆನು ಏಕಚಿತ್ತದಿಂದ ಕೇಳಿರಿ. ಪೂರ್ವದಲ್ಲಿ ಪ್ರಸಿದ್ಧನಾದ ಭಾರದ್ವಾಜಮುನಿಯು ವೇದಾಭ್ಯಾಸ ಮಾಡುತ್ತಿದ್ದನು. ॥ ೭ ॥ ಆತನು ಮೂರು ಬ್ರಹ್ಮಕಲ್ಪದಿಂದಲೂ ಬ್ರಹ್ಮಚರ್ಯದಿಂದ ಎಲ್ಲ ವೇದ ಕಲಿಯಬೇಕೆಂದು ಪ್ರಯತ್ನ ಮಾಡಿದನು. ॥ ೮ ॥ ಆದರೂ ಅವನಿಗೆ ವೇದದ ಲವಾಂಶ ಮಾತ್ರ ತಿಳಿಯಿತು. ಆಗ ಅವನು ಪುನಃ ಕಲಿಯಬೇಕೆಂದು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಆ ಬ್ರಹ್ಮನು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷ

ವಾಗಿ ಬಂದು— ಎಲೈ ಭಾರದ್ವಾಜನೇ ನಿನಗೇನು ಬೇಕು ? ಎಂದು ಕೇಳಿದನು. ‖ ೯ ‖ ಆಗ ಭಾರದ್ವಾಜನು— ಸ್ವಾಮೀ, ಬ್ರಹ್ಮದೇವನೇ, ನೀನು ನನಗೆ ಪ್ರಸನ್ನನಾಗಿದ್ದರೆ, ನಾನು ಬ್ರಹ್ಮಚರ್ಯಾಶ್ರಮದಲ್ಲಿದ್ದು, ಸಾದ್ಯಂತವಾಗಿ ವೇದವನ್ನು ಕಲಿಯಬೇಕೆಂದಿರುವೆನು ‖ ೧೦ ‖ ನನಗೆ ಆ ವೇದಾಂತವನ್ನು ಮಾತ್ರ ಹೇಳಿ ಕಲಿಸಿರಿ, ಆ ಸರ್ವ ವೇದಾಂತವು ನನಗೆ ಬರುವಂತೆ ವರವನ್ನು ಕೊಡಿರಿ ಎಂದು ಅವನ ಚರಣಕ್ಕೆ ವಂದಿಸಿದನು ‖ ೧೧ ‖ ಆಗ ಬ್ರಹ್ಮನು— ಎಲೈ ಭಾರದ್ವಾಜನೇ, ವೇದಗಳಿಗೆ ಮಿತಿಯಿಲ್ಲ ಅವು ನನಗೂ ಅಗೋಚರವಾಗಿವೆ, ಎಲ್ಲವನ್ನೂ ಹ್ಯಾಗೆ ಕಲಿಸಲಿ ? ‖ ೧೨ ‖ ನಿನಗೆ ಎಲ್ಲದರಲ್ಲಿ ಸ್ವಲ್ಪ ಸ್ವಲ್ಪ ಕಲಿಸುವೆನು. ನೀನು ನಿರ್ಮಲ ಮನಸ್ಸಿನಿಂದ ಯಾವಾಗಲೂ ಕಲಿಯಲಿಕ್ಕೆ ಶಕ್ತನಾಗಿದ್ದು ಅಭ್ಯಾಸಮಾಡು ‖ ೧೩ ‖ ಎಂದು ಹೇಳಿ ಅವನಿಗೆ ವೇದಗಳನ್ನು ತೋರಿಸಿದನು ಅವು ಮೂರು ಪರ್ವತಗಳಾಗಿ ತೋರಿದವು. ‖ ೧೪ ‖ ಕೋಟಿ ಸೂರ್ಯಪ್ರಕಾಶ ಮಾನವಾದ ಮತ್ತು ಪರ್ವತ ಪ್ರಾಯವಾದ ಆ ವೇದರಾಸಿಗಳನ್ನು ನೋಡಿ, ಆ ಭಾರದ್ವಾಜನು ಹೆದರಿ— ಸ್ವಾಮೀ, ನಾನು ಇವುಗಳನ್ನು ಹ್ಯಾಗೆ ಕಲಿಯಲಿ ? ‖ ೧೫ ‖ ನಾನು ಇವುಗಳನ್ನು ಮೂರು ಬ್ರಹ್ಮಕಲ್ಪದವರೆಗೆ ನಾಲ್ಕು ಆಶ್ರಮ ಗಳನ್ನು ಹೊಂದಿ ಸ್ವಲ್ಪ ಸ್ವಲ್ಪ ಭಾಗಗಳನ್ನು ಮಾತ್ರ ಕಲಿಯುವೆನು. ಆದರೆ ಈ ಪರ್ವತ ಪ್ರಾಯವಾದ ವೇದ ಗಳನ್ನು ಹ್ಯಾಗೆ ಕಲಿಯಲಿ ? ‖ ೧೬ ‖ ಎಂದು ಭಯದಿಂದ ಬ್ರಹ್ಮನ ಪಾದಕ್ಕೆ ನಮಸ್ಕಾರ ಮಾಡಿ— ಸ್ವಾಮೀ, ಬ್ರಹ್ಮದೇವನೇ, ಇಷ್ಟು ಕಲಿಯಲಿಕ್ಕೆ ನನಗೆ ಶಕ್ಯವಿಲ್ಲ ಕ್ಷಮಿಸಿರಿ ‖ ೧೭ ‖ ಶರಣಾಗತ ವತ್ಸಲನೇ, ಅಪಾರ ವಾದ ವೇದಗಳನ್ನು ಕಲಿಯಬೇಕೆಂಬ ಇಚ್ಛೆಯಿಂದ ನಿಮ್ಮ ಹತ್ತಿರ ಬಂದೆನು ಆದರೆ ಆ ವೇದಗಳ ಆದ್ಯಂತ ಗಳನ್ನು ಮಾತ್ರ ಕಲಿಯುವದು ನನಗೆ ಶಕ್ಯವಿಲ್ಲ ಆದರೆ ಜಗನ್ನಾಥನಾದ ನೀನು ಹೇಳಿದಷ್ಟು ಮಾತ್ರ ಕಲಿಯು ವೆನು. ಈ ಅಪಾರ ವೇದಗಳನ್ನು ನೋಡಿ ನನಗೆ ಅಂಜಿಕೆಯಾಗಿದೆ ಎಂದನು ‖ ೧೮-೧೯-೨೦ ‖ ಆಗ ಬ್ರಹ್ಮನು ಸಂತೋಷದಿಂದ ಅವನಿಗೆ ಕಲಿಯಲಿಕ್ಕೆ ಮೂರು ಮುಷ್ಟಿ ವೇದಗಳನ್ನು ಕೊಟ್ಟನು. ‖ ೨೧ ‖ ಆ ಮೂರು ವೇದಗಳ ಮಂತ್ರಗಳನ್ನು ಬೇರೆ ಬೇರೆ ಮಾಡಲು, ಅವು ಪ್ರಬಲವಾದ ನಾಲ್ಕು ವೇದಗಳಾದವು, ಅವು

ಗಳನ್ನು ಭಾರದ್ವಾಜನು ಅಭ್ಯಾಸ ಮಾಡುತ್ತ ॥ ೨೨ ॥ ಮೂರು ಬ್ರಹ್ಮಕಲ್ಪದಿಂದಲೂ ಆ ವೇದಗಳಲ್ಲಿ ಸ್ವಲ್ಪ ಸ್ವಲ್ಪ ಭಾಗವನ್ನು ಕಲಿಯುತ್ತಿರುವನು, ಇನ್ನೂ ಪೂರಾ ಕಲಿತಿಲ್ಲ. ಅವುಗಳನ್ನು ಯಾವಾಗ ಕಲಿಯುವನೋ ತಿಳಿಯದು, ಎಂದು ವ್ಯಾಸರು ತಮ್ಮ ಶಿಷ್ಯರಿಗೆ ಹೇಳಿದರು. ಆ ವ್ಯಾಸರ ನಾಲ್ಕೂಮಂದಿ ಶಿಷ್ಯರು ಮುಂದೆ ಒಂದೊಂದು ವೇದವನ್ನು ಕಲಿಯುವದು ಅಶಕ್ಯವಾಯಿತು ॥ ೨೩ ॥ ಎಂದು ಗುರುಗಳು— ಎಲೈ ಬ್ರಾಹ್ಮಣರೇ, ನೀವು ಸ್ವಲ್ಪಕಾಲದಲ್ಲಿ ನಾಲ್ಕೂ ವೇದಗಳನ್ನು ಹ್ಯಾಗೆ ಕಲಿತಿರಿ ಹೇಳಿರಿ ! ಇರಲಿ ಮುಂದೆ ಕೇಳಿರಿ ಆಮೇಲೆ ವ್ಯಾಸರು ತಮ್ಮ ಶಿಷ್ಯರನ್ನು ಕುರಿತು— ಎಲೈ ಶಿಷ್ಯರೇ, ಆ ಭಾರದ್ವಾಜನು ಒಂದು ವೇದವನ್ನು ಪೂರ್ಣವಾಗಿ ಕಲಿಯಲಿಕ್ಕೆ ಬಹಳ ಪ್ರಯತ್ನ ಮಾಡಿದನು, ಅವನು ಮಾಡಿದ ಅಭ್ಯಾಸ ಕ್ರಮವನ್ನು ನಿಮಗೆ ಸ್ವಲ್ಪ ಹೇಳುವೆನು ಕೇಳಿರಿ ಎಂದರು. ॥ ೨೪ ॥ ಆಗ ಆ ಶಿಷ್ಯರು— ಸ್ವಾಮೀ, ವ್ಯಾಸರೇ, ನಮಗೆ ಒಂದೊಂದು ವೇದದ ಆದ್ಯಂತವನ್ನು ವಿಸ್ತಾರವಾಗಿ ತಿಳಿಸಿರಿ, ನಮ್ಮ ಶಕ್ತ್ಯಾನುಸಾರ ಕಲಿಯುವೆವು ॥ ೨೫ ॥ ನಮ್ಮಮೇಲೆ ಕೃಪಾ ಮಾಡಬೇಕೆಂದು ಅವರ ಚರಣಗಳಲ್ಲಿ ಬಿದ್ದು ಬೇಡಿಕೊಂಡರು ॥ ೨೬ ॥ ಆ ಶಿಷ್ಯರ ಕರುಣಾ ವಚನವನ್ನು ಕೇಳಿ ವ್ಯಾಸರು ಸಂತೋಷದಿಂದ ಮೊದಲನೇ ಶಿಷ್ಯನಾದ ಪೈಲನನ್ನು ಕರೆದು— ಎಲೈ ಪೈಲನೇ, ನಿನಗೆ ಋಗ್ವೇದವನ್ನೂ ಅದರ ಮಹಿಮೆಯನ್ನೂ ಹೇಳುವೆನು, ನೀನು ಆ ಋಗ್ವೇದವನ್ನು ಧ್ಯಾನಪೂರ್ವಕವಾಗಿ ಪಠಿಸು ಎಂದರು ॥೨೭-೨೮॥ ಆಗ ಅವನು— ಸ್ವಾಮೀ, ಧ್ಯಾನಪೂರ್ವಕವಾಗಿ ಹ್ಯಾಗೆ ಕಲಿಯಬೇಕೆಂಬದನ್ನೂ ಅವುಗಳ ಭೇದಗಳನ್ನೂ ವಿಸ್ತಾರವಾಗಿ ಹೇಳಿರಿ, ॥ ೨೯ ॥ ಮತ್ತು ಅದರಲ್ಲಿ ನನಗೆ ಅಶಕ್ಯವಾದದ್ದನ್ನು ಹೇಳಿ ಕಲಿಸಿರಿ. ಅದನ್ನು ನಾನು ಭಕ್ತಿಯಿಂದ ಕಲಿಯುವೆನು ನೀವು ನನಗೆ ಕಾಮಧೇನು ಸ್ವರೂಪರಾದ ಗುರುಗಳಾಗಿದ್ದು ನನ್ನಮೇಲೆ ಕೃಪಾ ಮಾಡಿರಿ ಎಂದು ಬೇಡಿಕೊಂಡನು. ॥ ೩೦ ॥ ಆಗ ವ್ಯಾಸರು— ಎಲೈ ಪೈಲನೇ, ನಿನಗೆ ಋಗ್ವೇದದ ಧ್ಯಾನ-ವರ್ಣ-ಸ್ವರೂಪಗಳನ್ನೂ ಅದರಲ್ಲಿರುವ ಭೇದಗಳನ್ನೂ ಹೇಳುವೆನು ಕೇಳು ॥ ೩೧ ॥ ಋಗ್ವೇದದಲ್ಲಿ ಪ್ರಖ್ಯಾತವಾದ ಆಯುರ್ವೇದವು ಉಪವೇದವಾಗಿದೆ. ಇದಕ್ಕೆ ಅತ್ರಿಗೋತ್ರವು ಶುದ್ಧವಾದದ್ದು, ಬ್ರಹ್ಮನು ದೇವತೆಯು, ॥ ೩೨ ॥

ಗಾಯತ್ರೀ ಛಂದಸ್ಸು, ರಕ್ತವರ್ಣ, ಪದ್ಮದಂತೆ ನೇತ್ರ, ವಿಸ್ತಾರವಾದ ಶಂಖದಂತೆ ಕೊರಳು. ॥ ೩೩ ॥ **ಕೂದಲೂ** ಮೀಸೆಗಳೂ ದ್ವಿರತ್ನಿ ಪ್ರಮಾಣವುಳ್ಳದ್ದು. ಈ ಪ್ರಕಾರ ಸ್ವರೂಪವುಳ್ಳ ಋಗ್ವೇದ ಮೂರ್ತಿಯನ್ನು ಧ್ಯಾನಿಸು. ॥ ೩೪ ॥ ಇನ್ನು ಇದರ ಭೇದಗಳನ್ನು ಕೇಳು. ಇದರ ಮೊದಲನೇ ಚರ್ಚೆಯು **ಶ್ರಾವಕವು.** ಎರಡನೇ ಚರ್ಚೆಯು **ಶ್ರವಣವು. "ಪಾರ–ಕ್ರಮು"** ಎಂಬ ಎರಡು ಭೇದಗಳು. ॥ ೩೫ ॥ **"ಜಟಾ–ಶಕಟ"** ಶಾಖೆಗಳು ಎರಡು. ಏಳನೇದು **ದಂಡ** ಎಂಬುವದು, ಈ ಏಳು ಭೇದಗಳುಂಟು. ॥ ೩೬ ॥ ಮತ್ತು **ಆಶ್ವಲಾಯನಿ, ಶಾಂಖಾಯನಿ, ಶಾಕಲಾ, ಬಾಷ್ಕಳಾ, ಮಾಂಡೂಕ** ಎಂಬ ಬೇರೆ ಐದು ಭೇದಗಳುಂಟು ಅಂತು ೧೨ ಭೇದಗಳು ಅವೆ ॥ ೩೭ ॥ ಎಲ್ಲೈ ಬ್ರಾಹ್ಮಣರೇ, ಈ ಪ್ರಕಾರ ವ್ಯಾಸರು ಋಗ್ವೇದದ ಭೇದಗಳನ್ನು ಹೇಳಿದರು. ॥ ೩೮ ॥ ಆದರೆ ನೀವು ಈ ಭಯಂಕರವಾದ ಕಲಿಯುಗದಲ್ಲಿ ಎಲ್ಲ ವೇದಗಳನ್ನು ಕಲಿತಿರುವೆವೆಂದೂ ಅಧ್ಯಾಪಕರೆಂದೂ ಲೋಕದಲ್ಲಿ ಕೀರ್ತಿಯನ್ನು ಬೆಳಿಸಿರುವಿರಿ ॥ ೩೯ ॥ ನಿಮಗೇನು ಹೇಳಬೇಕು? ಆ ೧೨ ಭೇದಗಳಲ್ಲಿ ಒಂದು ಶಾಖೆಯು ವಿಖ್ಯಾತವಾಗಿದೆ ಆದರ ಸುಲಕ್ಷಣ–ರೂಪಗಳನ್ನು ಯಾರು ತಿಳಿದವರು? ಎಂಬದನ್ನು ನನಗೆ ಹೇಳಿರಿ ॥ ೪೦ ॥ ನಾರಾಯಣ ಸ್ವರೂಪರಾದ ವ್ಯಾಸರು ಪೈಲನಿಗೆ ಈ ಪ್ರಕಾರ ಋಗ್ವೇದದ ೧೨ ಭೇದಗಳನ್ನು ಹೇಳಿದರು.' ಮುಂದೆ ಕೇಳಿರಿ ಎಂದು ಗುರುಗಳು ಅಂದರು ॥ ೪೧–೪೨ ॥

ಆಮೇಲೆ ವ್ಯಾಸರು ವೈಶಂಪಾಯನನೆಂಬ ೨ನೇ ಶಿಷ್ಯನನ್ನು ಕರೆದು— ಎಲೈ ನಿನಗೆ ಯಜುರ್ವೇದವನ್ನು ವಿಸ್ತಾರವಾಗಿ ಹೇಳುವೆನು ಅದನ್ನು ಕಲಿ. ॥ ೪೩ ॥ ಇದರ ಉಪವೇದವು ಧನುರ್ವೇದವು. ॥ ೪೪ ॥ ಭಾರದ್ವಾಜ ಗೋತ್ರ, ರುದ್ರ ಅಧಿದೇವತೆ, ತ್ರಿಷ್ಟುಪ್ ಛಂದಸ್ಸು, ಇನ್ನು ಧ್ಯಾನವನ್ನು ಹೇಳುವೆನು. ॥ ೪೫ ॥ ಇದರ ಮೂರ್ತಿ ಸ್ವರೂಪ ಹ್ಯಾಗಂದರೆ, ಮಧ್ಯಭಾಗ ಕೃಶ, ಸ್ಥೂಲವಾದ ಕೊರಳು, ಕಪಾಲವುಳ್ಳದ್ದು, ಮನೋಹರವಾದ ಕಾಂಚನ ವರ್ಣವುಳ್ಳದ್ದು, ಪಿಂಗಳವರ್ಣದ ಕಣ್ಣು. ॥ ೪೬ ॥ ಶರೀರವು ಸೂರ್ಯನ ಬಣ್ಣದಂತೆ ಕೆಂಪು ಐದು

ಅರಲ್ನೆ (ವೊಳ) ಉದ್ಭವಾದದ್ದು, ಈ ಪ್ರಕಾರ ಇರುವ ಯಜುರ್ವೇದ **ಮೂರ್ತಿಯನ್ನು** ಧ್ಯಾನಿಸು. || ೪೭ || ಈ ಯಜುರ್ವೇದದಲ್ಲಿ ೮೬ ಭೇದಗಳು ಅವೆ. ಅವುಗಳನ್ನು ಹೇಳುವೆನು ಕೇಳು || ೪೮ || **ಚರಕ, ಆಹೂರಕ, ನಾಮುಕಠ, ಪ್ರಾಚ್ಯಕಠ, ಕಪಿಲಕಠ,** || ೪೯ || **ಅರಾಯಣೀಯ, ವಾರ್ತಾತವೀಯ, ಶ್ವೇತ, ಶ್ವೇತತರ.** || ೫೦ || **ಮೈತ್ರಾಯಣಿ** ಎಂದು ೧೦ ಶಾಖಾ ಭೇದಗಳು ಅವೆ. ಇವುಗಳಲ್ಲಿ ಏಳು ಭೇದಗಳುಂಟು. || ೫೧ || ಯಾವವೆಂದರೆ **ಮಾನವ, ದುಂದುಭ, ಐಕೇಯಾ, ವಾರಾಹ,** || ೫೨ || **ಹರಿದ್ರವೇಯ, ಶಾಮ, ಶಾಮಾಯಣೀಯ** ಎಂಬವುಗಳು. || ೫೩ || ಇನ್ನು ವಾಜಸನೇಯ ಶಾಖೆಯಲ್ಲಿಯ ಭೇದಗಳನ್ನು ಹೇಳುವೆನು. || ೫೪ || **ವಾಜಸನೇಯ, ಜಾಬಾಲ, ಬಹುಧೇಯ, ಕಣ್ವ** || ೫೫ || **ಮಾಧ್ಯಂದಿನ, ಶಾಪಿಯಾ, ಸ್ಥಾಪಾಯಣೀಯ, ಕಾಪಾಲ,** || ೫೬ || **ಪೌಂಡ್ರವತ್ಸಾ, ಅವಟಿಕಾ, ಪರಮಾವಟಿಕಾ,** || ೫೭ || **ಪಾರಾಶರ್ಯ, ವೈಧೇಯ, ವೈನೇಯ.** || ೫೮ || **ಔಂಧೇಯ, ಗಾಲವ, ಬೈಜವ,** || ೫೯ || **ಕಾತ್ಯಾಯನಿ** ಎಂಬ ೧೮ ಭೇದಗಳುಂಟು || ೬೦ || ಇನ್ನು ತೈತ್ತರೀಯ ಶಾಖೆಯಲ್ಲಿ **ಔಖ್ಯ, ಕಾಂಡಿಕೇಯ** ಎಂದು ಭೇದಗಳುಂಟು. ಕಾಂಡಿಕೇಯದಲ್ಲಿ ೫ ಭೇದಗಳುಂಟು || ೬೧ || ಇವುಗಳಲ್ಲಿ **ಆಪಸ್ತಂಭವು** ಮನೋಹರವಾದ ದೊಡ್ಡ ಶಾಖೆಯದೆ. ಯಜ್ಞಾದಿ ಕರ್ಮಗಳ ಆಚಾರವು ಇದರಲ್ಲಿ ಅದೆ. || ೬೨ || ಮತ್ತು **ಬೋಧಾಯನಿ, ಸತ್ಯಾಷಾಢಿ, ಅಘನಾಶನಿ, ಹಿರಣ್ಯಕೇಶಿ ಔಧೇಯಿ** ಎಂಬ ಬೇರೆ ಐದು ಭೇದಗಳನ್ನು ಅನುಕ್ರಮವಾಗಿ ಕಲಿಯಬೇಕು || ೬೩ || ಎಂದು ವ್ಯಾಸರು ಹೇಳಿದರು. || ೬೪ || ಮತ್ತು **ಶಿಕ್ಷಾ, ವ್ಯಾಕರಣ, ಛಂದಸ್ಸು, ಕಲ್ಪ, ನಿರುಕ್ತ, ಜ್ಯೋತಿಷ,** ಎಂಬಿವು ವೇದಗಳ ಷಡಂಗಗಳು. || ೬೫ || ಇವುಗಳ ಉಪಾಂಗಗಳು **ಪ್ರತಿಪದ ಅನುಪದ, ಛಂದ,** || ೬೬ || **ಭಾಷಾ, ಧರ್ಮ, ಮೀಮಾಂಸ, ನ್ಯಾಯ, ಕರ್ಮಸಂಹಿತ** ಎಂಬ ೮ ಪ್ರಸಿದ್ಧವಾಗಿವೆ || ೬೭ || ಇವಲ್ಲದೆ ಪರಿಶಿಷ್ಟಗಳು ೨೮ ಅವೆ ಎಂದು ಹೇಳಿದರು. || ೬೮ || ಪೂರ್ವದ ವೇದರಾಶಿಗಳನ್ನು ಕಲಿಯಲಿಕ್ಕೆ ಮನುಷ್ಯರಿಗೆ ಅಶಕ್ಯವಾಗ

ಬಾರದೆಂದು ಲೋಕೋಪಕಾರಕ್ಕಾಗಿ ಈ ರೀತಿಯಾಗಿ ಹೇಳಲ್ಪಟ್ಟಿದೆ. ‖ ೬೯ ‖ ಇವುಗಳಲ್ಲಿ ಶಕ್ತಿಯಿದ್ದಷ್ಟು ಕಲಿ ಎಂದು ವ್ಯಾಸರು ಹೇಳಿದರು. ‖ ೭೦ ‖ ಆಗ ಅವನು ಕೈಮುಗಿದು ವಿನಯದಿಂದ— ‖ ೭೧ ‖ ಸ್ವಾಮೀ, ಯಜುರ್ವೇದದ ಶಾಖಾ ಭೇದಗಳನ್ನು ಕ್ರಮವಾಗಿ ವಿವರಿಸಿರಿ. ‖ ೭೨ ‖ ಯಾಕಂದರೆ ನನಗೆ ಇದರ ಮೂಲ ಶಾಖೆ ಯಾವದೆಂಬದು ಸಂಶಯ ಬಂದದೆ. ತಾವು ಪ್ರೀತಿಯಿಂದ ಆ ಸಂಶಯವನ್ನು ಪರಿಹರಿಸಿರಿ ಎಂದು ವಿಜ್ಞಾಪಿಸಿದನು. ‖ ೭೩ ‖ ಆಗ ವ್ಯಾಸರು— ಎಲೈ ವೈಶಂಪಾಯನನೇ, ನೀನು ಒಳ್ಳೇ ಪ್ರಶ್ನೆ ಮಾಡಿದಿ. ನಿನಗೆ ಈ ವೇದದ ಮೂಲವನ್ನು ಹೇಳುವೆನು ಕೇಳು ‖ ೭೪ ‖ ಯಜುರ್ವೇದವು **ಮಂತ್ರ, ಬ್ರಾಹ್ಮಣ, ಸಂಹಿತೆ** ಎಂದು ಮೂರು ಮುಖ್ಯ ಭೇದಗಳಾಗಿವೆ. ಅವುಗಳನ್ನು ಕೂಡಿಸಿ ಮಿಶ್ರ ಮಾಡಿ ಓದುವದೇ ಯಜುರ್ವೇದದ ಮೂಲವು ‖ ೭೫ ‖ ಅಥವಾ ಸಂಹಿತಾ, ಮತ್ತು ಬ್ರಾಹ್ಮಣ ಇವು ಕೂಡಿದರೂ ಅದೂ ಯಜುರ್ವೇದದ ಮೂಲವೆನಿಸುವದು. ಬೇರೆ ಶಾಖೆಗಳು ಅನೇಕ ಅವೆ. ‖ ೭೬ ‖ ಯಜ್ಞಾದಿ ಕರ್ಮ ಕ್ರಿಯೆಗಳಲ್ಲಿ ಇದೇ ಮೂಲವೆಂದು ತಿಳಿದು ನೀನು ನಿಶ್ಚಯವಾಗಿ ಅಭ್ಯಾಸ ಮಾಡು ಎಂದು ಹೇಳಿದರು. ‖ ೭೭ ‖ ಆಗ ಆ ಶಿಷ್ಯನು ಕೈಮುಗಿದು— ಸ್ವಾಮೀ, ನನಗೆ ಯಜುರ್ವೇದದ ಮೂಲವನ್ನು ಹೇಳಿರಿ ಎಂದನು. ‖ ೭೮ ‖ ಆಗ ಅವರು— ಯಾವದರಲ್ಲಿ ಮೂರು ವಿಷಯಗಳು ಬರುತ್ತವೋ ಅದನ್ನು ಓದು. ‖ ೭೯ ‖ ನಿನಗೆ ಸಪ್ತ, ಅಷ್ಟಕ ಸಂಹಿತಾಗಳಲ್ಲಿ ಒಂದೊಂದೇ ವಿಸ್ತಾರವಾಗಿ ಹೇಳುವೆನು ಕೇಳು. ‖ ೮೦ ‖ ಯಜ್ಞಾದಿ ಕರ್ಮಗಳು ಶ್ರೇಯಸ್ಕರವಾಗುವದಕ್ಕಾಗಿ ಇವುಗಳನ್ನು ಕಲಿಯಬೇಕು.

ಪ್ರಥಮಾ ಅಷ್ಟಕದಲ್ಲಿ ಮೊದಲು "**ಇಷೇತ್ವಾ**" ಎಂಬ ಪ್ರಶ್ನೆಗೆ ೧೪ ಅನುವಾಕ, ೨೮ ಪನ್ನಗಳು ಅವೆ ‖ ೮೧ ‖ **ಅಪಊರ್ಧ್ವ** ಎಂಬ ಪ್ರಶ್ನೆಗೆ ೧೪ ಅನುವಾಕ, ೩೪ ಪನ್ನಗಳು ಅವೆ. ‖ ೮೨ ‖ **ದೇವಸ್ಯತ್ವಾ** ಎಂಬ ಪ್ರಶ್ನೆಗೆ ೧೧ ಅನುವಾಕ, ೩೧ ಪನ್ನಗಳು ಅವೆ ‖ ೮೩ ‖ **ಆದದೆ** ಎಂಬ ಪ್ರಶ್ನೆಗೆ ೪೬ ಅನುವಾಕ, ೫೪ ಪನ್ನಗಳು ಅವೆ. ‖ ೮೪ ‖ **ದೇವಾಸುರ** ಎಂಬ ಪ್ರಶ್ನೆಗೆ ೧೧ ಅನುವಾಕ, ೫೧ ಪನ್ನಗಳು ಅವೆ. ‖ ೮೫ ‖

**ಸಂತ್ವಾಸಿಂಚಾ** ಎಂಬ ಪ್ರಶ್ನೆಗೆ ೧೧ ಅನುವಾಕ, ೫೧ ಪನ್ನಗಳು ಅವೆ. || ೮೬ || **ಪಾಕಯಜ್ಞ** ಎಂಬ ಪ್ರಶ್ನೆಗೆ ೧೩ ಅನುವಾಕ, ೫೧ ಪನ್ನಗಳು ಅವೆ. || ೮೭ || **ಅನುವತ್ಯ** ಎಂಬ ಪ್ರಶ್ನೆಗೆ ೨೨ ಅನುವಾಕ, ೪೨ ಪನ್ನಗಳು ಅವೆ. || ೮೮ || ಈ ಪ್ರಕಾರ ಪ್ರಥಮಾಷ್ಟಕದಲ್ಲಿ ಒಟ್ಟು ೧೪೩ ಅನುವಾಕ, ೩೪೨ ಪನ್ನಗಳು ಅವೆ. || ೮೯–೯೦–೯೧ ||

ಎರಡನೇ ಅಷ್ಟಕದಲ್ಲಿ ೧ನೇ **ವಾಯುವ್ಯ** ಎಂಬ ಪ್ರಶ್ನೆಗೆ ೧೧ ಅನುವಾಕ, ೬೫ ಪನ್ನಗಳು ಅವೆ. ||೯೨–೯೩|| **ಪ್ರಜಾಪತಿ** ಎಂಬ ಪ್ರಶ್ನೆಗೆ ೧೨ ಅನುವಾಕ, ೭೧ ಪನ್ನಗಳು ಅವೆ. || ೯೪ || **ಆದಿತ್ಯ** ಎಂಬ ಪ್ರಶ್ನೆಗೆ ೧೪ ಅನುವಾಕ, ೫೬ ಪನ್ನಗಳು ಅವೆ || ೯೫ || **ದೇವಾಮನುಷ್ಯ** ಎಂಬ ಪ್ರಶ್ನೆಗೆ ೧೪ ಅನುವಾಕ, ೬೮ ಪನ್ನಗಳು ಅವೆ || ೯೬ || **ವಿಶ್ವರೂಪ** ಎಂಬ ಪ್ರಶ್ನೆಗೆ ೧೨ ಅನುವಾಕ, ೭೪ ಪನ್ನಗಳು ಅವೆ || ೯೭ || ಇವುಗಳನ್ನು ಪಠಿಸಿದರೆ ಮಹಾ ಪಾತಕಗಳು ಹೋಗುವವು **ಸಮಿಧಾ** ಎಂಬ ಪ್ರಶ್ನೆಗೆ ೧೨ ಅನುವಾಕ, ೭೦ ಪನ್ನಗಳು ಅವೆ || ೯೮ || ಈ ಪ್ರಕಾರ ೨ನೇ ಅಷ್ಟಕದಲ್ಲಿ ಒಟ್ಟು ಆರು ಪ್ರಶ್ನೆಗಳು ೭೫ ಅನುವಾಕ, ೩೮೮ ಪನ್ನಗಳು ಅವೆ || ೯೯–೧೦೦ || ಇನ್ನು ಮಹತ್ಮನಾದ ವೈಶಂಪಾಯನನು ಗುರುಮುಖದಿಂದ ಕೇಳಿದ ೩ನೇ ಅಷ್ಟಕವನ್ನು ಸವಿಸ್ತಾರವಾಗಿ ನಿಮಗೆ ಹೇಳುವೆನು. || ೧೦೧ ||

೩ನೇ ಅಷ್ಟಕದಲ್ಲಿ ೧ನೇ **ಪ್ರಜಾಪತಿರಕಾಮ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೨ ಪನ್ನಗಳು ಅವೆ. || ೧೦೨ || **ಯೋವೈಪವಮಾನ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೬ ಪನ್ನಗಳು ಅವೆ || ೧೦೩ || **ಅಗ್ನೇತೇಜಸ್ವಿ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೬ ಪನ್ನಗಳು ಅವೆ. || ೧೦೪ || **ವಿನಾತ್ಮಾ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೬ ಪನ್ನಗಳು ಅವೆ || ೧೦೫ || **ಪೂರ್ಣಾ** ಎಂಬ ಪ್ರಶ್ನೆಗೆ ೧೧ ಅನುವಾಕ, ೨೬ ಪನ್ನಗಳು ಅವೆ. || ೧೦೬ || ಅಂತು ೩ನೇ ಅಷ್ಟಕದಲ್ಲಿ ಒಟ್ಟು ೫೫ ಅನುವಾಕ, ೨೦೬ ಪನ್ನಗಳು ಅವೆ. || ೧೦೭ ||

೪ನೇ ಅಷ್ಟಕದಲ್ಲಿ— (೧) **ಯುಂಜಾನ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೬ ಪನ್ನಗಳು ಅವೆ. ॥ ೧೦೮ ॥ (೨) **ವಿಷ್ಣೋಃಕ್ರಮ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೮ ಪನ್ನಗಳು ಅವೆ. ॥ ೧೦೯ ॥ (೩) **ಅಪಾಂತ್ವಾ** ಎಂಬ ಪ್ರಶ್ನೆಗೆ ೧೩ ಅನುವಾಕ, ೩೬ ಪನ್ನಗಳು ಅವೆ ॥ ೧೧೦ ॥ (೪) **ರಶ್ಮಿರಸೀ** ಎಂಬ ಪ್ರಶ್ನೆಗೆ ೧೨ ಅನುವಾಕ, ೩೭ ಪನ್ನಗಳು ಅವೆ. ॥ ೧೧೧ ॥ (೫) **ನಮಸ್ತೇರುದ್ರ** ಎಂಬ ಪ್ರಶ್ನೆಗೆ ೧೧ ಅನುವಾಕ, ೨೭ ಪನ್ನಗಳು ಅವೆ. ॥ ೧೧೨ ॥ (೬) **ಆತ್ಮನ್ನೂರ್ಜಾ** ಎಂಬ ಪ್ರಶ್ನೆಗೆ ೯ ಅನುವಾಕ, ೪೬ ಪನ್ನಗಳು ಅವೆ ॥ ೧೧೩ ॥ (೭) **ಆಗ್ನಾವಿಷ್ಣೋ** ಎಂಬ ಪ್ರಶ್ನೆಗೆ ೧೫ ಅನುವಾಕ, ೩೯ ಪನ್ನಗಳು ಅವೆ. ॥ ೧೧೪ ॥ ಈ ಪ್ರಕಾರ ೪ನೇ ಅಷ್ಟಕದಲ್ಲಿ ಏಳು ಪ್ರಶ್ನೆಗಳೂ ೮೨ ಅನುವಾಕಗಳೂ ೨೭೯ ಪನ್ನಗಳೂ ಅವೆ. ॥ ೧೧೫ ॥

೫ನೇ ಅಷ್ಟಕದಲ್ಲಿ—(೧) **ಸಾವಿತ್ರಾಣಿ** ಎಂಬ ಪ್ರಶ್ನೆಗೆ ೧೧ ಅನುವಾಕ, ೬೦ ಪನ್ನಗಳು ಅವೆ ॥೧೧೬॥ (೨) **ವಿಷ್ಣುಮುಖಾ** ಎಂಬ ಪ್ರಶ್ನೆಗೆ ೧೨ ಅನುವಾಕ, ೬೪ ಪನ್ನಗಳು ಅವೆ. ॥ ೧೧೭ ॥ (೩) **ಉತ್ಸನ್ನ ಯಜ್ಞ** ಎಂಬ ಪ್ರಶ್ನೆಗೆ ೧೨ ಅನುವಾಕ, ೪೮ ಪನ್ನಗಳು ಅವೆ ॥ ೧೧೮ ॥ (೪) **ದೇವಾಸುರ** ಎಂಬ ಪ್ರಶ್ನೆಗೆ ೧೨ ಅನುವಾಕ, ೫೯ ಪನ್ನಗಳು ಅವೆ. ॥ ೧೧೯ ॥ (೫) **ಯದೇಕೆ** ಎಂಬ ಪ್ರಶ್ನೆಗೆ ೨೪ ಅನುವಾಕ, ೬೨ ಪನ್ನಗಳು ಅವೆ. ॥ ೧೨೦ ॥ (೬) **ಹಿರಣ್ಯವರ್ಣಾ** ಎಂಬ ಪ್ರಶ್ನೆಗೆ ೨೩ ಅನುವಾಕ, ೫೪ ಪನ್ನಗಳು ಅವೆ. ॥ ೧೨೧ ॥ (೭) **ಯೋವಾಅಯಥಾ** ಎಂಬ ಪ್ರಶ್ನೆಗೆ ೨೬ ಅನುವಾಕ, ೫೮ ಪನ್ನಗಳು ಅವೆ. ॥೧೨೨॥ ಈ ಪ್ರಕಾರ ೫ನೇ ಅಷ್ಟಕದ ೭ ಪ್ರಶ್ನೆಗಳಿಗೆ ೧೨೦ ಅನುವಾಕ, ೪೦೩ ಪನ್ನಗಳು ಅವೆ ॥ ೧೨೩-೧೨೪ ॥

೬ನೇ ಅಷ್ಟಕದಲ್ಲಿ— (೧) **ಪ್ರಾಚೀನವಂಶ** ಎಂಬ ಪ್ರಶ್ನೆಗೆ ೧೧ ಅನುವಾಕ, ೭೬ ಪನ್ನಗಳು ಅವೆ. ಎಂದು ವ್ಯಾಸರು ಹೇಳುವರು. ॥ ೧೨೫–೧೨೬ ॥ (೨) **ಯದುಬವ** ಎಂಬ ಪ್ರಶ್ನೆಗೆ ೧೧ ಅನುವಾಕ, ೫೯ ಪನ್ನಗಳು ಅವೆ. ॥ ೧೨೭ ॥ (೩) **ಚಾತ್ವಾಲ** ಎಂಬ ಪ್ರಶ್ನೆಗೆ ೧೧ ಅನುವಾಕ ೭೨ ಪನ್ನಗಳು ಅವೆ. ॥ ೧೨೮ ॥

(೪) **ಯಜ್ಞೇನ** ಎಂಬ ಪ್ರಶ್ನೆಗೆ ೧೧ ಅನುವಾಕ, ೫೧ ಪನ್ನಗಳು ಅವೆ. ॥ ೧೨೯ ॥ (೫) **ಇಂದ್ರೋವೃತ್ತ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೨ ಪನ್ನಗಳು ಅವೆ. ॥ ೧೩೦ ॥ (೬) **ಸುವರ್ಗಾಯ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೩ ಪನ್ನಗಳು ಅವೆ. ॥ ೧೩೧ ॥ ಈ ಪ್ರಕಾರ ೬ನೇ ಅಷ್ಟಕದಲ್ಲಿ ಒಟ್ಟು ೬೬ ಅನುವಾಕಗಳೂ, ೩೩೩ ಪನ್ನಗಳೂ ಅವೆ. ॥ ೧೩೨ ॥

೭ನೇ ಅಷ್ಟಕದಲ್ಲಿ (೧) **ಪ್ರಜನನ** ಎಂಬ ಪ್ರಶ್ನೆಗೆ ೨೦ ಅನುವಾಕ, ೫೨ ಪನ್ನಗಳು ಅವೆ. ॥ ೧೩೩ ॥ (೨) **ಸಾಧ್ಯಾ** ಎಂಬ ಪ್ರಶ್ನೆಗೆ ೨೦ ಅನುವಾಕ, ೫೦ ಪನ್ನಗಳು ಅವೆ. ॥ ೧೩೪ ॥ (೩) **ಪ್ರಜವೇವಾ** ಎಂಬ ಪ್ರಶ್ನೆಗೆ ೨೦ ಅನುವಾಕ ೪೨ ಪನ್ನಗಳು ಅವೆ ॥ ೧೩೫ ॥ (೪) **ಬೃಹಸ್ಪತಿ** ಎಂಬ ಪ್ರಶ್ನೆಗೆ ೨೨ ಅನುವಾಕ, ೫೩ ಪನ್ನಗಳು ಅವೆ. ॥ ೧೩೬ ॥ (೫) **ಗಾವೋವಾ** ಎಂಬ ಪ್ರಶ್ನೆಗೆ ೨೫ ಅನುವಾಕ, ೫೪ ಪನ್ನಗಳು ಅವೆ. ॥೧೩೭॥ ಅಂತು ೭ ನೇ ಅಷ್ಟಕದಲ್ಲಿ ೧೦೭ ಅನುವಾಕಗಳೂ ೨೫೧ ಪನ್ನಗಳೂ ಅವೆ. ॥ ೧೩೮–೧೩೯ ॥

೮ ನೇ ಅಷ್ಟಕದಲ್ಲಿ— ೪೦ ಪ್ರಶ್ನೆಗಳೂ ೬೪೮ ಅನುವಾಕಗಳೂ ೧೭೯೮ ಪನ್ನಗಳೂ ಅವೆ. ಇವುಗಳನ್ನು ಕಲಿ. ॥ ೧೪೦–೧೪೧ ॥ ಇನ್ನು ಬ್ರಾಹ್ಮಣದಲ್ಲಿ ಮೂರು ಅಷ್ಟಕಗಳು ಅವೆ. ಅವುಗಳ ವಿವರವನ್ನು ಕೇಳು. ॥೧೪೨॥ ಬ್ರಾಹ್ಮಣದ ೧ನೇ ಅಷ್ಟಕದ ೮ ಪ್ರಶ್ನೆಗಳಲ್ಲಿ (೧) **ಸಂಘತ್ತಾ** ಎಂಬ ಪ್ರಶ್ನೆಗೆ ೧೦ ಅನುವಾಕ, ೮೦ ದಶಕಗಳು ಅವೆ. ॥ ೧೪೩–೧೪೪ ॥ (೨) **ಉದ್ಧನ್ಯಾ** ಎಂಬ ಪ್ರಶ್ನೆಗೆ ೬ ಅನುವಾಕ ೫೦ ದಶಕಗಳು ಅವೆ. ವಾಜಪೇಯದ ಅನುಸಂಧಾನವಾದ (೩) **ದೇವಾಸುರ** ಎಂಬ ಪ್ರಶ್ನೆಗೆ ॥ ೧೪೫ ॥ ೧೦ ಅನುವಾಕ, ೬೫ ದಶಕಗಳಿವೆ. (೪) **ಉಭಯೋ** ಎಂಬ ಪ್ರಶ್ನೆಗೆ ೧೦ ಅನುವಾಕ, ॥ ೧೪೬ ॥ ೬೬ ದಶಕಗಳು ಅವೆ (೫) **ಅಗ್ನೇಕೃತ್ತಿಕಾ** ಎಂಬ ಪ್ರಶ್ನೆಗೆ ॥ ೧೪೭ ॥ ೧೨ ಅನುವಾಕ, ೬೨ ದಶಕಗಳು ಅವೆ. ॥ ೧೪೮ ॥ (೬) **ಅನುಮತ್ಯ** ಎಂಬ ಪ್ರಶ್ನೆಗೆ ೧೦ ಅನುವಾಕ ೭೫ ದಶಕಗಳು ಅವೆ. ॥ ೧೪೯ ॥ (೭) **ಏಕದ್ವಾ** ಎಂಬ ಪ್ರಶ್ನೆಗೆ ೧೦ ಅನುವಾಕ, ೬೪ ದಶಕ

ಗಳು ಅವೆ. ॥ ೧೫೦ ॥ (೮) **ವರುಣಸ್ಯ** ಎಂಬ ಪ್ರಶ್ನೆಗೆ ೧೦ ಅನುವಾಕ, ೩೭ ದಶಕಗಳು ಅವೆ. ॥ ೧೫೧ ॥ ಈ ಪ್ರಕಾರ ಬ್ರಾಹ್ಮಣದ ಪ್ರಥಮಾಷ್ಟಕದಲ್ಲಿ ೮ ಪ್ರಶ್ನೆಗಳೂ ೭೮ ಅನುವಾಕಗಳೂ ॥ ೧೫೨ ॥ ೪೯೯ ದಶಕಗಳೂ ಅವೆ. ಎಂದು ವೈಶಂಪಾಯನನು ಗುರುಮುಖದಿಂದ ಕೇಳುವನು ॥ ೧೫೩ ॥

ಬ್ರಾಹ್ಮಣದ ೨ನೇ ಅಷ್ಟಕದಲ್ಲಿ— (೧) **ಅಂಗಿರಸ** ಎಂಬ ಪ್ರಶ್ನೆಗೆ ೧೧ ಅನುವಾಕ, ೬೦ ದಶಕಗಳು ಅವೆ. ॥ ೧೫೪ ॥ (೨) **ಪ್ರಜಾವತರಕಾಂಡ** ಎಂಬ ಪ್ರಶ್ನೆಗೆ ೧೧ ಅನುವಾಕ ೭೩ ದಶಕಗಳು ಅವೆ. ॥ ೧೫೫ ॥ (೩) **ಕಾಂಡಬ್ರಹ್ಮವಾದಿನ** ಎಂಬ ಪ್ರಶ್ನೆಗೆ ೧೧ ಅನುವಾಕ, ೫೦ ದಶಕಗಳು ಅವೆ. ॥ ೧೫೬ ॥ (೪) **ಜುಷ್ಟೋ** ಎಂಬ ಪ್ರಶ್ನೆಗೆ ೮ ಅನುವಾಕ, ೮೦ ದಶಕಗಳೂ ಅವೆ ॥ ೧೫೭ ॥ (೫) **ಪ್ರಾಣೋರಕ್ಷತಿ** ಎಂಬ ಪ್ರಶ್ನೆಗೆ ೮ ಅನುವಾಕ, ೪೫ ದಶಕಗಳು ಅವೆ. ॥ ೧೫೮ ॥ (೬) **ಸ್ವಾದಿರ್ತ್ವಾ** ಎಂಬ ಪ್ರಶ್ನೆಗೆ ೨೦ ಅನುವಾಕ, ೮೬ ದಶಕಗಳು ಅವೆ. ॥ ೧೫೯ ॥ **ತ್ರಿವೃತ್ತಾ** ಎಂಬ ಪ್ರಶ್ನೆಗೆ ೧೮ ಅನುವಾಕ, ೬೬ ದಶಕಗಳು ಅವೆ. ॥ ೧೬೦ ॥ **ಪೀವೋನ** ಎಂಬ ಪ್ರಶ್ನೆಗೆ ೯ ಅನುವಾಕ, ೭೯ ದಶಕಗಳು ಅವೆ. ॥ ೧೬೧ ॥ ಈ ಪ್ರಕಾರ ದ್ವಿತಿಯಾಷ್ಟಕ ಬ್ರಾಹ್ಮಣದಲ್ಲಿ ೮ ಪ್ರಶ್ನೆಗಳೂ ೯೬ ಅನುವಾಕಗಳೂ, ೮೬೭ ದಶಕಗಳೂ ಅವೆ ॥ ೧೬೨–೧೬೩ ॥

ಬ್ರಾಹ್ಮಣದ ತೃತೀಯಾಷ್ಟಕದಲ್ಲಿ ೧೨ ಪ್ರಶ್ನೆಗಳು ಅವೆ. ಹೇಳುವೆನು ಕೇಳು— ॥ ೧೬೪ ॥ ೧ನೇ **ಅಗ್ನಿರ್ನಃಪಾತು** ಎಂಬ ಪ್ರಶ್ನೆಗೆ ೬ ಅನುವಾಕ, ೬೧ ದಶಕಗಳು ಅವೆ ॥ ೧೬೫ ॥ ೨ನೇ **ತೃತೀಯ** ಎಂಬ ಪ್ರಶ್ನೆಗೆ ೧೦ ಅನುವಾಕ, ೮೫ ದಶಕಗಳು ಅವೆ ॥ ೧೬೬ ॥ ೩ನೇ **ಪ್ರತ್ಯುಷ್ಠಾ** ಎಂಬ ಪ್ರಶ್ನೆಗೆ ೧೧ ಅನುವಾಕ, ೭೯ ದಶಕಗಳು ಅವೆ. ॥ ೧೬೭ ॥ ೪ನೇ **ಬ್ರಾಹ್ಮಣ** ಎಂಬ ಪ್ರಶ್ನೆಗೆ ೧ ಅನುವಾಕ ೧೯ ದಶಕಗಳು ಅವೆ. ॥ ೧೬೮ ॥ ೫ನೇ **ಸತ್ಯಾ** ಎಂಬ ಪ್ರಶ್ನೆಗ ೧೪ ಅನುವಾಕ, ೨೯ ದಶಕಗಳು ಅವೆ. ॥ ೧೬೯ ॥ ೬ನೇ **ಅಂಜಂತೀ** ಎಂಬ ಪ್ರಶ್ನೆಗೆ ೧೫ ಅನುವಾಕ, ೩೭ ದಶಕಗಳು ಅವೆ. ॥ ೧೭೦ ॥ ೭ನೇ **ಅಚ್ಛಿದ್ರಸರ್ವಾನ್ವಾ** ಎಂಬ ಪ್ರಶ್ನೆಗೆ ೧೪ ಅನುವಾಕ, ೧೩೦ ದಶಕಗಳು ಅವೆ. ॥ ೧೭೧ ॥ ಅಶ್ವಮೇಧ ಯಜ್ಞದಲ್ಲಿ ಒಳ್ಳೇ ಪ್ರಸಿದ್ಧ

ವಾದ ೮ನೇ **ಸಾಂಗ್ರಹಣ್ಯ** ಎಂಬ ಪ್ರಶ್ನೆಗೆ ೧೩ ಅನುವಾಕ, ೯೧ ದಶಕಗಳು ಅವೆ. ॥ ೧೭೨ ॥ ೯ನೇ **ಪ್ರಜಾಪತಿರಕಾಮ** ಎಂಬ ಪ್ರಶ್ನೆಗೆ ೧೩ ಅನುವಾಕ, ೮೪ ದಶಕಗಳು ಅವೆ. ॥ ೧೭೩ ॥ ೧೦ನೇ **ಕಾಠಕಸಂಜ್ಞಾ** ಎಂಬ ಪ್ರಶ್ನೆಗೆ ೧೧ ಅನುವಾಕ, ೪೯ ದಶಕಗಳು ಅವೆ. ॥ ೧೭೪ ॥ ೧೧ನೇ **ಲೋಕೋಸಿಕಾಠಕ** ಎಂಬ ಪ್ರಶ್ನೆಗೆ ೧೦ ಅನುವಾಕ ೬೨ ದಶಕಗಳು ಅವೆ ॥ ೧೭೫ ॥ ೧೨ನೇ **ತುಭ್ಯಾ** ಎಂಬ ಪ್ರಶ್ನೆಗೆ ೯ ಅನುವಾಕ, ೫೬ ದಶಕಗಳು ಅವೆ ॥ ೧೭೬ ॥ ಈ ಪ್ರಕಾರ ೩ನೇ ಅಷ್ಟಕ ಬ್ರಾಹ್ಮಣದಲ್ಲಿ ೧೨ ಪ್ರಶ್ನೆಗಳೂ, ೧೪೭ ಅನುವಾಕಗಳೂ ೭೮೨ ದಶಕಗಳೂ ಅವೆ ॥೧೭೭॥ ಅಂತೂ ಬ್ರಾಹ್ಮಣದ ಮೂರೂ ಅಷ್ಟಕಗಳಲ್ಲಿ ಕೂಡಿ ೨೮ ಪ್ರಶ್ನೆಗಳೂ ॥೧೭೮॥ ೩೨೧ ಅನುವಾಕಗಳೂ, ೧೭೪೮ ದಶಕಗಳೂ ಅವೆ ॥ ೧೭೯-೧೮೦ ॥

ಆರಣದಲ್ಲಿ ೧೦ ಪ್ರಶ್ನೆಗಳು ಅವೆ. ಅವನ್ನು ವಿಸ್ತಾರವಾಗಿ ಹೇಳುವೆನು ಕೇಳು. ॥ ೧೮೧ ॥ ೧ನೇ **ಭದ್ರಾ** ಎಂಬ ಪ್ರಶ್ನೆಗೆ ೩೨ ಅನುವಾಕ, ೧೩೦ ದಶಕಗಳು ಅವೆ ॥ ೧೮೨ ॥ ೨ನೇ **ಸ್ವಾಧಾಯ** ಎಂಬ ಪ್ರಶ್ನೆಗೆ ೨೦ ಅನುವಾಕ, ೨೪ ದಶಕಗಳು ಅವೆ ॥ ೧೮೩ ॥ ೩ನೇ **ಚಿತ್ತಿ** ಎಂಬ ಪ್ರಶ್ನೆಗೆ ೨೧ ಅನುವಾಕ, ೫೨ ದಶಕಗಳು ಅವೆ. ॥ ೧೮೪ ॥ ೪ನೇ **ಮಂತ್ರಬ್ರಾಹ್ಮಣ** ಎಂಬ ಪ್ರಶ್ನೆಗೆ ೪೨ ಅನುವಾಕ, ೬೨ ದಶಕಗಳು ಅವೆ. ॥ ೧೮೫ ॥ ೫ನೇ **ಶ್ರೇಷ್ಠಬ್ರಾಹ್ಮಣ** ಪ್ರಶ್ನೆಗೆ ೧೨ ಅನುವಾಕ, ೧೦೮ ದಶಕಗಳು ಅವೆ. ॥ ೧೮೬ ॥ ೬ನೇ **ಪಿತೃಭೇದ** ಎಂಬ ಪ್ರಶ್ನೆಗೆ ೧೨ ಅನುವಾಕ ೨೩ ದಶಕಗಳು ಅವೆ ॥ ೧೮೭ ॥ ೭ನೇ **ಶಿಕ್ಷಾ** ಎಂಬ ಪ್ರಶ್ನೆಗೆ ೧೨ ಅನುವಾಕ, ೨೩ ದಶಕಗಳು ಅವೆ ॥ ೧೮೮ ॥ ೮ನೇ **ಬ್ರಹ್ಮವಿದಾ** ಎಂಬ ಪ್ರಶ್ನೆಗೆ ೯ ಅನುವಾಕ, ೧೪ ದಶಕಗಳು ಅವೆ. ॥ ೧೮೯ ॥ ೯ನೇ **ಭೃಗುರ್ವೈ** ಎಂಬ ಪ್ರಶ್ನೆಗೆ ೧೦ ಅನುವಾಕ, ೧೫ ದಶಕಗಳು ಅವೆ. ॥ ೧೯೦ ॥ ೧೦ನೇ **ನಾರಾಯಣಾ** ಎಂಬ ಪ್ರಶ್ನೆಗೆ ೩೦ ಅನುವಾಕ, ೧೦೪ ದಶಕಗಳು ಅವೆ. ॥ ೧೯೧ ॥ ಈ ಪ್ರಕಾರ ಆರಣದಲ್ಲಿ ೧೦ ಪ್ರಶ್ನೆಗಳೂ, ೨೦೨ ಅನುವಾಕಗಳೂ ॥ ೧೯೨ ॥ ೫೫೫ ದಶಕಗಳೂ ಅವೆ. ॥ ೧೯೩ ॥ ಇದರಲ್ಲಿ ಒಟ್ಟು ೮೨ ಪ್ರಶ್ನೆಗಳೂ ೧೧೬೯ ಅನುವಾಕಗಳೂ ॥ ೧೯೪ ॥ ೨೨೪೮ ದಶಕಗಳು ಅವೆ. ॥ ೧೯೫ ॥

ಗ್ರಂಥತ್ರಯದಿಂದ ೩೩೦೭ ದಶಕಗಳು ಆವೆ. || ೧೯೬ || ಈ ಪ್ರಕಾರ ಯಜುರ್ವೇದದ ಒಂದು ಶಾಖೆಯಲ್ಲಿ ಇಷ್ಟು ಭೇದಗಳುಂಟೆಂದು ವ್ಯಾಸರು ವೈಶಂಪಾಯನನಿಗೆ ಹೇಳಿದರು. || ೧೯೭ || ಎಂದು ಗುರುಗಳು ಆ ಬ್ರಾಹ್ಮಣನಿಗೆ ಹೇಳಹತ್ತಿದರು— || ೧೯೮ || ಎಲೈ ಮದೋನ್ಮತ್ತ ಬ್ರಾಹ್ಮಣರೇ, ಆಮೇಲೆ ವ್ಯಾಸರು ೩ನೇ ಶಿಷ್ಯನಾದ ಜೈಮಿನಿಗೆ ಸಾಮವೇದವನ್ನು ವಿಸ್ತಾರವಾಗಿ ಹೇಳಿದರು, ಅದನ್ನು ಕೇಳಿರಿ. || ೧೯೯ || ಸಾಮವೇದವು ಗಾಂಧರ್ವೋಪವೇದ, ಕಾಶ್ಯಪಗೋತ್ರ, ಪರಮಪವಿತ್ರವಾದ ರುದ್ರದೇವತೆ, ಜಗತೀ ಛಂದಸ್ಸು ಉಳ್ಳದ್ದು. ||೨೦೦|| ನಿತ್ಯ ಪುಷ್ಪವನ್ನೂ, ಶುಚಿಯಾದ ವಸ್ತ್ರವನ್ನೂ ಧರಿಸಿರುವದು || ೨೦೧ || ಮತ್ತು ಶಾಂತ ಮನಸಿನಿಂದ ಇಂದ್ರಿಯ ದಮನ ಉಳ್ಳದ್ದಾಗಿ ಶಮೀದಂಡವನ್ನು ಧರಿಸಿರುವದು || ೨೦೨ || ಕಣ್ಣು ಚಿನ್ನದಂತೆ ಮತ್ತು ಶ್ವೇತವರ್ಣದ್ದೂ ಇರುವದು. ಸೂರ್ಯನಂತೆ ಕಿರಣ, ಷಡ್ರತ್ನಿ ದೀರ್ಘ ಪ್ರಮಾಣವುಳ್ಳದ್ದು. || ೨೦೩ || ಇದರ ಭೇದಗಳಿಗೆ ಮಿತಿಯಿಲ್ಲ. ಸಾವಿರಾರು ಭೇದಗಳುಂಟೆಂದು ಹೇಳುವರು. ಇದನ್ನು ಕಲಿಯಲಿಕ್ಕೆ ಯಾರು ಶಕ್ತರಾದರು. ||೨೦೪|| ಶ್ರೀಮನ್ನಾರಾಯಣನೇ ಶಕ್ತನು. ಸಮಸ್ತ ಭೇದಗಳನ್ನು ಯಾರು ತಿಳಿದವರು? ಎಲೈ ಜೈಮಿನಿಯೇ ನಿನಗೆ ಸ್ವಲ್ಪ ವಿಷಯಗಳನ್ನು ಹೇಳುವೆನು ಕೇಳು. || ೨೦೫ || ಈ ವೇದದಲ್ಲಿ (೧) **ಆಸುರಾಯಣೀಯ,** (೨) **ವಾಸುರಾಯಣೀಯ,** (೩) **ವಾತಾರ್ಾಂತರೇಯ** ||೨೦೬|| (೪) **ಪ್ರಾಂಜಲಿ,** (೫) **ಋಜ್ಞಗ್ವೈನಪಿಥಾ,** (೬) **ಪ್ರಾಚೀನ ಯೋಗ್ಯಶಾಖಾ,** ಎಂದು ಆರು ಭೇದಗಳುಂಟು. || ೨೦೭ || **ರಾಣಾಯಣೀಯನೆಂಬ** ೭ನೇ ಜ್ಞಾನಯೋಗದಲ್ಲಿ ೧೦ ಭೇದಗಳಿವೆ ಕೇಳು. || ೨೦೮ || **ರಾಣಾಯಣೀಯ, ಸಾಂಖ್ಯಾಯನೀ, ಶಾಠ್ಯಾ, ಮುದ್ಗಲ,** ||೨೦೯|| **ಖಲ್ವಲ, ಮಹಾಖಲ್ವಲ, ಲಾಂಗಲಾ, ಕೈಥುಮಾ, ಗೌತಮಾ, ಜೈಮಿನಿ,** ಎಂಬ ೧೦ ಭೇದಗಳುಂಟೆಂದು ವ್ಯಾಸರು ಹೇಳಿದರು. || ೨೦೯–೨೧೦ || ಎಲೈ ವಿಪ್ರರೇ, ಈ ಸಾಮವೇದವನ್ನು ಪೂರ್ಣವಾಗಿ ತಿಳಿದವರು ಭೂಮಿಯಲ್ಲಿ ಯಾರಿದ್ದಾರೆ? ನೀವು ಮದೋನ್ಮತ್ತರಾಗಿ ಮೂರು ವೇದಗಳನ್ನು ಕಲಿತಿರುವೆವೆಂದು ಹೇಳುವಿರಿ! || ೨೧೧ ||

ಆಮೇಲೆ ವ್ಯಾಸರು ಸುಮಂತನೆಂಬ ೪ನೇ ಶಿಷ್ಯನನ್ನು ಕರೆದು ಅರ್ಥಣವೇದವನ್ನು ಹೇಳಿದರು ಕೇಳಿರಿ. ॥ ೨೧೨ ॥— ಎಲೈ ಸುಮಂತನೇ, ಅಥರ್ವಣವೇದಕ್ಕೆ ಉಪವೇದವಾಗಿ ಮತ್ತು ವೈತ್ರಾನಗೋತ್ರವುಳ್ಳ ದ್ದಾಗಿದೆ. ॥ ೨೧೩ ॥ ಉಪವೇದ ಶಸ್ತ್ರ ಶಾಸ್ತ್ರಂ (ಅಥರ್ವಣಿ ವೇದಸ್ಯ ಶಸ್ತ್ರಶಾಸ್ತ್ರಾಣಿ ಭವಂತಿ). ಇದಕ್ಕ ಇಂದ್ರನು ಅಧಿದೇವತೆ, ಅನುಷ್ಟುಪ್ ಛಂದಸ್ಸು ತೀಕ್ಷ್ಣ ಹಾಗು ಕ್ರೂರವಾದ ಕೃಷ್ಣವರ್ಣದ್ದು ಅದೆ. ॥ ೨೧೪ ॥ ಕಾಮರೂಪಿಯಾಗಿ, ಕ್ಷುದ್ರಕರ್ಮ ಉಳ್ಳದ್ದು ಅದೆ ಸ್ವದಾರವೆಂಬ ಹೆಸರುಳ್ಳದ್ದು, ವಿಶ್ವಸೃಷ್ಟಿಸಾದ್ಯ ಕರ್ಮವುಳ್ಳದ್ದು. ತಲೆಯಲ್ಲಿ ಜಲವುಳ್ಳದ್ದದೆ. ॥ ೨೧೫ ॥ ಈ ಅಥರ್ವಣ ವೇದವು ಈ ಪ್ರಕಾರ ರೂಪವುಳ್ಳದು ೯ ಭೇದಗಳು ಅವೆ, ಎಂದು ಸುಮಂತು ಶಿಷ್ಯನಿಗೆ ಹೇಳಿದರು ಕೇಳಿರಿ ॥ ೨೧೬ ॥ ಈ ವೇದದಲ್ಲಿ **ಪೈಪ್ಪಲಾ, ದಾಂತ, ಪ್ರದಾಂತ, ಸ್ತೋತಾ, ಔತಾ, ಬ್ರಹ್ಮದಾಂಯುಶದಾ, ಶೌನಕೀ, ವೇದದಶಾ, ಚರಣವಿದ್ಯಾ,** ಎಂಬ ಒಂಭತ್ತು ಭೇದಗಳವೆ ॥ ೨೧೭–೨೧೮–೨೧೯ ॥ ವ್ಯಾಸರು ತಮ್ಮ ನಾಲ್ಕುಮಂದಿ ಶಿಷ್ಯರಿಗೆ ನಾಲ್ಕು ವೇದಗಳನ್ನು ಸರ್ವ ಸಾಧಾರಣವಾಗಿ ಹೇಳಿ, ಈ ಭರತಖಂಡದಲ್ಲಿ ಪ್ರಸಿದ್ಧ ಮಾಡಿದರು. ॥ ೨೨೦ ॥

ಎಲೈ ಮಹೋನ್ಮತ್ತ ವಿಪ್ರರೇ, ಪೂರ್ವದಲ್ಲಿ ಈ ಭರತಖಂಡದಲ್ಲಿ ಜನರು ವರ್ಣಾಶ್ರಮ ಧರ್ಮಗಳಿಗೆ ಸರಿಯಾಗಿ ನಡೆದು ಪುಣ್ಯವಂತರಾಗಿದ್ದರು ॥ ೨೨೧ ॥ ಈ ಕಲಿಯುಗದಲ್ಲಿ ಬ್ರಾಹ್ಮಣರು ಸತ್ಕರ್ಮ ಮಾಡುವ ದನ್ನು ಬಿಟ್ಟು ಬಿಟ್ಟರು ಆ ಕರ್ಮಲೋಪದಿಂದ ಈ ಲೋಕದಲ್ಲಿ ವೇದಗಳು ನಿಶ್ಶಯುವಾಗಿ ಗುಪ್ತವಾದವು ॥ ೨೨೨ ॥ ಬ್ರಾಹ್ಮಣರು ಕರ್ಮಭ್ರಷ್ಟರಾಗಿ ಮ್ಲೇಂಛರ ಮುಂದ ವೇದಬೀಜಗಳನ್ನು ಹೇಳುತ್ತಿರುವರು. ಆದ್ದರಿಂದ ಅವರ ಸತ್ವವು ಹೋಗಿ, ಅವರು ಮಂದಮತಿಗಳಾದರು. ॥ ೨೨೩ ॥ ಪೂರ್ವದಲ್ಲಿಯು ಬ್ರಾಹ್ಮಣರು ವೇದಬಲದಿಂದ ದೊಡ್ಡ ಮಹತ್ವವನ್ನು ಹೊಂದಿ, ದೇವಸಮಾನರಾಗಿ ಮಹಾಸತ್ವವುಳ್ಳವರಾದ್ದರಿಂದ ಆವರಿಗೆ ಭೂದೇವರೆಂದೆ ನ್ನುತ್ತಿದ್ದರು. ॥ ೨೨೪ ॥ ಆದಕಾರಣ ಪೂರ್ವದಲ್ಲಿ ರಾಜರು ಕೂಡಾ ಬ್ರಾಹ್ಮಣರ ಚರಣ ಪೂಜೆಯನ್ನು ಮಾಡುತ್ತ

ಸರ್ವಸ್ವ ದಕ್ಷಿಣೆಯನ್ನು ಸಹ ಕೊಡುತ್ತಿದ್ದರು ಆದರೆ ಆ ಬ್ರಾಹ್ಮಣರು ಆ ದಕ್ಷಿಣೆಯನ್ನು ಸ್ವೀಕರಿಸುತ್ತಿದ್ದಿಲ್ಲ.॥೨೨೫॥ ಮತ್ತು ಆವರು ವೇದಬಲದಿಂದ ತ್ರೈಮೂರ್ತಿಗಳನ್ನು ಸಹ ತಮ್ಮ ವಶಮಾಡಿಕೊಳ್ಳುತ್ತಿದ್ದರು. ಆದ್ದರಿಂದ ಇಂದ್ರನೇ ಮೊದಲಾದ ದೇವತೆಗಳು ಬ್ರಾಹ್ಮಣರಿಗೆ ಅಂಜುತ್ತಿದ್ದರು ॥ ೨೨೬ ॥ ಆಗಿನ ಬ್ರಾಹ್ಮಣರ ಮಹಾ ವಾಕ್ಯವು ಕಾಮಧೇನು ಹಾಗು ಕಲ್ಪವೃಕ್ಷಗಳಿಗೆ ಸಮಾನವಾಗಿದ್ದವು. ಅವರು ವೇದ ಬಲದಿಂದ ಪರ್ವತವನ್ನು ತೃಣವಾವಾಗಿಯೂ ತೃಣವನ್ನು ಪರ್ವತವಾಗಿಯೂ ಮಾಡುತ್ತಿದ್ದರು. ॥ ೨೨೭ ॥ ಬ್ರಾಹ್ಮಣರಲ್ಲಿರುವ ವೇದಸತ್ವದಿಂದ ವಿಷ್ಣುವೂ ಸಹ ಬ್ರಾಹ್ಮಣರೇ ತನ್ನ ದೇವರೆಂದು ಪೂಜಿಸುತ್ತಿದ್ದನು. ॥ ೨೨೮ ॥

**ಶ್ಲೋಕ** ॥ ದೇವಾಧೀನಂ ಜಗತ್ಸರ್ವಂ ಮಂತ್ರಾಧೀನಂ ಚ ದೈವತಂ
ತೇಮಂತ್ರಾ ಬ್ರಾಹ್ಮಣಾಧೀನಾ ಬ್ರಾಹ್ಮಣೋ ಮಮದೈವತಂ ॥ ೨೨೯ ॥

**ಅರ್ಥ:—** ಈ ಜಗತ್ತೆಲ್ಲವೂ ದೇವಾಧೀನವು. ದೇವತೆಗಳು ಮಂತ್ರಾಧೀನರು. ಮಂತ್ರಗಳು ಬ್ರಾಹ್ಮಣರ ಆಧೀನವು ಆದ್ದರಿಂದ ಬ್ರಾಹ್ಮಣರೇ ನನ್ನ ದೇವರು. ಎಂದು ಪೂಜಿಸುತ್ತಿದ್ದನು.

ಎಲೈ ಬ್ರಾಹ್ಮಣರೇ, ಇಂಥ ಮಹತ್ವವು ಪೂರ್ವದ ಬ್ರಾಹ್ಮಣರಿಗೆ ಇತ್ತು. ಈಗಿನ ಬ್ರಾಹ್ಮಣರು ಒಳ್ಳೇ ರೀತಿಯಾದ ವೇದ ಮಾರ್ಗವನ್ನು ಬಿಟ್ಟು, ನೀಚರಾಗಿ, ಅನ್ಯಮಾರ್ಗದಲ್ಲಿ ಪ್ರವರ್ತರಾಗಿರುತ್ತಾರೆ. ॥ ೨೩೦ ॥ ಆದರಿಂದ ಅವರ ಸತ್ವವು ಭಂಗವಾಗಿ ಅವರು ಹೀನ ಜಾತಿಯವರ ಸೇವಾ ಮಾಡಹತ್ತಿದರು. ದುಡ್ಡು ತಕ್ಕೊಂಡು ವೇದ ವಿಕ್ರಯ ಮಾಡಿ ಅದನ್ನು ಭ್ರಷ್ಟ ಮಾಡುವರು. ॥ ೨೩೧ ॥ ಕೆಲವು ಮೂರ್ಖ ಬ್ರಾಹ್ಮಣರು ಹೀನ ಜಾತಿಯವರ ಮುಂದೆ ವೇದವನ್ನು ಅನ್ನುವರು. ಅಂಥವರ ಮುಖವನ್ನು ಸಹ ನೋಡಬಾರದು. ಅವರು ವೇದಗಳನ್ನು ಭ್ರಷ್ಟಮಾಡಿ ರಾಕ್ಷಸರಾಗುವರು. ॥ ೨೩೨ ॥ ಎಲೈ ವಿಪ್ರರೇ, ಮೇಲೆ ಹೇಳಿದಂತೆ ನಾಲ್ಕೂ ವೇದ

ಗಳಿಗೆ ಅನೇಕ ಶಾಖೆಗಳು ಅವೆ ಈಗ ಈ ಭೂಮಿಯಲ್ಲಿ ಅವುಗಳನ್ನು ತಿಳಿದವರಾರು ? ಎಲ್ಲವೂ ಗೌಪ್ಯವಾಗಿವೆ. ॥ ೩೩ ॥ ನೀವು ನಾಲ್ಕು ವೇದಗಳನ್ನು ಬಲ್ಲೆವೆಂದು ಜನರ ಸಂಗಡ ವಾದ ಮಾಡುತ್ತೀರಿ. ವೇದದ ಭೇದಗಳು ಅನಂತವಾಗಿವೆ. ಅವುಗಳನ್ನೆಲ್ಲ ನೀವು ತಿಳಿದಿರುವಿರ್ಯಾ ? ॥ ೩೪ ॥

ಈ ವಾದದಿಂದ ನಿಮಗೆ ಬರುವ ಲಾಭವೇನು ? ಬ್ರಾಹ್ಮಣರ ಕ್ಷೋಭ ಸಂಪಾದಿಸಬಾರದು. ಹೀಗೆ ಮಾಡೆಂದು ನಿಮಗೆ ಯಾರು ಹೇಳಿದರು ? ॥ ೩೫ ॥ ನೀವು ನಿಮ್ಮನ್ನು ನೀವೇ ಹೊಗಳಿಕೊಳ್ಳುವಿರಿ ಜಯಪತ್ರಗಳನ್ನು ತೋರಿಸುವಿರಿ ! ಈ ತ್ರಿವಿಕ್ರಮ ಭಾರತಿಗೆ ಜಯಪತ್ರವನ್ನು ಕೇಳುವಿರಿ ॥ ೩೬ ॥ ಈಗ ನೀವು ನನ್ನ ಮಾತನ್ನು ಕೇಳಿ ಇಲ್ಲಿಂದ ಹೊರಟು ಹೋಗಿರಿ ಸುಮ್ಮನೆ ಗರ್ವದಿಂದ ಉನ್ಮತ್ತರಾಗಿ ಪ್ರಾಣವನ್ನು ಕೊಡಬೇಡಿರಿ ॥ ೩೭ ॥ ಎಂದು ಶ್ರೀ ಗುರುಗಳು ಆ ಬ್ರಾಹ್ಮಣರಿಗೆ ಬುದ್ಧಿಯನ್ನೂ ಹಿತವನ್ನೂ ಹೇಳಿದರು ಅವರ ಮಾತು ಕೇಳದೆ ಆ ತಾಮಸಿ ಬ್ರಾಹ್ಮಣರು— ಸ್ವಾಮೀ, ನೀವೇ ವಾದಮಾಡಿರಿ ನಾವು ಒಂದು ವೇಳೆ ಇಲ್ಲಿ ವಾದ ಮಾಡದಿದ್ದರೆ ಹಾಗು ಜಯಪತ್ರ ತಕ್ಕೊಳ್ಳದ ಹಾಗೇ ಹೋದರೆ, ಜನರು ಆ ಯವನ ರಾಜನ ಹತ್ತಿರ ಹೋಗಿ ನಾವು ಸೋತೆವೆಂದು ಹೇಳುವರು ಆದರಿಂದ ನಮ್ಮ ಗೌರವವು ಹ್ಯಾಗೆ ಉಳಿದೀತು ? ಎಂದು ಅಂದರು. ॥೩೯॥

ಎಲೈ ನಾಮಧಾರಕನೇ, ಈ ಪ್ರಕಾರ ಆ ಮದೋನ್ಮತ್ತ ಬ್ರಾಹ್ಮಣರು ತಮ್ಮ ಹಿತವನ್ನು ತಿಳಿಯದೆ ಗುರುಗಳ ಬೋಧವನ್ನು ಕೇಳದೆ ಇದ್ದದರಿಂದ ಅವರಿಗೆ ವೃತ್ಯಾವು ನಿರ್ಮಿಸವಾಯಿತು ॥ ೪೦ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಹೇಳಿ ಮತ್ತೆ ಗುರುಚರಿತ್ರೆಯು ಕಾಮಧೇನು ಈ ವೇದ ವಿವರವನ್ನು ಕೇಳಿದರೆ ಮನಸ್ಸು ಸಮಾಧಾನವಾಗುವದೆಂದು ಹೇಳಿದನು. ॥ ೪೧ ॥ ಹೀಗೆ ಗುರುಚರಿತ್ರಾಮೃತದಲ್ಲಿ ನಾಲ್ಕೂ ವೇದಗಳ ಮತಿತಾರ್ಥವನ್ನು ಒಳ್ಳೇ ರೀತಿಯಿಂದ ಬಿಡಿಸಿ ತೋರಿಸಿರುತ್ತದೆ. ॥ ೪೨ ॥

ಇತಿ ಶ್ರೀ ಗುರುಚರಿತ್ರ ಪರಮಕಥಾ ಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ವೇದ ವಿಸ್ತಾರ ಕಥನಂ ನಾಮ ಷಡ್ತ್ರಿಂಶೋಽಧ್ಯಾಯಃ || ೩೬ || ಶ್ರೀ ಗುರುದೇವದತ್ತ ||

— ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು :-·-

— ೩೬ನೇ ಅಧ್ಯಾಯ ಸಮಾಪ್ತ —



# ೨೭ನೇಯ ಅಧ್ಯಾಯ



## — ಶ್ರೀಗುರುಗಳು ಮದೋನ್ಮತ್ತ ಬ್ರಾಹ್ಮಣರಿಗೆ ಶಾಪ ಕೊಟ್ಟು ಪತಿತನನ್ನು ಉದ್ಧರಿಸಿದ್ದು —

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಗ ಸರಸ್ವತೀ ಗಂಗಾಧರನು— ಶ್ರೋತ್ರುಗಳೇ ಕೇಳಿರಿ. ಆಮೇಲೆ ನಾಮಧಾರಕನು ಸಿದ್ಧರ ಚರಣಕ್ಕೆ ನಮಸ್ಕಾರ ಮಾಡಿ ವಿನಯದಿಂದ ಅನ್ನುತ್ತಾನೆ— ॥ ೧ ॥ ಜಯ ಜಯ ಸಿದ್ಧ ಯೋಗಿಗಳೇ, ನೀವು ಈ ಜಗತ್ತಿನಲ್ಲಿ ನಮ್ಮ ಉದ್ಧಾರಕರು. ನನಗೆ ಜ್ಞಾನಪ್ರಕಾಶವನ್ನುಂಟು ಮಾಡಲಿಕ್ಕೆ ಈ ದಿನ ತಾವು ದರ್ಶನ ಕೊಟ್ಟಿರಿ ॥ ೨ ॥ ಸ್ವಾಮೀ, ಶ್ರೀಗುರುಗಳು ಆ ಮದೋನ್ಮತ್ತ ಬ್ರಾಹ್ಮಣರಿಗೆ ನಾಲ್ಕು ವೇದಗಳನ್ನು ವಿಸ್ತಾರವಾಗಿ ಹೇಳಿದ್ದನ್ನು ಕೇಳಿದೆನು. ಆದರೆ ಮುಂದೆ ಕಥೆಯು ಹ್ಯಾಗೆ ವರ್ತಿಸಿದೆಂಬದನ್ನು ದಯಮಾಡಿ ನನಗೆ ವಿಸ್ತಾರವಾಗಿ ಹೇಳಬೇಕೆಂದು ಬೇಡಿಕೊಂಡನು. ॥ ೩ ॥ ಆಗ ಸಿದ್ಧರು-- ಎಲೈ ನಾಮಧಾರಕನೇ, ಗುರುಮಹಿಮೆಯು ಅನುಪಮವಾಗಿದೆ. ॥ ೪ ॥ ಶ್ರೀಗುರುಗಳು ಆ ವಿಪ್ರರಿಗೆ ಹಿತವಾಗುವಂತೆ ಅನೇಕ ರೀತಿಯಿಂದ ಹೇಳಿದರೂ ಆ ತಾಮಸಿಗಳು ಕೇಳದೆ ನೀವೇ ವಾದವನ್ನಾದರೂ ಮಾಡಿರಿ ಅಥವಾ ಜಯಪತ್ರವನ್ನಾದರೂ ಕೊಡಿರಿ ಎಂದು ಕೇಳಿದರು. ॥ ೫ ॥ ಅವರ ಮಾತು ಕೇಳಿ ಶ್ರೀಗುರುಗಳು ಸಿಟ್ಟಿಗೆ ಬಂದು-- ಎಲೈ ವಿಪ್ರರೇ, ನಿಮ್ಮ ಮನಸ್ಸು ಹ್ಯಾಗಿರುವದೋ ಹಾಗೆ ನಿಮಗೆ ಸಿದ್ಧಿಯಾಗುವದು ಎಂದು ಹೇಳಿದರು ॥ ೬ ॥ ಹಾವಿನ ಬಿಲದಲ್ಲಿ ಇಲಿಯು ತಾನಾಗಿಯೇ ಹೊಕ್ಕು ಮೃತ್ಯುವಿಗ ಈಡಾಗುವಂತೆಯೂ, ಪತಂಗವು ದೀಪದಮೇಲೆ ಬಿದ್ದು ಸಾಯುವಂತೆಯೂ, ಆ ಮದೋನ್ಮತ್ತರಾದ ವಿಪ್ರರು ಮಂದಬುದ್ಧಿಯಿಂದ ಶ್ರೀ ಗುರುಮಹಿಮೆಯನ್ನರಿಯದೆ ಸೊಕ್ಕಿನಿಂದ ದಿವಾಂಧರಾಗಿ ಆತ್ಮಘಾತ ಮಾಡಿಕೊಂಡರು. ॥ ೭ ॥ ಈ ಪ್ರಕಾರ ನಡೆದಿರುವಷ್ಟರಲ್ಲಿ ಶ್ರೀ ಗುರುಗಳು ದೂರದಲ್ಲಿ ಹೋಗುವ ಒಬ್ಬ ಮನುಷ್ಯನನ್ನು

ನೋಡಿ, ತಮ್ಮ ಒಬ್ಬ ಶಿಷ್ಯನನ್ನು ಕರೆದು— ಆಕೋ, ಆ ದಾರಿಯಲ್ಲಿ ಯಾವನೋ ಹೋಗುತ್ತಾನೆ, ಅವನನ್ನು ಕರೆ ಎಂದು ಹೇಳಿದರು. ॥ ೯ ॥ ಆಗ ಶಿಷ್ಯನು ಓಡಿ ಹೋಗಿ ಆ ಮನುಷ್ಯನನ್ನು ಒದರಿ ಕರೆದು ಗುರುಗಳ ಹತ್ತರ ಕರಕೊಂಡು ಬಂದನು. ॥ ೧೦ ॥ ಆಗ ಗುರುಗಳು ಅವನಿಗೆ— ಎಲೈ ನೀನು ಯಾವ ಜಾತಿಯವನು ? ನಿನ್ನ ಎಲ್ಲ ಸಂಗತಿಯನ್ನು ನಮಗೆ ಹೇಳು ಎಂದು ಕೇಳಿದರು. ॥ ೧೧ ॥ ಆಗ ಅವನು— ಸ್ವಾಮೀ, ನಾನು ಜಾತಿಹೀನನಾದ ಮಾತಂಗನೆಂಬವನು ನಾನು ಈ ಊರ ಹೊರಗೆ ಇರುತ್ತೇನೆ ॥ ೧೨ ॥ ತಾವು ಸರ್ವ ಪ್ರಾಣಿಗಳಲ್ಲಿ ಕೃಪೆ ಮಾಡುವವರಾದ್ದರಿಂದ ಪ್ರೀತಿಯಿಂದ ನನ್ನನ್ನು ಕರೆಸಿರುವಿರಿ. ಇನ್ನು ನಾನು ಉದ್ಧಾರವಾದೆನು ಎಂದು ಸಾಷ್ಟಾಂಗ ನಮಸ್ಕಾರ ಮಾಡಿದನು ॥ ೧೩ ॥ ಈ ಪ್ರಕಾರ ದಯಶಾಲಿಗಳೂ ಪರಮ ಪುರುಷರೂ ಆದ ಶ್ರೀ ಗುರುಗಳು ಅವನನ್ನು ಅಮೃತ ದೃಷ್ಟಿಯಿಂದ ನೋಡಿದರು ಸ್ಪರ್ಶಮಣಿಯು ತಾಕಿದ ಕೂಡಲೇ ಲೋಹವು ಸುವರ್ಣವಾಗಲಿಕ್ಕೆ ತಡವಾದೀತೇ ? ॥ ೧೪ ॥ ಅದರಂತೆ ಶ್ರೀ ನರಹರಿ ಗುರುಗಳು ಅವನ ಮೇಲೆ ದಯೆ ತೋರಿಸಿ ಒಬ್ಬ ಶಿಷ್ಯನ ಕೈಯಲ್ಲಿ ತಮ್ಮ ಯೋಗದಂಡವನ್ನು ಕೊಟ್ಟು ಅದರಿಂದ ಏಳು ಗೆರೆಗಳನ್ನು ತೆಗೆಯಿಸಿದರು ॥ ೧೫ ॥ ಆಮೇಲೆ ಅವರು— ಎಲೈ ಪತಿತನೇ, ನೀನು ಒಂದೊಂದೇ ಗೆರೆಯನ್ನು ದಾಟಿ ದಾಟಿ ಒಂದು ನಿನ್ನ ಸಂಗತಿಯನ್ನು ಹೇಳು ಎಂದರು ಆಗ ಅವನು ಮೊದಲನೇ ಗೆರೆಯನ್ನು ದಾಟಿ ಬರಲು ಅವನು ಮೊದಲಿಗಿಂತ ಹೆಚ್ಚಿಗೆ ಜ್ಞಾನವಂತನಾದನು ॥ ೧೬ ॥ ಆಗ ಗುರುಗಳು— ಎಲೈ ನೀನು ಯಾವ ಕುಲದಲ್ಲಿ ಹುಟ್ಟಿರುತ್ತೀ ಅನ್ನಲು ಅವನು— ಸ್ವಾಮೀ, ನಾನು ಕಿರಾತ ಕುಲದಲ್ಲಿ ಹುಟ್ಟಿರುವೆನು ನನ್ನ ಹೆಸರು 'ವನರಾಖಾ' ಎಂದು ಹೇಳಿದನು ॥ ೧೭ ॥ ಆಮೇಲೆ ಅವನು ೨ನೇ ಗೆರೆಯನ್ನು ದಾಟಿ ಬರಲು ಅದಕ್ಕೂ ಹೆಚ್ಚಿಗೆ ಜ್ಞಾನವಂತನಾಗಿ ಅನೇಕ ವಾರ್ತೆಗಳನ್ನು ಹೇಳುವದನ್ನು ಕೇಳಿ ಜನರು ವಿಸ್ಮಿತರಾದರು ॥ ೧೮ ॥ ಆಮೇಲೆ ಅವನು ೩ನೇ ಗೆರೆಯನ್ನು ದಾಟಿ ಬರಲು ಅವನಿಗೆ ಪೂರ್ವಜನ್ಮದ ಜಾತಿಸ್ಮರಣ ಉಂಟಾಗಿ— ಸ್ವಾಮೀ, ನಾನು ನಿಶ್ಚಯವಾಗಿ ಗಂಗಾಪುತ್ರನು. ಗಂಗಾತೀರದಲ್ಲಿ ಇರುವೆನು ಎಂದು ಹೇಳಿ ॥ ೧೯ ॥ ಆಮೇಲೆ ಅವನು ೪ನೇ ಗೆರೆಯನ್ನು

ದಾಟಿ ಬಂದು— ಸ್ವಾಮೀ, ನಾನು ಶೂದ್ರ ಜಾತಿಯವನು. ನಾನು ನನ್ನ ಹೊಲಕ್ಕೆ ಹೋಗುತ್ತಿದ್ದೆನು. ಈಗ ತಾವು ಕರೆದದ್ದರಿಂದ ಬಂದೆನು ಎಂದು ಹೇಳಿದನು. ‖ ೨೦ ‖ ಆಮೇಲೆ ೫ನೇ ಗೆರೆಯನ್ನು ದಾಟಿ ಬರಲು ಅವನು ಹಿಂದಿನಕ್ಕಿಂತ ಹೆಚ್ಚು ಜ್ಞಾನವಂತನಾಗಿ— ಸ್ವಾಮೀ, ನಾನು ವೈಶ್ಯ ಕುಲದಲ್ಲಿ ಹುಟ್ಟಿರುವೆನು. ನನ್ನ ಹೆಸರು ಸೋಮದತ್ತನು ಎಂದು ಹೇಳಿ ‖ ೨೧ ‖ ಆಮೇಲೆ ೬ನೇ ಗೆರೆಯನ್ನು ದಾಟಿ ಬಂದು— ಸ್ವಾಮೀ, ನಾನು ಶ್ರೇಷ್ಠವಾದ ಕ್ಷತ್ರಿಯ ಜಾತಿಯವನು. ನನಗೆ ಗೋದಾವರಿ ಎಂಬ ಪ್ರಖ್ಯಾತವಾದ ಹೆಸರಿದೆ ಎಂದು ಹೇಳಿ ‖ ೨೨ ‖ ೭ನೇ ಗೆರೆಯನ್ನು ದಾಟಿ ಬಂದು— ಸ್ವಾಮೀ, ನಾನು ಶ್ರೇಷ್ಠ ಜಾತಿಯ ಬ್ರಾಹ್ಮಣನು. ನನಗೆ ವೇದಶಾಸ್ತ್ರ ವ್ಯಾಕರಣಾದಿಗಳು ಬರುವವು. ನನಗೆ ಅಧ್ಯಾಪಕನೆಂಬ ಹೆಸರು ಎಂದು ಹೇಳಿದನು. ‖ ೨೩ ‖ ಆಗ ಶ್ರೀ ಗುರುಗಳು— ಎಲೈ, ನೀನು ವೇದಶಾಸ್ತ್ರಗಳನ್ನು ಅಭ್ಯಾಸ ಮಾಡಿರುವೆನೆಂದೆನ್ನುತ್ತೀ ಅಂದಮೇಲೆ ವಾದ ಮಾಡಲಿಕ್ಕೆ ಬಂದಂಥ ಈ ಇಬ್ಬರು ಬ್ರಾಹ್ಮಣರೊಡನೆ ವಾದ ಮಾಡು. ‖ ೨೪ ‖ ಎಂದು ವಿಭೂತಿಯನ್ನು ಮಂತ್ರಿಸಿ ಅವನ ಸರ್ವಾಂಗದ ಮೇಲೆ ಪ್ರೋಕ್ಷಿಸಲು ಅವನಲ್ಲಿ ಜ್ಞಾನಜ್ಯೋತಿಯು ಕಾಣಹತ್ತಿ ಮಾನಸಸರೋವರಕ್ಕೆ ಹೋದ ಕಾಗೆಯು ಕೂಡಲೇ ರಾಜಹಂಸವಾಗುವಂತೆ— ಶ್ರೀ ಗುರುಗಳ ಹಸ್ತದಿಂದ ಬಂದ ಭಸ್ಮವು ಅವನಿಗೆ ತಗಲಿದ ಕೂಡಲೇ ಅವನು ಅತ್ಯಂತ ಜ್ಞಾನಗಳ ರಾಶಿಯುಳ್ಳವನಾದನು. ‖ ೨೫–೨೬ ‖ ಎಲೈ ನಾಮಧಾರಕನೇ, ತ್ರೈಮೂರ್ತಿ ಅವತಾರವಾದಂಥ, ಜಗದ್ಗುರುವಾದಂಥ ನರಸಿಂಹ ಸರಸ್ವತಿ ಸ್ವಾಮಿಗಳಿಗೆ ಯಾವ ಅಜ್ಞಾನಿ ಜನರು ಮನುಷ್ಯರೆಂದೆನ್ನುತ್ತಾರೋ, ಅವರು ಅಧೋಗತಿಯನ್ನು ಹೊಂದುತ್ತಾರೆ ‖ ೨೭ ‖ ಇರಲಿ, ಈ ರೀತಿಯಿಂದ ಆ ಪತಿತನು ಅತ್ಯುತ್ತಮ ಜ್ಞಾನವಂತನಾಗಿ ಶ್ರೀ ಗುರುಗಳ ಅಪ್ಪಣೆಯಂತೆ ಸಾಂಗೋಪಾಂಗವಾಗಿ ವೇದ ಶಾಸ್ತ್ರಗಳನ್ನು ಅನ್ನಹತ್ತಿದನು. ‖ ೨೮ ‖ ಆಗ ವಾದಕ್ಕೆ ಬಂದ ಆ ಮದೋನ್ಮತ್ತ ವಿಪ್ರರು ಅತ್ಯಂತ ಭಯವನ್ನು ಹೊಂದಲು ಅವರ ನಾಲಿಗೆಯು ಶೀಳಿ ಕಿವುಡರಾಗಿ ಕೂಡಲೇ ಹೃದಯ ಶೂಲಿಯುಳ್ಳವರಾದರು. ‖ ೨೯ ‖ ಆಗ ಅವರು ಥರ ಥರ ನಡುಗುತ್ತ ಶ್ರೀಗುರುಚರಣಗಳಲ್ಲಿ ಬಿದ್ದು ಹೊರಳಾಡುತ್ತ— ಜಗಜ್ಯೋತಿ ಸ್ವರೂಪ ಸ್ವಾಮಿಯೇ

ಇನ್ನು ನಮ್ಮ ಗತಿ ಏನು ? ನಾವು ಗುರುದ್ರೋಹಿಗಳಾದೆವು ಮತ್ತು ಅನೇಕ ಬ್ರಾಹ್ಮಣರನ್ನು ತಿರಸ್ಕರಿಸಿದೆವು. ತಾವು ಸಾಕ್ಷಾತ್ ಈಶ್ವರನ ಅವತಾರವೇ ಆಗಿರುವಿರಿ. ॥ ೩೧ ॥ ಮಾಯಾಪಾಶದಿಂದ ಕೂಡಿದವರಾದ ನಾವು ಮದೋನ್ಮತ್ತರಾಗಿ ತಮ್ಮ ಸ್ವರೂಪವನ್ನು ತಿಳಿಯಲಿಲ್ಲ. ಆದ್ದರಿಂದ ಸ್ವಾಮೀ ನಮ್ಮನ್ನು ಕ್ಷಮಿಸಿರಿ. ॥ ೩೨ ॥ ಸ್ವಾಮೀ ನೀವು ಸರ್ವ ಪ್ರಾಣಿಗಳ ಮೇಲೆ ದಯೆ ಮಾಡುವವರಾಗಿದ್ದು ನಮ್ಮ ದೋಷಗಳನ್ನು ಮನಸ್ಸಿನಲ್ಲಿ ಹಿಡಿಯದೆ ನಮಗೆ ಸದ್ಗತಿಯನ್ನು ದಯಪಾಲಿಸಿರಿ ಎಂದು ಅವರ ಚರಣಕ್ಕೆ ನಮಸ್ಕರಿಸಿ— ॥ ೩೩ ॥ ಸ್ವಾಮೀ ನೀವು ಒಂದು ಸಮಯದಲ್ಲಿ ಲೀಲೆಯಿಂದ ಪರ್ವತವನ್ನು ತೃಣವನ್ನಾಗಿ ಮಾಡುವಿರಿ ಒಂದು ವೇಳೆ ನೀವು ಸಿಟ್ಟಿನಿಂದ ಆ ಪರ್ವತವನ್ನು ನೋಡಿದರೆ ಅದು ನಿಶ್ಚಯವಾಗಿ ಭಸ್ಮವಾಗುವದು. ॥ ೩೪ ॥ ತ್ರೈಮೂರ್ತಿ ಸ್ವರೂಪರಾದ ಜಗದ್ಗುರುವೇ, ಸೃಷ್ಟಿಯನ್ನು ರಚಿಸುವವರೂ, ಅದನ್ನು ರಕ್ಷಿಸುವವರೂ ಕಡೆಗೆ ಪ್ರಳಯವನ್ನುಂಟು ಮಾಡಿ ನಾಶಮಾಡುವವರೂ ನೀವೇ ಆಗಿರುವಿರಿ ॥ ೩೫ ॥ ನಿಮ್ಮ ಮಹಿಮೆಯನ್ನು ವರ್ಣಿಸಲು ನಮಗೆ ಬುದ್ಧಿಯು ಸಾಲದು ಶರಣಾಗತರನ್ನು ರಕ್ಷಿಸಿ ವರ ಕೊಡುವವನೇ ದೀನರಾದ ನಮ್ಮನ್ನು ಉದ್ಧರಿಸಬೇಕೆಂದು ಅವರ ಚರಣಕ್ಕೆ ವಂದಿಸಿದರು ॥ ೩೬ ॥ ಆಗ ಶ್ರೀ ಗುರುಗಳು ಈ ಪ್ರಕಾರ ಅವರ ವಿನಂತಿಯನ್ನು ಕೇಳಿ— ಎಲೈ ವಿಪ್ರರೇ, ನೀವು ತ್ರಿವಿಕ್ರಮ ಭಾರತಿಯನ್ನು ಸಿಟ್ಟಿಗೆಬ್ಬಿಸಿದಿರಿ ॥ ೩೭ ॥ ಮತ್ತು ಎಲ್ಲ ಬ್ರಾಹ್ಮಣರನ್ನು ನಿಂದಿಸಿ ಮಹಾ ದೋಷವನ್ನು ಕಟ್ಟಿಕೊಂಡಿರಿ. ಆದ್ದರಿಂದ ಈಗ ನೀವು ಕೂಡಲೇ ಬ್ರಹ್ಮರಾಕ್ಷಸರಾಗಿ ನಿಮ್ಮ ಕರ್ಮದ ಫಲವನ್ನು ಅನುಭವಿಸಿರಿ. ॥ ೩೮ ॥ ಪ್ರತಿಯೊಬ್ಬರು ತಾವು ಮಾಡಿದ ಪಾಪ ಪುಣ್ಯಗಳಿಗೆ ತಕ್ಕಂತೆ ಆ ಫಲವನ್ನು ಅನುಭವಿಸಲೇಬೇಕು ಪಾಪ ಕರ್ಮಕ್ಕೆ ಪ್ರಾಯಶ್ಚಿತ್ತ ಆಗದ ಹೊರತು ಸದ್ಗತಿಯಾಗಲಾರದು. ಎಂದು ಹೇಳಿದರು. ॥ ೩೯ ॥ ಶ್ರೀ ಗುರುಗಳ ಮಾತು ಕೇಳಿ ಆ ಬ್ರಾಹ್ಮಣರು ಅವರ ಚರಣಕ್ಕೆ ನಮಸ್ಕಾರ ಮಾಡಿ— ಸ್ವಾಮೀ ನಾವು ಈ ಭವಸಾಗರದಿಂದ ಎಂದು ಉದ್ಧಾರವಾದೇವು ? ಹೇಳಿರಿ ಎಂದು ವಿನಂತಿ ಮಾಡಿಕೊಂಡರು. ॥ ೪೦ ॥ ಆಗ ಕೃಪಾಮೂರ್ತಿಗಳಾದ ಶ್ರೀ ಗುರುಗಳು— ಎಲೈ ವಿಪ್ರರೇ, ನೀವು ಹನ್ನೆರಡು ವರ್ಷ

ಗಳ ವರೆಗೆ ಬ್ರಹ್ಮರಾಕ್ಷಸರಾಗಿರಿ || ೪೧ || ಆದರೆ ಈಗ ನೀವು ಅನುಪ್ತರಾದ ಕಾರಣ, ಶುಕ್ಲನಾರಾಯಣ ಮಂತ್ರದ ಪ್ರಥಮ ವಾಕ್ಯವನ್ನು ಮೇಲಿಂದಮೇಲೆ ಅನ್ನುತ್ತ ಶಾಂತಚಿತ್ತರಾಗಿರುವಿರಿ || ೪೨ || ನೀವು ಪಾಪ ದಿಂದ ಮುಕ್ತರಾಗಿ ಶುದ್ಧರಾದಮೇಲೆ ಅನೇಕ ಜನ್ಮಗಳನ್ನು ತಿರುಗುತ್ತ ತಿರುಗುತ್ತ ಮತ್ತೆ ಬ್ರಾಹ್ಮಣರಾಗುವಿರಿ. ಆಮೇಲೆ ಮುಂದಿನ ವಾಕ್ಯವನ್ನು ಅನ್ನುವದರಿಂದ ನಿಮ್ಮ ಉದ್ಧಾರವಾಗುವದು. || ೪೩ || ಈಗ ನೀವು ನದಿಗೆ ಹೋಗಿರಿ ನಿಮ್ಮ ವಾಸಕ್ಕೆ ಅದು ಉತ್ತಮ ಸ್ಥಾನವಾಗಿದೆ ಎಂದು ಹೇಳಿದರು ಈ ಪ್ರಕಾರ ಗುರುಗಳಿಂದ ನಿರೋಪ ವನ್ನು ಹೊಂದಿ ಆ ಬ್ರಾಹ್ಮಣರು ಹೊರಟರು || ೪೪ || ಆ ಊರ ಹೊರಗೆ ಹೋಗಲು ಅವರಿಗೆ ಅಪರಂಪಾರ ಹೃದಯ ಶೂಲಿ ಎದ್ದು ಅವರು ನದೀ ಸಮೀಪಕ್ಕೆ ಹೋದಕೂಡಲೇ ಮರಣವನ್ನು ಹೊಂದಿದರು. || ೪೫ || ಎಲೈ ನಾಮಧಾರಕನೇ ತಾವು ಮಾಡಿದ ಪಾಪ-ಕರ್ಮಕ್ಕೆ ಬೇರೆ ಪ್ರಾಯಶ್ಚಿತ್ತವೇ ಇಲ್ಲ ಈ ಪ್ರಕಾರ ತಾಮಸಿಗಳಾದ ಆ ವಿಪ್ರರು ತಮ್ಮಷ್ಟಕ್ಕೆ ತಾವೇ ಆತ್ಮಘಾತಮಾಡಿಕೊಂಡರು || ೪೬ || ಗುರುವಚನವು ನಿಶ್ಚಯವಾಗಿ ಎಂದೂ ಸುಳ್ಳಾಗುವದಿಲ್ಲ ಅವರ ಮಾತಿನಂತೆ ಆ ಬ್ರಾಹ್ಮಣರು ಬ್ರಹ್ಮರಾಕ್ಷಸರಾಗಿ ೧೨ ವರ್ಷಗಳಾದಮೇಲೆ ಸದ್ಗತಿಯನ್ನು ಹೊಂದಿದರು || ೪೭ || ಎಲೈ ಶ್ರೋತೃಗಳೇ, ಇತ್ತ ಶ್ರೀ ಗುರುಗಳು ಆ ಬ್ರಾಹ್ಮಣರನ್ನು ನದಿಗೆ ಕಳಿಸಿದಮೇಲೆ ಮುಂದೆ ಕಥೆಯು ಹ್ಯಾಗೆ ನಡೆಯಿತೆಂಬದನ್ನು ಸಿದ್ಧರು ನಾಮಧಾರಕನಿಗೆ ಹೇಳುತ್ತಾರೆ ಕೇಳಿರಿ || ೪೮ || ಎಲೈ ನಾಮಧಾರಕನೇ ಶ್ರೀ ಗುರುಗಳ ಅನುಗ್ರಹದಿಂದ ಆ ಪತಿತನು ಮಹಾ ಜ್ಞಾನಿಯೂ, ಏಳು ಜನ್ಮಗಳ ಸ್ಮರಣೆಯುಳ್ಳ ವನೂ ಆಗಿ ತಾನು ಮೊದಲಿನಿಂದಲೂ ಬ್ರಾಹ್ಮಣನೆಂದು ನಿಶ್ಚಯ ಮಾಡಿಕೊಂಡು || ೪೯ || ಭಕ್ತಿಯಿಂದ ಶ್ರೀ ಗುರುಚರಣಕ್ಕೆ ನಮಸ್ಕಾರ ಮಾಡಿ ವಿನಯದಿಂದ— ಸ್ವಾಮೀ, ಅಜ್ಞಾನವೆಂಬ ಕತ್ತಲೆಗೆ ಜ್ಯೋತಿ ಸ್ವರೂಪ ರಾದ ಜಗದ್ಗುರುವೇ || ೫೦ || ಅಂತರ ಸಾಕ್ಷಿಯಾದ ತ್ರಿಕಾಲಜ್ಞಾನಿಗಳೇ, ನಾನು ಪೂರ್ವದಲ್ಲಿ ಬ್ರಾಹ್ಮಣನಿದ್ದು ಈಗ ನಾನು ಜಾತಿಹೀನನು ಹ್ಯಾಗಾದೆನೆಂಬದನ್ನೂ ಮತ್ತು ನಾನು ಜನ್ಮಾಂತರದಲ್ಲಿ ಮಹಾ ದೋಷಯುಕ್ತವಾದ ಯಾವ ಪಾಪಗಳನ್ನು ಮಾಡಿದ್ದಕ್ಕೆ ಶ್ರೀ ಶಂಕರನು ಸಿಟ್ಟಾದನೆಂಬದನ್ನೂ ನರಸಿಂಹ ಸರಸ್ವತಿ-ಸ್ವಾಮಿಗಳಾದ

ತಾವು ನನಗೆ ವಿಸ್ತಾರವಾಗಿ ಹೇಳಬೇಕು ಎಂದನು. ॥ ೫೨ ॥ ಆಗ ಅವನ ಮಾತು ಕೇಳಿ ಶ್ರೀ ಗುರುಗಳು ಆವನಿಗೆ ಪ್ರಕಾಶವಾಗಿ ಉತ್ತರವನ್ನು ಹೇಳಹತ್ತಿದರೆಂದು ಸಿದ್ಧರು ನಾಮಧಾರಕನಿಗೆ ಹೇಳಿದರು. ॥ ೫೩ ॥ ಎಂದು ಸರಸ್ವತೀ ಗಂಗಾಧರನು ಆದನ್ನು ಶ್ರೋತೃಗಳಿಗೆ ವಿಸ್ತಾರವಾಗಿ ಹೇಳಿ— ಮುಂದಿನ ಕಥೆಯನ್ನು ಕೇಳುವಂಥವನು ಎಂಥ ಪಾಪಿಷ್ಠನಾದರೂ ಬ್ರಹ್ಮಜ್ಞಾನಿಯಾಗುವನು. ॥ ೫೪ ॥ ಈ ಪ್ರಕಾರ ಪುಣ್ಯಪಾವನವಾದ ಕಥೆಯನ್ನು ಕೇಳಿದರೆ ಅನಾಥರು ಉದ್ಧಾರರಾಗಿ ನಿಶ್ಚಯವಾಗಿ ಚತುರ್ವಿಧ ಪುರುಷಾರ್ಥಗಳನ್ನು ದೊರಕಿಸುವರು ॥ ೫೫ ॥ ಎಂದನು.

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಮದೋನ್ಮತ್ತ ವಿಪ್ರಶಾಪ ಕಥನಂ ಪತಿತೋದ್ಧಾರಣಂ ನಾಮ ಸಪ್ತವಿಂಶೋಧ್ಯಾಯಃ ॥ ೨೭ ॥ ಶ್ರೀ ಗುರುದೇವದತ್ತ.

—: ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು :—

ಶ್ರೀ ಗುರು ದತ್ತಾತ್ರೇಯ ಶ್ರೀಪಾದ ಶ್ರೀ ವಲ್ಲಭ ನರಸಿಂದ ಸರಸ್ವತಿದೇವೇಭ್ಯೋನಮಃ.

**— ೨೭ನೇ ಅಧ್ಯಾಯ ಸಮಾಪ್ತ —**

# ೨೮ನೇಯ ಅಧ್ಯಾಯ

## ಕರ್ಮವಿಪಾಕ ಕಥನ

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ ॥ ಆಮೇಲೆ ನಾಮಧಾರಕನು ಸಿದ್ಧರನ್ನು ಕುರಿತು— ಸ್ವಾಮೀ, ಸಿದ್ಧಮುನಿಗಳೇ, ಈ ರುಚಿಕರವಾದಂಥ ಗುರುಚರಿತ್ರೆಯನ್ನು ಕೇಳಿ ನನ್ನ ಮನಸ್ಸು ಉಲ್ಲಾಸಗೊಂಡಿರುವದು ಕಾರಣ ದಯಮಾಡಿ ಮುಂದಿನ ಚರಿತ್ರೆಯನ್ನು ಹೇಳಬೇಕೆಂದು ವಿನಂತೀ ಮಾಡಿಕೊಂಡನು. ॥ ೧ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ಮುಂದೆ ಕಥೆಯು ಅಲೌಕಿಕವಾಗಿರುತ್ತದೆ. ಅದನ್ನು ಕೇಳುತ್ತ ಹೋಗುವವನ ಸಮಸ್ತ ದೋಷಗಳು ಹೋಗಿ, ಅವನಿಗೆ ಒಳ್ಳೇ ಜ್ಞಾನವುಂಟಾಗುತ್ತದೆ ಕೇಳು. ॥ ೨ ॥

ಆಮೇಲೆ ಶ್ರೀ ಗುರುಗಳು ಆ ಪತಿತನನ್ನು ಕುರಿತು— ಎಲೈ, ನೀನು ನಿನ್ನ ಪೂರ್ವಜನ್ಮದ ಸಂಗತಿಯನ್ನು ಕೇಳುತ್ತೀ! ಚಾಂಡಾಲ ಜನ್ಮವು ಯಾಕೆ ಬರುತ್ತದೆಂಬದನ್ನು ಹೇಳುವೆನು ಕೇಳು. ॥ ೩ ॥ ಎಲ್ಲರೂ ತಮ್ಮ ಪಾಪ-ಪುಣ್ಯಗಳ ಫಲವನ್ನು ತಾವೇ ಅನುಭವಿಸುವರೆಂದು ಕರ್ಮವಿಪಾಕದಲ್ಲಿ ವಿಸ್ತಾರವಾಗಿ ಹೇಳಿದೆ. ಮತ್ತು ಪ್ರತಿಯೊಂದು ಜಾತಿಯವರು ನೀಚ ಹಾಗು ಶ್ರೇಷ್ಠ ಜಾತಿಯಲ್ಲಿ ಹುಟ್ಟುವ ಕಾರಣವನ್ನೂ ಹೇಳಿದೆ. ॥ ೪ ॥ ಬ್ರಾಹ್ಮಣರಿಂದ ಆರಂಭಮಾಡಿ ಚಾಂಡಾಲ ಜಾತಿಯವರಿಗೂ ಇರುವ ಪ್ರತಿಯೊಬ್ಬರು ತಾವು ಮಾಡಿದ ಕರ್ಮಾನುಸಾರವಾಗಿ ಹೀನ ಹಾಗು ಶ್ರೇಷ್ಠ ಜಾತಿಗಳಲ್ಲಿ ಹುಟ್ಟುವನು. ॥ ೫ ॥ ಬ್ರಾಹ್ಮಣ ಸ್ತ್ರೀಯಲ್ಲಿ ಶೂದ್ರನಿಂದ ಹುಟ್ಟಿದವನೇ ಚಾಂಡಾಲನಾಗುವನು. ಚಾಂಡಾಲರಲ್ಲಿ ೧೬ ಜಾತಿಗಳಿವೆ. ॥ ೬ ॥ ಬ್ರಾಹ್ಮಣಾದಿ ಚಾತುರ್ವರ್ಣದವರು ನಾನಾತರದ ದೋಷಗಳನ್ನು ಮಾಡಿ ಹೀನ ಜನ್ಮವನ್ನು ಹೊಂದುವರು. ॥ ೭ ॥ ಬ್ರಾಹ್ಮಣರು ಅನಾಚಾರಿಗಳಾ

ದರೆ ಅವರು ಮುಂದೆ ಹೀನ ಜಾತಿಗಳಲ್ಲಿ ಹುಟ್ಟುವರು. ಆ ದೋಷಗಳನ್ನು ವಿಸ್ತಾರವಾಗಿ ಹೇಳುವೆನು ಕೇಳು. ॥ ೮ ॥ ಗುರುವನ್ನೂ, ತಾಯಿ-ತಂದೆಗಳನ್ನೂ, ಕುಲಸ್ತ್ರೀಯನ್ನೂ ಬಿಟ್ಟವನಿಗೂ ॥ ೯ ॥ ಕುಲದೇವರನ್ನು ಬಿಟ್ಟು, ಬೇರೆ ಬೇರೆ ದೇವತೆಗಳನ್ನು ಪೂಜಿಸುವವನಿಗೂ ಸದಾ ಸುಳ್ಳಾಡುವವನಿಗೂ ॥ ೧೦ ॥ ಸದಾ ಜೀವ ಹಿಂಸಾ ಮಾಡುವವನಿಗೂ ಕನ್ಯಾವಿಕ್ರಯ, ಸುಳ್ಳು ಪ್ರಮಾಣಗಳನ್ನು ಮಾಡುವವರಿಗೂ ॥ ೧೧ ॥ ಸುಳ್ಳು ಸಾಕ್ಷಿ ಹೇಳುವಂಥ, ಶೂದ್ರನ ಕೈಯಿಂದ ಉಣ್ಣುವಂಥ ಅಶ್ವವಿಕ್ರಯ ಮಾಡುವಂಥ ಬ್ರಾಹ್ಮಣನಿಗೂ ಸದಾ ಶೂದ್ರ ಸಂಪರ್ಕ ಮಾಡುವವನಿಗೂ ॥ ೧೨ ॥ ಸದಾ ಶೂದ್ರ ಸ್ತ್ರೀ ಸಂಗ ಮಾಡುವಂಥ, ದಾಸಿಯರಿಂದ ತೊಳೆಯಲ್ಪಟ್ಟ ಭಾಂಡೆಗಳಲ್ಲಿ ದೇವ ಪಿತೃಕರ್ಮ ಮಾಡುವಂಥ ಬ್ರಾಹ್ಮಣನಿಗೂ, ॥ ೧೩ ॥ ಅಡವಿಗೆ ಬೆಂಕೀ ಹಚ್ಚುವ, ಆಕಳನ್ನೂ ಕರುವನ್ನೂ ಅಗಲಿಸಿ ದೂರ ಬೇರೆ ಬೇರೆಯಾಗಿ ಕಟ್ಟುವಂಥವರಿಗೂ, ॥ ೧೪ ॥ ತನ್ನ ತಾಯಿಯನ್ನು ಬಿಟ್ಟವನಿಗೂ, ಸದಾ ಮಕ್ಕಳನ್ನು ಹೊಡೆಯುವವನಿಗೂ, ತನ್ನ ಸತ್ತ್ವಾದಿಂದ ಆಪ್ತೇಷ್ಟರನ್ನು ಬಿಟ್ಟು ಬೇರೆಯಾಗಿರುವವನಿಗೂ ಚಾಂಡಾಲ ಜನ್ಮ ಬರುವದು. ॥ ೧೫ ॥ ಎತ್ತಿನಮೇಲೆ ಕೂಡ್ರುವಂಥ, ಹರ್ಷದಿಂದ ಶೂದ್ರಾನ್ನವನ್ನು ತಿನ್ನುವಂಥವರಿಗೂ, ॥ ೧೬ ॥ ತೀರ್ಥಗಳಿಗೆ ಹೋಗಿ ಶ್ರಾದ್ಧ ಮಾಡದಂಥ ಅಲ್ಲಿ ಪರಾನ್ನವನ್ನುಣ್ಣುವಂಥ, ಪರರಿಂದ ದಾನ ತಕ್ಕೊಳ್ಳುವಂಥ, ॥ ೧೭ ॥ ಷಟ್ಕರ್ಮಗಳನ್ನು ಬಿಟ್ಟಂಥ, ಕಪಿಲಾಧೇನುವಿನ ಹಾಲನ್ನು ದೇವರಿಗೆ ಅಭಿಷೇಕ ಮಾಡದೆ ತಾನೇ ಕುಡಿಯುವಂಥ ಬ್ರಾಹ್ಮಣನಿಗೆ ಚಾಂಡಾಲ ಜನ್ಮ ಬರುವದು. ॥ ೧೮ ॥ ಶಾಲಿಗ್ರಾಮವನ್ನು ಪೂಜಿಸುವಂಥ, ತುಳಸೀಪತ್ರವನ್ನು ಏರಿಸುವಂಥ ಶೂದ್ರನಿಗೆ ॥ ೧೯ ॥ ತಾಯಿ-ತಂದೆಗಳನ್ನು ಸೇವಿಸದೆ ಮತ್ತು ಅವರನ್ನು ರಕ್ಷಿಸದೆ ಇದ್ದವನಿಗೆ ಚಾಂಡಾಲ ಜನ್ಮವು ಬಂದು ಮುಂದೆ ಅವನು ಏಳು ಜನ್ಮಗಳವರೆಗೆ ಕ್ರಿಮಿಯಾಗಿ ಹುಟ್ಟುವನು. ॥ ೨೦ ॥ ಮೊದಲನೇ ಹೆಂಡತಿಯನ್ನು ಸುಮ್ಮಸುಮ್ಮನೆ ಬಿಟ್ಟು, ೨ನೇಯವಳನ್ನು ಮಾಡಿಕೊಂಡವನಿಗೂ ॥ ೨೧ ॥ ಬಹಳ ಶ್ರಮಬಟ್ಟ ಅತಿಥಿಯು ಮನೆಗೆ ಬರಲು ಅವನಿಂದ ವೇದವನ್ನು ಅನಿಸಿಕೊಂಡು ಅನ್ನ ಹಾಕುವವನಿಗೂ ॥ ೨೨ ॥ ಯೋಗ್ಯ ಬ್ರಾಹ್ಮಣರನ್ನು ನಿಂದಿಸುತ್ತ, ಬೇರೆ ಜಾತಿಯವರನ್ನು ಪೂಜಿಸುತ್ತ,

ಬ್ರಾಹ್ಮಣರ ವೃತ್ತಿಗಳನ್ನು ಹರಣಮಾಡುವಂಥವನಿಗೂ ‖ ೨೩ ‖ ಕೆರೆ–ಬಾವಿಗಳನ್ನು ಕೆಡಿಸಿ, ಪಡಿಸುವಂಥವನಿಗೂ ಶಿವಪೂಜೆಯನ್ನು ಬಿಟ್ಟವನಿಗೂ ಬಿಡಿಸುವವನಿಗೂ, ಬ್ರಾಹ್ಮಣರ ಮನೆಯನ್ನು ಮುರಿದವನಿಗೂ ‖ ೨೪ ‖ ಸ್ವಾಮಿ, ಗುರು, ಶತ್ರು, ಮಿತ್ರ ವಿಶ್ವಾಸಿಕ ಸ್ತ್ರೀಯರಲ್ಲಿ ವ್ಯಭಿಚಾರ ಮಾಡುವವನಿಗೂ, ಇಬ್ಬರು ಹೆಂಡರನ್ನು ಮಾಡಿಕೊಂಡು ಅವರಲ್ಲಿ ಪಕ್ಷಪಾತ ಮಾಡುವವನಿಗೂ, ಅಸ್ತಮಯದಲ್ಲಿ ಬಂದ ಅತಿಥಿಗೆ ಅನ್ನ ಹಾಕದವನಿಗೂ ‖ ೨೫ ‖ ತ್ರಿಸಂಧ್ಯೆಗಳಲ್ಲಿ ಊಟ ಮಾಡುವಂಥ ಅವಿವೇಕಿಯಾದ ಬ್ರಾಹ್ಮಣನಿಗೂ, ವಚನ ಕೊಟ್ಟು ತಿರುಗಿ ಬೀಳುವಂಥವನಿಗೂ ‖ ೨೬ ‖ ರಾಜನು ಕೊಟ್ಟ ಭೂದಾನವನ್ನು ಹರಣಮಾಡುವವನಿಗೂ, ಸಂಧ್ಯಾಕಾಲದಲ್ಲಿ ಮಲಗುವವನಿಗೂ ಚಾಂಡಾಲ ಜನ್ಮ ಬರುವದು. ‖ ೨೮ ‖ ವೈಶ್ವ ದೇವಕಾಲದಲ್ಲಿ ಬಂದ ಅತಿಥಿಗೆ ಅನ್ನ ಹಾಕದೆ ಕೆಟ್ಟ ಮಾತುಗಳನ್ನಾಡುವವನು ಕೋಳಿಯಾಗುವನು ‖ ೨೯ ‖ ಗಂಗಾತೀರ್ಥವನ್ನು ನಿಂದಿಸಿದವನಿಗೆ, ಏಕಾದಶಿಯಲ್ಲಿ ಊಟ ಮಾಡುವ ಬ್ರಾಹ್ಮಣನಿಗೆ ಒಡೆಯನನ್ನು ಯುದ್ಧದಲ್ಲಿ ಬಿಟ್ಟು ಓಡಿಬಂದವನಿಗೆ ‖೩೦‖ ಪರ್ವಕಾಲದಲ್ಲಿ ಹಾಗು ಏಕಾದಶಿ ಮತ್ತು ಶಿವರಾತ್ರಿ ದಿವಸ ಸ್ತ್ರೀಸಂಗ ಮಾಡುವವನಿಗೆ, ಶೂದ್ರನಿಗೆ ವೇದ ಕಲಿಸುವ ಬ್ರಾಹ್ಮಣನಿಗೆ ‖ ೩೧ ‖ ಮೃತ ತಿಥಿಯಲ್ಲಿ ಶ್ರಾದ್ಧ ಮಾಡದವನಿಗೆ ತಾನು ಮಾಡಿದಂಥ ಪುಣ್ಯವನ್ನು ಪ್ರಸಿದ್ಧ ಮಾಡುವವನಿಗೆ ಪಾಲು ಹಂಚುವಾಗ ಭೇದ ಮಾಡುವವನಿಗೆ ‖ ೩೨ ‖ ಗ್ರೀಷ್ಮಕಾಲದಲ್ಲಿ ಅರಣ್ಯದಲ್ಲಿ ಅರವಟ್ಟಿಗೆ ಇಟ್ಟಿರುವ ಜ್ಞಾನಿಯ ಕಾರ್ಯಕ್ಕೆ ವಿಘ್ನ ಮಾಡುವವನಿಗೆ ‖ ೩೩ ‖ ನಾಡಿಜ್ಞಾನವಿಲ್ಲದೆ ತಾನು ವೈದ್ಯನೆಂದು ಏನಾದರೂ ಔಷಧ ಕೊಟ್ಟು, ಮಹಾ ಪಾಪಿಯಾದವನಿಗೆ. ‖ ೩೪ ‖ ವೇದ ಮಾರ್ಗವನ್ನು ಬಿಟ್ಟು, ದುಷ್ಟ ಬುದ್ಧಿಯಿಂದ ಜಾರಣ, ಮಾರಣ, ಮೋಹನ ಮಂತ್ರಗಳನ್ನು ಜಪಿಸುವ ಬ್ರಾಹ್ಮಣನಿಗೆ ‖ ೩೫ ‖ ಶ್ರೀ ಗುರುವನ್ನು ಮನುಷ್ಯನೆಂದವರಿಗೆ, ಹರಿಹರರನ್ನು ನಿಂದಿಸಿ, ಅನ್ಯ ದೇವತೆಯನ್ನು ಪೂಜಿಸಿದವನಿಗೆ ಚಾಂಡಾಲ ಜನ್ಮ ಬರುವದು. ‖ ೩೬ ‖ ಬ್ರಾಹ್ಮಣಾದಿ ಚಾತುರ್ವರ್ಣದವರು ತಮ್ಮ ತಮ್ಮ ಜಾತ್ಯುಚಿತವಾದ ಕರ್ಮಗಳನ್ನು ಬಿಟ್ಟು, ಸದಾ ಬೇರೆ ಕರ್ಮ ಮಾಡುವವರಿಗೆ ಚಾಂಡಾಲ ಜನ್ಮ ಬರುವದು. ‖ ೩೭ ‖ ಶೂದ್ರನಿಂದ ಮಂತ್ರ ಕಲಿತ

ಬ್ರಾಹ್ಮಣನು ನಾಯಿಯ ಚರ್ಮದಲ್ಲಿ ನೀರು, ಹಾಲುಗಳನ್ನು ಹಾಕಿ ಕುಡಿದರೆ ಬರುವಷ್ಟು ಪಾಪಗಳನ್ನು ಹೊಂದುವನು. ‖ ೩೮ ‖ ವಿಧವಾ ಸಂಗ ಮಾಡುವವನು, ಅತಿಥಿಗೆ ಬೈಯುತ್ತ ಅನ್ನ ಹಾಕುವವನು, ಶ್ರಾದ್ಧದ ದಿವಸ ಪಿಂಡ ಮಾಡದವನು ಚಾಂಡಾಲನಾಗುವನು ‖ ೩೯ ‖ ಗುರು-ತಾಯ್ತಂದೆಗಳನ್ನು ದ್ವೇಷಿಸಿ, ನಿಂದಾ ಮಾಡುವವನು ಮೊದಲು ಚಾಂಡಾಲನಾಗಿ ಮುಂದೆ ಮತ್ತೆ ಬೇರೆ ಪಾಪ ಯೋನಿಗಳಲ್ಲಿ ಹುಟ್ಟುವನು. ‖ ೪೦ ‖ ಹರ್ಷದಿಂದ ಗುರು ನಿಂದಾ ಮಾಡುವವನು, ಮತ್ತು ಯಾವಾಗಲೂ ಬ್ರಾಹ್ಮಣರಲ್ಲಿ ದ್ವೇಷಮಾಡಿ, ಅವರಲ್ಲಿ ವೇದ ಚರ್ಚಾಮಾಡಿ ಅವರ ಅಪಮಾನ ಮಾಡುವವನು ಬ್ರಹ್ಮರಾಕ್ಷಸನಾಗುವನು ‖ ೪೧ ‖ ತಾನೊಂದು ದೇವರನ್ನು ಪೂಜಿಸುತ್ತ, ಅನ್ಯದೇವರನ್ನು ನಿಂದಿಸುವವನು ಅಪಸ್ಮಾರ ರೋಗವುಳ್ಳವನಾಗಿ ದರಿದ್ರನಾಗುವನು ‖ ೪೨ ‖ ಗುರು-ತಾಯ್ತಂದೆಗಳನ್ನು ಬಿಟ್ಟು, ಹೆಂಡತಿಯೊಡನೆ ಬೇರೆ ಸಂಸಾರ ಮಾಡಿಕೊಂಡಿರುವವನು ಮುಂದೆ ಬೇಡರ ಜಾತಿಯಲ್ಲಿ ಹುಟ್ಟಿ ರೋಗಿಯಾಗುವನು. ‖ ೪೩ ‖ ಸದಾ ವೇದ ಹಾಗು ಬ್ರಾಹ್ಮಣರನ್ನು ನಿಂದಿಸುತ್ತ ಕರ್ಮಭ್ರಷ್ಟನಾದವನು ಮೂತ್ರ ಕೃಚ್ಛ್ರರೋಗವುಳ್ಳವನಾಗುವನು ‖ ೪೪ ‖ ಜನರ ದುಷ್ಕರ್ಮಗಳನ್ನು ಸದಾ ಉಚ್ಚಾರ ಮಾಡುವವನು, ಹೃದಯರೋಗಿಯಾಗಿ ಅತಿ ಕಷ್ಟಪಡುವನು ‖ ೪೫ ‖ ಗರ್ಭಪಾತಮಾಡಿದ ಸ್ತ್ರೀಯು ಮುಂದೆ ಬಂಜೆಯಾಗಿ ಹುಟ್ಟುವಳು ಒಂದುವೇಳೆ ಆಕೆಗೆ ಮಕ್ಕಳಾದರೂ ಅವು ತೀವ್ರವಾಗಿ ಸತ್ತುಹೋಗುವವು, ಆದ್ದರಿಂದ ಗರ್ಭಪಾತ ಮಾಡಬಾರದು ‖ ೪೬ ‖ ಧರ್ಮಶಾಸ್ತ್ರ-ಪುರಾಣಗಳನ್ನು ಕೇಳದಂಥವನೂ ಬಹಳ ಉಣ್ಣುವವರನ್ನು ಕಂಡು ದೃಷ್ಟೀ ಬಿಡುವವನು ಕಿವುಡನಾಗಿ ಹುಟ್ಟುವನು ‖ ೪೭ ‖ ಪತಿತನ ಸ್ನೇಹಮಾಡಿ ಅವನಿಂದ ರಸ-ಔಷಧಗಳನ್ನು ತಕ್ಕೊಂಡವನು ಮೊದಲು ಕತ್ತೆಯಾಗಿ ಹುಟ್ಟಿ ಆಮೇಲೆ ಮೃಗ ಜನ್ಮವನ್ನು ಹೊಂದುವನು. ‖ ೪೮ ‖ ಬ್ರಹ್ಮಹತ್ಯಾ ಮಾಡಿದವನು ನಿಶ್ಚಯವಾಗಿ ಕ್ಷಯರೋಗಿಯಾಗುವನು, ಸುರಾಪಾನ ಮಾಡಿದವನು ಕರೀ ಹಲ್ಲುಳ್ಳವನಾಗುವನು. ‖ ೪೯ ‖ ಅಶ್ವ ಹಾಗು ಗೋವಧ ಮಾಡಿದವರು ಬಂಜೆಯಾಗಿ ಜ್ವರವುಳ್ಳವರಾಗುವರು, ಕೂಡಲೆ ಅನುತಾಪಬಟ್ಟರೆ ಆ ದೋಷ ಹೋಗುವದು. ‖ ೫೦ ‖ ವಿಶ್ವಾಸಘಾತ ಮಾಡಿದವರಿಗೆ ಅನ್ನ

ವಾಂತಿಯಾಗಿ ಅವನಿಗೆ ಅನ್ನವೇ ವೈರಿಯಾಗುವದು. || ೫೧ || ಒಬ್ಬರ ಸೇವಕನನ್ನು ಬಿಡಿಸಿ ಅವನನ್ನು ತಾವು ತಕ್ಕೊಂಡು ಹೋದವನು ಬಂಧಿತನಾಗಿ ಕಾರಾಗೃಹವನ್ನು ಭೋಗಿಸಬೇಕಾಗುವದು. || ೫೨ || ಹಾವನ್ನು ಕೊಂದವನು ನಿಶ್ಚಯವಾಗಿ ಹಾವಾಗಿ ಹುಟ್ಟುವನು, ಈ ಪ್ರಕಾರ ಅನೇಕ ದೋಷ ಅವೆ. ಇನ್ನು ಕಳವಿನ ಪ್ರಕರ್ಣವನ್ನು ಹೇಳುವೆನು ಕೇಳು. || ೫೩ ||

ಸ್ತ್ರೀಯರನ್ನು ಕದ್ದವನು ಮತಿಹೀನನಾಗಿ ಹುಟ್ಟಿ ಬಹಳ ಕಷ್ಟಬಟ್ಟು ಕಡೆಗೆ ನರಕಕ್ಕೆ ಹೋಗುವನು. || ೫೪ || ಬಂಗಾರವನ್ನು ಕದ್ದವನು ಪ್ರಮೇಹ ರೋಗಿಯಾಗುವನು. ಪುಸ್ತಕ ಕದ್ದವನು ಕುರುಡನಾಗುವರು. || ೫೫ || ವಸ್ತ್ರವನ್ನು ಕದ್ದವನು ಸ್ವಿತ್ರೀ (ಬಿಳುಪು) ರೋಗಿಯಾಗುವನು ಸಮುದಾಯದಿಂದ ಕೂಡಿಹಾಕಿದ ದ್ರವ್ಯವನ್ನು ಕದ್ದರೆ, ಗಂಡಮಾಲೆಯುಂಟಾಗುವದು || ೫೬ || ಶ್ವಾಸರೋಗವುಳ್ಳವನ ವಸ್ತುವನ್ನು ಕದ್ದವನು, ಮನೆಯಲ್ಲಿ ಯಾವಾಗಲೂ ಬಂಧನದಲ್ಲಿರುವನೆಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ. || ೫೭ || ಪರದ್ರವ್ಯ ಆದರಲ್ಲಿ ವಿಶೇಷವಾಗಿ ಪರದತ್ತಾಪಹಾರ ಮಾಡುವವರು ಪರರನ್ನು ದ್ವೇಶಿಸುವವರು ಅಪುತ್ರವಂತರಾಗಿ ಹುಟ್ಟುವರು. || ೫೮ || ಅನ್ನವನ್ನು ಕದ್ದವನು ಗುಲ್ಮರೋಗಿಯಾಗುವನು ಧಾನ್ಯವನ್ನು ಕದ್ದವನ ದೇಹವು ಕೆಂಪಗಾಗಿ ದುರ್ಗಂಧ ನಾರುವದು. || ೫೯ || ಎಣ್ಣೆಯನ್ನು ಕದ್ದವನು ದುರ್ಗಂಧ ಶರೀರವುಳ್ಳವನಾಗುವನು. ಪರಸ್ತ್ರೀಯನ್ನು ಬ್ರಹ್ಮಸ್ವವನ್ನು ಅಪಹರಿಸಿದವನು ಬ್ರಹ್ಮರಾಕ್ಷಸನಾಗುವನು || ೬೦ || ಮುತ್ತು-ಮಾಣಿಕ್ಯ-ರತ್ನಗಳನ್ನು ಕದ್ದವನು ಹೀನ ಜಾತಿಯಲ್ಲಿ ಹುಟ್ಟುವನು. || ೬೧ || ಎಲೆ-ಕಾಯಿ-ಪಲ್ಲೆಗಳನ್ನು ಕದ್ದವರು ಸದಾ ಮೈಯಲ್ಲಿ ಅಪರಂಪಾರ ಖಜ್ಜಿವುಳ್ಳವರೂ, ರಕ್ತಾಂಗಿಗಳೂ, ಉಣ್ಣೆಯೂ ಹೇನೂ ಉಳ್ಳವರಾಗುವರು. || ೬೨ || ಕಂಚು, ಲೋಹ, ಹತ್ತಿ, ಉಪ್ಪುಗಳನ್ನು ಕದ್ದವರು ಬಿಳೀ ಕುಷ್ಠರೋಗಿಯಾಗುವರು. ಆದಕಾರಣ ಸರ್ವರೂ ವಿಚಾರದಿಂದ ನಡೆಯಬೇಕು || ೬೩ || ದೇವ ದ್ರವ್ಯಾಪಹಾರಕನಿಗೂ, ದೇವಕಾರ್ಯ ನಾಶಮಾಡಿದವನಿಗೂ ಪಾಂಡುರೋಗವಾಗುವದು, ಹಣ್ಣು ಕದ್ದರೆ ವಿದ್ರೂಪಿಯಾಗುವನು. || ೬೪ || ಪರರು ಹೂಳಿಟ್ಟ ದ್ರವ್ಯವನ್ನು ಕದ್ದವನು

ಸದಾ ಶೋಕವುಳ್ಳವನಾಗುವನು. ಪರರ ನಿಧಿಯನ್ನು ಕದ್ದರೆ ಒಂಟೆಯಾಗುವನು. ॥ ೬೫ ॥ ಹಣ್ಣು ಕದ್ದವನು ವನಚರನಾಗುವನು. ನೀರನ್ನೂ ಮನೆಯ ಉಪಕರಣಗಳನ್ನೂ ಕದ್ದವನು ಕಾಗೆಯಾಗುವನು. ॥ ೬೬ ॥ ಜೇನುತುಪ್ಪವನ್ನು ಕದ್ದವರು ಹದ್ದಾಗುವರು. ಹಾಲು ಕದ್ದವನು ಕುಷ್ಠರೋಗಿಯಾಗುವನು. ॥ ೬೭ ॥ ಎಲೈ ಪತಿತನೇ, ಈ ಪ್ರಕಾರ ಪಾಪ ಮಾಡಿದವರು ಈ ಪ್ರಕಾರ ಜನ್ಮಗಳನ್ನು ಹೊಂದುವರು. ಇನ್ನು ವ್ಯಭಿಚಾರ ಪ್ರಕರಣವನ್ನು ಕೇಳು ಎಂದು ಗುರುಗಳು ಹೇಳಿದರು. ॥ ೬೮ ॥ ಪರಸ್ತ್ರೀಯನ್ನು ಆಲಿಂಗಿಸಿದರೆ ನೂರು ಸಾರೆ ನಾಯಿಯಾಗಿ ಹುಟ್ಟಿ ಮುಂದೆ ಏಳು ಜನ್ಮಗಳಲ್ಲಿ ದುಃಖಿಯಾಗುವನು ॥ ೬೯ ॥ ಪರಸ್ತ್ರೀ ಯೋನಿಯನ್ನು ನೋಡಿದರೆ ಹುಟ್ಟುಗುರುಡನಾಗುವನು ಬಂಧುಗಳ ಹೆಂಡರನ್ನು ಸಂಪರ್ಕ ಮಾಡಿದರೆ ಕತ್ತೆಯ ಜನ್ಮವು ಬರುವದು. ॥ ೭೦ ॥ ಆಮೇಲೆ ಸರ್ಪ ಜನ್ಮವು ಬಂದು, ಪುನಃ ನರಕದಲ್ಲಿ ಬಿದ್ದು ಬಹಳ ಕಷ್ಟಗಳನ್ನು ಅನುಭವಿಸುವನು. ॥ ೭೧ ॥ ಮಿತ್ರ ಪತ್ನಿ, ಸೋದರಮಾವನ ಹೆಂಡತಿಯನ್ನು ಒಮ್ಮೆ ಸಂಪರ್ಕ ಮಾಡಿದರೆ ನಾಯಿಯಾಗುವನು ॥ ೭೨ ॥ ಪರಸ್ತ್ರೀ ಮುಖವನ್ನು ಎಂದೂ ನೋಡಬಾರದು ಕುಬುದ್ಧಿಯಿಂದ ನೋಡಿದರೆ ಕಣ್ಣು ನೋವುಳ್ಳವನಾಗುವನು ॥೭೩॥ ಶೂದ್ರನು ವಿಪ್ರ ಸ್ತ್ರೀಯನ್ನು ಭೋಗಿಸಿದರೆ ಇಬ್ಬರೂ ಕ್ರಿಮಿಗಳಾಗುವರು. ॥೭೪॥ ಸದಾ ಶೂದ್ರ ಸಂಪರ್ಕ ಮಾಡಿ ಅವರ ಸ್ತ್ರೀಯನ್ನು ವ್ಯಭಿಚಾರ ಮಾಡುವವರು ನಾಯಿಯಾಗುವರು. ಇದು ಮಹಾ ದೋಷವೆಂದು ಹೇಳಿದೆ ॥ ೭೫ ॥ ಎಂದು ಶ್ರೀ ಗುರುಗಳು ಪತಿತನಿಗೆ ಹೇಳಿದ್ದನ್ನು ಕೇಳಿ ತ್ರಿವಿಕ್ರಮ ಮುನಿಯು— ಸ್ವಾಮೀ, ಗುರುಗಳೇ, ಎಲ್ಲಾ ಧರ್ಮಗಳನ್ನು ಹೇಳಿದಿರಿ. ಕೇಳುವದರಿಂದ ಸಕಲ ಪಾಪಗಳು ಹೋಗಿ ಮನಸ್ಸು ನಿರ್ಮಲವಾಗುವದು. ಒಂದುವೇಳೆ ಇಂಥ ಪಾಪಗಳು ಘಟಿಸಿದರೆ ಅವುಗಳಿಂದ ಮುಕ್ತರಾಗುವದು ಹ್ಯಾಗೆ ಹೇಳಿರಿ ಎಂದರು. ॥ ೭೬-೭೭ ॥ ಆಗ ಶ್ರೀ ಗುರುಗಳು— ಎಲೈ ತ್ರಿವಿಕ್ರಮಯತಿಯೇ, ಪಾಪಕ್ಕೆ ಪ್ರಾಯಶ್ಚಿತ್ತವೆಂಬುವದು ಉಂಟೇ ಉಂಟು. ಪಾಪ ಮಾಡಿದ್ದಕ್ಕೆ ನಿಶ್ಚಯವಾಗಿ ಯಾರಿಗೆ ಪಶ್ಚಾತ್ತಾಪವಾಗುವದೋ ಅವರಿಗೆ ನಿಶ್ಚಯವಾಗಿ ಪಾಪ ಹತ್ತುವದಿಲ್ಲ. ॥ ೭೮ ॥ ಮಹಾ ಪಾಪವನ್ನು ಮಾಡಿ ಅದು ಮನಸ್ಸಿನಲ್ಲಿ

ಚುಚ್ಚುತ್ತಿದ್ದರೆ ಅದಕ್ಕೆ ಯೋಗ್ಯ ಪ್ರಾಯಶ್ಚಿತ್ತವನ್ನು ಕರ್ಮವಿಪಾಕದಲ್ಲಿ ಹೇಳಿದೆ. ॥ ೭೯ ॥ ಅನೇಕ ಋಷಿಗಳ ಮತದಂತೆ ಪ್ರಾಯಶ್ಚಿತ್ತದ ವಿಧಾನವನ್ನು ಹೇಳುವೆನು ಸ್ಥಿರಚಿತ್ತದಿಂದ ಕೇಳು. ॥ ೮೦ ॥

ಮೊದಲು ಬ್ರಹ್ಮದಂಡ ಆಗಬೇಕು. ಅದರಿಂದ ಪಾಪ ಪರಿಹಾರವಾಗುವದು. ಸಾಲಂಕೃತ ಗೋದಾನ ಮಾಡಬೇಕು. ಅದು ಅಶಕ್ಯವಾದರೆ ದ್ರವ್ಯ ಕೊಡಬೇಕು. ॥ ೮೧ ॥ ಸ್ಥೂಲ-ಸೂಕ್ಷ್ಮ ಪಾಪಗಳ ಪರಿಹಾರ ಕ್ಕಾಗಿ ಅವುಗಳಿಗೆ ತಕ್ಕಂತೆ ನಿಷ್ಕ, ಅರ್ಧನಿಷ್ಕ, ಪಾದನಿಷ್ಕ ದ್ರವ್ಯದಾನ ಮಾಡಬೇಕು. ॥ ೮೨ ॥ ಅಜ್ಞಾನಕೃತ ಪಾಪವು ಪಶ್ಚಾತ್ತಾಪದಿಂದ ಹೋಗುವದು ಸರಿಯಾದ ಗುರುಸೇವೆ ಮಾಡಿದರೆ ಅವರು ಸಕಲ ಪಾಪಗಳನ್ನು ಪರಿಹಾರ ಮಾಡುವರು. ॥ ೮೩ ॥ ತಿಳಿಯದೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವುಂಟು. ೨೦೦ ಪ್ರಾಣಾಯಾಮ ದಿಂದ ಅಥವಾ ಪುಣ್ಯತೀರ್ಥದಲ್ಲಿ ಹತ್ತು ಸಾರೆ ಸ್ನಾನ ಮಾಡುವದರಿಂದ ॥ ೮೪ ॥ ಇಲ್ಲವೆ ೩ ಗುಂಜಿ ಬಂಗಾರ ದಾನ ಮಾಡುವದರಿಂದ ಹಾಗೂ ನದೀ ತೀರದ ಎರಡು ಊರುಗಳಲ್ಲಿ ಸ್ನಾನ ಮಾಡುವದರಿಂದ ಸೌಮ್ಯ ಪಾಪಗಳ ಪರಿಹಾರವಾಗುವದು. ॥ ೮೫ ॥ ದಂಪತಿಗಳಲ್ಲಿ ಒಬ್ಬರು ಪಾಪ ಮಾಡಿದರೆ ಆ ದೋಷವು ಇಬ್ಬರಿಗೂ ಹತ್ತುವದು. ಇಬ್ಬರೂ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ॥ ೮೬ ॥ ಮತ್ತೊಂದು ಪ್ರಕಾರವಿರುತ್ತದೆ ವೇದ ಮಂತ್ರದಿಂದ ೧೦ ಸಾವಿರ ಗಾಯತ್ರೀ ಜಪ ಮಾಡಬೇಕು. ॥ ೮೭ ॥ ಇದಕ್ಕೆ ಗಾಯತ್ರೀಕೃಛ್ರವೆನ್ನುವರು ಹೀಗೆ ಮಾಡಿದರೆ ಮಹಾ ಪಾಪಿಯೂ ಕೂಡ ಪವಿತ್ರನಾಗುವನು ಎಂದು ಶ್ರೀ ಗುರುಗಳು ತ್ರಿವಿಕ್ರಮ ಯತಿಗೆ ಹೇಳು ವರು. ॥ ೮೮ ॥ ಎಲೈ ತ್ರಿವಿಕ್ರಮ ಮುನಿಯೇ, ಪ್ರಜಾಪತ್ಯಕೃಛ್ರ ಎಂಬ ಅತಿ ವಿಶೇಷವಾದ ವಿಧಿ ಇರುತ್ತದೆ. ದಿನಕ್ಕೆ ಒಮ್ಮೆ ಊಟ ಮಾಡಬೇಕು. ಅಥವಾ ಅಯಾಚಿತ ಭಿಕ್ಷಾ ಮಾಡಬೇಕು ॥ ೮೯ ॥ ಮೂರು ದಿವಸ ಉಪವಾಸ ಮಾಡಿ ಗುರುಚರಣವನ್ನು ಸ್ಮರಿಸಬೇಕು. ಅದರಿಂದ ನಮಗೆ ಸಾಮಾನ್ಯವಾದ ಸೌಮ್ಯ ಪಾಪಗಳು ಹೋಗುತ್ತವೆ. ॥ ೯೦ ॥ ಎಲೈ ಮುನಿಯೇ ಇನ್ನು ಅತಿಕೃಛ್ರ ಲಕ್ಷಣವನ್ನು ಹೇಳುವೆನು ಕೇಳು. ಅದರಿಂದ

ಅಜ್ಞಾನಕೃತ ಸಾಮಾನ್ಯ ದೋಷಗಳು ಹೋಗುವವು. ॥ ೯೧ ॥ ಆದಕ್ಕೆ ಪ್ರಾತಃಕಾಲ ೧೨ ತುತ್ತು, ರಾತ್ರಿ ೧೫ ತುತ್ತು ಹೀಗೆ ನಿತ್ಯ ೨೭ ತುತ್ತು ಆಹಾರ ತಕ್ಕೊಳ್ಳಬೇಕು. ಅಥವಾ ಎರಡೂ ವೇಳೆ ೮-೮ ರಂತೆ ೧೬ ತುತ್ತುಗಳನ್ನು ಅಯಾಚಿತವಾಗಿ ತಕ್ಕೊಳ್ಳಬೇಕು ॥ ೯೨ ॥ ಈ ಪ್ರಕಾರ ಸೌಮ್ಯ ಪಾತಕಕ್ಕೆ ವಿಧಿ ಇರುತ್ತದೆ. ಅಥವಾ ದಿನಾ ಒಂದೊಂದು ಅಂಜುಲಿಯಂತೆ ಒಂದು ತಿಂಗಳ ವರೆಗೆ ಊಟ ಮಾಡಬೇಕು. ಆಮೇಲೆ ಮೂರು ದಿವಸ ಉಪವಾಸ ಮಾಡಬೇಕು. ಮತ್ತೊಂದು ವಿಧಿಯನ್ನು ಹೇಳುವೆನು ಕೇಳು-- ೩ ದಿವಸ ಉಪವಾಸ ಮಾಡಿ ಆಮೇಲೆ ಮೂರುದಿವಸ ತುಪ್ಪವನ್ನು ತಿಂದು ಪಾರಣೆ ಮಾಡಬೇಕು. ಆಮೇಲೆ ೩ ದಿವಸ ಹಾಲು ತಕ್ಕೊಂಡು ಮತ್ತೆ ೩ ದಿವಸ ವಾಯು ಭಕ್ಷಣಮಾಡಿ ಪುನಃ ಒಂದು ದಿವಸ ಹಾಲು ತಕ್ಕೊಳ್ಳಬೇಕು ॥ ೯೩-೯೪-೯೫ ॥ ಹೀಗೆ ಮಾಡಲಿಕ್ಕಾಗದ ಅಶಕ್ತರು ಎಳ್ಳು, ಬೆಲ್ಲ, ಅರಳಹಿಟ್ಟುಗಳನ್ನು ತಿಂದು ಒಂದು ದಿವಸ ಉಪವಾಸ ಮಾಡಬೇಕು. ॥ ೯೬ ॥

ಇನ್ನು ಪರ್ಣಕೃಚ್ಛ್ರ ವಿಧಿಯು ಹ್ಯಾಗಂದರೆ— ಮಾಡಿದ ಪಾಪಕ್ಕೆ ಪಶ್ಚಾತ್ತಾಪ ಪಟ್ಟು ಕಮಲ, ಬಿಲ್ವ, ಅಶ್ವತ್ಥ, ಕುಶ ಇವುಗಳ ಉದಕವನ್ನು ದಿನಾಲು ತಕ್ಕೊಂಡು ೩ ದಿವಸ ಉಪವಾಸ ಮಾಡಬೇಕು. ಇದಕ್ಕೆ ಪರ್ಣಕೃಛವೆನ್ನುವರು. ॥ ೯೭-೯೮ ॥

ಚಾಂದ್ರಾಯಣವೆಂಬ ಮತ್ತೊಂದು ವ್ರತವದೆ. ಅದರ ವಿಧಿಯು ಹ್ಯಾಗಂದರೆ— ಶುದ್ಧ ಪ್ರತಿಪದೆಯಿಂದ ಆರಂಭಮಾಡಿ ಕೋಳಿಯತತ್ತೀ ಆಕಾರದಷ್ಟು ತುತ್ತನ್ನು ಮೊದಲಿನದಿನ ಒಂದು, ೨ನೇ ದಿವಸ ಎರಡು, ಮೂರನೇ ದಿವಸ ಮೂರು ಹೀಗೆ ದಿನಕ್ಕೊಂದರಂತೆ ಹೆಚ್ಚಿಸುತ್ತ ಹುಣ್ಣಿವೆಯ ದಿನ ೧೫ ತುತ್ತು ತಕ್ಕೊಳ್ಳಬೇಕು. ಕೃಷ್ಣ ಪಕ್ಷದಲ್ಲಿ ಒಂದೊಂದು ತುತ್ತಿನಂತೆ ಇಳಿಸುತ್ತ ಅಮಾವಾಸ್ಯೆಯ ದಿವಸ ೧ ತುತ್ತು ಉಣ್ಣಬೇಕು. ಹೀಗೆ ಒಂದು ತಿಂಗಳು ಮಾಡಿ ಎರಡನೇ ತಿಂಗಳು ಹವಿಸ್ಸಾನ್ನವನ್ನುಣ್ಣಬೇಕು. ॥ ೯೯-೧೦೦ ॥ ಪಶ್ಚಾತ್ತಾಪ ಪಟ್ಟು ಸಭಾ ಮಧ್ಯದಲ್ಲಿ ತನ್ನ ಪಾಪವನ್ನು ಉಚ್ಚರಿಸಿದರೆ ಆ ಪಾಪವು ಪರಿಹಾರವಾಗುವದು. ॥ ೧೦೧ ॥

ಇನ್ನು ತೀರ್ಥಕೃಥ, ಲಕ್ಷಣವನ್ನು ಹೇಳುವೆನು ಕೇಳು— ಪವಿತ್ರವಾದ ಕಾಶಿ ಹಾಗು ಶ್ವೇತಪರ್ವತಗಳ ಯಾತ್ರೆಮಾಡಿ ಅಲ್ಲಿ ಸ್ನಾನಮಾಡಿದ ಮಾತ್ರದಿಂದ ಪಾಪವು ಹೋಗುತ್ತದೆ. ‖ ೧೦೨ ‖ ಇತರ ತೀರ್ಥಗಳಿಗೆ ಹೋಗಿ ಒಂದು ಸಹಸ್ರ ಗಾಯತ್ರೀ ಜಪ ಮಾಡಿದರೆ ಆ ಪಾಪಗಳು ತೀವ್ರ ಹೋಗುವವೆಂದು ಅಗಸ್ತ್ಯರು ಹೇಳುವರು. ‖ ೧೦೩ ‖ ಸೇತುಬಂಧ ಸಮುದ್ರದಲ್ಲಿ ಸ್ನಾನ ಮಾಡಲು ಭ್ರೂಣಹತ್ಯಾ, ಕೃತಘ್ನಾದಿ ಪಾಪಗಳು ಹೋಗುವವು. ‖ ೧೦೪ ‖ ಶುಚಿಯಿಂದ ವಿಧಿಪೂರ್ವಕವಾಗಿ ಕೋಟಿ ಗಾಯತ್ರೀ ಜಪ ಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳು ಹೋಗುವವು. ‖ ೧೦೫ ‖ ೧ ಲಕ್ಷ ಗಾಯತ್ರೀ ಜಪ ಮಾಡಿದರೆ ಸುರಾಪಾನ ಮಾಡಿದ ದೋಷ ಹೋಗುವದು. ಬಂಗಾರ ಕದ್ದರೆ ೭ ಲಕ್ಷ ಗಾಯತ್ರೀ ಜಪ ಮಾಡಬೇಕು. ‖ ೧೦೬ ‖ ಗುರುಪತ್ನೀ ಸಂಗ ಮಾಡಿದರೆ ೮ ಲಕ್ಷ ಗಾಯತ್ರೀ ಜಪ ಮಾಡಬೇಕು ಇನ್ನು ವೇದ ಮಂತ್ರದಿಂದ ಪಾಪವು ದೂರವಾಗುವದು. ಅದನ್ನು ಹೇಳುವೆನು ಕೇಳು. ‖ ೧೦೭ ‖

**ಪವಮಾನ** ಸೂಕ್ತವನ್ನು ನಾಲ್ಕು ಸಾರೆ ಪಠಿಸಿದರೆ ಬ್ರಹ್ಮಹತ್ಯಾ ದೋಷವು ನಾಶವಾಗುವದು. **ಇಂದ್ರಮಿತ್ರ** ಎಂಬ ಸೂಕ್ತವನ್ನು ಒಂದು ತಿಂಗಳು ಪಠಿಸಿದರೆ ಸುರಾಪಾನಾದಿ ದೋಷಗಳು ಹೋಗುವವು. **ಶುನಃಶೇಪಾ** ಎಂಬ ಸೂಕ್ತ ಪಠಣದಿಂದ ಸುವರ್ಣ ಕದ್ದ ಪಾಪವು ಹೋಗುವದು. ‖ ೧೦೮-೧೦೯ ‖ ಹವಿಸ್ಸಾನ್ನ ವನ್ನುಣ್ಣುತ್ತ **ಪವಮಾನಪನ್ನ** ಸೂಕ್ತವನ್ನು ಒಂದು ತಿಂಗಳು ಪಠಿಸಿದರೆ ಗುರುತಲ್ಪಗಮನಾದಿ ದೋಷಗಳು ಹೋಗುವವು. ‖ ೧೧೦ ‖ ಮನುಷ್ಯನು ೫-೬ ತಿಂಗಳು ಮಿತಾಹಾರದಿಂದಿದ್ದು ದಿನಾಲು **ಪುರುಷಸೂಕ್ತ**ವನ್ನು ಪಠಿಸಿದರೆ ಅದರಿಂದ ದುಷ್ಕರ್ಮದಿಂದಾದ ಪಂಚಮಹಾಪಾತಕಗಳು ನಾಶವಾಗುವವು. ‖ ೧೧೧ ‖ **ತ್ರಿಮಧು** ಎಂಬ ಮಂತ್ರಸೂಕ್ತವನ್ನೂ, **ಸುಪರ್ಣಾತ್ರೀನಾಸ** ಎಂಬ ಮಂತ್ರವನ್ನೂ, **ನಾಚಿಕೇತ** ಎಂಬ ಮಂತ್ರವನ್ನೂ ನಿಶ್ಚಲ ಮನಸ್ಸಿನಿಂದ ಪಠಿಸಲು ಈ ಪ್ರಾಯಶ್ಚಿತ್ತದಿಂದ ಸಕಲ ಪಾಪಗಳು ನಾಶವಾಗುವವು. ‖ ೧೧೨ ‖

**ನಾರಾಯಣಪನ್ನ** ಸೂಕ್ತವನ್ನು ಭಕ್ತಿಯಿಂದ ಪರಿಸಿದರೆ ಪಂಚಮಹಾಪಾತಕಗಳು ನಾಶವಾಗುವವು. ॥ ೧೧೩ ॥ ತ್ರಿಪದಾ ಗಾಯತ್ರೀ ಮಂತ್ರವನ್ನು ಪ್ರೀತಿಪೂರ್ವಕವಾಗಿಯೂ ಹಾಗು **ಅಘಮರ್ಷಣ** ಸೂಕ್ತವನ್ನು ಮೂರು ಸಾರೆ ಪರಿಸಿದರೆ ಏಳು ಜನ್ಮಗಳ ಪಾಪಗಳು ಪರಿಹಾರವಾಗುವವು. ॥ ೧೧೪ ॥ **ಅಪಾಂಮಧ್ಯೇ** ಎಂಬ ಪನ್ನಾದಲ್ಲಿ **ತದ್ವಿಷ್ಣೋಃ** ಎಂಬ ಸೂಕ್ತವನ್ನು ಭಕ್ತಿಯಿಂದ ಪರಿಸಿದರೆ ಸಪ್ತಜನ್ಮಗಳ ಪಾಪ ಪರಿಹಾರವಾಗುವದು ॥ ೧೧೫ ॥ ಎಲೈ ತ್ರಿವಿಕ್ರಮ ಮುನಿಯೇ ಅಜ್ಞಾನಕೃತ ಪಾಪ ಹೋಗುವದಕ್ಕೆ ಇನ್ನೊಂದು ವಿಧಾನವದೆ. ಏನಂದರೆ ತಾನು ಮಾಡಿದ ಪಾಪಕ್ಕಾಗಿ ವಿಶೇಷ ಅನುತಪ್ತನಾಗಿ ಪಂಚಗವ್ಯ ಪ್ರಾಶನ ಮಾಡಬೇಕು. ॥ ೧೧೬ ॥ ಪಂಚಗವ್ಯ ಅಂದರೆ ಗೋಮೂತ್ರ, ಗೋಮಯ, ಗೋಕ್ಷೀರ, ಗೋದಧಿ, ಗೋಘೃತ, ಕುಶೋದಕ ಇವುಗಳ ಮಿಶ್ರಣವು. ಹಿಂದಿನ ದಿನ ಉಪವಾಸ ಮಾಡಿ ಮರುದಿನ ವಿಧಿಹಿತ ಮಂತ್ರದಿಂದ ಪಂಚಗವ್ಯವನ್ನು ತಕ್ಕೊಳ್ಳಬೇಕು. ॥ ೧೧೭ ॥ ನೀಲವರ್ಣದ ಆಕಳ ಮೂತ್ರ, ಕರೀ ಆಕಳ ಗೋಮಯ, ಕೆಂಪು ಆಕಳ ಹಾಲು, ಬಿಳಿ ಆಕಳ ಮೊಸರು, ॥೧೧೮॥ ಕಪಿಲ ಆಕಳ ತುಪ್ಪ ಇವೇ ಪಂಚಗವ್ಯಗಳು. ಒಂದೊಂದನ್ನು ಕ್ಲಪ್ತ ರೀತಿಯಿಂದ ಹಾಕಬೇಕು. ॥ ೧೧೯ ॥ ಹ್ಯಾಗೆಂದರೆ ಪಾವು ನೇರು ಗೋಮೂತ್ರ, ಅರ್ಧ ಅಂಗುಷ್ಠ ಪ್ರಮಾಣ ಪವಿತ್ರ ಗೋಮಯ, ೧॥ ನೇರು ಗೋ-ಕ್ಷೀರ, ೩ ಪಾವುನೇರು ಮೊಸರು, ॥ ೧೨೦ ॥ ಒಂದು ಪಾವು ತುಪ್ಪ ಈ ಪ್ರಕಾರ ಕೂಡಿಸಿ ಅದರಲ್ಲಿ ಕುಶೋಧಕವನ್ನು ಹಾಕಿ ಒಂದೊಂದಕ್ಕೆ ಒಂದೊಂದು ಮಂತ್ರವನ್ನು ಹೇಳಿ ಪ್ರಾಶನ ಮಾಡಬೇಕು. ॥ ೧೨೧ ॥ ಆ ಮಂತ್ರಗಳು ಯಾವವೆಂದರೆ— ೧ನೇದು **ಇರಾವತಿ**, ೨ನೇದು **ಇದಂವಿಷ್ಣು**, ॥ ೧೨೨ ॥ ೩ನೇದು **ಮಾನಸ್ತೋಕೆ**, ೪ನೇದು **ಪ್ರಜಾಪತಿ**, ೫ನೇದು **ಗಾಯತ್ರೀ**, ೬ನೇದು **ಪ್ರಣವಪೂರ್ವಕವ್ಯಾಹೃತಿ** ॥ ೧೨೩ ॥ ಈ ಪ್ರಕಾರ ಮಂತ್ರಗಳನ್ನು ಅಂದು ಅನುತಪ್ತನಾಗಿ ಭಕ್ತಿಯಿಂದ ಪಂಚಗವ್ಯಪ್ರಾಶನ ಮಾಡಬೇಕು ಆದರಿಂದ ಅಸ್ಥಿ, ಚರ್ಮಗತವಾದ ಪಾಪಗಳು ಹೋಗುವವು ॥ ೧೨೪ ॥ ಒಂದುವೇಳೆ ಮೇಲೆ ಹೇಳಿದ ಬಣ್ಣದ ಆಕಳು ಸಿಗದಿದ್ದರೆ ಮುಖ್ಯದಾದ ಕಪಿಲಾ ಧೇನುವಿನ ಪದಾರ್ಥಗಳನ್ನು ಕೂಡಿಸಬೇಕು. ಉತ್ತಮವಾದ ಕಪಿಲಾಧೇನುವನ್ನು

ನೋಡಿದ ಕೂಡಲೆ ಪಾಪಗಳು ಪರಿಹಾರವಾಗುವವು || ೧೨೫ || ಇನ್ನು ಪಂಚಮಹಾಪಾತಕಗಳು ಯಾವ ವೆಂದರೆ— ಬ್ರಹ್ಮಹತ್ಯಾ, ಸುರಾಪಾನ, ಸುವರ್ಣಕಳವು, ಗುರುತಲ್ಪಗಮನ, ಈ ನಾಲ್ಕು ಪಾತಕಗಳಲ್ಲಿ ಜನೇ ಯಾವದಾದರೊಂದು ಪಾತಕ ಕೂಡಿದರೆ ಅದು ಪಂಚಮಹಾಪಾತಕವಾಗುತ್ತದೆ. || ೧೨೬-೧೨೭-೧೨೮ || ಈ ಪಂಚಮಹಾಪಾತಕಗಳು ಒದಗಿದರೆ ಅವು ಗುರುಗಳ ಪೂರ್ಣ ಅನುಗ್ರಹದಿಂದಲೂ, ಸ್ವಧರ್ಮನಿರತರಾದ ಶಾಸ್ತ್ರ-ಜ್ಞರ ಅನುಗ್ರಹದಿಂದಲೂ ಪರಿಹಾರವಾಗುವವು ಎಂದು ಶ್ರೀಗುರುಗಳು ತ್ರಿವಿಕ್ರಮ ಮುನಿಗೆ ಪ್ರಾಯಶ್ಚಿತ್ತವನ್ನು ಹೇಳಲು ಅದನ್ನು ಕೇಳಿ ಎಲ್ಲ ಬ್ರಾಹ್ಮಣರು ಸಂತೋಷಬಟ್ಟು ಜ್ಞಾನವಂತರಾದರು || ೧೨೯-೧೩೦-೧೩೧ ||

ಆಮೇಲೆ ಶ್ರೀಗುರುಗಳು ಆ ಪತಿತನನ್ನು ಕುರಿತು— ಎಲೈ, ನೀನು ಪೂರ್ವದಲ್ಲಿ ಬ್ರಾಹ್ಮಣನಾಗಿದ್ದು ನಿನ್ನ ತಂದೆ-ತಾಯಿ-ಗುರುಗಳನ್ನು ನಿಂದಿಸಿರುವದರಿಂದ ಈಗ ನೀನು ಚಾಂಡಾಲನಾಗಿರುವಿ ಎಂದು ತಿಳಿ. ||೧೩೨|| ಈಗ ನೀನು ಈ ಭೀಮಾ-ಅಮರಜಾ ಸಂಗಮದಲ್ಲಿ ಭಕ್ತಿಯಿಂದ ಒಂದು ತಿಂಗಳು ಸ್ನಾನ ಮಾಡು. ಅದರಿಂದ ಏನೂ ಸಂಶಯವಿಲ್ಲವೆ ನಿನ್ನ ಪಾಪಗಳೆಲ್ಲವೂ ನಾಶವಾಗಿ ಮುಂದೆ ನೀನು ಪುನಃ ಬ್ರಾಹ್ಮಣನಾಗಿ ಹುಟ್ಟುವಿ ಎಂದು ಹೇಳಿದರು. || ೧೩೩ || ಆಗ ಅವನು— ಸ್ವಾಮೀ, ಈಗ ನನಗೆ ತಮ್ಮ ದರ್ಶನವಾಗಿದೆ, ಮಾನಸಸರೋವರಕ್ಕೆ ಹೋದ ಕಾಗೆಯು ರಾಜಹಂಸವಾಗುವಂತೆ, ಈಗ ತಮ್ಮ ದರ್ಶನ ಮಾತ್ರದಿಂದ ಯಾವತ್ತು ಅವಯವಗಳ ಸಹಿತವಾಗಿ ನಾನು ಪವಿತ್ರನಾಗಿರುವೆನು ಆದ್ದರಿಂದ ಕೃಪಾಮೂರ್ತಿಗಳಾದ ತಾವು ಶರಣಾಗತನಾದ ನನ್ನನ್ನು ಉದ್ಧರಿಸಿರಿ. || ೧೩೪-೧೩೫ || ಪರಿಸಮಣಿಯು ಸ್ಪರ್ಶದಿಂದ ಲೋಹವು ಕೂಡಲೆ ಬಂಗಾರವಾಗುತ್ತದೆ ಅದು ಪುನಃ ಎಂದಾದರೂ ಲೋಹವಾಗುವದೇ ? || ೧೩೬ || ತಮ್ಮ ದರ್ಶನವೆಂಬ ಸುಧಾರಸದಲ್ಲಿ ನಾನು ಅತಿಶಯ ಜ್ಞಾನವಂತನಾಗಿದ್ದೇನೆ. ಆದ್ದರಿಂದ ನನ್ನನ್ನು ಅಭಿಮಂತ್ರಿಸಿ ಬ್ರಾಹ್ಮಣರಲ್ಲಿ ಸೇರಿಸಿರಿ ಎಂದು ಅಂದನು. || ೧೩೭ || ಅವನ ಮಾತು ಕೇಳಿ ಗುರುಗಳು ನಕ್ಕು— ಎಲೈ ನಿನ್ನ ದೇಹವು ಈಗ ಹೀನ ಜಾತಿಯದಾಗಿದೆ. ನಿನಗೆ ಬ್ರಾಹ್ಮಣ

ನೆಂದು ಹ್ಯಾಗೆ ಅನ್ನುವರು ? ॥ ೧೩೮ ॥ ನೀನು ಪತಿತನ ಮನೆಯಲ್ಲಿ ಹುಟ್ಟಿ ಅಲ್ಲಿಯೇ ಉಂಡು ತಿಂದು ಬೆಳೆದು ದೊಡ್ಡವನಾಗಿ ಲಗ್ನ ಮಾಡಿಕೊಂಡು ಮಕ್ಕಳ-ಮರಿಗಳನ್ನು ಹಡೆದು ಸಂಸಾರ ಮಾಡುತ್ತೀ ಅಂದಮೇಲೆ ನಿನಗೆ ಈಗ ಬ್ರಹ್ಮತ್ವವು ಹೇಗೆ ಬರುವದು ? ಬ್ರಾಹ್ಮಣರು ನಿಂದಾ ಮಾಡುವರು. ನಿನಗೊಂದು ಕಥೆಯನ್ನು ಹೇಳು ವೆನು ಕೇಳು. ॥ ೧೩೯ ॥

ಹಿಂದಕ್ಕೆ ಗಾಧಿ ಎಂಬ ಕ್ಷತ್ರಿಯ ರಾಜನ ಮಗನಾದ ವಿಶ್ವಾಮಿತ್ರನೆಂಬವನು ತಪಸ್ಸು ಮಾಡಿ ಮನಸ್ಸಿನಲ್ಲಿ ತನ್ನಷ್ಟಕ್ಕೆ ತಾನೇ— ನಾನು ಈಗ ತಪಸ್ಸಿನ ಬಲದಿಂದ ಪವಿತ್ರನಾಗಿರುವೆನು. ಆದ್ದರಿಂದ ನಾನು ಬ್ರಾಹ್ಮಣನು ಎಂದು ಅಂದುಕೊಂಡನು. ॥ ೧೪೦ ॥ ಆಮೇಲೆ ಅತಿಶಯ ಕಷ್ಟಬಟ್ಟು ಬ್ರಹ್ಮನ ನೂರು ವರ್ಷಗಳವರೆಗೆ ತಪಸ್ಸು ಮಾಡಿ ತನ್ನಷ್ಟಕ್ಕೆ ತಾನೇ ಬ್ರಹ್ಮರ್ಷಿಯಾದೆನೆಂದು ಅಂದುಕೊಂಡು. ॥ ೧೪೧ ॥ ಇಂದ್ರಾದಿ ದೇವತೆಗಳ ಹತ್ತರ ಹೋಗಿ— ಎಲೈ ದೇವತೆಗಳೇ, ನನಗೆ ಇನ್ನುಮೇಲೆ ಬ್ರಹ್ಮರ್ಷಿ ಎಂದು ಕರೆಯಿರಿ ಎಂದು ಬೇಡಿಕೊಂಡನು. ॥ ೧೪೨ ॥ ಆಗ ದೇವೇಂದ್ರನು— ಎಲೈ ವಿಶ್ವಾಮಿತ್ರನೇ ಕೇಳು. ವಸಿಷ್ಠರು ನಮ್ಮ ಗುರುಗಳು. ಅವರು ನಿನಗೆ ಬ್ರಹ್ಮರ್ಷಿಯೆಂದು ಕರೆದರೆ ಮಾತ್ರ ನಾವೆಲ್ಲರೂ ಹಾಗೇ ಕರೆಯುವೆವು ಎಂದು ಹೇಳಿದನು. ॥೧೪೩॥ ಆಗ ವಿಶ್ವಾಮಿತ್ರನು ವಸಿಷ್ಠಮುನಿಯ ಹತ್ತರ ಹೋಗಿ ವಿನಯದಿಂದ— ಸ್ವಾಮೀ, ವಸಿಷ್ಠರೇ, ನಾನು ಬಹುಕಾಲ ತಪಸ್ಸು ಮಾಡಿರುವೆನು, ಆದ್ದರಿಂದ ಈಗ ನೀವು ನನಗೆ ಬ್ರಾಹ್ಮಣ (ಬ್ರಹ್ಮರ್ಷಿ) ನೆಂದು ಅನ್ನಿರಿ ಎಂದನು. ॥೧೪೪॥ ಆಗ ವಸಿಷ್ಠರು— ಎಲೈ ವಿಶ್ವಾಮಿತ್ರನೇ, ಕ್ಷತ್ರಿಯನು ತಪಸ್ಸಿಗೆ ಯೋಗ್ಯನಲ್ಲ ನೀನು ಈ ನಿನ್ನ ದೇಹವನ್ನು ಬಿಟ್ಟು, ಬ್ರಾಹ್ಮಣನಾಗಿ ಹುಟ್ಟಬೇಕು. ಅಂದರೆ ಪವಿತ್ರನಾಗುವಿ. ॥ ೧೪೫ ॥ ಆಮೇಲೆ ನಿನಗೆ ಉಪನಯನವಾಗಿ ಗಾಯತ್ರೀ ಮಂತ್ರೋಪದೇಶವಾದರೆ ನೀನು ಶುದ್ಧನಾಗಿ ಬ್ರಹ್ಮರ್ಷಿ ಎಂಬ ಹೆಸರನ್ನು ಪಡೆಯುವಿ ಎಂದು ಹೇಳಿದರು. ॥ ೧೪೬ ॥ ಆಗ ವಿಶ್ವಾಮಿತ್ರನು ಮನಸ್ಸಿನಲ್ಲಿ— ಏನೂ ಮಾಡಿದರೂ ಈ ವಸಿಷ್ಠನು ಬ್ರಹ್ಮರ್ಷಿ

ಯೆಂದೆನ್ನಲಿಲ್ಲ, ಈಗ ಏನು ಮಾಡಲಿ? ಎಂದು ಸಿಟ್ಟಿನಿಂದ ಆವನು ಆ ವಸಿಷ್ಠರ ನೂರುಮಂದಿ ಮಕ್ಕಳನ್ನು ಕೊಂದನು. ॥ ೧೪೭ ॥ ಇದಕ್ಕೆ ಸಿಟ್ಟಾಗದೆ ಬ್ರಹ್ಮಜ್ಞಾನಿಗಳಾದ ವಸಿಷ್ಠರು ಆ ವಿಶ್ವಾಮಿತ್ರನಿಗೆ ಬ್ರಹ್ಮರ್ಷಿ ಎಂದೆನ್ನಲಿಲ್ಲ. ॥ ೧೪೮ ॥ ಆಮೇಲೆ ಆವನು ಆ ವಸಿಷ್ಠರನ್ನೇ ಕೊಲ್ಲಬೇಕೆಂದು ಯೋಚಿಸಿ, ಸಿಟ್ಟಿನಿಂದ ಕೈಯಲ್ಲಿ ಒಂದು ಪರ್ವತವನ್ನು ತಕ್ಕೊಂಡು ಬಂದು ಆವರ ಆಶ್ರಮದ ಹಿಂದೆ ನಿಂತು— ॥ ೧೪೯ ॥ ಮನಸ್ಸಿನಲ್ಲಿ— ಒಂದು ವೇಳೆ ಈಗ ನಾನು ಈ ವಸಿಷ್ಠರನ್ನು ಕೊಂದುಬಿಟ್ಟರೆ, ಮುಂದೆ ನನಗೆ ಬ್ರಹ್ಮರ್ಷಿಯೆಂದು ಯಾರೂ ಅನ್ನಲಿಕ್ಕಿಲ್ಲ. ॥ ೧೫೦ ॥ ಯಾಕಂದರೆ, ಇಂದ್ರಾದಿ ದೇವತೆಗಳೂ ಸಮಸ್ತ ಋಷಿಗಳೂ ಸಹ ವಸಿಷ್ಠರು ಬ್ರಹ್ಮರ್ಷಿಯೆಂದು ಅಂದರೆ ನಾವೆಲ್ಲರೂ ಅದರಂತೆ ಅನ್ನುತ್ತೇವೆಂದು ಅನ್ನುತ್ತಾರೆ. ॥ ೧೫೧ ॥ ಅಂದಮೇಲೆ, ಈಗ ನಾನು ವಸಿಷ್ಠರನ್ನು ಕೊಂದರೆ ನನಗೆ ಮಹಾದೋಷ ಬರುತ್ತದೆ, ವಸಿಷ್ಠರನ್ನೇ ಪ್ರಾರ್ಥಿಸೋಣ ಎಂದು ಅನ್ನುತ್ತ ಆ ಪರ್ವತವನ್ನು ಭೂಮಿಯಮೇಲೆ ದೊಪ್ಪನೆ ಒಗೆದುಬಿಟ್ಟನು. ॥ ೧೫೨ ॥ ಈ ಪ್ರಕಾರ ವಿಶ್ವಾಮಿತ್ರನು ಮನಸ್ಸಿನಲ್ಲಿ ಅನುತಪ್ತನಾದದ್ದನ್ನು ವಸಿಷ್ಠರು ಜ್ಞಾನದಿಂದ ತಿಳಿದು ಆಶ್ರಮದೊಳಗಿಂದಲೇ— ಎಲೈ ವಿಶ್ವಾಮಿತ್ರನೇ, ಈಗ ನೀನು ಬ್ರಹ್ಮರ್ಷಿಯಾದಿ ಒಳಗೆ ಬಾ ಎಂದು ಕರೆದರು ॥ ೧೫೩ ॥ ಆಗ ವಿಶ್ವಾಮಿತ್ರನು ಆನಂದದಿಂದ ಅವರ ಹತ್ತರ ಬಂದು— ಸ್ವಾಮೀ, ನಿಮ್ಮ ಮಾತು ಸತ್ಯವಾದರೆ ಈಗ ನೀವು ನನ್ನಮನೆಗೆ ಭೋಜನಕ್ಕೆ ಬರಬೇಕು ಎಂದನು. ॥ ೧೫೪ ॥ ಆಗ ವಸಿಷ್ಠರು ಸಂತೋಷದಿಂದ— ಎಲೈ ವಿಶ್ವಾಮಿತ್ರನೇ, ಈ ನಿನ್ನ ನಿಭ್ರಾಂತವಾದ ದೇಹವನ್ನು ಸೂರ್ಯನ ಉಷ್ಣತೆಯಿಂದ ಪಚನಮಾಡು. ಅಂದರೆ ನೀನು ಪವಿತ್ರ ದೇಹವುಳ್ಳವನಾಗುವಿ, ಆಮೇಲೆ ನಾನು ನಿನ್ನ ಮನೆಗೆ ಊಟಕ್ಕೆ ಬರುವೆನು ಎಂದರು ॥ ೧೫೫ ॥ ಅದಕ್ಕೆ ವಿಶ್ವಾಮಿತ್ರನು ಒಡಂಬಟ್ಟು, ಸೂರ್ಯಕಿರಣಕ್ಕೆ ಮೈಯೊಡ್ಡಿ ಕುಳಿತನು. ಆಗ ಸಹಸ್ರ ಕಿರಣಗಳಿಂದ ಸೂರ್ಯನು ತಪಿಸಲು ಅವನ ಸರ್ವ ದೇಹವು ಸುಟ್ಟು ಭಸ್ಮವಾಯಿತು. ॥ ೧೫೬ ॥ ಎಲೈ ಪತಿತನೇ, ಅನುಷ್ಠಾನ ಮಾಡುವದರಲ್ಲಿ ಅತಿ ಸಮರ್ಥನಾದ ವಿಶ್ವಾಮಿತ್ರ ಮಹಾಮುನಿಯು ಈ ಪ್ರಕಾರ ತನ್ನ ಮೊದಲಿನ ದೇಹವನ್ನು ಬಿಟ್ಟು, ತಾನೇ ಹೊಸ ದೇಹವನ್ನು ಧರಿಸಿ

ದನು. ॥ ೧೫೭ ॥ ಆಮೇಲೆ ಅವನು ಬ್ರಹ್ಮರ್ಷಿಯಾಗಿ ಎಲ್ಲರಲ್ಲಿಯೂ ಮಾನ್ಯನಾದನು. ॥ ೧೫೮ ॥ ಆಗ ಸಕಲ ದೇವತೆ ಹಾಗು ಋಷಿಗಳು— ವಿಶ್ವಾಮಿತ್ರನು ಮಹಾ ಜ್ಞಾನಿಯಾದ ಬ್ರಹ್ಮರ್ಷಿಯು ಎಂದು ಅಂದರು. ಆಮೇಲೆ ಅವನು ಮೂರು ಲೋಕದಲ್ಲಿಯೂ ಪ್ರಖ್ಯಾತನಾದನು. ॥ ೧೫೯ ॥ ಆದ್ದರಿಂದ ಎಲೈ ಪತಿತನೇ, ನೀನೂ ಈಗಿನ ನಿನ್ನ ದೇಹವನ್ನು ಬಿಡಬೇಕು ನೀನು ಮನಸ್ಸಿನಲ್ಲಿ ಪಶ್ಚಾತ್ತಾಪಪಟ್ಟಿದ್ದರಿಂದ ಮುಂದೆ ಬ್ರಾಹ್ಮಣನಾಗಿ ಹುಟ್ಟುವಿ ಎಂದು ಅಂದರು ॥ ೧೬೦ ॥ ಅವರ ಮಾತು ಕೇಳಿ ಅವನು ಮನಸ್ಸಿನಲ್ಲಿ ಏನೂ ಸಂಶಯವಿಲ್ಲದೆ ಮನಸ್ಸಿನಲ್ಲಿ ಸುಖವನ್ನು ಹೊಂದಿದನು ॥ ೧೬೧ ॥ ದರಿದ್ರನಿಗೆ ಹೂಳಿಟ್ಟ ದ್ರವ್ಯವು ಸಿಕ್ಕರೆ ಸಂತೋಷದಿಂದ ಅವನು ಅದನ್ನು ತಕ್ಕೊಳ್ಳದೆ ಯಾಕೆಬಿಟ್ಟಾನು ? ರೋಗಿಗೆ ಅಮೃತ ಸಿಕ್ಕರೆ ಅವನು ಅದನ್ನು ಕುಡಿಯದೆ ಸುಮ್ಮನೆ ಯಾಕೆ ಬಿಟ್ಟಾನು ? ॥ ೧೬೨ ॥ ಉಪವಾಸವಾಗಿದ್ದ ಒಂದು ಘೋರವು ಹುಲ್ಲಿನ ರಾಶಿಯನ್ನು ಕಂಡು, ಸರ್ವಥಾ ಅದನ್ನು ಬಿಟ್ಟು ಹ್ಯಾಗೆ ಹೋಗುವದಿಲ್ಲವೋ ॥ ೧೬೩ ॥ ಅದರಂತೆ ಆ ಪತಿತನಿಗೆ ಆಗಿ ಅವನು ಶ್ರೀ ಗುರುಗಳನ್ನು ಧ್ಯಾನಿಸುತ್ತ, ತಾನು ಬ್ರಾಹ್ಮಣನೆಂದೆನ್ನುತ್ತ ಮನೆಗೆ ಹೋಗದೆ ಅಲ್ಲಿಯೇ ನಿಂತುಬಿಟ್ಟನು. ॥ ೧೬೪ ॥ ಅಷ್ಟರಲ್ಲಿ ಅವನ ಹೆಂಡರು-ಮಕ್ಕಳು ಬಂದು ಅವನನ್ನು ನೋಡಿ— ನಮ್ಮ ಅಪಸ್ಮಾರಿಯು ಸಿಕ್ಕನು ! ಎಂದು ಓಡುತ್ತ ಬಂದು. ॥ ೧೬೫ ॥ ಹೆಂಡತಿಯು ಅವನನ್ನು ಮುಟ್ಟಲಿಕ್ಕೆ ಬರಲು, ಅವನು ಸಿಟ್ಟಿಗೆದ್ದು— ಛೀ, ನನ್ನನ್ನು ಮುಟ್ಟಬೇಡ ನಡೆ ಎಂದು ಆಕೆಯನ್ನು ಹೊಡೆಯಲಿಕ್ಕೆ ಹೋದನು ॥ ೧೬೬ ॥ ಆಗ ಅವಳು ದುಃಖಿಸಿ, ದೂರಿಂದಲೇ ಶ್ರೀ ಗುರುಗಳಿಗೆ ನಮಸ್ಕರಿಸಿ— ಸ್ವಾಮೀ, ನನ್ನ ಗಂಡನು ನನ್ನನ್ನು ಬಿಟ್ಟುಹೋಗುತ್ತಾನಲ್ಲಾ ? ಈಗ ನಾನು ಏನು ಮಾಡಲಿ ? ॥ ೧೬೭ ॥ ನನಗೆ ಹೆಣ್ಣು-ಗಂಡುಮಕ್ಕಳು ಬಹಳ ಜನರಿರುವರು, ಇವರನ್ನು ಯಾರು ಸಂರಕ್ಷಿಸಬೇಕು ? ಈತನು ನಮ್ಮನ್ನು ಬಿಟ್ಟು ಯಾಕೆ ಹೋಗುತ್ತಾನೆ ಕೇಳಿ ಹೇಳಿರಿ. ॥ ೧೬೮ ॥ ಒಂದುವೇಳೆ ನೀವು ಅವನಿಗೆ ಹೇಳದಿದ್ದರೆ, ನಾನು ನನ್ನ ಮಕ್ಕಳು ಸಹಿತವಾಗಿ ಇಲ್ಲಿಯೇ ಪ್ರಾಣಬಿಡುವೆನು, ಸ್ವಾಮೀ, ನಾವು ಅನಾಥರು ! ನಮ್ಮನ್ನು ರಕ್ಷಿಸುವವರ್ಯಾರು ಎಂದು ಅಂದಳು. ॥ ೧೬೯ ॥ ಆಕೆಯ ಮಾತು ಕೇಳಿ ಶ್ರೀ ಗುರುಗಳು

ನಕ್ಕು ಅವನನ್ನು ಕುರಿತು, ‖ ೧೭೦ ‖ ಎಲೈ ಪತಿತನೇ, ಇನ್ನು ನೀನು ಮನೆಗೆ ಹೋಗು, ನೀನು ಸತಿ-ಸುತರನ್ನು ಕ್ಷೋಭಿಸಿದರೆ ನಿನಗೆ ದೋಷವು ಬರುವದು. ಆದರಿಂದ ನಿನಗೆ ಸದ್ಗತಿ ಹ್ಯಾಗೆ ಆದೀತು ? ‖ ೧೭೧ ‖ ಈ ಸಂಸಾರದಲ್ಲಿ ಹುಟ್ಟಿದವನು ಇಂದ್ರಿಯುಗಳನ್ನು ಸಂತೋಷಬಡಿಸಬೇಕು, ಆಮೇಲೆ ಧರ್ಮಕಾರ್ಯ ಮಾಡಿ ಈ ಭವಸಾಗರವನ್ನು ದಾಟಬೇಕು. ‖ ೧೭೨ ‖ ಆದಕಾರಣ ತಿಳಿದವರು ಮೊದಲೇ ಲಗ್ನ ಮಾಡಿಕೊಳ್ಳಬಾರದು, ಮಾಡಿಕೊಂಡಮೇಲೆ ಹೆಂಡತಿಯನ್ನು ಬಿಟ್ಟರೆ ಮಹಾದೋಷ ಬರುವದು. ‖ ೧೭೩ ‖ ನೀನು ಸೂರ್ಯ ಹಾಗು ಭೂಮಿಗಳ ಸಾಕ್ಷಿಯಾಗಿ ಇವಳನ್ನು ಲಗ್ನ ಮಾಡಿಕೊಂಡಿರುವಿ, ಅಂದಮೇಲೆ ಇಂಥವಳನ್ನು ಬಿಟ್ಟರೆ ನಿನಗೆ ಗತಿಯಾಗುವದಿಲ್ಲ ಎಂದರು. ‖ ೧೭೪ ‖ ಶ್ರೀ ಗುರುಗಳ ಮಾತುಕೇಳಿ ಅವನು ಕೈಮುಗಿದು ವಿನಯದಿಂದ— ಸ್ವಾಮೀ, ನನಗೆ ಈ ಮೊದಲೇ ಜ್ಞಾನವಾಗಿದೆ ನಾನು ಜಾತಿಹೀನನು ಹ್ಯಾಗೆ ಆದೆನು ? ಎಂದನು. ‖ ೧೭೫ ‖ ಆಗ ಶ್ರೀ ಗುರುಗಳು ಮನಸ್ಸಿನಲ್ಲಿ ವಿಚಾರಿಸಿ— ಇವನ ಮೈಯಲ್ಲಿ ವಿಭೂತಿಯಿರುತ್ತದೆ ಅದನ್ನು ಒಬ್ಬ ಲುಬ್ಧಕನ ಕಡೆಯಿಂದ ತೊಳಿಸಬೇಕು, ಅಂದರೆ ಇವನಿಗೆ ಅಜ್ಞಾನತ್ವವು ಬರುವದು ‖ ೧೭೬ ‖ ಎಂದು ಒಬ್ಬ ಶಿಷ್ಯನನ್ನು ಕರೆದು— ಎಲೈ ನೀನು ಈ ಊರಲ್ಲಿ ಒಬ್ಬ ಲುಬ್ಧಕನನ್ನು ತೀವ್ರವಾಗಿ ಕರಕೊಂಡುಬಾ ಎಂದು ಹೇಳಿದರು. ‖ ೧೭೭ ‖ ಆ ಗ್ರಾಮದಲ್ಲಿ ಒಬ್ಬ ಬ್ರಾಹ್ಮಣನು ವಾಣಿಜ್ಯನಾಗಿ ವ್ಯಾಪಾರ ಮಾಡುತ್ತಿದ್ದನು. ಆ ಶಿಷ್ಯನು ಅವನನ್ನು ಆ ಪತಿತನ ಹತ್ತರ ಕರಕೊಂಡು ಬಂದನು ‖ ೧೭೮ ‖ ಆಗ ಶ್ರೀ ಗುರುಗಳು ಆ ಲುಬ್ಧಕನನ್ನು ಕುರಿತು--- ಎಲೈ ಬ್ರಾಹ್ಮಣನೇ, ನೀನು ನೀರು ತಕ್ಕೊಂಡು ಆ ಪತಿತನಿಗೆ ಸ್ನಾನಮಾಡಿಸು. ಆದರಿಂದ ಅವನು ಸಂಸಾರದಲ್ಲಿ ಆಸಕ್ತನಾಗುವನು ಎಂದು ಹೇಳಿದರು. ‖ ೧೭೯ ‖ ಆದರಂತೆ ಆ ಬ್ರಾಹ್ಮಣನು ನೀರು ತಕ್ಕೊಂಡು ಬಂದು ಆ ಪತಿತನಮೇಲೆ ಸುರುವಿದ ಕೂಡಲೆ ಅವನ ಮೈಮೇಲಿನ ವಿಭೂತಿಯು ತೊಳೆದುಹೋಯಿತು. ‖೧೮೦‖ ಕೂಡಲೆ ಅವನು ಅಜ್ಞಾನವನ್ನು ಹೊಂದಿ, ತನ್ನ ಹೆಂಡರು-ಮಕ್ಕಳ ಮುಖವನ್ನು ನೋಡಿ, ಅವರ ಹತ್ತರ ಓಡಿ ಹೋಗಿ ‖ ೧೮೧ ‖ ಆ ಮಕ್ಕಳನ್ನು ಅಪ್ಪಿಕೊಂಡು ಭ್ರಾಂತಿಯಿಂದ— ನೀವು ಇಲ್ಲಿಗೆ ಯಾಕೆ ? ಯಾವ

ಕಾರ್ಯಕ್ಕಾಗಿ ಬಂದಿರಿ ? ॥ ೧೮೨ ॥ ಎಂದು ಅವನು ಮನಸ್ಸಿನಲ್ಲಿ ವಿಚಾರಿಸಿ, ಆಶ್ಚರ್ಯಬಡುತ್ತ ಮನೆಗೆ ಹೋಗಿ ತನ್ನ ಹೆಂಡತಿಗೆ ಎಲ್ಲ ಸಂಗತಿಯನ್ನು ಹೇಳಿದನು. ಅವನ್ನು ಕೇಳಿ ಅವರೆಲ್ಲರೂ ಆಶ್ಚರ್ಯಹೊಂದಿದರು. ॥ ೧೮೩ ॥ ಈ ಪ್ರಕಾರ ಕೌತುಕವಾದದ್ದನ್ನು ಆ ಊರ ಜನರು ನೋಡಿ, ವಿಸ್ಮಯಬಟ್ಟು— ಇದೊಂದು ಎಂಥ ಹೊಸ ಸಂಗತಿಯಾಯಿತಲ್ಲಾ ! ಎಂದೆನ್ನುತ್ತಿದ್ದರು ॥ ೧೮೪ ॥ ಆಗ ಶ್ರೀ ಗುರುಗಳ ಹತ್ತಿರಿದ್ದ ಆ ತ್ರಿವಿಕ್ರಮಭಾರತಿಯು ವಿನಯದಿಂದ ಶ್ರೀ ಗುರುಗಳಿಗೆ ಕೆಲವು ಮಾತು ಕೇಳುತ್ತಾರೆ ಅದನ್ನು ಎಲ್ಲರೂ ಏಕಚಿತ್ತದಿಂದ ಕೇಳಿರಿ. ॥ ೧೮೫ ॥ ತ್ರಿವಿಕ್ರಮ ಮುನಿಯು-- ಸ್ವಾಮೀ, ಗುರುಗಳೇ, ನನ್ನದೊಂದು ವಿನಂತಿಯದೆ. ನನ್ನ ಮನಸ್ಸಿನಲ್ಲಿ ಒಂದು ಸಂಶಯಬಂದದೆ, ಕೃಪೆಯಿಂದ ಆ ನನ್ನ ಸಂಶಯವನ್ನು ದೂರಮಾಡಬೇಕು. ॥೧೮೬॥ ಏನಂದರೆ— ಜಾತಿಹೀನನಾದಂಥ ಆ ಮಹಾ ಪತಿತನಿಗೆ ಮೊದಲು ದಿವ್ಯ ಜ್ಞಾನವನ್ನು ಕೊಟ್ಟಿರಿ. ಆದರೆ ಅವನ ದೇಹವನ್ನು ತೊಳೆದಕೂಡಲೆ, ಅವನ ಜ್ಞಾನವು ಹ್ಯಾಗೆ ಹೋಯಿಂತೆಂಬದನ್ನು ॥ ೧೮೭ ॥ ಕೃಪೆಯಿಂದ ವಿಸ್ತಾರವಾಗಿ ನನಗೆ ಹೇಳಬೇಕೆಂದು ಒಳ್ಳೇ ಭಕ್ತಿಯಿಂದ ಅವರ ಚರಣಕ್ಕೆ ನಮಸ್ಕರಿಸಿದನು. ॥ ೧೮೮ ॥ ಆ ತ್ರಿವಿಕ್ರಮ ಮುನಿಯ ಮಾತು ಕೇಳಿ ಶ್ರೀ ಗುರುಗಳು— ಎಲೈ ತ್ರಿವಿಕ್ರಮ ಮುನಿಯೇ, ಆ ಪತಿತನ ಮೈಮೇಲಿನ ವಿಭೂತಿಯನ್ನು ತೊಳೆದುಕೂಡಲೆ ಅವನ ಜ್ಞಾನವೆಲ್ಲ ನಷ್ಟವಾಗಿ ಹೋಯಿತು. ॥ ೧೮೯ ॥ ಈ ಪ್ರಕಾರವಾಗಿ ವಿಭೂತಿಯ ಮಹಿಮೆಯು ಇದ್ದು ಅದು ಪಾವನವಾದದ್ದೂ ಇರುತ್ತದೆ ಆ ಭಸ್ಮಧಾರಣೆಯಿಂದ ಪೂರ್ಣ ಬ್ರಹ್ಮಜ್ಞಾನವಾಗುವದು ಎಂದರು. ॥ ೧೯೦ ॥ ಆಗ ಮತ್ತೆ ತ್ರಿವಿಕ್ರಮ ಮುನಿಯು ವಿನಯದಿಂದ-- ದೇವಾ, ಶ್ರೀ ಗುರುಶಿರೋಮಣಿಗಳೇ, ನನಗೆ ಭಸ್ಮಮಹಿಮೆಯನ್ನು ಹೇಳಬೇಕು ಎಂದು ಬೇಡಿಕೊಂಡನು. ॥ ೧೯೧ ॥ ಎಲೈ ನಾಮಧಾರಕನೇ, ಇನ್ನು ಶ್ರೀ ಗುರುಗಳು ಭಸ್ಮಮಹಿಮೆಯನ್ನು ಹೇಳುವದನ್ನು ಕೇಳು. ॥ ೧೯೨ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಶ್ರೋತೃಗಳಿಗೆ ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳುತ್ತ, ಮನೋಹರವಾದ ಈ ಗುರುಚರಿತ್ರೆಯನ್ನು ಕೇಳುವದರಿಂದ ಸಕಲಾಭೀಷ್ಟಗಳು ಸಾಧಿಸುವವು. ॥ ೧೯೩ ॥

ಮುಂದಿನ ಪವಿತ್ರವಾದ ಕಥೆಯನ್ನು ಗುರುದಾಸನಾದ ಸರಸ್ವತೀ ಗಂಗಾಧರನು ಹೇಳುವನು. || ೧೯೯ || ಈ ಗುರುಚರಿತ್ರಾಮೃತದಲ್ಲಿ ಕರ್ಮ ವಿಪಾಕದ ಅರ್ಥವನ್ನು ಹೇಳಿ ಪತಿತನಿಗೆ ಜ್ಞಾನ ಕೊಟ್ಟದ್ದನ್ನು ಪುನಃ ವಿಮೋಚನ ಮಾಡಿದ್ದು ಹೇಳಿದೆ. || ೧೯೫ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧನಾಮ ಧಾರಕ ಸಂವಾದೇ ಪತಿತಾಯ ಕರ್ಮ ವಿಪಾಕ ಕಥನಂ ನಾಮ ಅಷ್ಟಾವಿಂಶೋಽಧ್ಯಾಯಃ || ೨೮ ||

|| ಶ್ರೀ ಗುರುದೇವದತ್ತ ||

— ೨೮ನೇ ಅಧ್ಯಾಯ ಸಮಾಪ್ತ —

---

# ೨೯ನೇಯ ಅಧ್ಯಾಯ



## — ಭಸ್ಮಮಹಿಮಾ ವರ್ಣನ —

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ ॥ ಆಮೇಲೆ ನಾಮ-ಧಾರಕನು ಸಿದ್ಧರನ್ನು ಕುರಿತು— ಸ್ವಾಮೀ, ಸಿದ್ಧಮುನಿಯೇ ತ್ರಿವಿಕ್ರಮ ಭಾರತಿ ಮುನಿಯು ಶ್ರೀ ಗುರುಗಳನ್ನು ಕುರಿತು ಭಸ್ಮ ಮಹಾತ್ಮ್ಯೆಯನ್ನು ಕೇಳಿದರೆಂದು ಈ ಮೊದಲು ಹೇಳಿದಿರಿ ॥ ೧ ॥ ಸಿದ್ಧ ಮುನಿಯೇ, ಕೃಪಾ ಸಿಂಧುವೇ, ಮುಂದೆ ಗುರುಚರಿತ್ರೆಯ ಕಥೆಯು ಯಾವ ಪ್ರಕಾರವಾಗಿ ನಡೆಯಿತೆಂಬದನ್ನು ವಿಸ್ತಾರವಾಗಿ ನನಗೆ ಹೇಳಬೇಕು ಎಂದು ವಿನಂತೀ ಮಾಡಿಕೊಂಡನು. ॥ ೨ ॥ ಈ ಪ್ರಕಾರವಾದ ಶಿಷ್ಯನ ವಿನಂತಿಯನ್ನು ಕೇಳಿ ಸಿದ್ಧರು ಪ್ರಸನ್ನವದನರಾಗಿ ಕೂಡಲೆ ಭಸ್ಮ ಮಹಾತ್ಮ್ಯವನ್ನು ಹೇಳಹತ್ತಿದರು ॥ ೩ ॥

ಎಲೈ ನಾಮಧಾರಕಾ, ಕೇಳು. ಆಗ ಶ್ರೀ ಗುರುಗಳು— ಎಲೈ ತ್ರಿವಿಕ್ರಮ ಮುನಿಯೇ, ನೀನು ಭಸ್ಮ ಮಹಾತ್ಮ್ಯವನ್ನು ಕೇಳುತ್ತೀ, ಏಕಚಿತ್ತದಿಂದ ಸಾವಧಾನವಾಗಿ ಕೇಳು. ॥ ೪ ॥ ಪೂರ್ವದ ಕೃತಯುಗದಲ್ಲಿ ವಾಮದೇವರೆಂಬ ಪ್ರಸಿದ್ಧರಾದ ಯೋಗಿಗಳು ಜಗತ್ತಿಗೆ ಗುರುಗಳಾಗಿ ಭೂಮಿಯಲ್ಲಿ ಇರುತ್ತಿದ್ದರು. ॥ ೫ ॥ ಅವರು ಶುದ್ಧ-ಬುದ್ಧ ಬ್ರಹ್ಮಜ್ಞಾನಿಗಳಾಗಿ, ಮನೆ-ಮಾರು, ಹೆಂಡರು-ಮಕ್ಕಳು, ಕಾಮ-ಕ್ರೋಧಾದಿಗಳನ್ನು ಬಿಟ್ಟು, ॥ ೬ ॥ ಸದಾ ಆನಂದಮಯರೂ ನಿಸ್ಪ್ರಹರೂ ಆಗಿ ಸರ್ವಾಂಗದಲ್ಲಿ ಭಸ್ಮವನ್ನು ಲೇಪಿಸಿಕೊಂಡು, ಜಟಾಧಾರಿಗಳಾಗಿ, ವಲ್ಕಲವಸ್ತ್ರ, ವ್ಯಾಘ್ರಚರ್ಮಗಳನ್ನು ಧರಿಸಿ, ॥ ೭ ॥ ಈ ಭೂಮಿಯಲ್ಲಿರುವ ನಾನಾ ಕ್ಷೇತ್ರ ಗಳಲ್ಲಿ ಸಂಚಾರ ಮಾಡುತ್ತ ಮಾಡುತ್ತ ಒಮ್ಮೆ ಬ್ರಹ್ಮರಾಕ್ಷಸರು ವಾಸಮಾಡುವಂಥ ಕ್ರೌಂಚಾ ಎಂಬ ಭಯಂಕರ ವಾದ ಆರಣ್ಯಕ್ಕೆ ಬಂದರು. ॥ ೮ ॥ ಅಲ್ಲಿ ಭಯಂಕರ ಒಬ್ಬ ಬ್ರಹ್ಮರಾಕ್ಷಸನಿದ್ದು ಅವನು ಮನುಷ್ಯ ಮೊದಲಾದ

ಪ್ರಾಣಿಗಳನ್ನು ಕೊಂದು ತಿನ್ನುತ್ತಿದ್ದನು. ‖ ೯ ‖ ಇಂಥ ಭಯಂಕರವಾದ ವನದಲ್ಲಿ ವಾಮದೇವ ಮುನಿಗಳು ಬರಲು ಒಳ್ಳೇ ಹಸಿವೆಯಿಂದ ಪೀಡಿತನಾದ ಆ ಬ್ರಹ್ಮರಾಕ್ಷಸನು ಅವರನ್ನು ನೋಡಿ ತಿನ್ನಬೇಕೆಂದು ಓಡುತ್ತ ‖ ೧೦ ‖ ಕರಕರ ಹಲ್ಲು ತಿನ್ನುತ್ತ ಬಾಯಿಯನ್ನು ತರ್ಕೊಂಡು ಅವರ ಸಮೀಪಕ್ಕೆ ಬಂದನು. ‖ ೧೧ ‖ ಅವನು ಬರುವದನ್ನು ನೋಡಿದರೂ ಮಹಾ ಜ್ಞಾನಿಯಾದ ವಾಮದೇವರು ಅವನಿಗೆ ಸ್ವಲ್ಪಾದರೂ ಅಂಜದೆ ಅವನ ಎದುರಿಗೆ ನಿಂತುಬಿಟ್ಟರು ಆಗ ಆ ರಾಕ್ಷಸನು ಅವರ ತೀರ ಸಮೀಪಕ್ಕೆ ಬಂದು, ‖ ೧೨ ‖ ಈ ದಿನ ನನಗೆ ಒಳ್ಳೇ ಆಹಾರವು ಸಿಕ್ಕಿತು ಎಂದು ಸಂತೋಷಬಟ್ಟು, ತಿನ್ನಬೇಕೆಂಬ ಅಪೇಕ್ಷೆಯಿಂದ ಅವರನ್ನು ಹಿಡಿದು ಆಲಿಂಗಿಸಿದನು. ‖ ೧೩ ‖ ಅವರನ್ನು ಆಲಿಂಗಿಸಿದ ಕೂಡಲೆ ಅವರ ಮೈಮೇಲಿನ ಭಸ್ಮವು ಆ ರಾಕ್ಷಸನಿಗೆ ಹತ್ತಿತು. ಆಗ ಅವನಿಗೆ ಜ್ಞಾನವಾಗಿ ಪೂರ್ವಜನ್ಮಗಳ ಜಾತಿಸ್ಮರಣವುಂಟಾಯಿತು. ‖ ೧೪ ‖ ಮತ್ತು ಅವನ ಪಾತಕಗಳೆಲ್ಲ ಸುಟ್ಟುಹೋಗಿ ಲೋಹಕ್ಕೆ ಚಿಂತಾಮಣಿಯು ಸ್ಪರ್ಶವಾಗಲು ಅದು ಸುವರ್ಣವಾಗುಂತೆ ಆ ಭಸ್ಮ ಪ್ರಭಾವದಿಂದ ಅವನು ಬ್ರಹ್ಮಜ್ಞಾನಿಯಾದನು. ‖ ೧೫ ‖ ಹಾಗು ಮಾನಸ ಸರೋವರಕ್ಕೆ ಹೋದ ಕಾಗೆಯು ರಾಜಹಂಸವಾಗುವಂತೆ, ಅಮೃತಪಾನ ಮಾಡಿದ ಮನುಷ್ಯನು ದೇವತ್ವವನ್ನು ಹೊಂದುವಂತೆ ‖ ೧೬ ‖ ಜಾಂಬೂ ನದಿಯಲ್ಲಿ ಬಿದ್ದ ಮಣ್ಣು ಬಂಗಾರವಾಗುವಂತೆ ಮಹಾ ಪಾಪಿಯಾದ ಆ ಬ್ರಹ್ಮರಾಕ್ಷಸನು ಆ ಯೋಗಿಗಳ ಅಂಗಸ್ಪರ್ಶದಿಂದ ಪುನೀತನಾದನು. ‖ ೧೭ ‖ ಎಲೈ ತ್ರಿವಿಕ್ರಮ ಮುನಿಯೇ, ಸತ್ಪುರುಷರ ದರ್ಶನದಿಂದ ದುರ್ಲಭವಾದ ಮನಸ್ಸಿನ ಅಪೇಕ್ಷಗಳೆಲ್ಲ ಪೂರ್ಣವಾಗುತ್ತವೆ. ಮತ್ತು ಗುರುಚರಣಗಳು ಸ್ಪರ್ಶವಾದ ಮನುಷ್ಯನ ಪಾಪಗಳು ನಾಶವಾಗುವವು. ‖ ೧೮ ‖ ಆ ಕ್ರೂರ ಬ್ರಹ್ಮರಾಕ್ಷಸನ ಹಸಿವೆಯನ್ನೆಷ್ಟು ಹೇಳಲಿ ? ಅವನು ಆನೆ, ಕುದುರೆ, ಮನುಷ್ಯ ಮೊದಲಾದ ಸಕಲ ಪ್ರಾಣಿಗಳನ್ನು ತಿನ್ನುತ್ತಿದ್ದನು. ‖ ೧೯ ‖ ಎಷ್ಟು ತಿಂದರೂ ಅವನ ಹಸಿವೆಯು ಹಿಂಗುತ್ತಿದ್ದಿಲ್ಲ. ತೃಷಾಕ್ರಾಂತನಾದ ಅವನು ಸಮುದ್ರವನ್ನು ಕುಡಿದರೂ ಅವನ ನೀರಡಿಕೆಯು ಕಡಿಮೆಯಾಗುತ್ತಿದ್ದಿಲ್ಲ. ‖ ೨೦ ‖ ಇಂಥ ಮಹಾ ಪಾಪಿಯಾದ ರಾಕ್ಷಸನಿಗೆ ವಾಮದೇವ ಮುನಿಯ ಅಂಗಸ್ಪರ್ಶವಾದಕೂಡಲೆ,

+ ದಿಗಂಬರಾ ದಿಗಂಬರಾ +

+ ಶ್ರೀಪಾದವಲ್ಲಭ ದಿಗಂಬರಾ +

ಅವನ ಅಂಥ ಹಸಿವೆ ನೀರಡಿಕೆಗಳೆಲ್ಲ ಹೋಗಿ ಅವನು ಮಹಾ ಜ್ಞಾನಿಯಾದನು. || ೨೧ || ಈ ಪ್ರಕಾರ ಅವನು ಜ್ಞಾನವಂತನಾಗಿ ಆ ಮುನಿಯ ಚರಣಗಳಿಗೆ ನಮಸ್ಕರಿಸಿ— ಗುರುಶಿರೋಮಣಿಗಳೇ, ನೀವು ಸಾಕ್ಷಾತ್ ಈಶ್ವರರಾಗಿದ್ದೀರಿ. ನನ್ನನ್ನು ರಕ್ಷಿಸಿರಿ, ರಕ್ಷಿಸಿರಿ. || ೨೨ || ಸ್ವಾಮೀ, ಮುನೀಶ್ವರಾ, ಜಗದೀಶ್ವರಾ, ಕೃಪಾಸಿಂಧುವೇ, ದಾತಾರನೇ ನಾನು ಘೋರವಾದ ಸಂಸಾರ ಸಾಗರದಲ್ಲಿ ಮುಳುಗಿದ್ದೇನೆ. ನನ್ನನ್ನು ಕಾಪಾಡಿರಿ, ಕಾಪಾಡಿರಿ. ||೨೩|| ಸ್ವಾಮೀ, ತಮ್ಮ ದರ್ಶನ ಮಾತ್ರದಿಂದಲೇ ನನ್ನ ಪಾಪರಾಶಿಗಳು ಸುಟ್ಟುಹೋದವು. ಭಕ್ತರ ಮೇಲೆ ಕೃಪೆ ಮಾಡುವ ಗುರುರಾಯರೇ, ನನ್ನನ್ನು ಉದ್ಧರಿಸಿ ಪಾಲಿಸಿರಿ ಎಂದು ಬಿನ್ನವಿಸಿದನು. || ೨೪ || ಈ ರೀತಿಯಾಗಿ ಅವನು ಆ ಮುನೀಶ್ವರರಿಗೆ ವಿನಂತೀ ಮಾಡಿಕೊಳ್ಳಲಾಗಿ ಕೃಪಾಸಮರಸರಾದ ವಾಮದೇವರು ಅವನಿಗೆ ಪ್ರಶ್ನೆ ಮಾಡಿದರು. || ೨೫ || ಏನಂದರೆ— ಎಲೈ ರಾಕ್ಷಸನೇ, ನೀನು ಯಾರು ? ನೀನು ಯಾರ ವಂಶದಲ್ಲಿ ಹುಟ್ಟಿದಿ ? ನಿನ್ನ ಊರು ಯಾವದು ? ಈಗ ನೀನು ಘೋರವಾದ ವನದಲ್ಲಿ ಇರಲಿಕ್ಕೆ ಕಾರಣವೇನು ? ಎಂದು ಕೇಳಿದರು || ೨೬ || ಎಲೈ ತ್ರಿವಿಕ್ರಮ ಮುನಿಯೇ ಕೇಳು. ಈ ಪ್ರಕಾರ ವಾಮದೇವರ ಮಾತು ಕೇಳಿ ಆ ಬ್ರಹ್ಮರಾಕ್ಷಸನು ನಮಸ್ಕರಿಸಿ ಕೈಮುಗಿದು ನಿಂತುಕೊಂಡು ವಿನಂತೀಪೂರ್ವಕ ಹೇಳುತ್ತಾನೆ || ೨೭ || ಆಗ ರಾಕ್ಷಸನು— ಸ್ವಾಮೀ, ಈಗ ನನಗೆ ಸಕಲ ಜ್ಞಾನವಾಗಿದೆ. ಆದರಿಂದ ನನ್ನ ಅಂತಕಾಲದಲ್ಲಿ ಪೂರ್ವದ ಯಾವತ್ತು ಜನ್ಮಗಳ ಸ್ಮರಣೆಯುಂಟಾಗಿದೆ. || ೨೮ || ವಾಮದೇವ ಮುನಿಗಳೇ, ಆ ಪೂರ್ವ ಜನ್ಮಗಳಲ್ಲಿ ನಾನು ಬಹಳ ಪಾಪ ಮಾಡಿದೆನು. ಅವುಗಳಲ್ಲಿ ೨೫ ಜನ್ಮಗಳು ಒಳ್ಳೇ ಸ್ಪಷ್ಟವಾಗಿ ಪ್ರಕಾಶಮಾನವಾಗಿ ತಿಳಿಯುತ್ತವೆ ಅವುಗಳನ್ನು ಕೇಳಿರಿ. || ೨೯ || ಸ್ವಾಮೀ, ನಾನು ನನ್ನ ೨೫ ನೇ ಪೂರ್ವ ಜನ್ಮದಲ್ಲಿ ಯವನ ದೇಶದಲ್ಲಿ ದುರ್ಜಯನೆಂಬ ರಾಜನಾಗಿ ಬಹು ದುರಾಚಾರಿಯಾಗಿದ್ದೆನು. || ೩೦ || ಆಗ ನಾನು ಬಹು ಜನರನ್ನು ಕೊಂದು ಪ್ರಜೆಗಳಿಗೆ ಬಹಳ ದುಃಖ ಕೊಟ್ಟೆನು. ರಾಜ್ಯಮದದಿಂದ ಅನೇಕ ಸ್ತ್ರೀಯರನ್ನು ಲಗ್ನವಾದೆನು. || ೩೧ || ಆ ಲಗ್ನದ ಸ್ತ್ರೀಯರನ್ನಲ್ಲದೆ ಬೇರೆ ಅನೇಕ ಲೆಕ್ಕವಿಲ್ಲದಷ್ಟು ಸ್ತ್ರೀಯರನ್ನು ಭೋಗಿಸಿದೆನು. ಒಬ್ಬಳನ್ನು ಒಂದು ದಿವಸ ಭೋಗಿಸಿದಮೇಲೆ ಪುನಃ

ಅವಳನ್ನು ಭೋಗಿಸುತ್ತಿದ್ದಿಲ್ಲ. || ೩೨ || ಒಂದು ದಿವಸ ಒಬ್ಬಳನ್ನು ಭೋಗಿಸಿ ಅವಳನ್ನು ಅಂತರ್ಗೃಹದಲ್ಲಿಟ್ಟು ಪುನಃ ಕಣ್ಣೆತ್ತಿ ನೋಡುತ್ತಿದ್ದಿಲ್ಲ. || ೩೩ || ಈ ಪ್ರಕಾರ ಅನೇಕ ಸ್ತ್ರೀಯರನ್ನು ಅಂತರ್ಗೃಹದಲ್ಲಿಟ್ಟೆನು. ಆ ಸ್ತ್ರೀಯರು ಮತ್ತೊಮ್ಮೆ ದರ್ಶನ ಕೊಡುವದಿಲ್ಲೆಂದು ನನ್ನನ್ನು ದಿನಾಲು ಶಪಿಸುತ್ತಿದ್ದರು. || ೩೪ || ನಾನು ಯಾವತ್ತೂ ರಾಜರನ್ನು ಗೆದ್ದು, ಅವರವರ ಸ್ತ್ರೀಯರನ್ನು ತಂದು ಒಂದು ದಿವಸ ಭೋಗಿಸಿ ಅವರನ್ನು ಅಂತರ್ಗೃಹ ದಲ್ಲಿಡುತ್ತಿದ್ದೆನು. || ೩೫ || ಎಲ್ಲಿ ಸುಂದರ ಸ್ತ್ರೀಯರಿರುತ್ತಿದ್ದರೋ ಅಲ್ಲಿಂದ ಅವರನ್ನು ಬಲಾತ್ಕಾರದಿಂದ ತರುತ್ತಿದ್ದೆನು. ಅವರು ಸಂತೋಷದಿಂದ ಬರದಿದ್ದರೆ ದ್ರವ್ಯ ಕೊಟ್ಟಾದರೂ ತಂದು ಸುಖಿಸುತ್ತಿದ್ದೆನು. || ೩೬ || ನಮ್ಮ ದೇಶದ ಬ್ರಾಹ್ಮಣರು ನನ್ನ ಉಪದ್ರವವನ್ನು ತಡೆಯಲಾರದೆ ಬೇರೆ ಕಡೆಗೆ ಹೋಗಿರುತ್ತಿದ್ದರು. ಅದರಿಂದ ನಾನು ಅಲ್ಲಿಗೆ ಹೋಗಿ, ಉನ್ಮತ್ತನಾಗಿ ಅವರ ಹೆಂಡರನ್ನು ಭೋಗಿಸುತ್ತಿದ್ದೆನು. || ೩೭ || ಮತ್ತು ಮುಖ್ಯವಾಗಿ ಪತಿವ್ರತೆಯರಾದ ಸುವಾಸಿನಿಯರನ್ನೂ ವಿಧವೆಯರನ್ನೂ ರಜಸ್ವಲೆಯರನ್ನೂ ಉನ್ಮತ್ತತನದಿಂದ ಭೋಗಿಸುತ್ತಿದ್ದೆನು || ೩೮ || ಲಗ್ನವಾಗದ ಕನ್ಯೆಯರನ್ನೂ ಸಹ ಬಲಾತ್ಕಾರದಿಂದ ಭೋಗಿಸುತ್ತಿದ್ದೆನು. ಈ ಪ್ರಕಾರ ಮಧಾಂಧತನದಿಂದ ಎಲ್ಲ ದೇಶಗಳಲ್ಲಿಯೂ ಉಪದ್ರವ ಕೊಡುತ್ತಿದ್ದೆನು. || ೩೯ || ಈ ಪ್ರಕಾರ ನಾನು ಒಟ್ಟು ೩೦೦ ಮಂದಿ ಬ್ರಾಹ್ಮಣ ಸ್ತ್ರೀಯರನ್ನೂ, ೪೦೦ ಶ್ರೇಷ್ಠ ಕ್ಷತ್ರಿಯ ಸ್ತ್ರೀಯರನ್ನೂ ೬೦೦೦ ವೈಶ್ಯ ಸ್ತ್ರೀಯರನ್ನೂ, ೧೦೦೦ ಶೂದ್ರ ಸ್ತ್ರೀಯರನ್ನೂ || ೪೦ || ೧೦೦ ಚಾಂಡಾಲ ಸ್ತ್ರೀಯರನ್ನೂ, ೧೦೦೦ ಬೇಡ ಸ್ತ್ರೀಯರನ್ನೂ ೫೦೦ ಡೊಂಬ ಸ್ತ್ರೀಯರನ್ನೂ, ೪೦೦ ಅಗಸ ಸ್ತ್ರೀಯರನ್ನೂ || ೪೧ || ಇದಲ್ಲದೆ ಉನ್ಮತ್ತನಾಗಿ ಲೆಕ್ಕವಿಲ್ಲದಷ್ಟು ವಾರಾಂಗನೆಯರನ್ನು ನಾನು ಭೋಗಿಸಿದೆನು ಸ್ವಾಮೀ, ಇಷ್ಟಾದರೂ ನನ್ನ ಮನಸ್ಸಿಗೆ ತೃಪ್ತಿಯಾಗಲಿಲ್ಲ. || ೪೨ || ಇಷ್ಟು ಸ್ತ್ರೀಯರನ್ನು ಭೋಗಿಸಿದರೂ ನನ್ನಮನಸ್ಸು ತೃಪ್ತಿಹೊಂದಲಿಲ್ಲ. ಅದರಿಂದ ನಾನು ವಿಷಯಾಸಕ್ತಿಯಿಂದ ಮದ್ಯಪಾನ ಮಾಡುತ್ತ ಉನ್ಮತ್ತನಾಗಿದ್ದೆನು. ||೪೩|| ಈ ಪ್ರಕಾರವಾಗಿರುತ್ತಿರಲು ನಾನು ಮುಂದೆ ರಾಜಯಕ್ಷ್ಮಾದಿ ರೋಗವುಳ್ಳವನಾದೆನು. ಆಗ ಪರರಾಜರು ಬಂದು ನನ್ನ ಎಲ್ಲ ರಾಜ್ಯವನ್ನು ಅಪಹರಿಸಿದರು. || ೪೪ ||

ಆಮೇಲೆ ನನಗೆ ಮರಣವು ಬಂತು, ಆಮೇಲೆ ಯಮದೂತರು ಬಂದು ನನ್ನನ್ನು ಒಯ್ದು ನರಕದಲ್ಲಿ ಹಾಕಿದರು. ॥ ೪೫ ॥ ಅಲ್ಲಿ ನಾನು ದೇವಮಾನದ ಸಾವಿರ ವರುಷಗಳವರೆಗೆ ನಮ್ಮ ಪಿತೃಗಳೊಡನೆ ಹತ್ತುಸಾರಿ ನರಕವನ್ನು ಅನುಭೋಗಿಸಿದೆನು. ॥ ೪೬ ॥ ಮುಂದೆ ಪ್ರೇತವಂಶದಲ್ಲಿ ವಿರೂಪ ದೇಹವುಳ್ಳವನಾಗಿಯೂ, ಶರೀರದಲ್ಲಿ ಸಾವಿರ ಶಿಶ್ನಗಳುಳ್ಳವನಾದೆನು. ॥ ೪೭ ॥ ಆಮೇಲೆ ನೂರು ವರ್ಷಗಳವರೆಗೆ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಪುನಃ ಯಮಪುರಕ್ಕೆ ಹೋಗಿ ಬಹಳ ಕಷ್ಟಬಟ್ಟೆನು. ॥ ೪೮ ॥ ಆಮೇಲೆ ೨ನೇ ಜನ್ಮದಲ್ಲಿ ಹುಲಿಯಾಗಿ ಪ್ರಾಣಿಗಳನ್ನು ಕೊಂದೆನು ೩ನೇ ಜನ್ಮದಲ್ಲಿ ಹೆಬ್ಬಾವು ಆದೆನು, ೪ನೇ ಜನ್ಮದಲ್ಲಿ ತೋಳ ಆದೆನು. ॥೪೯॥ ೫ನೇ ಜನ್ಮದಲ್ಲಿ ಊರ ಹಂದಿಯಾದೆನು, ೬ನೇ ಜನ್ಮದಲ್ಲಿ ಓತೀಕಾಟ ಆದೆನು. ॥ ೫೦ ॥ ೭ನೇ ಜನ್ಮದಲ್ಲಿ ನಾಯಿಯಾದೆನು. ೮ನೇ ಜನ್ಮದಲ್ಲಿ ಮತಿಹೀನ ನರಿಯಾದೆನು. ೯ನೇ ಜನ್ಮದಲ್ಲಿ ಚಿಗರಿಯಾದೆನು. ೧೦ನೇ ಜನ್ಮದಲ್ಲಿ ಮೊಲವಾದೆನು. ॥ ೫೧ ॥ ೧೧ನೇ ಜನ್ಮದಲ್ಲಿ ಕಪಿಯಾದೆನು. ೧೨ನೇ ಜನ್ಮದಲ್ಲಿ ಕಡವೆಯಾದೆನು ೧೩ನೇ ಜನ್ಮದಲ್ಲಿ ಮುಂಗಲಿಯಾದೆನು ೧೪ನೇ ಜನ್ಮದಲ್ಲಿ ಕಾಗೆಯಾದೆನು ॥ ೫೨ ॥ ೧೫ನೇ ಜನ್ಮದಲ್ಲಿ ದುಃಖದ ಕರಡಿಯಾದೆನು ೧೬ನೇ ಜನ್ಮದಲ್ಲಿ ಕಾಡಕೋಳಿಯಾದೆನು ॥ ೫೩ ॥ ೧೭ನೇ ಜನ್ಮದಲ್ಲಿ ಕತ್ತೆಯಾದೆನು ೧೮ನೇ ಜನ್ಮದಲ್ಲಿ ಬೆಕ್ಕು ಆದೆನು ॥ ೫೪ ॥ ೧೯ನೇ ಜನ್ಮದಲ್ಲಿ ಕಪ್ಪೆಯಾದೆನು. ೨೦ನೇ ಜನ್ಮದಲ್ಲಿ ಆವಿಯಾದೆನು. ೨೧ನೇ ಜನ್ಮದಲ್ಲಿ ಮೀನ ಆದೆನು ॥ ೫೫ ॥ ೨೨ನೇ ಜನ್ಮದಲ್ಲಿ ಕಳ್ಳ ಇಲಿಯಾದೆನು ೨೩ನೇ ಜನ್ಮದಲ್ಲಿ ದಿವಾಂಧವಾದ ಕಿವುಡ ಗೂಗೆಯಾದೆನು. ॥ ೫೬ ॥ ೨೪ನೇ ಜನ್ಮದಲ್ಲಿ ಮದ್ದಾನೆಯಾದೆನು. ಈ ೨೫ ನೇ ಜನ್ಮದಲ್ಲಿ ಬ್ರಹ್ಮರಾಕ್ಷಸನಾದೆನು. ॥ ೫೭ ॥ ಸ್ವಾಮೀ, ಈ ಜನ್ಮದಲ್ಲಿ ನಾನು ಹಗಲಿರುಳು ಅತ್ಯಂತ ಹಸಿವೆಯಿಂದ ಬಳಲುವವನಾಗಿ ಬಹಳ ಕಷ್ಟಬಡುತ್ತ, ನಿರಾಹಾರಿಯಾಗಿ ಅರಣ್ಯದಲ್ಲಿ ವಾಸಮಾಡುತ್ತಿದ್ದೆನು. ॥ ೫೮ ॥ ನಿಮ್ಮನ್ನು ಕಂಡು ನನ್ನ ಮನಸ್ಸಿನಲ್ಲಿ ನಿಮ್ಮನ್ನು ತಿನ್ನಬೇಕೆಂಬ ಅಪೇಕ್ಷೆಯಾಗಿ ಪಾಪಿಯಾದ ನಾನು ಓಡಿಬಂದು, ॥ ೫೯ ॥ ನಿಮ್ಮ ಅಂಗಸ್ಪರ್ಶ ಮಾಡಿದಕೂಡಲೆ ನನಗೆ ಜಾತಿ ಸ್ಮರಣ ಬಂತು, ಸ್ವಾಮೀ, ಈಗ ನನಗೆ ಸಾವಿರ ಜನ್ಮಗಳ

ಪಾಪಗಳು ಕಾಣುತ್ತವೆ. ‖ ೬೦ ‖ ಇನ್ನು ನನಗೆ ಜನ್ಮ ಸಾಕು ! ತಮ್ಮ ಅನುಗ್ರಹದಿಂದ ನಾನು ಈ ಘೋರ ಸಂಸಾರವನ್ನು ದಾಟಿದೆನು. ನನ್ನ ಈ ಯಾತಾಯಾತವನ್ನು ಪೂರ್ಣ ಮಾಡಿರಿ. ‖ ೬೧ ‖ ನೀವು ವಿಶ್ವತಾರಕರಿರುವದರಿಂದ ನನಗೆ ದರ್ಶನ ಕೊಟ್ಟಿರಿ, ನಿಮ್ಮ ಅಂಗಸ್ಪರ್ಶದಿಂದ ನನಗೆ ಜ್ಞಾನವಾಯಿತೆಂದಮೇಲೆ ನಿಮ್ಮ ಚರಣ ಮಹಿಮೆಯು ಅಗಾಧವಾದದ್ದಿರುವದು. ‖ ೬೨ ‖ ಭೂಮಿಯಮೇಲೆ ಅನೇಕ ಪುರುಷರಿರುತ್ತಾರೆ. ಯತಿಗಳಾದ ತಾವು ಆದರಂತೆ ಸಾಧಾರಣ ಮನುಷ್ಯರಲ್ಲ ! ತಮ್ಮ ಮಹಿಮೆಯು ಪ್ರಖ್ಯಾತವಾದದ್ದಿರುತ್ತದೆ. ‖೬೩‖ ಸ್ವಾಮೀ. ನಾನು ಮಹಾ ಪಾಪಿಯೂ ದುರಾಚಾರಿಯೂ ಆಗಿ ಈ ಅರಣ್ಯದಲ್ಲಿದ್ದೆನು. ತಮ್ಮ ಅಂಗಸ್ಪರ್ಶದಿಂದ ನನಗೆ ಯಾವತ್ತು ಜ್ಞಾನವಾಯಿತು. ‖ ೬೪ ‖ ಸ್ವಾಮೀ, ನಿಮ್ಮ ದೇಹದ ಮಹಿಮೆಯು ಎಂಥಾದ್ದದೆಯಲ್ಲಾ ! ತಾವು ಈ ಲೋಕದಲ್ಲಿ ಈಶ್ವರರಾಗಿದ್ದೀರೋ ಏನೋ ? ಸ್ವಾಮೀ, ವಾಮದೇವರೇ, ತಾವು ನನ್ನ ಉದ್ಧಾರಕ್ಕಾಗಿಯೇ ಬಂದಿರುವಿರಿ ಎಂದು ಅಂದನು. ‖ ೬೫ ‖

ಆಗ ವಾಮದೇವರು ಸಂತೋಷದಿಂದ— ಎಲೈ ರಾಕ್ಷಸನೇ, ನನ್ನ ಮೈಯಲ್ಲಿರುವ ಭಸ್ಮಮಹಿಮೆಯು ಈ ಪ್ರಕಾರವಾಗಿರುವದು. ‖ ೬೬ ‖ ನನ್ನ ಸರ್ವಾಂಗದಲ್ಲಿರುವ ಭಸ್ಮವು ನಿನ್ನ ಮೈಗೆ ಅತಿ ಸ್ವಲ್ಪ ಹತ್ತಿದ ಕೂಡಲೆ ನಿನ್ನ ಮನಸ್ಸಿನಲ್ಲಿ ಈ ಪ್ರಕಾರ ಜನ್ಮಾಂತರದ ಜ್ಞಾನವಾಯಿತು ‖ ೬೭ ‖ ಭಸ್ಮಮಹಿಮೆಯು ಅಪರಂಪಾರವಾಗಿರುವದು. ಅದು ಬ್ರಹ್ಮಾದಿಕರಿಗೆ ಸಹ ಅಗೋಚರವು ಆದಕಾರಣ ಈಶ್ವರನು ತನ್ನ ಸರ್ವಾಂಗದಲ್ಲಿ ಸದಾ ಭಸ್ಮವನ್ನು ಧರಿಸುವನು. ‖ ೬೮ ‖ ಆ ಈಶ್ವರನು ವಂದಿಸುವಂಥ ವಸ್ತುವನ್ನು ವರ್ಣಿಸಲಿಕ್ಕೆ ನಾನು ಶಕ್ಯನಲ್ಲ. ಭಸ್ಮ ಮಹಿಮೆಯನ್ನು ಆ ವ್ಯೋಮಕೇಶನಾದ ಶಂಕರನೇ ಬಲ್ಲನು. ‖ ೬೯ ‖ ನೀನು ಒಂದುವೇಳೆ ನನ್ನನ್ನು ಕೇಳಿದರೆ, ನಾನು ಕಣ್ಣಿನಿಂದ ಪ್ರತ್ಯಕ್ಷವಾಗಿ ನೋಡಿದ ಅಪಾರವಾದ ಭಸ್ಮ ಮಹಿಮೆಯ ಒಂದು ದೃಷ್ಟಾಂತವನ್ನು ಹೇಳುವೆನು ಕೇಳು. ‖ ೭೦ ‖

ದ್ರವಿಡ ದೇಶದಲ್ಲಿ ಆಚಾರಹೀನನೂ, ಸದಾ ಶೂದ್ರ ಸ್ತ್ರೀರತನೂ, ಕರ್ಮಭ್ರಷ್ಟನೂ ಆದ ಒಬ್ಬ ಬ್ರಾಹ್ಮಣನಿದ್ದನು. || ೭೧ || ಆದರಿಂದ ಅಲ್ಲಿಯ ಬ್ರಾಹ್ಮಣರೆಲ್ಲರೂ ಕೂಡಿ ಅವನಿಗೆ ಬಹಿಷ್ಕಾರ ಹಾಕಿದರು. ಆಗ ಅವನ ತಾಯಿ–ತಂದೆಗಳೂ, ಬಂಧುಗಳೂ, ಗೋತ್ರಜರೂ, ಆಪ್ತೇಷ್ಟರೂ • ಅವನನ್ನು ಬಿಟ್ಟುಬಿಟ್ಟರು. || ೭೨ || ಅವನು ಒಳ್ಳೇ ಆಚಾರಹೀನನಾಗಿ ಶೂದ್ರ ಸ್ತ್ರೀಯನ್ನು ಲಗ್ನ ಮಾಡಿಕೊಂಡು ಕಾಲ ಕಳೆಯುತ್ತ ಇದ್ದನು. || ೭೩ || ಅವನು ಈ ರೀತಿ ಮಹಾ ಪಾಪಿಯಾಗಿ ಕಳ್ಳತನದಿಂದ ಹೊಟ್ಟೆ ಹೊರೆಯುತ್ತಿದ್ದನು. ಮತ್ತು ಅವನು ಉನ್ಮತ್ತ ರೀತಿಯಿಂದ ಬೇರೆ ಸ್ತ್ರೀಯರಲ್ಲಿ ವ್ಯಭಿಚಾರ ಮಾಡುತ್ತಿದ್ದನು. || ೭೪ || ಈ ಪ್ರಕಾರ ನಡೆದಿರಲು ಒಂದು ದಿವಸ ಅವನು ವ್ಯಭಿಚಾರಕ್ಕಾಗಿ ರಾತ್ರಿ ಕಳವು ಮಾಡಲಿಕ್ಕೆ ಹೋದನು. ಆಗ ಒಬ್ಬ ಶೂದ್ರನು ಅವನನ್ನು ಕೊಂದನು. || ೭೫ || ಆ ಹೆಣವನ್ನು ಅದೇ ರಾತ್ರಿ ಕಟ್ಟಿಕೊಂಡು ಹೋಗಿ, ಆ ಊರ ಹೊರಗಿರುವ ಒಂದು ಭಯಂಕರ ಸ್ಥಳದಲ್ಲಿ ಒಗೆದನು. || ೭೬ || ಆಗ ಒಂದು ಭಸ್ಮದ ರಾಸಿಯಮೇಲೆ ಕೂತ ಆ ಊರ ಒಂದು ನಾಯಿಯು ಹಸಿವೆಯಿಂದ ಆ ಪ್ರೇತದ ವಾಸನೆಯನ್ನು ಹಿಡಿದು ತಿರುಗುತ್ತ ಹೋಗಿ || ೭೭ || ಆ ಪ್ರೇತವನ್ನು ನೋಡಿ ಅದನ್ನು ತಿನ್ನಲಿಕ್ಕೆ ಹೋಗಿ ಅದರ ಮೈಮೇಲೆ ಕೂತು ಹರ್ಷದಿಂದ ತಿನ್ನುತ್ತ ತನ್ನ ಹೊಟ್ಟೆಯನ್ನು ತುಂಬಿ ಕೊಳ್ಳುತ್ತಿತ್ತು. || ೭೮ || ಆಗ ಆ ನಾಯಿಯ ಹೊಟ್ಟೆಗೆ ಹತ್ತಿದ್ದ ಭಸ್ಮವು ಆ ಪ್ರೇತದ ಎದೆಗೂ, ಹಣೆಗೂ ಬಹಳವಾಗಿ ಹತ್ತಿತು. || ೭೯ || ಅತ್ತ ಆ ಬ್ರಾಹ್ಮಣನ ಪ್ರಾಣ ಹೋದಕೂಡಲೆ ಯಮದೂತರು ಅವನನ್ನು ನಾನಾ ರೀತಿಯಾಗಿ ಹೊಡೆಯುತ್ತ ಎಳೆತಂದು ಯಮಪುರಕ್ಕೆ ಒಯ್ಯುತ್ತಿದ್ದರು. || ೮೦ || ಆಗ ಕೈಲಾಸದಲ್ಲಿದ್ದ ಶಿವದೂತರು ಆ ಪ್ರೇತವನ್ನು ನೋಡಿ ಬಂದು— ಇವನ ಮೈಯಲ್ಲಿ ಭಸ್ಮವು ಒಳ್ಳೇ ಎದ್ದು ಕಾಣುತ್ತದೆಂದಮೇಲೆ ಇವನನ್ನು ಯಾರು ಒಯ್ಯುತ್ತಾರೆ ? ನೋಡೋಣ ಎಂದೆನ್ನುತ್ತ || ೮೧ || ಇವನು ಕೈಲಾಸಕ್ಕೆ ಯೋಗ್ಯನು. ಯಮಕಿಂಕರರು ಯಾಕೆ ಒಯ್ಯುತ್ತಾರೆ ? ಎಂದು ಅವರು ಆ ಯಮದೂತರನ್ನು ಹೊಡೆಯಲಿಕ್ಕೆ ಒಳ್ಳೇ ತೀವ್ರ ವಾಗಿ ಓಡುತ್ತ ಬಂದರು. || ೮೨ || ಶಿವದೂತರು ಬರುವದನ್ನು ನೋಡಿ ಯಮದೂತರು ಆ ಶವವನ್ನು ಬಿಟ್ಟು,

ಓಡುತ್ತ ತಮ್ಮ ಯಮಪುರಕ್ಕೆ ಹೋಗಿ || ೮೩ || ತಮ್ಮ ಒಡೆಯನಾದ ಯಮನನ್ನು ಕುರಿತು— ಸ್ವಾಮೀ, ನಾವು ಭೂಲೋಕಕ್ಕೆ ಹೋಗಿ ಭಯಂಕರ ಪಾಪಿಯಾದ ಬ್ರಾಹ್ಮಣನ ಪ್ರೇತವನ್ನು ತಕ್ಕೊಂಡು ಬರುತ್ತಿದ್ದೆವು. || ೮೪ || ಅದನ್ನು ಶಿವದೂತರು ಕಂಡು, ಓಡುತ್ತ ನಮ್ಮನ್ನು ಹೊಡೆಯಲಿಕ್ಕೆ ಬಂದು, ಆ ಪ್ರೇತವನ್ನು ಜಗ್ಗಿ ಕಸಗೊಂಡು ನಮ್ಮನ್ನು ಕೊಲ್ಲುತ್ತಿದ್ದರು. || ೮೫ || ಇನ್ನು ನಮ್ಮ ಗತಿಯೇನು? ಇನ್ನು ನಾವು ಆ ಭೂಮಿಗೆ ಎಂದೂ ಹೋಗುವದಿಲ್ಲ. ಯಾಕಂದರೆ ಶಿವದೂತರು ನಮ್ಮನ್ನು ಹೊಡೆಯುತ್ತಾರೆ, ಎಂದು ವಿನಂತೀ ಮಾಡಿಕೊಂಡರು. || ೮೬ || ತನ್ನ ಕಿಂಕರರ ಮಾತು ಕೇಳಿ ಯಮನು ಸಿಟ್ಟಿಗೆದ್ದು ಕೂಡಲೆ ಆ ಶಿವದೂತರ ಹತ್ತರ ಬಂದು || ೮೭ || ಅವರನ್ನು ಕುರಿತು— ನಮ್ಮ ದೂತರನ್ನು ಯಾಕೆ ಹೊಡೆದಿರಿ? ಈ ಪಾಪಿಯಾದ ವಿಪ್ರನನ್ನು ಎಳೆದು ಕಸಗೊಂಡು ಶಿವಪುರಕ್ಕೆ ಯಾಕೆ ಒಯ್ಯುತ್ತೀರಿ? || ೮೮ || ಇವನು ನದಿಯಲ್ಲಿಯ ಮಳಲನ್ನು ಎಣಿಸಲಿಕ್ಕಾಗದಷ್ಟು ಅಸಾಧ್ಯವಾದ ಪಾಪಗಳನ್ನು ಮಾಡಿರುತ್ತಾನೆ. || ೮೯ || ಆದಕಾರಣ ಇವನು ಶಿವಪುರಕ್ಕೆ ಯೋಗ್ಯನಲ್ಲ. ನೀವು ಮೂಢತನದಿಂದ ಇವನನ್ನು ವಿಮಾನದಲ್ಲಿ ಕೂಡ್ರಿಸಿಕೊಂಡು ಯಾಕೆ ಒಯ್ಯುತ್ತೀರಿ? ಎಂದು ಅಂದು ಯಮನು ಸಿಟ್ಟಾದನು || ೯೦ || ಆಗ ಆ ಶಿವದೂತರು— ಎಲೈ ಯಮಧರ್ಮನೇ, ಕೇಳು. ಈ ಪ್ರೇತದ ಹಣೆಯಲ್ಲಿ ಭಸ್ಮದ ಗುರುತು (ಚಿಹ್ನ) ಇರುತ್ತದೆ. || ೯೧ || ಮತ್ತು ಎದೆ, ಬಾಹು, ಕರಕಂಕಣಗಳಲ್ಲಿ ಸಹ ಭಸ್ಮವು ಹತ್ತಿರುತ್ತದೆ. ಅಂದಮೇಲೆ ಇವನನ್ನು ನಿನ್ನ ದೂತರು ಹ್ಯಾಗೆ ಮುಟ್ಟಿದರು? || ೯೨ || ನಿತ್ಯ ದೇಹದಲ್ಲಿ ಭಸ್ಮವನ್ನು ಧರಿಸಿದವರಿಗೆ ಸ್ಥಿರವಾದ ಕೈಲಾಸ ಪದವಿಯುಂಟೆಂದು ನಮಗೆ ಈಶ್ವರನ ಆಜ್ಞೆಯಾಗಿದೆ. || ೯೩ || ಆದಕಾರಣ ಹಣೆ-ಎದೆ ಮುಂತಾದವುಗಳಲ್ಲಿ ಭಸ್ಮವುಳ್ಳ ಇವನನ್ನು ನಿನ್ನ ದೂತರು ಹ್ಯಾಗೆ ಮುಟ್ಟಿದರು ಹೇಳು. ನಾವು ಕೂಡಲೆ ಅವರನ್ನು ಕೊಲ್ಲುತ್ತಿದ್ದೆವು. ಆದರೆ ಧರ್ಮಕ್ಕೆ ಅಂಜಿ ಬಿಟ್ಟಿರುವೆವು || ೯೪ || ಇನ್ನು ಮುಂದಾದರೂ ನೀನು ನಿನ್ನ ದೂತರನ್ನು ಕುರಿತು— ಭಸ್ಮಧಾರಣ ಮಾಡಿದವರಿಗೆ ಪಾಪವಿಲ್ಲ. ಅವರು ಸ್ವರ್ಗಕ್ಕೆ ಯೋಗ್ಯರು. ಆದಕಾರಣ ಭಸ್ಮ ಹಚ್ಚಿದವರನ್ನು ಯಮಪುರಕ್ಕೆ ತರಬಾರದು ಎಂದು ಬುದ್ಧಿಯನ್ನು ಹೇಳು ಎಂದರು || ೯೫-೯೬ ||

ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ

ಅವರ ಮಾತು ಕೇಳಿ ಯಮನು ತನ್ನ ಸ್ಥಾನಕ್ಕೆ ಹೋಗಿ, ತನ್ನ ದೂತರನ್ನು ಕರೆದು— ಎಲೈ ದೂತರೇ, ನೀವು ಇನ್ನು ಮುಂದೆ ಭೂಮಿಗೆ ಹೋಗಿ, ತ್ರಿಪುಂಡ್ರ ಭಸ್ಮಧಾರಿಯಾದ ಮನುಷ್ಯನು ಅನೇಕ ಅಪಾರ ಪಾಪ ಮಾಡಿದ್ದರೂ ಅವನನ್ನು ನಮ್ಮ ಲೋಕಕ್ಕೆ ತರಬಾರದು. ಮತ್ತು ಕಂಠದಲ್ಲಿ ರುದ್ರಾಕ್ಷಮಾಲೆ, ಹಣೆ, ಮೈ, ಕೈಗಳಲ್ಲಿ ತ್ರಿಪುಂಡ್ರ ಭಸ್ಮ ಇರುವಂಥವರನ್ನು ನೀವು ಮುಟ್ಟಬಾರದು ಎಂದು ಶಿವನ ಆಜ್ಞೆಯಾಗಿದೆ ಎಂದು ಹೇಳಿದನು. || ೯೭-೯೮-೯೯-೧೦೦ || ಎಲೈ ಬ್ರಹ್ಮರಾಕ್ಷಸನೇ, ಭಸ್ಮ ಮಹಿಮೆಯು ಈ ಪ್ರಕಾರವಾಗಿರುವದು, ಆದರಿಂದ ನಾವು ಈ ಪ್ರಕಾರ ಭಕ್ತಿಯಿಂದ ಭಸ್ಮವನ್ನು ಲೇಪಿಸುವೆವು, ಇದು ದೇವತೆಗಳಿಗೆ ದುರ್ಲಭವೆಂದು ತಿಳಿ. || ೧೦೧ || ಯಾರು ಸದಾ ಭಸ್ಮವನ್ನು ಧರಿಸುವರೋ ಅವರನ್ನು ಈಶ್ವರನು ಪ್ರೀತಿಯಿಂದ ನೋಡುವನು. ಈಶ್ವರನು ನಮಸ್ಕರಿಸುವ ವಸ್ತುವಿನ ಮಹಿಮೆಯನ್ನು ವರ್ಣಿಸಲಿಕ್ಕೆ ಯಾರೂ ಶಕ್ಯರಲ್ಲ ಎಂದು ವಾಮದೇವ ಮುನಿಗಳು ಬ್ರಹ್ಮರಾಕ್ಷಸನಿಗೆ ಹೇಳಿದರು. || ೧೦೨ || ಅವರ ಮಾತು ಕೇಳಿ ಆ ರಾಕ್ಷಸನು ಅವರಿಗೆ ನಮಸ್ಕರಿಸಿ— ಜಗಜ್ಜೀವನಾ, ವಾಮದೇವಾ, ನೀವು ಸಾಕ್ಷಾತ್ ಈಶ್ವರರು! ನನ್ನನ್ನು ಉದ್ಧರಿಸಿರಿ. || ೧೦೩ || ತಮ್ಮ ಪಾದಸ್ಪರ್ಶದಿಂದ ನನಗೆ ನನ್ನ ಸಾವಿರ ಜನ್ಮಗಳ ಜ್ಞಾನವುಂಟಾಯಿತು ನಾನು ಹಿಂದಕ್ಕೆ ಮಾಡಿದ ಅಲ್ಪಸ್ವಲ್ಪ ಪುಣ್ಯದಿಂದಲೇ ಈಗ ತಮ್ಮ ದರ್ಶನವಾಯಿತು. || ೧೦೪ || ಸ್ವಾಮೀ, ಆ ಪುಣ್ಯವೇನಂದರೆ— ನಾನು ಪೂರ್ವದಲ್ಲಿ ರಾಜ್ಯವಾಳುತ್ತಿರುವಾಗ ಅರಣ್ಯದಲ್ಲಿ ಕೆರೆಗಳನ್ನು ಕಟ್ಟಿಸಿ ಪಶು-ಪಕ್ಷಿ, ದನ-ಕರು, ಮನುಷ್ಯರಿಗೆ ಉಪಯೋಗವಾಗುವಂತೆ ಮಾಡಿದೆನು. ಮತ್ತು ಅನೇಕ ಬ್ರಾಹ್ಮಣರಿಗೆ ವೃತ್ತಿಯನ್ನು ಹಾಕಿಕೊಟ್ಟೆನು. || ೧೦೫ || ಸ್ವಾಮೀ, ಇಷ್ಟೇ ಪುಣ್ಯವು ನನ್ನಿಂದ ಘಟಿಸಿತು. ನಾನು ತಮಗೆ ಹಿಂದೆ ಹೇಳಿದಂತೆ ಅನೇಕ ಪಾಪ ಮಾಡಿ ಸತ್ತಮೇಲೆ ಯಮದೂತರು ನನ್ನನ್ನು ಯಮಪುರಕ್ಕೆ ಒಯ್ದರು. ಆಗ ಯಮನು ಚಿತ್ರಗುಪ್ತರನ್ನು ಕರೆದು— ಇವನ ಪುಣ್ಯವೆಷ್ಟೆಂದು ಕೇಳಿದನು. ಆಗ ಆ ಚಿತ್ರಗುಪ್ತನು ಆ ನನ್ನ ಪುಣ್ಯವನ್ನು ಹೇಳಿದನು. || ೧೦೬-೧೦೭ || ಅದನ್ನು ಕೇಳಿ ಯಮನು ನನ್ನನ್ನು ಕುರಿತು— ಎಲೈ ನೀನು ಮಾಡಿದ ಅಲ್ಪ ಪುಣ್ಯದಿಂದ, ನಿನ್ನ ೨೫ನೇ ಜನ್ಮದಲ್ಲಿ ನಿನಗೆ

ಆದರ ಫಲವಾಗುವದೆಂದು ಹೇಳಿದ್ದನು. ॥ ೧೦೮ ॥ ಸ್ವಾಮೀ, ಈಗ ನನ್ನದು ೨೫ನೆ ಜನ್ಮವಾದ್ದರಿಂದ ಆ ಪುಣ್ಯದ ಫಲದಿಂದ ಈಗ ತಮ್ಮ ಚರಣದರ್ಶನವಾಯಿತು. ಸ್ವಾಮೀ, ಜಗದ್ಗುರುವೇ ಈಗ ನನ್ನನ್ನು ಉದ್ಧರಿಸಿರಿ, ॥ ೧೦೯ ॥ ಮತ್ತು ನನಗೆ ಆ ಭಸ್ಮದ ಮಹಿಮೆಯನ್ನೂ ಅದನ್ನು ಹಚ್ಚುವ ವಿಧಿಯನ್ನೂ ಹಾಗು ಮಂತ್ರವನ್ನೂ ಹೇಳಿರಿ ಎಂದು ಬೇಡಿಕೊಂಡರು. ॥ ೧೧೦ ॥ ಆಗ ವಾಮದೇವರು— ಎಲೈ ರಾಕ್ಷಸನೇ, ನೀನು ನನಗೆ ಆ ವಿಭೂತಿ ಧಾರಣದ ವಿಧಿಯನ್ನೂ, ಮಂತ್ರಗಳನ್ನೂ ಹೇಳೆಂದು ಕೇಳುತ್ತೀ. ಹಾಗಾದರೆ ಹೇಳುತ್ತೇನೆ ಏಕಚಿತ್ತದಿಂದ ಕೇಳು. ॥ ೧೧೧ ॥

ಪೂರ್ವದಲ್ಲಿ ಮಂದರಾಚಲ ಪರ್ವತದಲ್ಲಿ ಶ್ರೀ ಶಂಕರನು ಒಂದುದಿವಸ ತನ್ನ ಕಿಂಕರರಾದ ಕೋಟಿ ರುದ್ರಗಣಗಳಿಂದ ಕೂಡಿಕೊಂಡು ವಿನೋದಕ್ಕಾಗಿ ಹೋಗಿ ಸಭೆ ಮಾಡಿಕೊಂಡು ಕೂತಿದ್ದನು. ॥ ೧೧೨ ॥ ಆಗ ಮೂವತ್ತುಮೂರುಕೋಟಿ ದೇವತೆಗಳೊಡನೆ ದೇವೇಂದ್ರನು ಶ್ರೀ ಶಂಕರನ ದರ್ಶನಕ್ಕಾಗಿ ಆ ಸಭೆಗೆ ಬರುತ್ತ ಅಗ್ನಿ, ವರುಣ, ಕುಬೇರ, ವಾಯು ಮುಂತಾದವರು ಸಹಿತವಾಗಿ ಬಂದನು. ॥ ೧೧೩ ॥ ಮತ್ತು ಆ ಸಭೆಗೆ ಗಂಧರ್ವ, ಯಕ್ಷ, ಚಿತ್ರಸೇನ, ಖೇಚರ, ಪನ್ನಗ, ವಿದ್ಯಾರಣ್ಯ, ಕಿಂಪುರುಷ, ಸಿದ್ಧ, ಸಾಧ್ಯ, ಗುಹ್ಯಕ ಮೊದಲಾದವರು ಬಂದರು. ॥ ೧೧೪ ॥ ಮತ್ತು ದೇವ ಗುರುವಾದ ಬೃಹಸ್ಪತಿಯೂ ವಸಿಷ್ಠ ಋಷಿಗಳೂ ನಾರದ–ತುಂಬರರೂ, ಅರ್ಯಮಾದಿ ಪಿತೃಗಣಗಳೂ, ॥ ೧೧೫ ॥ ದಕ್ಷನೇ ಮೊದಲಾದ ಯಾವತ್ತು ಬೇರೆ ಬ್ರಹ್ಮರೂ, ಸಮಸ್ತ ಋಷಿಕುಲದವರೂ ಊರ್ವಶಿ ಮೊದಲಾದ ಅಪ್ಸರಾ ಸ್ತ್ರೀಯರೂ, ॥ ೧೧೬ ॥ ಚಂಡಿಕಾ ಸಹಿತ ಎಲ್ಲ ಶಕ್ತಿ ದೇವತೆಗಳೂ, ದ್ವಾದಶಾದಿತ್ಯರೂ, ಅಷ್ಟವಸುಗಳೂ ಕೂಡಿಕೊಂಡು ॥ ೧೧೭ ॥ ಅಶ್ವಿನೀ ದೇವತೆಗಳೂ, ೧೨ ಮಂದಿ ವಿಶ್ವೇದೇವತೆಗಳೂ ಈಶ್ವರನ ಸಭೆಗೆ ಬಂದರು. ಎಲೈ ರಾಕ್ಷಸನೇ ಇನ್ನೂ ಕೇಳು. ॥ ೧೧೮ ॥ ಭೂತಪತಿಯಾದ ಮಹಾಕಾಲನೂ, ಮಹಾ ನೀಲನಾದ ನಂದಿಕೇಶ್ವರನೂ ಇವರಿಬ್ಬರು ದಂಡಪಾಣಿಗಳಾಗಿ ಪ್ರಬಲರಾದ ಪಾರ್ಷದರಾಗಿ ನಿಂತಿದ್ದರು. ॥ ೧೧೯ ॥ ವೀರಭದ್ರ, ಸಂಕರ್ಷಣ, ಮಣಿಭದ್ರ, ಷಟ್ಕರ್ಣ, ವೃಕೋದರ,

ದೇವಮಾನ್ಯ, ಕುಂಭೋದರ. ॥ ೧೨೦ ॥ ೨ನೇ ಕುಂಭೋದರ ಮಂಡೋದರ, ವಿಕಟಕರ್ಣ, ಕರ್ಣಧಾರ, ಧಾರಕೇತ, ಮಹಾವೀರ, ಭೂತನಾಥ. ॥ ೧೨೧ ॥ ಭೃಂಗಿರಿಟೀ, ನಾನಾರೂಪಿಗಳಾದ ಸಮಸ್ತಗಣಗಳು ನಾನಾವರ್ಣದ ಮುಖ್ಯ ಪ್ರಖ್ಯಾತರೂ, ನಾನಾರೂಪ, ನಾನಾಅವಯವದ ಶಿವದೂತರೂ ಬಂದರು. ॥ ೧೨೨ ॥ ಇನ್ನು ರುದ್ರಗಣದವರು ಯಾವ ಯಾವ ರೂಪದವರಿದ್ದರೆಂಬದನ್ನು ವಿಸ್ತಾರವಾಗಿ ಹೇಳುವೆನು ಕೇಳು. ಎಷ್ಟೋ ಮಂದಿ ಕೃಷ್ಣವರ್ಣದವರು ಇದ್ದರು ಇದರಂತೆ ಬಿಳಿ, ಹಳದಿ, ಧೂಮ್ರವರ್ಣದವರು. ॥ ೧೨೩ ॥ ಮತ್ತು ಹಸರು, ತಾಮ್ರ, ಬಂಗಾರ, ಲೋಹಿತ ಮುಂತಾದ ಚಿತ್ರವಿಚಿತ್ರ ವರ್ಣದವರೂ ಇದ್ದರು. ಮತ್ತು ಕೆಲವು ಕಪ್ಪೆಯ ಮುಖದ ರುದ್ರಗಣಗಳು ಈಶ್ವರನ ಸಭೆಗೆ ಬಂದರು ॥ ೧೨೪ ॥ ನಾನಾ ಆಯುಧ, ನಾನಾ ಭೂಷಣಗಳನ್ನು ಧರಿಸಿ ನಾನಾ ವಾಹನರಾಗಿ ಕೆಲವರು ಹುಲಿಯ ಮುಖದವರು ಕೆಲಕೆಲವರು ಹಂದಿ, ಆನೆಗಳ ಮುಖದ ವರು. ॥ ೧೨೫ ॥ ಕೆಲವರು ವಕ್ರ ಮುಖದವರು, ನಾಯಿ–ನರಿಗಳ ಮುಖದವರು, ಕೆಲವರು ಒಂಟೆಯ ಮುಖದವರು, ಕೆಲವರು ಶರಭ, ಭೇರುಂಡ ಮುಖದವರು. ॥ ೧೨೬ ॥ ಕೆಲವರು ಸಿಂಹ ಮುಖದವರು, ಘೋರವಾದ ಬಕನ ಮುಖದವರು, ಕೆಲವರು ಒಂದು ಮುಖದವರು, ಎರಡು ಮುಖದವರು. ॥ ೧೨೭ ॥ ಕೆಲ ವರು ೪ ಮುಖದವರು. ಕೆಲಕೆಲವರು ೪ ಭುಜದವರು, ಕೆಲವರು ಹೀನ ಮುಖದವರು ॥ ೧೨೮ ॥ ಕೆಲ ಕೆಲವರು ಒಂದುಕೈ, ಎರಡುಕೈ, ೫ ಕೈ, ೭ ಕೈಗಳುಳ್ಳವರು, ಕೆಲವರು ಪಾದವಿಲ್ಲದವರು, ಕೆಲವರು ಬಹು ಪಾದ ವುಳ್ಳವರು. ॥ ೧೨೯ ॥ ಕೆಲವರು ಕಿವಿಗಳಿಲ್ಲದವರು, ಆಶ್ಚರ್ಯಕರವಾದ ಒಂದು ಕಿವಿ ಇದ್ದವರು, ಕೆಲಕೆಲವರು ಬಹು ಕಿವಿಗಳಿದ್ದವರು ಆ ಶಿವನ ಸಭೆಗೆ ಬಂದರು. ॥ ೧೩೦ ॥ ಕೆಲಕೆಲವರು ಒಂದು ಕಣ್ಣುಳ್ಳವರು, ಕೆಲವರು ನಾಲ್ಕು ಕಣ್ಣುಗಳುಳ್ಳವರು, ಕೆಲವರು ಸ್ಥೂಲರು, ಕೆಲವರು ಗಿಡ್ಡರು ಈ ಪ್ರಕಾರ ಈಶ್ವರನ ಗಣದವರಿದ್ದರು. ॥೧೩೧॥ ಶ್ರೀ ಶಿವನು ಈ ಪ್ರಕಾರವಾದ ತನ್ನ ಗಣಗಳಿಂದ ಕೂಡಿಕೊಂಡು ರತ್ನಖಚಿತವಾದ ೭ ಪ್ರಭಾವಳಿಗಳುಳ್ಳ ಸಿಂಹಾಸ ನದಲ್ಲಿ ಕೂತಿದ್ದನು. ॥ ೧೩೨ ॥ ಶ್ರೀ ಶಂಕರನ ಸಿಂಹಾಸನದ ೧ನೇ ಪ್ರಭಾವಳಿಯು ಆರಕ್ತವರ್ಣವಾಗಿಯೂ

ರತ್ನಖಚಿತವಾಗಿಯೂ ಅನುಪಮವಾಗಿಯೂ ನಿರ್ಮಲವಾಗಿಯೂ ಇತ್ತು. || ೧೩೩ || ೨ನೇ ಪ್ರಭಾವಳಿಯು ಸುವರ್ಣ ವರ್ಣದ್ದೂ ರತ್ನಖಚಿತವಾದದ್ದೂ ಇತ್ತು. || ೧೩೪ || ೩ನೇ ಪ್ರಭಾವಳಿಯು ನೀಲವರ್ಣವಾಗಿಯೂ ರತ್ನಖಚಿತ ಹಾಗು ವಜ್ರಜಡಿತವಾಗಿಯೂ ಒಳ್ಳೇ ಪ್ರಕಾಶವಾಗಿಯೂ ಇತ್ತು. || ೧೩೫ || ೪ನೇ ಪ್ರಭಾವಳಿಯು ರತ್ನಖಚಿತವಾದ ಕಮಲಗಳುಳ್ಳದ್ದಾಗಿಯೂ ಕೆಂಪು ವರ್ಣದ್ದಾಗಿಯೂ ಪ್ರಕಾಶಿಸುತ್ತಿತ್ತು. || ೧೩೬ || ೫ನೇ ಪ್ರಭಾವಳಿಯು ವೈಡೂರ್ಯ ರತ್ನಜಡಿತವಾಗಿ ಮುತ್ತುಗಳಿಂದ ಕೂಡಿ ವಿಖ್ಯಾತವಾಗಿತ್ತು. || ೧೩೭ || ಆರನೇ ಪ್ರಭಾವಳಿಯು ಪುಷ್ಯರಾಗ ರತ್ನಗಳಿಂದ ಕೆತ್ತಲ್ಪಟ್ಟು, ಮುತ್ತಿನ ಝೂಲರಿಯಿಂದ ಸುಶೋಭಿತವಾಗಿತ್ತು. ||೧೩೮|| ೭ನೇ ಪ್ರಭಾವಳಿಯು ನಾನಾ ರತ್ನಗಳಿಂದ ಜಡಿತವಾಗಿ ವಿಶ್ವಕರ್ಮನಿಂದ ಮಾಡಲ್ಪಟ್ಟು ತ್ರಿಭುವನದಲ್ಲಿ ಅಪೂರ್ವವಾಗಿತ್ತು. || ೧೩೯ || ಪ್ರಳಯಕಾಲದಲ್ಲಿ ಏಳೂ ಸಮುದ್ರಗಳೂ ಕೂಡುವಂತೆ ಇಂಥ ಏಳೂ ಪ್ರಭಾವಳಿಗಳಿಂದ ಕೂಡಿದಂಥ ಸಿಂಹಾಸನದಲ್ಲಿ ತ್ರಿಪುರಾರಿಯಾದ ಶ್ರೀಶಂಕರನು ಕೋಟಿ ಸೂರ್ಯ ಪ್ರಕಾಶಮಾನನಾಗಿ ಹೊಳೆಯುತ್ತ ಕೂತಿದ್ದನು || ೧೪೦-೧೪೧ || ಆ ಶಿವನು ಹಣೆಗಣ್ಣಿನಲ್ಲಿ ಜ್ವಾಲಾಮಾಲೆಯುಳ್ಳವನಾಗಿ, ಸಂವರ್ತಾಗ್ನಿಯಂತಿರುವ ಜಟಾಮಂಡಲವುಳ್ಳವನಾಗಿ, ಹಣೆಯಲ್ಲಿ ಷೋಡಶಕಳಾಯುಕ್ತನಾದ ಚಂದ್ರನನ್ನು ಧರಿಸಿ ಸುಶೋಭಿಸುತ್ತಿದ್ದನು. || ೧೪೨ || ಆತನು ಎಡಗಿವಿಯಲ್ಲಿ ತಕ್ಷಕನನ್ನೂ ಬಲಗಿವಿಯಲ್ಲಿ ವಾಸುಕಿಯನ್ನೂ ಧರಿಸಿದ್ದನು ಅವುಗಳ ಕಣ್ಣುಗಳಲ್ಲಿ ಒಳ್ಳೇ ಪ್ರಕಾಶವು ತೋರುತ್ತಿತ್ತು. || ೧೪೩ || ನೀಲಕಂಠನಾದ ಆತನು ನಾಗಾಹಾರದ ಆಭರಣವುಳ್ಳವನಾಗಿ, ಕೈಗಳಲ್ಲಿ ಸರ್ಪದ ಕಂಕಣ, ಬೆರಳುಗಳಲ್ಲಿ ಸರ್ಪದ ಉಂಗುರಗಳುಳ್ಳವನಾಗಿ, || ೧೪೪ || ಟೊಂಕದಲ್ಲಿ ಸರ್ಪದ ಉಡುದಾರ, ಮೈಯಲ್ಲಿ ವ್ಯಾಘ್ರ ಚರ್ಮಗಳಿಂದ ಕನ್ನಡಿಯಂತೆ ಹೊಳೆಯುವ ದೇಹವುಳ್ಳವನಾಗಿ ಕಾಣುತ್ತ || ೧೪೫ || ಕರ್ಕೋಟಕ ಮತ್ತು ಪದ್ಮಗಳೆಂಬ ಸರ್ಪಗಳ ಕಾಲ್ಕಡಗಗಳುಳ್ಳವನಾಗಿ ಹುಣ್ಣಿವೆಯ ಚಂದ್ರನಂತೆ ಶುಭ್ರವಾಗಿ ಹೊಳೆಯುತ್ತಿದ್ದನು. || ೧೪೬ || ಆದರಿಂದ ಅವನಿಗೆ ಕರ್ಪೂರಗೌರನೆಂಬ ಹೆಸರು ಬಂದದೆ. ಧ್ಯಾನದಲ್ಲಿ ಈ ಪ್ರಕಾರದ ಮೂರ್ತಿಯನ್ನು ಧ್ಯಾನಿಸಬೇಕು. ಭೋಳಾಚಕ್ರವರ್ತಿಯಾದ ಶಿವನು ಈ

ಪ್ರಕಾರವಾಗಿ ಸಭೆಯಲ್ಲಿ ಕೂತಿದ್ದನು. ‖ ೧೪೭ ‖ ಆ ಕರ್ಪೂರ ಗೌರನಾದ ಪಶುಪತಿಯು ತಲೆಯಲ್ಲಿ ರತ್ನಖಚಿತ ಕಿರೀಟಗಳಿಂದ, ನಾಗೇಂದ್ರನ ಭುಜಕೀರ್ತಿಗಳಿಂದ, ಪ್ರಕಾಶಮಾನವಾದ ಸರ್ಪದ ಕರ್ಣಕುಂಡಲಗಳಿಂದ ‖ ೧೪೮ ‖ ಕಂಠದಲ್ಲಿ ಸರ್ಪಹಾರಗಳಿಂದ ಮನೋಹರವಾದ ನೀಲಕಂಠನಾಗಿ, ಸರ್ವಾಂಗದಲ್ಲಿ ಸರ್ಪಾಲಂಕಾರಗಳಿಂದ ಶೋಭಿಸುತ್ತ ‖ ೧೪೯ ‖ ಶುಭ್ರ, ಕಮಲಗಳಿಂದ ಪೂಜಿಸಲ್ಪಟ್ಟಂತೆ ಅಥವಾ ಚಂದನದಿಂದ ಲೇಪಿಸಲ್ಪಟ್ಟಂತೆ ಇಲ್ಲವೆ ಕರ್ಪೂರ ಬಾಳೇಹಣ್ಣುಗಳಿಂದ ಪೂಜಿಸಲ್ಪಟ್ಟಂತೆ ಒಪ್ಪುತ್ತಿದ್ದನು ‖ ೧೫೦ ‖ ಸರ್ವೇಶ್ವರನಾದ ಶ್ರೀ ಶಂಕರನು ದಶ ಭುಜಗಳಿಂದ ಶೋಭಿಸುತ್ತ ಒಂದೊಂದು ಕೈಯಲ್ಲಿ ಒಂದೊಂದು ಆಯುಧಗಳಿಂದ ಶೋಭಿಸುತ್ತಿದ್ದನು. ‖ ೧೫೧ ‖ ಹ್ಯಾಗಂದರೆ ೧ನೇ ಕೈಯಲ್ಲಿ ತ್ರಿಶೂಲ, ೨ನೇ ಕೈಯಲ್ಲಿ ಸುರೇಖವಾದ ಡಮರು, ೩ನೇ ಕೈಯಲ್ಲಿ ಖಡ್ಗ, ‖ ೧೫೨ ‖ ೪ನೇ ಕೈಯಲ್ಲಿ ಪಾಣಿಪಾತ್ರ, ೫ನೇ ಕೈಯಲ್ಲಿ ಧನುಷ–ಬಾಣ, ೬ನೇ ಕೈಯಲ್ಲಿ ಖಟ್ವಾಂಗ, ೭ನೇ ಕೈಯಲ್ಲಿ ಪರಶ, ೮ನೇ ಕೈಯಲ್ಲಿ ತ್ರಿಶೂಲ, ‖ ೧೫೩ ‖ ೯ನೇ ಕೈಯಲ್ಲಿ ಶೃಂಗಾಸನ ಕಮಲ, ೧೦ನೇ ಕೈಯಲ್ಲಿ ಪಿನಾಕ ಈ ಪ್ರಕಾರ ೧೦ ಭುಜಗಳಿಂದ ಶೋಭಿಸುತ್ತ ಶ್ರೀ ಶಂಕರನು ಸಭೆಯಲ್ಲಿ ಕೂತಿದ್ದನು. ‖ ೧೫೪ ‖ ಆ ಸರ್ವೇಶ್ವರನಿಗೆ ೫ ಮುಖಗಳು, ಒಂದೊಂದು ಮುಖವು ಒಂದೊಂದು ಅಲಂಕಾರದಿಂದ ಶೋಭಿಸುತ್ತಿತ್ತು ಅದನ್ನು ಹೇಳುತ್ತೇನೆ ಕೇಳಿರಿ. ‖ ೧೫೫ ‖ ಶ್ರೀ ಶಂಕರನು ತನ್ನ ಎದುರಿನ ಮೊದಲನೇ ಮುಖವು ಕಲಂಕವಿಲ್ಲದ ಚಂದ್ರನಂತೆ ಅಥವಾ ಹಾಲಿನ ನೊರೆಯಂತೆ ಶುಭ್ರವಾದ ಬ್ರಹ್ಮದಿಂದ ಭೂಷಿತವಾದ ರೂಪದಿಂದಲೂ ಮನ್ಮಥ ದಾಹಕನಂತೆ ‖ ೧೫೬ ‖ ಚಂದ್ರ–ಸೂರ್ಯ–ಅಗ್ನಿಗಳಿಗೆ ಸಮಾನವಾದ ನೇತ್ರಗಳಿಂದಲೂ ನಾಗಾಹಾರದಿಂದಲೂ ಸರ್ಪದ ಉಡದಾರದಿಂದಲೂ ಪವಿತ್ರ ಮೂರ್ತಿಯಾಗಿ ‖ ೧೫೭ ‖ ಹಣೆಯಲ್ಲಿ ಶುಭ್ರವಾದ ತಿಲಕದಿಂದಲೂ ಹಾಸ್ಯವದನನಾಗಿಯೂ ಕೆಂಪು ತುಟಿಗಳಿಂದಲೂ ಉತ್ತಮವಾಗಿ ಶೋಭಿಸುತ್ತ ಚಂದ್ರಮೌಳಿಯಾದ ಶ್ರೀ ಶಂಕರನು ಕೂತಿದ್ದನು. ‖ ೧೫೮ ‖ ಉತ್ತರದಿಕ್ಕಿಗಿರುವ ಶ್ರೀ ಶಂಕರನ ೨ನೇ ಮುಖವು ವಿಸ್ತಾರವಾಗಿ ತಾಮ್ರ ವರ್ಣದ ಕರಕಮಲದಂತೆ ಅಪೂರ್ವವಾಗಿಯೂ ‖ ೧೫೯ ‖ ದಾಳಿಂಬ ಹೂವಿನ ಬಣ್ಣದಂತೆಯೂ ಅಥವಾ ಉದಯ

ಕಾಲದ ಸೂರ್ಯಕಾಂತಿಯಂತೆಯೂ ಶೋಭಿಸುತ್ತಿತ್ತು. ॥ ೧೬೦ ॥ ಶ್ರೀ ಶಿವನ ಪೂರ್ವದಿಕ್ಕಿನ ೩ನೇ ಮುಖವು ತಲೆಯಲ್ಲಿ ಗಂಗೆಯನ್ನೂ ಅರ್ಧ ಚಂದ್ರನನ್ನೂ ಧರಿಸಿ, ಜಡೆಯನ್ನು ಕಟ್ಟಿ ಅದಕ್ಕೆ ಸರ್ಪ ಸುತ್ತಿದ್ದಾಗಿ ಶೋಭಿಸುತ್ತಿತ್ತು ॥ ೧೬೧ ॥ ದಕ್ಷಿಣಕ್ಕಿರುವ ಶ್ರೀ ಸದಾಶಿವನ ೪ನೇ ಮುಖವು ನೀಲವರ್ಣದಿಂದ ಕೂಡಿ ವಿಕ್ರಾಳವಾದ ಭಯಂಕರ ಗಡ್ಡವುಳ್ಳದ್ದಾಗಿ ॥ ೧೬೨ ॥ ಮುಖದಿಂದ ಜ್ವಾಲೆ ಹೊರಡುವದಾಗಿ, ವೇದ ಶ್ರುತಿಯಂತೆ ಸರ್ಪದಿಂದ ಸುತ್ತಿದ್ದ ರುಂಡಮಾಲೆಯಿಂದಲೂ ಶೋಭಿಸುತ್ತಿತ್ತು ॥ ೧೬೩ ॥ ಶ್ರೀ ಶಂಕರನ ೫ನೇ ಮುಖವು ವ್ಯಕ್ತಾವ್ಯಕ್ತ, ಸಾಕಾರ ನಿರಾಕಾರ, ಸಗುಣ ನಿರ್ಗುಣ ॥ ೧೬೪ ॥ ಸಲಕ್ಷಣ ನಿರ್ಲಕ್ಷಣವಾಗಿ ಶೋಭಿಸುತ್ತಿತ್ತು, ಎಲೈ ಬ್ರಹ್ಮ ರಾಕ್ಷಸನೇ ಈ ಪ್ರಕಾರ ಪಂಚಮುಖಗಳುಳ್ಳ ಸರ್ವೇಶ್ವರನು ಪರಬ್ರಹ್ಮನೆಂದೇ ತಿಳಿ. ॥ ೧೬೫ ॥ ಆವನು ಕೊರಳಲ್ಲಿ ಕರೀ ಕ್ರೂರವಾದ ಬಹು ಸರ್ಪ ಮಾಲೆಗಳಿಂದ ಶೋಭಿಸುತ್ತಲೂ ಕೆಂಪು ಕಮಲದಂತೆ ಹೊಳೆಯುವ ಪಾದವುಳ್ಳವನಾಗಿಯೂ ॥ ೧೬೬ ॥ ಚಂದ್ರನಂತೆ ಉಗುರುಗಳುಳ್ಳವನಾಗಿಯೂ, ಶೋಭಾಯಮಾನವಾದ ಪಾದುಕೆಗಳಿಂದ ಕೂಡಿದ ಪಾದವುಳ್ಳವನಾಗಿಯೂ ಸರ್ವಾಲಂಕಾರನಾಗಿಯೂ ॥ ೧೬೭ ॥ ಮತ್ತು ಹುಲಿದೊಗಲಿನ ವಸ್ತ್ರವುಳ್ಳವನಾಗಿಯೂ ಸರ್ವಾಂಗದಲ್ಲಿ ಸರ್ಪಗಳನ್ನು ಸುತ್ತಿಕೊಂಡವನಾಗಿಯೂ ನಾಗಾಭಂಧನದಿಂದ ಹಾವಿನ ಗಂಟು ಕಟ್ಟಿದಂತೆ ಕಾಣುವವನಾಗಿಯೂ ॥ ೧೬೮ ॥ ಸೊಕ್ಕಳಲ್ಲಿ ಚಂದ್ರಾವಳಿವುಳ್ಳವನಾಗಿಯೂ ಹೃದಯದಲ್ಲಿ ನಟಿದುನಿಂತ ಕೂದಲುಳ್ಳವನಾಗಿಯೂ ಭಕ್ತ ಜನರಿಗೆ ಮನೋಹರನಾಗಿ ಪಾರಮಾರ್ಥದ ಲಾಭಾಲಾಭವನ್ನು ಮಾಡಿಕೊಡುವವನಾಗಿಯೂ ॥ ೧೬೯ ॥ ಈ ಪ್ರಕಾರ ಸಂಕಟಹರನೂ ಭೋಳಾಚಕ್ರವರ್ತಿಯೂ ಪರಮೇಶ್ವರನೂ ಆದ ಶ್ರೀ ಶಂಕರನು ಪಾರ್ವತೀ ಸಹಿತನಾಗಿ ಶೋಭಿಸುತ್ತ ಕಿಂಕರರಿಂದ ವಂದಿತನಾಗಿ ಸಿಂಹಾಸನದಲ್ಲಿ ಕೂತಿದ್ದನು. ॥ ೧೭೦ ॥ ಇನ್ನು ಪಾರ್ವತಿಯ ಶೃಂಗಾರವನ್ನು ಕೇಳು ಸರ್ವೇಶ್ವರಿಯಾದ ಪಾರ್ವತಿಯು ನಾನಾವಿಧ ಅಲಂಕಾರಗಳಿಂದ ಯುಕ್ತಳಾಗಿ ಮನೋಹರಳಾಗಿ ಪ್ರಕಾಶಿಸುತ್ತಿದ್ದಳು. ॥ ೧೭೧ ॥ ಆಕೆಯ ತಲೆಯಲ್ಲಿ ರತ್ನಖಚಿತವಾದ ಕಿರೀಟವು ನಾಗಬಂಧದಿಂದ ಶೋಭಿಸುತ್ತಿತ್ತು. ಮತ್ತು ಆಕೆಯ ಕೊರಳಲ್ಲಿ ಬಂಗಾರದ

ಸಂಪಿಗೆ ಮತ್ತು ಗೋರಟೀ ಹೂವಿನ ಮಾಲೆಗಳೂ ಮುತ್ತಿನ ಮಾಲೆಗಳೂ (ಹಾರಗಳೂ), ಶೋಭಿಸುತ್ತಿದ್ದವು. ॥ ೧೭೨ ॥ ಇವಲ್ಲದೆ ನಾನಾತರದ ಸುಗಂಧ ಪುಷ್ಪಗಳ ಅನೇಕ ಮಾಲೆಗಳು ಆಕೆಯ ಕಿರೀಟದ ಮೇಲೆ ಶೋಭಿಸುತ್ತಿದ್ದವು. ಆ ಹೂವುಗಳ ಪರಿಮಳಕ್ಕಾಗಿ ಭ್ರಮರಗಳು ಬಂದು ಧ್ವನಿ ಮಾಡುತ್ತಿದ್ದವು. ॥ ೧೭೩ ॥ ಆಕೆಯ ಕಿರೀಟಕ್ಕೆ ಹತ್ತಿ ರತ್ನಖಚಿತವಾದ ಮುತ್ತಿನ ದೊಡ್ಡ ಝೂಲರಿಗಳು ಶೋಭಾಯಮಾನವಾಗಿ ಜೋತಾಡುತ್ತಿದ್ದವು. ॥ ೧೭೪ ॥ ಆ ಪಾರ್ವತಿಯ ಮೂಗು ಸರಳವಾಗಿ ಚಂದಕಾಣುತ್ತಿತ್ತು. ಆ ಮೂಗಿನಲ್ಲಿ ಮುತ್ತು-ರತ್ನಗಳಿಂದ ಕೂಡಿದ ಮೂಗುತಿಯು ಹೊಳೆಯುತ್ತಿತ್ತು. ॥ ೧೭೫ ॥ ಆಕೆಯ ತುಟಿಗಳು ಹವಳದಂತೆಯೂ, ಹಲ್ಲುಗಳು ರತ್ನಗಳಂತೆಯೂ, ಚಂದ ಕಾಣುತ್ತಿರಲು ಜಗನ್ಮಾತೆಯೂ ಮಹಾ ಮಾಯೆಯೂ ಆದ ಪಾರ್ವತಿಯು ಶೋಭಿಸುತ್ತಿದ್ದಳು. ॥ ೧೭೬ ॥ ಆಕೆಯು ಕಿವಿಯಲ್ಲಿ ಹೊಳೆಯುವ ರತ್ನಖಚಿತವಾದ ವಾಲೆಗಳನ್ನೂ ನಾನಾ ಅಲಂಕಾರಗಳನ್ನೂ ಧರಿಸಿದ್ದಳು. ॥ ೧೭೭ ॥ ಮತ್ತು ಆಕೆಯು ಕುಚತಟಿಯಲ್ಲಿ ಪೀತವರ್ಣದ ಕುಪ್ಪುಸವನ್ನೂ ಕಂಠದಲ್ಲಿ ರತ್ನಖಚಿತವಾದ ಅನೇಕ ಏಕಾವಳಿ ಸರಗಳನ್ನೂ ಧರಿಸಿ ಮಹಾ ಮಾಯಾ ಜಗನ್ಮಾತೆಯು ಶೋಭಿಸುತ್ತಿದ್ದಳು. ॥ ೧೭೮ ॥ ಒಂದು ದೊಡ್ಡ ಕೃಷ್ಣಸರ್ಪವು ಆಕೆಯ ಮನೋಹರವಾದ ಸ್ತನಪಾನ ಮಾಡುತ್ತಿತ್ತು. ಆ ಸರ್ಪದ ಭಾಗ್ಯವು ಎಷ್ಟು ದೊಡ್ಡದಿತ್ತೋ ಏನೋ ॥ ೧೭೯ ॥ ಆ ಗಿರಿಜಾಮಾತೆಯು ದಾಳಿಂಬ ಹೂವಿನ ಕೆಂಪುಬಣ್ಣದ ಸೀರೆಯನ್ನುಟ್ಟುಕೊಂಡು ಹಣೆಯಲ್ಲಿ ಕುಂಕುಮವನ್ನು ಹಚ್ಚಿಕೊಂಡು ರಂಜಿಸುತ್ತಿದ್ದಳು. ॥ ೧೮೦ ॥ ಆಕೆಯ ಬಾಹುದಂಡಗಳು ಸರಳ ಹಾಗು ಸುಂದರವಾಗಿದ್ದವು. ಆಕೆಯು ಕೈಗಳಲ್ಲಿ ರತ್ನಖಚಿತ ಕಂಕಣಗಳನ್ನೂ ಬೆರಳುಗಳಲ್ಲಿ ರತ್ನಖಚಿತವಾದ ನಾನಾ ಉಂಗುರಗಳನ್ನೂ ಮುತ್ತಿನ ಕುಪ್ಪುಸವನ್ನೂ ಧರಿಸಿದ್ದಳು. ॥ ೧೮೧ ॥ ಆಕೆಯ ಕಾಲುಗಳು ಕಾಲಕಡಗ-ಪೈಜಣಗಳಿಂದ ಯುಕ್ತವಾಗಿ ಉತ್ತಮ ರೀತಿಯಿಂದ ಶೋಭಿಸುತ್ತಿದ್ದವು. ಈ ಪ್ರಕಾರವಾಗಿರುವ ಪಾರ್ವತಿಯನ್ನು ಧ್ಯಾನಿಸಬೇಕೆಂದು ಯಾವತ್ತೂ ದೇವತೆಗಳು ಅನ್ನುತ್ತಾರೆ. ॥ ೧೮೨ ॥ ಆಕೆಯ ಹಣೆಯಲ್ಲಿರುವ ತ್ರಿಪುಂಡ್ರ ಭಸ್ಮವು ಮುತ್ತಿನಂತೆ ಶುಭ್ರವಾಗಿಯೂ, ಅದರಮೇಲೆ ಹಚ್ಚಿದ ಕುಂಕುಮದ ತಿಲಕವು

ಅಷ್ಟಮಿಯ ಚಂದ್ರನಂತೆಯೂ ಶೋಭಿಸುತ್ತಿದ್ದವು. || ೧೮೩ || ನಾನಾತರದ ಅಲಂಕಾರ ಮತ್ತು ನಾನಾತರದ
ಶೃಂಗಾರಗಳಿಂದ ಕೂಡಿದಂಥ ಜಗನ್ಮಾತೆಯಾದ ಪಾರ್ವತೀದೇವಿಯವನ್ನು ವರ್ಣಿಸಲಿಕ್ಕೆ ಯಾರು ಶಕ್ಯ
ರಾದಾರು ? || ೧೮೪ || ಈ ಪ್ರಕಾರವಾಗಿ ಶಂಭುವು ಉಮಾದೇವಿ ಸಹಿತ ಸಭೆಯಲ್ಲಿ ಕೂತಿದ್ದನು. ಆಗ
ಇಂದ್ರನು ತನ್ನ ೩೩ ಕೋಟಿ ದೇವತೆಗಳನ್ನು ಕರಕೊಂಡು ಪೂಜಾ ಮಾಡುವದಕ್ಕಾಗಿ ಬಂದನು. || ೧೮೫ ||
ಆಮೇಲೆ ಉಳಿದ ಯಾವತ್ತೂ ದೇವತೆಗಳೂ, ದೇವಋಷಿಗಳೂ, ಸನತ್ಕುಮಾರರೂ ತೀವ್ರವಾಗಿ ಈಶ್ವರನ ಸಭೆಗೆ
ಬಂದರು. || ೧೮೬ || ಆಗ ಸನತ್ಕುಮಾರ ಮುನಿಯು ಶ್ರೀಶಂಕರನ ಚರಣಕಮಲಗಳನ್ನು ಹಿಡಿದು ಸಾಷ್ಟಾಂಗ
ನಮಸ್ಕಾರ ಮಾಡಿ ಬಹು ವಿನಂತೀ ಮಾಡಿಕೊಂಡು || ೧೮೭ || ಜಯ ಜಯ ಉಮಾಕಾಂತನೇ, ಜಯ ಜಯ
ಶಂಭುವೇ, ವಿಶ್ವಕರ್ತನೇ, ವಿಘ್ನಹರ್ತನೇ, ತ್ರಿಪುರಾರಿಯೇ, ತ್ರಿಭುವನಗಳಿಗೂ ನೀನೇ ಚತುರ್ವಿಧ ಪುರುಷಾರ್ಥ
ಗಳನ್ನು ಕೊಡತಕ್ಕವನು. || ೧೮೮ || ದೇವಾ, ನೀನು ಈ ಮೊದಲು ನಮಗೆ ಪಾಪಕ್ಷಯವಾಗಿ ನಾವು ಈ
ಭವಸಾಗರವನ್ನು ದಾಟುವಂಥ ಅನೇಕ ಧರ್ಮಗಳನ್ನು ಹೇಳಿದಿ. || ೧೮೯ || ಆದರೆ ಈಗ ನಮಗೆ ಸ್ವಲ್ಪ ಪುಣ್ಯಾ
ದಿಂದ ಸಹಜವಾಗಿ ಚತುರ್ವಿಧ ಪುರುಷಾರ್ಥಗಳು ದೊರೆತು ಮುಕ್ತಿಯಾಗುವಂಥ ಬೇರೊಂದು ಉಪಾಯವನ್ನು
ಹೇಳು ಎಂದರೂ. || ೧೯೦ || ಈ ಪ್ರಕಾರದ ಪುಣ್ಯವನ್ನು ಸಂಪಾದಿಸುವದು ಸರ್ವ ಜನರಿಗೆ ಎಷ್ಟು ಕಷ್ಟ
ಬಟ್ಟರೂ ಆಗುವದಿಲ್ಲ. ಆದ್ದರಿಂದ ದೇವಾ, ಸರ್ವ ಮಾನವರಿಗೆ ಹಿತವಾಗುವಂಥ ಒಂದು ಸಾಧಾರಣ ಧರ್ಮವನ್ನು
ಹೇಳಿರಿ ಎಂದು ಬೇಡಿಕೊಂಡರು. || ೧೯೧ || ಅವರ ಮಾತು ಕೇಳಿ ಆ ಕರ್ಪೂರಗೌರನಾದ ಈಶ್ವರನು ಸಂತೋಷ
ಬಟ್ಟು ಅವರಿಗೆ ಹೇಳಹತ್ತಿದನು. |೧೯೨|| ಎಲೈ ಸನತ್ಕುಮಾರಾದಿ ಸಮಸ್ತ ಋಷಿಗಳೇ ಕೇಳಿರಿ ಧರ್ಮವು ಘಟಿಸಿ
ತಾತ್ಕಾಲದಲ್ಲಿಯೇ ಪುಣ್ಯ ಬರುವಂಥ, ವೇದಶಾಸ್ತ್ರಕ್ಕೆ ಸಮ್ಮತವಾದಂಥ, ಅನಂತ ಪುಣ್ಯಕರವಾದಂಥ, ತ್ರಿಪುಂಡ್ರ
ಭಸ್ಮಧಾರಣ ಧರ್ಮವಿಧಿಯನ್ನು ಹೇಳುವೆನು ಕೇಳಿರಿ ಎಂದನು. ||೧೯೩-೧೯೪|| ಈ ಪ್ರಕಾರ ಈಶ್ವರನ ಮಾತು ಕೇಳಿ
ಸನತ್ಕುಮಾರನು— ದೇವಾ, ಮನುಷ್ಯರು ಭಸ್ಮವನ್ನು ಯಾವ ವಿಧಿಯಿಂದ, ಯಾವ ಯಾವ ಸ್ಥಾನದಲ್ಲಿ ಹಚ್ಚಬೇಕು?

ಇದಕ್ಕೆ ಯಾವ ಶಕ್ತಿಯು ? ಯಾವ ದೇವತಾ ಇರುತ್ತದೆ ? ॥೧೯೫॥ ಅದರ ಕರ್ತೃತ್ವಶಕ್ತಿ ಯಂಥಾದ್ದು ? ಇದಕ್ಕೆ ಪ್ರಮಾಣವೇನು ? ಯಾವ ಮಂತ್ರದಿಂದ ಹಚ್ಚಬೇಕು ? ಇದೆಲ್ಲವನ್ನು ವಿಸ್ತಾರವಾಗಿ ಹೇಳಬೇಕು ಎಂದು ಆತನ ಪಾದಕ್ಕೆ ನಮಸ್ಕಾರ ಮಾಡಿದರು ॥೧೯೬॥ ಈ ಪ್ರಕಾರ ವಿನಂತಿಸಿದ್ದನ್ನು ಕೇಳಿ ಶಂಭುವು ವಿಸ್ತಾರವಾಗಿ ಹೇಳಹತ್ತಿದನು. ಹ್ಯಾಗಂದರೆ— ಎಲೈ ಋಷಿಗಳೇ ಕೇಳಿರಿ ಗೋಮಯವನ್ನು ದೇವತಾಗ್ನಿಯಲ್ಲಿ ಭಸ್ಮ ಮಾಡಬೇಕು ॥೧೯೭॥ ಪೂರ್ವದಲ್ಲಿ ಯಜ್ಞ ಮಾಡಿದ ಸ್ಥಳದಲ್ಲಿಯ ಭಸ್ಮವನ್ನು ಹಚ್ಚಿಕೊಂಡ ಕ್ಷಣದಲ್ಲಿಯೇ ಬಹು ಪುಣ್ಯ ಬರುವದು ಆದಕಾರಣ ಅಲ್ಲಿಯ ಭಸ್ಮವನ್ನು ತರಬೇಕು ॥೧೯೮॥ **ಸದ್ಯೋಜಾತಾದಿ** ಮಂತ್ರ ಅನ್ನುತ್ತ ಭಸ್ಮವನ್ನು ಅಂಗೈಯಲ್ಲಿ ಹಾಕಿಕೊಂಡು ಅದನ್ನು **ಅಗ್ನಿರಿತ್ಯಾದಿ** ಮಂತ್ರದಿಂದ ಅಭಿಮಂತ್ರಿಸಬೇಕು. ॥೧೯೯॥ ಆಮೇಲೆ **ಮಾನಸ್ತೋಕೆ** ಎಂಬ ಮಂತ್ರದಿಂದ ಅದಕ್ಕೆ ನೀರು ಹಾಕಿ ಆ ಭಸ್ಮವನ್ನು ಅಂಗುಷ್ಠದಿಂದ ತಿಕ್ಕಿ **ತ್ರ್ಯಂಬಕಾದಿ** ಮಂತ್ರದಿಂದ ಮೊದಲು ತಲೆಗೆ ಹಚ್ಚಬೇಕು. ॥೨೦೦॥ **ತ್ರ್ಯಾಯುಷ** ಎಂಬ ಮಂತ್ರದಿಂದ ಹಣೆ ಮತ್ತು ಭುಜಗಳಲ್ಲಿ ಹಚ್ಚಬೇಕು ಮತ್ತೆ ಅದೇ ಮಂತ್ರದಿಂದ ಆಯಾ ಸ್ಥಾನಗಳಲ್ಲಿ ಹಚ್ಚಬೇಕು ॥೨೦೧॥ ಆಮೇಲೆ ಅಂಗುಷ್ಠದಿಂದ ಮೊದಲು ಹಣೆಯಲ್ಲಿ ಪ್ರತಿಲೋಮವಾಗಿ ಮಧ್ಯ ರೇಖೆಯನ್ನೆಳೆಯಬೇಕು. ಆಮೇಲೆ ತರ್ಜನಿ, ಮಧ್ಯ, ಅನಾಮಿಕ ಬೆರಳುಗಳಿಂದ ಕಣ್ಣು-ಹುಬ್ಬುಗಳಿಗೆ ಸಮಾನವಾಗಿ ಹಣೆಯಲ್ಲಿ ಅಡ್ಡ ಭಸ್ಮದ ಮೂರು ರೇಖೆಗಳನ್ನು ಎಳೆಯಬೇಕು ಈ ಪ್ರಕಾರ ತ್ರಿಪುಂಡ್ರ ಭಸ್ಮ ಹಚ್ಚಬೇಕು. ಒಂದೊಂದು ರೇಖೆಯ ಬಗ್ಗೆ ವಿಸ್ತಾರವಾಗಿ ಹೇಳುವೆನು ಕೇಳಿರಿ. ॥೨೦೨-೨೦೩॥ ಅದೇ ಮತ್ರದಿಂದ ಆಯಾ ಸ್ಥಾನಗಳಲ್ಲಿ ಮೂರು ಮೂರು ರೇಖಾಗಳನ್ನು ಹಚ್ಚಬೇಕು ಹೆಚ್ಚು ರೇಖಾ ಹಚ್ಚಬಾರದು ॥೨೦೪॥ ಒಂದೊಂದು ರೇಖೆಗೆ ಒಂಬೊಂಬತ್ತು ಪ್ರಖ್ಯಾತ ದೇವತೆಗಳುಂಟು ಪ್ರಥಮ ರೇಖೆಯ ಲಕ್ಷಣವೇನಂದರೆ— ಒಂದನೇ ರೇಖೆಯು ಅಕಾರವು, ಗಾರ್ಹಪತ್ಯವು, ಆದಕ್ಕೆ ಭೂಃ ಆತ್ಮನು, ರಜೋಗುಣವು. ॥೨೦೫॥ ಋಗ್ವೇದ ಸ್ವರೂಪವು, ಕ್ರಿಯಾಶಕ್ತಿಯು, ಪ್ರಾತಃಸವನವು, ಆದಕ್ಕೆ ಮಹಾದೇವನೇ ದೇವತೆಯು. ಇದು ಪ್ರಥಮ ರೇಖಯ ಲಕ್ಷಣವು. ॥೨೦೬॥ ಎರಡನೇ ರೇಖೆಯು ಉಕಾರವು. ಅದಕ್ಕೆ ದಕ್ಷಿಣಾಗ್ನಿ ದೇವತೆಯು, ನಭಃ ಸತ್ವವು. ॥೨೦೭॥

ಯಜುರ್ವೇದ ಸ್ವರೂಪವು, ಮಾಧ್ಯಂದಿನಸವನವು, ಇಚ್ಛಾಶಕ್ತಿಯು ಅಂತರಾತ್ಮನಾದ ಮಹೇಶ್ವರನೇ ದೇವತೆಯು. ಇದು ೨ನೇ ರೇಖೆಯ ಲಕ್ಷಣವು. ॥ ೨೦೮ ॥ ಮಧ್ಯದ ಮೂರನೇ ರೇಖೆಯು ಮಕಾರವು. ಆಹವನೀಯ ಸ್ವರೂಪವು, ಪರಮಾತ್ಮಾ ಪ್ರಕೃತಿಯು, ಅದಕ್ಕೆ ಜ್ಞಾನ ಶಕ್ತಿಯು ॥ ೨೦೯ ॥ ಅದಕ್ಕೆ ತೃತೀಯ ಸವನವು. ಇಂದ್ರನೇ ಅಧಿದೇವತೆಯು. ನಿಶ್ಚಯವಾದ ಶಿವಶಕ್ತಿಯು. ಇದು ೩ನೇ ರೇಖೆಯು. ಈ ಪ್ರಕಾರ ಮೂರು ರೇಖೆಗಳಿರುತ್ತವೆ. ॥ ೨೧೦ ॥ ಈ ಪ್ರಕಾರ ಮೂರು ರೇಖೆಗಳನ್ನು ತಿಳಕೊಂಡು ನಮಸ್ಕರಿಸಿ ತ್ರಿಪುಂಡ್ರ ಭಸ್ಮ ಹಚ್ಚಬೇಕು. ಈ ಪ್ರಕಾರ ಭಸ್ಮ ಹಚ್ಚುವದು ಮಹೇಶ್ವರನಿಗೆ ಪ್ರೀತಿಕರವೆಂದು ವೇದಶಾಸ್ತ್ರಗಳು ಹೇಳು ವವು. ॥ ೨೧೧ ॥ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತೀಶ್ವರ ಎಲ್ಲರೂ ಆನಂದದಿಂದ ತ್ರಿಪುಂಡ್ರ ಭಸ್ಮ ಹಚ್ಚಬೇಕು ॥ ೨೧೨ ॥ ಮುಕ್ತಿಯನ್ನು ಬಯಸುವವನು ನಿತ್ಯ ಭಸ್ಮವನ್ನು ಹಚ್ಚಬೇಕು. ಅಂದರೆ ಅವನಿಗೆ ಪುನರ್ಜನ್ಮವಿಲ್ಲ. ಅದರಿಂದ ಅವನು ಬಯಿಸಿದ ಇಷ್ಟಾರ್ಥಗಳೂ ನಾಲ್ಕೂ ಪುರುಷಾರ್ಥಗಳೂ ಸಿದ್ಧಿಸುವವು ॥ ೨೧೩ ॥ ಕ್ಷತ್ರಿಯ–ವೈಶ್ಯ–ಶೂದ್ರರೂ ಕೂಡ ಈ ಪ್ರಕಾರ ಭಸ್ಮವನ್ನು ಹಚ್ಚಿದರೆ, ಅವರ ಗೋಹತ್ಯಾ, ವೀರಹತ್ಯಾ, ಆತ್ಮಹತ್ಯಾಪಾತಕಗಳು ಪರಿಹಾರವಾಗಿ ಶುದ್ಧರಾಗುವರು. ॥ ೨೧೪ ॥ ಮಹಾಪಾತಕಿಯೂ ಉಪಪಾತಕಿಯೂ ಈ ಪ್ರಕಾರ ಭಸ್ಮವನ್ನು ಹಚ್ಚಿದಕೂಡಲೆ ಪುಣ್ಯವಂತನಾಗುವನು ॥ ೨೧೫ ॥ ವಿಧಿಪೂರ್ವಕ ಮಂತ್ರದಿಂದಲೂ, ಭಕ್ತಿಯಿಂದಲೂ ಭಸ್ಮವನ್ನು ಲೇಪಿಸಿದವನ ಮಹಿಮೆಯು ಅಪಾರವಾಗಿರುವದು ಅವನು ಶಿವಲೋಕದಲ್ಲಿ ವಂದ್ಯ ನಾಗುವನು ॥ ೨೧೬ ॥ ಒಂದುವೇಳೆ ಮಂತ್ರವು ಬರದಿದ್ದರೂ ಭಕ್ತಿಯಿಂದ ಭಸ್ಮವನ್ನು ಹಚ್ಚಿದರೆ ಅವನ ಮಹಿ ಮೆಯೂ ಅಪಾರವಾಗುವದು ॥ ೨೧೭ ॥ ಪರದ್ರವ್ಯಾಪಹಾರ, ಪರಸ್ತ್ರೀಗಮನ, ಪರನಿಂದೆಗಳನ್ನು ಮಾಡಿದ ವನು ಭಸ್ಮವನ್ನು ಹಚ್ಚಿದರೆ ಪಾವನನಾಗುವನು ॥ ೨೧೮ ॥ ಪರಕ್ಷೇತ್ರ ಹರಣಮಾಡಿದವನೂ, ಪರಪೀಡಕನೂ, ಧಾನ್ಯದ ಹೊಲವನ್ನೂ, ತೋಟವನ್ನೂ, ಮುರಿದವನೂ, ॥ ೨೧೯ ॥ ಮನೆಯನ್ನು ಸುಟ್ಟವನೂ, ಅಸತ್ಯ ವಾದಿಯೂ, ಚಾಡಿಕಾರನೂ, ವೇದವಿಕ್ರಯನೂ, ಕೂಟಸಾಕ್ಷಿ ಹೇಳುವವನೂ, ॥ ೨೨೦ ॥ ತನ್ನ ವೃತ್ತಿಯನ್ನು

ಬಿಟ್ಟವನೂ, ಹೊಟ್ಟೆಯುದೆಶೆಯಿಂದ ಕಪಟ ಮಾಡಿದವನೂ, ಸದಾ ಪಾಪ ಭೋಗಿಸುವವನೂ ಭಸ್ಮವನ್ನು ಹಚ್ಚಿದರೆ ಪುನೀತನಾಗುವನು. ॥ ೨೨೧ ॥ ಆಕಳು, ಭೂಮಿ, ಬಂಗಾರ, ಎಮ್ಮಿ, ಎಳ್ಳು, ಕಂಬಳಿ, ವಸ್ತ್ರ, ಅನ್ನ ಇವುಗಳ ದಾನ ತೆಗೆದುಕೊಂಡವನೂ ॥ ೨೨೨ ॥ ನೀಚ ಮನುಷ್ಯರಿಂದ ಧಾನ್ಯ ಹಾಗು ಜಲಾದಿ ದಾನಗಳನ್ನು ಸ್ವೀಕರಿಸಿದವನೂ ಭಸ್ಮವನ್ನು ಧರಿಸಿದರೆ ಪುನೀತನಾಗುವನು. ॥ ೨೨೩ ॥ ಕನ್ಯಾ, ವಿಧವಾ, ಅನ್ಯ ಸ್ತ್ರೀಯರ ಸಂಗ ಮಾಡಿದವನು ಅನುತಪ್ತನಾಗಿ ಭಸ್ಮವನ್ನು ಹಚ್ಚಿದರೆ ಪುನೀತನಾಗುವನು. ॥ ೨೨೪ ॥ ದಾಸಿ, ವೇಶ್ಯಾ, ರಜಸ್ವಲೆ, ಶೂದ್ರ ಸ್ತ್ರೀ, ಲಗ್ನವಾಗಿ ಮೊದಲನೆ ಸಾರೆ ರಜಸ್ವಲೆಯಾದವಳು ಇವರ ಸಂಗ ಮಾಡಿದ್ದರೆ ಪಶ್ಚಾತ್ತಾಪದಿಂದ ಭಸ್ಮ ಹಚ್ಚಿದರೆ ಪುನೀತನಾಗುವನು. ॥೨೨೫॥ ಮತ್ತು ರಸ-ಮಾಂಸ, ಉಪ್ಪುಗಳನ್ನು ವಿಕ್ರಯಿಸಿದವನು, ತಿಳಿದಾಗಲಿ, ತಿಳಿಯದೆಯಾಗಲಿ ಪಾಪಗಳನ್ನು ಮಾಡಿದವನು ಪಶ್ಚಾತ್ತಾಪದಿಂದ ಭಸ್ಮವನ್ನು ಲೇಪಿಸಿದರೆ ಪುನೀತನಾಗಿ ಪುಣ್ಯಾತ್ಮನಾಗುವನು. ॥೨೨೬-೨೨೭॥ ಎಲೈ ಸನತ್ಕುಮಾರರೇ ಈ ಪ್ರಕಾರ ಭಸ್ಮದ ಮಹಿಮೆಯು ಇರುತ್ತದೆ. ಅದರ ಲೇಪನದಿಂದ ಮನುಷ್ಯನ ಸಕಲ ಪಾಪಗಳು ನಾಶವಾಗುವವು. ಶಿವನಿಂದಕನು ಮಾತ್ರ ನರಕದಲ್ಲಿ ಬಿದ್ದು ದುಃಖವನ್ನು ಅನುಭವಿಸುವನು. ॥ ೨೨೮ ॥ ಶಿವದ್ರವ್ಯಾಪಹಾರಕನಿಗೆ, ಶಿವಭಕ್ತರನ್ನು ನಿಂದಿಸಿದವರಿಗೆ ಪ್ರಾಯಶ್ಚಿತ್ತವಿಲ್ಲದ್ದರಿಂದ ಅವರ ಪಾಪವು ಎಂದೂ ಪರಿಹಾರವಾಗುವದಿಲ್ಲವೆಂದು ತಿಳಿಯಿರಿ. ॥ ೨೨೯ ॥ ಯಾರ ಕಂಠದಲ್ಲಿ ರುದ್ರಾಕ್ಷ ಮಾಲೆಯೂ, ಹಣೆಯಲ್ಲಿ ತ್ರಿಪುಂಡ್ರ ಭಸ್ಮವೂ ಇರುವದೋ ಅವರು ಯಾವ ಜಾತಿಯವರಾದರೂ ಮೂರು ಲೋಕದಲ್ಲಿ ಪೂಜ್ಯರಾಗುವರು. ॥ ೨೩೦ ॥ ಈ ಭೂಮಿಯಲ್ಲಿ ಎಷ್ಟು ತೀರ್ಥ, ಎಷ್ಟು ಕ್ಷೇತ್ರಗಳವೆಯೋ ಅಲ್ಲಲ್ಲಿ ಸ್ನಾನ ಮಾಡಿದ ಪುಣ್ಯಕ್ಕೆ ಸರಿಯಾದ ಪುಣ್ಯವು ಭಸ್ಮಲೇಪನದಿಂದ ಬರುವದು. ॥ ೨೩೧ ॥ ಈ ಭೂಮಿಯಲ್ಲಿ ಶತಕೋಟಿ ಮಂತ್ರಗಳಿರುವವು. ಅವುಗಳಲ್ಲಿ ಶಿವಪಂಚಾಕ್ಷರಾದಿ ಮಂತ್ರಗಳು ವಿಖ್ಯಾತವಾಗಿ ಅನಂತ ಮಹಿಮೆಯುಳ್ಳವಾಗಿರುವವು. ಆದರೆ ಭಕ್ತಿಯಿಂದ ದಿನಾಲು ಭಸ್ಮ ಲೇಪಿಸಿಕೊಂಡರೆ ಆ ಮಂತ್ರಗಳನ್ನು ಜಪಿಸಿದಷ್ಟು ಫಲವು ಬರುವದು. ॥ ೨೩೨ ॥ ಈ ಪ್ರಕಾರ ಭಸ್ಮಲೇಪನ ಮಾಡಿದ ಮನುಷ್ಯನು ಇಹಲೋಕದಲ್ಲಿ ಸುಖವನ್ನು

ಹೊಂದಿ ಶತಾಯುಷಿಯೂ ನಿರೋಗಿಯೂ ಆಗಿರುವನು. ॥ ೩೩೩ ॥ ಭಸ್ಮ ಲೇಪನದಿಂದ ಮನುಷ್ಯನ ಪೂರ್ವದ
ಸಹಸ್ರ ಜನ್ಮಗಳ ಪಾಪಗಳೂ, ನಾಲ್ವತ್ತೆರಡು ತಲೆಗಳಲ್ಲಿ ಮಾಡಿದ ಪಾಪಗಳೂ ಹೋಗುವವು. ॥ ೩೩೪ ॥
ಮುಂದೆ ಅವನಿಗೆ ಅಷ್ಟೈಶ್ವರ್ಯವೂ ತೇಜೋಮಯವಾದ ದಿವ್ಯ ಶರೀರವೂ ಜ್ಞಾನವೂ ದೇಹಾಂತದಲ್ಲಿ ನಿಶ್ಚಯ
ವಾದ ಮುಕ್ತಿಯೂ ಉಂಟಾಗುವವು ॥ ೧೩೫ ॥ ನಿತ್ಯದಲ್ಲಿಯೂ ಭಕ್ತಿಯಿಂದ ಭಸ್ಮವನ್ನು ಹಚ್ಚಿದಂಥ ಮನುಷ್ಯ
ನನ್ನು ದಿವ್ಯ ವಿಮಾನದಲ್ಲಿ ಕೂಡ್ರಿಸಿ, ದೇವಸ್ತ್ರೀಯದು ಸೇವಿಸುತ್ತ ಸ್ವರ್ಗಕ್ಕೆ ಕರೆದೊಯ್ಯುವರು. ॥ ೩೩೬ ॥ ಅಲ್ಲಿ
ವಿದ್ಯಾಧರ, ಸಿದ್ಧ, ಗಂಧರ್ವ ಮುಂತಾದ ದೇವಗಣಗಳೂ ಇಂದ್ರಾದಿ ಲೋಕಪಾಲಕರೂ ಎಲ್ಲರೂ ಅವನನ್ನು
ವಂದಿಸುವರು. ॥ ೩೩೭ | ಅವನು ಬಹುಕಾಲ ಸುಖವಾಗಿ ಸಂತೋಷದಿಂದ ಆ ಸ್ವರ್ಗಲೋಕದಲ್ಲಿದ್ದು, ಅಲ್ಲಿಂದ
ಬ್ರಹ್ಮಲೋಕಕ್ಕೆ ಹೋಗಿ ॥ ೩೩೮ ॥ ಅಲ್ಲಿ ಒಂದು ನೂರು ಕಲ್ಪದ ವರೆಗೆ ಸ್ಥಿರವಾಗಿದ್ದು ಅಲ್ಲಿಂದ ವೈಕುಂಠಕ್ಕೆ
ಹೋಗಿ ॥ ೩೩೯ ॥ ಅಲ್ಲಿ ಮೂರು ಬ್ರಹ್ಮಕಲ್ಪದ ವರೆಗಿದ್ದು ಆಮೇಲೆ ಕೈಲಾಸಕ್ಕೆ ಬಂದು ಅಲ್ಲಿ ಅಕ್ಷಯ ಕಾಲದ
ವರೆಗೆ ಸುಖದಿಂದಿರುವನು. ॥ ೩೪೦ ॥ ಮುಂದೆ ಅವನಿಗೆ ಶಿವಸಾಯುಜ್ಯ ಉಂಟಾಗುವದು. ಸನತ್ಕುಮಾರಾದಿ
ಸಕಲ ಋಷಿಗಳೇ, ಪ್ರತಿಯೊಬ್ಬರು ಮನಸಿನಲ್ಲಿಯ ಸಂಶಯವನ್ನು ಬಿಟ್ಟು ತ್ರಿಪುಂಡ್ರ ಭಸ್ಮವನ್ನು ಹಚ್ಚ
ಬೇಕು. ॥ ೩೪೧ ॥ ಇದಲ್ಲದೆ ಭಸ್ಮ ಲೇಪನದಿಂದ ಚತುರ್ವಿಧ ಪುರುಷಾರ್ಥಗಳು ದೊರಕುವವೆಂದು ವೇದ-ಶಾಸ್ತ್ರ-
ಉಪನಿಷಧ-ಪುರಾಣಗಳಲ್ಲಿ ಪ್ರಸಿದ್ಧವಾಗಿ ಹೇಳಿದೆ. ॥ ೩೪೨ ॥ ಈ ಪ್ರಕಾರ ತ್ರಿಪುಂಡ್ರ ಭಸ್ಮದ ಮಹಿಮೆಯನ್ನು
ಶಿವನು ವಿಸ್ತಾರವಾಗಿ ಹೇಳಿದನೆಂದು ತಿಳಿದು ಯಾವತ್ತು ಜನರು ತ್ರಿಪುಂಡ್ರ ಭಸ್ಮಧಾರಣ ಮಾಡಿರಿ. ॥ ೩೪೩ ॥
ಈ ಪ್ರಕಾರ ಶ್ರೀಶಂಕರನು ಸನತ್ಕುಮಾರಾದಿ ಋಷಿಗಳಿಗೆ ತ್ರಿಪುಂಡ್ರಭಸ್ಮದ ವಿಧಿ ಹಾಗು ಮಹತ್ವವನ್ನು ಹೇಳಿ
ಕೈಲಾಸಕ್ಕೆ ಹೋದನು ಇತ್ತ ಸನತ್ಕುಮಾರ ಮಹಾ ಋಷಿಗಳು ಬ್ರಹ್ಮಲೋಕಕ್ಕೆ ಹೊರಟು ಹೋದರು. ॥ ೩೪೪ ॥
ಈ ಪ್ರಕಾರ ವಾಮದೇವ ಋಷಿಗಳು ಬ್ರಹ್ಮರಾಕ್ಷಸನಿಗೆ ಹೇಳಲು ಅವನು ಸಂತೋಷಬಟ್ಟು ಅವರ ಚರಣಕ್ಕೆ
ನಮಸ್ಕರಿಸಿದನು. ॥ ೩೪೫ ॥ ಆಗ ವಾಮದೇವರು— ಎಲೈ ರಾಕ್ಷಸನೇ, ಭಸ್ಮದ ಮಹಿಮೆಯು ಈ ಪ್ರಕಾರ

ವಾಗಿರುವದು. ನನ್ನ ಮೈಮೇಲಿನ ಭಸ್ಮವು ನಿನಗೆ ಹತ್ತಿದ್ದರಿಂದ ನಿನಗೆ ಜ್ಞಾನಪ್ರಕಾಶವಾಯಿತು. ‖ ೨೪೬ ‖ ಎಂದು ವಾಮದೇವರು ಸಂತೋಷದಿಂದ ಹೇಳಿ ಭಸ್ಮವನ್ನು ಅಭಿಮಂತ್ರಿಸಿ ಆ ರಾಕ್ಷಸನಿಗೆ ಕೊಟ್ಟರು. ‖ ೨೪೭ ‖ ಆ ಕೂಡಲೆ ರಾಕ್ಷಸನು ತ್ರಿಪುಂಡ್ರವಾಗಿ ಸರ್ವಾಂಗದಲ್ಲಿ ಆ ಭಸ್ಮವನ್ನು ಹಚ್ಚಲು ಅವನಿಗೆ ಬಲವಾದ ದಿವ್ಯ ದೇಹ ಪ್ರಾಪ್ತವಾಗಿ ತೇಜೋಮೂರ್ತಿಯಾದನು. ‖ ೨೪೮ ‖ ಅವನ ಅವಯವಗಳು ಸಹಿತ ದಿವ್ಯವಾಗಿ ಅವನು ಸೂರ್ಯ ಕಾಂತಿಯಂತೆ ಹೊಳೆಯುತ್ತ ಆನಂದರೂಪನಾದನು ‖ ೨೪೯ ‖ ಆಮೇಲೆ ಅವನು ಆ ವಾಮದೇವ ಯೋಗಿಗೆ ನಮಸ್ಕಾರ ಮಾಡಿ, ಭಕ್ತಿಯಿಂದ ಅವರಿಗೆ ಪ್ರದಕ್ಷಿಣಾ ನಮಸ್ಕಾರ ಮಾಡಿದನು ಅಷ್ಟರಲ್ಲಿ ಸೂರ್ಯ ಪ್ರಕಾಶಕ್ಕೆ ಸಮಾನವಾದ ವಿಮಾನವು ಬಂತು ‖ ೨೫೦ ‖ ಕೂಡಲೆ ದೇವತೆಗಳು ಅವನನ್ನು ಅದರಲ್ಲಿ ಕೂಡ್ರಿಸಿಕೊಂಡು ಸ್ವರ್ಗಕ್ಕೆ ಕರಕೊಂಡು ಹೋದರು ವಾಮದೇವ ಮುನಿಗಳು ಅವನಿಗೆ ಪರಮ ಲೋಕವನ್ನು ಪ್ರಾಪ್ತಮಾಡಿ ಕೊಟ್ಟರು ‖ ೨೫೧ ‖ ಮಹಾದೇವ ಸಮಾನರಾದ ವಾಮದೇವ ಮುನಿಗಳು, ಪ್ರತ್ಯಕ್ಷ ಶಂಕರರು, ಭಕ್ತರ ಉದ್ಧಾರಕ್ಕಾಗಿ ಮನುಷ್ಯ ರೂಪವನ್ನು ಧರಿಸಿ ಭೂಮಿಯಲ್ಲಿ ಸಂಚರಿಸುತ್ತಿರುವರು ‖ ೨೫೨ ‖ ತ್ರೈಮೂರ್ತಿ ಅವತಾರಕರೂ ಸರ್ವೇಶ್ವರರೂ ಆದ ವಾಮದೇವ ಮುನಿಗಳು ಜಗದುದ್ಧಾರಕ್ಕಾಗಿ ಭೂಮಿಯಲ್ಲಿ ಸಂಚರಿಸುತ್ತಿರುವರು. ‖ ೨೫೩ ‖ ಭಸ್ಮದ ಮಹಿಮೆಯಂತೂ ಮೊದಲೇ ದೊಡ್ಡದು. ಆದರಲ್ಲಿ ಗುರುಹಸ್ತದಿಂದ ಬಂದ ಭಸ್ಮವು, ವಿಶೇಷವಾದದ್ದು. ವಾಮದೇವ ಗುರು ಹಸ್ತದಿಂದ ಬಂದ ಭಸ್ಮವನ್ನು ಹಚ್ಚಿಕೊಂಡ ಆ ಬ್ರಹ್ಮರಾಕ್ಷಸನು ಧನ್ಯನಾಗಿ ಉತ್ತಮ ಗತಿಯನ್ನು ಹೊಂದಿದನು ‖ ೨೫೪ ‖ ಈ ಜಗತ್ತಿನಲ್ಲಿ ಅನೇಕ ಮಂತ್ರಗಳಿದ್ದರೂ ಅವು ಗುರುವಿನ ಹೊರತು ಸಾಧ್ಯವಾಗುವದಿಲ್ಲ. ಗುರುವನ್ನು ಬಿಟ್ಟು ಪರತತ್ವವಿಲ್ಲವೆಂದು ವೇದಶಾಸ್ತ್ರಗಳು ಹೇಳುತ್ತವೆ. ‖ ೨೫೫ ‖ ಇತ್ತ ಸೂತನು ಋಷಿಗಳನ್ನು ಕುರಿತು— ಎಲೈ ಋಷಿಗಳೇ, ಭಸ್ಮ ಮಹಿಮೆಯು ಈ ಪ್ರಕಾರವಾಗಿರುತ್ತದೆ. ಆದರಲ್ಲಿ ಗುರುಹಸ್ತದಿಂದ ಬಂದ ಭಸ್ಮವು ವಿಶೇಷವಾದದ್ದು. ಆದ್ದರಿಂದ ಗುರುವು ತಾರಕನು ಎಂದು ಹೇಳಿದನು. ‖ ೨೫೬ ‖ ಎಂದು ಈ ಪ್ರಕಾರ ಶ್ರೀಗುರುಗಳು ತ್ರಿವಿಕ್ರಮ ಭಾರತಿ ಮುನಿಗೆ ಹೇಳಲು ಅವರು ಸಂತುಷ್ಟ

ರಾಗಿ ಹರ್ಷದಿಂದ ಶ್ರೀಗುರು ಚರಣಗಳಿಗೆ ತಮ್ಮ ಮಸ್ತಕವನ್ನಿಟ್ಟು ನಮಸ್ಕರಿಸಿದರು. ॥ ೨೫೭ ॥ ಈ ಪ್ರಕಾರ ತ್ರಿವಿಕ್ರಮ ಮುನಿಯು ಶ್ರೀಗುರುಗಳಿಂದ ಉಪದೇಶವನ್ನು ಹೊಂದಿ ಜ್ಞಾನವನ್ನು ಸಂಪಾದಿಸಿ ಅವರಿಗೆ ನಮಸ್ಕರಿಸಿ ತನ್ನ ಸ್ಥಾನಕ್ಕೆ ಹೊರಟುಹೋದನು ॥ ೨೫೮ ॥ ಎಂದು ಸಿದ್ಧರು ಶಿಷ್ಯನಾದ ನಾಮಧಾರಕನೇ ಭಕ್ತಿಭಾವದಿಂದ ಕೇಳು ಎಂದು ಹೇಳಹತ್ತಿದರು ॥ ೨೫೯ ॥ ಎಂದು ಸರಸ್ವತೀ ಗಂಗಾಧರನು— ಈ ಪ್ರಕಾರ ವಿಸ್ತಾರವಾದ ಗುರುಚರಿತ್ರೆಯನ್ನು ಭಕ್ತಿಭಾವದಿಂದ ಕೇಳುವಂಥ ಮನುಷ್ಯರು ನಾಲ್ಕು ಪುರುಷಾರ್ಥಗಳನ್ನು ಪಡೆಯುವರು ಎಂದು ಹೇಳಿದನು ॥ ೨೬೦ ॥ ಹೀಗೆ ಗುರುಚರಿತ್ರಾಮೃತದ ಈ ಅಧ್ಯಾಯದಲ್ಲಿ ಭಸ್ಮ ಮಹಿಮೆಯು ವಿಖ್ಯಾತವಾಗಿರುತ್ತದೆ. ವಾಮದೇವರು ಕೃಪಾವಂತರಾಗಿ ರಾಕ್ಷಸನನ್ನು ಉದ್ಧರಿಸಿದರು ಎಂದು ಹೇಳಿದೆ ॥ ೨೬೧ ॥

ಇಲ್ಲಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಭಸ್ಮ ಮಹಿಮಾ ವರ್ಣನಂ ನಾಮ ಏಕೋನತ್ರಿಂಶೋಽಧ್ಯಾಯಃ । ೨೯ ॥ ಶ್ರೀ ಗುರುದೇವದತ್ತ ॥

— ೨೯ನೇ ಅಧ್ಯಾಯ ಸಮಾಪ್ತ —

ಇಲ್ಲಿಗೆ ೩ನೇ ದಿವಸದ ಸಪ್ತಾಹವು ಮುಗಿದುದು

---

# ೩೦ನೇಯ ಅಧ್ಯಾಯ

## — ಮೃತ ದ್ವಿಜಭಾರ್ಯಾ ಶೋಕ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ಶಿಷ್ಯಶಿರೋಮಣಿಯಾದ ನಾಮಧಾರಕನು ಭಕ್ತಿಭಾವದಿಂದಲೂ ವಿನಯದಿಂದಲೂ ಸಿದ್ಧರ ಚರಣಕ್ಕೆ ನಮಸ್ಕಾರ ಮಾಡಿ ಕೈಮುಗಿದು. ॥ ೧ ॥— ಸ್ವಾಮೀ, ಜಯಜಯ ಸಿದ್ಧಮುನಿಗಳೇ, ತಾವು ಈ ಭವಸಾಗರವನ್ನು ದಾಟಿಸುವಂಥವರೂ ಅಜ್ಞಾನವೆಂಬ ಕತ್ತಲೆಯನ್ನು ಓಡಿಸುವಂಥ ಜ್ಯೋತಿಸ್ವರೂಪರೂ ಆಗಿರುತ್ತೀರಿ. ॥ ೨ ॥ ನಾನು ಅವಿದ್ಯಾಮಾಯಾಸಾಗರದ ಮಹಾಪೂರದಲ್ಲಿ ಮುಳುಗಿದ್ದೆನು. ಸ್ವಾಮೀ, ತಮ್ಮ ಕೃಪೆಯಿಂದ ನಾನು ಉದ್ಧಾರವಾದೆನು. ॥ ೩ ॥ ವಿಶ್ವಪಾಲಕ ಗುರುನಾಥರು ನೀವೇ ಆಗಿರುವಿರಿ. ನೀವು ನನಗೆ ಸನ್ಮಾರ್ಗವನ್ನು ತೋರಿಸಿದ್ದರಿಂದ ನನಗೆ ಪರಮಾರ್ಥವು ಸಾಧಿಸಿತು ॥ ೪ ॥ ನೀವು ಗುರುಚರಿತ್ರವೆಂಬ ಸುಧಾರಸವನ್ನು ನನಗೆ ಪಾನ ಮಾಡಿಸಿದಿರಿ, ಅದರಿಂದ ನನ್ನ ಮನಸ್ಸಿಗೆ ಪೂರ್ಣ ತೃಪ್ತಿಯಾಗದೆ ಇನ್ನೂ ಗುರುಚರಿತ್ರೆಯನ್ನು ಕೇಳಬೇಕೆಂಬ ಇಚ್ಛೆಯು ಅಧಿಕವಾಗಿದೆ. ॥ ೫ ॥ ನೀವು ಮಾಡಿದ ಉಪಕಾರವನ್ನು ತೀರಿಸುವದು ನನಗೂ ನನ್ನ ವಂಶದವರಿಗೂ ಆಗುವದಿಲ್ಲ. ಸಿದ್ಧಮುನಿಗಳೇ ತಾವು ನನಗೆ ನಿಜರೂಪವನ್ನು ತೋರಿಸಿದಿರಿ. ॥ ೬ ॥ ತಾವು ಈ ಮೊದಲು ಶ್ರೀ ಗುರುಗಳು ಪತಿತನ ಕಡೆಯಿಂದ ವಿಖ್ಯಾತವಾಗಿ ನಾಲ್ಕು ವೇದಗಳನ್ನು ಅನ್ನಿಸಿ ಹೊಸ ಲೀಲೆಯನ್ನು ತೋರಿಸಿದರು ಎಂದೂ ॥ ೭ ॥ ಮತ್ತು ತ್ರಿವಿಕ್ರಮಮುನಿಗೆ ಪ್ರಕಾಶಮಾನವಾದ ಜ್ಞಾನವನ್ನು ಬೋಧಿಸಿದರು ಎಂದೂ ಕಥೆಯನ್ನು ಹೇಳಿದಿರಿ. ಈಗ ದಯಮಾಡಿ ಮುಂದೆ ಕಥೆಯು ಏನು ನಡೆಯಿತೆಂಬುದನ್ನು ವಿಸ್ತಾರವಾಗಿ ಹೇಳಬೇಕೆಂದು ವಂದಿಸಿದರು. ॥ ೮ ॥ ಶಿಷ್ಯನ ಮಾತು ಕೇಳಿ ಸಿದ್ಧರು ಸಂತೋಷಬಟ್ಟು ಪ್ರೇಮದಿಂದ ಅವನನ್ನು

ಅಪ್ಪಿಕೊಂಡು ಆಶ್ವಾಸನವನ್ನಿತ್ತು. ॥ ೯ ॥— ಎಲೈ ಶಿಷ್ಯ ಶ್ರೇಷ್ಠನಾದ ನಾಮಧಾರಕನೇ ನೀನು ಧನ್ಯ! ಧನ್ಯ! ಇನ್ನು ನಿನ್ನ ಇಷ್ಟಗಳೆಲ್ಲ ಸಿದ್ಧಿಸಿದವು. ಈಗ ತತ್ಕಾಲದಲ್ಲಿ ನಿನಗೆ ಗುರುಕೃಪೆಯುಂಟಾಯಿತು. ॥ ೧೦ ॥ ನಿನ್ನ ಮಾತು ಧನ್ಯ ಧನ್ಯ!! ಗುರುಚರಣದಲ್ಲಿ ಈಗ ನಿನ್ನ ಮನಸ್ಸು ಗಟ್ಟಿಯಾಗಿ ಕೂತಿತು. ಇನ್ನು ನೀನು ಈ ಭವ ಸಮುದ್ರವನ್ನು ದಾಟಿದಿ. ಅದರಿಂದ ನಿನ್ನ ಸಕಲಾಭೀಷ್ಟಗಳೂ ಸಾಧಿಸುವವು. ॥ ೧೧ ॥ ನೀನು ಮುಂದಿನ ಸಂಗತಿಯನ್ನು ಕೇಳಿದ್ದರಿಂದ ನನಗೆ ಇವತ್ತಿನ ದಿವಸ ಬಹಳ ಸಂತೋಷವಾಯಿತು ಗುರುಮಹಿಮೆಯು ಪ್ರಖ್ಯಾತ ವಿದ್ದು ಹೇಳಲಿಕ್ಕೆ ಅಗವ್ಯವಾಗಿರುವದು. ॥ ೧೨ ॥ ಅವರ ಒಂದೊಂದು ಮಹಿಮೆಯನ್ನು ಹೇಳಹತ್ತಿದರೆ ಕಥೆಯು ವಿಸ್ತಾರವಾಗುವದರಿಂದ ನಿನಗೆ ಸಂಕ್ಷೇಪವಾಗಿ ಹೇಳುವೆನು ॥ ೧೩ ॥ ಹೀಗೆ ನಡೆದಿರಲು ಮುಂದೆ ಗಾಣಗಾಪುರ ದಲ್ಲಿ ಪ್ರತಿನಿತ್ಯ ಹೆಚ್ಚೆಚ್ಚಾಗಿ ಮಹಿಮೆಗಳು ಆಗಹತ್ತಿದವು ॥ ೧೪ ॥ ತ್ರೈಮೂರ್ತಿಗಳ ಅವತಾರವೇ ಶ್ರೀ ನರ ಸಿಂಹ ಸರಸ್ವತಿಗಳಾಗಿ ನರರೂಪ ಧರಿಸಿರುವರು. ಅಂದಮೇಲೆ ಅವರ ಮಹಿಮೆಯು ಅಪರಂಪಾರವಾಗಿಯೂ ಅಗವ್ಯವಾಗಿಯೂ ಇರುವದು. ॥ ೧೫ ॥ ಈ ಪ್ರಕಾರ ಶ್ರೀ ಗುರುಗಳು ಆ ಗಾಣಗಾಪುರ ಸ್ಥಾನದಲ್ಲಿರುವಾಗ ಅವರ ಖ್ಯಾತಿಯು ಅಪರಂಪಾರವಾಗಿ ಆಗಿ, ಅವರ ಪ್ರಸಿದ್ಧಿಯು ನಾಲ್ಕೂ ರಾಷ್ಟ್ರಗಳಲ್ಲಿ ಬಹುರೀತಿಯಿಂದ ಹಬ್ಬಿತು. ಅದರಿಂದ ಯಾವತ್ತು ಜನರು ಅವರ ದರ್ಶನಕ್ಕೆ ಬರುತ್ತಿದ್ದರು. ॥ ೧೬ ॥ ಆ ತ್ರೈಮೂರ್ತಿಗಳ ಮಹಿಮೆಯನ್ನು ವರ್ಣಿಸಲಿಕ್ಕೆ ನಮಗೆ ಶಕ್ತಿಯು ಹ್ಯಾಗೆ ಬರಬೇಕು? ಅವರು ಮನುಷ್ಯ ದೇಹವನ್ನು ಧರಿಸಿ ಭೂಮಿಯಲ್ಲಿ ಅಸಂಖ್ಯ ಲೀಲೆಗಳನ್ನು ಮಾಡಿದರು. ॥ ೧೭ ॥ ಯಾತ್ರೆಯದೆಶೆಯಿಂದ ಅನೇಕ ಭಕ್ತಜನರು ಒಳ್ಳೇ ಭಕ್ತಿಭಾವದಿಂದ ಬಂದು ಶ್ರೀ ಗುರುಗಳ ದರ್ಶನ ಮಾತ್ರದಿಂದ ಸಕಲಾಭೀಷ್ಟಗಳನ್ನು ಹೊಂದುತ್ತಿದ್ದಾರೆ. ॥ ೧೮ ॥ ಅಂವರೆ ದರಿದ್ರರು ಶ್ರೀಮಂತರಾಗುತ್ತಾರೆ. ಬಂಜಿ ಸ್ತ್ರೀಯರು ತೀವ್ರವಾಗಿ ಮಕ್ಕಳನ್ನು ಪಡೆಯುತ್ತಾರೆ. ಕುಷ್ಠರೋಗಿಗಳು ಸುವರ್ಣ ದೇಹಿಗಳಾಗುತ್ತಾರೆ. ॥ ೧೯ ॥ ಕುರುಡರಿಗೆ ಕಣ್ಣುಗಳು ಕಾಣಿಸುತ್ತವೆ. ಕಿವುಡರಿಗೆ ಕಿವಿಗಳು ಕೇಳಿಸುತ್ತವೆ. ಮೂಕರಿಗೆ ಮಾತು ಬರುತ್ತವೆ. ಗುರುಚರಣ ದರ್ಶನ ಮಾತ್ರದಿಂದ ಅಪಸ್ಮಾರ ಮುಂತಾದ ರೋಗಗಳು ಹೋಗು

ತ್ರವೆ. ॥ ೨೦ ॥ ಪರಿಸಗಲ್ಲಿನ ಸ್ಪರ್ಶದಿಂದ ಲೋಹವು ಸುವರ್ಣವಾಗುವಂತೆ, ಗುರುಕೃಪೆಯನ್ನು ಪಡೆದವರ ಸಕಲಾಭೀಷ್ಟಗಳು ಸಿದ್ಧಿಸುವವು. ॥ ೨೧ ॥ ಈ ಪ್ರಕಾರ ನಡೆದ ಸಮಯದಲ್ಲಾದ ಒಂದು ಸಂಗತಿಯನ್ನು ಹೇಳುವೆನು ಏಕಚಿತ್ತದಿಂದ ಕೇಳು.

ಉತ್ತರದೇಶದಲ್ಲಿ ಮಾಹುರ ಎಂಬ ನಗರದಲ್ಲಿ ಗೋಪೀನಾಥನೆಂಬ ಒಬ್ಬ ಧನಿಕ ಬ್ರಾಹ್ಮಣನಿದ್ದನು. ॥೨೨॥ ಅವನಿಗೆ ಮಕ್ಕಳು ಹುಟ್ಟಿದಕೂಡಲೆ ಸಾಯುತ್ತಿದ್ದವು ಆದರಿಂದ ಆ ದಂಪತಿಗಳು ಅನೇಕ ರೀತಿಯಿಂದ ದುಃಖಿಸುತ್ತ ಶ್ರೀ ದತ್ತಾತ್ರೇಯರನ್ನು ಆರಾಧಿಸಹತ್ತಿದರು. ॥ ೨೩ ॥ ದತ್ತ ಕೃಪೆಯಿಂದ ಅವರಿಗೆ ಮುಂದೆ ಒಬ್ಬ ಸುಂದರ ಮಗನು ಹುಟ್ಟಿದನು. ಅವನಿಗೆ ದತ್ತನೆಂದೇ ಹೆಸರಿಟ್ಟರು ಅವರು ಧನವಂತರಾಗಿದ್ದು ಮಗನಮೇಲೆ ಅತಿ ಪ್ರೀತಿಯನ್ನು ಮಾಡುತ್ತಿದ್ದರು. ॥ ೨೪ ॥ ಅವರ ಮನೆಯಲ್ಲಿ ಅವನೊಬ್ಬನೇ ಮಗನಾದ್ದರಿಂದ ಅವನಮೇಲೆ ಅತಿ ಪ್ರೀತಿ ಮಾಡುತ್ತ ೫ ವರ್ಷ ತುಂಬಿದಕೂಡಲೇ ಅವನ ಮುಂಜಿಯನ್ನು ಮಾಡಿದರು. ॥ ೨೫ ॥ ಆ ಬಾಲಕನಿಗೆ ೧೨ ವರುಷ ಆದಮೇಲೆ ಅತಿ ಪ್ರೀತಿಯಿಂದ ಅತಿ ಸುಂದರ ಕನ್ನೆಯನ್ನು ವಿಚಾರಿಸಿ ಹುಡುಕಿ ಒಳ್ಳೇ ಪ್ರೀತಿಯಿಂದಲೂ ಸಮಾರಂಭದಿಂದಲೂ ಲಗ್ನಮಾಡಿದರು. ॥ ೨೬ ॥ ಮನ್ಮಥನಿಗೆ ರತಿಸಮಾನವಾದ ರೂಪದಿಂದ ತೋರುವಂಥ ಆ ಕನ್ಯೆಯನ್ನು ನೋಡಿ ಆ ಬಾಲಕನ ತಾಯಿ-ತಂದೆಗಳು ಅತಿ ಹರ್ಷದಿಂದ ಆಲ್ಹಾದಪಡುತ್ತಿದ್ದರು ॥ ೨೭ ॥ ಆ ದಂಪತಿಗಳು ಒಂದೇ ವಯಸ್ಸಿನವರಾಗಿ ರತಿ-ಮನ್ಮಥರಂತಿದ್ದು, ಅವರು ಅತಿ ಪ್ರೀತಿಯಿಂದಲೂ ಮಹಾ ಹರ್ಷದಿಂದಲೂ ಬೆಳೆಯಹತ್ತಿದರು. ಆಗ ಬಾಲಕನಿಗೆ ೧೬ ವರುಷಗಳಾದವು. ॥ ೨೮ ॥ ಆ ಬಾಲ ಸತಿ-ಪತಿಗಳಿಬ್ಬರು ಸುಂದರ- ಸುಲಕ್ಷಣರಾಗಿ ಒಬ್ಬರ ಮೇಲೊಬ್ಬರು ಪಂಚಪ್ರಾಣಮಾಡುತ್ತ, ಒಂದು ಕ್ಷಣವಾದರೂ ಅಗಲಿರದೆ ಅತಿ ಪ್ರೇಮದಿಂದಿರುತ್ತಿದ್ದರು ॥ ೨೯ ॥ ಅವರು ಈ ಪ್ರಕಾರವಾಗಿ ಒಳ್ಳೇ ಪ್ರೇಮದಿಂದಿರುತ್ತಿರಲು, ಆ ಬಾಲಕನಿಗೆ ೧೬ನೇ ವಯಸ್ಸಿನಲ್ಲಿ ಒಂದು ಬೇನೆಯು ಗಂಟುಬಿತ್ತು. ಅನೇಕತರದ ಔಷಧ ಕೊಟ್ಟರೂ ಅವನಿಗೆ ಆರೋಗ್ಯವಾಗಲಿಲ್ಲ. ॥ ೩೦ ॥ ಕಡೆಗೆ ಅವನಿಗೆ ಅನ್ನಸಹ ರುಚಿಸದಂತಾಗಿ ಅವನು ಸದಾ ಉಪವಾಸದಿಂದಿರುತ್ತಿ

ದ್ದನು. ಅವನ ಹೆಂಡತಿಯು ಗಂಡನಮೇಲಿನ ಪ್ರೀತಿಯಿಂದ ತಾನೂ ಎಂದೂ ಅನ್ನವನ್ನು ತಕ್ಕೊಳ್ಳುತ್ತಿದ್ದಿಲ್ಲ. || ೩೧ || ಗಂಡನೇ ತನ್ನ ಪ್ರಾಣವೆಂದು ನಿತ್ಯ ಉಪವಾಸ ಮಾಡುತ್ತ ಪತಿಗೆ ಔಷಧ ಕೊಟ್ಟು ತಾನೂ ಕುಡಿಯುತ್ತಿದ್ದಳು. || ೩೨ || ಈ ಪ್ರಕಾರ ಮೂರು ವರ್ಷಗಳಾದಮೇಲೆ ಅವನಿಗೆ ಕ್ಷಯರೋಗವು ಪ್ರಾರಂಭವಾಯಿತು, ಆಗ ಆ ಪತಿವ್ರತೆಯು ತನ್ನ ಗಂಡನಸಂಗಡ ಹ್ಯಾಗೆ ಕಷ್ಟಪಡುತ್ತಾಳೆಂಬದನ್ನು ಕೇಳಿರಿ || ೩೩ || ಗಂಡನ ದೇಹವು ಕ್ಷೀಣವಾಗಲು ಆಕೆಯು ತಾನೂ ಅದರಂತೆ ಆಗಿ ಅವನ ಚರಣ ತೀರ್ಥವನ್ನು ತಕ್ಕೊಳ್ಳುತ್ತ ಯಾವಾಗಲೂ ಅವನ ಹತ್ತರವೇ ಇದ್ದು ಕಾಲಕಳೆಯುತ್ತಿದ್ದಳು || ೩೪ || ಮುಂದೆ ಒರಬರುತ್ತ ಅವನ ದೇಹವು ದುರ್ಗಂಧವಾಗಿ ನಾರಹತ್ತಿ ವೈದ್ಯರೊಬ್ಬರೂ ಅವನ ಹತ್ತರ ಬರದಂತಾದರು. ಆದರೂ ಆ ಪತಿವ್ರತೆಯು ಅತಿ ಪ್ರೇಮದಿಂದ ಒಂದು ಕ್ಷಣವಾದರೂ ಅಗಲಿರದೆ ಅವನ ಸೇವೆ ಮಾಡುತ್ತಿದ್ದಳು. || ೩೫ || ಗಂಡನು ಉಣ್ಣುವಷ್ಟು ಅನ್ನವನ್ನೇ ತಾನೂ ಉಣ್ಣುತ್ತಿದ್ದಳು. ಅವನಿಗೆ ಕೊಡುವಂಥ ಔಷಧಗಳನ್ನೇ ತಾನೂ ಕುಡಿಯುತ್ತಿದ್ದಳು || ೩೬ || ಅದನ್ನು ಕಂಡು ಆಕೆಯ ತಂದೆ-ತಾಯಿಗಳೂ ಅಣ್ಣ-ತಮ್ಮಂದಿರೂ ಗೋತ್ರಜರೂ ಆಕೆಗೆ ಹೀಗೆ ಮಾಡಬೇಡೆಂದು ಹೇಳುತ್ತಿದ್ದರು ಆದರೂ ಆ ಜ್ಞಾನವಂತಳಾದ ಪತಿವ್ರತೆಯು ಯಾರಮಾತೂ ಕೇಳುತ್ತಿದ್ದಿಲ್ಲ || ೩೭ || ಪತಿಯೇ ನನ್ನ ಪ್ರಾಣವು! ಆತನಿಗೇ ಸುಖವಿಲ್ಲವೆಂದಮೇಲೆ ನನಗೆ ಈ ದಿವ್ಯ ವಸ್ತ್ರಾಭರಣಗಳಿಂದೇನು ಸುಖವು! ಎಂದು ಆಕೆಯು ದಿವ್ಯ ವಸ್ತ್ರಾಭರಣಗಳನ್ನು ಧರಿಸುತ್ತಿದ್ದಿಲ್ಲ. || ೩೮ || ಆ ಬಾಲದಂಪತಿಗಳ ತಾಯಿ-ತಂದೆಗಳು ಒಳ್ಳೇ ಧನಿಕರಾಗಿದ್ದು ತಮ್ಮ ತಮ್ಮ ಮಕ್ಕಳ ಸ್ಥಿತಿಯನ್ನು ಕಂಡು ಅತಿಶಯ ದುಃಖಪಡುತ್ತಿದ್ದರು. || ೩೯ || ಮತ್ತು ಆ ಬಾಲಕನಿಗೆ ಆರೋಗ್ಯವಾಗುವದಕ್ಕಾಗಿ ಅನೇಕ ಜಪಾನುಷ್ಠಾನುಗಳನ್ನೂ ಮಂತ್ರವಿಧಿಯನ್ನೂ ಮಹಾ ಹೋಮ ಹವನಾದಿಗಳನ್ನೂ ಅಪರಿಮಿತ ಬ್ರಾಹ್ಮಣ ಭೋಜನವನ್ನೂ ಮಾಡಿಸಿದರು. || ೪೦ || ಅನೇಕತರದ ವೈದ್ಯರು ಬಂದು ನಾನಾತರದ ರಸ-ಔಷಧಗಳನ್ನು ಕೊಡುತ್ತಿದ್ದರು. ಆದರೂ ಯಾವ ರೀತಿಯಿಂದಲೂ ಅವನ ಬೇನೆಯು ಕಡಿಮೆಯಾಗಲಿಲ್ಲ. ಮಹಾ ವ್ಯಾಧಿಯು ವ್ಯಾಪಿಸಿತು. || ೪೧ ||

ಜೋಯಿಸರನ್ನು ಕೇಳುತ್ತಿದ್ದರು ಕುಲದೇವರ ಆರಾಧನೆ ಮಾಡುತ್ತಿದ್ದರು. ಏನು ಮಾಡಿದರೂ ಆ ಬಾಲಕನಿಗೆ ಸ್ವಲ್ಪವೂ ಆರೋಗ್ಯವಾಗಲಿಲ್ಲ. ‖ ೪೨ ‖ ಆಗ ವೈದ್ಯರು— ಕೇವಲ ಔಷಧೋಪಚಾರಗಳಿಂದ ಇವನ ಬೇನೆಯು ಕಡಿಮೆಯಾಗುವದಿಲ್ಲ. ಇವನ ಪ್ರಕೃತಿಯು ನಿಶ್ಚಯವಾಗಿ ಸೆಟ್ಟಗಿಲ್ಲ. ಈಗ ಮನುಷ್ಯ ಯತ್ನವು ಮೀರಿತು. ಒಂದುವೇಳೆ ಚಂದ್ರಮೌಳಿಯಾದ ಶ್ರೀ ಶಂಕರನೇ ಇವನನ್ನು ಪಾಲಿಸಬೇಕು. ಎಂದು ಅಂದರು ‖ ೪೩ ‖ ಅವರ ಮಾತು ಕೇಳಿ ಆ ಬಾಲಕನ ತಂದೆ-ತಾಯಿಗಳು ಅತ್ಯಂತ ದುಃಖದಿಂದ ಚಿಂತಿಸುತ್ತ— ಜಯ ಜಯ ಸ್ವಾಮೀ, ಜಗನ್ನಾಥನೇ, ದತ್ತಾತ್ರೇಯನೇ, ಗುರುಮೂರ್ತಿಯೇ ‖ ೪೪ ‖ ನಿನ್ನನ್ನು ಆರಾಧಿಸಿ ಸಂತೋಷದಿಂದ ಈ ಪುತ್ರನನ್ನು ಪಡೆದೆವು. ಇವನಿಗೆ ಭಯಂಕರ ರೋಗವು ಗಂಟುಬಿದ್ದದೆ. ಪಾಪರೂಪಿಗಳಾದ ನಮಗೆ ಇಂಥ ಪುತ್ರನು ಹ್ಯಾಗೆ ದಕ್ಕುವನು. ಈ ಮಗನ ಬೇನೆಯು ಎಂದು ಕಡಿಮೆಯಾಗುವದೋ? ತಿಳಿಯದು. ‖೪೫‖ ಸ್ವಾಮೀ ದತ್ತಾತ್ರೇಯನೇ ನಮ್ಮ ವಂಶಕ್ಕೆ ಇವನೊಬ್ಬನೇ ಮಗನು! ನೀನು ಇವನನ್ನು ರಕ್ಷಿಸದಿದ್ದರೆ, ಇವನ ಸಂಗಡ ನಾವೂ ಪ್ರಾಣಬಿಡುವೆವು. ‖ ೪೬ ‖ ಎಂದು ನಾನಾರೀತಿಯಾಗಿ ದುಃಖಿಸುತ್ತಿದ್ದರು. ಆಗ ಆ ಹುಡುಗನು ತನ್ನ ತಾಯಿ-ತಂದೆಗಳನ್ನು ಆಲಿಂಗಿಸಿ— ‖ ೪೭ ‖ ಮಾತಾಪಿತೃಗಳೇ, ಇನ್ನು ನೀವು ದುಃಖಿಸಬೇಡಿರಿ. ನನ್ನ ಇಹಲೋಕದ ಭೋಗವು ತೀರಿತು, ಇವತ್ತಿನವರೆಗೆ ನಿಮ್ಮ ಋಣಾನುಬಂಧ ವಿದ್ದಷ್ಟು ಆಯಿತು. ಹೆಚ್ಚಿಸದು ಹ್ಯಾಗಾದೀತು? ಹಣೆಯಬರಹದಲ್ಲಿದ್ದದ್ದು ತಪ್ಪುವದಿಲ್ಲ ಎಂದು ಅಂದನು. ‖ ೪೮ ‖ ಅವನ ಮಾತು ಕೇಳಿ ಆ ತಾಯಿ-ತಂದೆಗಳು ಮಹಾ ದುಃಖದಿಂದ ಮೂರ್ಛಿತರಾಗಿ ಮಗನಮೇಲೆ ಬಿದ್ದು ಹೊರಳಾಡುತ್ತ ‖ ೪೯ ‖ ಅಯ್ಯೋ! ಅಪ್ಪಾ! ಪುತ್ರರಾಯಾ! ನೀನು ನಮ್ಮ ಮುಪ್ಪಿನಕಾಲದಲ್ಲಿ ನಮ್ಮನ್ನು ರಕ್ಷಿಸುವಿಯೆಂದು ನಾವು ಮನಸ್ಸಿನಲ್ಲಿ ನಿಶ್ಚಯ ಮಾಡಿದ್ದೆವು ಈಗ ನಮ್ಮ ಆ ಆಶೆಯಲ್ಲ ವ್ಯರ್ಥವಾಯಿತು. ‖ ೫೦ ‖ ದುಃಖಿತರಾದ ನಮ್ಮನ್ನು ನೋಡಿ ಹ್ಯಾಗೆ ಬಿಟ್ಟುಹೋಗುತ್ತೀ? ವೃದ್ಧರಾದ ನಮ್ಮನ್ನು ದುಃಖಸಾಗರದಲ್ಲಿ ಮುಳುಗಿಸಿ ಹೋಗುವದು ಯಾವ ಧರ್ಮವು? ಎಂದು ದುಃಖಿಸುತ್ತಿದ್ದರು. ‖ ೫೧ ‖ ಅವರ ಮಾತು ಕೇಳಿ ಅವನು ಅಳುತ್ತ ವಿನಯ

ದಿಂದ— ತಾಯಿ-ತಂದೆಗಳೇ ಕೇಳಿರಿ. ನಮ್ಮ ಆಗಭೋಗಗಳೆಲ್ಲವೂ ಈಶ್ವರಾಧೀನವು ಮನುಷ್ಯ ಯತ್ನವೇನೂ ನಡೆಯುವದಿಲ್ಲ. || ೫೨ || ಒಂದು ಘಳಿಗೆ ಸ್ತನಪಾನ ಮಾಡಿಸಿದ ತಾಯಿಯ ಋಣವು ಏನು ಮಾಡಿದರೂ ತೀರುವದಿಲ್ಲ. ಆ ಋಣವನ್ನು ತೀರಿಸುವದು ಮಗನ ಕರ್ತವ್ಯವು. ಅವನಿಗೇ ಮಗನೆನ್ನಬೇಕು. ಇಲ್ಲದಿದ್ದರೆ ಅವನು ಕಲ್ಲಿನಂತೆಯೇ ಸರಿ ಹೇ ತಾಯಿಯೇ, ಸ್ತನಪಾನ ಮಾಡಿಸಿ ನನ್ನನ್ನು ಪೋಷಿಸಿದ ಋಣವನ್ನು ನಾನು ಈ ಜನ್ಮದಲ್ಲಂತೂ ತೀರಿಸಲಿಲ್ಲ. ಮುಂದಿನ ಜನ್ಮದಲ್ಲಿ ನಿಮ್ಮ ಋಣವನ್ನು ತೀರಿಸುವೆನು. || ೫೩ || ನಾನು ಈ ಜನ್ಮದಲ್ಲಿ ನಿಮ್ಮ ಉದರದಲ್ಲಿ ಹುಟ್ಟಿ, ನಿಮಗೆ ಬಹಳ ಕಷ್ಟಕೊಟ್ಟೆನು ನಿಶ್ಚಯವಾಗಿ ಸ್ವಲ್ಪಾದರೂ ಸುಖವನ್ನು ಕೊಡಲಿಲ್ಲ ನಾನು ಇಂಥ ಪಾಪಿಯಾಗಿದ್ದೇನೆ || ೫೪ || ಇನ್ನುಮೇಲೆ ನೀವು ನನ್ನ ಸಲುವಾಗಿ ದುಃಖಿಸಬೇಡಿರಿ, ಪಾರಮಾರ್ಥದಲ್ಲಿ ದೃಷ್ಟಿಯನ್ನಿಡಿರಿ. ಭವಿತವ್ಯದಲ್ಲಿ ಏನು ಆಗತಕ್ಕದ್ದು ಅದೆಲ್ಲವೂ ಆಗೇ ಆಗುತ್ತದೆ, ಅದು ಬ್ರಹ್ಮಾದಿಗಳಿಗೂ ತಪ್ಪುವದಿಲ್ಲ ಎಂದು ಹೇಳಿದನು. || ೫೫ || ಹೀಗೆ ಅವನು ತನ್ನ ತಂದೆ-ತಾಯಿಗಳಿಗೆ ಹೇಳಿದಂತೆ ತನ್ನ ಹೆಂಡತಿಗೂ ಹೇಳುತ್ತಿದ್ದನು || ೫೬ || ಹ್ಯಾಗಂದರೆ— ಎಲೈ ಪ್ರಾಣೇಶ್ವರಿಯೇ ಕೇಳು. ಇನ್ನು ನನ್ನ ಆಯುಷ್ಯವು ಮುಗಿಯಿತು. ನನ್ನದೆಸೆಯಿಂದ ನೀನು ಬಹಳ ಕಷ್ಟಬಟ್ಟೆ. ಆ ನಿನ್ನ ಕಷ್ಟವೆಲ್ಲ ವ್ಯರ್ಥವಾಯಿತು. || ೫೭ || ನಾನು ನಿನ್ನ ಪೂರ್ವದ ವೈರಿಯು. ನಿನಗೂ ನನಗೂ ಋಣಸಂಬಂಧ ಆಗಿರಬಹುದು. ಆ ಋಣವನ್ನು ತೀರಿಸಲಿಕ್ಕೆ ಈ ಜನ್ಮದಲ್ಲಿ ನಿನ್ನನ್ನು ನನಗೆ ಕೊಟ್ಟಿರುವರು. ಈಗ ನಮಗೆ ಬಂದದ್ದು ಜನ್ಮಾಂತರದ ಕಷ್ಟವು. || ೫೮ || ಇನ್ನು ಮುಂದೆ ನೀನು ಒಂದುವೇಳೆ ನಮ್ಮ ಮನೆಯಲ್ಲಿದ್ದರೆ ನಮ್ಮ ತಾಯಿ-ತಂದೆಗಳು ನಿನ್ನನ್ನು ಯೋಗ್ಯವಾಗಿ ರಕ್ಷಿಸುವರು. ಆದರೆ ನಿನಗೆ ಬಳ್ಳೇ ಕಷ್ಟವಾದೀತು. ಆದ್ದರಿಂದ ನೀನು ನಿನ್ನ ತೌರಮನೆಗೆ ಹೋಗು. || ೫೯ || ನಾನು ಇಷ್ಟು ಸುಂದರಿಯಾದ ನಿನ್ನ ಸುಖವನ್ನು ಹೊಂದಲಿಲ್ಲ. ನಾನು ದೈವಹೀನನು! ನೀನು ನನ್ನ ದುರ್ಗಂಧವಾದ ದೇಹವನ್ನು ಮುಟ್ಟಿ ಸೇವಿಸಲಿಕ್ಕೆ ಅಸಹ್ಯಪಡಲಿಲ್ಲವಾದರೂ ನಿನ್ನ ಮುತ್ತೈದಿತನವು ಉಳಿಯುವ ಹೊತ್ತು ಬರಲಿಲ್ಲ ಏನು ಮಾಡಲಿ ? ಎಂದು ಅಂದನು. || ೬೦ || ಈ ಪ್ರಕಾರ

ಪತಿಯ ಮಾತು ಕೇಳಿದಕೂಡಲೆ ಆಕೆಯು ಮೂರ್ಛಿತಳಾಗಿ ಪತಿಯ ಪಾದಗಳಲ್ಲಿ ತಲೆಯನ್ನಿಟ್ಟು ದುಃಖಿಸುತ್ತ. ॥ ೬೧ ॥ ಸ್ವಾಮೀ ಪ್ರಾಣೇಶ್ವರನೇ, ನೀವು ನನ್ನನ್ನು ಯಾಕೆ ತಾತ್ಸಾರ ಮಾಡಿಬಿಡುತ್ತೀರಿ ? ನನಗೆ ನಿಮ್ಮಷ್ಟು ಹಿತಕರ್ತರು ಬೇರೆ ಯಾರೂ ಗತಿಯಾಗುವದಿಲ್ಲ ॥ ೬೨ ॥ ನಿಮ್ಮ ದೇಹವಿದ್ದಲ್ಲಿಯೇ ಕೂಡಲೇ ನನ್ನ ದೇಹವೂ ಇರುತ್ತದೆಂದು ತಿಳಿಯಿರಿ ಈ ವಿಷಯದಲ್ಲಿ ನೀವು ಮನಸ್ಸಿನಲ್ಲಿ ಏನೂ ಸಂಶಯ ಮಾಡಬೇಡಿರಿ. ಸಹಗಮನ ಮಾಡಿ ನಿಮ್ಮ ಸಂಗಡಲೇ ಬರುವೆನು ಎಂದಳು. ॥ ೬೩ ॥ ಈ ಪ್ರಕಾರ ಆ ಬಾಲದಂಪತಿಗಳ ಮಾತು ಕೇಳಿ ಅವರವರ ತಾಯಿ-ತಂದೆಗಳು ಭೂಮಿಯ ಮೇಲೆ ಬಿದ್ದು ಆಕ್ರೋಶ ಮಾಡಿ ದುಃಖಿಸುತ್ತಿದ್ದರು ॥ ೬೪ ॥ ಆಗ ಆ ಸತಿಯು ಅತ್ತೆ ಮಾವಂದಿರನ್ನು ಎಬ್ಬಿಸಿ— ಅತ್ತೆ-ಮಾವನವರೇ, ನನ್ನ ಪತಿಯು ನಿಶ್ಚಯವಾಗಿ ಬದುಕುವನು. ನೀವು ಏನೂ ಚಿಂತೆ ಮಾಡಬೇಡಿರಿ. ॥ ೬೫ ॥ ನಮ್ಮನ್ನು ಶ್ರೀ ಚಂದ್ರಮೌಳಿಯಾದ ಪರಮೇಶ್ವರನು ರಕ್ಷಿಸುವನು ಆದ್ದರಿಂದ ಈಗ ನಮ್ಮನ್ನು ಯಾವದಾದರೊಂದು ಕ್ಷೇತ್ರಕ್ಕೆ ಕಳಿಸಿರಿ ಅಲ್ಲಿ ನನ್ನ ಪತಿಯು ಬದುಕುವನು ॥ ೬೬ ॥ ಗಾಣಗಾಪುರದಲ್ಲಿ ತ್ರೈಮೂರ್ತಿ ಅವತಾರವಾದ ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳಿದ್ದು, ಅವರ ಮಹಿಮೆಯು ಪ್ರಖ್ಯಾತವಾಗಿರುವದೆಂದು ಜನರು ಹೇಳುವರು ಈಗ ನಮ್ಮನ್ನು ಅವರ ದರ್ಶನಕ್ಕೆ ಕಳಿಸಿರಿ ॥ ೬೭ ॥ ಅವರ ದರ್ಶನ ಮಾತ್ರದಿಂದ ನನ್ನ ಪತಿಗೆ ಆರೋಗ್ಯವಾಗುವದು ಆದಕಾರಣ ಶೀಘ್ರವಾಗಿ ನಮ್ಮನ್ನು ಅಲ್ಲಿಗೆ ಕಳಿಸಿರಿ, ಎಂದು ಅವರ ಪಾದಗಳಿಗೆ ವಂದಿಸಿದಳು ॥ ೬೮ ॥ ಆಗ ಎಲ್ಲರೂ ಆಕೆಯ ಮಾತಿಗೆ ಒಪ್ಪಿಕೊಂಡರು ಆಗ ಆಕೆಯು ಆ ಎಲ್ಲ ಜನರಿಗೆ ವಂದಿಸಿ ಅವರ ಅಪ್ಪಣೆ ಪಡೆದು ಹೊರಡಲಿಕ್ಕೆ ಸಿದ್ಧಳಾಗಿ, ॥ ೬೯ ॥ ರೋಗ ಪೀಡಿತನಾದ ತನ್ನ ಪತಿಯನ್ನು ಒಂದು ಡೋಲಿಯೊಳಗೆ ಮಲಗಿಸಿಕೊಂಡು ಹೊರಟು ಅತ್ತೆ ಮಾವಂದಿರನ್ನು ಕುರಿತು ವಿನಯದಿಂದ— ॥ ೭೦ ॥ ನೀವಿಬ್ಬರು ಇನ್ನು ಮನಸ್ಸು ಗಟ್ಟಿ ಮಾಡಿಕೊಂಡು ಸುಖದಿಂದ ಇರ್ರಿ. ಪತಿಯೇ ನನ್ನ ಪ್ರಾಣವು. ನಮ್ಮ ಕುಲದೇವರು ನಮ್ಮನ್ನು ರಕ್ಷಿಸುವನು. ॥ ೭೧ ॥ ಎಂದು ಹೇಳಿ ಆ ಅತ್ತೆ ಮಾವಂದಿರಿಗೆ ಪ್ರೀತಿಯಿಂದ ವಂದಿಸಿದಳು.

ಆಗ ಅವರು ಒಳ್ಳೇ ಹರ್ಷದಿಂದ— ಎಲೌ ಬಾಲೆಯೇ ನಿನ್ನ ಸೌಭಾಗ್ಯವು ಸ್ಥಿರವಾಗಿರಲಿ ಎಂದು ಆಶೀರ್ವಾದ ಮಾಡಿ— ॥ ೨೨ ॥ ನಿನ್ನ ಸುದೈವದಿಂದ ನಮ್ಮ ಮಗನು ಬದುಕಲಿ ಎಂದು ಹೇಳಿ ಅವರು ಮೇಲಿಂದಮೇಲೆ ಆಶೀರ್ವಾದ ಮಾಡುತ್ತಿದ್ದರು. ॥ ೨೩ ॥ ಈ ಪ್ರಕಾರ ಅವಳು ತನ್ನ ಪತಿ ಸಹಿತವಾಗಿ ಹೊರಟು ಮಾರ್ಗವನ್ನು ಕ್ರಮಿಸುತ್ತ ಕೆಲವು ಹೊತ್ತಿನಲ್ಲಿ ಗಾಣಗಾಪುರಕ್ಕೆ ಬಂದಳು. ॥ ೨೪ ॥ ಮಾರ್ಗವನ್ನು ಕ್ರಮಿಸುವಾಗ ಆ ರೋಗಿಗೆ ಬೇನೆಯು ಹೆಚ್ಚಾಗಿ ತ್ರಿದೋಷವು ಕೂಡಿತು ಆಗ ಆ ಡೋಲಿಯನ್ನು ಇಳಿಸಲು ಅವನಿಗೆ ಅತಿ ಸಂಕಟವಾಗ ಹತ್ತಿತು. ॥ ೨೫ ॥ ಆಗ ಅವಳು ಅಲ್ಲಿಯ ಜನರನ್ನು ಕುರಿತು— ಎಲೈ ಜನರುಗಳಿರಾ, ಶ್ರೀಗುರು ನರಸಿಂಹ ಸರಸ್ವತಿ ಸ್ವಾಮಿಗಳು ಎಲ್ಲಿರುವರು? ಎಂದು ಕೇಳಿದಳು ಆಗ ಆ ಜನರು— ಎಲೌ ಸ್ತ್ರೀಯೇ, ಶ್ರೀಗುರುಗಳು ಸಂಗಮಕ್ಕೆ ಹೋಗಿರುವರು ಎಂದು ಹೇಳಿದರು. ಅವರ ಮಾತು ಕೇಳಿ ಅವಳು— ಶ್ರೀ ಗುರುಗಳ ದರ್ಶನಕ್ಕೆ ಹೋಗೋಣ ಎಂದು ಹೊರಡಹತ್ತಿದಳು ॥ ೨೬ ॥ ಆದರೆ ಆ ಪತಿವ್ರತೆಯು ಪತಿಯನ್ನು ನೋಡಿ ಹೋಗೋಣ ವೆಂದು ಪತಿಯ ಹತ್ತರ ಬಂದು ನೋಡಿದಳು ಆಗ ಅವನಿಗೆ ಅಂತ್ಯಕಾಲವು ಬಂದದ್ದರಿಂದ ಕೂಡಲೆ ಅವನ ಪ್ರಾಣ ಹೋಯಿತು. ॥ ೨೭ ॥ ಅದನ್ನು ಕಂಡು ಅವಳು ಭಯಂಕರ ಆಕ್ರೋಶ ಮಾಡುತ್ತ, ಭೂಮಿಯಮೇಲೆ ಬಿದ್ದು ಹೊರಳಾಡುತ್ತ ಎದ್ದು ತನ್ನ ಹೊಟ್ಟೆಯಲ್ಲಿ ಚೂರಿಯನ್ನು ಚುಚ್ಚಿಕೊಳ್ಳಲಿಕ್ಕೆ ಯತ್ನಿಸಿದಳು. ಆಗ ಆ ಊರ ಜನರು ಅವನ್ನು ಬಿಡಿಸಿದರು ॥ ೨೮ ॥ ಆಗ ಅವಳು ಇನ್ನೇನು ಮಾಡಲಿ? ಎಂದು ತನ್ನ ತಲೆಯನ್ನು ಭೂಮಿಗೆ ಅಪ್ಪಳಿಸುತ್ತ, ಎದೆಗೆ ಕಲ್ಲಿನಿಂದ ಹೊಡೆದುಕೊಳುತ್ತ, ಕೂದಲುಗಳನ್ನು ಹರವಿಕೊಂಡು ಆಕ್ರೋಶದಿಂದ ಪ್ರಳಾಪಿಸುತ್ತಿದ್ದಳು ॥ ೨೯ ॥ ಹಾಯ್ ಹಾಯ್ ದೇವಾ, ಏನು ಸ್ಥಿತಿಯಾಯಿತಲ್ಲಾ? ನನ್ನನ್ನೇಕೆ ಈ ದುಃಖಕ್ಕೆ ಈಡು ಮಾಡಿದಿ? ದೇವಾ, ಶ್ರೀಗುರುವೇ, ನಿಮ್ಮ ದರ್ಶನವಾದರೆ ನೀವು ನನ್ನ ಪತಿಯ ಪ್ರಾಣವನ್ನು ರಕ್ಷಿಸುತ್ತೀರೆಂದು ಆಶೆ ಮಾಡಿ ಬಂದೆನು ॥ ೩೦ ॥ ಪೂಜೆಗೆಂದು ದೇವರ ಗುಡಿಯೊಳಗೆ ಹೋದರೆ ಆ ಗುಡಿಯೇ ತಲೆಯಮೇಲೆ ಬಿದ್ದು ಘಾತ ಮಾಡಿತೆಂಬ ಮಾತನ್ನು ನಾನು ಎಂದೂ ಕೇಳಿಲ್ಲ. ಈಗ ನನಗೆ ಅದರ ದೃಷ್ಟಾಂತ

ವಾಯಿತು. ॥ ೮೧ ॥ ಉಷ್ಣ ಕಾಲದಲ್ಲಿ ಬಿಸಿಲಿನಿಂದ ತಾಪ ಹೊಂದಿದ ಮನುಷ್ಯನು ಗಿಡದ ನೆರಳಿಗೆ ಹೋದರೆ, ಆ ಗಿಡವೇ ಮೇಲೆ ಬಿದ್ದು ಭಯಂಕರ ಘಾತ ಮಾಡಿದಂತೆ ನನ್ನ ಸ್ಥಿತಿಯಾಯಿತು. ॥ ೮೨ ॥ ತೃಷೆಯಿಂದ ಪೀಡಿತನಾದ ಮನುಷ್ಯನು ನದಿಗೆ ನೀರು ಕುಡಿಯಲಿಕ್ಕೆ ಹೋದರೆ ಅವನನ್ನು ಮೊಸಳೆಯು ಹಿಡಿದು ತಿಂದ ಸ್ಥಿತಿ ತನಗಾಯಿತು. ॥ ೮೩ ॥ ಹುಲಿಯ ಭಯದಿಂದ ಹೆದರಿ ಓಡುವ ಆಕಳು ಬದುಕಬೇಕೆಂಬ ಆಶೆಯಿಂದ ಅಕಸ್ಮಾತ್ ಕಟುಕನ ಮನೆಗೆ ಹೋಗಲು ಅದನ್ನು ಆ ಯವನನು ಕೊಂದಂತೆ ನನ್ನ ಅವಸ್ಥೆಯಾಯಿತು. ॥ ೮೪ ॥ ಈ ಪ್ರಕಾರ ಪಾಪಿಯೂ ದೈವಹೀನೆಯೂ ಆದಂಥ ನಾನು ತಾಯಿ-ತಂದೆಗಳನ್ನು ಬಿಟ್ಟು, ನನ್ನ ಪತಿಯನ್ನು ಕರಕೊಂಡು ಈ ಪರದೇಶಕ್ಕೆ ಬಂದು ಆತನ ಪ್ರಾಣವನ್ನು ತಕ್ಕೊಂಡೆನು ॥ ೮೫ ॥ ಎಂದು ನಾನಾರೀತಿಯಾಗಿ ದುಃಖಿಸುತ್ತಿದ್ದಳು. ಆಗ ಅಲ್ಲಿ ನೋಡಲಿಕ್ಕೆ ಬಂದ ಆ ಊರ ಯಾವತ್ತು ಜನರು ಅನೇಕ ರೀತಿ ಬೋಧ ಮಾಡುತ್ತ ಸಮಾಧಾನ ಪಡಿಸಹತ್ತಿದರು ॥ ೮೬ ॥ ಏನಂದರೆ— ಎಲೌ ಸುವಾಸಿನೀ ಸ್ತ್ರೀಯೇ, ನೀನು ಸುಮ್ಮನೆ ಇಷ್ಟ್ಯಾಕೆ ದುಃಖ ಮಾಡತ್ತೀ ? ಹಾಗೆ ಮಾಡಬೇಡ, ಅವ್ವಾ, ನೀನು ಮನಸಿನಲ್ಲಿ ವಿಚಾರಮಾಡಿ ನೋಡು. ಯಾವ ಹೊತ್ತಿಗೆ ಏನು ಆಗತಕ್ಕದ್ದು, ಅದು ತಪ್ಪುವದಿಲ್ಲ ಎಂದು ಅಂದರು ॥ ೮೭ ॥ ಆ ನಗರದ ಸ್ತ್ರೀಯರು ಈ ಪ್ರಕಾರ ಅಂದದ್ದನ್ನು ಕೇಳಿ, ಆ ಪತಿವ್ರತಾ ಸ್ತ್ರೀಯಳಿಗೆ ಅತ್ಯಂತ ದುಃಖವಾಗಿ ಅವಳು ಪರೋಪರಿಯಾಗಿ ತನ್ನ ಜನ್ಮಕರ್ಮದ ನೆನಪು ಮಾಡಿಕೊಂಡು ಅನ್ನುತ್ತಾಳೆ. ॥ ೮೮ ॥ ಏನಂದರೆ— ಎಲ್ಯೆ ನನ್ನ ಪ್ರೀತಿಯ ಅಕ್ಕ ತಂಗಿಯರಿರಾ ಕೇಳಿರಿ ! ಈ ನನ್ನ ಪತಿಯು ಬದುಕುವನೆಂಬ ಆಶೆಯಿಂದ ಆತನನ್ನು ಇಲ್ಲಿಗೆ ಕರಕೊಂಡು ಬಂದೆನು. ಆದರೆ ಆತನು ಈಗ ಹ್ಯಾಗೆ ಬದುಕುವನೆಂಬುದನ್ನು ಹೇಳಿರಿ ॥ ೮೯ ॥ ಈಗ ನಾನು ಯಾರಿಗೆ ಶರಣು ಹೋಗಲಿ ? ನನ್ನ ಜೀವವನ್ನು ಯಾರು ರಕ್ಷಿಸುವರು ? ನನ್ನ ಪ್ರಾಣೇಶ್ವರನನ್ನು ಬಿಟ್ಟು ಹ್ಯಾಗೆ ಬದುಕಲಿ ? ॥ ೯೦ ॥ ಬಾಲ್ಯದಲ್ಲಿ ನಾನು ಗೌರಿಯನ್ನೂ ಶಂಕರನನ್ನು ಪೂಜಿಸಿದೆನು. ಲಗ್ನವಾದ ಮೇಲೆ ಮಂಗಳಗೌರಿಯನ್ನು ಪೂಜಿಸಿದೆನು. ॥ ೯೧ ॥ ನನ್ನ ಹೆಳಲೂ ಮತ್ತು ಬಳೆಗಳೂ ಸ್ಥಿರವಾಗುವದರ ದೆಶೆಯಿಂದ ನಾನು ಒಳ್ಳೇ ಪ್ರೀತಿಯಿಂದ ಭವಾನಿಯನ್ನು

ಪೂಜಿಸಿದೆನು. ಅನೇಕ ಸುವಾಸಿನಿಯರು ಹೇಳಿದಂಥ ಅನೇಕ ವ್ರತಗಳನ್ನು ಮಾಡಿದೆನು. || ೯೨ || ಮತ್ತೆ ಯಾವ ಯಾವ ವ್ರತವನ್ನು ಮಾಡಲಿಕ್ಕೆ ಹೇಳಿದರೋ ಅವೆಲ್ಲ ವ್ರತಗಳನ್ನು ಅಖಂಡವಾಗಿ ಮಾಡಿದೆನು. ಈಗ ಅವೆಲ್ಲವೂ ವ್ಯರ್ಥವಾದವು. ಗೌರಿಯು ನನ್ನಮೇಲೆ ಸಿಟ್ಟಾಗಿರುವಳು. || ೯೩ || ಆದ್ದರಿಂದ ಈಗ ನನ್ನ ಅರಿಷಿಣ ಕುಂಕುಮಗಳನ್ನೂ ಮಂಗಳಸೂತ್ರವನ್ನೂ ಕಳ್ಳರು ಕದ್ದುಕೊಂಡು ಹೋದರು. ಮತ್ತು ನನ್ನ ಯಾವತ್ತೂ ಬಳೆಗಳನ್ನೂ ಕುಪ್ಪಸಗಳನ್ನೂ ಅಗ್ನಿಗೆ ಕೊಟ್ಟೆನು || ೯೪ || ನನ್ನ ಪುಣ್ಯವೆಲ್ಲ ಎಲ್ಲಿ ಹೋಯಿತು ? ಹೇಳಿರಿ. ನಾನು ಗೌರೀರಮಣನನ್ನು ವ್ಯರ್ಥವಾಗಿ ಪೂಜಿಸಿದೆನಲ್ಲಾ ! ಆತನು ನನ್ನನ್ನು ಪೂರ್ಣ ನಿರಾಶಳನ್ನಾಗಿ ಯಾಕೆ ಮಾಡಿದನು ? ಹೇಳಿರಿ ಎಲೈ ಪ್ರೀತಿಯ ಅಕ್ಕ ತಂಗಿಯರೇ ಮತ್ತೂ ಕೇಳಿರಿ || ೯೫ || ಈಗ ನಾನು ಹ್ಯಾಗೆ ಬದುಕಿರಲಿ ? ಪತಿಯು ನನ್ನ ಪ್ರಾಣವೇ ಆಗಿದ್ದನು ಸಾಧಾರಣ ಜನರಂತಿದ್ದಿಲ್ಲ ನನ್ನ ಪ್ರಾಣೇಶ್ವರನಾಗಿದ್ದನು. ಎಂದಳು. || ೯೬ || ಈಪ್ರಕಾರ ಆ ಪತಿವ್ರತೆಯು ನಾನಾ ರೀತಿಯಾಗಿ ದುಃಖಿಸುತ್ತ, ಮೇಲಿಂದ ಮೇಲೆ ಪತಿಯ ಮುಖವನ್ನು ನೋಡುತ್ತ ಅನೇಕ ರೀತಿಯಿಂದ ಮತ್ತಿಷ್ಟು ಹೆಚ್ಚು ದುಃಖಿಸುತ್ತಿದ್ದಳು. || ೯೭ || ಮತ್ತು ಹಾಗೆಯೇ ಪ್ರೇತವನ್ನು ಆಲಿಂಗಿಸಿ ಆಕೆಯು ಅತಿಶಯವಾಗಿ ಪ್ರಲಾಪಿಸುತ್ತ ತನ್ನ ಪೂರ್ವ ದಿವಸದ ಹಾಗು ಪೂರ್ವ ಸ್ನೇಹದ ಮಾತುಗಳನ್ನು ನೆನಪು ಮಾಡಿಕೊಂಡು || ೯೮ || —ಪತಿಯೇ, ಪ್ರಾಣೇಶ್ವರನೇ ನನ್ನನ್ನು ಯಾಕೆ ಬಿಟ್ಟು ಹೋದೆ ? ನಾನು ನಿನಗೆ ಭಾರವಾಗಿ ಬೇಸರಾದೆನೆಂದು ನನ್ನನ್ನು ಉಪೇಕ್ಷಿಸಿ ಬಿಟ್ಟು ಹೋದೆಯಾ? ||೯೯|| ಅಯ್ಯೋ ! ನಾನೆಂಥಾ ದೈವಹೀನಳು ! ಪತಿರಾಯಾ, ಏನಾದರೂ ಸ್ವಲ್ಪ ತಾಕಿದ ಕೂಡಲೆ ಮಣ್ಣಿನ ಪಾತ್ರೆಗಳು ಒಡೆದು ಹೋಗುವಂತೆ ನಿನ್ನ ಆಯುಷ್ಯವು ಕಡಿಮೆಯಾಯಿತೇ ? || ೧೦೦ || ನಾನು ನಿಮ್ಮ ತಾಯಿ-ತಂದೆ ಗಳನ್ನು ಬಿಡಿಸಿ, ನಿಮ್ಮನ್ನು ಈ ಪರದೇಶಕ್ಕೆ ತಂದು ದಶರಥನು ಶ್ರಾವಣನನ್ನು ವಧಿಸಿದಂತೆ ನಿಮ್ಮನ್ನು ಕೊಂದೆ ನಲ್ಲಾ ? || ೧೦೧ || ನಿಮ್ಮ ತಾಯಿ-ತಂದೆಗಳು ನಿಮ್ಮ ಮರಣ ವಾರ್ತೆಯನ್ನು ಕೇಳಿ ಪ್ರಾಣವನ್ನು ಬಿಡು ವರು. || ೧೦೨ || ಏನು ಮಾಡಲಿ ? ಪಾಪಿಯಾದಂಥ ನನಗೆ ನಿಶ್ಚಯವಾಗಿ, ಮೂವರನ್ನು ಕೊಂದು ಪಾಪವು

ಘಟಿಸಿತು, ನಾನು ನಿಮ್ಮ ವೈರಿಯಾಗಿ ಸತ್ಯವಾಗಿ ಪತಿ ಘಾತಿನಿಯಾದೆನು. ॥ ೧೦೩ ॥ ಈ ಪ್ರಕಾರ ಪಾಪಿಯೂ ಚಾಂಡಾಲಿಯೂ ಆದ ನಾನು ಬಲಾತ್ಕಾರದಿಂದ ಘಾತಮಾಡಿದೆನು. ಆದ್ದರಿಂದ ಯಾವತ್ತು ಜನರು ಇವಳು ಸತ್ಯವಾಗಿ ಪತಿ ಘಾತಿನಿಯೆಂದು ನಿಂದಿಸುವರು- ॥ ೧೦೪ ॥ ಪ್ರಾಣೇಶ್ವರಾ, ನಾನು ನಿಮ್ಮ ಪತ್ನಿಯಲ್ಲ! ವೈರಿಯು! ಒಳ್ಳೇ ತೀಕ್ಷ್ಣವಾದ ಶಸ್ತ್ರವು ದೇಹವನ್ನು ಕತ್ತರಿಸುವಂತೆ ನಾನು ನಿಮ್ಮ ಶರೀರವನ್ನು ಗಾಯಮಾಡಿ ನಿಮ್ಮ ಪ್ರಾಣ ತಕ್ಕೊಂಡೆನು. ॥ ೧೦೫ ॥ ಪತಿದೇವನೇ, ನಿಮ್ಮ ತಾಯಿ-ತಂದೆ-ಬಂಧುಬಳಗದವರು, ಈಗ ನಿಮ್ಮಹತ್ತರ ಇದ್ದರೆ ಅಂತ್ಯಕಾಲದಲ್ಲಿ ನಿಮ್ಮ ಮುಖವನ್ನಾದರೂ ನೋಡುತ್ತಿದ್ದರು. ಅವರಿಗೆ ನಾನು ವಿಘ್ನ ಮಾಡಿದೆನು. ॥ ೧೦೬ ॥ ವೃದ್ಧರಾದ ನಿಮ್ಮ ತಾಯಿ-ತಂದೆಗಳು ನೀವು ತಮ್ಮನ್ನು ಸಂರಕ್ಷಿಸುವಿರೆಂದು ಆಶಿಸಿದ್ದರು. ಅವರ ಆಶೆಯು ಪೂರ್ಣವಾಗಲಿಲ್ಲ ಈಗ ಅವರನ್ನು ಬಿಟ್ಟು ಹ್ಯಾಗೆ ಹೋಗುತ್ತೀರಿ? ॥ ೧೦೭ ॥ ಅವರ ವಂಶದಲ್ಲಿ ನೀವೊಬ್ಬರೇ ಮಗನಲ್ಲವೇ? ಅವರನ್ನು ಪೋಷಿಸುವದನ್ನು ಬಿಟ್ಟು ಅವರಿಗೆ ದುಃಖಾಗ್ನಿಯನ್ನುಂಟುಮಾಡಿ ಹೋಗುತ್ತೀರಾ? ದಯಾಳಾ ಪ್ರಾಣೇಶ್ವರಾ, ನಮ್ಮನ್ನು ಎಲ್ಲಿ ಇಟ್ಟು ಹೋಗುತ್ತೀ? ॥೧೦೮॥ ಈಗ ನಾನು ಎಲ್ಲಿಗೆ ಹೋಗಲಿ? ನನ್ನನ್ನು ಯಾರು ಸಂರಕ್ಷಿಸುವರು? ಪ್ರಾಣೇಶ್ವರಾ, ನೀನು ನನಗೆ ಏನೂ ಹಿತದ ಮಾತು ಹೇಳದೆ ಹಾಗೇ ಹೊರಟುಹೋಗುತ್ತೀರಲ್ಲಾ? ॥ ೧೦೯ ॥ ಪತಿರಾಯಾ, ನೀನು ನನ್ನ ಪ್ರಾಣೇಶ್ವರನಿದ್ದು, ನಿನ್ನ ಮಹತ್ವವನ್ನು ನಾನು ಹ್ಯಾಗೆ ಮರೆಯಲಿ? ನೀನು ಸಾಧಾರಣ ಜನರಸರಿ ಅಲ್ಲ. ಇದುವರೆಗೆ ನನ್ನನ್ನು ಒಳ್ಳೇ ಪ್ರೇಮದಿಂದ ಸಲುಹಿದಿರಿ. ॥ ೧೧೦ ॥ ನೀವು ನನ್ನಮೇಲಿನ ಪ್ರೀತಿಯಿಂದ ಇವತ್ತಿನವರೆಗೆ ನನ್ನ ಎಡಗೈಯನ್ನು ತಲೆದಿಂಬಿಗೆ ಇಟ್ಟುಕೊಂಡೇ ಮಲಗಿದಿರಲ್ಲದೆ ನನ್ನನ್ನು ಬಿಟ್ಟು ಎಂದೂ ಬೇರೆಯಾಗಿ ಮಲಗಿಲ್ಲ. ಪ್ರಾಣೇಶ್ವರಾ ನೀವು ಈಗ ಬೇರೆಯಾಗಿ ಮಲಗಿರುವದನ್ನು ಕಂಡು ನನ್ನ ಅಂತಃಕರಣವು ಒಡೆದು ಹೋಯಿತು ಇನ್ನು ನಾನು ಹ್ಯಾಗೆ ಬದುಕಲಿ? ॥ ೧೧೧ ॥ ಪ್ರಾಣೇಶ್ವರಾ, ನಿನ್ನ ಗುಣವನ್ನೆಷ್ಟು ಸ್ಮರಿಸಲಿ? ನೀನು ಕೇವಲ ನನ್ನ ಪತಿ ಇಷ್ಟೇ ಅಲ್ಲ. ನನ್ನ ಪ್ರಾಣವೂ ಆಗಿರುತ್ತೀ, ಏನೂ ಚಿಂತೆ ಇಲ್ಲದೆ ನನ್ನನ್ನು ನಿರಾಶಳ

ನ್ನಾಗಿಮಾಡಿ ಯಾವ ರೀತಿಯಿಂದ ಬಿಟ್ಟುಹೋಗುತ್ತೀ ? ॥ ೧೧೨ ॥ ಈಗ ನಾನು ಯಾರಮನೆಗೆ ಹೋಗಲಿ ? ನನ್ನನ್ನು ಪ್ರೀತಿಯಿಂದ ಕರೆದು ಯಾರು ಸಂರಕ್ಷಿಸುವರು ? ಒಂದುವೇಳೆ ಯಾರಾದರೂ ಕರೆದರೆ ಬಾಲ ವಿಧವಾ ಯೆಂದು ಜನರು ಅಪವಾದ ಕೊಡುವರು. ॥ ೧೧೩ ॥ ಪ್ರಾಣನಾಥಾ, ನನಗೆ ಏನಾದರೊಂದು ಬುದ್ಧಿಯನ್ನು ಹೇಳದೆ ಪ್ರಾಣಬಿಟ್ಟೆಯಲ್ಲಾ ? ಈಗ ನಾನು ಕೇಶ ವಪನ ಮಾಡಿಸಿಕೊಂಡು ಎಲ್ಲಿಗೆ ಹೋಗಲಿ ? ॥ ೧೧೪ ॥ ನನ್ನಮೇಲಿರುವ ನಿನ್ನ ಪೂರ್ಣ ಪ್ರೇಮದ ಭರದಲ್ಲಿ ನಾನು ನನ್ನ ಜನನೀ ಜನಕರನ್ನು ಸಹ ಮರೆತಿದ್ದೆನು. ಅವರು ನಿತ್ಯ ನನ್ನನ್ನು ಕರೆದರೂ ನಾನು ನಿನ್ನನ್ನು ಬಿಟ್ಟು ಎಂದೂ ಹೋಗಲಿಲ್ಲ ॥ ೧೧೫ ॥ ಈಗ ನೀನು ನನ್ನನ್ನು ಬಿಟ್ಟುಹೋದಿಯಲ್ಲಾ ? ಇನ್ನುಮೇಲೆ ನಾನು ದೈನ್ಯವೃತ್ತಿಯಿಂದ ಅವರಮನೆಗೆ ಹ್ಯಾಗೆ ಹೋಗಲಿ ? ಮತ್ತು ಅಲ್ಲಿ ಅವರ ಮನಸ್ಸಿನಂತೆ ಹ್ಯಾಗೆ ಇರಲಿ ? ॥ ೧೧೬ ॥ ಪತಿರಾಯಾ, ನೀನು ನನ್ನಮೇಲೆ ಛತ್ರವಾಗಿರುವವರೆಗೆ ನಾನು ಎಲ್ಲಕಡೆಯಲ್ಲಿಯೂ ಪವಿತ್ರಳಾಗಿದ್ದೆನು. ಆದರಿಂದ ಇಷ್ಟಮಿತ್ರರು ಯಾವತ್ತರೂ ನನ್ನನ್ನು ಮನ್ನಿಸುತ್ತಿದ್ದರು. ಇನ್ನುಮೇಲೆ ಆವರು ನನ್ನನ್ನು ನಿಂದಿಸುವರು. ॥ ೧೧೭ ॥ ಅತ್ತೆಮಾವಂದಿರು ನನ್ನ ಮುಖವನ್ನು ನೋಡಿದಕೂಡಲೆ ಮೃತರಾಗುವರು. ನೀನಿಲ್ಲದ್ದರಿಂದ ಮನೆಯುಸಹ ಅರಣ್ಯದಂತಾಯಿತು. ॥ ೧೧೮ ॥ ಪತಿ ದೇವಾ, ಆರೋಗ್ಯವಾಗಲೆಂದು ನಾನು ನಿನ್ನನ್ನು ಇಲ್ಲಿಗೆ ಕರಕೊಂಡು ಬಂದೆನು. ರಾಕ್ಷಸಿಯೂ ಪಾಪಿಯೂ ಆದ ನಾನು ನಿನ್ನನ್ನು ಇಲ್ಲಿಯೇ ಇಟ್ಟು ಮನೆಗೆ ಹ್ಯಾಗೆ ಹೋಗಲಿ ? ॥ ೧೧೯ ॥ ಎಂದು ಆಕೆಯು ಅನೇಕ ರೀತಿಯಾಗಿ ಹಿಂದಿನದೆಲ್ಲವನ್ನು ನೆನಸಿಕೊಂಡು ಅಪರಂಪಾರವಾಗಿ ದುಃಖ ಮಾಡುತ್ತಿದ್ದಳು ಅಷ್ಟರಲ್ಲಿ ಅಲ್ಲಿಗೆ ಒಬ್ಬ ಸಾಧುಗಳು ಬಂದರು. ॥ ೧೨೦ ॥ ಅವರು ಭಸ್ಮಲೇಪಿತರೂ ಜಟಾಧಾರಿಗಳೂ ರುದ್ರಾಕ್ಷಿ ಮಾಲೆಯಿಂದ ಭೂಷಿತರೂ ತ್ರಿಶೂಲಧಾರಿಗಳೂ ಆಗಿ ಆಕೆಯಹತ್ತರ ನಿಂತು ॥ ೧೨೧ ॥ ಜ್ಞಾನ ವಿಚಾರವನ್ನು ಹೇಳಹತ್ತಿದರು ಎಲೌ ಸ್ತ್ರೀಯಳೇ ನೀನು ಇಷ್ಟೇಕೆ ಅತಿಶಯವಾಗಿ ಅಳುತ್ತೀ? ಬ್ರಹ್ಮನು ಹಣೆಯಲ್ಲಿ ಬರೆದಂತೆ ಆಗುತ್ತದೆ. ॥ ೧೨೨ ॥ ಪೂರ್ವಜನ್ಮದ ಕರ್ಮಾನುಸಾರವಾಗಿ ಈ ದೇಹಕ್ಕೆ ಸಮಸ್ತ ಫಲವಾಗುವದು. ಫಲವಿಲ್ಲದೆ ವ್ಯರ್ಥವಾಗಿ ;ಯಾಕೆ

ಆಳುತ್ತೀ? ಇನ್ನು ನೀನು ದುಃಖಮಾಡಬೇಡ. || ೧೨೩ || ನೀನು ಎಂಟು ದಿವಸಗಳವರೆಗೆ ಹೀಗೆ ಆಳುತ್ತ ಕೂತರೂ ಈ ಪ್ರೇತಕ್ಕೆ ಜೀವ ಬರುವದಿಲ್ಲ. ಬ್ರಹ್ಮನು ಹಣೆಯಲ್ಲಿ ಬರೆದಂತೆ ಆಗುವದು. || ೧೨೪ || ನೀನು ಮೂಢತನದಿಂದ ಅಳುತ್ತೀ, ಹುಟ್ಟಿದವರೆಲ್ಲರೂ ಸಾಯುತ್ತಾರೆಂಬದು ನಿನಗೆ ಗೊತ್ತದೆ ಈ ಭೂಮಿಯಲ್ಲಿ ಕಡೆತನಕ ಯಾರು ಬದುಕಿರುತ್ತಾರೆಂಬದನ್ನು ನನಗೆ ಹೇಳು. || ೧೨೫ || ಇವನು ನಿನಗೆ ಪ್ರಾಣೇಶ್ವರನೆನ್ನುತ್ತೀ, ಇವನು ಎಲ್ಲಿ ಹುಟ್ಟಿದನು? ನೀನು ಬೇರೆಕಡೆ ಹುಟ್ಟಿದಿ, ನಿನ್ನ ತಾಯಿ–ತಂದೆಗಳ್ಯಾರು? || ೧೨೬ || ನದಿಗೆ ಮಹಾಪೂರ ಬಂದಾಗ ನಾನಾತರದ ಕಟ್ಟಿಗೆಗಳು ತೇಲಿಬಂದು, ಅವು ಒಮ್ಮೆ ಒಂದುಕಡೆಯಲ್ಲಿ ಕೂಡುತ್ತವೆ. ಕ್ಷಣದಲ್ಲಿ ಬೇರೆ ಬೇರೆಯಾಗಿ ನಾಲ್ಕೂಕಡೆಗೆ ಹರಿದುಹೋಗುತ್ತವೆ || ೧೨೭ || ವಿಚಾರಮಾಡಿ ನೋಡು, ರಾತ್ರಿಯಲ್ಲಿ ಒಂದು ಗಿಡದಲ್ಲಿ ಅನೇಕ ಪಕ್ಷಿಗಳು ಬಂದು ಕೂತು, ಬೆಳಗಾದಕೂಡಲೆ ಒಂದಕ್ಕೊಂದು ಸಂಬಂಧವಿಲ್ಲದೆ ನಾಲ್ಕೂ ದಿಕ್ಕಿಗೆ ಹಾರಿಹೋಗುತ್ತವೆ || ೧೨೮ || ಎಲೌ ಸ್ತ್ರೀಯರೇ ಇದರಂತೆ ಮನುಷ್ಯ ಸಂಸಾರದ ಕ್ರಮವದೆ. ಹುಟ್ಟಿದವರು ಯಾರು ಸ್ಥಿರವಾಗಿದ್ದಾರೆ? ಮಾಯಾಮೋಹದಿಂದ ಈಕೆಯು ನನ್ನ ಹೆಂಡತಿ, ಇವನು ನನ್ನ ಗಂಡ, ಇವು ನನ್ನ ಮಕ್ಕಳು ಎಂದೆನ್ನುತ್ತೀ. || ೧೨೯ || ನೀರಮೇಲಿನ ನೊರೆಯಂತೆ ಈ ದೇಹವು ಸ್ಥಿರವಲ್ಲು ಆದಕಾರಣ ಇನ್ನು ಮೇಲೆ ನೀನು ಸುಮ್ಮನೆ ಶೋಕಮಾಡಬೇಡ || ೧೩೦ || ಈ ದೇಹವು ಪಂಚಭೂತಾತ್ಮಕವಾಗಿದ್ದು, ಪೂರ್ವಾರ್ಜಿತದಂತೆ ಮೊದಲು ಅದರಿಂದ ಕರ್ಮವು ಹುಟ್ಟುವದು. ಆ ಕರ್ಮದಂತೆ ಗುಣವು ಹುಟ್ಟುವದು. || ೧೩೧ || ಮುಂದೆ ಆ ಗುಣಾನುಬಂಧದಿಂದ ಕರ್ಮಗಳು ಘಟಿಸುತ್ತವೆ, ಆ ಕರ್ಮಾನುಸಾರವಾಗಿ ಫಲ ಪ್ರಾಪ್ತಿಯಾಗುತ್ತದೆ. ಮಾಯಾಮೋಹ ಸಂಬಂಧದಿಂದ ಈ ಪ್ರಕಾರವಾಗುತ್ತದೆ || ೧೩೨ || ಮಾಯಾಸಂಬಂಧದಿಂದ ಸತ್ವ–ರಜ–ತಮಗಳೆಂಬ ಮೂರು ಮಾಯಾಗುಣಗಳು ಹುಟ್ಟುತ್ತವೆ. ಅವುಗಳಿಂದ ತ್ರಿಗುಣಾತ್ಮಕ ದೇಹಗಳುಂಟಾಗುತ್ತವೆ. || ೧೩೩ || ಈ ಸಂಸಾರದಲ್ಲಿ ಸಮಸ್ತರೂ ಕರ್ಮಾಧೀನರಾಗಿರುವರು. ಆ ಕರ್ಮದಂತೆ ಅವರು ಸುಖ–ದುಃಖಗಳ ಫಲವನ್ನು ಅನುಭವಿಸುವರು. || ೧೩೪ || ದೇವತೆಗಳಿಗೆ ಕೋಟಿ ಕಲ್ಪಗಳವರೆಗೆ ಆಯುಷ್ಯವಿದ್ದರೂ

ಮರಣವು ತಪ್ಪಿಲ್ಲ ಅಂದಮೇಲೆ ನರರ ಪಾಡೇನು? ॥ ೧೩೫ ॥ ಎಲ್ಲರಿಗೂ ಕಾಲವೇ ಕಾರಣವು. ದೇಹವು
ಕರ್ಮಾಧೀನವಾದ್ದರಿಂದ ಪಂಚಭೂತಾತ್ಮಕವಾದ ಈ ದೇಹಕ್ಕೆ ಸ್ಥಿರವಿಲ್ಲೆಂದು ತಿಳಿಯಬೇಕು. ॥ ೧೩೬ ॥ ಆದ
ಕಾರಣ ಮನುಷ್ಯರು ಹುಟ್ಟಿದರೆ ಸಂತೋಷವನ್ನೂ ಸತ್ತರೆ ದುಃಖವನ್ನೂ ಮಾಡಬಾರದು. ॥ ೧೩೭ ॥ ಗರ್ಭ
ದಿಂದ ಬಂದ ಮನುಷ್ಯನ ಹಿಂದೆಯೇ ಅವನ ನಾಶವುಂಟೆಂದು ತಿಳಿಯಬೇಕು. ಅವರವರ ಕರ್ಮ ಗುಣದಂತೆ
ಜನನ-ಮರಣಗಳಿರುತ್ತವೆ. ॥ ೧೩೮ ॥ ಅವರವರ ಕರ್ಮದ ಪ್ರಕಾರ ಕೆಲವರು ಬಾಲ್ಯದಲ್ಲಿ, ಕೆಲವರು ಯೌವನ
ದಲ್ಲಿ, ಕೆಲವರು ವಾರ್ಧಿಕ್ಯದಲ್ಲಿ ಸಾಯುತ್ತಾರೆ. ॥ ೧೩೯ ॥ ಪೂರ್ವಜನ್ಮದ ಕರ್ಮಕ್ಕೆ ಸರಿಯಾಗಿ ಸುಖ-ದುಃಖ
ಗಳನ್ನು ಅನುಭವಿಸಬೇಕಾಗುತ್ತದೆ. ಪುತ್ರಕಲತ್ರಾದಿಗಳು ಅವರವರ ಪಾಪ-ಪುಣ್ಯಕ್ಕೆ ವಶರಾಗಿ ಹರ್ಷದಿಂದಿರು
ವರು. ॥ ೧೪೦ ॥ ಅವರವರ ಪಾಪ ಪುಣ್ಯಾನುಸಾರವಾಗಿ ಸುಖ-ದುಃಖ ಆಯುಸ್ಸುಗಳು ಉಂಟಾಗುವವು.
ಎಲ್ಲರಿಗೂ ಬ್ರಹ್ಮನು ಹಣೆಯಲ್ಲಿ ಬರೆದಂತೆ ಅವರವರ ಸುಖದುಃಖಾದಿಗಳು ಸ್ಥಿರವಾಗುವವು. ಅವು ಎಂದೂ
ತಪ್ಪುವದಿಲ್ಲ. ॥ ೧೪೧ ॥ ಯಾವನಾದರೊಬ್ಬನು ಅತಿಶಯ ಪುಣ್ಯಬಲದಿಂದ ಕರ್ಮವನ್ನು ದಾಟುವನು.
ದೇವದಾನವ ಮನುಷ್ಯರಿಗೆ ಸಹ ಅವರವರ ಕರ್ಮಾನುಸಾರವಾಗಿ ಸುಖ-ದುಃಖಗಳುಂಟಾಗಿ, ಅವರಿಗೂ
ಎಂದಿಗೂ ಸಾವು ತಪ್ಪುವದಿಲ್ಲ. ॥ ೧೪೨ ॥ ಸಂಸಾರವೆಂದರೆ ಇಂದ್ರಜಾಲದಂತೆ ಹಾಗು ಸ್ವಪ್ನದಂತೆ ಸುಳ್ಳೇ
ಇರುತ್ತದೆ ಆದ್ದರಿಂದ ನೀನು ದುಃಖಿಸಬಾರದು. ॥ ೧೪೩ ॥ ಎಲೌ ಸ್ತ್ರೀಯಳೇ, ಶತ, ಸಹಸ್ರ, ಕೋಟಿ
ಜನ್ಮಗಳಲ್ಲಿ ನೀನು ಯಾರ್ಯಾರ ಹೆಂಡತಿಯಾಗಿದ್ದಿ ಹೇಳು. ಮೂರ್ಖತನದಿಂದ ಸುಮ್ಮನೆ ಯಾಕೆ ದುಃಖ
ಮಾಡುತ್ತೀ? ॥ ೧೪೪ ॥ ಈ ಪಂಚಭೂತಾತ್ಮಕ ಶರೀರದಲ್ಲಿ ಚರ್ಮ, ಮಾಂಸ, ರಕ್ತ, ಮಿದುಳು, ನರ,
ಎಲುವು, ಮಲ, ಮೂತ್ರ, ಶ್ಲೇಷ ಮುಂತಾದವುಗಳು ತುಂಬಿರುತ್ತವೆ ॥ ೧೪೫ ॥ ಇಂಥ ಘೋರವಾದ ದೇಹ
ವನ್ನು ನೋಡಿದರೆ ಏನು ಸ್ವಾರ್ಥವದೆ? ರಕ್ತ, ಮಲ, ಮೂತ್ರಾದಿಗಳು ತುಂಬಿದ ಈ ದೇಹಕ್ಕೆ ಶೋಕ
ಮಾಡುತ್ತೀ, ॥ ೧೪೬ ॥ ಮುಂದೆ ನಿನ್ನ ಗತಿ ಏನೆಂಬದನ್ನು ವಿಚಾರಮಾಡಿ ನೋಡು. ಈ ಸಂಸಾರಸಾಗರ

ವನ್ನು ದಾಟುವ ಯೋಗ್ಯ ಮಾರ್ಗವ್ಯಾವದೆಂಬದನ್ನು ಪೂರ್ಣವಾಗಿ ತಿಳಿದುಕೋ ಎಂದು ಹೇಳಿದರು. || ೧೪೭ || ಈ ರೀತಿಯಾಗಿ ಆ ತಪಸ್ವಿಗಳು ಬೋಧಮಾಡಲಾಗಿ ಆಕೆಗೆ ಜ್ಞಾನೋದಯವಾಯಿತು. ಆದರಿಂದ ಆಕೆಯು ಶೋಕವನ್ನು ಬಿಟ್ಟು || ೧೪೮ || ಅಂಜಲಿಬದ್ಧಳಾಗಿ ಅವರ ಚರಣದಮೇಲೆ ಮಸ್ತಕವನ್ನಿಟ್ಟು ಕರುಣಾ ವಚನ ದಿಂದ— ಸ್ವಾಮೀ, ತಾವು ನನ್ನನ್ನು ಉದ್ಧಾರಮಾಡಬೇಕು. || ೧೪೯ || ಸ್ವಾಮೀ, ಇನ್ನು ನನಗೆ ಯೋಗ್ಯ ಮಾರ್ಗವ್ಯಾವದೆಂಬದನ್ನು ನೀವೇ ಹೇಳಬೇಕು, ನೀವೇ ನನಗೆ ತಂದೆ-ತಾಯಿಗಳು ! ಆದ್ದರಿಂದ ಈ ಭವಸಾಗರ ದಿಂದ ನನ್ನನ್ನು ರಕ್ಷಿಸಿರಿ || ೧೫೦ || ಸ್ವಾಮೀ, ನನಗೆ ಈ ಭವಸಾಗರವನ್ನು ದಾಟುವ ರೀತಿಯನ್ನು ಹೇಳಿರಿ. ನಿಮ್ಮ ಅಪ್ಪಣೆಯಂತೆ ನಡೆಯುವೆನು ಎಂದು ಬೇಡಿಕೊಂಡು ಅವರ ಚರಣಕ್ಕೆ ನಮಸ್ಕರಿಸಿದಳು || ೧೫೧ || ಆಕೆಯ ಮಾತು ಕೇಳಿ ಆ ಯೋಗಿಗಳು ಪ್ರಸನ್ನವದನರಾಗಿ ಸ್ತ್ರೀಯರ ಆಚಾರಗಳನ್ನು ವಿಸ್ತಾರವಾಗಿ ಹೇಳಹತ್ತಿ ದರು. || ೧೫೨ || ಎಂದು ಸಿದ್ಧರು ನಾಮಧಾರಕನಿಗೆ ಹೇಳಿದರೆಂದು ಸರಸ್ವತೀ ಗಂಗಾಧರನು ಹೇಳಿ— ಎಲೈ ಶ್ರೋತೃಗಳೇ, ಅವರ ವಿಸ್ತಾರವಾದ ಮಾತನ್ನು ಕೇಳುತ್ತ ಹೋದರೆ ಸಕಲ ಪಾಪಗಳು ದೂರವಾಗಿ ಸಕಲಾಭೀಷ್ಟ ಗಳು ಸಾಧಿಸುವವು ಎಂದು ಹೇಳಿದನು || ೧೫೩ || ಗುರುಚರಿತ್ರಾಮೃತದ ಈ ಅಧ್ಯಾಯದಲ್ಲಿ ರೋಗಿಯಾದ ವಿಪ್ರನು ಸಾಯಲು ಅವನ ಉದ್ಧಾರಕ್ಕಾಗಿ ಶ್ರೀ ಗುರುಗಳು ಯೋಗಿಯ ರೂಪದಿಂದ ಬಂದರೆಂದು ಹೇಳಿದೆ. || ೧೫೪ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಮೃತದ್ವಿಜಭಾರ್ಯಾಶೋಕಶ್ಚಗುರ್ವಾಗಮನಂ ನಾಮ ತ್ರಿಂಶತ್ತಮೋಧ್ಯಾಯಃ || ೩೦ ||

**— ೩೦ನೇ ಅಧ್ಯಾಯ ಸಮಾಪ್ತ —**

---

# ೩೧ನೇಯ ಅಧ್ಯಾಯ



## — ಪತಿವ್ರತಾಧರ್ಮ ನಿರೂಪಣ —

ಶ್ರೀ ಗಣೇಶಾಯ ನಮಃ || ಶ್ರೀ ಸರಸ್ವತ್ಯೈ ನಮಃ || ಶ್ರೀ ಗುರುಭ್ಯೋ ನಮಃ || ಆಮೇಲೆ ಸಿದ್ಧರು— ಎಲೈ ನಾಮಧಾರಕನೇ ಮುಂದೆ ಒಂದು ಅಪೂರ್ವ ಸಂಗತಿಯಾಯಿತು. ಅವತಾರಿಕರಾದ ಆ ಯೋಗೀಶ್ವರರು ಸ್ತ್ರೀಯರ ಯಾವತ್ತು ಧರ್ಮಗಳನ್ನು ಹೇಳಿದರು ಕೇಳು || ೧ || ಆಮೇಲೆ ಯೋಗೀಶ್ವರರು ಆ ಸ್ತ್ರೀಯನ್ನು ಕುರಿತು— ಎಲೌ ಸ್ತ್ರೀಯೇ, ನೀನು ಸ್ತ್ರೀಯರ ಧರ್ಮಗಳನ್ನು ಕೇಳುತ್ತೀ, ಆದಕಾರಣ ಸ್ತ್ರೀಯರು ಈ ಭವಸಾಗರ ದಿಂದ ದಾಟುವದಕ್ಕಾಗಿ ವಿಸ್ತಾರವಾದ ಧರ್ಮಗಳನ್ನು ಹೇಳುವೆನು || ೨ || ಪತಿಯು ಇದ್ದಾಗ ಯಾವ ಧರ್ಮ ದಿಂದ ನಡೆಯಬೇಕು, ಒಂದುವೇಳೆ ಪತಿಯು ಸತ್ತನಂತರ ಯಾವ ಕರ್ಮ ಮಾಡಬೇಕು ಎಂಬ ಈ ಎರಡು ಬಗ್ಗೆ ನಿನಗೆ ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು. || ೩ || ಸ್ಕಂದ ಪುರಾಣ ಕಾಶೀಖಂಡದಲ್ಲಿ ಸ್ತ್ರೀಯರ ಧರ್ಮದ ವಿಷಯವಾಗಿ ಬಹು ರೀತಿಯಿಂದ ವಿಸ್ತಾರವಾಗಿ ಹೇಳಿರುತ್ತದೆ ಅವುಗಳನ್ನು ಹೇಳುವೆನು ಏಕಚಿತ್ತದಿಂದ ಕೇಳಿ, ಆ ಎರಡರಲ್ಲಿ ನಿನಗೆ ಬೇಕಾದದ್ದನ್ನು ಆರಿಸಿಕೊಂಡು ಆಚರಿಸು.

ಒಂದು ಸಾರೆ ಮಹಾ ಮುನಿಗಳಾದ ಅಗಸ್ತ್ಯ ಋಷಿಗಳು ತಮ್ಮ ಜ್ಞಾನವಂತ ಪತ್ನಿಯಾದ ಲೋಪಾ- ಮುದ್ರೆಯೊಡನೆ ಕಾಶೀ ಕ್ಷೇತ್ರದಲ್ಲಿರುತ್ತಿದ್ದರು. || ೪ || ಆಗಿನ ಕಾಲಕ್ಕೆ ಅವಳಷ್ಟು ಮಹಾತ್ಮರಾದ ಪತಿವೃತೆ ಯರು ಬೇರೆ ಯಾರೂ ಇದ್ದಿಲ್ಲ ಹೀಗೆ ಅವರು ಅಲ್ಲಿ ಇರುತ್ತಿರಲು ಒಂದು ಅಪೂರ್ವ ಸಂಗತಿಯು ನಡೆಯಿತು. ಏಕಚಿತ್ತದಿಂದ ಕೇಳು. || ೬ || ಆ ಅಗಸ್ತ್ಯ ಶಿಷ್ಯರಲ್ಲಿ ವಿಂಧ್ಯನೆಂಬವನೊಬ್ಬನು ಪ್ರರ್ವತರೂಪವಾಗಿದ್ದು ವಿಂದ್ಯಾಚಲನೆಂಬ ಹೆಸರಿನಿಂದ ಭೂಮಿಯಮೇಲೆ ಪ್ರಖ್ಯಾತವಾಗಿರುತ್ತಿದ್ದನು. || ೭ || ಆ ವಿಂಧ್ಯಾಚಲನೆಂಬ

ಪರ್ವತದ ಮಹಾ ಶಿಖರದಲ್ಲಿ ನಾನಾರೀತಿಯಿಂದ ಶೋಭಾಯಮಾನವಾದ ಮತ್ತು ಬಹು ರಮ್ಯವಾದ ಒಂದು ಅಪೂರ್ವವಾದ ವನವು ಇತ್ತು. ‖ ೮ ‖ ಒಮ್ಮೆ ಬ್ರಹ್ಮರ್ಷಿಯಾದ ನಾರದನು ತಿರುಗಾಡುತ್ತ ಆ ಸ್ಥಳಕ್ಕೆ ಹೋಗಿ, ಅದನ್ನು ನೋಡಿ ಸಂತೋಷಹೊಂದಿ ಅವನ ಸ್ತುತಿ ಮಾಡಹತ್ತಿದನು. ‖ ೯ ‖ ಎಲೈ ವಿಂಧ್ಯನೇ, ನಿನ್ನ ಸಮಾನವಾದ ಪರ್ವತವು ಈ ಭೂಮಿಯಲ್ಲಿ ಮತ್ತೊಂದಿಲ್ಲ ಎಲ್ಲರಲ್ಲಿ ನೀನೇ ಶ್ರೇಷ್ಠನು! ನಿನ್ನಲ್ಲಿ ಎಲ್ಲ ಜಾತಿಯ ವೃಕ್ಷಗಳು ಅವೆ. ನಿನ್ನ ಸ್ಥಾನವು ಬಹು ಮನೋಹರವಾಗಿದೆ. ‖ ೧೦ ‖ ಆದರೆ ನಿನ್ನಲ್ಲಿ ಒಂದು ಮಾತ್ರ ಕುಂದು ಇರುತ್ತದೆ. ಏನಂದರೆ ನೀನು ಮೇರುಪರ್ವತದಷ್ಟು ಎತ್ತರವಾಗಿಲ್ಲ. ಅದಕ್ಕೂ ಕಡಿಮೆ ಎತ್ತರವಾಗಿರುತ್ತೀ, ಆದ್ದರಿಂದ ನಿನಗೆ ಶ್ರೇಷ್ಠತ್ವವಿಲ್ಲ ಎಂದನು. ‖ ೧೧ ‖ ಈ ಪ್ರಕಾರವಾದ ನಾರದನ ಮಾತು ಕೇಳಿ ವಿಂಧ್ಯನು ಸಿಟ್ಟಿಗೆದ್ದು ನಾನೂ ಮೇರುವಿನ ಸಮಾನನಾಗುವೆನೆಂದು ಆ ಕೂಡಲೆ ಬೆಳೆಯಹತ್ತಿದನು. ‖ ೧೨ ‖ ಸೂರ್ಯಮಂಡಲಕ್ಕೆ ಎದುರಾಗಿ ಕ್ರಮವಾಗಿ ಬೆಳೆಯುತ್ತ ಸ್ವರ್ಗದ ವರೆಗೂ ಬೆಳೆದನು ‖ ೧೩ ‖ ಆಗ ವಿಂಧ್ಯ ಪರ್ವತದ ದಕ್ಷಿಣ ಪ್ರದೇಶಗಳಲ್ಲಿ ಸೂರ್ಯಪ್ರಕಾಶವು ಬೀಳದೆ, ಅಹೋರಾತ್ರಿ ಕತ್ತಲೆಯಾದ್ದರಿಂದ ಅಲ್ಲಿಯ ಬ್ರಾಹ್ಮಣರ ಯಜ್ಞ ಯಾಗಾದಿ ಸಕಲ ಕರ್ಮಗಳು ನಿಂತುಹೋದವು ‖ ೧೪ ‖ ಆಗ ಅಲ್ಲಿಯ ಯಾವತ್ತು ಋಷಿಗಳು ಕೂಡಿ ಇಂದ್ರನಲ್ಲಿಗೆ ಹೋಗಿ ವಿಂಧ್ಯಾಚಲನ ಬೆಳವಣಿಗೆಯ ಬಗ್ಗೆ ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಹೇಳಿದರು. ‖ ೧೫ ‖ ಅವರ ಮಾತು ಕೇಳಿ ಇಂದ್ರನು ಸಿಟ್ಟಿಗೆದ್ದು ಸಕಲ ದೇವತೆಗಳೊಡನೆ ಬ್ರಹ್ಮನ ಹತ್ತರ ಹೋಗಿ ಆ ವಿಂಧ್ಯನ ಸಂಗತಿಯನ್ನು ಹೇಳಿದನು. ‖ ೧೬ ‖ ಆಗ ಬ್ರಹ್ಮನು ಇಂದ್ರನನ್ನು ಕುರಿತು— ಎಲೈ ದೇವೇಂದ್ರನೇ, ವಿಂಧ್ಯಾಚಲನು ಬಗ್ಗಲಿಕ್ಕೆ ಒಂದು ಉಪಾಯವದೆ. ಹೇಳುವೆನು ಕೇಳು. ಈಗ ಅಗಸ್ತ್ಯ ಋಷಿಗಳು ಕಾಶಿಯಲ್ಲಿದ್ದಾರೆ. ನೀವು ಅವರ ಹತ್ತರ ಹೋಗಿ, ‖ ೧೭ ‖ ವಿಂಧ್ಯನ ಬೆಳವಣಿಗೆಯಿಂದ ದಕ್ಷಿಣ ದೇಶದಲ್ಲಿ ಕತ್ತಲೆ ಬಿದ್ದು ಅಲ್ಲಿಯ ಬ್ರಾಹ್ಮಣರ ಸ್ನಾನ-ಸಂಧ್ಯಾ-ಯಜ್ಞಾದಿ ಕರ್ಮಗಳು ನಿಂತುಹೋಗಿವೆಯೆಂದು ಆ ಅಗಸ್ತ್ಯರಿಗೆ ತಿಳಿಸಿ ಅವರನ್ನು ದಕ್ಷಿಣಕ್ಕೆ ಕಳಿಸಬೇಕು. ‖ ೧೮ ‖ ಯಾಕಂದರೆ ಆ ವಿಂಧ್ಯನು ಆ ಅಗಸ್ತ್ಯರ ಶಿಷ್ಯನು. ಅವರು ಅಲ್ಲಿಗೆ ಬಂದರೆ

ಗುರುಗಳು ಬಂದರೆಂದು ಆ ವಿಂಧ್ಯನು ಅವರಿಗೆ ದಂಡವತ್ ನಮಸ್ಕರಿಸುವನು ॥ ೧೯ ॥ ಆಗ ಅವರು— ಎಲೈ ವಿಂಧ್ಯನೇ, ನೀನು ಇನ್ನು ಬೆಳೆಯಬೇಡ. ಭೂಮಿಗೆ ಸಮಾನವಾಗಿರೆಂದು ಹೇಳಿ, ಅವನ ಶಿಖರವನ್ನು ಹತ್ತಿ, ಅವನನ್ನು ಭೂಮಿಗೆ ಸಮಾನವಾಗಿ ಮಾಡುವರು ॥ ೨೦ ॥ ಆದ್ದರಿಂದ ಈಗ ನೀವು ಕಾಶಿಯಲ್ಲಿದ್ದ ಅಗಸ್ತ್ಯರ ಬಳಿಗೆ ಹೋಗಿ ಅವರನ್ನು ಪ್ರಾರ್ಥಿಸಿ ಅವರು ತೀವ್ರವಾಗಿ ದಕ್ಷಿಣ ದಿಕ್ಕಿಗೆ ಹೋಗುವಂತೆ ಮಾಡಬೇಕು. ॥ ೨೧ ॥ ಎಂದು ಬ್ರಹ್ಮನು ಇಂದ್ರನಿಗೆ ಹರ್ಷದಿಂದ ಹೇಳಲು ಅವನ ಅಪ್ಪಣೆಯಂತೆ ಇಂದ್ರನು ತೀವ್ರವಾಗಿ ಹೊರಟು ॥೨೨॥ ಸಂಗಡ ಯಾವತ್ತೂ ದೇವತೆಗಳನ್ನೂ ಋಷಿಗಳನ್ನೂ ಗುರುಗಳಾದ ಬ್ರಹಸ್ಪತಿಯನ್ನೂ ಕರಕೊಂಡು ಕಾಶಿಗೆ ಬಂದನು. ॥ ೨೩ ॥ ಆಮೇಲೆ ಆ ಎಲ್ಲರೂ ಅಗಸ್ತ್ಯರ ಆಶ್ರಮವನ್ನು ಪ್ರವೇಶಿಸಿದರು. ॥ ೨೪ ॥ ಅವರನ್ನು ಕಂಡು ಅಗಸ್ತ್ಯರು ತಮ್ಮ ಪತ್ನಿಯಾದ ಲೋಪಾಮುದ್ರೆಯೊಡನೆ ಬಂದು, ಆ ಎಲ್ಲರಿಗೂ ವಂದಿಸಿ ಭಕ್ತಿಯಿಂದ ಅವರಿಗೆ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಅವರನ್ನು ಪೂಜಿಸಿದರು. ॥ ೨೫ ॥ ಆಮೇಲೆ ಅವರೆಲ್ಲರೂ ಆ ದಂಪತಿ ಗಳನ್ನು ಸ್ತುತಿಸಿದರು ॥ ೨೬ ॥ ಆಗ ದೇವಗುರುವಾದ ಬ್ರಹಸ್ಪತಿಯು ಇಂದ್ರಾದಿಗಳನ್ನು ಕುರಿತು, ಪಾತಿವ್ರತ್ಯದ ಖ್ಯಾತಿಯನ್ನು ಹೇಳಹತ್ತಿದರು ಹ್ಯಾಗಂದರೆ— ಎಲೈ ಇಂದ್ರಾದಿ ದೇವತೆಗಳೇ ಕೇಳಿರಿ ಪೂರ್ವದಲ್ಲಿ ಒಳ್ಳೇ ಪ್ರಖ್ಯಾತರಾದ ಬಹುಮಂದಿ ಪತಿವ್ರತೆಯರಿದ್ದರು ಆದರೆ ಅವರು ಈ ಲೋಪಾಮುದ್ರೆಗೆ ಸರಿಯಾದವರಲ್ಲ ॥೨೭॥ ಅವರು ಯಾರ್ಯಾರೆಂದರೆ— ಅರುಂಧತಿ, ಸತಿಸಾವಿತ್ರಿ, ಮಹಾಪತಿವ್ರತೆಯಾದ ಅನಸೂಯಾ, ಶಾಂಡಿಲ್ಯ ಮುನಿ ಪತ್ನಿಯಾದ ಶಾಂಡಿಲಿ, ॥ ೨೮ ॥ ಲಕ್ಷ್ಮಿ, ಸರಸ್ವತಿ, ಪಾರ್ವತಿ, ಸ್ವಯಂಭೂ ಪತ್ನಿಯಾದ ಶಾಂತರೂಪೆ, ಹಿಮವಂತನ ಪತ್ನಿಯಾದ ಮೇನಕಾ, ॥ ೨೯ ॥ ಧ್ರುವಮಾತೆಯಾದ ಸುನೀತಿ, ಸೂರ್ಯಪತ್ನಿಯಾದ ಸಂಜ್ಞಾದೇವಿ, ಅಗ್ನಿಪತ್ನಿಯಾದ ಸ್ವಾಹಾದೇವಿ, ॥ ೩೦ ॥ ಇವರೆಲ್ಲರೂ ಮಹಾ ಪ್ರಖ್ಯಾತರಾದ ಪತಿವೃತೆಯರಾದರೂ ಈ ಲೋಪಾಮುದ್ರೆಯು ಅವರಿಗಿಂತ ವಿಶೇಷ ಖ್ಯಾತಿಯುಳ್ಳ ಪತಿವೃತೆಯಾಗಿದ್ದಾಳೆ ॥ ೩೧ ॥ ಎಲೈ ಇಂದ್ರಾದಿ ದೇವತೆಗಳೇ ನಿಮಗೆ ಪತಿವ್ರತೆಯ ಧರ್ಮಗಳನ್ನು ಹೇಳುವೆನು ಕೇಳಿರಿ. ಪತಿವ್ರತೆಯರು ಪತಿಯು ಉಂಡು ಬಿಟ್ಟ

ಅನ್ನವು ಮಹಾಪ್ರಸಾದವೆಂದು ಮುಖ್ಯವಾಗಿ ಅದನ್ನು ಉಣ್ಣಬೇಕು. || ೩೨ || ಇನ್ನು ಬೇರೆ ಕೆಲವು ಸೇವಾ ಧರ್ಮಗಳನ್ನು ಹೇಳುವೆನು ಕೇಳಿರಿ. ಪತಿಯನ್ನು ಕಂಡಕೂಡಲೆ ಸತಿಯು ಎದ್ದು ನಿಲ್ಲಬೇಕು. ಆತನ ಅಪ್ಪಣೆಯಿಲ್ಲದೆ ಕೂಡ್ರುಬಾರದು. ಆತನ ಅಪ್ಪಣೆಯನ್ನು ತಿರಸ್ಕರಿಸಬಾರದು. || ೩೩ || ಸದಾ ಪತಿಸೇವಾ ಮಾಡಬೇಕು. ಅತಿಥಿಯು ಬಂದರೆ ಅವನ ಪೂಜಾ ಮಾಡಬೇಕು. ಪತಿಯ ಅಪ್ಪಣೆ ಹೊರತು ಎಲ್ಲಿಗೂ ಹೋಗಬಾರದು. ಮತ್ತು ದಾನಧರ್ಮಗಳನ್ನೂ ಮಾಡಬಾರದು || ೩೪ || ಮನಸಿನಲ್ಲಿ ಪತಿಯು ಶ್ರೀಹರಿಯೆಂದು ತಿಳಿದು ಸದಾ ಭಕ್ತಿಯಿಂದ ಸೇವಿಸಬೇಕು. ರಾತ್ರಿಯಲ್ಲಿ ಪತಿಗೆ ನಿದ್ದೆ ಹತ್ತುವತನಕ ಭಕ್ತಿಯಿಂದ ಆತನ ಸೇವಾ ಮಾಡಬೇಕು. || ೩೫ || ಆತನಿಗೆ ನಿದ್ರೆ ಬಂದಮೇಲೆ ತಾನು ಮಲಗಬೇಕು. ಕಂಚುಕಿಯನ್ನೂ ಕಿವಿಯೊಳಗಿನ ಓಲೆಗಳನ್ನೂ ದೂರದಲ್ಲಿರಿಸಬೇಕು. ಅವು ಪತಿಯ ದೇಹಕ್ಕೆ ತಗಲಬಾರದು. || ೩೬ || ಪತಿಗೆ ಕುಪ್ಪಸವು ತಗಲಿದರೆ ಮತ್ತು ಆತನ ಹೆಸರನ್ನು ಉಚ್ಚರಿಸಿದರೆ ಅವನ ಆಯುಷ್ಯವು ಕಡಿಮೆಯಾಗುವದು || ೩೭ || ಮುಂಜಾನೆ ಪತಿಯು ಏಳುವದಕ್ಕಿಂತ ಮುಂಚೆ ಎದ್ದು, ಮನೆಯ ಕಸಕಡ್ಡಿಗಳನ್ನು ತೆಗೆದು ಹೊಸ್ತಿಲು ಮೊದಲಾದವುಗಳನ್ನು ತೊಳೆದು, ರಂಗವಲ್ಲಿ ಮೊದಲಾದವುಗಳನ್ನು ಹಾಕಿ ಮನೆಯನ್ನು ಮಂಗಲಪ್ರದವಾಗಿ ಮಾಡಬೇಕು. || ೩೮ || ಆಮೇಲೆ ತಾನು ಬೇಗನೆ ಮೈ ತೊಳಕೊಂಡು ಪತಿಯ ಸ್ನಾನಕ್ಕೆ ಎಲ್ಲ ಅನುಕೂಲ ಮಾಡಿಕೊಟ್ಟು, ಆತನು ಸ್ನಾನ ಮಾಡಿದ ನಂತರ, ಅವನು ಶಿವಸಮಾನನೆಂದು ತಿಳಿದು ಅವನನ್ನು ಪೂಜಿಸಬೇಕು. ಆಮೇಲೆ ಆತನ ಚರಣಗಳ ಮೇಲೆ ಮಸ್ತಕವನ್ನಿಟ್ಟು ನಮಸ್ಕರಿಸಿ ಆತನ ಚರಣತೀರ್ಥವನ್ನು ತಕ್ಕೊಳ್ಳಬೇಕು. ಬಳಿಕ ಆತನ ದೇವಪೂಜೆಗೆ ಎಲ್ಲ ಉಪಕರಣಗಳನ್ನು ಸಿದ್ಧಮಾಡಿ ಕೊಡಬೇಕು. || ೩೯ || ಪತಿಯು ಊರಲ್ಲಿದ್ದಾಗ ತಾನು ಹರ್ಷದಿಂದ ಶೃಂಗಾರ ಮಾಡಿಕೊಳ್ಳಬೇಕು, ಊರಲ್ಲಿಲ್ಲದಾಗ ಅಲಂಕರಿಸಿಕೊಳ್ಳಬಾರದು. || ೪೦ || ಯಾವದಾದರೂ ಒಂದು ಮಾತಿನ ಸಲುವಾಗಿ ಪತಿಯು ಒಂದು ವೇಳೆ ನಿಷ್ಠುರನಾಗಿ ಮಾತಾಡಿದರೆ ತಾನು ಮನಸ್ಸಿನಲ್ಲಿ ಎಂದೂ ಸಿಟ್ಟಾಗದೆ ತಟ್ಟನೆ ಆತನ ಪಾದಗಳನ್ನು ಹಿಡಿದು ಕ್ಷಮಾ ಮಾಡಿರೆಂದು ಹೇಳಿಕೊಳ್ಳಬೇಕು. || ೪೧ || ಪತಿವ್ರತೆಯು

ತನ್ನ ಪತಿಯು ಹೊರಗಿನಿಂದ ಬಂದಕೂಡಲೆ ಎಲ್ಲ ಕೆಲಸಗಳನ್ನು ಬಿಟ್ಟು ಆತನ ಎದುರಿಗೆ ಹೋಗಿ ವಂದಿಸಿ ॥ ೪೨ ॥ ಸ್ವಾಮೀ, ಏನು ಅಪ್ಪಣೆಯಾಗುತ್ತದೆ ಎಂದು ಕೇಳಿ ಆತನ ಅಪ್ಪಣೆಯಂತೆ ನಡೆಯಬೇಕು. ॥ ೪೩ ॥ ಎಲೈ ದೇವತೆಗಳೇ ಇನ್ನೂ ಕೆಲವು ಪತಿವ್ರತಾ ಧರ್ಮಗಳನ್ನು ಹೇಳುವೆನು ಕೇಳಿರಿ. ಸ್ತ್ರೀಯರು ಹೊರಗೆ ಹೋದರೆ ಅವರಿಗೆ ಅನೇಕ ದೋಷಗಳು ಬರುವವು. ॥ ೪೪ ॥ ಒಂದು ವೇಳೆ ಹೊರಗೆ ಹೋಗುವ ಪ್ರಸಂಗವೇ ಬಂದರೆ ಬೇರೆ ಯಾವ ಸ್ತ್ರೀ-ಪುರುಷರನ್ನೂ ನೋಡಬಾರದು. ಹಾಗೇ ತೀವ್ರವಾಗಿ ಒಳಗೆ ಬಂದು ತನ್ನ ಮನೆಯಲ್ಲಿರಬೇಕು. ॥ ೪೫ ॥ ಒಂದುವೇಳೆ ಬೀದಿಯಲ್ಲಿ ಹೋಗಬರುವವರನ್ನು ನೋಡಿದರೆ ಅವಳು ಮುಂದೆ ಗೂಗೆಯಾಗುವಳು. ಈ ಲೋಪಾಮುದ್ರೆಯ ಪಾತಿವ್ರತ್ಯವು ಈ ಪ್ರಕಾರ ಪ್ರಖ್ಯಾತವಾಗಿರುತ್ತದೆ. ॥ ೪೬ ॥ ಈಕೆಯು ಎಂದೂ ಹೊರಗೆ ಹೋಗುವದಿಲ್ಲ. ದಿನಾಲು ಪ್ರಾತಃಕಾಲದಲ್ಲಿ ಎದ್ದು ಮನೆಯನ್ನು ಉಡುಗಿ ಸಾರಿಸಿ ನಿರ್ಮಲವಾಗಿ ಮಾಡುವಳು. ॥ ೪೭ ॥ ಆಮೇಲೆ ದೇವರ ಉಪಕರಣಗಳನ್ನು ಬೆಳಗಿ, ಪಂಚವರ್ಣದ ಹೂಗಳನ್ನು ತಂದು, ದೇವರ ಮುಂದೆ ರಂಗವಲ್ಲಿಯನ್ನು ಹಾಕಿ, ತಾನು ಮೈ ತೊಳಕೊಂಡು ಗಂಧ-ಅಕ್ಷತಾದಿಗಳನ್ನು ಮಾಡಿಡುವಳು. ॥ ೪೮ ॥ ಪತಿಯು ಅನುಷ್ಠಾನಕ್ಕೆ ಬರುವಷ್ಟರಲ್ಲಿ ಎಲ್ಲ ಸಿದ್ಧತೆಯನ್ನು ಮಾಡಿ, ಪತಿಯ ಭೋಜನವಾದನಂತರ ಆತನ ಉಚ್ಛಿಷ್ಟವನ್ನು ಬಹು ಭಕ್ತಿಯಿಂದ ಭೋಜನ ಮಾಡುವಳು ಮನಸಿನಲ್ಲಿ ಸದಾ ಪತಿಯನ್ನು ಧ್ಯಾನಿಸುತ್ತ ಆತನ ಇಚ್ಛೆಯಂತೆ ನಡೆಯುವಳು ಮುಂದೆ ಕೇಳಿರಿ— ॥ ೪೯ ॥ ಎಲೈ ಇಂದ್ರನೇ ಪತಿವ್ರತೆಯರು ಪತಿಯು ಊರಲ್ಲಿ ಇದ್ದಾಗ ಆತನ ಉಚ್ಛಿಷ್ಟವನ್ನು ಅವಶ್ಯವಾಗಿ ಉಣ್ಣಬೇಕು. ಪತಿಯು ಊರಲ್ಲಿಲ್ಲದಾಗ ಅತಿಥಿಗಳು ಬಂದರೆ ಅವರಿಗೆ ಊಟಕ್ಕೆ ಹಾಕಿ, ತಾನು ಆಕಳ ಪೂಜೆ ಮಾಡಿ ಊಟ ಮಾಡಬೇಕು. ॥ ೫೦-೫೧ ॥ ಯಾವಾಗಲೂ ಮನೆಯನ್ನು ಸ್ವಚ್ಛವಾಗಿಡಬೇಕು. ಪತಿಯ ಆಜ್ಞೆಯಿಲ್ಲದೆ ಧರ್ಮ ಹಾಗು ವ್ರತೋಪವಾಸಗಳನ್ನು ಮಾಡಬಾರದು. ॥ ೫೨ ॥ ತಮ್ಮ ಊರಲ್ಲಾಗುವ ಉತ್ಸವಗಳನ್ನು ಎಂದೂ ನೋಡುವದಿಲ್ಲವೆಂದು ಹೇಳಿ, ಬೇರೆ ತೀರ್ಥಯಾತ್ರೆ ವಿವಾಹಾದಿಗಳಿಗೆ ಹೋಗಬಾರದು. ॥ ೫೩ ॥ ಪತಿಯು ಸಂತೋಷದಿಂದಿರುವಾಗ ತಾನು ದುಃಖಿಸ

ಬಾರದು. ಆತನು ದುಃಖಿತನಾದಾಗ ತಾನು ಸಂತೋಷಪಡಬಾರದು. ॥ ೫೪ ॥ ಸ್ತ್ರೀಯರು ಮುಟ್ಟಾದಾಗ ಮೌನದಿಂದಿದ್ದು ವೇದಪರಣವನ್ನು ಕೇಳಬಾರದು. ಆಗ ಪತಿಗೆ ಮುಖವನ್ನು ತೋರಿಸಬಾರದು. ॥ ೫೫ ॥ ಮಂಗಲ ಸ್ನಾನ ಮಾಡಿದಮೇಲೆ ಪತಿಗೆ ಮುಖವನ್ನು ತೋರಿಸಬೇಕು ॥ ೫೬ ॥ ಒಂದು ವೇಳೆ ಆತನು ಮನೆಯಲ್ಲಿಲ್ಲದಿದ್ದರೆ ಪತಿವ್ರತೆಯು ಆತನ ರೂಪವನ್ನು ಮನಸ್ಸಿನಲ್ಲಿ ತಂದು ಸೂರ್ಯನನ್ನು ನೋಡಿ ಮನೆಯೊಳಗೆ ಹೋಗಬೇಕು. ॥ ೫೭ ॥ ಆಮೇಲೆ ಪತಿಯ ಆಯುಷ್ಯಾಭಿವೃದ್ಧಿಗಾಗಿ ಅರಿಷಿಣ, ಕುಂಕುಮ, ಸೇಂಧೂರ, ಕಾಡಿಗೆಗಳನ್ನು ಹಚ್ಚಿಕೊಂಡು, ಕೊರಳಲ್ಲಿ ಮಂಗಳಸೂತ್ರವನ್ನೂ ತಲೆಯಲ್ಲಿ ಹಣಿಗೆಯನ್ನೂ ಧರಿಸಬೇಕು. ॥೫೮॥ ಆಮೇಲೆ ಹೆಳಲು ಹಾಕಿಕೊಂಡು ಕೈಗಳಲ್ಲಿ ಕಂಕಣ ಹಾಗು ಬಳೆಗಳನ್ನೂ ಕಾಲಲ್ಲಿ ಕಾಲಕಡಗಗಳನ್ನೂ ಧರಿಸಿ ತಾಂಬೂಲ ಹಾಕಿಕೊಳ್ಳಬೇಕು. ॥ ೫೯ ॥ ಮನೆಯ ಎಡಬಲಕ್ಕಿರುವ ಅಂಥಿಂಥ ಸ್ತ್ರೀಯರ ಅಂದರೆ ಅಗಸಗಿತ್ತಿ, ಕುಂಟಣಿ, ಜೈನಸ್ತ್ರೀ, ದರಿದ್ರ ಸ್ತ್ರೀ ಇವರಸಂಗಡ ಸ್ನೇಹ ಮಾಡಬಾರದು. ಹಾಗೂ ಮಾತಾಡಬಾರದು. ಅವರ ಸಂಗಡ ಮಾತಾಡಹತ್ತಿದರೆ ಪಾತಿವ್ರತ್ಯಕ್ಕೆ ಹಾನಿಬರುವದು. ॥ ೬೦ ॥ ತನ್ನ ಪತಿಯನ್ನು ನಿಂದಿಸುವ ಸ್ತ್ರೀಯರ ಸಂಗಡ ಮಾತಾಡಬಾರದು. ಮಾತಾಡಿದರೆ ದೋಷಗಳು ಬರುವವು. ॥ ೬೧ ॥ ಪತಿವ್ರತೆಯು ಅತ್ತೆ, ಮಾವ, ನಾದಿನಿ, ನಿಘೆಣ್ಣಿ, ಭಾವ ಮೊದಲಾದವರನ್ನು ಬಿಟ್ಟು ಬೇರೆ ಇದ್ದರೆ ಆಕೆಗೆ ಮುಂದೆ ನಾಯಿಯ ಜನ್ಮವು ಬರುವದು. ॥ ೬೨ ॥ ಪತಿವ್ರತೆಯು ನಗ್ನದಿಂದ ಮೈತೊಳಕೊಳ್ಳಬಾರದು. ಒರಳು, ಒನಿಕೆಗಳಮೇಲೆ ಕೂಡ್ರಬಾರದು, ಕಾಲುಗಳಲ್ಲಿ ಸುತಗಾಲುಂಗರ, ಪಿಲ್ಯೆಗಳು ಇಲ್ಲದೆ ತಿರುಗ್ಯಾಡಬಾರದು. ॥ ೬೩ ॥ ಹೊಸ್ತಿಲಮೇಲೆಯೂ ಹಿರಿಯರ ಎದುರಿಗೆ ಕೂಡ್ರಬಾರದು. ॥ ೬೪ ॥ ಪತಿಯೊಡನೆ ವಾದಿಸಿದರೆ ಮಹಾ ಪಾಪ ಬರುವದು. ಪತಿಯ ಅಂತಃಕರಣದಲ್ಲಿ ಖಿನ್ನತೆಯನ್ನುಂಟುಮಾಡಬಾರದು. ॥ ೬೫ ॥ ಪತಿಯು ಒಂದುವೇಳೆ ಬಡವ, ನಪುಂಸಕ, ರೋಗಿ, ಹಾಗು ಅವಿವೇಕಿ ಆಗಿದ್ದರೂ ಪತಿವ್ರತೆಯು ಆತನನ್ನು ದೇವಸಮಾನವೆಂದು ತಿಳಿಯಬೇಕು. ॥ ೬೬ ॥ ಬಡವ, ನಪುಂಸಕ, ರೋಗಿ, ಅವಿವೇಕಿಯಾದ ಪತಿಯನ್ನು ಹರಿಯ ಸಮಾನವೆಂದು ತಿಳಿದರೆ ಪರಮೇಶ್ವರನು

ಪ್ರೀತನಾಗುವನು. ॥ ೬೭ ॥ ಪತಿವ್ರತೆಯು ತನ್ನ ಪತಿಯ ಮನಸ್ಸಿಗೆ ಬಂದ ಸೀರೆ-ಕುಪ್ಪುಸಗಳನ್ನೇ ಉಡಬೇಕು, ತೊಡಬೇಕು. ಪತಿಯು ಚಿಂತೆಯಲ್ಲಿದ್ದಾಗ ಸ್ತ್ರೀಯರು ಶೃಂಗರಿಸಿಕೊಳ್ಳಬಾರದು. ॥ ೬೮ ॥ ಮನೆಯಲ್ಲಿಲ್ಲದ ಸಾಮಾನುಗಳನ್ನು ತರಲಿಕ್ಕೆ ತಾನೇ ತನ್ನ ಪತಿಗೆ ಹೇಳಬಾರದು. ಮಕ್ಕಳ ಕಡೆಯಿಂದ ಹೇಳಿಸಬೇಕು. ॥ ೬೯ ॥ ಒಂದು ವೇಳೆ ಹತ್ತರ ಯಾರೂ ಇಲ್ಲದಿದ್ದರೆ ಆ ವಸ್ತುವನ್ನು ತೋರಿಸಿ ಇವು ಬೇಕೆಂದು ಸಂಜ್ಞೆಯಿಂದ ಹೇಳಬೇಕು. ಇಂಥಾದ್ದೇ ಬೇಕೆಂದು ನಿಶ್ಚಿತವಾಗಿ ಹೇಳಬಾರದು. ॥ ೭೦ ॥ ಪತಿಗೆ ದೊರೆತದ್ದರಲ್ಲಿಯೇ ತೃಪ್ತಳಾಗಿರಬೇಕು. ದೈವುಳ್ಳವರನ್ನು ಕಂಡು, ಅವರಂತೆ ತನಗೂ ಆಗಬೇಕೆಂದು ಹಟ ಮಾಡಿ ಪತಿ ನಿಂದಾ ಮಾಡಬಾರದು. ॥ ೭೧ ॥ ಜನರು ತೀರ್ಥಯಾತ್ರೆಗೆ ಹೋಗುತ್ತಾರೆಂದು ಕೌತುಕಕ್ಕಾಗಿ ತಾನೂ ಹೋಗಬಾರದು. ಪತಿಯ ಪಾದೋದಕವೇ ಭಾಗೀರಥಿ ಸಮಾನ ತೀರ್ಥವೆಂದು ತಿಳಿಯಬೇಕು ॥ ೭೨ ॥ ಪತಿವ್ರತೆಗೆ ಪತಿಯ ಚರಣ ತೀರ್ಥವು ಭಾಗೀರಥಿಕಿಂತ ಅತ್ಯಂತ ಶ್ರೇಷ್ಠವಾದದ್ದು. ಪತಿಯ ಸೇವೆ ಮಾಡುವದರಿಂದ ತನಗೆ ಸುಖವಾಗುವದಲ್ಲದೆ ತ್ರಿಮೂರ್ತಿಗಳು ಸಹ ಸಂತುಷ್ಟರಾಗುವರು. ॥ ೭೩ ॥ ಸ್ತ್ರೀಯರು ತಮ್ಮ ಮನಸ್ಸಿನಲ್ಲಿ ಏನಾದರೂ ವ್ರತ ಮಾಡುವದಿದ್ದರೆ, ಪತಿಯ ಅಪ್ಪಣೆಯಿಂದ ಮಾಡಬೇಕು. ತನ್ನ ಸ್ವಂತ ಬುದ್ಧಿಯಿಂದ ಮಾಡಿದರೆ ಪತಿಯ ಆಯುಷ್ಯವು ಕ್ಷೀಣವಾಗುವದು. ॥ ೭೪ ॥ ಬಳಿಕ ಪತಿಯೊಡನೆ ನರಕವಾಗುವದು ಎಂದು ವೇದದಲ್ಲಿ ಹೇಳಿದೆ. ॥ ೭೫ ॥ ಪತಿಗೆ ಶಿಟ್ಟಿನಿಂದ ಉತ್ತರಕೊಟ್ಟರೆ ಮೊದಲು ನಾಯಿಯಾಗಿ ಒದರಹತ್ತುವಳು. ಮುಂದೆ ನರಿಯಾಗಿ ಹುಟ್ಟಿ ಊರಹತ್ತಿರ ಬಂದು ಒದರುವಳು ॥ ೭೬ ॥ ಏನಾದರೂ ನಿತ್ಯ ನೇಮ ಮಾಡುವಂಥ ಸ್ತ್ರೀಯು, ಪತಿಯ ಉಚ್ಛಿಷ್ಟವನ್ನುಣ್ಣಬೇಕಾದರೆ ಪತಿಯ ಪಾದ ಪ್ರಕ್ಷಾಲನಮಾಡಿ, ಪ್ರೀತಿಯಿಂದ ತೀರ್ಥವನ್ನು ತಕ್ಕೊಂಡು ಊಟಮಾಡಬೇಕು ॥ ೭೭ ॥ ಪತಿಯು ಪ್ರತ್ಯಕ್ಷ ಶಂಕರನೆಂದು ತಿಳಿದರೆ ಆಕೆಯ ಎಲ್ಲ ಇಚ್ಛೆಗಳು ಒಳ್ಳೇರೀತಿಯಿಂದ ಪೂರ್ಣವಾಗುವವು. ಆಕೆಯು ಮೊದಲು ಪತಿಯೊಡನೆ ಸ್ವರ್ಗಕ್ಕೆ ಹೋಗಿ ಕಡೆಗೆ ವೈಕುಂಠಕ್ಕೆ ಹೋಗುವಳು. ॥ ೭೮ ॥ ಪತಿವ್ರತಾ ಸ್ತ್ರೀಯು ವನಭೋಜನಕ್ಕೆ ಹೋಗಬಾರದು. ನೆರೆಹೊರೆಯವರು ಒಳ್ಳೇ

ಪ್ರೀತಿಯವರೆಂದು ನಿತ್ಯ ಅವರಮನೆಗೆ ಹೋಗಬಾರದು. ॥ ೭೯ ॥ ಒಂದುವೇಳೆ ಪತಿಯು ಎಷ್ಟು ದುರ್ಬಲನೂ ಅನಾಚಾರಿಯೂ ಆದರೂ ಅವನನ್ನು ನಿಂದಿಸಬಾರದು. ಸಮರ್ಥರಾದವರನ್ನು ಸ್ತುತಿಸಬಾರದು. ॥ ೮೦ ॥ ತನ್ನ ಪತಿಯು ಎಂಥವನಿದ್ದರೂ ಅವನನ್ನು ಸ್ತುತಿಸಬೇಕು. ಮತ್ತು ಆವನೇ ಲಕ್ಷ್ಮೀ ಪತಿಯೆಂದು ಏಕಭಕ್ತಿಯಿಂದ ವರ್ತಿಸಬೇಕು. ॥ ೮೧ ॥ ಪತಿವ್ರತೆಯು ಅತ್ತೆ, ಮಾವ, ಗಂಡ ಇವರಮುಂದೆ ನಿಂತು ಗಟ್ಟಿಯಾಗಿ ಮಾತನಾಡ ಬಾರದು ಮತ್ತು ನಗಬಾರದು ಹಾಗೆ ಮಾಡಿದರೆ ಪತಿಯ ಆಯುಷ್ಯವು ಕ್ಷೀಣವಾಗುವದು. ॥ ೮೨ ॥ ಯಾವ ಸ್ತ್ರೀಯು ಅತ್ತೆ-ಮಾವಂದಿರನ್ನು ಬಿಟ್ಟು, ಪತಿಯೊಡನೆ ಬೇರೆ ಸಂಸಾರ ಮಾಡಿಕೊಂಡು ಹಿತದಿಂದಿರುವಳೋ ಅವಳು ಮುಂದೆ ಕರಡಿಯಾಗಿ ಕಾಡಿನಲ್ಲಿ ತಿರುಗಬೇಕಾಗುವದು ॥ ೮೩ ॥ ಪತಿಯು ಒಂದುವೇಳೆ ಸಿಟ್ಟಿನಿಂದ ಹೊಡೆದರೆ ಆವನು ಸಾಯಲಿ ಎಂದು ಅನ್ನಬಾರದು ಹಾಗೆ ಅಂದ ಸ್ತ್ರೀಯು ಮುಂದೆ ಹೆಣ್ಣುಹುಲಿಯಾಗಿ ಮಹಾ ಘೋರವಾದ ಕಾಡಿನಲ್ಲಿ ಸಂಚರಿಸುವಳು ॥ ೮೪ ॥ ಪರಪುರುಷರನ್ನು ದಿಟ್ಟಿಸಿ ನೋಡಿದರೆ ಮುಂದೆ ಮೇಲು ಗಣ್ಣುಳ್ಳವಳಾಗಿ ಹುಟ್ಟುವಳು. ಪತಿಯನ್ನು ವಂಚಿಸಿ ವಿಶೇಷವಾಗಿ ತಿಂದವಳು ಊರ ಹಂದಿಯಾಗುವಳು. ॥ ೮೫ ॥ ಬಳಿಕ ತೊಗಲಬಾವಲಿಯಾಗಿ, ಗಿಡಕ್ಕೆ ಜೋತಾಡುತ್ತ ತನ್ನ ಮಲವನ್ನು ತಾನೇ ತಿನ್ನಬೇಕಾಗುವದು. ॥ ೮೬ ॥ ಪತಿಯ ಎದುರಿನಲ್ಲಿಯೇ ಯಾವಳು ಸಿಟ್ಟಿನಿಂದ ನಿಷ್ಠುರವಾಗಿ ಮಾತನಾಡುವಳೋ ಅವಳು ಮುಂದೆ ಮೂಕಿಯಾಗಿ ಹುಟ್ಟಿ, ಮುಂದೆ ಏಳು ಜನ್ಮಗಳಲ್ಲಿ ಅತಿ ದರಿದ್ರತನವನ್ನು ಭೋಗಿಸುವಳು. ॥ ೮೭ ॥ ಪತಿಯು ಎರಡನೇ ಹೆಂಡತಿಯನ್ನು ಮಾಡಿಕೊಳ್ಳಲಾಗಿ ಪತಿವ್ರತೆಯಾದವಳು, ಅವಳಮೇಲೆ ವೈರತ್ವ ಮಾಡಿದರೆ ಅವಳು ಏಳು ಜನ್ಮ ಗಳವರೆಗೆ ದುರ್ಭಾಗ್ಯಳಾಗುವಳು. ॥ ೮೮ ॥ ಪರಪುರುಷರನ್ನು ಪ್ರೀತಿಯಿಂದ ದಿಟ್ಟಿಸಿ ನೋಡಿದರೆ ಅವಳು ಮುಂದೆ ಚಾಂಡಾಲಳಾಗಿ ಹುಟ್ಟಿ ದುಃಖದಿಂದ ಸದಾ ದಾರಿದ್ರ್ಯವನ್ನು ಅನುಭವಿಸುವಳು. ॥ ೮೯ ॥ ಪತಿಯು ಹೊರಗಿನಿಂದ ಬರಲು ಪತಿವ್ರತೆಯು ತಾನು ಎದುರಾಗಿ ಹೋಗಿ ಆತನ ಪಾದಗಳನ್ನು ತೊಳೆದು ಒರಿಸಿ ಬೀಸಣಿಕೆ ಯಿಂದ ಬೀಸಿ, ಆತನ ಶ್ರಮವನ್ನು ಪರಿಹರಿಸಬೇಕು. ॥ ೯೦ ॥ ಆಮೇಲೆ ಭಕ್ತಿಯಿಂದ ಆತನ ಪಾದಗಳನ್ನೊತ್ತಿ,

ಮೃದುವಾಗಿ ಮಾತನಾಡಬೇಕು. ಅದರಿಂದ ಪತಿಯು ಸಂತುಷ್ಟನಾದರೆ, ತ್ರಿಮೂರ್ತಿಗಳೂ ಸಂತುಷ್ಟರಾಗುವರು ॥ ೯೧ ॥ ತಾಯಿ-ತಂದೆ ಅಣ್ಣ-ತಮ್ಮಂದಿರು ಆಪ್ತೇಷ್ಟರು ಏನು ಕೊಟ್ಟಾರು ? ದೇವಸಮಾನನಾದ ಪತಿಯು ಇಹಪರ ಸುಖಗಳನ್ನು ಕೊಡುವನು ॥ ೯೨ ॥ ದೇವ ಹಾಗು ಗುರುಗಳ ತೀರ್ಥಕ್ಷೇತ್ರಗಳಿಂತಲೂ ತನ್ನ ಪತಿಯ ಚರಣ ತೀರ್ಥವೇ ಶ್ರೇಷ್ಠವೆಂದು ನಿಶ್ಚಯವಾಗಿ ತಿಳಿದ ಸ್ತ್ರೀಯೇ ನಿಜವಾದ ಪತಿವ್ರತೆಯೆಂದು ತಿಳಿಯಬೇಕು. ॥ ೯೩ ॥ ಜೀವ ಇದ್ದಂಥ ಶರೀರವು ಯಾವತ್ತರಿಗೂ ಪವಿತ್ರವು. ಜೀವ ಹೋದಕೂಡಲೇ ಆ ದೇಹವನ್ನು ಹ್ಯಾಗೆ ಮುಟ್ಟುವದಿಲ್ಲವೋ ॥ ೯೪ ॥ ಹಾಗೆ ಪ್ರಾಣದಂತಿದ್ದ ಪತಿಯು ಇಲ್ಲದವಳಿಗೆ ಎಲ್ಲವು, ಅಶುಚಿಯು ಆದ್ದರಿಂದ ಎಲ್ಲ ಸ್ತ್ರೀಯರು ಪತಿಯೇ ತಮ್ಮ ಪ್ರಾಣವೆಂದು ತಿಳಿಯಬೇಕು. ॥ ೯೫ ॥ ಗಂಡಸತ್ತ ಸ್ತ್ರೀಯು ಅಮಂಗಲಳು. ವಿಧವೆಯು ಹೆಣಕ್ಕೆ ಸಮಾನವು. ಅದರಲ್ಲಿ ಮಕ್ಕಳಿಲ್ಲದಂಥ ವಿಧವೆಯು ಅದಕ್ಕೂ ಹೆಚ್ಚು ಕನಿಷ್ಠಳು. ॥ ೯೬ ॥ ಯಾರಾದರೂ ಮನೆಯಿಂದ ಬೇರೆ ಕೆಲಸಕ್ಕಾಗಲಿ, ಬೇರೆ ಊರಿಗಾಗಲಿ ಹೊರಟಿರುವಾಗ ವಿಧವೆಯು ಎದುರಿಗೆ ಬಂದರೆ ಅವನ ಕಾರ್ಯವಂತೂ ಆಗುವದಿಲ್ಲ. ಅವನಿಗೆ ಮರಣಸಹ ಉಂಟಾದೀತು. ಮಕ್ಕಳೆದುರಿಗೆ ವಿಧವಾ ತಾಯಿಯು ಬಂದರೆ, ಅಶುಭವಲ್ಲ. ॥ ೯೭ ॥ ಒಂದುವೇಳೆ ವಿಧವಾ ತಾಯಿಯು ಮಕ್ಕಳೆದುರಿಗೆ ಬಂದರೆ ಅದು ಶಕುನವು ಆದರೆ ಅಶುಭವಲ್ಲ. ಮಕ್ಕಳಿಲ್ಲದ ವಿಧವೆಯರನ್ನು ವಂದಿಸಬಾರದು. ॥ ೯೮ ॥ ಯಾಕಂದರೆ ಆಕೆಯ ಆಶೀರ್ವಾದದಿಂದ ಅಮಂಗಳವಾಗುವದು ಸತ್ಯವು ಆಕೆಯ ಶಾಪವು ಮರಣವು. ಕಾರಣ ಅವರೊಡನೆ ಮಾತನಾಡಬಾರದು ॥ ೯೯ ॥ ಆದಕಾರಣ ಪತಿವ್ರತೆಯಾದ ಸ್ತ್ರೀಯು ಆನಂದದಿಂದ ತನ್ನ ಪತಿಯೊಡನೆ ಸಹಗಮನ ಮಾಡಿದರೆ ಅವಳಿಗೆ ಸರ್ವ ವೈಭವಗಳುಂಟಾಗುವವು. ಎಲೈ ಸ್ತ್ರೀಯಳೇ, ಪತಿಯಸಂಗಡ ಹೋಗುವ ಅಂದರೆ ಸಹಗಮನದ ರೀತಿಯನ್ನು ಕೇಳು. ॥ ೧೦೦ ॥ ಚಂದ್ರನಿಂದ ನಕ್ಷತ್ರಗಳೂ, ಮೇಘದಿಂದ ಮಿಂಚೂ ಹೊಳೆಯುತ್ತವೆ. ಚಂದ್ರನು ಅಸ್ತನಾದಕೂಡಲೇ ಆ ನಕ್ಷತ್ರಗಳ ಕಾಂತಿಯು ಹ್ಯಾಗೆ ಹೋಗುವದೋ ಮತ್ತು ಮೇಘವು ಹೋದಕೂಡಲೇ ಆ ಮಿಂಚೂ ಕೂಡಲೇ ಹ್ಯಾಗೆ ಹೋಗುವದೋ ಹಾಗೆ ಪತಿವ್ರತಾ ಸ್ತ್ರೀಯು

ಕೂಡಲೇ ಪತಿಯೊಡನೆ ಸಹಗಮನ ಮಾಡಬೇಕು. ॥ ೧೦೧ ॥ ಸ್ತ್ರೀಯರಿಗೆ ಅದೇ ಮುಖ್ಯವೆಂದು ಮಹಾ ಧರ್ಮ ಶಾಸ್ತ್ರಗಳು ಹೇಳುವವು. ಪತಿವ್ರತಾ ಧರ್ಮದಿಂದ ಆಕೆಯ ಪೂರ್ವಜರ ೪೨ ತಲೆಯುವರು ಉದ್ಧಾರವಾಗುವರು ॥ ೧೦೨ ॥ ಪತಿಯು ಪ್ರೇತದೊಡನೆ ಸಹಗಮನ ಮಾಡಲಿಕ್ಕೆ ಹೋಗುವಂಥ ಸ್ತ್ರೀಯು ಇಡುವ ಒಂದೊಂದು ಹೆಜ್ಜೆಗೆ ಸಹಸ್ರ ಅಶ್ವಮೇಧದಷ್ಟು ಪುಣ್ಯ ಬರುವದು. ॥ ೧೦೩ ॥ ಪಾಪಿಯಾದ ಮನುಷ್ಯನು ಸಾಯಲು ಯಮದೂತರು ಅವನನ್ನು ನರಕಕ್ಕೆ ಒಯ್ಯುವರು ॥ ೧೦೪ ॥ ಆದರೆ ಅವನ ಹೆಂಡತಿಯು ಪತಿವ್ರತೆಯಾಗಿದ್ದು ಆವಳು ಆನಂದದಿಂದ ಸಹಗಮನ ಮಾಡಿದರೆ, ಹದ್ದು ಸದ್ದಿಲ್ಲದೆ ಬಂದು ಹಾವನ್ನು ತಕ್ಕೊಂಡುಹೋಗುವಂತೆ ಕೂಡಲೇ ಆವಳು ತನ್ನ ಪತಿಯನ್ನು ಸ್ವರ್ಗಕ್ಕೆ ಒಯ್ಯುವಳು ॥ ೧೦೫ ॥ ಸಹಗಮನ ಮಾಡುವ ಸತಿಯನ್ನು ನೋಡಿ ಯಮದೂತರು ನರಕಕ್ಕೆ ಒಯ್ಯುವ ಆವಳ ಪತಿಯನ್ನು ಬಿಟ್ಟು, ತೀವ್ರವಾಗಿ ತಮ್ಮ ಯಮಪುರಕ್ಕೆ ಓಡಿ ಹೋಗುವರು. ॥ ೧೦೬ ॥ ಆಗ ದೇವಲೋಕದಿಂದ ವಿಮಾನವು ಬಂದು ಅದರಲ್ಲಿ ಪತಿಸಹಿತ ಆ ಪತಿವ್ರತಾ ಶಿರೋಮಣಿಯನ್ನು ಕೂಡ್ರಿಸಿಕೊಂಡು ಸ್ವರ್ಗಕ್ಕೆ ಒಯ್ಯುವರು ಅಲ್ಲಿ ದೇವಾಂಗನೆಯರು ಆಕೆಗೆ ಆರತಿಯನ್ನು ಮಾಡುವರು. ॥ ೧೦೭ ॥ ಆವಳಮೇಲೆ ಕಾಲನ ಆಟವು ನಡೆಯುವದಿಲ್ಲ. ಪತಿವ್ರತೆಯನ್ನು ನೋಡಿದಕೂಡಲೆ ಯಮದೂತರು ಅಂಜಿ ತೀವ್ರವಾಗಿ ಓಡಿಹೋಗುತ್ತಾರೆ ॥ ೧೦೮ ॥ ಪತಿವ್ರತೆಯನ್ನು ಕಂಡು ಸೂರ್ಯನು ಸಹ ಅಂಜಿ ಅಂಜಿ ತನ್ನ ತೇಜವನ್ನು ಮಂದವಾಗಿ ಮಾಡುತ್ತಾನೆ. ಅಗ್ನಿಯೂ ಆಕೆಗೆ ಹೆದರಿ ಶಾಂತನಾಗುತ್ತಾನೆ. ಆದ್ದರಿಂದ ಆಕೆಗೆ ಬಿಸಿಲಿನ ಹಾಗೂ ಅಗ್ನಿಯ ಉಷ್ಣತೆಯು ತಾಕಲಿಕ್ಕೆ ಶಕ್ಯವಾಗುವದಿಲ್ಲ ॥ ೧೦೯ ॥ ಆಕೆಯನ್ನು ನೋಡಿ ನಕ್ಷತ್ರಗಳೂ ಸಹ ಈಕೆಯು ನಮ್ಮ ಸ್ಥಳವನ್ನೆಲ್ಲಿ ಹೊಂದುವಳೋ ಎಂದು ಹೆದರುವವು. ಹೀಗೆ ಆವಳು ಪತಿ ಸಹಿತ ಸ್ವರ್ಗಕ್ಕೆ ಹೋಗುವಳು. ॥ ೧೧೦ ॥ ಈ ಪ್ರಕಾರ ಕಾರ್ಯಗಳಾಗುತ್ತ ಆ ಪತಿವ್ರತೆಯು ಸಂತೋಷದಿಂದ ಪತಿಯೊಡನೆ ಸ್ವರ್ಗಕ್ಕೆ ಹೋಗಿ ಅಲ್ಲಿ ನಿರಂತರವಾಗಿ ಸುಖಿಸುವಳು. ॥ ೧೧೧ ॥ ಮೈಯಲ್ಲಿ ಮೂರು ಕೋಟಿ ಕೂದಲುಗಳುಳ್ಳಂಥ ಪತಿವ್ರತೆಯು ಅತಿ ಪ್ರೀತಿಯಿಂದ ತನ್ನ ದೇಹವನ್ನು ಅಗ್ನಿಯಲ್ಲಿ ಬಿಟ್ಟರೆ ಆದರ

ಫಲವನ್ನು ಹೇಳುವೆನು ಕೇಳು. ॥ ೧೧೨ ॥ ಪ್ರತಿಯೊಂದು ರೋಮಕ್ಕೆ ಶತಕೋಟಿ ವರ್ಷದಂತೆ ಆಗುವವರೆಗೆ ಆ ಪತಿವ್ರತೆಯು ತನ್ನ ಪತಿಯೊಡನೆ ಆನಂದದಿಂದ ಸ್ವರ್ಗದಲ್ಲಿರುವಳು ॥ ೧೧೩ ॥ ಎಲೌ ಸ್ತ್ರೀಯಳೇ, ಸಹಗಮನದ ಪುಣ್ಯವು ಈ ಪ್ರಕಾರವಾಗಿರುತ್ತದೆ. ಯಾರ ವಂಶದಲ್ಲಿ ಇಂಥ ಪತಿವೃತಾ ಸ್ತ್ರೀಯು ಹುಟ್ಟುವಳೋ ಅವಳು ತನ್ನ ತೌರುಮನೆಯ ೨೧ ತಲೆಯವರು, ಅತ್ತೆಯ ಮನೆಯ ೨೧ ತಲೆಯುವರು ನರಕದಲ್ಲಿದ್ದರೂ ಅವರನ್ನು ಸ್ವರ್ಗಕ್ಕೆ ಒಯ್ಯುವಳು. ॥ ೧೧೪ ॥ ಅಂಥ ಪತಿವ್ರತೆಯ ತಾಯಿ-ತಂದೆಗಳು ಹಾಗೂ ಅತ್ತೆ-ಮಾವಂದಿರು ಧನ್ಯರು ! ಅವರೆಲ್ಲರೂ ಈಕೆಯಿಂದ ಉದ್ಧಾರವಾಗುವರು. ಈ ಪ್ರಕಾರ ಸಹಗಮನದ ಪುಣ್ಯವಿರುತ್ತದೆ. ॥ ೧೧೫ ॥ ಮತ್ತೇನಂದರೆ—

**ಶ್ಲೋಕ —** ತ್ರಿಸ್ರಕೋಟ್ಯರ್ಧಕೋಟೀ ಚ ಯಾನಿ ರೋಮಾಣಿ ಮಾನವೆ ।
ತಾವತ್ಕಾಲಂ ವಸೇತ್ ಸ್ವರ್ಗೇ ಭರ್ತಾರಮ್ ಸಾನುಗಚ್ಛತಿ ॥

ಇದು ಪರಾಶರ ಸ್ಮೃತಿಯು. ಇದರ ಅರ್ಥವೇನಂದರೆ— ಸಹಗಮನ ಮಾಡಿದ ಸ್ತ್ರೀಯು ತನ್ನ ದೇಹದಲ್ಲಿರುವ ೩|| ಕೋಟಿ ರೋಮಗಳಷ್ಟು ವರುಷ ಪತಿಯೊಡನೆ ಸ್ವರ್ಗದಲ್ಲಿರುವಳು. ಎಂದಾಗುತ್ತದೆ.

**ಶ್ಲೋಕ —** ಬ್ರಹ್ಮಘ್ನೋವಾ ಕೃತಘ್ನೋವಾ ಮಿತ್ರಘ್ನೋವಾಪಿ ಮಾನವಃ ।
ತಂ ಪುನಾತಿ ತದಾ ನಾರೀ ಇತ್ಯಾಂಗಿರಸ ಭಾಷಿತಃ ॥

ಅಂದರೆ ಬ್ರಹ್ಮಘ್ನ, ಕೃತಘ್ನ, ಮಿತ್ರಘ್ನನಾದವನ ಹೆಂಡತಿಯು ಈ ರೀತಿ ಸಹಗಮನ ಮಾಡಿದರೆ ಅವಳು ತನ್ನ ಉಭಯ ಕುಲದ ೪೨ ತಲೆಯವರನ್ನು ಸ್ವರ್ಗಕ್ಕೆ ಒಯ್ಯುವಳು ಎಂದು ಅಂಗಿರಸ ಮುನಿಗಳು ಹೇಳುತ್ತಾರೆ— ಎಲೌ ಸ್ತ್ರೀಯೇ, ದೇವಗುರುವು ದೇವತೆಗಳಿಗೆ ಮತ್ತೆ ಕೆಲವು ಮಾತು ಹೇಳಹತ್ತಿದನು. ಏನಂದರೆ— ॥ ೧೧೬ ॥

ದಿಂಗಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

ಎಲೈ ದೇವತೆಗಳೇ, ಯಾವ ಸ್ತ್ರೀಯು ದುರಾಚಾರಿಯೂ ವ್ಯಭಿಚಾರಿಯೂ ಆಗಿರುವಳೋ ಅವರ ಫಲವು ಅತಿ ಘೋರ ವಾದದ್ದಿರುತ್ತದೆ. ಅದನ್ನು ಹೇಳುವೆನು ಏಕಚಿತ್ರದಿಂದ ಕೇಳಿರಿ. ॥ ೧೧೭ ॥ ಆ ದುರಾಚಾರಿ ಹಾಗು ವ್ಯಭಿಚಾರಿ ಆದ ಸ್ತ್ರೀಯು ತನ್ನ ಉಭಯ ಕುಲದ ೪೨ ತಲೆಯವರು ಸ್ವರ್ಗದಲ್ಲಿದ್ದರೆ ಅವರನ್ನು ಕೂಡಲೆ ನರಕಕ್ಕೆ ಒಯ್ಯು ವಳು. ॥ ೧೧೮ ॥ ಮತ್ತು ತನ್ನ ಮೈಯಲ್ಲಿದ್ದ ೩॥ ಕೋಟಿ ಕೂದಲುಗಳಷ್ಟು ವರುಷ ಅವರೊಡನೆ ನರಕದಲ್ಲಿರು ವಳು. ಆ ದುರಾಚಾರಿ ವ್ಯಭಿಚಾರಿ ಸ್ತ್ರೀಯರ ಫಲವು ಈ ಪ್ರಕಾರವಾಗಿರುತ್ತದೆ ॥ ೧೧೯ ॥ ಪತಿವ್ರತೆಯು ಕ್ಷಣಹೊತ್ತು ಭೂಮಿಯಮೇಲೆ ನಡೆದರೆ ಭೂದೇವಿಯು ತಾನು ಪವಿತ್ರಳಾದೆನೆಂದು ಅನ್ನುವಳು. ॥ ೧೨೦ ॥ ಸೂರ್ಯ–ಚಂದ್ರರೂ ಸಹ ಪತಿವ್ರತೆಯ ಮೈಮೇಲೆ ತಮ್ಮ ಕಿರಣ ಬಿದ್ದರೆ ತಾವು ಪಾವನರಾಗುವೆವೆನ್ನು ವರು. ॥ ೧೨೧ ॥ ವಾಯುವೂ ವರುಣನೂ ತಾವು ಪತಿವ್ರತೆಯ ಮೈಗೆ ಸ್ಪರ್ಶ ಮಾಡಿದರೆ ಪವಿತ್ರರಾಗುವೆವೆಂದು ಆಕೆಯನ್ನು ಸ್ಪರ್ಶಮಾಡಿ ಪುನೀತರಾಗುವರು ॥ ೧೨೨ ॥ ಪ್ರತಿಯೊಂದು ಮನೆಯಲ್ಲಿ ಬಹುತೇಕವಾಗಿ ಸುಂದರರೂ ಧನಿಕರೂ ಆದ ಸ್ತ್ರೀಯರು ಇರಬಹುದು ಆದರೆ ಅವರ ಸುಂದರತನ, ಧನಿಕತನ ತಕ್ಕೊಂಡು ಮಾಡುವದೇನು ? ಆಕೆಯು ವಂಶವನ್ನು ಉದ್ಧಾರ ಮಾಡುವಂಥ ಪತಿವ್ರತೆಯಾಗಿರಬೇಕು ॥ ೧೨೩ ॥ ಯಾವ ಮನೆಯಲ್ಲಿ ಪತಿವ್ರತೆ ಯಾದ ಸ್ತ್ರೀ ಇರುವಳೋ ಅವರು ಖರೋಖರವಾಗಿ ಸುದೈವಿಗಳು ! ನೂರು ಜನ್ಮಗಳ ಸುಕೃತದಿಂದ ಅವರಿಗೆ ಇಂಥ ಪತಿವ್ರತೆಯು ದೊರಕುವಳು. ॥ ೧೨೪ ॥ ಪತಿವ್ರತಾ ಸ್ತ್ರೀಯ ಸಹವಾಸ ಮಾಡಿದವರಿಗೆ ಚತುರ್ವಿಧ ಪುರುಷಾರ್ಥಗಳು ದೊರಕುವವು. ಅಂಥ ಸ್ತ್ರೀಯು ದೊರಕಬೇಕಾದರೆ ಅಧಿಕ ಪುಣ್ಯವು ಬೇಕು. ॥ ೧೨೫ ॥ ಇಂಥ ಪತಿವ್ರತೆಯು ಇಲ್ಲದಂಥ ಮನೆಯವರಿಗೆ ಯಾವ ಪುಣ್ಯವೂ ಬರುವದಿಲ್ಲ. ಪತಿವ್ರತಾ ಸ್ತ್ರೀಯು ಇರುವಂಥವರ ಮನೆಯಲ್ಲಿ ಯಜ್ಞ-ಯಾಗಾದಿ ಕಾರ್ಯಗಳು ಪ್ರಖ್ಯಾತವಾಗಿ ನಡೆಯುವವು. ॥ ೧೨೬ ॥ ಇಲ್ಲದಿದ್ದರೆ ಇಲ್ಲ. ಪತಿವ್ರತೆಯರು ಇಲ್ಲದಂಥ ಮನೆಯವರಿಗೆ ಅರಣ್ಯವೇನೂ ದೂರವಾಗಿರುವದಿಲ್ಲ. ಅವರು ಈ ಸಂಸಾರದಲ್ಲಿ ವ್ಯರ್ಥ ಹುಟ್ಟಿದಂತಾಗಿ ಕರ್ತವ್ಯ ಬಾಹಿರರಾಗುವರು. ॥ ೧೨೭ ॥ ಯಾರಿಗೆ ಇಂಥ ಪತಿವ್ರತೆಯು ದೊರಕುವಳೋ

ಅವರಿಗೆ ಸಮಸ್ತ ಪುಣ್ಯವು ಬರುವದಲ್ಲದೆ, ಅವರಿಗೆ ಪುತ್ರ ಸಂತಾನವಾಗಿ ಪರಲೋಕ ಸಾಧನವೂ ಆಗುವದು. ‖ ೧೨೮ ‖ ಪತಿವ್ರತಾ ಸ್ತ್ರೀಯು ಇಲ್ಲದಂಥವನ ದೇವ ಹಾಗು ಪಿತೃ ಮುಂತಾದ ಯಾವ ಕರ್ಮಗಳೂ ನಡೆಯುವದಿಲ್ಲ. ಅವನು ಕರ್ಮ ಮಾಡಲಿಕ್ಕೆ ಯೋಗ್ಯನೂ ಆಗುವದಿಲ್ಲ. ‖ ೧೨೯ ‖ ಪತಿವ್ರತೆಯ ದರ್ಶನದಿಂದ ಗಂಗಾ ಸ್ನಾನಕ್ಕಿಂತ ಹೆಚ್ಚು ಪುಣ್ಯವು ಬರುವದು. ಮತ್ತು ಅವರ ದರ್ಶನದಿಂದ ಮಹಾ ಪಾಪಿಯೂ ಸಹ ಪಾವನನಾಗಿ ಸಪ್ತಜನ್ಮ ಪಾಪದಿಂದ ಪುನೀತನಾಗುವನು. ‖ ೧೩೦ ‖ ಎಂದೀಪ್ರಕಾರ ಬೃಹಸ್ಪತಿಯು ದೇವತೆಗಳಿಗೆ ಹೇಳಿದಂತೆ ಶ್ರೀ ಗುರುಗಳು ಆ ಪತಿವ್ರತೆಗೆ ಹೇಳಿದರು. ಅದರಂತೆ ಸಿದ್ಧರು ನಾಮಧಾರಕನಿಗೆ ಹೇಳಿದರು. ‖ ೧೩೧ ‖ ಎಂದು ಸರಸ್ವತೀ ಗಂಗಾಧರನು ಹೇಳಿ— ಪುಣ್ಯರಾಸಿಯಾದ ಈ ಗುರುಚರಿತ್ರೆಯನ್ನು ಕೇಳಿದರೆ ಸದ್ಗತಿಯಾಗುವದು ‖ ೧೩೨ ‖ ಮತ್ತು ಪತಿವ್ರತೆಯರ ಲಕ್ಷಣಗಳನ್ನು ಕೇಳಿದವರು ಪುನೀತರಾಗುವರಲ್ಲದೆ, ಅವನ ಮನಸ್ಸಿನ ಇಚ್ಛೆಗಳು ಪೂರ್ಣವಾಗುವವು ಎಂದು ಹೇಳಿದರು. ‖ ೧೩೩ ‖

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ, ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಪತಿವ್ರತಾಖ್ಯಾನಂ ನಾಮ ಏಕತ್ರಿಂಶೋಽಧ್ಯಾಯಃ ‖ ೩೧ ‖

— ೩೧ನೇ ಅಧ್ಯಾಯ ಸಮಾಪ್ತ —

---

# ೩೨ನೇಯ ಅಧ್ಯಾಯ

## — ವಿಧವಾ ಆಚಾರ ಮತ್ತು ಪ್ರೇತಸಂಜೀವನ

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕನೇ, ಬಳಿಕ ಆ ಯೋಗಿವರ್ಯರು ಆ ಸತಿಯನ್ನು ಕುರಿತು— ಎಲೌ ಸ್ತ್ರೀಯಳೇ, ದೇವ ಗುರುವು ದೇವತೆಗಳಿಗೆ ಈ ಪ್ರಕಾರ ಪತಿವ್ರತಾ ಸ್ತ್ರೀಯರ ಆಚಾರಗಳನ್ನೂ, ಆದರಂತೆ ಸಹಗಮನದ ಫಲವನ್ನು ಹೇಳಿದನು. ॥ ೧ ॥ ಮತ್ತೆ ಋಷಿಗಳು ಕೇಳಿದಂತೆ ವಿಧವಾ ಸ್ತ್ರೀಯರ ಆಚಾರಗಳನ್ನೂ ಹೇಳಹತ್ತಿದನು. ಅದನ್ನೇ ನಾನು ನಿನಗೆ ಹೇಳುವೆನು ಏಕಚಿತ್ತದಿಂದ ಕೇಳು ಎಂದರು ಎಂದು ಸರಸ್ವತಿ ಗಂಗಾಧರನು— ಎಲೈ ಶ್ರೋತೃಗಳೇ ನೀವೂ ಕೇಳಿರಿ. ॥ ೨ ॥ ಆಮೇಲೆ ದೇವತೆಗಳೂ ಋಷಿಗಳೂ— ಬೃಹಸ್ಪತಿಯನ್ನು ಕುರಿತು— ಸ್ವಾಮೀ, ಬೃಹಸ್ಪತಿಯೇ, ಪತಿಯು ಹತ್ತರ ಇದ್ದಾಗ ಅವಳ ಆ ಪತಿಗೆ ಮರಣ ಬಂದರೆ ಆವನ ಸತಿಯು ಏನು ಮಾಡಬೇಕು ? ಮತ್ತು ಸಹಗಮನ ಹ್ಯಾಗೆ ಮಾಡಬೇಕು ? ॥ ೩ ॥ ಪತಿಯು ಸತ್ತಾಗ ಹತ್ತರಿದ್ದ ಸತಿಯು ಗರ್ಭಿಣಿಯಿದ್ದರೆ, ಹಾಗು ಅವಳಿಗೆ ಸಣ್ಣ ಸಣ್ಣ ಮಕ್ಕಳಿದ್ದರೆ ಅವಳು ಏನು ಮಾಡಬೇಕೆಂಬನ್ನು ಹೇಳಿರಿ ಎಂದು ವಿನಂತೀ ಮಾಡಿಕೊಂಡರು ॥ ೪ ॥ ಈ ಪ್ರಕಾರ ದೇವತೆಗಳ ಮಾತು ಕೇಳಿ ಬೃಹಸ್ಪತಿಯು ವಿಸ್ತಾರವಾಗಿ ಹೇಳ ಹತ್ತಿದನು ಎಲೈ ಶ್ರೋತೃಗಳೇ ನೀವು ಏಕಚಿತ್ತದಿಂದ ಕೇಳಿರಿ. ॥ ೫ ॥ ಮೃತನಾದವನ ಸತಿಯು ಹತ್ತರ ಇದ್ದರೆ ಅವಳು ಸಹಗಮನ ಮಾಡಬೇಕು. ಒಂದುವೇಳೆ ಆಕೆಯು ಗರ್ಭಿಣಿ ಇದ್ದರೆ ಸಹಗಮನ ಮಾಡಬಾರದು. ॥ ೬ ॥ ಸ್ತನಪಾನ ಮಾಡುವ ಮಕ್ಕಳಿದ್ದವಳು ಸಹಗಮನ ಮಾಡಿದರೆ ಮಹಾ ಪಾಪ ಬರುವದು. ಮತ್ತು ಪತಿಯು ದೂರ ಎಲ್ಲಾದರೂ ಮೃತನಾಗಿದ್ದರೆ ಆ ಸತಿಯೂ ಸಹಗಮನಮಾಡಬಾರದು. ॥ ೭ ॥ ಅವಳು ವಿಧವೆಯಾಗಿ ವಿಧವಾ

ಧರ್ಮದಂತೆ ಸರಿಯಾಗಿ ನಡೆದರೆ ಆವಳಿಗೆ ಸಹಗಮನ ಮಾಡಿದಷ್ಟೇ ಪುಣ್ಯ ಬರುವದು. ॥ ೮ ॥ ಸಹಗಮನ ಮಾಡಲಿಕ್ಕೆ ಬರದಂಥ ಪ್ರಸಂಗದಲ್ಲಿ ಮೃತನಾದವನ ಸತಿಯು ಕೇಶ ವಪನ ಮಾಡಿಸಿಕೊಳ್ಳಬೇಕು. ॥ ೯ ॥ ಕೇಶ ತೆಗೆಯಿಸಿಕೊಳ್ಳದ ವಿಧವೆಯ ಪತಿಯು ನಾನಾತರದ ನರಕದಲ್ಲಿ ಕಷ್ಟಗಳನ್ನು ಅನುಭವಿಸಬೇಕಾಗುವದು. ॥೧೦॥ ಆದಕಾರಣ ವಿಧವೆಯು ಕೇಶ ತೆಗೆಯಿಸಿಕೊಂಡು ನಿತ್ಯ ಮೈತೊಳಕೊಂಡು ಒಂದು ದಿನಕ್ಕೆ ಒಮ್ಮೆ ಊಟ ಮಾಡಬೇಕು. ॥ ೧೧ ॥ ಆವಳು ಒಂದು ಧಾನ್ಯದ ಅನ್ನ ಊಟ ಮಾಡಬೇಕು. ಮತ್ತು ಒಂದು ತಿಂಗಳಲ್ಲಿ ಭಕ್ತಿಯಿಂದ ೩ ದಿವಸ ಉಪವಾಸ ಮಾಡಬೇಕು ॥ ೧೨ ॥ ಪಕ್ಷಮಾಸದಲ್ಲಿ ೫ ದಿವಸ ಉಪವಾಸ ಮಾಡಬೇಕು. ಅಥವಾ ಚಾಂದ್ರಾಯಣ ವ್ರತದ ಪ್ರಕಾರ ಊಟಮಾಡಬೇಕು ॥ ೧೩ ॥ ಅಂದರೆ ಆಮವಾಸ್ಯವಾದನಂತರ ಚಂದ್ರನು ಕಾಣುವ ದಿವಸದಿಂದ ಆರಂಭ ಮಾಡಬೇಕು ಹ್ಯಾಗಂದರೆ ಕೋಳಿತತ್ತಿಯ ಆಕಾರದಷ್ಟು ತುತ್ತು ಮೊದಲನೇ ದಿವಸ ಒಂದು ೨ನೇ ದಿವಸ ಎರಡು ಹೀಗೆ ದಿನಕ್ಕೊಂದರಂತೆ ಏರಿಸುತ್ತ ಹುಣ್ಣಿವೆಯ ದಿವಸ ೧೫ ತುತ್ತು ಉಣ್ಣಬೇಕು. ॥ ೧೪ । ಆಮೇಲೆ ಕೃಷ್ಣಪಕ್ಷದಲ್ಲಿ ಒಂದೊಂದು ತುತ್ತು ಇಳಿಸುತ್ತ ಅಮಾವಾಸ್ಯೆಯು ದಿವಸ ೧ ತುತ್ತು ಊಟ ಮಾಡಬೇಕು. ॥ ೧೫ ॥ ಹೀಗ ಮಾಡಲಿಕ್ಕೆ ಶಕ್ತಿ ಇಲ್ಲದ ವಿಧವೆಯು ಒಂದೇ ಅನ್ನ ಊಟ ಮಾಡಬೇಕು ಅಥವಾ ಫಲಾಹಾರ ಇಲ್ಲವೆ ಶಾಕಾಹಾರ ಮಾಡಬೇಕು ॥ ೧೬ ॥ ಅಪವಿತ್ರ ಪದಾರ್ಥಗಳನ್ನು ತಕ್ಕೊಳ್ಳಬಾರದು. ಶ್ವಾಸೋಚ್ಛ್ವಾಸ ನಡೆದು ಪ್ರಾಣ ಉಳಿಯುವವಕ್ಕೆ ಹಾಲು ಮಾತ್ರ ತಕ್ಕೊಳ್ಳಬೇಕು. ॥ ೧೭ ॥ ವಿಧವೆಯರು ಮಂಚದಮೇಲೆ ಮಲಗಬಾರದು ಹಾಗೆ ಮಾಡಿದರೆ ಪತಿಯುಸಂಗಡ ತಾನೂ ನಿರಂತರ ನರಕವನ್ನು ಭೋಗಿಸಬೇಕಾಗುವದು ॥ ೧೮ ॥ ವಿಧವೆಯರು ಎಣ್ಣೆ ಹಚ್ಚಿಕೊಂಡು ಎರಕೊಳ್ಳಬಾರದು ಅಥವಾ ದೇಹ ಮರ್ದನ ಮಾಡಬಾರದು. ಮತ್ತು ಆವಳು ಗಂಧ-ಹೂವು ಪರಿಮಳವಸ್ತು, ತಾಂಬೂಲಗಳನ್ನು ಸೇವಿಸಬಾರದು. ॥ ೧೯ ॥ ಮಕ್ಕಳಿಲ್ಲದ ವಿಧವೆಯು ಪತಿಯ ಗೋತ್ರವನ್ನೂ ಹೆಸರನ್ನೂ ಉಚ್ಚರಿಸಿ ಎಳ್ಳು-ದರ್ಭೆ-ಕುಶಗಳಿಂದ ತರ್ಪಣವನ್ನು ಕೊಡಬೇಕು. ॥ ೨೦ ॥ ವಿಧವೆಯು ತನ್ನ ಪತಿಯು ವಿಷ್ಣುಸಮಾನನೆಂದು ತಿಳಿದು

ಆತನನ್ನು ಮನಸ್ಸಿನಲ್ಲಿ ಸ್ಮರಿಸಿ, ನಿತ್ಯವೂ ವಿಷ್ಣುವನ್ನು ಪೂಜಿಸಬೇಕು. ||೨೧|| ಗಂಡನಿದ್ದಾಗ ಆತನ ಅಪ್ಪಣೆಯಂತೆ ನಡೆಯುವಂತೆ ಈಗ ವಿಷ್ಣುವಿನ ಅಪ್ಪಣೆಯಂತೆ ನಡೆಯಬೇಕು || ೨೨ || ಆದರಂತೆ ತೀರ್ಥಯಾತ್ರಾ ಉಪವಾಸಾದಿಗಳನ್ನು ಮಾಡಬೇಕು. ಅಥವಾ ಗುರುಗಳು ಹಾಗು ಶ್ರೇಷ್ಠ ಬ್ರಾಹ್ಮಣರು ಹೇಳಿದಂತೆ ನಡೆಯಬೇಕು— || ೨೩ || ವಿಧವೆಯು ತಾನು ಮುತ್ತೈದೆಯಾಗಿದ್ದಾಗ ಬಯಸುತ್ತಿದ್ದಂಥ ವಸ್ತುಗಳನ್ನು ಈಗ ವಿದ್ವಾಂಸರಾದ ಬ್ರಾಹ್ಮಣರಿಗೆ ದಾನ ಮಾಡಬೇಕು || ೨೪ || ಮತ್ತು ವೈಶಾಖ, ಕಾರ್ತೀಕ, ಮಾಘ ಮಾಸಗಳಲ್ಲಿ ಪ್ರಾತಃಕಾಲಕ್ಕೆ ಅನೇಕ ತೀರ್ಥಗಳಲ್ಲಿ ಸ್ನಾನ ಮಾಡಬೇಕು ವಿಷ್ಣು ಸ್ಮರಣ ಮಾಡಬೇಕು ಅಶಕ್ಯವಾದರೆ ಮನೆಯಲ್ಲಾದರೂ ಮಾಡಬೇಕು. ಆದರಿಂದ ವಿಶೇಷ ಫಲವು ಬರುವದು. || ೨೫ || ವೈಶಾಖದಲ್ಲಿ ಜಲಕುಂಭ ದಾನವನ್ನೂ ಕಾರ್ತೀಕದಲ್ಲಿ ಘೃತದಾನವನ್ನೂ ದಕ್ಷಿಣೆ ಸಹಿತ ದಾನ ಮಾಡಬೇಕು. ಮತ್ತು ಕಾರ್ತೀಕದಲ್ಲಿ ದೀಪದಾನ ಮಾಡಿ, ದೇವರಿಗೆ ದೀಪಾರಾಧನ ಮಾಡಬೇಕು. || ೨೬ || ವೈಶಾಖ ಮಾಸದಲ್ಲಿ ಅರಣ್ಯದಲ್ಲಿ ನಿರ್ಮಲೋದಕದ ಅರವಟ್ಟಿಗೆಯನ್ನಿಡಬೇಕು. ಮಾಘ ಮಾಸದಲ್ಲಿ ಬ್ರಾಹ್ಮಣರಿಗೆ ಎಳ್ಳು-ತುಪ್ಪಗಳನ್ನು ದಾನ ಕೊಟ್ಟಮೇಲೆ ದಕ್ಷಿಣೆಯನ್ನು ಕೊಡಬೇಕು. || ೨೭ || ಶ್ರಾವಣ, ಕಾರ್ತೀಕ, ಮಾಘ ಮಾಸಗಳಲ್ಲಿ ಶಿವಾಲಯಕ್ಕೆ ಹೋಗಿ ಆ ಈಶ್ವರನ ಮೇಲೆ ಧಾರಾರೂಪವಾಗಿ ನಿರ್ಮಲೋದಕವು ಬೀಳುವಂತೆ ಈಶ್ವರನಿಗೆ ಅಭಿಷೇಕ ಮಾಡಿ ಗಂಧ-ಪುಷ್ಪ-ಪರಿಮಳ ದ್ರವ್ಯಗಳಿಂದ ಪೂಜಿಸಿದರೆ ಅಗಾಧ ಪುಣ್ಯ ಬರುವದು || ೨೮ || ಆ ಮಾಸಗಳಲ್ಲಿ ವಿಧವೆಯರು ತಮ್ಮ ಶಕ್ತ್ಯಾನುಸಾರ ಬ್ರಾಹ್ಮಣರ ಮನೆಗಳಿಗೆ ನೀರು ಹಾಕಬೇಕು. ಭೋಜನ ಕಾಲಕ್ಕೆ ಬಂದ ಅತಿಥಿಗಳಿಗೆ ನಿಶ್ಚಯವಾಗಿ ಊಟಕ್ಕೆ ಹಾಕಬೇಕು || ೨೯ || ತೀರ್ಥಯಾತ್ರೆಗಳಿಗೆ ಹೋಗುವ ಜನರಿಗ ಛತ್ರ ಮತ್ತು ಪಾದುಕೆಗಳನ್ನು ಕೊಡಬೇಕು. ಯಾತ್ರಿಕರು ಮನೆಗೆ ಬಂದರೆ ಅವರ ಪಾದಪ್ರಕ್ಷಾಲನ ಮಾಡಬೇಕು. || ೩೦ || ಮತ್ತು ಅವರಿಗೆ ಬೀಸಣಿಕೆಯಿಂದ ಗಾಳಿಯನ್ನು ಹಾಕಿ, ಉಟ್ಟುಕೊಳ್ಳಲಿಕ್ಕೆ ವಸ್ತ್ರವನ್ನು ಕೊಟ್ಟು, ಗಂಧ, ಸುಗಂಧದ್ರವ್ಯ, ತಾಂಬೂಲ, ಪಚ್ಚಕರ್ಪೂರಯಾಲಕ್ಕಿಗಳನ್ನು ಕೊಡಬೇಕು. || ೩೧ || ಶಕ್ತಿಯಿದ್ದಪ್ರಕಾರ ಜಲಪಾತ್ರೆಯನ್ನು ದಾನ ಮಾಡಬೇಕು. ಬೆಲ್ಲದ

ಹಾಗೂ ಮಾವಿನ ಪಾನಕಗಳನ್ನೂ ದ್ರಾಕ್ಷಿಯ ಮತ್ತು ಬಾಳೆಯ ಹಣ್ಣುಗಳನ್ನೂ ಬ್ರಾಹ್ಮಣರಿಗೆ ಕೊಡಬೇಕು. ||೩೨|| ಪ್ರತಿಯೊಂದು ದಾನ ಕೊಡುವಮುಂದೆ ವಿಧವೆಯರು ಪತಿಯನ್ನು ನೆನಿಸಿ ಆತನ ಹೆಸರಿನಿಂದ ಸಂಕಲ್ಪ ಮಾಡಿ ದಾನ ಕೊಡಬೇಕು || ೩೩ || ವಿಧವೆಯರು ಕಾರ್ತೀಕ ಮಾಸದಲ್ಲಿ ಜವೆಯ ಅನ್ನ ಉಣಬೇಕು. ಅಥವಾ ಏಕಾನ್ನವನ್ನುಣಬೇಕು. ಬದನೇಕಾಯಿ, ಉದ್ದು, ಇಂಗು, ಉಪ್ಪು, ಎಣ್ಣೆ, ಜೇನುತುಪ್ಪಗಳನ್ನು ತಿನ್ನ ಬಾರದು. || ೩೪ || ವಿಧವೆಯರು ಕಂಚಿನ ಪಾತ್ರೆಯನ್ನೂ ದ್ವಿದಲ ಧಾನ್ಯವನ್ನೂ ಬಿಟ್ಟು ಈ ಪ್ರಕಾರ ಏಕಚಿತ್ತ ದಿಂದ ಪವಿತ್ರರಾಗಿರಬೇಕು. || ೩೫ || ಮುತ್ತಲೆಲೆಯಲ್ಲಿ ಊಟ ಮಾಡಬೇಕು. ಮತ್ತು ಶುಚಿಯಿಂದ ತಾನು ಮಾಡಿದಂಥ ವ್ರತಗಳ ಉದ್ಯಾಪನೆ ಮಾಡಬೇಕು. | ೩೬ || ಆಯಾ ವ್ರತಗಳ ಪ್ರಕಾರ ಉದ್ಯಾಪನೆ ಮಾಡಿ, ಪವಿತ್ರವಾಗಿ ಬ್ರಾಹ್ಮಣರಿಗೆ ಕಂಚಿನ ಪಾತ್ರೆಯತುಂಬ ತುಪ್ಪವನ್ನು ಕೊಡಬೇಕು. ಮತ್ತು ಆವಳು ಭೂಶಯನ ವ್ರತ ಮಾಡಿದ್ದರೆ ಬ್ರಾಹ್ಮಣರಿಗೆ ಮಂಚವನ್ನು ಕೊಡಬೇಕು. || ೩೭ || ವ್ರತದ ಕಾಲಕ್ಕೆ ಬಿಟ್ಟ ವಸ್ತುಗಳನ್ನು ಈ ಉದ್ಯಾಪನೆ ಕಾಲಕ್ಕೆ ದಾನ ಮಾಡಬೇಕು ಹಾಲು-ಮೊಸರು ಮುಂತಾದ ರಸದ್ರವ್ಯಗಳನ್ನು ಒಂದು ತಿಂಗಳು ಬಿಡಬೇಕು || ೩೮ || ಈ ಪ್ರಕಾರ ಉದ್ಯಾಪನೆ ಮಾಡಿ ಸಾಲಂಕೃತ ಗೋದಾನ ಮಾಡಬೇಕು. ವ್ರತದ ಕಾಲಕ್ಕೆ ಬಿಟ್ಟ ದಧಿ-ಕ್ಷೀರಗಳ ಉದ್ಯಾಪನೆಯನ್ನು ಅವಶ್ಯವಾಗಿ ಮಾಡಬೇಕು || ೩೯ || ಇನ್ನೂ ಅನೇಕ ವಿಶೇಷ ವಾದ ವ್ರತಗಳಿರುತ್ತವೆ ಅವುಗಳಲ್ಲಿ ದೀಪದಾನವು ಎಲ್ಲಕ್ಕೂ ಶ್ರೇಷ್ಠವಾದದ್ದು ಎಲೈ ದೇವತೆಗಳೇ ಕೇಳಿರಿ. ಆದರ ಮಹಿಮೆಯು ಅನಂತವಾಗಿರುವದು. ಶಕ್ತಿವಂತರು ಕಾರ್ತೀಕ ಮಾಸದಲ್ಲಿ ಪ್ರತಿದಿವಸ ದೀಪದಾನ ಕೊಡ ಬೇಕು. || ೪೦ || ಉಳಿದ ಯಾವತ್ತೂ ದಾನ-ಧರ್ಮಗಳು ದೀಪದಾನ ಪುಣ್ಯದ ೧೬ನೇ ಭಾಗದ ಪುಣ್ಯಕ್ಕೆ ಸರಿಯಾಗುವವು. ಆದ್ದರಿಂದ ಸರ್ವರೂ ಅನಂತ ಫಲವುಳ್ಳ ದೀಪದಾನ ಮಾಡಬೇಕು || ೪೧ || ಮಾಘ ಮಾಸದಲ್ಲಿ ದಿನಾಲು ಭಕ್ತಿಯಿಂದ ಸೂರ್ಯೋದಯಕ್ಕೆ ಸರಿಯಾಗಿ ೧ ತಿಂಗಳು ಸ್ನಾನ ಮಾಡಬೇಕು. || ೪೨ || ಆಗ ಉಂಡಿ, ಎಳ್ಳು ಮತ್ತು ಉತ್ತತ್ತಿಗಳು ಕೂಡಿದ ಪಕ್ವಾನ್ನಗಳನ್ನು ಮಾಡಿ ಭಕ್ತಿಯಿಂದ ದಕ್ಷಿಣೆ ಸಹಿತ ಬ್ರಾಹ್ಮಣ

ರಿಗೆ ಕೊಡಬೇಕು. ॥ ೪೩ ॥ ಸಕ್ಕರಿ, ಯಾಲಕ್ಕಿ, ಮೆಣಸು, ಕೊಬ್ಬರಿಗಳಿಂದ ಕೂಡಿದ ಅಪೂಪಗಳನ್ನು ತುಪ್ಪದಲ್ಲಿ ಕರಿದು ಯತಿಗಳಿಗೆ ದಾನ ಕೊಟ್ಟು ಅವರಿಗೆ ಭೋಜನ ಮಾಡಿಸಬೇಕು. ॥ ೪೪ ॥ ಚಳಿಗಾಲದಲ್ಲಿ ಬ್ರಾಹ್ಮಣರಿಗೆ ಶೀತ ನಿವಾರಣೆಗಾಗಿ ವಸ್ತ್ರಗಳನ್ನು ಮತ್ತು ನೀರು ಕಾಸಲಿಕ್ಕೆ ಕಟ್ಟಿಗೆಗಳನ್ನೂ ಕೊಡಬೇಕು. ॥ ೪೫ ॥ ಉತ್ತಮ ಬ್ರಾಹ್ಮಣರು ಮಲಗಲಿಕ್ಕೆ ಮಂಚವನ್ನೂ, ಚಿತ್ರತರವಾದ ಕೆಂಪು ವಸ್ತ್ರ, ಕಂಬಳಿಗಳನ್ನೂ ಕೊಡಬೇಕು. ॥ ೪೬ ॥ ಮತ್ತು ಅವರಿಗೆ ಬಿಸಿ ಬಿಸಿ ಔಷಧಗಳನ್ನು ಯಾಲಕ್ಕಿ, ಲಾವಂಗ ಸಹಿತವಾದ ಪರಿಪೂರ್ಣ ತಾಂಬೂಲವನ್ನು ಕೊಡಬೇಕು. ॥ ೪೭ ॥ ಒಂದು ವರುಷದ ಸಾಮುಗ್ರಿ ಸಹಿತವಾದ ಗ್ರಹದಾನ ಮಾಡಬೇಕು. ಮತ್ತು ತೀರ್ಥ ಯಾತ್ರೆಗೆ ಹೋಗುವವರಿಗೆ ಪಾದರಕ್ಷಾಗಳನ್ನು ಕೊಡಬೇಕು. ॥ ೪೮ ॥ ಹೂವು, ಗಂಧ, ಪರಿಮಳ ದ್ರವ್ಯಗಳಿಂದ ವಿಷ್ಣುವನ್ನು ಪೂಜಿಸಬೇಕು. ರುದ್ರದಿಂದ ಶ್ರೀಶಂಕರನಿಗೆ ವಿಧಿಪ್ರಕಾರ ಅಭಿಷೇಕ ಮಾಡಿ, ॥ ೪೯ ॥ ಧೂಪ, ದೀಪ, ನೈವೇದ್ಯಗಳಿಂದ ಷೋಡಶೋಪಚಾರ ಪೂಜೆ ಮಾಡಿ ಶಂಕರನಿಗೆ ಪ್ರೀತಿಯಾದ ದೀಪಾರಾಧನೆ ಮಾಡಬೇಕು. ॥ ೫೦ ॥ ಮತ್ತು ಆ ಗೌರೀಹರನಿಗೆ ಬೇರೆ ಸುಗಂಧ ಗಂಧದಿಂದಲೂ ಕರ್ಪೂರ, ಲಾವಂಗ, ಯಾಲಕ್ಕಿ, ಮೊದಲಾದವುಗಳಿಂದ ಕೂಡಿದ ವಿಧಿಪ್ರಕಾರವಾದ ತಾಂಬೂಲವನ್ನೂ ಭಕ್ತಿಭಾವದಿಂದ ಅರ್ಪಿಸಬೇಕು. ॥ ೫೧ ॥ ವಿಧವೆಯು ತನ್ನ ಪತಿಯನ್ನು ಮನಸಿನಲ್ಲಿ ಧ್ಯಾನಿಸಿ, ಅವನೇ ಶ್ರೀ ನಾರಾಯಣನೆಂದು ತಿಳಿದು, ಭಕ್ತಿಯಿಂದಲೂ ಏಕಮನಸಿನಿಂದಲೂ ಪೂಜಿಸಬೇಕು. ॥ ೫೨ ॥ ಎಲೈ ದೇವತೆಗಳಿರಾ, ವಿಧವೆಯರು ಈ ಪ್ರಕಾರ ನೇಮದಿಂದಲ್ಲದೆ ಮತ್ತೂ ಕೆಲವು ನೇಮದಿಂದಿರಬೇಕು. ವಿಧವೆಯು ಎತ್ತಿನ ಮೇಲೆ ಕೂಡ್ರಬಾರದು. ಕುಪ್ಪುಸ ತೊಡಬಾರದು. ಬಿಳೇ ವಸ್ತ್ರವನ್ನುಡಬೇಕು. ॥ ೫೩ ॥ ಕೆಂಪು, ಕಪ್ಪು, ಚಿತ್ರಮಯ ವಸ್ತ್ರಗಳನ್ನುಟ್ಟರೆ ಮಹಾ ದೋಷವು ಬರುವದು. ಮತ್ತೆ ಬೇರೆ ವ್ರತವೇನಂದರೆ ವಿಧವೆಯು ಮಗನ ಮಾತಿನಂತೆ ನಡೆಯಬೇಕು. ಯಾಕಂದರೆ ॥ ೫೪ ॥ "ಆತ್ಮಾವೈ ಪುತ್ರನಾಮ" ಅಂದರೆ ಪತಿಯು ತಾನೇ ಪುತ್ರ ರೂಪದಿಂದ ಹುಟ್ಟುವನೆಂದು ವೇದಾಗಮಗಳು ಹೇಳುವವು. ॥ ೫೫ ॥ ಈ ಪ್ರಕಾರ ವಿಧವೆಯರ ಆಚಾರಗಳಿರುತ್ತವೆಂದು ವೇದ-ಶಾಸ್ತ್ರ-ಪುರಾಣಗಳಲ್ಲಿ ಹೇಳಿದೆ.

ವಿಧವೆಯು ಈ ಪ್ರಕಾರ ಆಚರಣೆಯಿಂದ ನಡೆದರೆ ಅವಳಿಗೆ ಸಹಗಮನದ ಫಲವು ಬರುವದು. ॥ ೫೬ ॥ ಪಾಪಿಯಾದ ಪತಿಯು ಮೃತನಾಗಿ ನರಕದಲ್ಲಿದ್ದು ಅತಿ ದುಃಖವನ್ನು ಅನುಭವಿಸುತ್ತಿರುತ್ತಾನೆ. ॥ ೫೭ ॥ ಆದರೆ ಅವನ ಸತಿಯು ತನ್ನ ವಿಧವಾ ಧರ್ಮದಂತೆ ನಡೆದು ಸಾಯಲು ಅವಳು ತನ್ನ ಪತಿಯೊಡನೆ ಸ್ವರ್ಗಕ್ಕೆ ಹೋಗುವಳು. ॥೫೮॥ ಈ ಪ್ರಕಾರ ಬೃಹಸ್ಪತಿಯು ದೇವತೆಗಳಿಗೆ ಸ್ತ್ರೀಯರ ಯಾವತ್ತೂ ಧರ್ಮಗಳನ್ನು ಹೇಳಿ ಪತಿವ್ರತಾ ಶಿರೋಮಣಿಯಾದ ಲೋಪಾಮುದ್ರೆಯನ್ನು ಸ್ತುತಿ ಮಾಡಿ ॥ ೫೯ ॥ ಮತ್ತೆ— ಎಲ್ಲೈ ದೇವತೆಗಳೇ ಕೇಳಿರಿ. ಇಂಥ ಪತಿವ್ರತೆಯಾದ ಸ್ತ್ರೀಯು ಸಮಸ್ತ ಭಾಗೀರಥಿ ಸಮಾನವಾಗಿರುವಳು. ಆಕೆಯ ಪತಿಯು ಶ್ರೀಶಂಕರನ ಸಮಾನವು. ಅಂಥ ಪತಿ-ಪತ್ನಿಯರನ್ನು ಸರ್ವರೂ ಪೂಜಾ ಮಾಡತಕ್ಕದ್ದು. ಆದ್ದರಿಂದ ಈಗ ನಾವು ಸರ್ವ ಭಾಗೀರಥೀ ಸಮಾನಳಾದ ಲೋಪಾಮುದ್ರೆಯನ್ನು ಶ್ರೀಶಂಕರನ ಸಮಾನರಾದ ಅಗಸ್ತ್ಯರನ್ನೂ ಪೂಜಿಸಬೇಕು ಎಂದು ಅಂದನು. ॥ ೬೦ ॥ ಎಂದು ಆ ಯೋಗಿವರ್ಯರು ಆ ಸತಿಗೆ ಹೇಳಿ ಮತ್ತೆ— ಎಲೌ ಬಾಲೇ, ನಿನಗೆ ಸಹಗಮವಿದಾನ, ಹಾಗೂ ವಿಧವಾ ಆಚರಣೆ ಇವೆರಡನ್ನು ಹೇಳಿದೆನು. ಇವೆರಡರಲ್ಲಿ ನಿನ್ನ ಪ್ರೀತಿಗೆ ಬಂದದ್ದನ್ನು ಮಾಡು. ॥ ೬೧ ॥ ಇವೆರಡೂ ಪರಲೋಕ ಸಾಧನಗಳು. ಇನ್ನು ನೀನು ಯಾವತ್ತು ದುಃಖವನ್ನು ಬಿಟ್ಟು, ನನ್ನ ಮಾತಿನಮೇಲೆ ವಿಶ್ವಾಸವಿಟ್ಟು ಈಗ ನಿನಗೆ ಹೇಳಿದಂಥ ಪರಲೋಕ ಸಾಧನಗಳಂತೆ ನಡೆ. ॥ ೬೨ ॥ ಒಂದು ವೇಳೆ ನಿನಗೆ ಧೈರ್ಯವಿದ್ದರೆ ಗಂಡನ ಸಂಗಡ ಸಹಗಮನ ಮಾಡು. ಇಲ್ಲವೆ ವಿಧವಾ ಧರ್ಮದಂತೆ ನಡೆಯುತ್ತಿದ್ದರೆ ಆದರಂತೆ ನಡೆ. ಅದು ಇದಕ್ಕಿಂತ ಪುಣ್ಯಕರವು. ॥ ೬೩ ॥ ಅವ್ವಾ, ಇವೆರಡರಲ್ಲಿ ನಿನಗೆ ಇಷ್ಟವಾದದ್ದನ್ನು ಹೇಳು ಎಂದು ಒಳ್ಳೆ ಪ್ರೇಮದಿಂದ ಆಕೆಯ ತಲೆಯಮೇಲೆ ವರದ ಹಸ್ತವನ್ನಿಟ್ಟು ಕೇಳಿದರು. ॥ ೬೪ ॥ ಅವರ ಮಾತು ಕೇಳಿದ ಕೂಡಲೆ ಆ ಸತಿಯು ಆ ಯೋಗಿಗಳ ಪಾದಗಳಲ್ಲಿ ಮಸ್ತಕವನ್ನಿಟ್ಟು ನಮಿಸಿ ಭಕ್ತಿಭಾವದಿಂದಲೂ ಕರುಣಾ ಸ್ವರದಿಂದಲೂ ವಿನಂತೀ ಮಾಡಿಕೊಂಡಳು. ॥ ೬೫ ॥ ಜಯ ಜಯ ಯೋಗೀಶ್ವರರೇ ನೀವೇ ನನಗೆ ತಂದೆ-ತಾಯಿ ಸಹೋದರರೂ ಮತ್ತು ನನ್ನ ಮನೋಹರವಾದ ಪ್ರಾಣವೂ ಆಗಿದ್ದೀರಿ. ॥ ೬೬ ॥ ಸ್ವಾಮೀ, ನಾನು

ಈ ಪತಿಯನ್ನು ಕರಕೊಂಡು ಪರದೇಶಕ್ಕೆ ಬಂದೆನು. ಇಲ್ಲಿ ನನ್ನ ಹತ್ತರ ಬಂಧುಗಳೂ ಅಣ್ಣತಮ್ಮಂದಿರೂ ಯಾರೂ ಇಲ್ಲ. ಈಗ ತಾವು ನನಗೆ ದರ್ಶನ ಕೊಟ್ಟು ಒಳ್ಳೇ ಪ್ರೀತಿಯಿಂದ ನನ್ನ ಅಂತ್ಯಕಾಲದಲ್ಲಿ ಪರಮಾರ್ಥ ಜ್ಞಾನವನ್ನು ಹೇಳಿದಿರಿ. ॥ ೬೭ ॥ ಈಗ ತಾವು ಹೇಳಿದಂಥ ಎರಡು ಧರ್ಮಗಳಲ್ಲಿ ವಿಧವಾ ಆಚಾರಗಳು ಬಹು ಕಷ್ಟಕರವಾದವು ಅದರಂತೆ ನಡೆಯಲಿಕ್ಕೆ ನನಗೆ ಶಕ್ಯವಾಗುವದಿಲ್ಲ ದಯಾನಿಧಿಯೇ ಅವು ಬಹಳ ಅಸಾಧ್ಯವಾದವುಗಳೂ ಇರುತ್ತವೆ ॥ ೬೮ ॥ ಸ್ವಾಮೀ, ಈಗ ನನಗೆ ತಾರುಣ್ಯವಿದ್ದು, ನನ್ನ ದೇಹವು ಸುಂದರವಾಗಿರುವದು. ಆದ್ದರಿಂದ ಈಗಿನ ಕಾಲದಲ್ಲಿ ನನಗೆ ಏನಾದರೂ ನಿಂದಾ ಅಪವಾದಗಳು ಬಂದಾವು, ॥ ೬೯ ॥ ಸಹಗಮನದಿಂದ ಅತಿಶಯ ಪುಣ್ಯ ಬರುತ್ತದೆಂದಬಳಿಕ ನಾನು ಸಂತೋಷದಿಂದ ಸಹಗಮನವನ್ನೇ ಮಾಡಿ ನಿಶ್ಚಯವಾಗಿ ನನ್ನ ಪತಿಯಸಂಗಡ ಹೋಗುವೆನು ॥ ೭೦ ॥ ಎಂದು ವಂದಿಸಿ ಅವರ ಚರಣಗಳಮೇಲೆ ಮಸ್ತಕವನ್ನಿಟ್ಟು— ಸ್ವಾಮೀ, ನಾನು ಈ ಭವಸಾಗರದಲ್ಲಿ ಮುಳುಗುತ್ತೇನೆ ನನ್ನನ್ನು ರಕ್ಷಿಸಿರಿ! ರಕ್ಷಿಸಿರಿ! ಎಂದು ಬೇಡಿಕೊಂಡಳು. ॥ ೭೧ ॥ ಎಲೈ ನಾಮಧಾರಕಾ ಆಗ ದಯಾನಿಧಿಯಾದ ಆ ಯೋಗೀಶ್ವರರು ಆಕೆಯನ್ನು ಎಬ್ಬಿಸಿ,— ಎಲೈ ಸತಿಯೇ ನೀನು ಸಹಗಮನವನ್ನು ಮಾಡಿ ಪತಿಯಸಂಗಡ ಹೋಗು ಎಂದು ಅಭಯವನ್ನು ಕೊಟ್ಟು. ॥ ೭೨ ॥ ಅವ್ವಾ ನೀನು ನಿನ್ನ ಗಂಡನು ಹೋದಸ್ಥಳಕ್ಕೆ ಸಂತೋಷದಿಂದ ಹೋಗತಕ್ಕದ್ದೆಂದು ಹೇಳಿದೆನಲ್ಲದೆ ಮತ್ತು ನಿನಗೆ ಇನ್ನೊಂದು ವಿಶೇಷವಾದ ಸಂಗತಿಯನ್ನು ಹೇಳುವೆನು ಅದನ್ನು ಸಂತೋಷದಿಂದ ಕೇಳು ॥ ೭೩ ॥ ಶ್ರೀ ಗುರುಗಳ ದರ್ಶನದಿಂದ ನಿನ್ನ ಪತಿಗೆ ಆರೋಗ್ಯವಾದೀತೆಂದು ನಂಬಿ ನೀನು ಭಕ್ತಿಭಾವದಿಂದ ಶ್ರೀಗುರು ದರ್ಶನಕ್ಕಾಗಿ ಇಲ್ಲಿಗೆ ಬಂದೆ. ॥ ೭೪ ॥ ಆದರೆ ಬ್ರಹ್ಮಲಿಖಿತದಂತೆ ಆಗುವದಾಯಿತು. ಕಾಲನನ್ನು ಗೆದ್ದವರ್‍ಯಾರೂ ಇಲ್ಲ. ಈಶ್ವರನ ಇಚ್ಛೆಯಂತೆ ಎಲ್ಲವೂ ಆಗುತ್ತದೆ ॥ ೭೫ ॥ ಬ್ರಹ್ಮಲಿಖಿತವು ಎಂದೂ ತಪ್ಪುವದಿಲ್ಲ ನಾವು ಏನೇನು ಭೋಗಿಸಬೇಕೆಂದು ಹಣೆಯಲ್ಲಿ ಬರೆದಿರುತ್ತದೋ ಅದು ಆಯಾಕಾಲಕ್ಕೆ ಒದಗಿಬರುತ್ತದೆಂದು ವೇದ ವಚನವದೆ. ಆದ್ದರಿಂದ ಯಾರೂ ದುಃಖಿಸಬಾರದು ॥ ೭೬ ॥ ನೋಡು ರಾಜನಾದ ಹರಿಶ್ಚಂದ್ರನು ಹೊಲೆಯನ ಆಳಾಗಿ ಅವನ

ಮನೆಯಲ್ಲಿ ನೀರು ಹೊತ್ತನು. ಯಾರಿಂದಲೂ ಜಯಿಸಲಿಕ್ಕಾಗದ ಬಲಿಚಕ್ರವರ್ತಿಯು ಪಾತಾಳಕ್ಕೆ ಹೋದನು. ||೭೭|| ಆರು ಕೋಟಿ ವರ್ಷಗಳವರೆಗೆ ಆಯುಸ್ಸುಳ್ಳ ರಾವಣನು ಕಡೆಗೆ ಕಾಲನವಶನಾದನು. ಚಕ್ರವರ್ತಿಯಾದ ದುರ್ಯೋಧನನ ಗತಿ ಏನಾಯಿತು ಕೇಳಿಲ್ಲವೇ ? ||೭೮|| ಇಚ್ಛಾಮರಣಿಯಾದ ಭೀಷ್ಮನು ಸಹ ರಣರಂಗದಲ್ಲಿ ಬೀಳಲಿಲ್ಲವೇ? ಪರೀಕ್ಷಿತರಾಜನು ಸರ್ಪಭಯದಿಂದ ಅಡಗಿಕೊಂಡು ಕೂತರೂ ಕಡೆಗೆ ಆವನಿಗೆ ಸಾವು ತಪ್ಪಿತೇನು ? ||೭೯|| ಇವತ್ತಿನವರೆಗೆ ಈ ಭೂಮಿಯಲ್ಲಿ ಪರಮಾತ್ಮನ ಅನೇಕ ಅವತಾರಗಳಾಗಿದ್ದರೂ ಅವು ಒಂದೂ ಉಳಿದಿಲ್ಲ. ಈ ಪ್ರಕಾರ ದೇವ-ದಾನ ಮೊದಲಾದವರೆಲ್ಲರೂ ಕಾಲಾಧೀನರಾಗುವರು ||೮೦|| ಆದ್ದರಿಂದ ಈ ಭೂಮಿಯಲ್ಲಿ ಕಾಲವನ್ನು ಗೆದ್ದವರು ಯಾರೂ ಇಲ್ಲ ಸಕಲ ದೇವ-ದಾನವರನ್ನು ಮಾತ್ರ ನಿಶ್ಚಯವಾಗಿ ಕಾಲನು ಗೆದ್ದನು. ||೮೧|| ಒಬ್ಬ ಗುರುಗಳ ಹೊರತು ಕಾಲನನ್ನು ಗೆದ್ದವರು ಯಾರೂ ಇಲ್ಲ ಯಾರ ಮನಸ್ಸಿನಲ್ಲಿ ಶ್ರೀ ಗುರುಗಳಮೇಲೆ ನಿಶ್ಚಯವಾದ ಭಕ್ತಿ ಇರುತ್ತದೋ ಅವರಿಗೆ ಇದು ಪ್ರತ್ಯಕ್ಷವಾಗಿ ತಿಳಿಯುವದು ||೮೨|| ಎಲೌ ಸತಿಯೇ, ಈಗ ನೀನು ತೀವ್ರವಾಗಿ ಸಹಗಮನದ ಸಿದ್ಧತೆಯನ್ನು ಮಾಡು ಮತ್ತು ಅಗ್ನಿಯಲ್ಲಿ ಬೀಳುವ ಸಮಯದಲ್ಲಿ ಸಂಗಮದಲ್ಲಿರುವ ಶ್ರೀ ಗುರುಗಳ ದರ್ಶನಕ್ಕೆ ಹೋಗು. ||೮೩|| ಎಂದು ಹೇಳಿ ಆ ಯೋಗಿವರ್ಯರು ತಮ್ಮಹತ್ತಿರದ್ದ ಭಸ್ಮವನ್ನು ತೆಗೆದು ಆ ಪ್ರೇತದ ಹಣೆ ಮೊದಲಾದವುಗಳಿಗೆ ಹಚ್ಚಿ, ನಾಲ್ಕು ರುದ್ರಾಕ್ಷಿಗಳನ್ನು ಆಕೆಯ ಕೈಯಲ್ಲಿ ಕೊಟ್ಟು, ||೮೪||— ಇವುಗಳಲ್ಲಿ ಎರಡನ್ನು ಪ್ರೇತನ ಕಂಠದಲ್ಲಿಯೂ ಉಳಿದ ಎರಡನ್ನು ಕಿವಿಗಳಲ್ಲಿಯೂ ಕಟ್ಟಿ ದಹನಮಾಡು ||೮೫|| ನಿನಗೆ ಇನ್ನೊಂದು ಮಾತು ಹೇಳುವೆನು ಕೇಳು. ಈಗ ನೀನು ಮೊದಲು ಸಂಗಮದಲ್ಲಿರುವ ಗುರು ದರ್ಶನಕ್ಕೆ ಸಹಜವಾಗಿ ಹೋಗು, ಅಲ್ಲಿ ಬ್ರಾಹ್ಮಣರು ರುದ್ರಸೂಕ್ತವನ್ನು ಹೇಳಿ ಶ್ರೀ ಗುರುಚರಣಗಳಿಗೆ ಅಭಿಷೇಕ ಮಾಡುತ್ತಿರುವರು ||೮೬|| ನೀನು ಭಕ್ತಿಯಿಂದ ಆ ತೀರ್ಥವನ್ನು ತಕ್ಕೊಂಡು ಮೊದಲು ನಿನ್ನ ದೇಹದಮೇಲೆ ಪ್ರೋಕ್ಷಿಸಿಕೋ, ಆಮೇಲೆ ಆ ತೀರ್ಥವನ್ನು ತಕ್ಕೊಂಡು ಬಂದು ಈ ಪ್ರೇತಕ್ಕೂ ಪ್ರೋಕ್ಷಿಸು. ||೮೭|| ಆಮೇಲೆ ಅನೇಕ ದ್ರವ್ಯಗಳನ್ನು ಹಾಕಿ ಹರ್ಷದಿಂದ ಮುತ್ತೈದೆಯರಿಗೆ

ಬಾಗಿಣಗಳನ್ನು ಕೊಟ್ಟು, ಬ್ರಾಹ್ಮಣರು ಸಂತೋಷವಾಗುವಂತೆ ಅವರಿಗೂ ಬಹು ದ್ರವ್ಯವನ್ನು ಕೊಡು. ಆಮೇಲೆ ಸಹಗಮನಕ್ಕೆ ಹೋಗು. || ೮೮ || ಎಂದು ಆ ಯೋಗಿಗಳು ಆ ಸ್ತ್ರೀಯಳಿಗೆ ಹೇಳಿ ಹೊರಟುಹೋದರು. ಆಗ ಆ ಪತಿವ್ರತೆಯು, ಅವರು ಹೇಳಿದಂತೆ ಸಹಗಮನದ ಸಿದ್ಧತೆಯನ್ನು ಮಾಡಿದಳು. || ೮೯ || ಆಮೇಲೆ ಉತ್ತಮ ಬ್ರಾಹ್ಮಣರನ್ನು ಕರೆದು, ಷೋಡಶ ಕರ್ಮಗಳನ್ನು ಮಾಡಿ, ಪ್ರೇತಕ್ಕೆ ಪ್ರಾಯಶ್ಚಿತ್ತವನ್ನು ಕೊಟ್ಟು; ಔಪಾಸನ ವನ್ನು ಮಾಡುವವಳಾದಳು. || ೯೦ || ಹ್ಯಾಗಂದರೆ ಅವಳು ಎರಕೊಂಡು, ಪೀತಾಂಬರವನ್ನುಟ್ಟು, ಸರ್ವಾ ಭರಣಗಳನ್ನಿಟ್ಟುಕೊಂಡು, ಅರಿಷಿಣ-ಕುಂಕುಮ ಕಾಡಿಗೆ ಮೊದಲಾದವುಗಳನ್ನು ಹಚ್ಚಿಕೊಂಡು || ೯೧ || ಆಮೇಲೆ ವಿಧಿಪ್ರಕಾರ ಪ್ರೇತಕ್ಕೆ ಔಪಾಸನ ಮಾಡಿ ಸಿದಿಕೆಯಮೇಲೆ ಆ ಪ್ರೇತವನ್ನು ಕಟ್ಟಿಕೊಂಡು || ೯೨ || ಬಹು ಆನಂದದಿಂದ ಕೈಯಲ್ಲಿ ಬೆಂಕಿಯನ್ನು ಹಿಡಕೊಂಡು ಆ ಪ್ರೇತದ ಮುಂದೆ ಮುಂದೆ ನಡೆಯುತ್ತ ನದಿಯಕಡೆ ಹೋಗಹತ್ತಿದಳು. || ೯೩ || ೧೬ ವರುಷದ ತರುಣಿಯೂ ಒಳ್ಳೇ ಸುಂದರಲಾವಣ್ಯವತಿಯೂ ಆದ ಅವಳು ಸರ್ವಾಭರಣಗಳಿಂದ ಭೂಷಿತಳಾದ್ದರಿಂದ ಲಕ್ಷ್ಮೀದೇವಿಯಂತೆ ಕಾಣುತ್ತಿದ್ದಳು. || ೯೪ || ಆಗ ಆ ಗಾಣಗಾಪುರದ ನಾಲ್ಕುಸಾವಿರ ಸ್ತ್ರೀಯರು ಆ ಪತಿವ್ರತೆಯು ಸಹಗಮನಕ್ಕೆ ಹೋಗುವದನ್ನು ನೋಡಲಿಕ್ಕೆ ಬಂದು— ಇವಳೇ ಸತ್ಯವಾದ ಪತಿವ್ರತೆಯು ಎಂದು ತಲೆದೂಗುತ್ತಿದ್ದರು. || ೯೫ || ಅವರಲ್ಲಿ ಕೆಲವರು— ಆಹಾ! ಏನಾಶ್ಚರ್ಯ ವಿದು! ಈಕೆಯು ಚಿಕ್ಕ ತರುಣಿಯು! ಈಕೆಯ ಪೂರ್ವಾರ್ಜಿತ ಕರ್ಮವು ಎಂಥಾದ್ದೋ! ತಿಳಿಯದು! ಈಗ ಪತಿಯಸಂಗಡ ಸಹಗಮನಕ್ಕೆ ಹೋಗುತ್ತಿರುವಳಲ್ಲಾ! || ೯೬ || ಈಕೆಯು ಪತಿಯ ಸುಖವನ್ನು ಎಳ್ಳಷ್ಟಾದರೂ ಹೊಂದಿಲ್ಲ! ಮಕ್ಕಳನ್ನು ಹಡೆದಿಲ್ಲ! ಹೀಗಿದ್ದರೂ ಆನಂದದಿಂದ ಹೋಗುವಳಲ್ಲಾ! ಈಕೆಯ ಜೀವವು ಪತಿಯಲ್ಲಿ ಹ್ಯಾಗೆ ಕೂಡಿದ್ದೀತು? || ೯೭ || ಆದರೆ ಅವಳನ್ನು ಕುರಿತು— ಎಲೌ ಸ್ತ್ರೀಯಳೇ ನೀನು ಸುಮ್ಮನೆ ವ್ಯರ್ಥವಾಗಿ ಯಾಕೆ ಸಾಯುವಿ? ತಿರುಗಿ ತೌರಮನೆಗೆ ಹೋಗಿ ನಿನ್ನ ತಾಯಿ-ತಂದೆಗಳ ಹತ್ತರ ಇರು ಎಂದು ಹೇಳಬೇಕು ಎಂದೆನ್ನುತ್ತಿದ್ದರು. || ೯೮ || ಆಗ ಅಲ್ಲಿ ಬಂದ ಒಬ್ಬ ಜ್ಞಾನವಂತ ಮನುಷ್ಯನು— ಈ ಸ್ತ್ರೀಯು ನಿಜವಾದ

ಪತಿವ್ರತೆಯು! ಎಲೈ ಜಗನ್ನಾಥನೇ. ಇಲ್ಲಿ ನಿಂತಿರುವ ಈ ಯಾವತ್ತು ಸ್ತ್ರೀಯರಿಗೆ ಇದೇತರದ ಬುದ್ಧಿಯನ್ನು ಕೊಡು ಎಂದನು. ॥೯೯॥ ಮತ್ತೆ ಕೆಲವರು— ಈಕೆಯ ತಾಯಿ-ತಂದೆಗಳು ಧನ್ಯರು! ಈಕೆಯು ೪೨ ಕುಲಗಳನ್ನು ಉದ್ಧರಿಸುವಳು. ಪ್ರೇತದಮುಂದೆ ನಡೆಯುವ ಈಕೆಯ ಒಂದೊಂದು ಹೆಜ್ಜೆಗೆ ಒಂದೊಂದು ಅಶ್ವಮೇಧ ಫಲವು ಬರುವದು ಎಂದೆನ್ನುತ್ತಿದ್ದರು ॥೧೦೦॥ ಈ ಪ್ರಕಾರ ಆ ಪತಿವ್ರತೆಯು ಆ ಪ್ರೇತದೊಡನೆ ನದಿಯ ತೀರಕ್ಕೆ ಹೋಗಿ, ಅಲ್ಲಿ ಅಗ್ನಿಕುಂಡವನ್ನು ಮಾಡಿ, ಅದರಲ್ಲಿ ಕಟ್ಟಿಗೆ-ಕುಳ್ಳುಗಳನ್ನು ಹಾಕಿ, ॥೧೦೧॥ ಬೆಂಕಿಯನ್ನು ಮಾಡಿ ಆ ಕುಂಡದಹತ್ತರ ಆ ಪ್ರೇತವನ್ನಿಟ್ಟು, ಮುತ್ತೈದೆಯರನ್ನು ಕರೆದು. ॥೧೦೨॥ ಅರಿಷಿಣ-ಕುಂಕುಮ, ಕಾಡಿಗೆ, ಕುಪ್ಪುಸ, ಕಾಲಕಡಗ, ಮಂಗಳಸೂತ್ರಗಳನ್ನು ಮರದಲ್ಲಿ ಹಾಕಿ ॥೧೦೩॥ ಅವರನ್ನು ಗಂಧ-ಪುಷ್ಪಾದಿಗಳಿಂದ ಪೂಜಿಸಿ ಅಪಾರ ದಕ್ಷಿಣಾಸಹಿತ ಬಾಗಿಣಗಳನ್ನು ಕೊಟ್ಟು, ಬ್ರಾಹ್ಮಣರಿಗೂ ಅಪಾರ ದ್ರವ್ಯವನ್ನು ಕೊಟ್ಟಳು. ॥೧೦೪॥ ಆಮೇಲೆ ಹರ್ಷದಿಂದ ಯಾವತ್ತರಿಗೂ ನಮಸ್ಕಾರ ಮಾಡಿ-- ಯಾವತ್ತರೂ ಕೇಳಿರಿ, ಈಗ ನಾನು ತೌರಮನೆಗೆ ಹೋಗುತ್ತೇನೆ ನನ್ನಮೇಲೆ ನಿಮ್ಮ ಪ್ರೀತಿ ಇರಲಿ ಈಗ ನನಗೆ ಹೋಗಲಿಕ್ಕೆ ಅಪ್ಪಣೆ ಕೊಡಿರಿ ॥೧೦೫॥ ನನ್ನ ತಂದೆಯು ಶ್ರೀ ಶೂಲಪಾಣಿಯು, ನನ್ನ ತಾಯಿಯು ಶ್ರೀ ಉಮಾಗೌರಿಯು ಅವರು ನನ್ನಮೇಲೆ ಪ್ರೇಮಮಾಡಿ ಅಂತಃಕರಣದಿಂದ ನನ್ನನ್ನು ಕರೆಯುತ್ತಿರುವರು ॥೧೦೬॥ ಶ್ರಾವಣಮಾಸವೂ ದೀಪಾವಳಿಯೂ ಬಂದವು ಆದಕಾರಣ ನಾನು ಪತಿಯೊಡನೆ ಪ್ರೀತಿಯಿಂದಲೂ ನಿರ್ಮಲ ಮನಸ್ಸಿನಿಂದಲೂ ನನ್ನ ತೌರಮನೆಗೆ ಹೋಗುತ್ತೇನೆ ಪ್ರೀತಿ ಇರಲಿ, ನನಗೆ ಅಪ್ಪಣೆ ಕೊಡಿರಿ ಎಂದು ಹೇಳಿದಳು. ॥೧೦೭॥ ಆಮೇಲೆ ಊರಿಂದ ತನ್ನಸಂಗಡ ಬಂದ ಜನರನ್ನು ನೋಡಿ— ನೀವು ಇನ್ನು ತಿರುಗಿ ಊರಿಗೆ ಹೋಗಿರಿ. ॥೧೦೮॥ ನಮ್ಮ ಅತ್ತೆ-ಮಾವಂದಿರು ಕೇಳಿದರೆ ಅವರಿಗೆ ಈ ಸಂಗತಿಯನ್ನು ಹೇಳಬೇಡಿರಿ, ಹೇಳಿದರೆ ಅವರು ನಮ್ಮದೆಶೆಯಿಂದ ಪ್ರಾಣಬಿಟ್ಟಾರು, ನಿಮಗೆ ದೋಷ ಬಂದೀತು ॥೧೦೯॥ ಅವರು ಬಂದು ನಿಮ್ಮನ್ನು ಕೇಳಿದರೆ, ನಿಮ್ಮ ಮಗ ಮತ್ತು ಸೊಸೆ ಇಬ್ಬರೂ ಭೀಮಾತೀರದಲ್ಲಿರುವ ಶ್ರೀ ಗುರುಗಳ ಸನ್ನಿಧಾನದಲ್ಲಿ ಕ್ಷೇಮವಾಗಿರುವವರು. ॥೧೧೦॥

ಎಂದೂ ಮತ್ತು ಶ್ರೀ ಗುರು ದರ್ಶನಕ್ಕಾಗಿ ಬಂದೆನು. ನನ್ನ ಪತಿಗೆ ಆರೋಗ್ಯವೂ ಆಯಿತು. ನಾನು ಸಂತೋಷ ದಿಂದ ಇಲ್ಲಿಯೇ ಇರುವೆನು ಎಂದು ಮನೆಯಲ್ಲಿ ಹೇಳಿರಿ ‖ ೧೧೧ ‖ ಈ ಪ್ರಕಾರ ನಮ್ಮ ಅತ್ತೆ-ಮಾವಂದರಿಗೆ ಹೇಳಿ ಆದರಂತೆ ನಮ್ಮ ತಾಯಿ-ತಂದೆಗಳಿಗೂ ಆಪ್ತಿಷ್ಟರಿಗೂ, ನನ್ನ ಪ್ರೀತಿಯ ಗೆಳತಿಯರಿಗೂ ಹೇಳಿರಿ ಎಂದಳು. ‖ ೧೧೨ ‖ ಈ ಪ್ರಕಾರವಾದ ಆಕೆಯ ಮಾತು ಕೇಳಿ ಅಲ್ಲಿ ಬಂದ ಯಾವತ್ತೂ ಜನರು ಬಹು ದುಃಖ ಮಾಡಿದರು. ಆದರೆ ಆಗ ಆ ಪತಿವ್ರತೆಯು ಮಾತ್ರ ಆ ಪ್ರೇತದ ಹತ್ತರ ನಗೆಮೋರೆಯಿಂದ ನಿಂತಿ ದ್ದಳು. ‖ ೧೧೩ ‖ ಮತ್ತು ಆ ಅಗ್ನಿಕುಂಡದಲ್ಲಿ ಕ್ಷಣಕ್ಷಣಕ್ಕೆ ಕಟ್ಟಿಗೆ-ಕುಳ್ಳುಗಳನ್ನು ಹಾಕುತ್ತಿದ್ದಳು. ಅಷ್ಟರಲ್ಲಿ ಆಕೆಗೆ ಒಮ್ಮಿಂದೊಮ್ಮೆ ಆ ಯೋಗೀಶ್ವರರು ಹೇಳಿದ ಮಾತು ನೆನಪಾಯಿತು. ‖ ೧೧೪ ‖ ಆಗ ಅವರು ಕೊಟ್ಟ ರುದ್ರಾಕ್ಷಿಗಳಲ್ಲಿ ಎರಡನ್ನು ಆ ಪ್ರೇತದ ಕಿವಿಗಳಲ್ಲಿ, ಉಳಿದ ಎರಡನ್ನು ಕುತ್ತಿಗೆಯಲ್ಲಿ ಕಟ್ಟಿದ್ದಳು ‖ ೧೧೫ ‖ ಆಮೇಲೆ ಅಲ್ಲಿದ್ದ ಬ್ರಾಹ್ಮಣರನ್ನು ಕುರಿತು— ವಿನಯದಿಂದ ಸ್ವಾಮೀ, ಬ್ರಾಹ್ಮಣೋತ್ತಮರೇ, ಶ್ರೀ ಗುರುಗಳು ಹ್ಯಾಗಿದ್ದಾರೆಂಬದನ್ನು ನಾನು ಒಮ್ಮೆ ಕಣ್ಮುಟ್ಟ ನೋಡಬೇಕೆಂದು ನಾನು ಮನಸ್ಸಿನಲ್ಲಿ ಸಂಕಲ್ಪ ಮಾಡಿ ದ್ದೇನೆ. ‖ ೧೧೬ ‖ ಶ್ರೀ ಗುರುಗಳನ್ನು ನಾನು ಒಮ್ಮೆ ಪ್ರತ್ಯಕ್ಷವಾಗಿ ಕಂಡು, ಅವರ ಆಜ್ಞಾ ಆದಕೂಡಲೆ ತೀವ್ರವಾಗಿ ಹೊರಟು ಈ ಅಗ್ನಿಕುಂಡದ ಬಳಿಗೆ ಬರುವೆನು ಎಂದಳು. ‖ ೧೧೭ ‖ ಆಕೆಯ ಮಾತು ಕೇಳಿ ವಿದ್ವಜ್ಜನರು— ಎಲೌ ಸತಿಯೇ, ಪ್ರೇತದಹನವಾಗುವದರೊಳಗೆ ಅಸ್ತಮಾನವಾದೀತು ಆದಕಾರಣ ನೀನು ತೀವ್ರವಾಗಿ ಗುರುದರ್ಶನಕ್ಕೆ ಹೋಗಿ ತೀವ್ರವಾಗಿ ತಿರುಗಿ ಬಾ ಎಂದರು. ‖ ೧೧೮ ‖ ಆಕೆಯು ಈ ಪ್ರಕಾರ ಬ್ರಾಹ್ಮಣರ ಮಾತು ಕೇಳಿ, ಶ್ರೀಹರಿ, ಶ್ರೀಗುರು ನರಸಿಂಹಸರಸ್ವತಿ ಸ್ವಾಮಿಗಳ ದರ್ಶನಕ್ಕಾಗಿ ಸಂಗಮಕ್ಕೆ ಹೊರ ಟಳು. ‖ ೧೧೯ ‖ ಆಗ ಆ ಗ್ರಾಮದ ಸ್ತ್ರೀ-ಪುರುಷರೂ ಬ್ರಾಹ್ಮಣ ಮೇಳದವರೂ ಮನೋಹರಳಾದ ಆ ಪತಿವ್ರತಾ ಸ್ತ್ರೀಯ ಕೌತುಕವನ್ನು ನೋಡಲಿಕ್ಕೆ ಬರುತ್ತಿದ್ದರು. ‖ ೧೨೦ ‖ ಆಕೆಯು ಗುರುದರ್ಶನಕ್ಕೆ ಹೋಗು ವಾಗ ದಾರಿಯಲ್ಲಿ— ಸ್ವಾಮೀ, ಗುರುದೇವಾ, ನರಕೇಸರಿಯೇ, ನಾನು ಪೂರ್ವದಿಂದಲೂ ಅಭಾಗ್ಯಳು! ಅದ್ದ

ರಿಂದ ಈಗ ನನಗೆ ವೈಧವ್ಯವು ಬಂತು. || ೧೨೧ || ನಿನಗೆ ದಾತಾ, ದಯಾನಿಧಿ, ಸರ್ವೇಶ್ವರ, ಶರಣಾಗತ ರಕ್ಷಕ ಎಂಬ ದೊಡ್ಡ ಬಿರುದುಗಳು ಅವೆ ಆದರೆ ನನ್ನ ಕೆಲಸಕ್ಕೆ ಮಾತ್ರ ಅವು ಯಾವವೂ ಉಪಯೋಗ ಬೀಳಲಿಲ್ಲ. || ೧೨೨ || ಸ್ವಾಮೀ, ನೀನು ಲೀಲಾ ಮಾತ್ರದಿಂದ ತ್ರಿಭುವನಗಳನ್ನು ರಚಿಸುತ್ತೀ, ರಜೋಗುಣ ದಿಂದ ಸೃಷ್ಟಿಯನ್ನುಂಟು ಮಾಡುತ್ತೀ, ಸತ್ವಗುಣದಿಂದ ಅದನ್ನು ಪ್ರತಿಪಾಲಿಸುತ್ತೀ, || ೧೨೩ || ತಮೋಗುಣ ದಿಂದ ಸತ್ಯವಾಗಿ ಯಾವತ್ತು ಪ್ರಾಣಿಗಳ ಸಹಿತವಾದ ಸೃಷ್ಟಿಯನ್ನು ಪ್ರಳಯ ಮಾಡುತ್ತೀ, ದೇವಾ ನೀನು ತ್ರಿಗುಣ ದಿಂದ ತ್ರೈಮೂರ್ತಿಯಾಗಿರುತ್ತೀ || ೧೨೪ || ನಿನ್ನ ಹತ್ತರ ಸರ್ವಸಿದ್ಧಿಯದೆ. ವಿಧಿಯು ನನ್ನ ಅಲ್ಪಬುದ್ಧಿ ಯನ್ನು ಕಂಡು ಸುತ್ತ್ಯಾಡಿ ಕಡೆಗೆ ನನ್ನ ಹತ್ತರ ಬಂದು ನನಗೆ ವೈಧವ್ಯವನ್ನು ತಂದಿತು. || ೧೨೫ || ಒಬ್ಬನು ಮತ್ತೊಬ್ಬನಿಗೆ ಬಾಧೆ ಮಾಡಿದರೆ ಆ ಬಾಧೆ ಹೊಂದಿದವನು ರಾಜನ ಹತ್ತರ ಹೇಳಿದರೆ ಆ ರಾಜನು ಒಂದು ಘಳಿಗೆ ಸಹ ತಡಮಾಡದೆ ಅವನಿಗೆ ಸಹಾಯ ಮಾಡುವನು. || ೧೨೬ || ರೋಗಿಯು ವೈದ್ಯನ ಹತ್ತರ ಹೋದರೆ, ಆ ಕೂಡಲೆ ಅವನಿಗೆ ಔಷಧ ಕೊಟ್ಟು ಆ ರೋಗಿಯನ್ನು ನೆಟ್ಟಗೆ ಮಾಡುವನು || ೧೨೭ || ಶ್ರೀ ಗುರುವೇ ನೀನು ತ್ರೈಮೂರ್ತಿ ಅವತಾರಿ ಎಂದು ಅಪರಂಪಾರ ಖ್ಯಾತಿ ಅದೆ. ಮತ್ತು ನೀನು ಸರ್ವ ಭಕ್ತ ಜನರ ಆಧಾರನೆಂದು ಎಲ್ಲರೂ ನಿನ್ನನ್ನು ಸೇವಿಸುವರು || ೧೨೮ || ಸ್ವಾಮೀ, ನಾನೇನು ಅಪರಾಧ ಮಾಡಿರುವೆನು ? ನಿನ್ನನ್ನು ಧ್ಯಾನಿಸುತ್ತ ನಾನು ನನ್ನ ತಾಯಿ-ತಂದೆಗಳನ್ನು ಸಹ ಮರೆತು ನಿನ್ನ ದರ್ಶನಕ್ಕೆಂದು ಇಪ್ಪತ್ತು ಗಾವುದ ದಾರಿ ನಡೆದು || ೧೨೯ || ಸ್ವಾಮೀ, ನನಗೆ ನೀವೇ ತಾಯಿ-ತಂದೆ ಎಂದೂ ನಿಮ್ಮ ದರ್ಶನದಿಂದ ನನ್ನ ಪತಿಗೆ ಆರೋಗ್ಯ ವಾಗುವದೆಂದೂ ತಿಳಿದು ಓಡುತ್ತ ನಿನ್ನ ಹತ್ತರ ಬಂದೆನು. || ೧೩೦ || ಸ್ವಾಮೀ, ನನ್ನ ಸರಿ ವಯಸ್ಸಿನ ಸ್ತ್ರೀಯರು ಮಕ್ಕಳು, ಮೊಮ್ಮಕ್ಕಳಿಂದ ಕೂಡಿ ಸುಖದಿಂದಿರುವರು. ನಾನು ಕಲ್ಲಿನಂತೆ ಅಪುತ್ರವತಿಯಾಗಿರು ವೆನು. || ೧೩೧ || ನನ್ನ ಪತಿಯು ಸದಾ ರೋಗಿಯಾಗಿರಲು ನನಗೆ ಪುತ್ರನು ಹ್ಯಾಗಾಗಬೇಕು ? ಆದರೂ ನನ್ನ ಕಾಮ್ಯದ ದೆಸೆಯಿಂದ ಹೊರಟು ಬಂದೆನು. || ೧೩೨ || ಸ್ವಾಮೀ, ಕೃಪಾಸಿಂಧುವೇ, ತಮ್ಮ ದರ್ಶನದಿಂದ

ನನ್ನ ಪತಿಗೆ ಆರೋಗ್ಯವಾದೀತು, ಮುಂದೆ ನನಗೆ ಮಗನು ಹುಟ್ಟ್ಯಾನು ಎಂದು ಮನಸಿನಲ್ಲಿ ಆಶೆಮಾಡಿಕೊಂಡು
ಇಲ್ಲಿಗೆ ಬಂದೆನು. ॥ ೧೩೩ ॥ ನಿನ್ನ ಹತ್ತರ ಬಂದದ್ದಕ್ಕೆ ನನ್ನ ಮನೋರಥವು ಪೂರ್ಣವಾಯಿತು ! ನನ್ನ ಪತಿಗೆ
ಆರೋಗ್ಯವೂ ಆಯಿತು ! ನನಗೆ ಬಹುಮಂದಿ ಮಕ್ಕಳೂ ಆದರು ! ಇದೊಂದು ಆಶ್ಚರ್ಯಕರವಾದ ಹೊಸ
ಸಂಗತಿಯಾಯಿತು. ॥ ೧೩೪ ॥ ಸ್ವಾಮೀ, ಈಗ ನನ್ನ ಮನೋರಥವು ಪೂರ್ಣವಾಯಿತೇ ? ಇನ್ನು ನಾನು
ಹೋಗಲ್ಯಾ ಎಂದು ನಿಮ್ಮನ್ನು ಕೇಳಲಿಕ್ಕೆ ಬಂದೆನು ಇನ್ನು ಈ ಪ್ರಕಾರ ನಿಮ್ಮ ಕೀರ್ತಿಯನ್ನು ತಕ್ಕೊಂಡು ನಾನು
ಪರಲೋಕಕ್ಕೆ ಹೋಗುವೆನು. ॥ ೧೩೫ ॥ ಎಂದೆನ್ನುತ್ತ ಅವಳು ಶ್ರೀ ಗುರುಗಳನ್ನು ಧ್ಯಾನಿಸುತ್ತ ತೀವ್ರವಾಗಿ
ಸಂಗಮಕ್ಕೆ ಬಂದು, ಅಶ್ವತ್ಥದ ಬುಡದಲ್ಲಿ ಕೂತ ಶ್ರೀ ಗುರುಗಳನ್ನು ನೋಡಿ ॥ ೧೩೬ ॥ ದೂರ ನಿಂತು ಅವರಿಗೆ
ಸಾಷ್ಟಾಂಗ ನಮಸ್ಕಾರ ಮಾಡಿದಳು. ಆ ಕೂಡಲೆ ಶ್ರೀ ಗುರುಗಳು— ಎಲಾ ಸ್ತ್ರೀಯೇ, ನೀನು ಅಖಂಡ
ಸೌಭಾಗ್ಯವತಿಯಾಗು ಎಂದು ಆಶೀರ್ವದಿಸಿದರು ॥ ೧೩೭ ॥ ಅದನ್ನು ಕೇಳಿ ಅವಳು ಭಕ್ತಿಯಿಂದ ಮತ್ತೆ
ನಮಸ್ಕಾರ ಮಾಡಲು ಶ್ರೀಗುರುಗಳು ಮತ್ತೆ ಅದೇ ರೀತಿಯಾಗಿ—ಎಲೌ ಸ್ತ್ರೀಯೇ ನೀನು ಅಷ್ಟಪುತ್ರ ಸೌಭಾಗ್ಯವತಿ
ಯಾಗು ಎಂದು ಆಶೀರ್ವಾದ ಮಾಡಿದರು. ॥ ೧೩೮ ॥ ಈ ಪ್ರಕಾರವಾದ ಶ್ರೀ ಗುರುಗಳ ಮಾತುಕೇಳಿ ಅಲ್ಲಿ
ಇದ್ದ ಯಾವತ್ತು ಜನರು ನಕ್ಕು ಅವರಲ್ಲಿ ಒಬ್ಬನು ಅವಸರದಿಂದ ಶ್ರೀ ಗುರುಗಳಿಗೆ ಈಕೆಯ ಎಲ್ಲ ಸಂಗತಿಯನ್ನು
ಹೇಳಹತ್ತಿದರು ಏನೆಂದರೆ— ಸ್ವಾಮೀ, ಈಕೆಯ ಪತಿಯು ಮೃತನಾಗಿ ಪರಂಧಾಮಕ್ಕೆ ಹೋಗಿರುವನು ಅಂದ
ಮೇಲೆ ಈಕೆ ಮುತ್ತೈದೆ ಹ್ಯಾಗೆ ಆಗುವಳು ? ॥ ೧೩೯ ॥ ಈಗ ಆ ಹೆಣವನ್ನು ಸಹ ಸ್ಮಶಾನಕ್ಕೆ ಒಯ್ದಿರುವರು
ಸ್ವಾಮೀ, ಈಗ ಈಕೆಯು ಸಹಗಮನ ಮಾಡಲಿಕ್ಕೆ ತಮ್ಮ ಅಪ್ಪಣೆಯನ್ನು ಕೇಳಲಿಕ್ಕ ಬಂದಿರುವಳು. ॥ ೧೪೦ ॥
ಈಗ ತಮ್ಮ ಅಪ್ಪಣೆಯನ್ನು ತಕ್ಕೊಂಡು ಆ ಅಗ್ನಿಕುಂಡದ ಹತ್ತರ ಹೋಗಿ, ಪತಿಯಸಂಗಡ ಸಹಗಮನ ಮಾಡು
ವಳು ಎಂದನು ॥ ೧೪೧ ॥ ಅವನ ಮಾತುಕೇಳಿ ಶ್ರೀ ಗುರುಗಳು ನಕ್ಕು— ಎಲೈ ವಿಪ್ರನೇ, ಈಕೆಯ ಸೌಭಾ
ಗ್ಯವು ಸ್ಥಿರವಾಗಿದೆ. ಅಂದಮೇಲೆ ಈಕೆಗೆ ಮರಣವು ಹ್ಯಾಗೆ ಬರುತ್ತದೆ? ॥ ೧೪೨ ॥ ಆ ಹೆಣವನ್ನು ತೀವ್ರ

ವಾಗಿ ಇಲ್ಲಿ ನಮ್ಮಹತ್ತರ ತಕ್ಕೊಂಡುಬರ್ರಿ, ಅವನ ಪ್ರಾಣವು ಯಾವಾಗ ಹೋಗಿದೆ ನೋಡೋಣ. ॥ ೧೪೪ ॥ ಎಂದು ಎಲ್ಲ ಬ್ರಾಹ್ಮಣರನ್ನು ಕುರಿತು— ಎಲೈ ಬ್ರಾಹ್ಮಣರೇ ನಾನು ಈಕೆಗೆ ಈ ಪ್ರಕಾರವಾಗಿ ಹೇಳಿದ್ದರಿಂದ ಈಕೆಗೆ ಮುತ್ತೈದೆತನವು ಸ್ಥಿರವಾಗಿರುವದೆಂದು ನಿಶ್ಚಯವಾಗಿ ತಿಳಿಯಿರಿ ನೀವು ಮನಸ್ಸಿನಲ್ಲಿ ಏನೂ ಸಂಶಯ ವನ್ನು ಹಿಡಿಯಬೇಡಿರಿ. ॥ ೧೪೫ ॥ ಈ ನನ್ನ ಮಾತನ್ನು ಕರ್ಪೂರ ಗೌರನಾದ ಶ್ರೀ ಶಂಕರನು ಸತ್ಯವಾಗಿ ಮಾಡುವನು. ಆದಕಾರಣ ಆ ಪ್ರೇತವನ್ನು ಸಂಸ್ಕಾರಮಾಡದೆ ತೀವ್ರವಾಗಿ ನಮ್ಮಹತ್ತರ ತಕ್ಕೊಂಡುಬರ್ರಿ ಎಂದು ಆಜ್ಞೆ ಮಾಡಿದರು ॥ ೧೪೬ ॥ ಶ್ರೀ ಗುರುಗಳ ಅಪ್ಪಣೆಯಂತೆ ಕೆಲವರು ಓಡುತ್ತ ಆ ಶವನನ್ನು ತರಲಿಕ್ಕೆ ಹೋದರು ಅಲ್ಲಿದ್ದ ಜನರು ಈ ಕೌತುಕವನ್ನು ನೋಡುತ್ತ— ಇದೊಂದು ಹೊಸ ಆಶ್ಚರ್ಯದ ಸಂಗತಿ ಎನ್ನು ತ್ತಿದ್ದರು. ॥ ೧೪೭ ॥ ಇಷ್ಟಾಗುವಷ್ಟರಲ್ಲಿ ಕೆಲವುಮಂದಿ ಬ್ರಾಹ್ಮಣರು ಬಂದು ಭಕ್ತಿಯಿಂದ ಶ್ರೀ ಗುರುಗಳನ್ನು ಮನೋಹರವಾಗಿ ಪೂಜಿಸುತ್ತಿದ್ದರು. ॥ ೧೪೮ ॥ ಅವರು ರುದ್ರಸೂಕ್ತವನ್ನು ಅನ್ನುತ್ತ ಶ್ರೀ ಗುರುಚರಣಗಳಿಗೆ ಅಭಿಷೇಕ ಮಾಡಿ ಷೋಡಶೋಪಚಾರದಿಂದಲೂ ಭಕ್ತಿಯಿಂದಲೂ ವಿಸ್ತಾರವಾಗಿ ಪೂಜಿಸುತ್ತಿದ್ದರು. ॥ ೧೪೯ ॥ ಆಮೇಲೆ ಶ್ರೀ ಗುರುಚರಣ ತೀರ್ಥವನ್ನು ಷೋಡಶೋಪಚಾರದಂತೆ ನಾನಾರೀತಿಯಿಂದ ಪೂಜಾ ಮಾಡುತ್ತಿದ್ದರು ಅದೇಹೊತ್ತಿನಲ್ಲಿ ಬ್ರಾಹ್ಮಣರು ಆ ಪ್ರೇತವನ್ನು ತಕ್ಕೊಂಡು ಬಂದರು ॥ ೧೫೦ ॥ ಶ್ರೀ ಗುರುಗಳ ಎದುರಿಗೆ ಇಟ್ಟರು, ಆಗ ಶ್ರೀ ಗುರುಗಳು ಆ ಬ್ರಾಹ್ಮಣರನ್ನು ಕುರಿತು— ಎಲೈ ಬ್ರಾಹ್ಮಣರೇ ಈ ಪ್ರೇತಕ್ಕೆ ಕಟ್ಟಿದ ಪಾಶ ವನ್ನು ಹರಿದು, ಮೇಲಿನ ವಸ್ತ್ರವನ್ನು ತೆಗೆಯಿರಿ ಎಂದು ಹೇಳಿದರು ಅವರು ಅದರಂತೆ ಮಾಡಿದರು. ॥ ೧೫೧ ॥ ಆಮೇಲೆ ಶ್ರೀ ಗುರುಗಳು ತಮ್ಮ ಚರಣತೀರ್ಥವನ್ನು ಆ ಬ್ರಾಹ್ಮಣರಕಡೆಗೆ ಕೊಟ್ಟು— ಈ ಪ್ರೇತದಮೇಲೆ ಪ್ರೋಕ್ಷಿಸಿರಿ ಮತ್ತು ಸರ್ವಾಂಗಕ್ಕೂ ಸ್ನಾನಮಾಡಿಸಿರಿ ಎಂದು ಹೇಳಿದರು. ॥ ೧೫೨ ॥ ಶ್ರೀ ಗುರುಗಳ ಅಪ್ಪಣೆ ಯಂತೆ ಆ ಬ್ರಾಹ್ಮಣರು ಆ ಪ್ರೇತಕ್ಕೆ ಆ ತೀರ್ಥದಿಂದ ಸ್ನಾನ ಮಾಡಿಸುತ್ತಿದ್ದರು. ಆಗ ಶ್ರೀ ಗುರುಗಳು ಅಮೃತ ದೃಷ್ಟಿಯಿಂದ ಆ ಪ್ರೇತವನ್ನು ನೋಡುತ್ತಿದ್ದರು. ॥ ೧೫೩ ॥ ಈ ಪ್ರಕಾರ ಶ್ರೀ ಗುರುಗಳು ಅಮೃತದೃಷ್ಟಿಯಿಂದ

ನೋಡುತ್ತಿರಲು ಆ ಪ್ರೇತಕ್ಕೆ ಪೂರ್ಣ ಜೀವವು ಬಂತು. ಕೂಡಲೆ ಅವನು ಮೈ ಒದ್ದಮುರಿಯುತ್ತ ಎದ್ದು ಕುಳಿತನು. ॥ ೧೫೪ ॥ ಆಗ ತಾನು ನಗ್ನವಾಗಿದ್ದದ್ದಕ್ಕಾಗಿ ನಾಚಿಕೊಂಡು ಪೂರ್ಣ ಎಚ್ಚರವನ್ನು ಹೊಂದಿ ಹೊಸ ವಸ್ತ್ರವನ್ನುಟ್ಟುಕೊಂಡು ಜೇರಿಕಡೆಗೆ ಬಂದು ಕೂತನು. ॥ ೧೫೫ ॥ ಆಮೇಲೆ ತನ್ನ ಹೆಂಡತಿಯನ್ನು ಕರೆದು— ಎಲೈ ಸ್ತ್ರೀಯೇ ನನ್ನನ್ನು ಎಲ್ಲಿಗೆ ಕರಕೊಂಡುಬಂದಿ? ಈ ಯತೀಶ್ವರರು ಯಾರು? ಎಂದು ಎಲ್ಲವನ್ನು ವಿಸ್ತಾರವಾಗಿ ಕೇಳಿ ॥ ೧೫೬ ॥ ನನಗೆ ಒಳ್ಳೇ ಗಾಢವಾದ ನಿದ್ರೆಯು ಬಂದು ಮದೋನ್ಮತ್ತನಾಗಿದ್ದೆನು ಇಷ್ಟು ಜನರು ಇರುತ್ತಿರಲು ನನ್ನನ್ನೇಕೆ ಎಬ್ಬಿಸಲಿಲ್ಲ? ಎಂದು ಕೇಳಿದನು. ॥ ೧೫೭ ॥ ಪತಿಯ ವಚನವನ್ನು ಕೇಳಿ ಆಕೆಯು ವಿಸ್ತಾರವಾಗಿ ಎಲ್ಲ ಸಂಗತಿಯನ್ನು ಹೇಳಿದಳು ಆಮೇಲೆ ಇಬ್ಬರೂ ಎದ್ದು ನಿಂತು ಶ್ರೀ ಗುರುಗಳಿಗೆ ನಮಸ್ಕಾರ ಮಾಡಿದರು. ॥೧೫೮॥ ಅದನ್ನು ಅಲ್ಲಿದ್ದ ಸರ್ವ ಜನರೂ ನೋಡಿದರು ಆಗ ಮಹಾ ಆನಂದವಾಯಿತು ಅವರಿಬ್ಬರೂ ಶ್ರೀ ಗುರು ಚರಣಗಳಮೇಲೆ ಮಸ್ತಕವನ್ನಿಟ್ಟು ಸ್ತೋತ್ರಮಾಡಹತ್ತಿದರು. ॥ ೧೫೯ ॥ ಆಗ ಆ ಸತಿಯ ಪತಿಯು ಸ್ವಾಮೀ, ನಾನು ಪಾಪರೂಪಿಯು ಭಯಂಕರ ಪಾಪ ಮಾಡಿದೆನು. ಆ ಪಾಪ ಸಂಬಂಧದಿಂದ ಈ ಜನ್ಮವನ್ನು ಹೊಂದಿದೆನು ॥ ೧೬೦ ॥ ಸ್ವಾಮೀ ತ್ರೈಮೂರ್ತಿಯೇ, ಜಗದ್ಗುರುವೇ ನಾನು ದುರ್ಬುದ್ಧಿಯಿಂದ ವರ್ತಿಸಿ ಅನೇಕ ಪಾಪಗಳನ್ನು ಮಾಡಿ, ಪಾಪಸಾಗರದಲ್ಲಿ ಮುಳುಗಿ, ತಮ್ಮ ಸ್ಮರಣೆಯನ್ನು ಮರೆತಿದ್ದೆನು ॥ ೧೬೧ ॥ ಸಕಲ ಜೀವಿಗಳನ್ನು ಸಂರಕ್ಷಿಸುವಂಥ ಶಂಕರನೇ ನೀನಿರುತ್ತೀ. ಶರಣಾಗತರನ್ನು ರಕ್ಷಿಸುತ್ತೀ ಎಂದು ಮೂರು ಲೋಕದಲ್ಲಿ ನಿನ್ನ ಖ್ಯಾತಿಯು ಇರುತ್ತದೆ. ॥೧೬೨॥ ಸ್ವಾಮೀ, ಜಗದ್ಗುರುವೇ, ವಿಶ್ವಮೂರ್ತಿಯೇ, ಪರಾತ್ಪರನೇ, ತ್ರೈಮೂರ್ತಿಯೇ, ಸಚ್ಚಿದಾನಂದ ಸ್ವರೂಪನೇ ॥ ೧೬೩ ॥ ನಮ್ಮನ್ನು ಕಾಪಾಡು! ಕಾಪಾಡು! ವಿಶ್ವಕರ್ತನೇ, ಜಗದ್ಭರಿತನೇ, ಕೃಪಾಸಾಗರನೇ, ಜಗನ್ನಾಥನೇ, ಭಕ್ತಜನ ವಿಶ್ರಾಮನೇ ನಮ್ಮನ್ನು ರಕ್ಷಿಸು! ರಕ್ಷಿಸು!! ॥ ೧೬೪ ॥ ಜಯ ಜಯ ಗುರುಮೂರ್ತಿಯೇ ಜಟಾಜೂಟನೇ, ಪಶುಪತಿಯೇ, ನೀನು ಮನುಷ್ಯ ದೇಹವನ್ನು ಧರಿಸಿ ಈ ಭೂಮಿಯಲ್ಲಿ ಅವತರಿಸಿರುತ್ತೀ. ॥ ೧೬೫ ॥ ಪಿನಾಕಪಾಣಿಯೇ ನಮ್ಮನ್ನು ರಕ್ಷಿಸು, ರಕ್ಷಿಸು. ದೇವಾ, ನೀನು ದೇವತೆಗಳಲ್ಲಿ

ಶಿರೋಮಣಿಯಾಗಿರುತ್ತೀ, ನೀನು ನಿರಂತರ ಭಕ್ತ ಜನರನ್ನು ಪಾಲಿಸಿ ರಕ್ಷಿಸುತ್ತೀ. || ೧೬೬ || ನೀನು ಸರ್ವ ಭೂತಗಳಲ್ಲಿಯೂ ವಾಸಿಸುತ್ತೀ. ನಿನ್ನ ಚರಣಕ್ಕೆ ನನ್ನ ನಮಸ್ಕಾರವು, ನೀನು ನಮ್ಮಮೇಲೆ ತಾಯಿಯಂತೆ ಪ್ರೀತಿ ಮಾಡುತ್ತೀ ಎಂದು ತಿಳಿದಿರುವೆವು || ೧೬೭ || ತ್ರಿಲೋಕದಲ್ಲಿ ನಿನ್ನ ಮಹಿಮೆಯು ತುಂಬಿರುವದು. ಸ್ವಾಮೀ, ನಿಮ್ಮ ಪಾದದಲ್ಲಿ ಮಸ್ತಕವನ್ನಿಟ್ಟವರಿಗೆ ಪುನರ್ಜನ್ಮವಿಲ್ಲವೆಂದು ಈಗ ನಾನು ಮನಸಿನಲ್ಲಿ ನಿಶ್ಚಯ ಮಾಡಿರುವೆನು. || ೧೬೮ || ಸ್ವಾಮೀ, ನೀನು ವಿಶ್ವಕಾರಣನಾಗಿ ಲೀಲಾಮಾತ್ರದಿಂದ ಸೃಷ್ಟಿಯನ್ನು ರಚಿಸುತ್ತೀ, ನೀವು ಇಷ್ಟು ಮಹಿಮೆಯುಳ್ಳವರಿದ್ದರೂ ನಾನು ಇನ್ನೂ ಈ ಪ್ರಕಾರ ಅಜ್ಞಾನ ರೂಪದಿಂದಲೇ ನಡೆಯುವೆನೆಂದು ತಿಳಿದಿರುವೆನು || ೧೬೯ || ಯಾವನಾದರೊಬ್ಬನು ಒಂದು ವೇಳೆ ನಿಮ್ಮ ಮಾತು ಕೇಳದಿದ್ದರೆ ನೀನು ಆವನ ಮೇಲೆ ಸಿಟ್ಟಾಗುತ್ತೀ, ನಾನು ಇಷ್ಟು ತಪ್ಪು ಮಾಡಿದ್ದರೂ ನನ್ನ ಒಗ್ಗೆ ಮನಸ್ಸಿನಲ್ಲಿ ನೀನು ನಿಷ್ಕಲಂಕನಾಗಿ ತೋರಿರುತ್ತೀ || ೧೭೦ || ಸ್ವಾಮೀ, ನನ್ನ ಒಗ್ಗೆ ನಿನ್ನ ಮನಸ್ಸಿನಲ್ಲಿ ಸಿಟ್ಟು ಇಲ್ಲ ನಾವಿರ ಪಟ್ಟು ಆನಂದಮೂರ್ತಿ ಯಾಗಿರುತ್ತೀ ಮತ್ತು ಭಕ್ತ ಜನರನ್ನು ಸಂರಕ್ಷಿಸುವದರಲ್ಲಿ ಕೃಪಾನಾಗರನಾಗಿದ್ದುತ್ತೀ. || ೧೭೧ || ಎಲ್ಲ ಜೀವಿಗಳ ಮೇಲೆ ಕೃಪಾ ಮಾಡುತ್ತೀ, ಶರಣಾಗತರನ್ನು ರಕ್ಷಿಸುತ್ತೀ, ಮತ್ತು ಭಕ್ತರಿಗೆ ಇಹಪರ ಸುಖಗಳನ್ನೂ ಚತುರ್ವಿಧ ಪುರುಷಾರ್ಥಗಳನ್ನೂ ದಯಪಾಲಿಸುತ್ತೀ. || ೧೭೨ || ದೇವಾ, ನೀನು ಕರುಣಾಸಾಗರನೂ, ಅಗೋಚರವಾದ ಚಿನ್ಮಾತ್ರ ಸ್ವರೂಪನೂ ಆಗಿರುತ್ತೀ ಸ್ವಾಮೀ, ಶ್ರೀ ನರಸಿಂಹ ಸರಸ್ವತಿ ಗುರುವೇ ನಮ್ಮ ಅಪರಾಧವನ್ನು ಕ್ಷಮಿಸಿ ನಮ್ಮನ್ನು ರಕ್ಷಿಸಿರಿ || ೧೭೩ || ಎಂದು ಆ ದಂಪತಿಗಳು ಈ ಪ್ರಕಾರ ನಾನಾಪರಿಯಾಗಿ ಶ್ರೀ ಗುರುಗಳನ್ನು ಸ್ತುತಿಸಿದರು ಅದನ್ನು ಕೇಳಿ ಶ್ರೀ ಗುರುಗಳು ಸಂತೋಷಪಟ್ಟು ಅವರಿಗೆ ಆಶೀರ್ವಾದಪೂರ್ವಕ ಹೇಳಿದರು ಏನಂದರೆ— || ೧೭೪ || ಎಲೈ ದಂಪತಿಗಳೇ, ನಿಮಗೆ ಸತ್ಯವಾಗಿ ಪೂರ್ಣಾಯುಷಿಗಳಾದ ಎಂಟು ಮಂದಿ ಮಕ್ಕಳಾಗುವರು ನೀವು ಯಾವಾಗಲೂ ಶ್ರೀಮಂತರಾಗಿ ಆನಂದದಿಂದಿರುವಿರಿ ಈಗ ನಿಮ್ಮ ಪೂರ್ವದ ದೋಷ ಗಳೆಲ್ಲ ಹೋದವು. || ೧೭೫ || ನಿಮಗೆ ಚತುರ್ವಿಧ ಪುರುಷಾರ್ಥಗಳು ಯಥಾರ್ಥವಾಗಿ ಲಭಿಸಿದವು. ದೇಹಾಂತ್ಯ

ದಲ್ಲಿ ನಿಮಗೆ ಮುಕ್ತಿಯಾಗುವದು. ಇನ್ನು ನೀವು ಮನಸಿನಲ್ಲಿಯ ಸಂಶಯವನ್ನು ಬಿಟ್ಟು ಸುಖವಾಗಿ ಇರ್ರಿ ಎಂದು ಆ ದಂಪತಿಗಳಿಗೆ ಹೇಳಿದರು ॥ ೧೭೬ ॥ ಇಷ್ಟೆಲ್ಲ ಆದದ್ದನ್ನು ನೋಡಿ ಆಗ ಅಲ್ಲಿ ಕೂಡಿದ ಯಾವತ್ತೂ ಸ್ತ್ರೀ-ಪುರುಷರು ಆಶ್ಚರ್ಯಬಟ್ಟು ಅಪರಂಪಾರವಾಗಿ ಶ್ರೀ ಗುರುಗಳ ಜಯ ಜಯಕಾರವನ್ನು ಮಾಡಿದರು. ॥ ೧೭೭ ॥ ಆಮೇಲೆ ಯಾವತ್ತರೂ ಶ್ರೀ ಗುರುಗಳಿಗೆ ನಮಸ್ಕಾರ ಮಾಡಿ ಗಾಯನಪೂರ್ವಕ ಸ್ತೋತ್ರ ಮಾಡುತ್ತಿದ್ದರು. ಆರತಿಯನ್ನು ಮಾಡಿದಮೇಲೆ ಮತ್ತೆ ಜಯಜಯಕಾರವಾಯಿತು ॥ ೧೭೮ ॥ ಆಗ ಅಲ್ಲಿ ಬಂದವರಲ್ಲಿ ಧೂರ್ತನೂ ಕುಬುದ್ಧಿಯವನೂ ಆದ ಒಬ್ಬ ಬ್ರಾಹ್ಮಣನು ತನ್ನ ಮನಸ್ಸಿನಲ್ಲಿ ಒಂದು ತರ್ಕ ಮಾಡಿ ಶ್ರೀ ಗುರುಗಳಿಗೆ ಕೇಳ ಹತ್ತಿದನು. ॥ ೧೭೯ ॥ ಸ್ವಾಮೀ, ಶ್ರೀಗುರುವೇ, ನನ್ನದೊಂದು ವಿನಂತಿಯದೆ, ಕೇಳಬೇಕು. ನನ್ನ ಮನಸ್ಸಿನಲ್ಲಿ ಒಂದು ಸಂಶಯ ಬಂದದೆ ಹೇಳುತ್ತೇನೆ ಕೇಳಿರಿ ॥ ೧೮೦ ॥ ಸ್ವಾಮೀ, ಬ್ರಹ್ಮಲಿಖಿತವು ನಿಶ್ಚಯವಾಗಿ ಸತ್ಯವೆಂಬ ಮಾತುಗಳನ್ನು ವೇದ-ಶಾಸ್ತ್ರ-ಪುರಾಣಗಳಲ್ಲಿ ಸನಾತನವಾಗಿ ಹೇಳಿರುತ್ತದೆ ॥ ೧೮೧ ॥ ಆದರೆ ಈ ಬ್ರಾಹ್ಮಣನಿಗೆ ಅಪಮೃತ್ಯು ಬಂದಿದ್ದಿಲ್ಲ ಕಾಲಮೃತ್ಯುವೇ ಬಂದು ಹಗಲು ಮೃತನಾಗಿದ್ದನು. ಈಗ ಇವನಿಗೆ ಜೀವವು ಹೇಗೆ ಬಂದಿತು ? ಬ್ರಹ್ಮಲಿಖಿತವು ಸತ್ಯವೋ ಮಿಥ್ಯವೋ ॥ ೧೮೨ ॥ ಎಂಬದರ ಅಭಿಪ್ರಾಯವು ನನಗೆ ತಿಳಿಯುಲೊಲ್ಲದು. ಗುರುರಾಯರೇ ತಾವು ನನಗೆ ತಿಳಿಸಿ ಹೇಳಬೇಕು ಎಂದನು ಆಗ ಶ್ರೀಗುರುಗಳು ನಕ್ಕು ಆ ಮೂರ್ಖ ಬ್ರಾಹ್ಮಣನನ್ನು ಕುರಿತು— ॥ ೧೮೩ ॥ ಎಲೈ ಬ್ರಾಹ್ಮಣನೇ, ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು. ಇವನಿಗೆ ಮುಂದಿನ ಜನ್ಮವುಂಟು ಇವನು ನನ್ನ ಕೇವಲ ಭಕ್ತನು ಭಕ್ತರನ್ನು ರಕ್ಷಿಸುವದಕ್ಕಾಗಿ ಅಂತಃಕರಣದಿಂದ ಬ್ರಹ್ಮನನ್ನು ಕೇಳಿಕೊಂಡು ಇವನ ಮುಂದಿನ ಜನ್ಮದ ಆಯುಷ್ಯದಲ್ಲಿಯ ಮೂವತ್ತು ವರುಷಗಳನ್ನು ಕಡವಾಗಿ ಇಸಗೊಂಡು ಇವನಿಗೆ ಕೊಟ್ಟೆನು ಅದರಿಂದ ಇವನು ಬದುಕಿದನು. ಈ ಪ್ರಕಾರ ಭಕ್ತರನ್ನು ರಕ್ಷಿಸುವ ಪ್ರಸಂಗ ಬರುತ್ತದೆ ಎಂದು ಹೇಳಿದರು. ॥ ೧೮೪-೧೮೫-೧೮೬ ॥ ಆಮೇಲೆ ಎಲ್ಲ ಜನರೂ ಮೌನವನ್ನು ಧರಿಸಿ ಶ್ರೀಗುರುಗಳಿಗೆ ನಮಸ್ಕಾರ ಮಾಡಿ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು. ಆನಂತರ

ವಿಚಿತ್ರವಾದ ಈ ಸಂಗತಿಯು ನಾಲ್ಕೂ ರಾಷ್ಟ್ರಗಳಲ್ಲಿ ಹಬ್ಬಿತು. || ೧೭ || ಆಗ ಆ ಪತಿವ್ರತೆಯು ಪತಿಯೊಡನೆ ಸಂಗಮದಲ್ಲಿ ಸ್ನಾನ ಮಾಡಿ ಬಂದು, ಮನಸಿನಲ್ಲಿ ಬಹಳ ಸಂತೋಷವನ್ನು ಹೊಂದಿ ಭಕ್ತಿಯಿಂದ ಶ್ರೀಗುರುಗಳನ್ನು ಪೂಜಿಸಿದಳು. || ೧೮ || ಆಮೇಲೆ ಆವಾರ ದ್ರವ್ಯಗಳನ್ನು ಬ್ರಾಹ್ಮಣರಿಗೆ ದಾನ ಮಾಡಿ ಅವರನ್ನು ಸಂತೋಷಬಡಿಸಿ ಆರಾಧಿಸಿ ಸೂರ್ಯಾಸ್ತವಾಗುವದರೊಳಗೆ ಗುರುಗಳೊಡನೆ ಮಠಕ್ಕೆ ಬಂದರು. || ೧೯ || ಆಮೇಲೆ ಅವರು ಮೇಲಿಂದಮೇಲೆ ಶ್ರೀಗುರುಗಳಿಗೆ ನಮಿಸುತ್ತ ಸಕಲ ಪೂಜಾ ಸಾಮಾನುಗಳಿಂದ ಷೋಡಶೋಪಚಾರ ಪೂಜಾ ಮಾಡಿ ಆರತಿಯನ್ನು ಮಾಡಿದರು. || ೨೦ || ಎಲೈ ನಾಮಧಾರಕನೇ ಮುಂದೆ ಕಥೆಯು ಅಪೂರ್ವವಾಯಿತು, ಹೇಳುವೆನು ಏಕಚಿತ್ತದಿಂದ ಕೇಳೆಂದು ಸಿದ್ಧರು ಹೇಳಿದರು || ೨೧ || ಎಂದು ಸರಸ್ವತೀ ಗಂಗಾಧರನು— ಪವಿತ್ರ ಹಾಗೂ ಮನೋಹರವಾದ ಈ ಗುರುಚರಿತ್ರೆಯನ್ನು ವಿಸ್ತಾರವಾಗಿ ಕೇಳಿದರ ಸಕಲಾ-ಭೀಷ್ಟಗಳನ್ನು ಹೊಂದುತ್ತಾರೆಂದು ಹೇಳಿದನು. || ೨೩ || ಹೀಗೆ ಶ್ರೀ ಗುರು ಚರಿತ್ರಾಮೃತದಲ್ಲಿ ಪ್ರೇತವನ್ನು ಬದುಕಿಸಿ, ಅದ್ಭುತವಾದ ಸೌಭಾಗ್ಯವನ್ನು ಕೊಟ್ಟು ಆ ದಂಪತಿಗಳನ್ನು ಪರಮ ಸಂತೋಷಬಡಿಸಿದರು ಎಂದು ಹೇಳಿದೆ. || ೨೩ ||

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ, ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಪ್ರೇತ ಸಂಜೀವನಂ ನಾಮ ದ್ವಾತ್ರಿಂಶೋಽಧ್ಯಾಯಃ || ೩೨ || ಶ್ರೀ ಗುರುದೇವದತ್ತ ||

— ೩೨ನೇ ಅಧ್ಯಾಯ ಸಮಾಪ್ತ —

---

# ೩೩ನೇಯ ಅಧ್ಯಾಯ

## — ರುದ್ರಾಕ್ಷಿ ಮಹಿಮಾ ವರ್ಣನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ ‖ ಆಮೇಲೆ ಆ ನಾಮಧಾರಕನು ಒಳ್ಳೇ ಭಕ್ತಿಯಿಂದ ಶ್ರೀ ಸಿದ್ಧರ ಚರಣಕ್ಕೆ ನಮಸ್ಕಾರ ಮಾಡಿ ಕರುಣಾವಚನದಿಂದಲೂ ವಿನಯದಿಂದಲೂ ‖ ೧ ‖ ಸ್ವಾಮೀ, ಸಿದ್ಧಮುನಿಗಳೇ, ಹಿಂದಿನ ಕಥೆಯಲ್ಲಿ ಆ ಪತಿವ್ರತೆಯು ತನ್ನ ಪತಿ ಸಹಿತ ಶ್ರೀ ಗುರುಗಳೊಡನೆ ಸಂಗಮದಿಂದ ಮಠಕ್ಕೆ ಬಂದಳೆಂದು ಹೇಳಿದಿರಿ ‖ ೨ ‖ ಆದರೆ ಮುಂದೆ ಏನು ಚರಿತ್ರೆಯು ನಡೆಯಿತೆಂಬವನ್ನು ತಾವು ನನ್ನಮೇಲೆ ಅಂತಃಕರಣಮಾಡಿ ವಿಸ್ತಾರವಾಗಿ ಹೇಳಬೇಕು ಎಂದು ಅಂದನು. ‖ ೩ ‖ ಆಗ ಸಿದ್ಧರು— ಎಲೈ ಬಾಲಕಾ, ನಾಮಧಾರಕಾ, ಕೇಳು, ಮರುದಿವಸ ಪ್ರಾತಃಕಾಲದಲ್ಲಿ ಆ ಸತಿಯು ಪತಿಯೊಡನೆ ಗುರುಗಳಹತ್ತಿರ ಬಂದು ನಮಸ್ಕಾರ ಮಾಡಿ ವಿನಯದಿಂದ ಕೈ ಮುಕ್ಕೊಂಡು ಕೂತು. ‖ ೪ ‖ ಸ್ವಾಮೀ, ನಿನ್ನಿನದಿವಸ ನಾನು ದುಃಖಿಸುವಾಗ ಒಬ್ಬ ಯತಿಗಳು ಬಂದು ನನಗೆ ಬುದ್ಧಿವಾದವನ್ನು ಹೇಳಿ ‖ ೫ ‖ ನನ್ನ ಕೈಯಲ್ಲಿ ನಾಲ್ಕು ರುದ್ರಾಕ್ಷಿಗಳನ್ನು ಕೊಟ್ಟು—ಪ್ರೇತದ ಕಿವಿಗಳಲ್ಲಿ ಎರಡು ದಹನಮಾಡುವಾಗ ಪ್ರೇತದ ಕೊರಳಲ್ಲಿ ಎರಡು ಕಟ್ಟು, ಮತ್ತು ಸಂಗಮದಲ್ಲಿರುವ ಶ್ರೀ ಗುರುಗಳ ದರ್ಶನಕ್ಕೆ ಹೋಗು, ಅಲ್ಲಿ ಬ್ರಾಹ್ಮಣರು ರುದ್ರಾಭಿಷೇಕದಿಂದ ಶ್ರೀ ಗುರುಗಳ ಚರಣಗಳನ್ನು ಪೂಜಿಸುವರು ಆ ತೀರ್ಥವನ್ನು ತಂದು ಭಕ್ತಿಯಿಂದ ಪ್ರೇತಕ್ಕೆ ಪ್ರೋಕ್ಷಿಸಿ ದಹನಮಾಡು ಎಂದು ಹೇಳಿ ಹೋದರು. ‖ ೬–೭–೮ ‖ ಆ ರುದ್ರಾಕ್ಷಿಗಳು ನನ್ನಲ್ಲಿಯೂ ಪತಿಯ ಕಿವಿಗಳಲ್ಲಿಯೂ ಆವೆ. ಆ ಯತಿಗಳ್ಯಾರು? ಎಂದು ಕೇಳಿದಳು. ‖ ೯ ‖ ಆಕೆಯ ಮಾತಿಗೆ ಶ್ರೀ ಗುರುಗಳು ನಕ್ಕು— ಎಲೌ ಬಾಲೆಯೇ, ನಿನ್ನ ಭಕ್ತಿಯನ್ನು ನೋಡಿ ನಾನೇ ಬಂದು ಆ ರುದ್ರಾಕ್ಷಿಗಳನ್ನು ಕೊಟ್ಟೆನು. ‖ ೧೦ ‖ ಭಕ್ತಿ

ಯಿಂದಾಗಲಿ, ಅಭಕ್ತಿಯಿಂದಾಗಲೀ ರುದ್ರಾಕ್ಷಗಳನ್ನು ಧರಿಸಿದರೆ ಪಾಪಹತ್ತುವದಿಲ್ಲ. ಆ ರುದ್ರಾಕ್ಷಗಳು ಉತ್ತಮ ಅಥವಾ ಸಾಧಾರಣತರವಿದ್ದರೂ ಅಡ್ಡಿಯಿಲ್ಲ. ॥ ೧೧ ॥ ರುದ್ರಾಕ್ಷಿಯ ಮಹಿಮೆಯು ಅನುಪಮವಾಗಿರುವದು. ಅದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು ॥ ೧೧ ॥ ರುದ್ರಾಕ್ಷಿಗಳನ್ನು ಧರಿಸಿರುವದರಿಂದ ಬರುವ ಪುಣ್ಯಕ್ಕೆ ಬೆಲೆಯಿಲ್ಲ ಆ ರುದ್ರಾಕ್ಷಿಗಳನ್ನು ಧರಿಸಿದವನು ಬೇರೆ ಏನೂ ಆಗದೆ ದೇವತೆಗಳಿಗೆ ಮಾನ್ಯವಾಗುವನು ಎಂದು ಶ್ರುತಿಯಲ್ಲಿ ಹೇಳಿದೆ. ॥ ೧೩ ॥ ಸಾವಿರ ರುದ್ರಾಕ್ಷಿಗಳನ್ನು ಧರಿಸಿದವನು ಶ್ರೀ ಶಂಕರನಿಗೆ ಸಮಾನವಾಗಿ ಸಮಸ್ತ ದೇವತೆಗಳಿಗೆ ವಂದ್ಯನಾಗುವನು. ॥ ೧೪ ॥ ಸಹಸ್ರ ರುದ್ರಾಕ್ಷಿಗಳು ಸಿಗದಿದ್ದರೆ ಎರಡೂ ತೋಳುಗಳಲ್ಲಿ ೧೬-೧೬, ಚಂಡಿಕೆಗೆ ೧, ಎರಡು ಮುಂಗೈಗಳಲ್ಲಿ ೧೨-೧೨, ॥ ೧೫ ॥ ಕಂಠದಲ್ಲಿ ೩೨, ತಲೆಯಲ್ಲಿ ೪೦, ಎರಡೂ ಕಿವಿಗಳಲ್ಲಿ ೬-೬, ॥ ೧೬ ॥ ಕೊರಳಲ್ಲಿ ೧೦೮ ರ ಉತ್ತಮ ಸರ ಈ ಪ್ರಕಾರ ವಿಧಿಯಿಂದ ರುದ್ರಾಕ್ಷಿಗಳನ್ನು ಧರಿಸಿದವನು ಶಿವಪುತ್ರನಿಗೆ ಸಮಾನನಾಗುವನು. ॥ ೧೭ ॥ ಮುತ್ತು, ಹವಳ, ಸ್ಫಟಿಕ, ವೈಡೂರ್ಯ, ಬಂಗಾರಗಳನ್ನು ಹಾಕದಂಥ ರುದ್ರಾಕ್ಷಿ ಸರವನ್ನು ಧರಿಸಬೇಕು. ॥ ೧೮ ॥ ಅದರ ಫಲವು ಅಪಾರವಾಗಿರುವದು, ರುದ್ರಾಕ್ಷಿ ಮಾಲೆಯು ಅತಿ ಮಹತ್ವದ್ದು, ಸಮಯಾನುಸಾರ ಅವು ಸಿಕ್ಕಾಗ ಧಾರಣಮಾಡಬೇಕು. ॥ ೧೯ ॥ ಯಾರ ಕಂಠದಲ್ಲಿ ರುದ್ರಾಕ್ಷಮಾಲೆ ಇರುತ್ತದೋ ಅವರಿಗೆ ಪಾಪವು ಹತ್ತುವದಿಲ್ಲ. ಅವರಿಗೆ ಸದ್ಗತಿಯಾಗಿ, ಶಾಶ್ವತವಾದ ರುದ್ರಲೋಕವುಂಟಾಗುವದು. ॥ ೨೦ ॥ ರುದ್ರಾಕ್ಷಿ ಮಾಲೆಯಿಂದ ಜಪಾದಿ ಅನುಷ್ಠಾನಗಳನ್ನು ಮಾಡಿದರೆ ಅದರಿಂದ ಅನಂತ ಫಲವು ಬರುವದು ॥ ೨೧ ॥ ಕಂಠದಲ್ಲಿ ರುದ್ರಾಕ್ಷಿ ಮಾಲಾ ಮತ್ತು ಹಣೆಯಲ್ಲಿ ತ್ರಿಪುಂಡ್ರ ಭಸ್ಮವಿಲ್ಲದೆ ಇರುವವನು ಹುಟ್ಟಿದ್ದು ವ್ಯರ್ಥವಾಗುತ್ತದೆ. ॥ ೨೨ ॥ ತಲೆ ಅಥವಾ ಕಿವಿಗಳಲ್ಲಿ ರುದ್ರಾಕ್ಷಿಗಳನ್ನು ಧರಿಸಿ ಸ್ನಾನ ಮಾಡಿದರೆ ಗಂಗಾಸ್ನಾನದ ಫಲವು ಬರುವದು. ॥ ೨೩ ॥ ರುದ್ರಾಕ್ಷಿಯುನ್ನಿಟ್ಟು, ರುದ್ರಾಭಿಷೇಕದಿಂದ ಪೂಜಾ ಮಾಡಿದರೆ, ನಿಶ್ಚಯವಾಗಿ ಶಿವಲಿಂಗವನ್ನು ಪೂಜೆ ಮಾಡಿದಷ್ಟು ಫಲವು ಬರುವದು. ॥ ೨೪ ॥ ೧-೫-೧೧-೧೪ ಮುಖದ ರುದ್ರಾಕ್ಷಿಗಳಿರುವವು. ॥ ೨೫ ॥ ಅವು ಉತ್ತಮವಾದಂಥವು ಸಿಕ್ಕರೆ ಒಳ್ಳೇದು, ನಾನಾಪ್ರಕಾರವಾದವು

ಗಳನ್ನು ಧರಿಸಿದರೂ ಅವುಗಳಿಂದ ಚತುರ್ವಿಧ ಪುರುಷಾರ್ಥಗಳು ಸಾಧಿಸುವವು. ॥ ೨೬ ॥ ಈ ವಿಷಯವಾಗಿ ಪೂರ್ವದಲ್ಲಿ ಒಂದು ಕಥೆಯಾಯಿತು, ಅದನ್ನು ಕೇಳಿದಕೂಡಲೆ ಪಾಪವು ಓಡಿಹೋಗುವದು ಹೇಳುವೆನು ಕೇಳು. ॥ ೨೭ ॥

ಪೂರ್ವದಲ್ಲಿ ಕಾಶ್ಮೀರ ದೇಶದಲ್ಲಿ ಭದ್ರಸೇನನೆಂಬ ಒಬ್ಬ ರಾಜನಿದ್ದನು. ಅವನಿಗೆ ಸುಧರ್ಮನೆಂಬ ಪ್ರಸಿದ್ಧನಾದ ಒಬ್ಬ ಮಗನಿದ್ದನು ॥ ೨೮ ॥ ಆ ರಾಜನ ಮಂತ್ರಿಗೆ ತಾರಕನೆಂಬ ಒಬ್ಬ ಪ್ರಸಿದ್ಧ ಮಗನಿದ್ದನು. ಆ ಇಬ್ಬರು ಪುತ್ರರು ಜ್ಞಾನವಂತರಾಗಿ ಒಳ್ಳೇ ಮಿತ್ರರಾಗಿದ್ದರು. ॥ ೨೯ ॥ ಅವರು ಒಂದೇ ವಯಸ್ಸಿನವರಾಗಿ, ಒಂದೇ ಸ್ಥಳದಲ್ಲಿ ಒಬ್ಬನೇ ಗುರುವಿನ ಹತ್ತರ ಅಭ್ಯಾಸ ಮಾಡುತ್ತ ಕ್ರೀಡಾಸ್ಥಾನಗಳಲ್ಲಿ ಸಹ ಅತಿ ಪ್ರೀತಿಯಿಂದ ವಿನೋದದ ಆಟಗಳನ್ನಾಡುತ್ತ ಸಂತೋಷದಿಂದಿರುತ್ತ ॥ ೩೦ ॥ ಒಂದೇಕಡೆಗೆ ಊಟ ಮಾಡುತ್ತ ಮಹಾ ಜ್ಞಾನಿಗಳಾಗಿ ಪರಮ ಶಿವಭಕ್ತರಾಗಿದ್ದರು. ॥ ೩೧ ॥ ಅವರು ಸದಾ ಸರ್ವ ದೇಹದಲ್ಲಿಯೂ ತ್ರಿಪುಂಡ್ರ ಭಸ್ಮವನ್ನು ಧರಿಸಿ, ಸುಂದರವಾದ ರುದ್ರಾಕ್ಷಿ ಮಾಲೆಗಳನ್ನು ಧರಿಸುತ್ತಿದ್ದರು ॥ ೩೨ ॥ ಮತ್ತು ರತ್ನದ ಹಾಗು ಬಂಗಾರದ ಆಭರಣಗಳು ಕಬ್ಬಿಣದ ಸಮಾನವೆಂದು ತಿಳಿದು ಅವುಗಳನ್ನು ಬಿಟ್ಟು ಮತ್ತೆ ಯಾವ ಅಲಂಕಾರಗಳನ್ನೂ ಧರಿಸದೆ ರುದ್ರಾಕ್ಷಿಮಾಲೆಗಳನ್ನೇ ಧರಿಸುತ್ತಿದ್ದರು. ॥ ೩೩ ॥ ತಂದೆ-ತಾಯಿಗಳು-ಆಪ್ತೇಷ್ಟರು ರತ್ನಾಭರಣಗಳನ್ನು ತಂದುಕೊಟ್ಟರೆ, ಅವು ಕಲ್ಲು ಕಬ್ಬಿಣಗಳಿಗೆ ಸಮಾನವೆಂದು ಸಿಟ್ಟಿನಿಂದ ಅವುಗಳನ್ನು ಬಿಸಾಟಿ ಒಗೆಯುತ್ತಿದ್ದರು. ॥ ೩೪ ॥ ಹೀಗೆ ನಡೆದಿರಲು ಒಂದುದಿವಸ ಆ ರಾಜನ ಮನೆಗೆ ತ್ರಿಕಾಲಜ್ಞಾನಿಗಳಾದ ಪರಾಶರ ಮುನಿಗಳು ಬಂದರು. ॥ ೩೫ ॥ ಅವರು ಬರುವದನ್ನು ಕಂಡು ರಾಜನು ಎದುರಾಗಿ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ ॥ ೩೬ ॥ ಒಳಗೆ ಕರಕೊಂಡು ಬಂದು ಸಿಂಹಾಸನದಲ್ಲಿ ಕೂಡ್ರಿಸಿ ಒಳ್ಳೇ ಆನಂದದಿಂದ ವಿಧಿಪ್ರಕಾರ ಪೂಜಿಸಿದನು. ॥ ೩೭ ॥ ಆಮೇಲೆ ಆ ರಾಜನು ಭಕ್ತಿ-ವಿನಯಗಳಿಂದ ಕೈಮುಗಿದು ನಿಂತು— ಸ್ವಾಮೀ, ಪರಾಶರರೇ ನನ್ನ ಹಾಗು ಮಂತ್ರಿ ಪುತ್ರರಿಗೆ ಹುಚ್ಚುಹಿಡಿದದೆ ಏನು ಮಾಡಬೇಕು ? ॥ ೩೮ ॥

ಆವರು ಸುವರ್ಣ ಹಾಗು ರತ್ನಾಭರಣಗಳನ್ನು ಧರಿಸುವದಿಲ್ಲ. ಕೇವಲ ರುದ್ರಾಕ್ಷಿಗಳನ್ನೇ ಧರಿಸುವರು. || ೩೯ || ರತ್ನಾಭರಣಗಳನ್ನು ಬಿಸಾಟಿ ಒಗೆಯುವರು ಯಾರು ಹೇಳಿದರೂ ಕೇಳುವದಿಲ್ಲ. ಈ ಪುತ್ರರ ವಿಷಯವಾಗಿ ಏನು ಮಾಡಬೇಕು ? ಇವರಿಗೆ ರುದ್ರಾಕ್ಷಿಯನ್ನು ಕಟ್ಟಿಕೊಳ್ಳಬೇಕೆಂಬ ಜ್ಞಾನವು ಹ್ಯಾಗೆ ಬಂತು ? ತಾವು ಅವರಿಗೆ ಬುದ್ಧೀ ಹೇಳಿದರೆ ಕೇಳುವರು. || ೪೦ || ಸ್ವಾಮೀ, ತಾವು ತ್ರಿಕಾಲಜ್ಞಾನಿಗಳಿದ್ದು ಅವರು ಹೀಗೇಕೆ ಮಾಡುವರೆಂಬದನ್ನು ದಯಮಾಡಿ ನನಗೆ ವಿಸ್ತಾರವಾಗಿ ಹೇಳಬೇಕು ಎಂದು ಬೇಡಿಕೊಂಡನು. || ೪೧ ||

ಆವನ ಮಾತು ಕೇಳಿ ಪರಾಶರರು ಸಂತೋಷಬಟ್ಟು ನಕ್ಕು— ರಾಜಾ, ನಿನ್ನ ಹಾಗು ಮಂತ್ರಿಪುತ್ರರ ವೃತ್ತಾಂತವು ವಿಚಿತ್ರವಾಗಿಯೂ ವಿಸ್ಮಯವಾಗಿಯೂ ಇರುವದು ಹೇಳುವೆನು ಕೇಳು. || ೪೨-೪೩ || ಪೂರ್ವದಲ್ಲಿ “ ನಂದಿ ” ಎಂಬ ನಗರದಲ್ಲಿ ಅತಿ ಲಾವಣ್ಯ ಸುಂದರಿಯಾದ ಹಾಗು ಚಂದ್ರಮುಖಿಯಾದ ಒಬ್ಬ ವೇಶ್ಯೆ ಇದ್ದಳು || ೪೪ || ಆಕೆಯು ಕೂಡ್ರುವದಕ್ಕೆ ಸುವರ್ಣಖಚಿತ ಶೋಭಾಯಮಾನವಾದ ಆಸನವೂ ಅದರಮೇಲೆ ಹುಣ್ಣಿವೆಯ ಚಂದ್ರನಂತೆ ಪ್ರಕಾಶಮಾನವಾದ ಛತ್ರವೂ ಇದ್ದವು || ೪೫ || ಆಕೆಯ ಮನೆಯೂ ಪಾದುಕೆಗಳೂ ಸುವರ್ಣಮಯವಾಗಿದ್ದವು ಆಕೆಗೆ ವಿಚಿತ್ರ ಹಾಗು ನಾನಾತರದ ಅನೇಕ ಆಭರಣಗಳಿದ್ದವು. || ೪೬ || ಆಕೆಯ ಮಂಚವು ರತ್ನಖಚಿತವಾದದ್ದಿತ್ತು ಆಕೆಯ ಮನೆಯಲ್ಲಿ ಅನೇಕ ಆಕಳು-ಎಮ್ಮೆ, ದಾಸ-ದಾಸಿಯರೂ ಇದ್ದರು. || ೪೭ || ಆಕೆಯ ನವಯೌವನದಿಂದ ಕೂಡಿ, ಸರ್ವಾಭರಣಗಳಿಂದ ಭೂಷಿತಳಾಗಿ ರತಿಯಂತೆ ಅತಿ ಸುಂದರಿಯಾಗಿ ಚಂದ್ರಕ್ರಾಂತಿಯಂತೆ ಪ್ರಕಾಶಿಸುತ್ತಿದ್ದಳು || ೪೮ || ಆಕೆಯ ಮನೆಯಲ್ಲಿ ಗಂಧ, ಕುಂಕುಮ, ಕಸ್ತೂರಿ, ಮುಂತಾದ ಸುವಾಸನೆಯ ದ್ರವ್ಯಗಳೂ ಅನೇಕ ಸುಗಂಧ ಪುಷ್ಪಗಳೂ ಇದ್ದು, ಆಕೆಯು ಅವುಗಳನ್ನು ಧರಿಸುತ್ತ ಅಖಿಲ ಭೋಗಗಳನ್ನು ಅನುಭವಿಸುತ್ತ ಆ ಗ್ರಾಮದಲ್ಲಿ ಒಳ್ಳೇ ಪ್ರಸಿದ್ಧಳಾಗಿದ್ದಳು. || ೪೯ || ಆಕೆಯ ಮನೆಯಲ್ಲಿ ಧನ-ಧಾನ್ಯಗಳು ಕೋಟಿಗಟ್ಲೆ ಅಳತೆ ಇಲ್ಲದಷ್ಟು ಇದ್ದವು. ಅವಳು ಈ ಪ್ರಕಾರ ಸುಖಗಳನ್ನು ಅನು

ಭವಿಸುತ್ತ ಆ ನಗರದಲ್ಲಿ ಆನಂದದಿಂವಿರುತ್ತಿದ್ದಳು. ‖ ೫೦ ‖ ಆಕೆಯು ತಾನು ವೇಶ್ಯಾ ಇದ್ದು ಪತಿವ್ರತೆ ಎಂದೆನಿಸಿಕೊಳ್ಳುತ್ತ ಬ್ರಾಹ್ಮಣರಿಗೆ ಅನ್ನ-ವಸ್ತ್ರ ಮೊದಲಾದ ಅನೇಕ ದಾನ-ಧರ್ಮಗಳನ್ನು ಮಾಡುತ್ತಿದ್ದಳು. ‖ ೫೧ ‖ ಆಕೆಯ ಮನೆಯಹತ್ತಿರ ಅನೇಕತರದ ರತ್ನಗಳಿಂದ ಖಚಿತವಾದ ಹಾಗು ಅತಿ ಶೋಭಾಯಮಾನವಾದ ಒಂದು ನಾಟ್ಯ ಮಂಟಪವಿತ್ತು. ಆಕೆಯು ಅಲ್ಲಿ ತನ್ನ ಸಖಿಯರಿಂದ ಕೂಡಿಕೊಂಡು ಸದಾ ನರ್ತನ ಮಾಡುತ್ತಿದ್ದಳು. ‖ ೫೨ ‖ ಅವಳು ವಿನೋದಕ್ಕಾಗಿ ಆ ನಾಟ್ಯಮಂಟಪದಲ್ಲಿ ಒಂದು ಮಂಗವನ್ನೂ ಒಂದು ಕೋಳಿಯನ್ನೂ ಸಾಕಿ ಅವುಗಳಿಗೆ ಸದಾಶಿವ ಎಂಬ ಹೆಸರನ್ನಿಟ್ಟು ಅವುಗಳ ಕೊರಳಲ್ಲಿ ರುದ್ರಾಕ್ಷ ಮಾಲೆಗಳನ್ನು ಹಾಕಿ ವಿನೋದಕ್ಕಾಗಿ ಅವುಗಳಿಗೆ ನೃತ್ಯವನ್ನು ಕಲಿಸಿದ್ದಳು. ‖ ೫೩-೫೪ ‖ ಹೀಗೆ ನಡೆದಿರಲು ಒಂದುದಿವಸ ಒಂದು ವಿಚಿತ್ರ ಸಂಗತಿಯಾಯಿತು ಹೇಳುವೆನು ಕೇಳು. ‖ ೫೫ ‖

ಒಂದು ದಿನ ಶಿವವ್ರತನೆಂಬ ಒಬ್ಬ ಧನಿಕ ವೈಶ್ಯನು ರುದ್ರಾಕ್ಷಿ ಮಾಲೆಗಳನ್ನೂ ಭಸ್ಮವನ್ನೂ ಧರಿಸಿ ಆಕೆಯ ಮನೆಗೆ ಬಂದನು. ‖ ೫೬ ‖ ಅವನ ಬಲಗೈಯಲ್ಲಿ, ಸೂರ್ಯ-ಚಂದ್ರರಂತೆ ತೇಜೋಮಯವಾಗಿ ಹಾಗು ವಿರಾಜಮಾನವಾಗಿ ಹೊಳೆಯುವಂಥ ರತ್ನಖಚಿತವಾದ ಒಂದು ಶಿವಲಿಂಗವಿತ್ತು. ‖ ೫೭ ‖ ಆ ವೇಶ್ಯೆಯು ಅವನು ಬಂದದ್ದನ್ನು ನೋಡಿ ನಮಸ್ಕಾರ ಮಾಡಿ, ಕೈಹಿಡಿದು ಕರಕೊಂದು ಹೋಗಿ ಅವನನ್ನು ನಾಟ್ಯಮಂಟಪದಲ್ಲಿ ಕೂಡ್ರಿಸಿ ನಾನಾ ರೀತಿಯಿಂದ ಸತ್ಕರಿಸಿದಳು ‖ ೫೮ ‖ ಆಮೇಲೆ ಅವನ ಕೈಯಲ್ಲಿ ಸೂರ್ಯನಂತೆ ಹೊಳೆಯುವ ರತ್ನಖಚಿತವಾದ ಲಿಂಗವನ್ನು ಕಂಡು ವಿಸ್ಮಿತಳಾಗಿ, ತನ್ನ ಒಬ್ಬ ಮುಖ್ಯ ಸಖಿಯನ್ನು ಏಕಾಂತದಲ್ಲಿ ಕರೆದು— ಎಲ್ಲೆ ಸಖಿಯೇ, ನನಗೆ ಆ ವೈಶ್ಯನ ಕೈಯಲ್ಲಿದ್ದ ಲಿಂಗವು ಬೇಕಾಗಿದೆ ಅದನ್ನು ಆ ಧನಿಕ ವೈಶ್ಯನು ಬೆಲೆ ತಕ್ಕೊಂಡು ಕೊಡುವನೋ ಅಥವಾ ನನ್ನ ರತಿಸುಖಕ್ಕೆ ಕೊಡುವನೋ ಹ್ಯಾಗೆ ಕೇಳು. ನಾನು ಮೂರು ದಿವಸ ಅವನ ಧರ್ಮಪತ್ನಿಯಂತೆ ಇರುವೆನು ಎಂದಳು. ‖ ೫೯-೬೦-೬೧ ‖ ಆ ವೇಶ್ಯೆಯ ಮಾತು ಕೇಳಿ ಆ ಸಖಿಯು

ಆ ವೈಶ್ಯನ ಹತ್ತರ ಬಂದು, ಸ್ವಾಮೀ, ವೈಶ್ಯರೇ, ನಮ್ಮ ಒಡೆಯಳಿಗೆ ನಿಮ್ಮ ಹತ್ತರಿರುವ ರತ್ನಲಿಂಗವು ಬೇಕಾಗಿದೆ ಯಂತೆ, ಅದನ್ನು ನೀವು ಮೂರು ದಿವಸ ಅವಳ ರತಿಸುಖಕ್ಕೆ ಕೊಡುವಿರೋ, ಅಥವಾ ಲಕ್ಷಗಟ್ಲೆ ಬೆಲೆ ತಕ್ಕೊಂಡು ಕೊಡುವಿರೋ? ಇವುಗಳಲ್ಲಿ ನಿಮ್ಮ ಮನಸ್ಸಿಗೆ ಯಾವದು ಬರುತ್ತದೆಂಬದನ್ನು ನಮ್ಮ ಒಡೆಯಳ ಸಲುವಾಗಿ ಹೇಳಬೇಕು ಎಂದಳು. ॥ ೬೨-೬೩ ॥ ಆ ಸತಿಯ ಮಾತು ಕೇಳಿ ಆ ವೈಶ್ಯನು ನಕ್ಕು— ಎಲೈ ಸಖಿಯೇ, ನಿನ್ನ ಒಡತಿಯು ಇವತ್ತಿನಿಂದ ೩ ದಿವಸ ಏಕಮನಸ್ಸಿನಿಂದ ನನ್ನ ಧರ್ಮಪತ್ನಿಯಂತೆ ಪತಿವ್ರತೆಯಾಗಿದ್ದರೆ ಅವಳ ರತಿ ಸುಖಕ್ಕಾಗಿ ಈ ಮನೋಹರ ಲಿಂಗವನ್ನು ಕೊಡುವೆನು. ॥ ೬೪-೬೫ ॥ ಎಂದು ಹೇಳಿ ಅವನು ಆ ಮುಖ್ಯ ವೇಶ್ಯೆಯನ್ನೇ ಕರೆದು— ಎಲೈ ಸುಂದರೀ, ನಿನಗೆ ನಿಜವಾಗಿ ವ್ಯಭಿಚಾರಿಣಿ ಎಂಬ ಹೆಸರಿರುವದು ಕಾರಣ ನಿನ್ನ ಮಾತು ನಂಬುವದು ಹೇಗೆ? ॥ ೬೬ ॥ ನಿನಗೆ ಧರ್ಮ-ಕರ್ಮವೆಲ್ಲಿ? ಬಹು ಪುರುಷರಲ್ಲಿ ಸುಖಿಸುವಂಥ ನಿನಗೆ ಪತಿವ್ರತೆ ಎಂಬ ಹೆಸರು ಹ್ಯಾಗೆ ಬರುವದು? ಅದನ್ನು ನನಗೆ ಹೇಳು. ॥ ೬೭ ॥ ನಿಮ್ಮ ಕುಲವು ಸದಾ ವ್ಯಭಿಚಾರ ಮಾಡಲಿಕ್ಕೆ ಪ್ರಸಿದ್ಧವಾದದ್ದು! ನಿತ್ಯ ಒಬ್ಬ ಪುರುಷನ ಸಹವಾಸದಿಂದ ನಿಮ್ಮ ಮನಸ್ಸು ತೃಪ್ತಿಹೊಂದಿ ಸ್ಥಿರವಾಗುವದಿಲ್ಲ ಆದ್ದರಿಂದ ನಿನ್ನ ಮಾತು ನಂಬುವದು ಹೇಗೆ? ಎಂದು ಅಂದನು ॥ ೬೮ ॥ ಆಗ ಆ ವೇಶ್ಯೆಯು— ಸ್ವಾಮೀ, ನಾನು ಸತ್ಯವಾಗಿ ಇವತ್ತಿನಿಂದ ಮೂರು ದಿವಸ ನಿಮ್ಮ ಕುಲಸ್ತ್ರೀಯಾಗಿರುವೆನು ॥ ೬೯ ॥ ದಯಮಾಡಿ ಆ ರತ್ನಖಚಿತ ಲಿಂಗವನ್ನು ನನಗೆ ಕೊಡಿರಿ. ನಾನು ಸಂತೋಷ ಹೊಂದಿ, ತನು-ಮನ-ಧನಗಳಿಂದ ನಿಮ್ಮವಳಾಗಿ, ಮೂರು ದಿವಸ ರತಿಸುಖದಲ್ಲಿ ನಿಮ್ಮನ್ನು ಒಳ್ಳೇ ತೃಪ್ತಿಪಡಿಸುವೆನು ಎಂದಳು ॥ ೭೦ ॥ ಆಮೇಲೆ ವೈಶ್ಯನು— ಎಲೈ ವೇಶ್ಯೆಯೇ, ನೀನು ಅಹೋರಾತ್ರಿ ಮೂರು ದಿವಸಗಳ ವರೆಗೆ ನನ್ನ ಸಂಗಡ ಪತ್ನೀ ಧರ್ಮ ಕರ್ಮದಂತೆ ನಡೆಯುತ್ತೇನೆಂದು ನನಗೆ ಪ್ರಮಾಣ ಮಾಡಿ ಕೊಡು ಎಂದನು ॥ ೭೧ ॥ ಆಗ ಆಕೆಯು ತನ್ನ ಕೈಯಿಂದ ಆ ಲಿಂಗವನ್ನು ಮುಟ್ಟಿ— ಸೂರ್ಯ-ಚಂದ್ರರ ಸಾಕ್ಷಿಯಾಗಿ, ನಾನು ಇವತ್ತಿನಿಂದ ಮೂರು ದಿವಸ ನಿಮ್ಮ ಧರ್ಮಪತ್ನಿಯಾಗಿರುವೆನು ಎಂದು ಪ್ರಮಾಣ ಮಾಡಿ ಅವನ ಪತ್ನಿಯಾದಳು. ॥ ೭೨ ॥ ಆಮೇಲೆ ಆ

ಆ ವೈಶ್ಯನು ಆ ಲಿಂಗವನ್ನು ಆಕೆಯ ಕೈಯಲ್ಲಿ ಕೊಟ್ಟನು. ಆಗ ಆಕೆಗೆ ಬಹಳ ಸಂತೋಷವಾಗಿ ಆಕೆಯು ತನ್ನ ಕೈಯಲ್ಲಿ ಕಂಕಣವನ್ನು ಕಟ್ಟಿಕೊಂಡಳು. ॥ ೭೩ ॥ ಆಗ ಆ ವೈಶ್ಯನು ಆಕೆಯನ್ನು ಕುರಿತು— ಎಲೈ ಸುಂದರೀ, ಈ ಲಿಂಗವು ನನ್ನ ಪ್ರಾಣಸಮಾನವಾಗಿರುತ್ತದೆಂದು ತಿಳಿ. ॥ ೭೪ ॥ ಇದನ್ನು ನೀನು ಒಳ್ಳೇ ರೀತಿಯಿಂದ ಜೋಪಾನ ಮಾಡು. ಈ ಲಿಂಗಕ್ಕೆ ಏನಾದರೂ ಹಾನಿಯಾದರೆ ನಾನು ಪ್ರಾಣವನ್ನು ಕೊಡುವೆನು ಎಂದನು. ॥ ೭೫ ॥ ಆಗ ಆಕೆಯು ಅವನ ಮಾತಿಗೆ ಒಪ್ಪಿಕೊಂಡು— ಸ್ವಾಮೀ, ನಾನು ಈ ಲಿಂಗವನ್ನು ನನ್ನ ಪ್ರಾಣಸಮಾನವೆಂದು ತಿಳಿದು ಜೋಪಾನ ಮಾಡುವೆನು ಎಂದು ಅದನ್ನು ಕಾಯುತ್ತಿದ್ದಳು. ॥ ೭೬ ॥ ಈ ಪ್ರಕಾರ ಅವರು ಸಂತೋಷದಿಂದ ಮಾತಾಡುತ್ತ ಆ ನಾಟ್ಯ ಮಂದಿರದಲ್ಲಿ ಕುಳಿತಿರುವಷ್ಟರಲ್ಲಿ ಅಸ್ತಮಯವಾಯಿತು ಆಗ ಅವಳು ಆ ವೈಶ್ಯನನ್ನು ಕುರಿತು–– ಸ್ವಾಮೀ, ಇನ್ನು ಮನೆಯೊಳಗೆ ಹೋಗೋಣ ಎಂದು ಅಂದಳು ॥ ೭೭ ॥ ಆಗ ಆ ವೈಶ್ಯನು— ಎಲ್ಲೆ ಸುಂದರೀ ಸಂಭೋಗ ಸಮಯದಲ್ಲಿ ಈ ಲಿಂಗವನ್ನು ಹತ್ತಿರ ಇಟ್ಟುಕೊಳ್ಳಬಾರದು ಎಂದನು ॥ ೭೮ ॥ ಆ ಮಾತು ಕೇಳಿ ಅವಳು ಆ ರತ್ನಲಿಂಗವನ್ನು ಆ ಮಂಟಪದ ಮಧ್ಯಸ್ತಂಭದ ಹತ್ತಿರ ಇಟ್ಟು, ಆತನೊಡನೆ ಅಂತರ್ಗೃಹದೊಳಗೆ ಹೋಗಿ ॥ ೭೯ ॥ ಇಬ್ಬರೂ ಕ್ರೀಡಿಸುತ್ತಿರುವ ಒಂದು ಅರಕ್ಷಣದಲ್ಲಿಯೇ, ಒಮ್ಮಿಂದೊಮ್ಮೆ ಆ ನಾಟ್ಯಮಂಟಪದಲ್ಲಿ ಭಯಂಕರ ಉರಿಯು ಎದ್ದು ॥ ೮೦ ॥ ಧೂಪ ಉರಿದಂತೆ ಆ ಮಂಟಪವು ಕೂಡಲೇ ಸುಟ್ಟು ಭಸ್ಮವಾಗಿ ಹೋಯಿತು. ಅದನ್ನು ಕಂಡು ಆ ವೈಶ್ಯನು ಶೋಕ ಮಾಡಹತ್ತಿ ॥ ೮೧ ॥ ಅಯ್ಯೋ! ಹಾ! ಹಾ! ಏನಾಯಿತಲ್ಲಾ? ನನ್ನ ಪ್ರಾಣಲಿಂಗವು ಹೋಯಿತು! ಏನು ಮಾಡಲಿ? ಎಂದೆನ್ನುತ್ತಿದ್ದನು. ಆಗ ಆ ಊರ ಜನರೆಲ್ಲರೂ ಕೂಡಿ ಅತಿ ಸಾಹಸ ಮಾಡಿ ಆ ಬೆಂಕಿಯನ್ನು ಆರಿಸಿ ॥ ೮೨ ॥ ಆ ಲಿಂಗವನ್ನು ನೋಡಿದರು. ಆ ಲಿಂಗವು ಸುಟ್ಟು ಹೋದದ್ದಲ್ಲದೆ ಅಲ್ಲಿ ಕಟ್ಟಿದ ಮಂಗ ಕೋಳಿಗಳೆರಡೂ ಸುಟ್ಟು ಭಸ್ಮವಾಗಿದ್ದವು. ॥ ೮೩ ॥ ಅದನ್ನು ಕಂಡು ಆ ವೈಶ್ಯನು ಅತಿಶಯ ದುಃಖ ಮಾಡುತ್ತ— ನನ್ನ ಪ್ರಾಣಲಿಂಗವು ಸುಟ್ಟುಹೋಯಿತು. ಈಗ ನಾನು ಪ್ರಾಣವನ್ನು ಕೊಡುವೆನು. ॥ ೮೪ ॥ ಎಂದು ಅವನು ಹೊರಗೆ

ಬಂದು, ಒಂದು ಕುಂಡವನ್ನು ಮಾಡಿ ಆದರಲ್ಲಿ ಬಹಳ ಕಟ್ಟಿಗೆಗಳನ್ನು ಕೂಡಹಾಕಿ ಬೆಂಕಿಯನ್ನು ಹೊತ್ತಿಸಿ ||೮೫|| ನನ್ನಲಿಂಗವು ಸುಟ್ಟುಹೋಯಿತು ಎಂದೆನ್ನುತ್ತ ಕೂಡಲೆ ಆ ಅಗ್ನಿಪ್ರವೇಶ ಮಾಡಿದನು. ಆಗ ಆ ಊರ ಜನರು ಆಶ್ಚರ್ಯಬಡುತ್ತಿದ್ದರು. ಆದರೆ ಆ ವೇಶ್ಯೆಯು ದುಃಖಮಾಡುತ್ತ-- || ೮೬ || ಅಯ್ಯೋ! ಹಾ! ಏನಾಯಿತಲ್ಲಾ? ಈಗ ನನಗೆ ಪುರುಷಹತ್ಯಾ ದೋಷವು ಬಂತು! ಮಂಟಪದಲ್ಲಿದ್ದ ಲಿಂಗವು ಸುಟ್ಟುಹೋಯಿತು! ||೮೭|| ಈ ವೈಶ್ಯನು ನನ್ನ ಪ್ರಾಣೇಶ್ವರನು ಅವನು ನಿಶ್ಚಯವಾಗಿ ಮೃತನಾದನು ಪತಿವ್ರತಾ ಧರ್ಮದಿಂದ ನಾನೂ ತೀವ್ರವಾಗಿ ಪ್ರಾಣವನ್ನು ಬಿಡುವೆನು ಎಂದು ಅನ್ನುತ್ತ || ೮೮ || ಬ್ರಾಹ್ಮಣರನ್ನು ಕರೆಯಿಸಿ ಸಹಗಮನ ಮಾಡುವದಕ್ಕೆ ಸಂಕಲ್ಪಮಾಡಿ ತನ್ನ ಐಶ್ವರ್ಯವೆಲ್ಲವನ್ನು ದಾನ-ಧರ್ಮ ಮಾಡಬೇಕೆಂದು || ೮೯ || ತನ್ನ ಸಕಲ ವಸ್ತ್ರಾಭರಣಗಳನ್ನೂ ಖಜಾನೆಯಲ್ಲಿರುವ ಎಲ್ಲ ದ್ರವ್ಯವನ್ನೂ ಆ ಎಲ್ಲ ಬ್ರಾಹ್ಮಣ ಶ್ರೇಷ್ಠರಿಗೆ ದಾನವನ್ನು ಕೊಟ್ಟು ಚಂದನಗಳಿಂದ ಅಗ್ನಿಕುಂಡದಲ್ಲಿ ಅಗ್ನಿಯನ್ನು ಪ್ರಜ್ವಲಿಸಿದಳು || ೯೦ || ಆಮೇಲೆ ತನ್ನ ಬಂಧು-ಬಳಗದವರಿಗೆ ನಮಿಸಿ— ನಾನು ನನ್ನ ಪತಿಯುಸಂಗಡ ಸಹಗಮನ ಮಾಡುತ್ತೇನೆ ನನಗೆ ಅಪ್ಪಣೆ ಕೊಡಿರಿ ಎಂದು ಕೇಳಿದಳು. || ೯೧ || ಆಕೆಯ ಮಾತು ಕೇಳಿ, ಕೆಲವು ಬಂಧು ಜನರು ದುಃಖಹೊಂದಿ— ನೀನು ಬುದ್ಧಿಹೀನಳು! ನೀನೇನು ಧರ್ಮವಾಡುತ್ತಿ? || ೯೨ || ವೇಶ್ಯೆಯರ ಮನೆಗೆ ರತಿ ಸುಖಕ್ಕಾಗಿ ನಿತ್ಯ ಅನೇಕ ಪುರುಷರು ಬರುವರು. ಅವರಿಗೆ ಆಳತೆಯಿಲ್ಲ. ಅಂದಮೇಲೆ ನಿನಗೆ ಈ ವೈಶ್ಯನು ಹ್ಯಾಗೆ ಪತಿಯಾದನು? || ೯೩ || ಎಲ್ಲಿಯ ವೈಶ್ಯ! ಎಲ್ಲಿಯ ಲಿಂಗ! ನಿತ್ಯ ನೂತನ ಪುರುಷರನ್ನು ಹೊಂದುವದೇ ವೇಶ್ಯೆಯರ ಮುಖ್ಯ ಧರ್ಮವೆಂದು ಪ್ರಸಿದ್ಧವಾಗಿರುತ್ತದೆ ನೀನು ವ್ಯರ್ಥವಾಗಿ ನಿನ್ನ ದೇಹವನ್ನೇಕೆ ಸುಟ್ಟುಕೊಳ್ಳುತ್ತೀ? || ೯೪ || ಇಂಥ ವೈಶ್ಯರು ಎಷ್ಟೋ ಮಂದಿ ಬರುವರು, ನೀನು ಅವರೆಲ್ಲರಿಗೂ ಹ್ಯಾಗೆ ಪತ್ನಿಯಾಗುವಿ? ನಿನ್ನ ಈ ಹುಚ್ಚ ಖ್ಯಾತಿಯನ್ನು ಕೇಳಿ ಊರ ಜನರೆಲ್ಲರು ನಗುವರು. ನಿನ್ನ ಮನಸ್ಸು ಹ್ಯಾಗೆ ಅದೆ ಹೇಳು. || ೯೫ || ಎಂದು ಆಕೆಯ ಬಂಧು-ಬಳಗದವರಿಲ್ಲರು ಆಕೆಯ ಸಹಗಮನಕ್ಕೆ ಅಡ್ಡಿ ಮಾಡಿದರು. ಏನು ಮಾಡಿದರೂ ಆಕೆಯು ಯಾರಮಾತೂ ಕೇಳದೆ || ೯೬ ||

ಆಗ— ಎಲೈ ಬಂಧುಗಳಿರಾ, ಈ ವೈಶ್ಯನೇ ನನ್ನ ನಿಜವಾದ ಪತಿಯು. ಅಹೋರಾತ್ರಿ ಮೂರುದಿವಸ ನಿನ್ನ ಧರ್ಮಪತ್ನಿಯಂತೆ ಇರುವೆನೆಂದು ಸೂರ್ಯ-ಚಂದ್ರ-ಭೂಮಿ ಸಾಕ್ಷಿಯಾಗಿ ಆತನಿಗೆ ಪ್ರಮಾಣ ಮಾಡಿ ಹೇಳಿ ಆತನ ಧರ್ಮ-ಕರ್ಮದ ಪತ್ನಿಯಾಗಿದ್ದೇನೆ. || ೯೭-೯೮ || ಈಗ ನನ್ನ ಪತಿಯು ಸತ್ಯವಾಗಿ ಸತ್ತನೆಂದು ನಿಮಗೆ ವಿನಂತೀ ಮಾಡಿಕೊಳ್ಳುತ್ತೇನೆ ಪತಿವ್ರತಾ ಧರ್ಮವು ವೇದಶಾಸ್ತ್ರಗಳಲ್ಲಿ ಪ್ರಖ್ಯಾತವಾಗಿರುತ್ತದೆ. ಆದರಿಂದ ಈಗ ನಾನು ಜೀವವನ್ನಿಡುವದಿಲ್ಲ. || ೯೯ || ಯಾವ ಸ್ತ್ರೀಯು ಪ್ರೀತಿಯಿಂದ ತನ್ನ ಪತಿಯಸಂಗಡ ಸಹಗಮನ ಹೋಗುತ್ತಾಳೋ ಅವಳು ಭೂಮಿಯಮೇಲೆ ಇಡುವ ಒಂದೊಂದು ಹೆಜ್ಜೆಗೆ ಒಂದೊಂದು ಅಶ್ವಮೇಧ ಫಲವು ಬರುತ್ತದೆಂದು ಶಾಸ್ತ್ರಗಳು ಹೇಳುತ್ತವೆ. || ೧೦೦ || ಸಹಗಮನ ಮಾಡಿದ ಸ್ತ್ರೀಯ ತೌರಮನೆಯ ಹಾಗು ಅತ್ತೆಯ ಮನೆಯ ೨೧-೨೧ ಕುಲದವರು ನರಕದಲ್ಲಿದ್ದರೂ ಸಹ ಅವರಿಗೆ ಸ್ವರ್ಗವಾಸವಾಗುವದು || ೧೦೧ || ಒಂದುವೇಳೆ ಈ ಪ್ರಕಾರ ಮಾಡದಿದ್ದರೆ ಪತಿವ್ರತಾ ಧರ್ಮವು ವ್ಯರ್ಥವಾಗುವದು, ಅಂದಮೇಲೆ ನಾವು ನಿಶ್ಚಯವಾಗಿ ಸ್ವರ್ಗವನ್ನು ಹ್ಯಾಗೆ ಹೊಂದಬೇಕು. || ೧೦೨ || ಸಹಗಮನದಿಂದ ಈ ಪ್ರಕಾರ ಪುಣ್ಯಬರುತ್ತದೆ. ಈ ಪ್ರಖ್ಯಾತವಾದ ದುಃಖಮಯ ಸಂಸಾರದಲ್ಲಿ ಈ ಭೂಮಿಯಲ್ಲಿ ಬದುಕಿದ್ದು ಏನು ಫಲವು? ಎಂದಾದರೂ ಒಮ್ಮೆ ಮರಣ ಬರುವದು ಸತ್ಯವು. ಆಗ ಈ ಸಹಗಮನದ ಫಲವು ಸಿಗುವದಿಲ್ಲ. || ೧೦೩ || ಎಂದು ಎಲ್ಲರಿಗೂ ವಿನಯದಿಂದ ಹೇಳಿ ಸಂತೋಷದಿಂದ ಮನೆಯಹೊರಗೆ ಬಂದು, ಅಗ್ನಿಕುಂಡದ ಹತ್ತಿರ ಹೋಗಿ ನಮಸ್ಕಾರ ಮಾಡಿದಳು. || ೧೦೪ || ಆಮೇಲೆ ಸರ್ವೇಶ್ವರನನ್ನು ಸ್ಮರಿಸಿ, ಸೂರ್ಯನಿಗೆ ನಮಸ್ಕಾರಮಾಡಿ, ಒಳ್ಳೇ ಉಲ್ಹಾಸದಿಂದ ಆ ಅಗ್ನಿಕುಂಡಕ್ಕೆ ಪ್ರದಕ್ಷಿಣಾ ಮಾಡಹತ್ತಿ || ೧೦೫ || ಯಾವತ್ತು ಬ್ರಾಹ್ಮಣರಿಗೆ ನಮಸ್ಕಾರ ಮಾಡಿ, ಅಗ್ನಿಕುಂಡದ ಎದುರಿಗೆ ನಿಂತು, ಕೂಡಲೆ ಅದರಲ್ಲಿ ಹಾರಿಕೊಂಡಳು ಆಗ ಚಮತ್ಕಾರವಾಯಿತು. || ೧೦೬ || ಆಗ ಸದಾಶಿವನು ಪಂಚಮುಖಗಳಿಂದಲೂ ದಶಭುಜಗಳಿಂದಲೂ ನಾಗಸೂತ್ರಗಳಿಂದಲೂ ಕೈಗಳಲ್ಲಿ ವಿಚಿತ್ರವಾದ ತ್ರಿಶೂಲ-ಡಮರುಗಳಿಂದಲೂ, ಕೂಡಿ ಭಸ್ಮಾಂಕಿತನೂ ಜಟಾಧಾರಿಯೂ ಆಗಿ ನಂದಿಯಮೇಲೆ ಕೂತುಕೊಂಡು

ಆ ಕುಂಡದೊಳಗಿಂದ ಮೇಲೆ ಬಂದು ಮೇಲಿಂದ ಮೇಲೆಯೇ ಆ ವೇಶ್ಯೆಯನ್ನು ಹಿಡಿದನು. ॥ ೧೦೭-೧೦೮ ॥ ಆಗ ಆ ಅಗ್ನಿಕುಂಡದಲ್ಲಿ ನೋಡಿದರೆ ಬೆಂಕಿಯು ಕಾಣಲಿಲ್ಲ, ಎಲ್ಲವೂ ಆರಿ ಹೋಗಿತ್ತು. ಆಗ ಭಕ್ತವತ್ಸಲ ಜಗನ್ನಾಥನು ಆಕೆಗೆ ಪ್ರಸನ್ನನಾದನು ॥ ೧೦೯ ॥ ಶ್ರೀ ವ್ಯೋಮಕೇಶನಾದ ಶಂಕರನು ಅವಳನ್ನು ಕೈಯಿಂದ ಹಿಡಿದು ಆ ಕುಂಡದಿಂದ ಆಕೆಯನ್ನು ಹೊರಗೆ ಇಳಿಸಿ ಅವಳ ಭಕ್ತಿಗೆ ಮೆಚ್ಚಿ,— ಎಲೌ ಸ್ತ್ರೀಯೇ, ನಿನಗೆ ಬೇಕಾದ ವರವನ್ನು ಬೇಡು. ॥ ೧೧೦ ॥ ನಿನ್ನ ಧರ್ಮವನ್ನೂ ಧೈರ್ಯವನ್ನೂ ಪರೀಕ್ಷಿಸಿ ನೋಡುವದಕ್ಕಾಗಿ ನಾನೇ ವೈಶ್ಯನ ರೂಪದಿಂದ ಬಂದಿದ್ದೆನು. ಈ ರೀತಿಯಾಯಿತು. ॥ ೧೧೧ ॥ ಆ ರತ್ನಲಿಂಗವು ನನ್ನ ಸ್ವಯಂಭುವಾದದ್ದು, ನಾನು ಮಾಯೆಯಿಂದ ಅಗ್ನಿಯನ್ನುಂಟುಮಾಡಿ ನಾಟ್ಯಮಂಟಪವನ್ನು ಸುಟ್ಟೆನು. ॥ ೧೧೨ ॥ ನಿನ್ನ ಮನಸ್ಸನ್ನು ನೋಡುವದಕ್ಕಾಗಿ ನಾನು ಅಗ್ನಿಪ್ರವೇಶ ಮಾಡಿದೆನು. ನೀನೂ ಅಗ್ನಿಪ್ರವೇಶ ಮಾಡಿ, ನಿನ್ನ ಪತಿವ್ರತಾ ಧರ್ಮವನ್ನು ಸತ್ಯವಾಗಿ ಮಾಡಿದಿ. ॥ ೧೧೩ ॥ ನಿನ್ನ ಭಕ್ತಿಗೆ ಮೆಚ್ಚಿದೆನು. ಆಯುರಾರೋಗ್ಯ ಸಂಪತ್ತುಗಳಲ್ಲಿ ನಿನ್ನ ಮನಸ್ಸಿಗೆ ಬಂದ ಬೇಕಾದ ವರವನ್ನು ಕೇಳು, ಕೊಡುವೆನು ಎಂದನು ॥ ೧೧೪ ॥ ಆ ಗೌರೀರಮಣನ ಮಾತು ಕೇಳಿ ಆ ವೇಶ್ಯೆಯು— ಚಂದ್ರಮೌಳಿಯೇ, ನಾನು ಇಂಥ ವರವನ್ನು ಕೇಳುವದಿಲ್ಲ. ನಾನು ತ್ರಿಭುವನಗಳ ಐಶ್ವರ್ಯಭೋಗವನ್ನು ತಕ್ಕೊಳ್ಳುವದಿಲ್ಲ. ॥ ೧೧೫ ॥ ನಿಮ್ಮ ಚರಣಕಮಲಗಳಲ್ಲಿ ಭ್ರಮರಳಾಗಿರುವದೇ ನನ್ನ ಮಹಾಭಾಗ್ಯವಾಗಿದೆ. ನನ್ನ ಬಂಧು, ಬಳಗ, ಆಪ್ತೇಷ್ಟ ಮೊದಲಾದವರೂ ಮತ್ತು ನನ್ನ ಸಕಲ ದಾಸದಾಸಿಯರೂ ನಿಮ್ಮ ಹತ್ತರವೇ ಇರುವರು. ಇವರೆಲ್ಲರನ್ನು ಸ್ವರ್ಗಕ್ಕೆ ಕರಕೊಂಡು ಹೋಗಬೇಕು ಪಶುಪತಿಯೇ, ಸರ್ವೇಶ್ವರನೇ, ನಾವು ಸರ್ವದಾ ನಿನ್ನ ಹತ್ತರವೇ ಇರುವೆವು. ॥ ೧೧೬-೧೧೭ ॥ ನಮಗೆ ಪುನಃ ಜನ್ಮವಾಗಬಾರದು. ಈ ಸಂಸಾರದ ಯಾತಾಯಾತವು ಆಗದಂತೆ ನಮ್ಮನ್ನು ತೀವ್ರವಾಗಿ ಇಲ್ಲಿಂದ ಬಿಡುಗಡೆ ಮಾಡಿರಿ ಎಂದು ಆತನ ಚರಣಕ್ಕೆ ನಮಸ್ಕಾರ ಮಾಡಿದಳು. ॥ ೧೧೮ ॥ ಈ ಪ್ರಕಾರವಾಗಿ ಆಕೆಯ ಮಾತು ಕೇಳಿ ಗೌರೀರಮಣನು ಪ್ರಸನ್ನನಾಗಿ ಹಾಗೇ ಆಗಲೆಂದು ಹೇಳಿ ಆ ಎಲ್ಲರನ್ನೂ ವಿಮಾನದಲ್ಲಿ ಕೂಡ್ರಿಸಿಕೊಂಡು ಸ್ವರ್ಗಕ್ಕೆ ಕರಕೊಂಡು

ಹೋದನು. ‖ ೧೯ ‖ ಎಲೈ ರಾಜನೇ, ಆ ನಾಟ್ಯಮಂಟಪವು ಸುಡುವಾಗ ಅಲ್ಲಿ ಕಟ್ಟಿದ ಮಂಗ ಮತ್ತು ಕೋಳಿಗಳು ಸುಟ್ಟುಹೋದವೆಂದು ಹೇಳಲಿಲ್ಲವೇ ? ‖ ೨೦ ‖ ಅವು ಪೂರ್ವಜನ್ಮದಲ್ಲಿ ನಿತ್ಯ ಅಜ್ಞಾನದಿಂದ ರುದ್ರಾಕ್ಷಿಗಳನ್ನು ಧರಿಸಿದ ಪುಣ್ಯದಿಂದಲೇ ಆ ಕಪಿಯು ಈಗ ನಿನ್ನ ಮಗನಾಗಿ ಹುಟ್ಟಿರುವನು. ‖ ೨೧ ‖ ಆ ಕೋಳಿಯೇ ಮಂತ್ರಿಪುತ್ರನಾಗಿ ಹುಟ್ಟಿರುವನು. ರುದ್ರಾಕ್ಷಧಾರಣದ ಫಲವು ಈ ಪ್ರಕಾರವಾಗಿರುತ್ತದೆ. ಪೂರ್ವದಲ್ಲಿ ಮಂಗ ಕೋಳಿಗಳಿದ್ದವರು ಈಗ ರಾಜಪುತ್ರ–ಮಂತ್ರಿಪುತ್ರರಾಗಿ ಹುಟ್ಟಿದರು ‖ ೨೨ ‖ ಪೂರ್ವಜನ್ಮದ ಸಂಸ್ಕಾರದಿಂದ ಈಗ ಈ ಕುಮಾರರು ರುದ್ರಾಕ್ಷಧಾರಣ ಮಾಡುವರು. ಇಬ್ಬರೂ ಕುಮಾರರು ಜ್ಞಾನವಂತರಾಗಿ ಕೇವಲ ಈಶ್ವರಭಕ್ತರಾಗಿರುವರು. ‖ ೨೩ ‖ ಪೂರ್ವಜನ್ಮದಲ್ಲಿ ಅಜ್ಞಾನವಂತರಾಗಿ ನಿತ್ಯವಾಗಿ ರುದ್ರಾಕ್ಷಧಾರಣ ಮಾಡಿದರು. ಇಷ್ಟು ಪುಣ್ಯ ಘಟಿಸಿದ್ದರಿಂದಲೇ ಇವನು ನಿನ್ನ ಮಗನಾಗಿರುವನು. ‖ ೨೪ ‖ ಈಗ ಜ್ಞಾನವಂತರಾಗಿ ರುದ್ರಾಕ್ಷಧಾರಣ ಮಾಡುವರು. ಅವರ ಪುಣ್ಯಕ್ಕೆ ಬೆಲೆಯಿಲ್ಲ ಎಂದು ಪರಾಶರರು ಆ ರಾಜನಿಗೆ ಹೇಳಿದರು. ‖೨೫‖ ಎಂದು ಶ್ರೀ ಗುರುಗಳು ಎಲೈ ದಂಪತಿಗಳೇ, ಈ ಪ್ರಕಾರ ಆ ಪರಾಶರಮುನಿಗಳು ವೇಶ್ಯಾ-ವೈಶ್ಯರ ಮತ್ತು ಕುಕ್ಕುಟ-ಮರ್ಕಟಗಳ ಕಥೆಯನ್ನು ವಿಸ್ತಾರವಾಗಿ ಹೇಳಿದರು. ‖ ೨೬ ‖ ಅವರ ಮಾತು ಕೇಳಿ ರಾಜನು ವಿನಯದಿಂದ ಪರಾಶರರಿಗೆ ಕೈ ಮುಗಿದು ಅತಿ ಗಹನವಾದ ಪ್ರಶ್ನೆ ಮಾಡಿದನು ‖ ೨೭ ‖ ಎಲೈ ನಾಮಧಾರಕನೇ, ಮುಂದೆ ಅಪೂರ್ವ ಸಂಗತಿಯಾಯಿತು. ಅದನ್ನು ಹೇಳುವೆನು ಕೇಳು ಎಂದು ಸಿದ್ಧರು ಹೇಳಿದರೆಂದು ‖ ೨೮ ‖ ಸರಸ್ವತೀ ಗಂಗಾಧರನು— ಎಲೈ ಶ್ರೋತೃಗಳೇ, ಕಾಮಧೇನುವನಂತಿರುವ ಗುರುಚರಿತ್ರೆಯನ್ನು ಸಾವಧಾನದಿಂದ ಕೇಳಿರಿ. ಆದರಿಂದ ಚತುರ್ವಿಧ ಪುರುಷಾರ್ಥಗಳನ್ನು ಹೊಂದುವಿರಿ ಎಂದನು. ‖ ೨೯ ‖

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ರುದ್ರಾಕ್ಷಿ ಮಹಿಮಾವರ್ಣನಂ ನಾಮ ತ್ರಯಸ್ತ್ರಿಂಶತ್ತಮೋಧ್ಯಾಯಃ ‖ ೩೩ ‖ ಶ್ರೀ ಗುರುದೇವದತ್ತ ‖

**— ೩೩ನೇ ಅಧ್ಯಾಯ ಸಮಾಪ್ತ —**

# ೩೪ನೇಯ ಅಧ್ಯಾಯ

## — ರುದ್ರಾಧ್ಯಾಯ ಮಹಿಮಾವರ್ಣನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ಕೇಳು, ಆಮೇಲೆ ಶ್ರೀಗುರುಗಳು, ಆ ದಂಪತಿಗಳನ್ನು ಕುರಿತು— ಎಲೈ ದಂಪತಿಗಳೇ, ಈ ಪ್ರಕಾರ ಪರಾಶರ ಮುನಿಗಳು ಕಾಶ್ಮೀರದೇಶದ ರಾಜನಿಗೆ ರುದ್ರಾಕ್ಷಿ ಮಹಿಮೆಯನ್ನು ನಿರೂಪಿಸಿ. ॥ ೧ ॥ ಆ ರಾಜಪುತ್ರರ ಪೂರ್ವಜನ್ಮದ ಸರ್ವ ಸಂಗತಿಯನ್ನು ಮಧುರ ವಾಣಿಯಿಂದ ವಿಸ್ತಾರವಾಗಿ ಹೇಳಿದರು. ॥ ೨ ॥ ಅದನ್ನು ಕೇಳಿ ಆ ರಾಜನು ಸಂತೋಷಬಟ್ಟು, ಅವರ ಚರಣಕ್ಕೆ ನಮಸ್ಕರಿಸಿ ಕೈಮುಗಿದು ವಿನಯದಿಂದ ॥ ೩ ॥ ಸ್ವಾಮೀ, ಪರಾಶರ ಮುನಿಗಳೇ, ಪೂರ್ವಜನ್ಮದಲ್ಲಿ ಆವೇಶ್ಯೆಯು ಆ ಮರ್ಕಟ-ಕುಕ್ಕುಟಗಳಿಗೆ ರುದ್ರಾಕ್ಷಿಯನ್ನು ಕಟ್ಟಲು, ಅವು ಅಜ್ಞಾನದಿಂದ ರುದ್ರಾಕ್ಷಿಯನ್ನು ಕಟ್ಟಿಕೊಂಡ ಪುಣ್ಯದಿಂದಲೇ ಈ ಜನ್ಮದಲ್ಲಿ ಆ ಮಂಗವು ನನ್ನ ಮಗನಾಗಿ, ಆ ಕೋಳಿಯು ಮಂತ್ರಿ ಪುತ್ರನಾಗಿ ಉತ್ತಮ ಮನುಷ್ಯ ಜನ್ಮದಲ್ಲಿ ಹುಟ್ಟಿದರು. ॥ ೪-೫ ॥ ಈಗ ಅವರು ಜ್ಞಾನವಂತರಾಗಿ ರುದ್ರಾಕ್ಷಿ ಧಾರಣ ಮಾಡುವರು ಎಂದು ಹೇಳಿದಿರಿ, ಸ್ವಾಮೀ, ನೀವು ಭೂತ-ಭವಿಷ್ಯ-ವರ್ತಮಾನ ಕಾಲಗಳ ಸಂಗತಿಯನ್ನು ತಿಳಿದವರಾದ್ದರಿಂದ ನನ್ನ ಹಾಗು ಮಂತ್ರಿಪುತ್ರರ ಲಕ್ಷಣವೇನು ? ಅವರು ಮುಂದೆ ಹ್ಯಾಗೆ ವರ್ತಿಸುವರು ? ಎಂಬದನ್ನು ವಿಸ್ತಾರವಾಗಿ ತಿಳಿಸಬೇಕೆಂದು ಬೇಡಿಕೊಂಡು ಗಹನವಾದ ಪ್ರಶ್ನೆ ಮಾಡಿದನು. ॥ ೬-೭ ॥ ಆ ರಾಜನ ಮಾತು ಕೇಳಿ ಪರಾಶರರು ವಿಸ್ತಾರವಾಗಿ ಹೇಳಹತ್ತಿದರು ಏನಂದರೆ— ಎಲೈ ರಾಜನೇ, ಎರಡೂ ಹುಡುಗರ ಲಕ್ಷಣಗಳು ಅಪೂರ್ವವಾಗಿರುವವು. ॥ ೮ ॥ ನೀನು ಆ ಪುತ್ರರ ಭವಿಷ್ಯವನ್ನು ಕೇಳುತ್ತೀ, ಕೇಳಿದಮೇಲೆ ದುಃಖಹೊಂದುತ್ತೀ ಆದ್ದರಿಂದ ನಾನು ಹ್ಯಾಗೆ ಹೇಳಲಿ ? ಎಂದರು. ॥ ೯ ॥

ಆಗ ಆ ರಾಜನು ವಿನಯದಿಂದ— ಸ್ವಾಮೀ, ನೀವು ಎಲ್ಲಾ ಸಂಗತಿಯನ್ನು ಹೇಳಿರಿ. ಆದಕ್ಕೆ ತಾತ್ಕಾಲದಲ್ಲಿ ತಕ್ಕ ಉಪಾಯ ಮಾಡಿ ನನ್ನ ದುಃಖವನ್ನು ಕಳೆಯಲಿಕ್ಕೆ ತಾವು ಸಮರ್ಥರು ಆಗಿರುವಿರಿ ಎಂದನು. ॥ ೧೦ ॥ ಆಗ ಪರಾಶರರು— ಎಲೈ ರಾಜಾ ಕೇಳು, ನಿನ್ನ ಮಗನಿಗೆ ಹನ್ನೆರಡೇವರುಷ ಆಯುಷ್ಯವದೆ. ॥ ೧೧ ॥ ಆ ಹನ್ನೆರಡುವರುಷ ತುಂಬಲಿಕ್ಕೆ ಇನ್ನು ಏಳೇದಿವಸಗಳು ಮಾತ್ರ ಉಳಿದಿರುವವು. ಎಂಟನೇದಿವಸ ನಿನ್ನ ಪುತ್ರನಿಗೆ ಮರಣವು ಬರುವದು ಎಂದು ಹೇಳಿದರು ॥ ೧೨ ॥ ಆ ಮಾತು ಕೇಳಿದಕೂಡಲೆ ಆ ರಾಜನು ದುಃಖದಿಂದ ಮೂರ್ಛಿತನಾಗಿ ಎದ್ದು ಅಳುತ್ತ, ಅನೇಕ ರೀತಿ ದುಃಖಮಾಡುತ್ತ ॥ ೧೩ ॥ ಆ ಋಷಿಯ ಪಾದಗಳಿಗೆ ಬಿದ್ದು— ಸ್ವಾಮೀ, ನಾನು ನಿಮಗೆ ಶರಣು ಬಂದಿದ್ದೇನೆ ನನ್ನನ್ನು ರಕ್ಷಿಸಿರಿ, ರಕ್ಷಿಸಿರಿ. ॥ ೧೪ ॥ ಎಂದು ಅವನು ತನ್ನ ಹೆಂಡತಿ ಸಹಿತವಾಗಿ ನಾನಾರೀತಿಯಿಂದ ಗೋಳಾಡುತ್ತ ಮತ್ತೆ ಆ ಮುನಿಶ್ರೇಷ್ಠರ ಚರಣವನ್ನು ಹಿಡಿದು— ಸ್ವಾಮೀ, ಇನ್ನು ಮುಂದೆ ಏನು ಮಾಡಬೇಕು ಹೇಳಿರಿ, ಎಂದು ಬೇಡಿಕೊಂಡನು ॥ ೧೫ ॥ ಆಗ ದಯಾನಿಧಿಗಳಾದ ಪರಾಶರರು ವಿಚಾರ ಮಾಡಿ— ಎಲೈ ರಾಜನೇ ಕೇಳು, ನೀನು ಜಗದ್ಗುರುವೂ ಉಮಾಕಾಂತನೂ ಆದ ಶ್ರೀ ಶಿವನಿಗೆ ಶರಣು ಹೋಗು. ॥ ೧೬ ॥ ಆಮೇಲೆ ನೀನು ಮನಸ್ಸಿನಲ್ಲಿಯ ಭಯವನ್ನು ಬಿಟ್ಟು ಆ ಶಿವಧ್ಯಾನದಲ್ಲಿರು. ಶೂಲಪಾಣಿಯಾದ ಅವನು ಎಲ್ಲರನ್ನು ರಕ್ಷಿಸುವನು. ಆದಕಾರಣ ಆತನನ್ನು ಆರಾಧಿಸು. ॥ ೧೭ ॥ ಕಾಲನನ್ನು ಗೆಲ್ಲುವ ಒಂದು ಉಪಾಯವದೆ, ಆದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಕೇಳು. ॥ ೧೮ ॥ ಸ್ವರ್ಗ-ಮೃತ್ಯು-ಪಾತಾಳಲೋಕಗಳಲ್ಲಿ ಮುಖ್ಯ ದೇವರೆಂದರೆ ನಿಷ್ಕಲಂಕನೂ, ಸಚ್ಚಿದಾನಂದ ಸ್ವರೂಪನೂ, ವ್ಯೋಮಕೇಶನೂ ಆದ ಶ್ರೀ ಶಂಕರನೊಬ್ಬನೇ ಆಗಿರುವನು. ॥ ೧೯ ॥ ಈ ಪ್ರಕಾರವಾದ ಆ ಮೂರ್ತಿಮಂತ ಸರ್ವೇಶ್ವರನೇ ನಾಲ್ಕು ವೇದಗಳನ್ನು ನಿರ್ಮಿಸಿ, ಈ ಸೃಷ್ಟಿಯನ್ನು ರಚಿಸಲಿಕ್ಕೆ ಸಮರ್ಥನಾದ ಬ್ರಹ್ಮನನ್ನು ತನ್ನ ರಜೋರೂಪದಿಂದ ಆತನೇ ಹುಟ್ಟಿಸಿದನು. ॥ ೨೦ ॥ ಆಮೇಲೆ ಆ ಭಕ್ತವತ್ಸಲನಾದ ಸರ್ವೇಶ್ವರನು ಆ ನಾಲ್ಕು ವೇದಗಳನ್ನೂ ಉಪನಿಷದದಲ್ಲಿ ಹೇಳಿದ ಆತ್ಮ ತತ್ವ ಸಂಗ್ರಹವನ್ನೂ ವೇದಸಾರವಾಗಿ ನಿರ್ಮಿಸಿದ ಸುಂದರ

ರುದ್ರಾಧ್ಯಾಯವನ್ನೂ ಆ ಬ್ರಹ್ಮನಿಗೆ ಕೊಟ್ಟನು. ॥ ೨೧-೨೨ ॥ ಎಲೈ ರಾಜನೇ, ಆ ರುದ್ರಾಧ್ಯಾಯದ ಮಹಿಮೆಯು ಹೇಳಲಿಕ್ಕೆ ಅನುಪಮವಾಗಿರುವದು. ಆದರಿಂದ ಯಾವ ನಾಶವೂ ಇಲ್ಲ. ಅದು ಅವ್ಯಯವಾದದ್ದದೆ. ॥ ೨೩ ॥ ಶಿವಾತ್ಮಕ ಪಂಚತತ್ವದಲ್ಲಿ ರುದ್ರಾಧ್ಯಾಯವು ವಿಶೇಷವಾದದ್ದು! ಆ ಚತುರ್ಮುಖ ಬ್ರಹ್ಮನು ಆ ವೇದ ಮತದಂತೆ ವಿಶ್ವವನ್ನು ನಿರ್ಮಿಸಿದನು. ॥ ೨೪ ॥ ಮತ್ತು ಅವನು ತನ್ನ ಚತುರ್ಮುಖಗಳಿಂದ ಆ ಚತುರ್ವೇದಗಳನ್ನು ಅಂದನು. ಆಗ ಅವನ ದಕ್ಷಿಣ ಮುಖದಿಂದ ಯಜುರ್ವೇದವು ಹೊರಟಿತು. ॥ ೨೫ ॥ ಆ ಯಜುರ್ವೇದದಲ್ಲಿ ಉಪನಿಷದ ಸಾರವು ಪ್ರಖ್ಯಾತವಾದದ್ದು! ಅದರಲ್ಲಿಯೂ ರುದ್ರಾಧ್ಯಾಯವು ಅತ್ಯಂತ ಶ್ರೇಷ್ಠವಾದದ್ದು ಅದನ್ನು ಬ್ರಹ್ಮನು ಮುನಿ ಮೊದಲಾದವರಿಗೆ ಹೇಳಿದನು ಅದನ್ನು ಕೇಳು ॥ ೨೬ ॥ ಬ್ರಹ್ಮನು ಆ ರುದ್ರಾಧ್ಯಾಯವನ್ನು ಸಮಸ್ತ ದೇವತೆಗಳಿಗೂ ಮರೀಚಿ, ಅತ್ರಿ ಮುಂತಾದ ಯಾವತ್ತೂ ಮಹಾನ್ ಮಹಾನ್ ಋಷಿಗಳಿಗೂ ಹೇಳಿದನು. ॥ ೨೭ ॥ ಆ ಋಷಿಗಳು ಅದನ್ನು ತಮ್ಮ ಎಲ್ಲ ಶಿಷ್ಯರಿಗೆ ಹೇಳಿದರು. ಆ ಶಿಷ್ಯರು ಆ ರುದ್ರಾಧ್ಯಾಯವನ್ನು ತಮ್ಮ ಪುತ್ರ-ಪೌತ್ರ-ಶಿಷ್ಯರುಗಳಿಗೆ ಹೇಳಿದರು ಹೀಗೆ ಆ ಪವಿತ್ರವಾದ ರುದ್ರಾಧ್ಯಾಯವನ್ನು ಆ ಋಷಿಗಳು ವಂಶಪರಂಪರೆಯಾಗಿ ಕಲಿಯಹತ್ತಲು ಅದು ತ್ರಿಲೋಕಗಳಲ್ಲಿ ಹಬ್ಬಿ ಭೂಮಿಯಲ್ಲಿ ಪ್ರಸಿದ್ಧವಾಯಿತು. ॥ ೨೮-೨೯ ॥ ಅದಕ್ಕಿಂತ ಶ್ರೇಷ್ಠ ಮಂತ್ರವು ಮತ್ತ್ಯಾವದೂ ಇಲ್ಲ. ಆದರಿಂದ ತಪಸ್ಸು ತೀವ್ರವಾಗಿ ಸಾಧ್ಯವಾಗಿ, ಚತುರ್ವಿಧ ಪುರುಷಾರ್ಥಗಳು ದೊರಕುವವು. ॥ ೩೦ ॥ ನಾನಾಪ್ರಕಾರದ ಅನೇಕ ಪಾಪಗಳನ್ನು ಮಾಡಿದ್ದರೂ ಉತ್ತಮ ರೀತಿಯಾಗಿ ಆ ರುದ್ರಾಧ್ಯಾಯ ಜಪ ಮಾಡುವದರಿಂದ ಆ ಪಾತಕಗಳೆಲ್ಲ ಕೂಡಲೆ ಭಸ್ಮವಾಗಿ ಹೋಗುವವು ಎಂದು ತಿಳಿ. ॥ ೩೧ ॥ ಮತ್ತೊಂದು ವಿಚಿತ್ರವನ್ನು ಮಾಡಿರುವನು. ಬ್ರಹ್ಮನು ಅನೇಕ ಸೃಷ್ಟಿ ಮಾಡಿದ್ದರಲ್ಲಿ ವೇದ ತೀರ್ಥವೆನಿಸಿದ ರುದ್ರಾಧ್ಯಾಯವು ಒಳ್ಳೇ ಶ್ರೇಷ್ಠವಾದದ್ದು. ಆದರಿಂದ ಈಶ್ವರನಿಗೆ ಅಭಿಷೇಕ ಮಾಡಿ ಆ ತೀರ್ಥದ ಸ್ನಾನ-ಪಾನಗಳನ್ನು ಮಾಡಬೇಕು. ॥ ೩೨ ॥ ಆದರಿಂದ ದುಷ್ಕರ್ಮವು ಪರಿಹಾರವಾಗಿ ಸಂಸಾರವು ನಿವೃತ್ತಿಯಾಗುವದು. ಯಾರು ಶ್ರೀ ಗುರುಗಳನ್ನು ಸೇವಿಸುವರೋ

ಅವರೂ ಈ ಸಂಸಾರಸಾಗರದಿಂದ ಮುಕ್ತರಾಗುವರು. ॥ ೩೩ ॥ ಹೊಲದಲ್ಲಿ ಬಿತ್ತಿದ ಬೀಜದಂತೆ ಫಲವು ಬರುವದು. ಆದರಂತೆ ಪ್ರತಿಯೊಬ್ಬರು ತಾವು ಮಾಡಿದ ಸುಕೃತ-ದುಷ್ಕೃತಿಗಳಿಗೆ ಅಂದರೆ ಪುಣ್ಯಪಾಪಗಳಿಗೆ ತಕ್ಕಂತೆ ಫಲವನ್ನು ಹೊಂದುವರು. ॥ ೩೪ ॥ ಸೃಷ್ಟಿಯ ಧರ್ಮದಂತೆ ಧರ್ಮವು ಬ್ರಹ್ಮನ ಎದೆಯಲ್ಲಿಯೂ ಅಧರ್ಮಗಳು ಅವನ ಹಿಂಭಾಗದಲ್ಲಿಯೂ ಹುಟ್ಟಿದವು. ॥ ೩೫ ॥ ಪುಣ್ಯ-ಕರ್ಮಗಳನ್ನು ಮಾಡಿದವರು ಇಹದಲ್ಲಿಯೂ ಪರದಲ್ಲಿಯೂ ಸುಖವನ್ನು ಹೊಂದುವರು ಪಾಪಕರ್ಮಗಳನ್ನು ಅಂದರೆ ಅಧರ್ಮ ಮಾಡುವವರು ಅವರು ಮಹಾ ಪಾಪಿಗಳೆಂದು ತಿಳಿಯಬೇಕು. ॥೩೬॥ ಕಾಮ-ಕ್ರೋಧ-ಲೋಭ-ಮೋಹ-ಮದ-ಮತ್ಸರ-ದಂಭಗಳು ಅಧರ್ಮದ ಮಕ್ಕಳಾಗಿ ನರಕದ ನಾಯಕರಾಗಿರುವರು ಆದ್ದರಿಂದ ಅವುಗಳಲ್ಲಿ ಸಿಕ್ಕ ಮನುಷ್ಯರು ನರಕವನ್ನು ಹೊಂದುವರು. ॥ ೩೭ ॥ ಕಾಮದ ಕೈಯಲ್ಲಿ ಸಿಕ್ಕವರಿಗೆ ಗುರುತಲ್ಪಗಮನ, ಸುರಾಪಾನ, ಅತಿಕಾಮುಕ ಕೆಲಸ, ಸದಾ ಅಧಮ ಕೆಲಸ ಮಾಡಬೇಕೆಂಬ ಬುದ್ಧಿಯು ಹುಟ್ಟುವದು ॥ ೩೮ ॥ ಮಾತಾಪಿತೃಗಳನ್ನು ವಧಿಸುವಂಥ, ಬ್ರಹ್ಮಹತ್ಯಾ ಪಾಪ ಮಾಡುವಂಥ, ಕನ್ಯಾ ವಿಕ್ರಯ ಮಾಡುವಂಥ ಬುದ್ಧಿಯು ಕ್ರೋಧದಿಂದ ಹುಟ್ಟುವದು ಎಂದು ಕ್ರೋಧವು ಅಧರ್ಮದ ಮಗನೆಂದು ಅನ್ನುವರು. ॥ ೩೯-೪೦ ॥ ದೇವಸ್ವದ್ವಿಜ-ಬ್ರಹ್ಮಸ್ವಗಳನ್ನು ಹರಣ ಮಾಡುವವರು, ಸುವರ್ಣ ಕದಿಯುವವರು ಲೋಭದ ಪುತ್ರರೆನಿಸುವರು ॥ ೪೧ ॥ ಇತ್ತ ಕೇಳು ಯಮನು ಈ ಕಾಮ-ಕ್ರೋಧ-ಲೋಭಗಳೆಂಬ ಪುತ್ರರನ್ನು ಕರೆದು- ನೀವು ಭೂಲೋಕಕ್ಕೆ ಹೋಗಿ ಅಲ್ಲಿ ನಿಮ್ಮ ಗುಣಗಳನ್ನು ಪ್ರಸಾರ ಮಾಡಿರಿ. ॥೪೨॥ ನಿಮ್ಮ ಸಹಾಯಕ್ಕೆ ಬೇರೆ ಉಪಪಾತಕಗಳನ್ನು ಕಳಿಸುವೆನು,ಎಲ್ಲರೂ ಕೂಡಿ ಭೂಮಿಯ ಮೇಲಿನ ಜನರನ್ನೆಲ್ಲ ನರಕಕ್ಕೆ ಕಳಿಸಿರಿ ಎಂದು ಅಪ್ಪಣೆ ಮಾಡಿದನು. ॥ ೪೩ ॥ ಅವನ ಅಪ್ಪಣೆಯಂತೆ ಆ ಪಾತಕಗಳು ಭೂಮಿಗೆ ಬಂದವು. ಇಲ್ಲಿಯ ಜನರು ರುದ್ರಜಪ ಮಾಡುವದನ್ನು ನೋಡಿ, ಆ ಪಾತಕಗಳು ಹೆದರಿ ತಿರುಗಿ ಓಡಿ ಯಮನ ಹತ್ತರ ಬಂದು ಕೈಮುಗಿದು ವಿನಯದಿಂದ— ಸ್ವಾಮೀ, ಯಮರಾಜನೇ, ನಾವು ನಿನ್ನ ಅಪ್ಪಣೆಯಂತೆ ಭೂಮಿಗೆ ಹೋಗಿ ಭಯಪಟ್ಟು ಓಡಿ ಬಂದೆವು. ॥ ೪೪-೪೫ ॥ ಯಮರಾಜನೇ, ನಿನಗೆ ಜಯಜಯಕಾರವಿರಲಿ.

ನಾವು ನಿನ್ನ ಕಿಂಕರರೆಂದು ಮೂರು ಲೋಕದಲ್ಲಿ ಪ್ರಸಿದ್ಧವದೆ. ಆದರೂ ನಾವು ಅಲ್ಲಿ ಮಹಾಭಯವನ್ನು ಹೊಂದಿದೆವು. ॥ ೪೬ ॥ ನಾವು ನಿಮ್ಮ ಆಜ್ಞಾಧಾರಿಗಳಾಗಿದ್ದು ನಿಮ್ಮ ಅಪ್ಪಣೆಯಂತೆ ಭೂಲೋಕಕ್ಕೆ ಹೋಗಿ, ಅಲ್ಲಿಯ ಜನರು ರುದ್ರಜಪ ಮಾಡುವದನ್ನು ಕೇಳಿ ಆ ಅಗ್ನಿಪುರದಲ್ಲಿ ಬೆಂದುಹೋದೆವು. ॥ ೪೭ ॥ ಆದ್ದರಿಂದ ಭೂಮಿಯಲ್ಲಿರಲಿಕ್ಕೆ ನಮಗೆ ಶಕ್ತಿಯಿಲ್ಲ. ಯಾಕಂದರೆ ರುದ್ರಜಪ ಮಾಡುವದನ್ನು ನೋಡಿದಕೂಡಲೆ ಸುಟ್ಟುಹೋಗುವೆವು. ॥ ೪೮ ॥ ಆ ಭೂಮಿಯಲ್ಲಿ ಹಳ್ಳಿ, ಪಟ್ಟಣ, ನದೀತೀರ, ದೇವಾಲಯ, ಪುಣ್ಯಕ್ಷೇತ್ರಗಳಲ್ಲಿ ಬ್ರಾಹ್ಮಣರು ರುದ್ರಜಪ ಮಾಡುತ್ತಿರುವರು ॥ ೪೯ ॥ ಈ ಪ್ರಕಾರ ಅಲ್ಲಿಯ ಊರುಗಳ ಜನರು ರುದ್ರಜಪ ಮಾಡುತ್ತಿರುವದರಿಂದ ನಮಗೆ ಅಲ್ಲಿಗೆ ಹೋಗಲಿಕ್ಕೆ ಶಕ್ತಿಯು ಇಲ್ಲ. ಆದ್ದರಿಂದ ಮುಂದೆ ನಮ್ಮ ಗತಿ ಏನು ? ॥ ೫೦ ॥ ಸ್ವಾಮೀ, ಏನು ಹೇಳೋಣ! ನಾವು ನಿಮ್ಮ ಆಜ್ಞೆಹೊಂದಿ ಮನುಷ್ಯರ ಹತ್ತರ ಹೋದೆವೆಂದರೆ ತೀರಿತು! ಅವರಿಂದ ಅಳತೆಯಿಲ್ಲದಷ್ಟು ಪಾಪ ಮಾಡಲಿಕ್ಕೆ ಹಚ್ಚುವೆವು ॥ ೫೧ ॥ ಅವರು ಸಹಸ್ರಗಟ್ಟಲೆ ಪ್ರಾಯಶ್ಚಿತ್ತ ಮಾಡಿಕೊಂಡರೂ ಯಾವನೂ ಪುಣ್ಯವಂತನಾಗಲಾರನು. ಅಷ್ಟು ಶಕ್ತಿಯು ನಮ್ಮದದೆ. ಬ್ರಾಹ್ಮಣ ಮಾಡುವ ರುದ್ರಜಪದಿಂದ ಅಂಥ ಪಾಪಿಷ್ಠರೂ ಸಹ ಪುಣ್ಯವಂತರಾಗುತ್ತಾರೆ ॥ ೫೨ ॥ ಯಾರು ಭಕ್ತಿಯಿಂದ ಒಂದು ಸಾರೆ ರುದ್ರಾಧ್ಯಾಯವನ್ನು ಪಠಿಸುವರೋ ಅವರು ಪುಣ್ಯರಾಶಿಗಳಾಗುತ್ತಾರೆ. ಅವರನ್ನು ನೋಡಿದ ಕೂಡಲೆ ನಮಗೆ ಭಯ ಬರುತ್ತದೆ. ॥ ೫೩ ॥ ಭಯಂಕರ ಪಾಪ ಮಾಡಿದವರು ಸಹ ಈ ಪ್ರಕಾರ ರುದ್ರಾಧ್ಯಾಯದಿಂದ ಪುಣ್ಯವಂತರಾದರೆ ನಾವು ಭೂಮಿಯಮೇಲೆ ಹ್ಯಾಗೆ ತಿರುಗಾಡಬೇಕು ? ನಮಗೆ ಬಹಳ ಕಷ್ಟವಾಗುತ್ತದೆ. ॥ ೫೪ ॥ ಆ ರುದ್ರಾಧ್ಯಾಯ ಜಪವು ನಮಗೆ ಕಾಳಕೂಟ ವಿಷಕ್ಕೆ ಸಮಾನವಾಗಿ ತೋರುತ್ತದೆ. ಆದ್ದರಿಂದ ಭೂಮಿಯಮೇಲೆ ಹೋಗಲಿಕ್ಕೆ ನಮಗೆ ಶಕ್ತಿಯಿಲ್ಲ. ॥ ೫೫ ॥ ಈ ರುದ್ರಜಪವೆಂಬ ವಿಷವನ್ನು ಶಮನ ಮಾಡಲಿಕ್ಕೆ ನೀವು ಸಮರ್ಥರಿದ್ದೀರಿ. ನಮ್ಮನ್ನು ರಕ್ಷಿಸಿರಿ, ರಕ್ಷಿಸಿರಿ ಎಂದು ಆ ಪಾತಕಗಳು ಹೇಳಿಕೊಂಡವು. ॥ ೫೬ ॥ ಆ ಮಾತು ಕೇಳಿ ಯಮನು ಸಿಟ್ಟಿನಿಂದ ಆ! ಹೀಗಾಯಿತೇ ಎಂದು ತಲೆದೂಗಿ ವೇಗದಿಂದ ಹೊರಟು ಬ್ರಹ್ಮನ ಹತ್ತರ ಹೋಗಿ ॥ ೫೭ ॥

ವಿನಯದಿಂದ— ಜಯ ಜಯ ಕಮಲಾಸನನೇ, ಸೃಷ್ಟಿಕರ್ತನೇ, ಚತುರ್ಮುಖನೇ ||೫೮|| ನಾವು ನಿಮ್ಮ ಶರಣಾಗತರು, ನಿಮ್ಮ ಆಜ್ಞೆಯಂತೆ ಕಾರ್ಯವನ್ನು ಮಾಡಿ, ಭೂಮಿಯ ಮೇಲಿನ ಪಾಪಿ ಜನರನ್ನು ನರಕಕ್ಕೆ ತಕ್ಕೊಂಡು ಬರುವೆವು. ||೫೯|| ಮೊನ್ನೆ ನಾನು ಮಹಾಪಾಪಿ ಜನರನ್ನು ನರಕಕ್ಕೆ ತರುವದಕ್ಕಾಗಿ ನನ್ನ ಸೇವಕರನ್ನು ಭೂಮಿಗೆ ಕಳಿಸಿದ್ದೆನು. ಆದರೆ ರುದ್ರಾಧ್ಯಾಯ ಜಪದಿಂದ ಆ ಮಹಾಪಾಪಿಗಳೂ ಅತಿ ಪಾಪಿಗಳೂ ಸಹ ತಮ್ಮ ಪಾತಕಗಳನ್ನು ಕಳಕೊಂಡು ಪುಣ್ಯವಂತರಾಗಿ ಎಲ್ಲರೂ ಸ್ವರ್ಗಕ್ಕೆ ಹೋಗುತ್ತಿರುತ್ತಾರೆ. ನನ್ನ ನರಕವು ಬರಿದಾಗಹತ್ತಿದೆ! ||೬೦-೬೧|| ನರಕದಲ್ಲಿ ಒಬ್ಬರೂ ಇಲ್ಲದ್ದರಿಂದ ನನ್ನ ರಾಜ್ಯವು ನಿಷ್ಫಲವಾಯಿತು. ಹಾಗೂ ಎಲ್ಲರೂ ಮುಕ್ತರಾಗಿ ಇನ್ನು ಭೂಮಿಯ ಮೇಲೆ ಒಬ್ಬರೂ ಹುಟ್ಟದಂತಾಯಿತು. ||೬೨|| ನಮ್ಮ ಒಡೆಯರು ನೀವೇ ಇದ್ದು, ರುದ್ರಾಧ್ಯಾಯ ಜಪದಿಂದ ಪುಣ್ಯವಂತರಾಗಿರೆಂದು ಮನುಷ್ಯರಿಗೆ ಭರವಸೆ ಹೇಳಿ ಅವರಿಗೆ ಒಡೆತನವನ್ನು ಯಾಕೆ ಕೊಟ್ಟಿರಿ? ಆದರಿಂದ ನನ್ನ ರಾಜ್ಯವು ಹಾಳಾಯಿತು. ದೇವಾ, ಇದಕ್ಕೆ ಏನಾದರೊಂದು ಉಪಾಯ ಮಾಡಲಿಕ್ಕೆ ನೀವೇ ಸಮರ್ಥರು! ರುದ್ರಜಪದ ಮಹತ್ವದಿಂದ ಪಾತಕಗಳು ಸುಟ್ಟು ಹೋಗುವವು. ಆದರಿಂದ ಮನುಷ್ಯರಿಗೆ ಪಾಪದ ಲವಲೇಶವೂ ಹತ್ತದಂತಾಯಿತು. ಕಾರಣ ಹ್ಯಾಗಾದರೂ ಮಾಡಿ ನನ್ನನ್ನು ರಕ್ಷಿಸಿರಿ ಎಂದು ಬೇಡಿಕೊಂಡನು ||೬೩-೬೪-೬೫|| ಆ ಯಮನ ವಿನಂತಿಯನ್ನು ಕೇಳಿ ಬ್ರಹ್ಮನು ಅವನಿಗೆ ಉತ್ತರವನ್ನು ಹೇಳಹತ್ತಿದನು. ||೬೬|| ಏನಂದರೆ— ಎಲೈ ಯಮನೇ, ಅಜ್ಞಾನಿಗಳೂ ತಾಮಸಿಗಳೂ ಆಗಿ ಭಕ್ತಿಯಿಲ್ಲದೆ ಮದದಿಂದ ಯಾರು ನಿಂತಾಗಲಿ, ಮಲಗಿಕೊಂಡಾಗಲಿ ರುದ್ರಜಪವನ್ನು ಮಾಡುವರೋ ಅವರಿಗೆ ಅನೇಕ ಪಾಪಗಳು ಘಟಿಸುವವು. ಅಂಥವರನ್ನು ನೀನು ತೀವ್ರವಾಗಿ ದಂಡಿಸು. ಭಕ್ತಿಯಿಂದ ಸ್ಪಷ್ಟವಾಗಿ ಭಾವಾರ್ಥದಿಂದ ಜಪಿಸುವಂಥವರನ್ನು ನೀನು ಬಾಧಿಸಬೇಡ. ||೬೭-೬೮|| ಮತ್ತು ನಿನ್ನ ಶಿಷ್ಯರನ್ನು ಕುರಿತು ಹೀಗೆ ಹೇಳು, ಏನಂದರೆ— ಭಕ್ತಿಯಿಂದ ರುದ್ರಜಪ ಮಾಡಿದರೆ ವಿಶೇಷ ಪುಣ್ಯ ಬರುವದು. ಆ ಪ್ರಕಾರ ಪುಣ್ಯವಂತರಾದವರನ್ನು ಕಾಡಬೇಡೆಂದು ಹೇಳು. ||೬೯|| ಕೆಲವರು ಪೂರ್ವಜನ್ಮದಲ್ಲಿ ಪಾಪಕರ್ಮ ಮಾಡಿ ಅಲ್ಪಾ-

ಋಷಿಗಳಾಗಿ ಹುಟ್ಟುವರು. ಅವರು ಉತ್ತಮರೀತಿಯಾಗಿ ರುದ್ರಜಪ ಮಾಡಿದರೆ ನಿಶ್ಚಯವಾಗಿ ಪಾಪದಿಂದ ಮುಕ್ತರಾಗಿ ಪೂರ್ಣಾಯುಷಿಗಳಾಗುವರು. || ೨೦-೨೧ || ಎಲೈ ಯಮನೇ ಕೇಳು. ರುದ್ರ ಜಪದಿಂದ ಅವರ ತೇಜ, ಬಲ, ಕಾಂತಿ, ಧೈರ್ಯ, ಆರೋಗ್ಯ, ಜ್ಞಾನ ಸಂಪತ್ತುಗಳು ಬೆಳೆಯುವವು. || ೨೨ || ರುದ್ರ ಜಪದಿಂದ ಈಶ್ವರ ಅಭಿಷೇಕ ಮಾಡಿ, ಆ ಅಭಿಷೇಕೋದಕದಿಂದ ಯಾರು ಸ್ನಾನ-ಪಾನಗಳನ್ನು ಮಾಡುವರೋ, ಅವರಿಗೆ ಮೃತ್ಯುಭಯವಿಲ್ಲ ಮತ್ತು ಅವರು ವಿಶೇಷ ಪುಣ್ಯದೇಹಿಗಳಾಗಿ ಸ್ಥಿರ ಜೀವಿಗಳಾಗುವರು. || ೨೩-೨೪ || ಅತಿ ರುದ್ರಜಪದಿಂದ ಅಭಿಷೇಕ ಮಾಡಿದ ಉದಕದಿಂದ ಸ್ನಾನ ಮಾಡಿದವರಿಗೆ ಮೃತ್ಯುವು ಹೆದರುವದು. ಅವರು ಭವಸಮುದ್ರವನ್ನು ದಾಟಿ ಮುಕ್ತರಾಗುವರು. || ೨೫ || ಶ್ರೀ ಶಂಕರನಿಗೆ ಶತರುದ್ರಜಪದಿಂದ ಅಭಿಷೇಕ ಮಾಡಿ ಪೂಜಿಸಿದವರು ಸಕಲ ಪಾಪಗಳಿಂದ ನಿರ್ಮುಕ್ತರಾಗಿ ಶತಾಯುಷಿಗಳಾಗುವರು. || ೨೬ || ಎಲೈ ಯಮನೇ, ನೀನು ಇವುಗಳನ್ನೆಲ್ಲ ತಿಳಕೊಂಡು, ರುದ್ರಜಪ ಮಾಡುವ ಬ್ರಾಹ್ಮಣರನ್ನು ಬಾಧಿಸಬೇಡೆಂದು ನಿನ್ನ ಸೇವಕರಿಗೆ ಹೇಳು. ಎಂದನು. || ೨೭ || ಅದನ್ನು ಕೇಳಿ ಯಮನು ತನ್ನ ಸ್ಥಾನಕ್ಕೆ ಹೋದನು. ಎಲೈ ಭದ್ರಸೇನ ರಾಜನೇ– ನಿನ್ನ ಮಗನು ಪೂರ್ಣಾಯುಷಿಯಾಗುವದಕ್ಕೆ ಉಪಾಯವನ್ನು ಹೇಳುವೆನು ಕೇಳು, ಈಗ ನೀನು ೧೦ ಸಾವಿರ ರುದ್ರಜಪದಿಂದ ಶ್ರೀ ಶಂಕರನಿಗೆ ಅಭಿಷೇಕ ಮಾಡಿಸಿ, ಆ ತೀರ್ಥದಿಂದ ನಿನ್ನ ಮಗನಿಗೆ ಸ್ನಾನ ಮಾಡಿಸು, ಆದರಿಂದ ನಿನ್ನ ಮಗನು ೧೦ ಸಾವಿರ ವರುಷ ಆಯುಷ್ಯವುಳ್ಳವನಾಗಿ ಇಂದ್ರನಂತೆ ಕೀರ್ತಿವಂತನಾಗಿ ಯಾವ ಕಂಟಕವೂ ಇಲ್ಲದೆ ಹಾಗೂ ರಾಜ್ಯೈಶ್ವರ್ಯಕ್ಕೆ ಅಪಾಯವಿಲ್ಲದೆ ಆನಂದದಿಂದ ದುರಂಧರವಾಗಿ ರಾಜ್ಯವಾಳುವನು. || ೨೮-೩೧ || ಆದ್ದರಿಂದ ನೀನು ತೀವ್ರವಾಗಿ ವಿದ್ವಾಂಸರೂ ಜ್ಞಾನಿಗಳೂ ಆದಂಥ ನೂರು ಮಂದಿ ಬ್ರಾಹ್ಮಣರನ್ನು ಕರೆಯಿಸಿ, ರುದ್ರಜಪದ ಅನುಷ್ಠಾನದಿಂದ ಶ್ರೀಶಂಕರನಿಗೆ ಅಭಿಷೇಕ ಮಾಡಿಸಿ, ಆ ತೀರ್ಥದಿಂದ ನಿನ್ನ ಮಗನಿಗೆ ಸ್ನಾನ ಮಾಡಿಸು, ಇದರಿಂದ ನಿನ್ನ ಮಗನ ಆಯುಷ್ಯವು ಹೆಚ್ಚಿ, ಕೂಡಲೆ ಶ್ರೇಯಸ್ಸಾಗುವದು. || ೩೨-೩೩ || ಎಂದು ಪರಾಶರರು ಹೇಳಲು ಆ ರಾಜನು ಆನಂದದಿಂದ ಆಯುಷ್ಯಾಭಿವೃದ್ಧಿ ಕಾರ್ಯಾರಂಭಕ್ಕೆ ಉದ್ಯುಕ್ತನಾದನು. ||೩೪||

ಮತ್ತು ಆ ಪರಾಶರರ ಉಪದೇಶದಂತೆ ಉತ್ತಮ ಬ್ರಾಹ್ಮಣರನ್ನು ಕರೆಯಿಸಿ, ಸರ್ವಸಾಹಿತ್ಯಗಳನ್ನು ಸಿದ್ಧಪಡಿಸಿದನು. ॥ ೮೫ ॥ ನೂರು ಕಲಶಗಳಿಂದ ಶ್ರೀ ಶಿವನಿಗೆ ವಿಧಿಪೂರ್ವಕ ಪುಣ್ಯವೃಕ್ಷದ ಕೆಳಗೆ ಅಭಿಷೇಕ ಮಾಡಿಸಿ ॥೮೬॥ ಆ ತೀರ್ಥದಿಂದ ನಿತ್ಯವೂ ತನ್ನ ಮಗನಿಗೆ ಸ್ನಾನ ಮಾಡಿಸುತ್ತಿದ್ದನು. ಈ ರೀತಿಯಾಗಿ ಏಳು ದಿವಸ ಈಶ್ವರನನ್ನು ಆರಾಧಿಸಿದನು. ॥ ೮೭ ॥ ಈ ಪ್ರಕಾರ ಏಳು ದಿವಸದ ಅವಧಿ ಮುಗಿದ ಕೂಡಲೆ ೮ನೇ ದಿವಸ ಮುಂಜಾನೆ ಆ ಹುಡುಗನು ನಿಶ್ಚೇಷ್ಟಿತನಾಗಿ ಬಿದ್ದನು. ಆ ಕೂಡಲೆ ಪರಾಶರರು ಬಂದು ಆ ತೀರ್ಥವನ್ನು ಅವನಮೇಲೆ ಸಿಂಪಡಿಸಿದರು. ॥ ೮೮ ॥ ಆ ವೇಳೆಯಲ್ಲಿ ಒಂದು ಭಯಂಕರ ಶಬ್ದವಾಯಿತು. ಕೂಡಲೆ ಅಲ್ಲಿ ಅದ್ಭುತಾಕಾರನೂ ದಂಡಧಾರಿಯೂ ಭಯಂಕರ ಕೋರದಾಡೆಯುಳ್ಳವನೂ ಆದ ಒಬ್ಬ ಮಹಾ ಯಮದೂತನು ಬಂದು ನಿಂತನು. ಆಗ ಯಾವತ್ತು ಬ್ರಾಹ್ಮಣರು ರುದ್ರವನ್ನು ಪರಿಸುತ್ತ ಆ ಬಾಲಕನಮೇಲೆ ಮಂತ್ರಾಕ್ಷತೆಗಳನ್ನು ಹಾಕಿದರು. ॥೮೯-೯೦॥ ಆ ಮಂತ್ರಾಕ್ಷತೆಗಳು ಆ ಹುಡುಗನಮೇಲೆ ಬಿದ್ದ ಕೂಡಲೆ ಆ ಯಮದೂತನು ದೂರ ಸರಿದು ನಿಂತನು. ಅವನಿಗೆ ಆ ಬಾಲಕನ ಹತ್ತರ ಹೋಗಲಿಕ್ಕೆ ಶಕ್ಯವಾಗಲಿಲ್ಲ. ॥ ೯೧ ॥ ಆಮೇಲೆ ಅವನು ಕೈಯಲ್ಲಿ ಮಹಾಪಾಶವನ್ನು ಹಿಡಕೊಂಡು ಆ ಕುಮಾರನಮೇಲೆ ಹಾಕಲಿಕ್ಕೆ ಬರುವಷ್ಟರಲ್ಲಿ, ದಂಡಧರಿಸಿದ ಒಬ್ಬ ಶಿವದೂತನು ಬಂದು ಆ ಯಮದೂತನನ್ನು ಹೊಡೆಯಲಿಕ್ಕೆ ಹೋದನು. ॥ ೯೨ ॥ ಆಗ ಆ ಯಮದೂತನು ಹೆದರಿ ಒಳ್ಳೇ ವೇಗದಿಂದ ಓಡಹತ್ತಲು ವೇದ ಪುರುಷನಾದ ಆ ಶಿವದೂತನು ಅವನ ಬೆನ್ನುಹತ್ತಿ ಓಡಿಸಿದನು. ॥ ೯೩ ॥ ಈ ಪ್ರಕಾರ ಆ ಬ್ರಾಹ್ಮಣರು ವೇದ ಮಂತ್ರಗಳಿಂದ ಉತ್ತಮವಾಗಿ ಆಶೀರ್ವಾದಮಾಡಿ ಆ ರಾಜಪುತ್ರನನ್ನು ಬದುಕಿಸಿದರು. ॥೯೪॥ ಆ ಕೂಡಲೆ ಆ ರಾಜಕುಮಾರು ಎಚ್ಚರಾಗಿ ಸ್ಥಿರಮನಸಿನಿಂದ ಎದ್ದು ಕುಳಿತನು. ಆಗ ಆ ರಾಜನು ಅತ್ಯಾನಂದವನ್ನು ಹೊಂದಿ ಮಹಾಸಮಾರಂಭದಿಂದ ಪರಾಶರರು ಮೊದಲಾದ ಆ ಎಲ್ಲ ಬ್ರಾಹ್ಮಣರ ಪೂಜೆಯನ್ನುಮಾಡಿ, ಅವರಿಗೆ ಸುಗ್ರಾಸಭೋಜನ ಮಾಡಿಸಿ, ತಾಂಬೂಲ ದಕ್ಷಿಣಾದಿಗಳನ್ನು ಕೊಟ್ಟು ಸಂತೋಷಬಡಿಸಿದನು. ॥೯೫-೯೬॥ ಆಮೇಲೆ ಸಭೆಯನ್ನು ಶೃಂಗರಿಸಿ, ಪರಾಶರ ಮೊದಲಾದ ಬ್ರಾಹ್ಮಣರನ್ನು ಸಿಂಹಾಸನ ಮೊದಲಾದ ಉತ್ತಮಾಸನ

ದಲ್ಲಿ ಕೂಡ್ರಿಸಿ, ತನ್ನ ಪತ್ನಿ-ಪುತ್ರರೊಡನೆ ಸಾ। ನ। ಮಾಡಿ ಆನಂದದಿಂದ ಸಭೆಯಲ್ಲಿ ಕೂತಿದ್ದನು. ॥ ೯೭-೯೮ ॥ ಆಗ ಬ್ರಹ್ಮಸುತನಾದ ನಾರದನು ಆಕಸ್ಮಾತ್ತಾಗಿ ಅಲ್ಲಿಗೆ ಬಂದನು. ಆ ರಾಜನು ಓಡುತ್ತಹೋಗಿ ಅವರ ಚರಣಗಳನ್ನು ಹಿಡಿದು ವಂದಿಸಿ, ಕೈಹಿಡಿದು ಕರಕೊಂಡು ಹೋಗಿ ಸಿಂಹಾಸನದಲ್ಲಿ ಕೂಡ್ರಿಸಿ, ಅರ್ಘ್ಯಪಾದ್ಯಾದಿ ಷೋಡಶೋಪಚಾರಗಳಿಂದ ಪೂಜಿಸಿ— ಮಹಾಸ್ವಾಮೀ, ಈಗ ತಾವು ಎಲ್ಲಿಂದ ಬರೋಣವಾಯಿತು? ದೇವ ಋಷಿಗಳೇ ತಾವು ಮೂರು ಲೋಕಗಳಲ್ಲಿ ಸಂಚರಿಸುವಾಗ ಯಾವ ವಿಶೇಷ ಸಂಗತಿಗಳು ವರ್ತಿಸಿದವು ಎಂಬದನ್ನು ನಮಗೆ ಹೇಳಬೇಕು ಎಂದನು. ॥ ೯೯-೧೦೦-೧೦೧ ॥ ಆಗ ನಾರದನು— ಎಲೈ ರಾಜನೇ, ನಾನು ಸಂಚಾರಮಾಡುತ್ತ ಈಗ ಕೈಲಾಸಕ್ಕೆ ಹೋಗಿದ್ದೆನು. ಅಲ್ಲಿಂದ ತಿರುಗಿ ಬರುವಾಗ ದಾರಿಯಲ್ಲಿ ಒಂದು ಅಪೂರ್ವ ಸಂಗತಿಯನ್ನು ನೋಡಿದೆನು. ॥ ೧೦೨ ॥ ಮಹಾಮೃತ್ಯುವು ತನ್ನ ದೂತರೊಡನೆ ನಿನ್ನ ಮಗನನ್ನು ಒಯ್ಯಲಿಕ್ಕೆ ಬಂತು. ಕೂಡಲೆ ಒಬ್ಬ ಶಿವದೂತನು ಬಂದು ಅದನ್ನು ನೋಲಿಸಿ ಓಡಿಸಿದನು. ॥ ೧೦೩ ॥ ಆ ಯಮದೂತನು ಓಡುತ್ತ ಯಮನ ಹತ್ತರ ಹೋಗಿ ಶಿವದೂತನು ತನ್ನನ್ನು ಹೊಡೆದ ಸರ್ವಸಂಗತಿಯನ್ನು ಹೇಳಿ— ಇನ್ನು ನಾವು ಭೂಮಿಯಮೇಲೆ ಹ್ಯಾಗೆ ಹೋಗಬೇಕು ಎಂದನು. ॥ ೧೦೪ ॥ ಆಗ ಯಮನು ಸಿಟ್ಟಿಗೆಟ್ಟು ವೀರಭದ್ರನಹತ್ತರ ಬಂದು—ಸ್ವಾಮೀ ತನ್ನ ಕರ್ಮಾನುಸಾರವಾಗಿ ಆ ರಾಜಪುತ್ರನು ಗತಾಯುಷಿಯಾಗಿರಲು ಅವನನ್ನು ಕರಕೊಂಡು ಬರಲಿಕ್ಕೆ ಹೋದ ನಮ್ಮ ದೂತನನ್ನು ಶಿವದೂತನು ಬಂದು ಹೊಡೆಯಲಿಕ್ಕೆ ಕಾರಣವೇನು ? ಎಂದು ಕೇಳಿದನು. ॥ ೧೦೫-೧೦೬ ॥ ಆಗ ವೀರಭದ್ರನು ಅತಿ ಕೋಪದಿಂದ— ಎಲೈ ಯಮನೇ ಕೇಳು ರುದ್ರಾಧ್ಯಾಯ ಜಪದಿಂದ ಆ ರಾಜಪುತ್ರನ ಆಯುಷ್ಯ ೧೦ ಸಾವಿರ ವರುಷವಾಗಿದೆ. ॥ ೧೦೭ ॥ ಇದನ್ನು ವಿಚಾರಿಸದೆ ಚಿತ್ರಗುಪ್ತರು ನಿನ್ನ ದೂತರನ್ನು ಕಳಿಸಿದರು. ಆದ್ದರಿಂದ ಆ ಶಿವದೂತನು ಅವರನ್ನು ಹೊಡೆದು ಆ ರಾಜಪುತ್ರನ ಜೀವವನ್ನು ಬಿಡಿಸಿದನು ಎಂದನು. ॥ ೧೦೮ ॥ ಆಗ ಯಮನು ಆ ಚಿತ್ರಗುಪ್ತರನ್ನು ಕರೆದು ಕೇಳುವೆನೆಂದು ಅವರನ್ನು ಕರೆಯಿಸಿ—

ಎಲೈ ಚಿತ್ರಗುಪ್ತರೇ, ಆ ರಾಜಪುತ್ರನ ಆಯುಷ್ಯವು ಎಷ್ಟು ? ಎಂದು ಕೇಳಿದನು. || ೧೦೯ ||  ಆಗ ಆ ಚಿತ್ರಗುಪ್ತರು ಪತ್ರಿಕೆಯನ್ನು ತೆಗೆದು ನೋಡಲು ಆ ಪತ್ರಿಕೆಯಲ್ಲಿ ಮೊದಲು ಆ ರಾಜಕುಮಾರನಿಗೆ ೧೨ ವರುಷ ಆಯುಷ್ಯವೆಂದು ಬರೆದಿತ್ತು. || ೧೧೦ ||  ಅದರ ಮುಂದೆ ೧೨ ಸಾವಿರ ವರುಷ ಆಯುಷ್ಯವೆಂದು ಬರೆದಿತ್ತು. ಅದನ್ನು ಕಂಡು ಯಮನು ಸಂಶಯವುಳ್ಳವನಾಗಿ ತನ್ನ ತಪ್ಪಾಯಿತೆಂದು ಹೇಳಿ || ೧೧೧ ||  ಆ ವೀರಭದ್ರನಿಗೆ ನಮಸ್ಕಾರಮಾಡಿ ತನ್ನ ಸ್ಥಾನಕ್ಕೆ ಹೋದನು.  ಎಲೈ ರಾಜನೇ ಈಗ ನಾನು ಅಲ್ಲಿಂದಲೇ ಬಂದೆನು. || ೧೧೨ || ಎಲೈ ರಾಜನೇ ನೀನು ಪರಾಶರರ ಕೃಪೆಯಿಂದ ಪುಣ್ಯಕರವಾದ ರುದ್ರಜಪವನ್ನು ಮಾಡಿಸಿದ್ದರಿಂದ ನಿನ್ನ ಮಗನ ಆಯುಷ್ಯವು ಬೆಳೆದು ಅವನು ಮೃತ್ಯುವನ್ನು ಗೆದ್ದನು. || ೧೧೩ ||  ಎಂದು ಹೇಳಿ ನಾರದನು ಅಲ್ಲಿಂದ ಹೊರಟು ಹೋದನು. ಆಮೇಲೆ ಪರಾಶರ ಮಹಾಮುನಿಗಳು ಆ ರಾಜನ ಅಪ್ಪಣೆ ಪಡೆದು ಹೋದರು. || ೧೧೪ || ಬಳಿಕ ಆ ಯಾವತ್ತು ಬ್ರಾಹ್ಮಣರು ಆ ರಾಜನ ಅಪ್ಪಣೆ ಪಡೆದು ತಮ್ಮ ತಮ್ಮ ಸ್ಥಳಗಳಿಗೆ ಹೋದರು. ಆಗ ಆ ರಾಜನು ಹರ್ಷದಿಂದ ರಾಜ್ಯವಾಳುತ್ತ ಪುತ್ರ–ಪೌತ್ರರಿಂದ ಕೂಡಿಕೊಂಡು ಬೇಕಾದಷ್ಟು ಸುಖವನ್ನು ಅನುಭವಿಸಿದನು. || ೧೧೫ || ಎಲೈ ದಂಪತಿಗಳಿಗೇ, ರುದ್ರಾಧ್ಯಾಯ ಮಹಿಮಾ ಈ ಪ್ರಕಾರವಾಗಿದೆ  ಆದ್ದರಿಂದ ಗುರುವು ಬ್ರಹ್ಮಸ್ವರೂಪವೆಂದು ತಿಳಿದು ಪೂಜಾಮಾಡಬೇಕು.  ಈ ರೀತಿಯಿಂದ ಪೂಜಿಸಿದವರಿಗೆ ಕಾಲನ ಭಯವಿಲ್ಲ ಎಂದು ಶ್ರೀಗುರುಗಳು ಹೇಳಿದರು. || ೧೧೬ ||  ಎಂದು ಸಿದ್ಧರು— ಎಲೈ ನಾಮಧಾರಕ ಕೇಳು.  ಶ್ರೀಗುರುಗಳು ಪ್ರೇಮಭಾವದಿಂದ ಆ ದಂಪತಿಗಳಿಗೆ ಈ ಪ್ರಕಾರ ವಿಸ್ತಾರವಾದ ಕಥೆಯನ್ನು ಹೇಳಿದರು. || ೧೧೭ ||  ಈ ಕಾರಣದಿಂದ ಶ್ರೀಗುರುಗಳಿಗೆ ರುದ್ರಾಧ್ಯಾಯದ ಮೇಲೆ ಪ್ರೀತಿಯು ಬಹಳ.  ಆದ್ದರಿಂದ ಅವರಿಗೆ ರುದ್ರಾಧ್ಯಾಯ ಜಪದಿಂದ ಭಕ್ತಿಪೂರ್ವಕವಾಗಿ ಪೂಜಾಮಾಡಬೇಕು ಎಂದನು. || ೧೧೮ ||  ಎಂದು ಸರಸ್ವತೀ ಗಂಗಾಧರನು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿ ಇದನ್ನು ಕೇಳಿದವರು ಈ ಭವಸಾಗರವನ್ನು ದಾಟಿ ನಾಲ್ಕು ಪುರುಷಾರ್ಥಗಳನ್ನು ಹೊಂದು

ವರು. ॥ ೧೧೯ ॥ ಈಪ್ರಕಾರವಾದ ಗುರುಚರಿತ್ರಾಮೃತವಲ್ಲಿ ರುದ್ರಾಭಿಷೇಕ ಮಹಾತ್ಮ್ಯವನ್ನು ಅದ್ಭುತವಾಗಿ ವರ್ಣಿಸಿರುತ್ತದೆ ಎಂದು ಅಂದನು. ॥ ೧೨೦ ॥

ಇತಿ ಶ್ರೀಗುರು ಚರಿತ್ರ ಪರಮಕಥಾ ಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧನಾಮ ಧಾರಕ ಸಂವಾದೇ ರುದ್ರಧ್ಯಾಯ ಮಹಿಮಾವರ್ಣನಂ ನಾಮಚತುಸ್ತ್ರಿಂಶೋಧ್ಯಾಯಃ ॥ ೩೪ ॥ ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು ॥

— ೩೪ನೇ ಅಧ್ಯಾಯ ಸಮಾಪ್ತ —

---

# ೩೫ನೇಯ ಅಧ್ಯಾಯ



## — ಕಚದೇವಯಾನಿಯರ ಕಥೆ, ಸೋಮವಾರ ವ್ರತದ ಬಗ್ಗೆ ಸೀಮಂತಿನೀ ಆಖ್ಯಾನ —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕನು ವಿನಯದಿಂದ— ಸ್ವಾಮೀ, ಸಿದ್ಧಮುನಿಗಳೇ, ಶ್ರೀ ಗುರುಗಳು ಆ ದಂಪತಿಗಳಿಗೆ ರುದ್ರಾಧ್ಯಾಯವನ್ನು ವಿಸ್ತಾರದಿಂದ ಹೇಳಿದರು. ॥ ೧ ॥ ಆಮೇಲೆ ಮುಂದೇನಾಯಿತೆಂಬದನ್ನು ನನಗೆ ವಿಸ್ತಾರವಾಗಿ ಹೇಳಿರಿ. ಶ್ರೀ ಗುರುಚರಿತ್ರೆಯನ್ನು ಕೇಳಲಿಕ್ಕೆ ನನ್ನ ಮನಸ್ಸು ಬಹಳ ಆತುರವುಳ್ಳದ್ದಾಗಿದೆ ಎಂದನು. ॥ ೨ ॥ ಅವನ ಮಾತು ಕೇಳಿ ಸಿದ್ಧರು— ಅಪ್ಪಾ, ನಾಮಧಾರಕಾ, ಮುಂದಿನ ಚರಿತ್ರೆಯು ಅಪೂರ್ವವಾಗಿದೆ ಹೇಳುತ್ತೇನೆ ಕೇಳು. ಆಮೇಲೆ ಆ ಪತಿವ್ರತೆಯು ॥ ೩ ॥ ಶ್ರೀ ಗುರುಗಳಿಗೆ ಭಕ್ತಿ ಮತ್ತು ವಿನಯಗಳಿಂದ ಕೈಮುಗಿದು— ಸ್ವಾಮೀ ನಮಗೆ ಮುಂದಿನ ಗತಿ ಏನು ? ಇನ್ನು ಮುಂದೆ ನಾವು ಯಾವ ರೀತಿಯಿಂದಿರಬೇಕು ? ॥ ೪ ॥ ಸನಾತನವಾದ ತಮ್ಮ ಚರಣಗಳ ಸ್ಮರಣೆಯು ತಪ್ಪದಂಥ, ಮತ್ತು ನಮ್ಮ ಜೀವಕ್ಕೆ ಸಮಾಧಾನವನ್ನುಂಟು ಮಾಡುವಂಥ ಒಂದು ಮಂತ್ರವನ್ನು ನನಗೆ ಉಪದೇಶ ಮಾಡಿರಿ ಎಂದು ಬೇಡಿಕೊಂಡಳು ॥ ೫ ॥ ಆಗ ಶ್ರೀ ಗುರುಗಳು— ಎಲೌ ಸ್ತ್ರೀಯಳೇ, ಸ್ತ್ರೀಯರಿಗೆ ಪತಿ ಭಕ್ತಿಯೇ ಮುಖ್ಯ, ಅದರ ಹೊರತು ಬೇರೆ ಯಾವ ಮಂತ್ರವನ್ನೂ ಅವರಿಗೆ ಉಪದೇಶಿಸಬಾರದೆಂದು ಶಾಸ್ತ್ರವದೆ. ॥ ೬ ॥ ಸ್ತ್ರೀಯರಿಗೆ ಮಂತ್ರೋಪದೇಶ ಮಾಡಿದರೆ ಆ ಮಂತ್ರದ ಸಾಮರ್ಥ್ಯವು ಹೋಗುವದು. ಪೂರ್ವದಲ್ಲಿ ಶುಕ್ರಾಚಾರ್ಯರಿಗೆ ಇದೇ ಗತಿಯಾಯಿತು, ಎಂದು ಹೇಳಿದರು. ॥ ೭ ॥ ಆಗ ಆಕೆಯು ವಿನಯದಿಂದ ಕೈಮುಗಿದು— ಸ್ವಾಮೀ, ಸ್ತ್ರೀಯರಿಗೆ ಮಂತ್ರೋಪದೇಶವನ್ನೇಕೆ ಮಾಡಬಾರದು ? ಶುಕ್ರಾಚಾರ್ಯರಿಗೆ ಏನು ಗತಿಯಾಯಿತು ? ॥ ೮ ॥ ಎಂಬದನ್ನು ಪ್ರೀತಿಯಿಂದ

ನನಗೆ ವಿಸ್ತಾರವಾಗಿ ನಿರೂಪಿಸಿರಿ, ಎಂದು ದೀನವಾಣಿಯಿಂದ ಹೇಳಿ ಅವರ ಚರಣಕ್ಕೆ ನಮಿಸಿದಳು. ||೯|| ಆಗ ಅವರು— ಎಲೌ ಸ್ತ್ರೀಯಳೇ, ಪೂರ್ವದಲ್ಲಿ ಆದ ಒಂದು ಕಥೆಯನ್ನು ಹೇಳುವೆನು ಕೇಳು. ಪೂರ್ವದಲ್ಲಿ ದೇವತೆಗಳಿಗೂ ದೈತ್ಯರಿಗೂ ಸದಾಯುದ್ಧವು ಆಗೇ ಆಗುತ್ತಿತ್ತು. ||೧೦|| ಆ ದೈತ್ಯ ಸೈನ್ಯವನ್ನು ರಣದಲ್ಲಿ ಸತ್ತಕೂಡಲೆ ಅವರ ಗುರುವಾದ ಶುಕ್ರಾಚಾರ್ಯರು ಸಂಜೀವನೀ ಮಂತ್ರವನ್ನು ಜಪಿಸಿ, ಆ ದೈತ್ಯ ಸೈನ್ಯವನ್ನು ಎಬ್ಬಿಸಿ ಮತ್ತೆ ದೇವತೆಗಳ ಸಂಗಡ ಯುದ್ಧಕ್ಕೆ ಕಳಿಸುತ್ತಿದ್ದರು. ||೧೧|| ಮತ್ತೆ ಇಂದ್ರನು ವಜ್ರಾಯುಧದಿಂದ ಆ ದೈತ್ಯ ಸೈನ್ಯವನ್ನು ಕೊಂದಕೂಡಲೆ ಶುಕ್ರನು ಪುನಃ ಸಂಜೀವನೀ ಮಂತ್ರವನ್ನು ಜಪಿಸಿದ ಕೂಡಲೆ ಅವರು ಎದ್ದು ದೇವತೆಗಳ ಸಂಗಡ ಯುದ್ಧಕ್ಕೆ ಬರುತ್ತಿದ್ದರು. ||೧೨|| ಈ ಪ್ರಕಾರ ನಡೆದಿರಲು ಇಂದ್ರನು ಒಂದು ದಿವಸ ಕೈಲಾಸಕ್ಕೆ ಹೋಗಿ ಶ್ರೀ ಶಂಕರನಿಗೆ ವಂದಿಸಿ ಶುಕ್ರಾಚಾರ್ಯರ ಮಂತ್ರದ ಪ್ರಭಾವವನ್ನೂ ತಮಗೆ ತ್ರಾಸವಾದದ್ದನ್ನೂ ಹೇಳಿ ಮುಂದೆ ನಮ್ಮ ಗತಿ ಏನು ಎಂದನು. ||೧೩|| ಅವನ ಮಾತು ಕೇಳಿ ಶ್ರೀ ಶಂಕರನು ಸಿಟ್ಟಾಗಿ ನಂದಿಯನ್ನು ಕರೆದು— ಎಲೈ ನಂದಿಯೇ, ನೀನು ತೀವ್ರವಾಗಿ ಹೋಗಿ ಆ ಶುಕ್ರಾಚಾರ್ಯನನ್ನು ಹಿಡಿಕೊಂಡು ಬಾ ಎಂದು ಹೇಳಿದನು. ||೧೪|| ಒಡೆಯನ ಅಪ್ಪಣೆಯಂತೆ ನಂದಿಯು ಕೂಡಲೆ ಹೋಗಿ, ತಪ ಧ್ಯಾನದಲ್ಲಿರುವ ಆ ಶುಕ್ರನನ್ನು ಬಾಯಿಂದ ಹಿಡಿದು ||೧೫|| ಶಿವನ ಹತ್ತರ ತಂದನು. ಆಗ ದೈತ್ಯರು ಹಾಹಾಃಕಾರ ಮಾಡಹತ್ತಿದರು. ಆಮೇಲೆ ಶ್ರೀ ಶಿವನು ಅಗಸ್ತ್ಯರು ಸಮುದ್ರವನ್ನು ಕುಡಿದಂತೆ ಶುಕ್ರನನ್ನು ನುಂಗಿಬಿಟ್ಟನು. ||೧೬|| ಹೀಗೆ ಆ ಶುಕ್ರನು ಅನೇಕ ದಿವಸಗಳವರೆಗೆ ಶಿವನ ಹೊಟ್ಟೆಯಲ್ಲಿಯೇ ಇದ್ದು, ಒಂದು ದಿವಸ ಅವನ ಮೂತ್ರದ್ವಾರದಿಂದ ಹೊರಗೆ ಬಂದುಬಿಟ್ಟನು. ಇದು ಶ್ರೀ ಶಂಕರನಿಗೆ ತಿಳಿಯದೆ ಹೋಯಿತು. ||೧೭|| ಹೀಗೆ ಶುಕ್ರನು ಈಶ್ವರನ ಉದರದಿಂದ ಹುಟ್ಟಿದ್ದರಿಂದ ಅವನು ಮೊದಲಿನ ಹೆಸರು ಹೋಗಿ ಅವನಿಗೆ ಭಾರ್ಗವನೆಂಬ ಹೊಸ ಹೆಸರು ಬಂತು. ಅವನು ಮತ್ತೆ ಮೊದಲಿನಂತೆ ಸಂಜೀವನೀ ಮಂತ್ರವನ್ನು ಜಪಿಸಹತ್ತಿದನು. ||೧೮|| ಇದನ್ನು ಕಂಡು ಇಂದ್ರನು ಮನಸಿನಲ್ಲಿ ಚಿಂತಿಸಿ, ದೇವತೆಗಳ ಗುರುವೂ

ಹಾಗು ಪುರೋಹಿತನೂ ಆದ ಬೃಹಸ್ಪತ್ಯಾಚಾರ್ಯರನ್ನು ಕರೆಯಿಸಿ— ಸ್ವಾಮೀ, ದೇವ ಗುರುಗಳೇ, ಶುಕ್ರಾಚಾರ್ಯನು ಮತ್ತೆ ಈಶ್ವರನ ಉದರದಿಂದ ಹೊರಗೆ ಬಂದು ದೈತ್ಯರನ್ನು ಬದುಕಿಸುತ್ತಿರುವನು. ॥ ೧೯ ॥ ಆದಕ್ಕೆ ಏನಾದರೂ ವಿಘ್ನ ಮಾಡಬೇಕಾಗಿದೆ, ಶ್ರೀ ಗುರುರಾಯಾ, ನೀವು ನಮಗೆ ವಿಚಾರವಂತ ಪುರೋಹಿತ ರಾಗಿರುವಿರಿ. ಸ್ವಾಮೀ ಬೃಹಸ್ಪತಿಯೇ, ನೀವು ಇದಕ್ಕೆ ಬೇಗ ಒಂದು ಉಪಾಯವನ್ನು ಹುಡುಕಿ ಹೇಳಿರಿ. ॥ ೨೦ ॥ ಆ ದೈತ್ಯರು ಎಂಥ ದೈವಶಾಲಿಗಳು ನೋಡಿರಿ ! ಅವರ ಗುರುಗಳಾದ ಶುಕ್ರಾಚಾರ್ಯರು ಆ ದೈತ್ಯರಿಗೆ ಜೀವದಲ್ಲಿ ಭರವಸವನ್ನು ಕೊಟ್ಟು ಸತ್ತವರನ್ನು ಬದುಕಿಸುವರು, ಆದರಿಂದ ಆ ದೈತ್ಯರು ಪುನಃ ಯುದ್ಧಕ್ಕೆ ಬರುವರು. ॥ ೨೧ ॥ ನೀವು ಮಾತ್ರ ನಮಗೆ ಹಾಗೆ ಯಾಕೆ ಮಾಡುವದಿಲ್ಲ? ನೀವು ದೇವತೆಗಳ ಗುರುವೆಂದೆನಿಸಿಕೊಂಡು ನಮ್ಮನ್ನು ಯಾಕೆ ಉಪೇಕ್ಷಿಸುತ್ತೀರಿ ? ಈಗ ತಾವು ಆ ಶುಕ್ರನ ಸಂಜೀವನೀ ಮಂತ್ರವು ನಾಟದಂತೆ ತೀವ್ರವಾಗಿ ಏನಾದ ರೊಂದು ಹಂಚಿಕೆಯನ್ನು ಮಾಡಿರಿ ॥ ೨೨ ॥ ನೀವು ಯಾವತ್ತೂ ದೇವತೆಗಳಿಗೆ ಪೂಜ್ಯರಾಗಿದ್ದೀರಿ. ನೀವು ಒಂದು ವೇಳೆ ಕೃಪಾಮಾಡಿದರೆ ಆ ಶುಕ್ರಾಚಾರ್ಯರ ಮಹತ್ವವೆಲ್ಲಿ ಉಳಿಯುವದು ? ಅವನು ಎಂದೂ ನಿಮ್ಮ ಯೋಗ್ಯತೆಗೆ ಸರಿಯಲ್ಲ. ॥ ೨೩ ॥ ಎಂದು ಇಂದ್ರನು ನಾನಾ ರೀತಿಯಿಂದ ಸ್ತೋತ್ರಮಾಡಿ ಆ ಬೃಹಸ್ಪತಿಯನ್ನು ಷೋಡಶೋಪಚಾರವಿಧಿಯಿಂದ ಪೂಜಿಸಿದನು. ಆದರಿಂದ ಆ ದೇವಗುರುವು ಸಂತೋಷಬಟ್ಟು, ॥ ೨೪ ॥ ಎಲೈ ಇಂದ್ರನೇ ಇದಕ್ಕೆ ನಾನೊಂದು ಉಪಾಯವನ್ನು ಹೇಳುವೆನು ಕೇಳು. ಆ ಸಂಜೀವನೀ ಮಂತ್ರವು ಆರು ಕಿವಿಗಳಿಗೆ ಬೀಳುವಂತೆ ಮಾಡಬೇಕು. ಅಂದರೆ ಆ ಶುಕ್ರನಲ್ಲಿ ಆ ಮಂತ್ರ ಸಾಮರ್ಥ್ಯವು ಉಳಿಯುವದಿಲ್ಲ. ॥೨೫॥ ಆ ಮಂತ್ರವನ್ನು ಕಲಿಯಲಿಕ್ಕೆ ನಮ್ಮಲ್ಲಿಂದ ಒಬ್ಬನನ್ನು ವಿದ್ಯಾರ್ಥಿಯಾಗಿ ಆ ಶುಕ್ರನ ಹತ್ತರ ತೀವ್ರವಾಗಿ ಕಳಿಸ ಬೇಕು. ಅಂದರೆ ಅವನು ನಿಶ್ಚಯವಾಗಿ ಕಲಿತು ಬರುವನು. ॥ ೨೬ ॥ ಆದಕ್ಕೆ ನನ್ನ ಮಗನಾದ ಕಚನನ್ನು ಕಳಿಸೋಣ ಅವನು ಹೋಗಿ ಆ ಸಂಜೀವನೀ ಮಂತ್ರವು ಹ್ಯಾಗದೆ ಎಂಬದನ್ನು ಕಲಿತು ಬರುವನು. ॥ ೨೭ ॥ ಎಂದು ಬುದ್ಧಿವಂತನೂ ಯುಕ್ತಿವಂತನೂ ಆದ ಕಚನನ್ನು ಕರೆದು— ಎಲೈ ಪುತ್ರರಾಯಾ, ಕಚನೇ, ನೀನು

ವಿದ್ಯಾರ್ಥಿಯಾಗಿ ಶುಕ್ರಾಚಾರ್ಯರ ಹತ್ತರ ಹೋಗಿ, ॥ ೨೮ ॥ ಅಲ್ಲಿ ನಮ್ಮನ್ನು ನಿಂದಿಸಿ ಶುದ್ಧ ಮನದಿಂದ ಅವನ ಸೇವೆಮಾಡಿ, ಯಾವ ರೀತಿಯಿಂದಾದರೂ ಆ ಸಂಜೀವನೀ ಮಂತ್ರವನ್ನು ಕಲಿತು ಬಾ ಎಂದು ಯುಕ್ತಿಯನ್ನು ಹೇಳಿದನು ॥ ೨೯ ॥ ಆಗ ಆ ಕಚನು ತಂದೆಯ ಮತ್ತು ಇಂದ್ರಾದಿ ದೇವತೆಗಳ ಅಪ್ಪಣೆಯನ್ನು ಪಡೆದು, ವಿದ್ಯಾರ್ಥಿಯಾಗಿ ಶುಕ್ರನ ಹತ್ತರ ಹೋಗಿ ॥ ೩೦ ॥ ಅವನಿಗೆ ಸಾ। ನ। ಮಾಡಿ ನಮ್ರದಿಂದ ನಿಂತುಕೊಂಡನು. ಆಗ ಶುಕ್ರಾಚಾರ್ಯನು— ಎಲೈ ವಟುವೇ, ನೀನು ಯಾರು ? ಎಲ್ಲಿಂದ ಬಂದೆ ? ಎಂದು ಕೇಳಿದನು. ॥ ೩೧ ॥ ಅದಕ್ಕೆ ಕಚನು— ಸ್ವಾಮೀ, ನಾನು ಒಬ್ಬ ಬ್ರಾಹ್ಮಣನ ಮಗನು, ನಿಮ್ಮ ಪ್ರಸಿದ್ಧವಾದ ಕೀರ್ತಿಯನ್ನು ಕೇಳಿ, ತಮ್ಮ ಸೇವೆಮಾಡಿ ವಿದ್ಯೆಕಲಿಯಬೇಕೆಂಬ ಇಚ್ಛೆಯಿಂದ ಬಂದೆನು ॥ ೩೨ ॥ ಸ್ವಾಮೀ, ನೀವು ಭಕ್ತವತ್ಸಲ ಶಿರೋಮಣಿಗಳೂ, ಅನಾಥ ರಕ್ಷಕರೂ ಆಗಿರುವದರಿಂದ ತಮ್ಮ ಚರಣಸೇವಕನಾಗಿ ವಿದ್ಯೆ ಕಲಿಯಬೇಕೆಂಬ ಇಚ್ಛೆಯಿಂದ ಬಂದೆನು. ದಯಮಾಡಿ ತಾವು ನನಗೆ ವಿದ್ಯೆಯನ್ನು ಕಲಿಸಬೇಕು ಎಂದು ಬೇಡಿಕೊಂಡನು. ॥ ೩೩ ॥ ಈ ಪ್ರಕಾರ ಕಚನು ಮಾತಾಡಿ ವಿನಯದಿಂದ ಕೈಮುಗಿದುಕೊಂಡು ನಿಂತಿರಲು, ಆಗ ಶುಕ್ರಾಚಾರ್ಯರ ಪ್ರೀತಿಯ ಒಬ್ಬಳೇ ಒಬ್ಬ ಮಗಳಾದ ದೇವಯಾನಿಯು ತಂದೆಯ ಹತ್ತರ ಬಂದು, ॥ ೩೪ ॥ ಒಳ್ಳೆ ಸುಲಕ್ಷಣ, ಸುಂದರ ತರುಣನಾಗಿ ಪ್ರತಿಮನ್ಮಥನಂತೆ ಕಾಣುತ್ತಿದ್ದ ಕಚನನ್ನು ನೋಡಿ, ಇವನೇ ನನ್ನ ಪತಿಯಾಗಬೇಕು ಎಂದು ಮನಸ್ಸಿನಲ್ಲಿ ಆಲೋಚನೆಮಾಡಿ ತಂದೆಯನ್ನು ಕುರಿತು ॥ ೩೫ ॥ — ತಂದೆಯೇ ಇವನು ಒಳ್ಳೆಯವನೂ ಯೋಗ್ಯನೂ ಆಗಿರುವಂತೆ ತೋರುವದು ಕಾರಣ ಈತನನ್ನು ನಿಮ್ಮ ಶಿಷ್ಯನನ್ನಾಗಿ ಮಾಡಿಕೊಂಡು ವಿದ್ಯಾಭ್ಯಾಸವನ್ನು ಹೇಳಿರಿ. ॥ ೩೬ ॥ ಎಂದು ವಿನಯದಿಂದ ಹೇಳಿಕೊಂಡು ಆ ಕಚನನ್ನು ತಮ್ಮ ತಂದೆಯ ಮುಖ್ಯ ಶಿಷ್ಯನನ್ನಾಗಿ ಮಾಡಿದಳು. ಶುಕ್ರಾಚಾರ್ಯನು ಅವನಿಗೆ ವಿದ್ಯೆಯನ್ನು ಹೇಳಹತ್ತಿದನು. ॥೩೭॥ ಹೀಗೆ ಕಚನು ವಿದ್ಯಾಕಲಿಯುತ್ತಿರಲು, ದೈತ್ಯರು ಅವನನ್ನು ಕಂಡು ಮನಸಿನಲ್ಲಿ— ಇವನು ನಿಶ್ಚಯವಾಗಿ ದೇವತೆಗಳಲ್ಲೊಬ್ಬನಾಗಿದ್ದು, ಕಪಟವೇಷವನ್ನು ಧರಿಸಿ ಇಲ್ಲಿಗೆ ಸಂಜೀವನೀ ವಿದ್ಯೆಯನ್ನು ಕಲಿಯಲಿಕ್ಕೆ ಬಂದಿರು

ವನು. || ೩೮ || ಇವನು ಆ ಸಂಜೀವನೀ ವಿದ್ಯೆಯನ್ನು ಕಲಿತುಕೊಂಡು ಹೋಗಿ ದೇವತೆಗಳಿಗೆ ಕಲಿಸುವನು, ಆಮೇಲೆ ಅದರಿಂದ ನಮಗೆ ಹಾನಿಯಾಗುವದೆಂದು ಚಿಂತೆಮಾಡುತ್ತಿದ್ದರು. || ೩೯ || ಹೀಗೆ ಕೆಲವು ದಿವಸಗಳಾದ ಮೇಲೆ ಒಂದು ದಿವಸ ಶುಕ್ರಾಚಾರ್ಯರು ಸಮಿಧೆಯನ್ನು ತರಲಿಕ್ಕೆ ಆ ಕಚನನ್ನು ಅಡವಿಗೆ ಕಳಿಸಿದರು. ಅವನ ಸಹಾಯಕ್ಕೆ ಕೆಲವು ರಾಕ್ಷಸರೂ ಹೋದರು. || ೪೦ || ಎಲ್ಲರೂ ಕೂಡಿ ಅಡವಿಗೆ ಹೋದ ಕೂಡಲೆ ಆ ದೈತ್ಯರು ದ್ವೇಷದಿಂದ ಆ ಕಚನನ್ನು ಕೊಂದು, ತಾವು ಸಮಿಧೆಗಳನ್ನು ತಕ್ಕೊಂಡು ಮನೆಗೆ ಬಂದರು. || ೪೧ || ಅವರ ಸಂಗಡ ಕಚನು ಬರಲಿಲ್ಲವೆಂದು ತಿಳಿದು, ಶುಕ್ರಾಚಾರ್ಯರ ಪರಮಪ್ರೀತಿಪಾತ್ರ ಮಗಳಾದ ದೇವಯಾನಿಯು ತಂದೆಯ ಬಳಿಗೆ ಬಂದು ದೈನ್ಯದಿಂದಲೂ ವಿನಯದಿಂದಲೂ— ಅಪ್ಪಾ, ಅಡವಿಯಿಂದ ಕಚನು ಮನೆಗೆ ಯಾಕೆ ಬರಲಿಲ್ಲ ? || ೪೨ || ಅವನು ಎಲ್ಲಿದ್ದಾನೆ ಕರೆಯಿರಿ. ಅವನು ಬರುವತನಕ ನಾನು ಸರ್ವಥಾ ಊಟಮಾಡುವದಿಲ್ಲವೆಂದು ತಿಳಿಯಿರಿ ಎಂದು ಹೇಳಿದಳು. ಆಕೆಯ ನಿಶ್ಚಯವಾದ ಮಾತುಕೇಳಿ ಶುಕ್ರನು ಆಲೋಚಿಸಹತ್ತಿದನು. || ೪೩ || ಆಮೇಲೆ ಜ್ಞಾನದೃಷ್ಟಿಯಿಂದ ಮನಸಿನಲ್ಲಿ ನೋಡಲು, ಕಚನು ಮೃತನಾಗಿರುವನೆಂದು ತಿಳಿದು ತೀವ್ರವಾಗಿ ಸಂಜೀವನೀ ಮಂತ್ರವನ್ನು ಜಪಿಸಿ ಕಚನನ್ನು ಬದುಕಿಸಿದನು. ಕೂಡಲೆ ಆ ಕಚನು ಮನೆಗೆ ಬಂದನು ಅವನನ್ನು ಕಂಡು ದೇವಯಾನಿಯು ಸಂತೋಷಪಟ್ಟಳು || ೪೪ || ಆಮೇಲೆ ಆ ದೈತ್ಯರು ಆ ಕಚನಮೇಲೆ ಅತಿಶಯ ದ್ವೇಷಮಾಡಹತ್ತಿದರು. ಹೀಗೆ ಕೆಲವು ದಿವಸಗಳಾದಮೇಲೆ ಮತ್ತೊಂದು ದಿವಸ ಆ ಕಚನು ದೈತ್ಯರೊಡನೆ ಅಡವಿಗೆ ಹೋದನು ಆಗ ಅವರು ಅವನನ್ನು ಮತ್ತೆ ಕೊಂದು || ೪೫ || ಮನಸಿನಲ್ಲಿ— ಹೋದಸಾರೆ ಶುಕ್ರಾಚಾರ್ಯರು ಇವನನ್ನು ಬದುಕಿಸಿದರು. ಈಗ ಇವನ ದೇಹವನ್ನು ಹೀಗೆಯೇ ಬಿಟ್ಟರೆ, ಅವರು ಮಗಳಮೇಲಿನ ಮೋಹದಿಂದ ಈಗಲೂ ಮತ್ತೆ ಬದುಕಿಸಬಹುದು ಎಂದು ಆಲೋಚಿಸಿ, ಆ ಕಚನ ದೇಹವನ್ನು ಕಡಿದು ಚೂರುಚೂರುಮಾಡಿ ಹತ್ತೂ ದಿಕ್ಕುಗಳಿಗೆ ಒಗೆದು ತಿರುಗಿ ಮನೆಗೆ ಬಂದರು. || ೪೬ || ಅಷ್ಟರಲ್ಲಿ ಸೂರ್ಯಾಸ್ತವಾಯಿತು. ಕಚನು ಬರದೇ ಇದ್ದದ್ದನ್ನು ಕಂಡು ದೇವಯಾನಿಯು ತಂದೆಯ ಹತ್ತರ

ಬಂದು ವಿನಯದಿಂದ— ತಂದೆಯೇ ಕಚನು ಇನ್ನೂ ಮನೆಗೆ ಯಾಕೆ ಬರಲಿಲ್ಲ? ॥ ೪೭ ॥ ಕಚನು ನನ್ನ ಪ್ರಾಣಸಖನು. ನೀವು ಅವನನ್ನು ಕರತರದಿದ್ದರೆ ನಾನು ವಿಷವನ್ನು ಕುಡಿಯುವೆನು. ತೀವ್ರವಾಗಿ ನನಗೆ ಕಚನ ಮೋರೆಯನ್ನು ತೋರಿಸಿರಿ, ಎಂದು ಶೋಕಮಾಡಹತ್ತಿದಳು. ॥ ೪೮ ॥ ಮಗಳಮೇಲಿನ ಅತ್ಯಂತ ಪ್ರೀತಿಯಿಂದ ಶುಕ್ರನು ಮತ್ತೆ ಜ್ಞಾನದೃಷ್ಟಿಯಿಂದ ನೋಡಿ ಮನಸ್ಸಿನಲ್ಲಿ— ಈಸಾರೆ ರಾಕ್ಷಸರು ಕಚನನ್ನು ಕೊಂದು ಚೂರು ಚೂರುಮಾಡಿ ದಶದಿಕ್ಕುಗಳಿಗೆ ಒಗೆದಿರುವರೆಂದು ತಿಳಿದು ಕೂಡಲೆ ಸಂಜೀವನೀ ಮಂತ್ರವನ್ನು ಜಪಿಸಿದನು. ॥೪೯॥ ಧನ್ಯವಾದ ಆ ಮಂತ್ರದ ಶಕ್ತಿಯಿಂದ ಹತ್ತೂ ದಿಕ್ಕುಗಳಲ್ಲಿ ಬಿದ್ದ ಕಚನ ದೇಹದ ಚೂರುಗಳೆಲ್ಲ ಒತ್ತಟ್ಟಿಗೆ ಕೂಡಿದ ಕೂಡಲೆ ಅವನು ಬದುಕಿ ಮನೆಗೆ ಬಂದನು. ಆಗ ದೇವಯಾನಿಯು ಅತ್ಯಂತ ಸಂತುಷ್ಟಳಾಗಿ ಒಳ್ಳೇ ಪ್ರೀತಿ ಯಿಂದ ತಂದೆಯನ್ನು ಅಪ್ಪಿಕೊಂಡಳು. ॥ ೫೦ ॥ ಆಗ ದೈತ್ಯರು ಮತ್ತೆ ಮನಸ್ಸಿನಲ್ಲಿ ವಿಚಾರಮಾಡಹತ್ತಿದರು ಏನಂದರೆ— ನಾವು ಏನು ಮಾಡಿದರೂ ಈ ಕಚನು ಸಾಯುವದಿಲ್ಲ ಗುರುಗಳು ಮಗಳ ಮೇಲಿನ ಅತ್ಯಂತ ಪ್ರೀತಿಯಿಂದ ಇವನನ್ನು ಪುನಃ ಬದುಕಿಸುವರು. ॥ ೫೧ ॥ ಈಗ ನಾವು ಅದಕ್ಕೊಂದು ಉಪಾಯಮಾಡಬೇಕು. ಏನಂದರೆ ನಾಳೆ ಏಕಾಗಶಿ ಬಂದಿದೆ ಆ ದಿವಸ ಬೆಳಿಗ್ಗೆ ಕಚನನ್ನು ಕೊಂದು, ಚೂರುಚೂರುಮಾಡಿ, ಸಣ್ಣಾಗಿ ಅರೆದು ಮದ್ಯದಲ್ಲಿ ಕೂಡಿಸಿ ಗುರುಗಳಿಗೆ ಕುಡಿಯಲಿಕ್ಕೆ ಕೊಡಬೇಕು ॥ ೫೨ ॥ ಎಂದು ಯುಕ್ತಿಯನ್ನುಮಾಡಿ ಮುಂದೆ ಏಕಾದಶಿ ಬಂದಕೂಡಲೆ ಆ ದೈತ್ಯರು ಕಚನನ್ನು ದೂರ ಅಡವಿಯಲ್ಲಿ ತಕ್ಕೊಂಡುಹೋಗಿ ಕೊಂದು ॥೫೩॥ ಚೂರುಚೂರುಮಾಡಿ ಸುಟ್ಟು, ಭಸ್ಮಮಾಡಿ ಅದನ್ನು ಮದ್ಯದಲ್ಲಿ ಕೂಡಿಸಿ, ಅದರಲ್ಲಿ ಬಹಳವಾಗಿ ಸ್ನಿಗ್ಧಪದಾರ್ಥ ವನ್ನು ಹಾಕಿ, ಶುಕ್ರಾಚಾರ್ಯರಿಗೆ ಕುಡಿಯಲಿಕ್ಕೆ ಕೊಟ್ಟರು. ॥ ೫೪ ॥ ಎಲ್ಲಿ ನೋಡಿದರೂ ಕಚನು ಕಾಣ ದಂತಾದ್ದರಿಂದ ದೇವಯಾನಿಯು ಮತ್ತೆ ತಂದೆಯ ಹತ್ತರ ಬಂದು— ತಂದೆಯೇ ನನ್ನ ಪ್ರಿಯಕರನಾದ ಕಚನು ಎಲ್ಲಿದ್ದಾನೆ? ಅವನನ್ನು ತೀವ್ರವಾಗಿ ಕರೆಯಿರಿ. ಅವನು ಬರದಿದ್ದರೆ ನನಗೆ ಸಮಾಧಾನವಾಗುವದಿಲ್ಲ, ಎಂದು ಅತಿಶಯವಾಗಿ ಅಳಹತ್ತಿದಳು. ॥ ೫೫ ॥ ಆಗ ಶುಕ್ರನು ಜ್ಞಾನದೃಷ್ಟಿಯಿಂದ ನೋಡಲು ಕಚನು ಮೂರು

ಲೋಕದಲ್ಲಿ ಎಲ್ಲಿಯೂ ಕಾಣಲಿಲ್ಲ. ಆಗ ಶುಕ್ರನು ಮಗಳಮೇಲಿನ ಪ್ರೇಮದಿಂದ ಮನಸಿನಲ್ಲಿಯೇ ಖೇದ ಪಟ್ಟು, || ೫೬ || ಮನಸಿನಲ್ಲಿ ಅತಿ ಸೂಕ್ಷ್ಮರೀತಿಯಿಂದ ವಿಚಾರಿಸಿ ಅತಿ ಸೂಕ್ಷ್ಮರೀತಿಯಿಂದ ಎಲ್ಲ ಕಡೆಗೂ ಹುಡುಕಹತ್ತಲು, ಆ ಕಚನು ತನ್ನ ಹೊಟ್ಟೆಯಲ್ಲಿಯೇ ಇದ್ದಾನೆಂದು ತಿಳಿದು, ಸಂಶಯವುಳ್ಳವನಾಗಿ ಇನ್ನು ಹ್ಯಾಗೆ ಮಾಡಬೇಕೆಂದು ಚಿಂತಿಸಹತ್ತಿದನು. || ೫೭ || ಆಮೇಲೆ ಮಗಳನ್ನು ಹತ್ತರ ಕರೆದು— ಎಲೌ ಮಗಳೇ, ಕಚನು ಹೊರಗೆ ಎಲ್ಲಿಯೂ ಇಲ್ಲ ನನ್ನ ದೇಹದಲ್ಲಿಯೇ ಇರುವನು, ಅವನನ್ನು ಹೊರಗೆ ಹ್ಯಾಗೆ ತೆಗೆಯಲಿ? ||೫೮|| ಅವನನ್ನು ಹೊರಗೆ ತೆಗೆದರೆ ನಾನು ಸಾಯುವೆನು. ಇದರ ಬಗ್ಗೆ ನಿನ್ನ ಅಪೇಕ್ಷೆಯು ಹ್ಯಾಗೆ ಅದೆ ಹೇಳು ಎಂದು ಕೇಳಿದನು. || ೫೯ || ಆಗ ಆಕೆಯು ವಿನಯದಿಂದ ಕೈಮುಗಿದು— ತಂದೆಯೇ ನಾನು ಅವನ ಹೆಂಡತಿಯಾಗಿ ನಾವಿಬ್ಬರೂ ನಿನ್ನ ಹತ್ತರ ಇರಬೇಕೆಂಬ ಅಭಿಲಾಷೆಯು ನನ್ನ ಮನಸಿನಲ್ಲಿರುವದು. || ೬೦ || ಅವನೇ ನನ್ನ ಪತಿಯಾಗಬೇಕೆಂದು ಮನದಲ್ಲಿ ಸಂಕಲ್ಪಮಾಡಿರುವೆನು. ಒಂದು ವೇಳೆ ಈಗ ಅವನು ಬದುಕಿ ನಿಮ್ಮ ದೇಹದಿಂದ ಹೊರಗೆ ಬರದಿದ್ದರೆ ನಾನು ನಿಶ್ಚವಾಗಿ ಪ್ರಾಣವನ್ನು ಬಿಡುವೆನು. ಕಾರಣ ನೀವು ಹ್ಯಾಗಾದರೂ ಮಾಡಿ ಅವನನ್ನು ಬದುಕಿಸಲಿಕ್ಕೇ ಬೇಕು ಎಂದಳು || ೬೧ || ಆಕೆಯ ಮಾತು ಕೇಳಿ ಶುಕ್ರನು ಸಂದೇಹಪಟ್ಟು— ಎಲೌ ಮಗಳೇ, ಈಗ ನನ್ನ ದೇಹದಿಂದ ಕಚನನ್ನು ಬದುಕಿಸಿ ಹೊರಗೆ ತೆಗೆದರೆ ನಾನು ಸಾಯುವೆನಲ್ಲಾ? ಏನು ಮಾಡಲಿ? ಎಂದನು. || ೬೨ || ಆಗ ಆಕೆಯು— ತಂದೆಯೇ, ನೀನೇ ಎಲ್ಲರನ್ನೂ ಬದುಕಿಸುತ್ತೀ, ಹೀಗಿದ್ದು ನೀನು ಸಾಯುತ್ತೇನೆನ್ನುವದು ಆಶ್ಚರ್ಯಕರವಾಗಿ ತೋರುತ್ತದೆ ಎಂದು ಅಂದಳು. || ೬೩ || ಆಗ ಶುಕ್ರನು— ಎಲೌ ಮಗಳೇ, ನನ್ನ ಹೊರತು ಸಂಜೀವನಿ ಮಂತ್ರವು ಬೇರೆ ಯಾರಿಗೂ ಬರುವದಿಲ್ಲ ಆದ್ದರಿಂದ ನಾನು ಸತ್ತರೆ ನನ್ನನ್ನು ಬದುಕಿಸುವವರಾರು? || ೬೪ || ಆ ಮಂತ್ರವನ್ನು ಯಾರಿಗೂ ಹೇಳಬಾರದಾಗಿದೆ. ಆ ಮಂತ್ರವು ಆರು ಕಿವಿಗಳಿಗೆ ಹೋದರೆ ಅದರ ಮಹತ್ವವು ನಾಶವಾಗುವದು. ಮತ್ತು ಕಚನ ಸಲುವಾಗಿ ನನ್ನ ಪ್ರಾಣವೇ ಹೋಗುವದು. ಕಾರಣ ವಿಚಾರ ಮಾಡಿ ನೋಡು ಎಂದು ಅಂದನು. || ೬೫ || ಅವನು ಏನು ಹೇಳಿದರೂ

ಕೇಳದೆ ಆಕೆಯು ತಂದೆಯ ಪಾದಕ್ಕೆ ಬಿದ್ದು ಅಂಜಲಿಬದ್ಧಳಾಗಿ— ಅಪ್ಪಾ, ನೀವು ಆ ಮಂತ್ರವನ್ನು ನನಗೆ ಹೇಳಿರಿ. ॥ ೧೬ ॥ ನೀವು ಈಗ ಮೊದಲು ಆ ಮಂತ್ರದಿಂದ ಕಚನನ್ನು ಬದುಕಿಸಿರಿ. ನೀವು ಒಂದು ವೇಳೆ ಸತ್ತರೆ, ಅದೇ ಮಂತ್ರದಿಂದ ನಿಮ್ಮನ್ನು ನಾನು ಬದುಕಿಸುವೆನು ಎಂದು ಮತ್ತೆ ತಂದೆಯ ಪಾದಕ್ಕೆ ನಮಸ್ಕರಿಸಿದಳು. ॥೧೭॥ ಆಗ ಶುಕ್ರಾಚಾರ್ಯನು— ಎಲೌ ಮಗಳೇ, ಸ್ತ್ರೀಯರಿಗೆ ಮಂತ್ರವನ್ನು ಹೇಳುವದು ದೋಷಕರವೆಂದು ವೇದಶಾಸ್ತ್ರಗಳು ಹೇಳುವವು ॥ ೧೮ ॥ ಸ್ತ್ರೀಯರಿಗೆ ಪತಿಭಕ್ತಿಯೇ ಮಂತ್ರವು! ಅವರು ಬೇರೆ ಮಂತ್ರವನ್ನು ಜಪಿಸಬಾರದು. ಈಗ ನಾನು ನಿನಗೆ ಆ ಮಂತ್ರವನ್ನು ಹೇಳಿದರೆ ನನಗೂ ದೋಷ ಬರುವದು. ಮತ್ತು ಆ ಮಂತ್ರದ ಸತ್ವವೂ ಹೋಗುವದು ಎಂದನು ॥ ೧೯ ॥ ಆಗ ದೇವಯಾನಿಯು— ತಂದೆಯೇ, ನೀನೂ ಸಾಯಬಾರದು ನನ್ನ ಪತಿಯನ್ನೂ ಬದುಕಿಸಬಾರದೆಂದು ನಿನ್ನ ಮನಸಿನಲ್ಲಿದ್ದರೆ, ಆ ಮಂತ್ರವನ್ನು ಜಪಿಸುತ್ತ ನೀನೊಬ್ಬನೇ ಸುಖವಾಗಿರು. ನಾನಂತೂ ಪ್ರಾಣವನ್ನು ಬಿಡುವೆನು ಎಂದು ಹೇಳಿ ಅತಿಶಯವಾಗಿ ದುಃಖಿಸುತ್ತ ಮೂರ್ಛಿತಳಾಗಿ ಬಿದ್ದಳು. ॥ ೨೦ ॥ ಆಗ ಶುಕ್ರನು ಅತಿ ಪ್ರೇಮದಿಂದ ಅವಳನ್ನು ಎಬ್ಬಿಸಿ ಅಪ್ಪಿಕೊಂಡು ಆಕೆಗೆ ಆ ಸಂಜೀವನಿ ಮಂತ್ರವನ್ನು ಉಪದೇಶ ಮಾಡಿದನು. ॥ ೨೧ ॥ ಆಗ ಆ ಶುಕ್ರನ ಹೊಟ್ಟೆಯಲ್ಲಿದ್ದ ಕಚನು ಆ ಮಂತ್ರವನ್ನು ಕೇಳಿದನು. ಮಂತ್ರವು ಷಟ್ಕರ್ಣಕ್ಕೆ ಬಿತ್ತು, ಕಚನು ಬದುಕುವದಕ್ಕಾಗಿ ಶುಕ್ರನು ಆ ಮಂತ್ರವನ್ನು ಪುನಃ ಜಪಿಸಿದನು. ॥ ೨೨ ॥ ಆಗ ಕಚನು ಬದುಕಿ ಶುಕ್ರನ ಹೊಟ್ಟೆಯನ್ನು ಒಡೆದು, ಅವನ ಉದರದಿಂದ ಹೊರಗೆ ಬಂದನು ಕೂಡಲೆ ಶುಕ್ರನು ಮರಣ ಹೊಂದಿದನು. ಆಗ ದೇವಯಾನಿಯು ಆ ಮಂತ್ರವನ್ನು ಅಂದು ತಂದೆಯನ್ನು ಬದುಕಿಸಿದಳು ॥ ೨೩ ॥ ಈ ಪ್ರಕಾರ ಮೂರು ಸಾರೆ ಹೇಳಿದ ಮಂತ್ರವನ್ನು ಕೇಳಿ ಅದು ಕಚನಿಗೆ ಗಟ್ಟಿಯಾಗಿ ಪಾರ ಬಂತು. ಆಗ ಅವನು ತನ್ನ ಕಾರ್ಯವು ಸಾಧಿಸಿತೆಂದು ಸಂತೋಷ ಹೊಂದಿ, ॥ ೨೪ ॥ ಶುಕ್ರಾಚಾರ್ಯರಿಗೆ ವಂದಿಸಿ, ವಿನಯದಿಂದ ಕೈಮುಗಿದು ನಿಂತು— ಸ್ವಾಮೀ, ನಾನು ತಮ್ಮಿಂದ ವಿದ್ಯೆಯನ್ನು ಕಲಿತೆನು. ತಮ್ಮ ಕೃಪೆಯಿಂದ ಅದು ಪೂರ್ಣವಾಯಿತು. ದೇವಕಾರ್ಯಕ್ಕಾಗಿ ಸಂತೋಷ ಹೊಂದಿದೆನು.

ಇನ್ನು ನಾನು ಇಲ್ಲೇ ಇದ್ದರೆ ದೈತ್ಯರು ನನ್ನನ್ನು ಕೊಲ್ಲುವರು. ಆದ್ದರಿಂದ ಇನ್ನು ನನಗೆ ಹೋಗಲಿಕ್ಕೆ ಅಪ್ಪಣೆ ಯನ್ನು ಕೊಡಬೇಕು ಎಂದು ಅವರ ಪಾದಕ್ಕೆ ನಮಿಸಿದನು. ‖ ೭೫-೭೬ ‖ ಆಗ ಶುಕ್ರಾಚಾರ್ಯರಾದರೂ ಸಂತೋಷಬಟ್ಟು ಅವನಿಗೆ ಹೋಗಲಿಕ್ಕೆ ಅಪ್ಪಣೆ ಕೊಟ್ಟರು. ಅವನು ಹೊರಡುವ ಮುಂದೆ ದೇವಯಾನಿಯು ಬಂದು, ಅವನ ಧೋತರ ಶೆರಗು ಹಿಡಿದು:— ಎಲೈ ಕಚನೇ, ನೀನು ನನ್ನ ಪತಿಯಾಗಬೇಕು. ‖ ೭೭ ‖ ದೈತ್ಯರು ನಿನ್ನನ್ನು ಮೂರು ಸಾರೆ ಕೊಂದಾಗ ನಾನು ನನ್ನ ತಂದೆಗೆ ಹೇಳಿ ನಿನ್ನನ್ನು ಬದುಕಿಸಿದೆನು. ಮತ್ತು ನೀನು ನಮ್ಮ ತಂದೆಯ ಹತ್ತರ ವಿದ್ಯೆಯನ್ನು ಕಲಿತಿರುವೆ. ಅಂದಬಳಿಕ ನೀನು ನನ್ನನ್ನು ಅವಶ್ಯವಾಗಿ ಲಗ್ನ ಮಾಡಿಕೊಳ್ಳಬೇಕು. ಎಂದಳು. ‖ ೭೮ ‖ ಆಗ ಕಚನು— ಎಲೈ ತರುಣಿಯೇ, ಕೇಳು, ನೀನು ಗುರು ಕನ್ಯೆಯಾದ್ದರಿಂದ ನನಗೆ ತಂಗಿಯಾದೆ, ಮತ್ತು ನೀನು ನನ್ನನ್ನು ಬದುಕಿಸಿದ್ದರಿಂದ ಖರೋಖರವಾಗಿ ನನ್ನ ತಾಯಿಯಾದೆ. ‖ ೭೯ ‖ ಇಂಥ ನಿನ್ನನ್ನು ನಾನು ವರಿಸಿದರೆ ನನಗೆ ಪಾಪ ಬಂದೀತು, ಮತ್ತು ಋಷಿಗಳೆಲ್ಲರೂ ನನ್ನನ್ನು ದೂಷಿಸುವರು. ತಂಗಿಯಾದ ನಿನ್ನನ್ನು ಹ್ಯಾಗೆ ವರಿಸಲಿ ? ಹೇಳು ಎಂದನು. ‖ ೮೦ ‖ ಅವನ ಮಾತು ಕೇಳಿ ದೇವಯಾನಿಯು ಕೋಪಿಸಿ— ಕೂಡಲೆ— ಎಲೈ ಕಚನೇ ನೀನು ಸುಮ್ಮನೆ ನನ್ನ ಮನಸ್ಸಿನ ಆಶೆಯನ್ನು ನಿರಾಶೆ ಮಾಡಿದ್ದರಿಂದ ನೀನು ಕಲಿತ ಆ ಸಂಜೀವನೀ ವಿದ್ಯೆಯು ವ್ಯರ್ಥವಾಗಿ ಕೂಡಲೆ ಮರೆತು ಹೋಗಲಿ, ಸ್ವಲ್ಪಾದರೂ ಉಳಿಯಬೇಡ ಎಂದು ಶಾಪವನ್ನು ಕೊಟ್ಟಳು. ‖ ೮೧-೮೨ ‖ ಆಗ ಕಚನೂಸಹ— ಎಲೈ ದೇವಯಾನಿಯೇ, ನೀನು ನನಗೆ ಸುಮ್ಮನೇ ಶಾಪ ಕೊಟ್ಟದ್ದರಿಂದ ನಾನೂ ನಿನಗೆ ಶಾಪವನ್ನು ಕೊಡುವೆನು ಕೇಳು. ನಿನ್ನನ್ನು ಬ್ರಾಹ್ಮಣರ ಹೊರತಾಗಿ ಉಳಿದವರು ವರಿಸಲಿ. ‖ ೮೩ ‖ ಮತ್ತು ಬ್ರಹ್ಮಜ್ಞಾನಿಯಾದ ನಿಮ್ಮ ತಂದೆಯು ಹೆಂಗಸಾದ ನಿನಗೆ ಕಲಿಸಿದ್ದರಿಂದ ಅಮೃತ ಸಂಜೀವನೀ ಮಂತ್ರವೇ ಫಲಿಸದಿರಲಿ. ‖ ೮೪ ‖ ಎಂದು ಶಾಪವನ್ನು ಕೊಟ್ಟು ಕಚನು ಅಮರಾವತಿಗೆ ಹೋದನು. ಆಗ ಇಂದ್ರನೇ ಮೊದಲಾದ ದೇವತೆಗಳು ಇನ್ನು ದೈತ್ಯರು ನಾಶವಾಗುವರೆಂದು ಸಂತೋಷಹೊಂದಿದರು. ಆದರಂತೆ ಮುಂದೆ ದೈತ್ಯರು ನಾಶವಾದರು. ‖ ೮೫ ‖ ಎಂದು ಗುರುಗಳು ಮತ್ತೆ—

ಎಲೌ ಸಾವಿತ್ರಿಯೇ ಕೇಳು. ಈ ಪ್ರಕಾರ ಆ ಶುಕ್ರಾಚಾರ್ಯರ ಮಂತ್ರವು ಕೆಲಸಕ್ಕೆ ಬಾರದೆ ಅಪಾತ್ರವಾಯಿತು. ಆದ್ದರಿಂದ ಸ್ತ್ರೀಯರಿಗೆ ಮಂತ್ರವನ್ನು ಹೇಳಬಾರದು. ॥ ೮೬ ॥ ಸ್ತ್ರೀಯರಿಗೆ ಪತಿ ಶೇವೆಯೇ ಮುಖ್ಯವು. ಆದಕಾರಣ ಸ್ತ್ರೀಯರು ತಮ್ಮ ಗುರುಗಳ ಹಾಗೂ ಪತಿಯ ಅಪ್ಪಣೆ ಪಡೆದು ವ್ರತೋಪವಾಸಗಳನ್ನು ಮಾಡಬೇಕು ಎಂದು ಶ್ರೀ ಗುರುಗಳು ಹೇಳಿದರು. ॥ ೮೭ ॥ ಆಮೇಲೆ ಆ ಪತಿವ್ರತಾ ಸ್ತ್ರೀಯು ಅವರಿಗೆ ಕೈ ಮುಗಿದು— ಸ್ವಾಮೀ, ನಾನು ಅನೇಕ ವ್ರತಗಳನ್ನು ಮಾಡಿರುವೆನು. ಈಗ ತಮ್ಮ ವಾಕ್ಯವೇ ನಮಗೆ ಮಾನ್ಯವು. ತಾವು ನನಗೆ ಯಾವದಾದರೊಂದು ವ್ರತವನ್ನು ಹೇಳಿರಿ. ॥ ೮೮ ॥ ತಮ್ಮಮೇಲೆ ನಮ್ಮ ಪೂರ್ಣ ವಿಶ್ವಾಸವದೆ, ತಮ್ಮ ವಾಕ್ಯದ ಹೊರತು ನಮಗೆ ಬೇರೆ ಯಾವ ವ್ರತವೂ ಇಲ್ಲ, ತಮ್ಮ ಚರಣಸೇವೆಯೇ ನಮಗೆ ವ್ರತವು. ॥ ೮೯ ॥ ಆದ್ದರಿಂದ ದೇವಾ, ನಮ್ಮಮೇಲೆ ಕೃಪಾಮಾಡಿ, ನಮಗೆ ತಮ್ಮ ಚರಣಗಳಲ್ಲಿ ನಿರಂತರ ಭಕ್ತಿಯು ಉಳಿಯುವಂತೆ ನಿರೋಪ ಕೊಡಬೇಕು, ಎಂದು ಶ್ರೀ ಗುರುಗಳ ಚರಣಕ್ಕೆ ನಮಸ್ಕರಿಸಿದಳು. ॥ ೯೦ ॥ ಆಗ ಶ್ರೀ ಗುರುಗಳು— ಎಲೌ ಪತಿವ್ರತೆಯೇ, ನಿನ್ನ ಮುತ್ತೈದತನವು ಸ್ಥಿರವಾಗಿರುವಂಥ ಮತ್ತು ನಿನ್ನ ಪತಿಯು ರಾಜ್ಯಸುಖವನ್ನು ಹೊಂದುವಂಥ ಒಂದು ವ್ರತವನ್ನು ಹೇಳುವೆನು ಕೇಳು ಎಂದರು. ॥ ೯೧ ॥ ಆಗ ಆ ದಂಪತಿಗಳು ಕೈಮುಗಿದು— ಸ್ವಾಮೀ, ಗುರುಗಳೇ, ತಮ್ಮ ವಾಕ್ಯವೇ ನಮಗೆ ಕಾರಣವು. ತಾವು ಹೇಳಿದಂತೆ ನಾವು ಆಚರಿಸುವೆವು. ॥ ೯೨ ॥ ಯಾರು ಗುರುವಾಕ್ಯದಂತೆ ನಡೆಯುವದಿಲ್ಲವೋ ಅವರು ರೌರವ ನರಕವನ್ನು ಹೊಂದುವರು. ಆದ್ದರಿಂದ ನಾವು ತಮ್ಮ ವಾಕ್ಯವನ್ನು ಶಿರಸಾವಹಿಸುವೆವು, ಎಂದು ಮತ್ತೆ ಶ್ರೀ ಗುರುಗಳ ಚರಣಕ್ಕೆ ನಮಸ್ಕರಿಸಿದರು. ॥ ೯೩ ॥ ಎಲೈ ನಾಮಧಾರಕನೇ, ಆಗ ಭಕ್ತವತ್ಸಲರಾದ ಶ್ರೀ ಗುರುಗಳು ಪ್ರೀತಿಯಿಂದ ಆ ಸತಿಗೆ ಒಂದು ಶ್ರೇಷ್ಠವಾದ ವ್ರತವನ್ನು ವಿಸ್ತಾರವಾಗಿ ಹೇಳಹತ್ತಿದರು. ॥ ೯೪ ॥ ಶ್ರೀ ಗುರುಗಳು ಒಳ್ಳೇ ಕೌತುಕದಿಂದ ಹೇಳುವದನ್ನು ಆ ದಂಪತಿಗಳು ಅತಿ ಪ್ರೀತಿಯಿಂದಲೂ ಭಕ್ತಿಯಿಂದಲೂ ಕೇಳುತ್ತ ಕುಳಿತರು. ॥ ೯೫ ॥ ಆಗ ಶ್ರೀ ಗುರುಗಳು— ಎಲೈ ದಂಪತಿಗಳೇ, ಸೂತನು ಋಷಿಗಳಿಗೆ ಹೇಳಿದ ಮುಖ್ಯವಾದ

ಒಂದು ವ್ರತವನ್ನೂ ಅದರ ಬಗ್ಗೆ ಒಂದು ಇತಿಹಾಸವನ್ನೂ ಹೇಳುವೆನು ಕೇಳಿರಿ. ಹಿಂದಕ್ಕೆ ನೈಮಿಷಾರಣ್ಯವಾಸಿಗಳಾದ ಶೌನಕ ಮೊದಲಾದ ಋಷಿಗಳು ಸೂತ ಪುರಾಣಿಕನನ್ನು ಕುರಿತು— ಎಲೈ ಸೂತನೇ, ನಮಗೊಂದು ಉತ್ತಮವಾದ ವ್ರತವನ್ನೂ ಅದರ ಬಗ್ಗೆ ಒಂದು ಇತಿಹಾಸವನ್ನೂ ಹೇಳು ಎಂದರು || ೯೬ || ಆಗ ಸೂತನು— ಎಲೈ ಋಷಿಗಳೇ, ಸ್ತ್ರೀಯರೂ ಪುರುಷರೂ ಸಹ ಮಾಡಲಿಕ್ಕೆ ಯೋಗ್ಯವಾದ ಮತ್ತು ಮನೋಹರವಾದ ಒಂದು ವ್ರತವಿರುತ್ತದೆ. ಅದನ್ನೂ ಅದರ ಇತಿಹಾಸವನ್ನೂ ಹೇಳುತ್ತೇನೆ ಕೇಳಿರಿ ಎಂದು ಹೇಳಹತ್ತಿದನು. || ೯೭ || ಹ್ಯಾಗಂದರೆ— ನಿತ್ಯಾನಂದನಾಗಿಯೂ, ಶಾಂತನಾಗಿಯೂ, ನಿರ್ವಿಕಲ್ಪನಾಗಿಯೂ, ಪ್ರಖ್ಯಾತನಾಗಿಯೂ ಇರುವಂಥ ಈಶ್ವರನನ್ನು ಒಳ್ಳೇ ಭಕ್ತಿಯಿಂದಲೂ, ವಿಧಿಯಿಂದಲೂ ಪೂಜಿಸಿದಂಥವರು ಕೂಡಲೆ ಸಕಲಾಭೀಷ್ಟಗಳನ್ನು ಹೊಂದುವರು || ೯೮ || ಈ ಸಂಸಾರದಲ್ಲಿ ವಿರಕ್ತನಾಗಲಿ, ಅಥವಾ ಸಂಸಾರದಲ್ಲಿ ಮುಳುಗಿದವನಾಗಲಿ, ಮತ್ತು ವಿಷಯಗಳಲ್ಲಿ ತತ್ಪರನಾದಂಥವನಾಗಲಿ ಪೂರ್ಣ ಭಕ್ತಿಯಿಂದ ವಿಧಿಪೂರ್ವಕವಾಗಿ ಶ್ರೀ ಶಂಕರನನ್ನು ಪೂಜಿಸಿದರೆ ಅವರಿಗೆ ಈಶ್ವರನು ಪ್ರಸನ್ನನಾಗುವನು || ೯೯–೧೦೦ || ಅದರಿಂದ ಅವರು ಈ ಸಂಸಾರಸಾಗರವನ್ನು ದಾಟುವರು ಮತ್ತು ಅವರಿಗೆ ಸ್ವರ್ಗಾಪವರ್ಗದ ಅಧಿಕಾರವೂ ಸಿಗುವದೆಂದು ವೇದಶಾಸ್ತ್ರಗಳು ಹೇಳುವವು || ೧೦೧ || ವ್ರತಗಳಲ್ಲಿ ಅತ್ಯಂತ ಶ್ರೇಷ್ಠವಾದ ಸೋಮವಾರ ವ್ರತವೆಂಬದೊಂದು ವ್ರತವುಂಟು ಆ ಸೋಮವಾರದಿವಸ ವಿಧಿಯಿಂದ ಈಶ್ವರನನ್ನು ಪೂಜಿಸಿದವರು ಸಕಲಾಭೀಷ್ಟಗಳನ್ನು ಹೊಂದುವರು. || ೧೦೨ || ವಿಧಾನವು ಹ್ಯಾಗಂದರೆ— ಪ್ರತಿ ಸೋಮವಾರ ಪ್ರದೋಷಕಾಲವಲ್ಲಿ ಪೂಜೆಯನ್ನು ಮಾಡಬೇಕು. ಆ ದಿನ ಪೂಜೆ ಮಾಡುವಂಥವರು ಉಪವಾಸದಿಂದಲೂ ವಿಶೇಷವಾಗಿ ಜಿತೇಂದ್ರಿಯದಿಂದಲೂ ಇದ್ದು ವೈದಿಕ ಮಂತ್ರದಿಂದಲೂ ತಾಂತ್ರಿಕ ರೀತಿಯಿಂದಲೂ ವಿಧಿಪ್ರಕಾರ ಈಶ್ವರನನ್ನು ಪೂಜಿಸಿ ನಕ್ತ ಭೋಜನ ಮಾಡಬೇಕು || ೧೦೩ || ಈಶ್ವರನನ್ನು ವೈದಿಕರೂ, ಬ್ರಹ್ಮಚಾರಿಗಳೂ, ಸುವಾಸಿನಿಯರೂ, ಕನ್ಯೆಯರೂ, ಕುಮಾರಿಯರೂ, ವಿಧವೆಯರೂ ಸಹ ಪೂಜೆ ಮಾಡಬಹುದು. || ೧೦೪ || ಇದಕ್ಕೆ ಉದಾಹರಣಾರ್ಥವಾಗಿ ಹಿಂದಕ್ಕೆ

ಆದಂಥ ಅತಿ ಗಹನವಾದ ಒಂದು ಆಖ್ಯಾನವಿರುವದು. ಅದನ್ನು ಕೇಳಿದವರೆಲ್ಲರೂ ಪಾವನರಾಗುವರು. ||೧೦೫||
ಸ್ಕಂದ ಪುರಾಣದಲ್ಲಿ ಹೇಳಿದಂಥ ಕಥೆಯನ್ನು ನಿಮಗೆ ಸಾದ್ಯಂತವಾಗಿ ಹೇಳುವೆನು ಕೇಳಿರಿ. ಪೂರ್ವ ಯುಗದಲ್ಲಿ
ಆರ್ಯಾವರ್ತದೊಳಗೆ ಚಿತ್ರವರ್ಮನೆಂಬ ಒಬ್ಬ ರಾಜನಿದ್ದನು || ೧೦೬ || ಅವನು ಧರ್ಮಿಷ್ಠನಾಗಿ, ಹರ್ಷ
ದಿಂದ ಧರ್ಮ ಮಾರ್ಗದಿಂದ ನಡೆಯುತ್ತ ಅಧರ್ಮಿಗಳನ್ನು ಶಿಕ್ಷಿಸುತ್ತಿದ್ದನು. || ೧೦೭ || ಅವನು ಯಾವತ್ತು
ಪುಣ್ಯ ಕೆಲಸಗಳನ್ನು ಮಾಡಿ, ಸಕಲ ಸಂಪತ್ತುಗಳನ್ನು ಸಂಪಾದಿಸಿ ಪರಾಕ್ರಮದಿಂದ ಭೂಮಿಯೆಲ್ಲವನ್ನು
ಗೆದ್ದನು. || ೧೦೮ || ಅವನಿಗೆ ಮಕ್ಕಳಿದ್ದಿಲ್ಲ. ಆದ್ದರಿಂದ ಆ ರಾಜ ದಂಪತಿಗಳು ಕೂಡಿಕೊಂಡು ಧರ್ಮ
ಮಾಡುತ್ತ ಪುತ್ರ ಪ್ರಾಪ್ತಿಗಾಗಿ ಸದಾಶಿವನ ಪೂಜೆಯನ್ನು ಮಾಡುತ್ತಿದ್ದರು, ಹೀಗೆ ಕೆಲವುಕಾಲದ ಮೇಲೆ ಅವ
ರಿಗೆ ಒಬ್ಬ ಹೆಣ್ಣುಮಗಳು ಹುಟ್ಟಿದಳು || ೧೦೯ || ಆ ಕನ್ಯೆಯು ಅತಿ ಸುಂದರ ಸುಲಕ್ಷಣೆಯಾಗಿಯೂ,
ಪಾರ್ವತಿಯ ರೂಪಕ್ಕೆ ಸಮಾನಳಾಗಿಯೂ, ಸೂರ್ಯನಂತೆ ಪ್ರಕಾಶಮಾನಳಾಗಿಯೂ, ಅತಿ ಲಾವಣ್ಯವತಿ
ಯಾಗಿಯೂ ವರ್ಣಿಸಲಿಕ್ಕೆ ಅಸಾಧ್ಯವಾದ ರೂಪಉಳ್ಳವಳಾಗಿಯೂ ಇದ್ದಳು. || ೧೧೦ || ಆಗ ಆ ರಾಜನು
ಆ ಬಾಲೆಯ ಜಾತಕವನ್ನು ಬರೆಯಿಸಲಿಕ್ಕೆ ಅನೇಕ ಮಂದಿ ಜೋಯಿಸರನ್ನು ಕರೆಯಿಸಿದನು. ಆಗ ಅಪರಂಪಾರ
ಬ್ರಾಹ್ಮಣರು ಕೂಡಿ ಜಾತಕವನ್ನು ಬರೆಯಹತ್ತಿದರು || ೧೧೧ || ಅವರು ಜಾತಕವನ್ನು ಬರೆದು ರಾಜನನ್ನು
ಕುರಿತು— ಎಲೈ ಚಿತ್ರವರ್ಮರಾಜನೇ, ನಿನ್ನ ಕುವರಿಯು ಸುಲಕ್ಷಣೆಯಾಗಿರುವಳು. ಆದಕಾರಣ ಈ ಕನ್ಯೆಗೆ
" ಸೀಮಂತಿನಿ " ಎಂಬ ಹೆಸರನ್ನಿಡಬೇಕು. ಈಕೆಯು ಪಾರ್ವತಿಯಂತೆ ಮಾಂಗಲ್ಯವತಿಯೂ, ಹಾಗೂ ದಮ-
ಯಂತಿಯ ಸ್ವರೂಪದವಳೂ ಆಗುವಳು. || ೧೧೨ || ಮತ್ತು ಈಕೆಯು ಭಾಗೀರಥಿಯಂತೆ ಕೀರ್ತಿವುಳ್ಳವಳೂ,
ಲಕ್ಷ್ಮಿಯಂತೆ ಗುಣವುಳ್ಳವಳೂ, ಜ್ಞಾನದಲ್ಲಿ ದೇವಮಾತೆಯಾದ ಅದಿತಿ ದೇವಿಯ ಸಮಾನಳೂ, ಜಾನಕಿಯಂತೆ
ಪತಿವ್ರತೆಯೂ || ೧೧೩ || ಸೂರ್ಯನಂತೆ ಕಾಂತಿಯುಳ್ಳವಳೂ, ಚಂದ್ರನಂತೆ ಮನಃಶಾಂತಿಯುಳ್ಳವಳೂ, ಆಗಿ
ಪತಿಯೊಡನೆ ೧೦ ಸಾವಿರ ವರುಷ ಪ್ರಖ್ಯಾತವಾಗಿ ರಾಜಕಾರಭಾರ ಮಾಡುವಳು. || ೧೧೪ || ಎಂದು ಜಾತಕದ

ಫಲವನ್ನು ಹೇಳಿವರು. ಆಗ ರಾಜನು ಅತ್ಯಾನಂದವನ್ನು ಹೊಂದಿ, ಯಾವತ್ತು ಬ್ರಾಹ್ಮಣರಿಗೆ ಎಲ್ಲತರದ ದಾನಗಳನ್ನು ಕೊಡಹತ್ತಿದನು. || ೧೫ || ಈ ಪ್ರಕಾರ ಸಮಾರಂಭ ನಡೆದಂಥ ರಾಜಸಭೆಯಲ್ಲಿ ಒಬ್ಬ ಬ್ರಾಹ್ಮಣನು ಹೆದರದೆ ಮಾತಾಡಲಿಕ್ಕೆ ಎದ್ದುನಿಂತು– ||೧೬|| ಎಲೈ ರಾಜನೇ ನನ್ನ ಮಾತು ಕೇಳು. ನಿನ್ನ ಮಗಳ ಲಕ್ಷಣವನ್ನು ನಾನು ಹೇಳುವೆನು. ಈ ನಿನ್ನ ಮಗಳಿಗೆ ೧೪ನೇ ವಯಸ್ಸಿನಲ್ಲಿ ವೈಧವ್ಯವು ಬರುವದದೆ ಎಂದು ತಿಳಿ ಎಂದು ಹೇಳಿ ಕೂಡಲೆ ಆ ಬ್ರಾಹ್ಮಣನು ಹೊರಟುಹೋದನು. || ೧೭ || ಆ ಮಾತು ಕಿವಿಗೆ ಬಿದ್ದಕೂಡಲೆ ರಾಜನು ಮೂರ್ಛೆ ಹೊಂದಿ ಬಿದ್ದು, ಆ ಬ್ರಾಹ್ಮಣನ ವಾಕ್ಯವನ್ನು ನೆನಿಸಿ, ಮನಸ್ಸಿನಲ್ಲಿ ಅತಿಶಯ ಚಿಂತೆ ಮಾಡಹತ್ತಿದನು. || ೧೮ || ಅವನ ದುಃಖವನ್ನು ಕಂಡು ಸರ್ವ ಜನರೂ ದುಃಖದಿಂದ ತಳಮಳಿಸಿದರು. || ೧೯ || ಮುಂದೆ ಆ ಕನ್ಯೆಯು ಬೆಳೆಯುತ್ತ ಬೆಳೆಯುತ್ತ ೭ ವರ್ಷದವಳಾದಳು. ಆಗ ಆ ರಾಜದಂಪತಿಗಳು ಮನಸ್ಸಿನಲ್ಲಿ– ಈ ಕನ್ಯೆಯ ೧೪ನೇ ವರುಷಕ್ಕೆ ವೈಧವ್ಯವು ಬರುವದೆಂದು ಬ್ರಾಹ್ಮಣನು ಹೇಳಿರುವನು, ಅಂದಮೇಲೆ ಈಕೆಯ ಲಗ್ನವನ್ನು ಹ್ಯಾಗೆ ಮಾಡಬೇಕು ? ಎಂದು ಚಿಂತಿಸುತ್ತ ಒಳ್ಳೆ ವ್ಯಾಕುಲ ಉಳ್ಳವರಾಗಿದ್ದರು. || ೨೦–೨೧ || ಈ ಪ್ರಕಾರ ಆ ರಾಜದಂಪತಿಗಳು ಮಾತಾಡುತ್ತ ಕುಳಿತ ವೇಳೆಯಲ್ಲಿ ರಾಜಾಂಗಣದಲ್ಲಿ ಸಖಿಯರೊಡನೆ ಆಡುತ್ತಿದ್ದ ಸೀಮಂತಿನಿಯು ತನ್ನ ೧೪ನೇ ವರ್ಷಕ್ಕೆ ವೈಧವ್ಯ ಬರುವದೆಂದು ಬ್ರಾಹ್ಮಣನು ಅಂದನೆಂಬ ಮಾತನ್ನು ಕೇಳಿ, || ೨೨ || ತಾನೂ ಚಿಂತೆ ಮಾಡುತ್ತಿದ್ದಳು. ಹೀಗೆ ನಡೆದಿರಲು ಒಂದು ದಿವಸ ಆಕೆಯ ಮನೆಗೆ || ೨೩ || ಯಾಜ್ಞವಲ್ಕ್ಯ ಮುನಿಯ ಪತ್ನಿಯಾದ ಮೈತ್ರೇಯೀ ಎಂಬವಳು ಬಂದಳು. ಆಕೆಯು ಬಂದದ್ದನ್ನು ನೋಡಿ ಸೀಮಂತಿನಿಯು ಆಕೆಯ ಚರಣವನ್ನು ಹಿಡಿದು ||೨೪|| ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ ಕೈ ಮುಗಿದು ಕರುಣಾವಚನದಿಂದಲೂ ವಿನಯದಿಂದಲೂ— || ೨೫ || ತಾಯೀ, ಮೈತ್ರೇಯೀ, ನನ್ನದೆಸೆಯಿಂದ ನನ್ನ ಸೌಭಾಗ್ಯವು ಸ್ಥಿರವಾಗುವಂಥ ಒಂದು ಉಪಾಯವನ್ನು ಹೇಳಿ ನನ್ನನ್ನು ರಕ್ಷಿಸಬೇಕು. ಯಾಕಂದರೆ ನನ್ನ ಸೌಭಾಗ್ಯದ ಬಗ್ಗೆ ನನ್ನ ಮನಸ್ಸು ಬಹು ಚಂಚಲವಾಗಿರುತ್ತದೆ. ಎಂದು ಮತ್ತೆ ಆಕೆಯ ಪಾದಕ್ಕೆ ನಮಸ್ಕರಿಸಿದಳು. ||೨೬|| ಮನಸ್ಸಿನೊಳಗಿನ ಚಿಂತೆಯಿಂದ ಸೀಮಂತಿನಿಯು ಮತ್ತೆ

ವಿನಯದಿಂದ ಕೈಮುಗಿದು— ಅವ್ವಾ ಮೈತ್ರೇಯೀದೇವೀ, ನನಗೆ ನೀನೇ ತಾಯಿಯು! ಆದಕಾರಣ ನನಗೆ ನನ್ನ ಸೌಭಾಗ್ಯವು ಸ್ಥಿರವಾಗಿರುವಂಥ ಒಂದು ವ್ರತವನ್ನು ಹೇಳು ಎಂದಳು. ॥ ೧೨೭ ॥ ಈ ಪ್ರಕಾರವಾದ ಸೀಮಂತಿನಿಯ ಮಾತು ಕೇಳಿ ಮೈತ್ರೇಯಿಯು— ಎಲೌ ಬಾಲೇ ಸೀಮಂತಿನೀ, ನೀನು ಉಮಾರಮಣನಿಗೆ ಶರಣುಹೋಗು. ಅಂದರೆ ನಿನ್ನ ಮುತ್ತೈದೆತನವು ಸ್ಥಿರವಾಗುವದು ॥ ೧೨೮ ॥ ನೀನು ವಿಧಿಪ್ರಕಾರ ಸೋಮವಾರ ವ್ರತವನ್ನು ಹಿಡಿದು ಆ ಸೋಮವಾರ ದಿನ ಪ್ರದೋಷ ಕಾಲದವರೆಗೆ ಉಪವಾಸದಿಂದಿದ್ದು, ಆಮೇಲೆ ಮಂಗಳಸ್ನಾನ ಮಾಡಿ ಪೀತಾಂಬರವನ್ನುಟ್ಟುಕೊಂಡು ಶುದ್ಧವಾದ ಹಾಗು ಸ್ಥಿರವಾದ ಮನಸಿನಿಂದ ಆ ಪ್ರದೋಷಕಾಲದಲ್ಲಿ ಗೌರೀ ಹರನಾದ ಶ್ರೀ ಶಿವನನ್ನು ವಿಧಿಪ್ರಕಾರ ಪೂಜಿಸು. ॥ ೧೨೯–೧೩೦ ॥ ಅಭಿಷೇಕದಿಂದ ಪಾಪನಾಶವಾಗುವದು. ಪೀಠಪೂಜೆಯಿಂದ ಸಾಮ್ರಾಜ್ಯಪ್ರಾಪ್ತಿಯಾಗುವದು. ಗಂಧ-ಅಕ್ಷತೆ ಪುಷ್ಪಮಾಲೆಗಳಿಂದ ಪೂಜಿಸಿದರೆ ಸೌಭಾಗ್ಯವೂ, ಸೌಖ್ಯವೂ ಉಂಟಾಗುವವು. ॥ ೧೩೧ ॥ ಧೂಪದಿಂದ ದೇಹವು ಸುಗಂಧವಾಗುವದು. ದೀಪ ಹಚ್ಚುವದರಿಂದ ದೇಹವು ಕಾಂತಿಯುಕ್ತವಾಗುವದು. ನೈವೇದ್ಯದಿಂದ ಭೋಗವುಂಟಾಗುವದು. ತಾಂಬೂಲ ಸಮರ್ಪಣೆಯಿಂದ ಲಕ್ಷ್ಮಿಯು ಸ್ಥಿರವಾಗುವಳು. ॥ ೧೩೨ ॥ ನಮಸ್ಕಾರದಿಂದ ತೀವ್ರವಾಗಿ ಚತುರ್ವಿಧ ಪುರುಷಾರ್ಥಗಳು ಲಭಿಸುವವು, ಈಶ್ವರನ ಜಪ ಮಾಡುವದರಿಂದ ಅಷ್ಟೈಶ್ವರ್ಯದಿಂದ ಕೂಡಿ ಆನಂದಪಡುವರು. ॥ ೧೩೩ ॥ ಹೋಮ ಮಾಡುವದರಿಂದ ಸರ್ವ ಭಾಂಡಾರವು ಸಮೃದ್ಧಿಯಾಗುವದು. ಬ್ರಾಹ್ಮಣ ಭೋಜನದಿಂದ ಯಾವತ್ತು ದೇವತೆಗಳು ತೃಪ್ತರಾಗುವರು. ॥ ೧೩೪ ॥ ಈ ಪ್ರಕಾರ ಸೋಮವಾರ ವ್ರತವದೆ. ಎಲೈ ಸೀಮಂತಿನಿಯೇ, ನೀನು ನಿಶ್ಚಯವಾಗಿ ಅದನ್ನು ಮಾಡು. ಅದರಿಂದ ಭಯವೂ, ದುರಿತವೂ, ಮಹಾಕ್ಲೇಶವೂ ನಾಶವಾಗುವವು. ॥ ೧೩೫ ॥ ಎಲೌ ಸೀಮಂತಿನಿಯೇ, ಈ ಪ್ರಕಾರ ಗೌರಿಹರನಾದ ಶ್ರೀಶಂಕರನನ್ನು ಪೂಜಿಸಿದರೆ ನಿಶ್ಚಯವಾಗಿ ಸಮಸ್ತ ಪಾಪಗಳು ನಾಶವಾಗುವವು ಎಂದು ಹೇಳಿದಳು. ಆ ಮಾತು ಕೇಳಿ ಸೀಮಂತಿನಿಯು ಕೂಡಲೆ ಆ ವ್ರತವನ್ನು ಮಾಡಲಿಕ್ಕೆ ಒಪ್ಪಿದಳು. ॥ ೧೩೬ ॥ ಆಮೇಲೆ ತೀವ್ರವಾಗಿ ವಿಧಿಪ್ರಕಾರ ಸೋಮವಾರದ ವ್ರತ

ವನ್ನು ಹಿಡಿದು ನೇಮದಿಂದ ಮಾಡಹತ್ತಿದಳು ಈ ಪ್ರಕಾರ ಮಗಳು ಒಳ್ಳೇ ಭಕ್ತಿಯಿಂದಲೂ ನಿಶ್ಚಯದಿಂದಲೂ ವ್ರತ ಮಾಡುವದನ್ನು ನೋಡಿ ಆ ಚಿತ್ರವರ್ಮ ರಾಜನು— ಇನ್ನು ಮಗಳು ಲಗ್ನಕ್ಕೆ ಯೋಗ್ಯಳಾದಳು ‖ ೧೩೭ ‖ ಈಕೆಯ ಪೂರ್ವಾರ್ಜಿತ ಕರ್ಮದಂತೆ ಫಲವಾಗುವದು ಇನ್ನುಮೇಲೆ ಈಕೆಯ ಲಗ್ನವನ್ನು ಮಾಡಲೇಬೇಕು ಎಂದು ಮನಸಿನಲ್ಲಿ ವಿಚಾರ ಮಾಡಿ ‖೧೩೮‖ ವರಸನ್ನು ಹುಡುಕಿ ಗೊತ್ತುಮಾಡಿಕೊಂಡು ಬರುವದಕ್ಕೆ ಅನೇಕ ದೇಶಗಳಿಗೆ ಮಂತ್ರಿಗಳನ್ನು ಕಳಿಸಿದನು. ಆ ಮಂತ್ರಿಯು ಹೋಗುತ್ತ ಹೋಗುತ್ತ ನಳ-ದಮಯಂತಿಯರ ಮಗನಾದ ಇಂದ್ರ-ಸೇನನ ಪಟ್ಟಣಕ್ಕೆ ಹೋದನು. ‖೧೩೯‖ ಅಲ್ಲಿ ಆ ಇಂದ್ರಸೇನನ ಮಗನೂ ಚಂದ್ರಪ್ರಭೆಯಂತೆ ಹೊಳೆಯುವವನೂ ಆದ ಚಂದ್ರಾಂಗದನೆಂಬವನು ಸೀಮಂತಿನಿಗೆ ಯೋಗ್ಯ ವರನೆಂದು ಗೊತ್ತುಮಾಡಿ, ಸಕಲ ಪರಿವಾರದೊಡನೆ ಲಗ್ನಕ್ಕೆ ಬರಬೇಕೆಂದು ಇಂದ್ರಸೇನನಿಗೆ ಹೇಳಿ ಆ ನಿಬ್ಬಣದವರನ್ನು ಕರಕೊಂಡು ಊರಿಗೆ ಬಂದನು. ಚಿತ್ರವರ್ಮನು ವರನನ್ನು ನೋಡಿ ಸಂತೋಷದಿಂದ ಅವನಿಗೆ ಕನ್ಯೆಯನ್ನು ಕೊಡಲಿಕ್ಕೆ ಒಪ್ಪಿಕೊಂಡನು ‖ ೧೪೦ ‖ ಆಮೇಲೆ ಭೂಮಂಡಲದೊಳಗಿನ ಎಲ್ಲ ರಾಜರಿಗೆ ಲಗ್ನಕ್ಕೆ ಬರಬೇಕೆಂದು ಪತ್ರಗಳನ್ನು ಕಳಿಸಲು ಸಮಸ್ತ ರಾಜರೂ ಲಗ್ನಕ್ಕೆ ಬಂದರು. ಆಗ ನಾನಾಪರಿಯ ಮಹೋತ್ಸಾಹಗಳು ನಡೆದಿರಲು ಒಳ್ಳೇ ಸಮಾರಂಭದಿಂದ ಎಲ್ಲರಿಗೂ ಒಳ್ಳೇ ಕೌತುಕವಾಗುವಂತೆ ಲಗ್ನಕಾರ್ಯವಾಯಿತು. ‖ ೧೪೧ ‖ ಆಮೇಲೆ ಆ ಚಿತ್ರವರ್ಮ ರಾಜನು ವಧೂವರರಿಗೆ ನಾನಾ ದ್ರವ್ಯಾಲಂಕಾರಗಳನ್ನು ಕೊಟ್ಟನು ಮತ್ತು ಬ್ರಾಹ್ಮಣರಿಗೆ ಎಲ್ಲ ತರದ ದಾನಗಳನ್ನು ಕೊಟ್ಟದ್ದಲ್ಲದೆ ಲಗ್ನ ದಕ್ಷಿಣೆಯನ್ನು ಕೊಡಹತ್ತಿದನು. ‖ ೧೪೨ ‖ ಆಮೇಲೆ ರಾಜನು ಸಕಲ ಜನರಿಗೂ ಪಂಚಭಕ್ಷಪರಮಾನ್ನಗಳಿಂದ ಭೋಜನ ಮಾಡಿಸಿ ಸನ್ಮಾನಮಾಡಿ ಅಪ್ಪಣೆಕೊಟ್ಟು ಕಳಿಸಿದನು. ಅಳಿಯನಿಗೆ ಮಗಳ ಸ್ನೇಹವು ಬೆಳೆಯಲೆಂದು ಮಗಳ ಮೇಲಿನ ಪ್ರೀತಿಗಾಗಿ ಸಂಭ್ರಮದಿಂದ ಅಳಿಯನನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡನು. ‖ ೧೪೩ ‖ ಈ ಪ್ರಕಾರ ಆ ರಾಜಕುಮಾರನು ಮಾವನ ಮನೆಯಲ್ಲಿದ್ದು ತನ್ನ ಹೆಂಡತಿಯೊಡನೆ ಅತಿ ಪ್ರೀತಿ ಸ್ನೇಹಗಳಿಂದ ಕಾಲ ಕಳೆಯುತ್ತಿದ್ದನು. ಹೀಗಿರುವಾಗ ಆ ಚಿತ್ರಾಂಗದನು ಒಂದು ದಿವಸ ಜಲಕ್ರೀಡೆಯಾಡಬೇಕೆಂದು ಮನಸ್ಸು

ಮಾಡಿ ॥ ೧೪೪ ॥ ಯಾವತ್ತೂ ದಂಡಿನೊಡನೆ ವಿನೋದದಿಂದ ಹೊರಟು ಕಾಲಿಂದೀ ನದಿಗೆ ಹೋದನು. ॥ ೧೪೫ ॥ ಜಲಕ್ರೀಡೆಯಾಡುವದಕ್ಕೆ ಅವನು ನದಿಯೊಳಗೆ ಈಸುಬಿದ್ದನು ಕೂಡಲೆ ಅವನ ಸಂಗಡಿದ್ದ ಯಾವತ್ತೂ ಜನರು ತಾವೂ ಈಸುಬಿದ್ದರು ಈಪ್ರಕಾರ ಎಲ್ಲರೂ ವಿನೋದದಿಂದಲೂ ಹರ್ಷದಿಂದಲೂ ಜಲಕ್ರೀಡೆಯಾಡುತ್ತಿದ್ದರು. ॥ ೧೪೬ ॥ ಈಪ್ರಕಾರ ಕೆಲವು ವೇಳೆ ನಡೆದಿರಲು ರಾಜಪುತ್ರನಾದ ಚಿತ್ರಾಂಗದನು ಒಮ್ಮಿಂದೊಮ್ಮೆ ಮಧ್ಯ ನೀರೊಳಗೆ ಮುಳುಗಿದನು ಆಗ ಅಲ್ಲಿದ್ದವರೆಲ್ಲರೂ ದುಃಖವನ್ನು ಹೊಂದಿ— ಹಾ! ರಾಜಪುತ್ರನು ಮುಳುಗಿದನು! ರಾಜಪುತ್ರನು ಮುಳುಗಿದನು! ತೀವ್ರವಾಗಿ ಮೇಲೆ ತೆಗೆಯಿರಿ, ಮೇಲೆ ತೆಗೆಯಿರಿ ಎಂದು ಒದರಾಡುತ್ತ ಗಡಿಬಿಡಿಯನ್ನು ನಡಿಸಿದರು. ॥ ೧೪೭ ॥ ಆಗ ಆ ರಾಜಪುತ್ರನ ಸಂಗಡ ಇದ್ದ ಜನರೂ ಮತ್ತು ಒಳ್ಳೇ ಜಾಣರಾದ ನಾವಾಡಿಗರೂ ಆ ನೀರಿನಲ್ಲಿ ಹುಡುಕಿದರು ಆದರೆ ಅವನು ಎಲ್ಲಿ ಮುಳುಗಿದನೆಂಬದು ಯಾರಿಗೂ ಕಾಣಿಸಲಿಲ್ಲ. ॥ ೧೪೮ ॥ ಆಗ ನದಿಯ ಎರಡೂ ದಂಡೆಗಳಲ್ಲಿರುವ ಸೈನ್ಯದೊಳಗಿಂದ ಕೆಲವು ಜನರು ಓಡುತ್ತ ಚಿತ್ರವರ್ಮ ರಾಜನ ಮನೆಗೆ ಹೋಗಿ— ಮಹಾರಾಜ ನಾವೆಲ್ಲರೂ ತಮ್ಮ ಅಳಿಯನ ಸಮೀಪದಲ್ಲಿಯೇ ಇದ್ದು ಕಾಲಿಂದೀ ನದಿಯಲ್ಲಿ ಜಲಕ್ರೀಡೆಯಾಡುತ್ತಿರಲು ರಾಜಪುತ್ರನು ಒಮ್ಮಿಂದೊಮ್ಮೆ ಮಡುವಿನಲ್ಲಿ ಮುಳುಗಿ ಕೂಡಲೆ ಯಾರಿಗೂ ಕಾಣದಂತಾದನು. ನಾವೂ ಮತ್ತು ನಾವಾಡಿಗರೂ ಎಷ್ಟು ಹುಡುಕಿದರೂ ಸಿಗಲೊಲ್ಲನು ಎಂದು ಸಂಪೂರ್ಣ ಸಂಗತಿಯನ್ನು ಹೇಳಿದರು. ॥ ೧೪೯–೧೫೦ ॥ ಆಮಾತು ಕೇಳಿದ ಕೂಡಲೆ ರಾಜನು ದುಃಖದಿಂದ ಭೂಮಿಯಮೇಲೆ ಬಿದ್ದು ಮೂರ್ಛೆಹೊಂದಿದನು ಇತ್ತ ಸೀಮಂತಿನಿಯು ಪತಿಯ ಮರಣವಾರ್ತೆಯನ್ನು ಕೇಳಿ ತಾನೂ ಪ್ರಾಣಬಿಡಬೇಕೆಂದು ಯೋಚಿಸಿ ಕೂಡಲೆ ನದಿಯ ಕಡೆಗೆ ಹೋಗುತ್ತಿದ್ದಳು. ॥ ೧೫೧ ॥ ಆಗ ರಾಜನು ಓಡುತ್ತ ಹೋಗಿ ಮಗಳನ್ನು ಸಮಾಧಾನಪಡಿಸುತ್ತಿದ್ದನು. ಅವಳ ಅತಿಶಯವಾದ ಕಷ್ಟವನ್ನು ನೋಡಿ ರಾಜ ಸ್ತ್ರೀಯರೆಲ್ಲರೂ ಶೋಕಮಾಡಹತ್ತಿದರು. ॥ ೧೫೨ ॥ ಸೀಮಂತಿನಿಯು ಅತಿಶಯ ಶೋಕಮಾಡುತ್ತ ದೇವಾ, ತ್ರಿಪುರಾಂತಕನೇ, ನಾನು ನಿನ್ನನ್ನು ಮರೆಹೊಕ್ಕಿರಲು ನನ್ನ ಪತಿಗೆ ಮರಣವು ಹ್ಯಾಗೆ ಬಂತು?

ನನಗೂ ಯಾಕೆ ಮರಣ ಬರಲಿಲ್ಲ ? || ೧೫೩ || ನನ್ನ ೧೪ನೇ ವಯಸ್ಸಿನಲ್ಲಿ ನನಗೆ ವೈಧವ್ಯವು ಬಂದೀತೆಂದೇ ತಿಳಿದು ನಾನು ನಿನ್ನ ಚರಣವನ್ನು ನಂಬಿ, ಸೋಮವಾರ ವ್ರತವನ್ನು ಹಿಡಿದು ಇವತ್ತಿನವರೆಗೆ ಬಿಟ್ಟೂಬಿಡದೆ ನಿನ್ನನ್ನು ಪೂಜಿಸುತ್ತ ಬಂದಿರುವೆನು. ಈಗ ಆ ವ್ರತಾಚರಣೆಗಳೆಲ್ಲಾ ವ್ಯರ್ಥವಾಗಿ ಹೋದವೇ ? || ೧೫೪ || ಸಕಲರಿಗೂ ಇಷ್ಟಾರ್ಥಗಳನ್ನು ಕೊಡುವ ನೀಲಕಂಠನಾದ ಶಂಕರನೇ, ನೀನು ನನ್ನನ್ನೇಕೆ ಉಪೇಕ್ಷಿಸಿದಿ ? ದೇವಾ, ನೀನು ನಿನ್ನ ಮರೆಹೊಕ್ಕವರನ್ನು ರಕ್ಷಿಸುತ್ತಿ ಎಂಬ ಬಿರುದಿಗೆ ಈಗ ಕೇವಲ ಅಪಕೀರ್ತಿಯುಂಟಾಗುವದಲ್ಲಾ ? || ೧೫೫ || ಹೀಗೆಂದು ಗುರುಸ್ಮರಣೆಮಾಡಿ ಹೇ ಗುರುವೇ ನಿನ್ನ ಮಾತಿನಂತೆ ಉಮಾಮಹೇಶ್ವರರ ಪೂಜೆಯನ್ನು ಮಾಡಿದ್ದು ವ್ಯರ್ಥವಾಗುತ್ತಿರುವದು. ಶೀಘ್ರವಾಗಿ ಪರಮೇಶ್ವರಿ ನನ್ನ ಸೌಭಾಗ್ಯವು ಸ್ಥಿರವಾಗಿರುವದಕ್ಕಾಗಿ ನೀವಾದರೂ ವಿನಂತೀಮಾಡಿಕೊಳ್ಳಿರಿ. ಎಂದು ತನ್ನ || ೧೫೬ || ಗುರುವಾದ ಮೈತ್ರೇಯಿಯನ್ನು ಸ್ಮರಿಸುತ್ತ ಮತ್ತು ಪ್ರಲಾಪಿಸುತ್ತಾ || ೧೫೭ || ಏನುಮಾಡಲಿ ? ಎಂದು ದುಃಖಿಸುತ್ತಿದ್ದಳು. ಈಪ್ರಕಾರ ಅವಳು ದುಃಖಿಸುತ್ತ ಅಳುತ್ತ— ನಾನೂ ಗಂಗಾಪ್ರವೇಶ ಮಾಡುವೆನೆಂದು ಒಳ್ಳೇ ವೇಗದಿಂದ ನದಿಗೆ ಹೊರಟಳು. || ೧೫೮ || ಅದನ್ನು ಕಂಡು ಅವಳ ತಂದೆಯು ಓಡುತ್ತಹೋಗಿ ಆಕೆಯನ್ನು ಹಿಡಿದು ಅಪ್ಪಿಕೊಂಡು ಅತಿಶಯವಾಗಿ ದುಃಖಿಸಿದನು || ೧೫೯ || ಅದರಂತೆ ಯಾವತ್ತು ಮಂತ್ರಿಗಳೂ ಪುರೋಹಿತರೂ ಸೈನಿಕರೂ ದುಃಖಿಸಿ, ನಾವಿಕರನ್ನು ಕರೆಯಿಸಿ— ತೀವ್ರವಾಗಿ ಇನ್ನೊಮ್ಮೆ ನೀರಿನಲ್ಲಿ ಹುಡುಕಿ ನೋಡಿರಿ ಎಂದು ಹೇಳಿದರು. || ೧೬೦ || ಆಗ ಅವರು ಆ ನದಿಯಲ್ಲಿ ಎಲ್ಲ ಕಡೆಗೂ ಎಷ್ಟು ಹುಡುಕಿದರೂ ಅವನು ಸಿಗಲಿಲ್ಲ. ಅದನ್ನು ತಿಳಿದು ಸೀಮಂತಿನಿಯು— ಅಯ್ಯೋ ! ನನಗೆ ಇನ್ನೇನು ಗತಿ ! ಎಂದು ದುಃಖಿಸುತ್ತಿದ್ದಳು. ರಾಜನು ಅವಳನ್ನು ಸಮಾಧಾನಮಾಡುತ್ತಿದ್ದನು. || ೧೬೧ || ಅತ್ತ ಆ ರಾಜಕುಮಾರನ ಸೇವಕರು ಬಹು ದುಃಖಿಸುತ್ತ ತಮ್ಮ ಊರಿಗೆ ಹೋಗಿ ಇಂದ್ರಸೇನ ರಾಜನಿಗೆ ಅವನ ಮಗನ ಮರಣ ವಾರ್ತೆಯನ್ನು ತಿಳಿಸಿದರು. || ೧೬೨ || ಆ ಸಂಗತಿಯನ್ನು ಕೇಳಿ ಇಂದ್ರಸೇನನು ಭಯಂಕರ ದುಃಖಮಾಡಿ ತನ್ನ ಹೆಂಡತಿಯೊಡನೆ ತೀವ್ರವಾಗಿ ಹೊರಟು,

ಮಗನು ಮೃತವಾದಂಥ ಸ್ಥಳಕ್ಕೆ ಬಂದನು. || ೧೬೩ || ಆಗ ಇಬ್ಬರೂ ರಾಜರು ಕೂಡಿ ಅತಿಯಾಗಿ ದುಃಖಿಸಿದರು. ಆಮೇಲೆ ಇಂದ್ರಸೇನನು ಮಗನನ್ನು ನೆನಿಸಿ ನೆನಿಸಿ— ಹಾ! ಹಾ! ಅಯ್ಯೋ! ಮಗನೇ ಚಿತ್ರಾಂಗದಾ! ಎಂದು ಅಳುತ್ತ ತಲೆಯನ್ನೂ ಎದೆಯನ್ನೂ ಬಡಿದುಕೊಳ್ಳುತ್ತ || ೧೬೪ || ಮತ್ತೆ— ಹಾ! ಹಾ! ಪುತ್ರಾ, ಅಪ್ಪಾ! ನೀರೊಳಗೆ ಮುಳುಗಿ ಎಷ್ಟು ಕಷ್ಟಪಟ್ಟೆಯೋ! ಎಂದು ದುಃಖಿಸುತ್ತ ಭೂಮಿಯಮೇಲೆ ಬಿದ್ದು ಗಡಗಡ ಉರುಳಾಡುತ್ತಿದ್ದನು. ಆಗ ಮಂತ್ರಿಗಳು ರಾಜಮನೆತನದವರು, ಪಟ್ಟಣದ ಯಾವತ್ತು ಜನರು ಬಹಳ ಶೋಕ ಮಾಡುತ್ತಿದ್ದರು. || ೧೬೫ || ಇತ್ತ ಸೀಮಂತಿನಿಯು— ಅಯ್ಯೋ! ನನ್ನ ಪತಿಯು ಎಲ್ಲಿ ಹೋದನು! ಎಂದು ಆಕ್ರೋಶಮಾಡುತ್ತಿದ್ದಳು. ಅದನ್ನು ಕಂಡು ಆಕೆಯ ತಂದೆತಾಯಿಗಳೂ ಅತ್ತೆಮಾವಂದಿರೂ ಬಹಳ ಚಿಂತೆ ಮಾಡಹತ್ತಿದರು. || ೧೬೬ || ಮತ್ತೆ ಸೀಮಂತಿನಿಯು— ಅಯ್ಯೋ! ನನ್ನ ಪತಿಯು ನೀರಲ್ಲಿ ಎಲ್ಲಿ ಮುಳುಗಿದನು? ಎಂದು ಕೈಯಿಂದ ಹಣೆ-ಹಣೆ ಘಟ್ಟಿಸಿಕೊಳ್ಳುತ್ತ, ನೆಲದಮೇಲೆ ಬಿದ್ದು ಹೊರಳಾಡುತ್ತ ಅಳುತ್ತಿದ್ದಳು. ಆಕೆಯ ದುಃಖಕ್ಕೆ ಪಾರಾವಾರವಿಲ್ಲದಂತಾಯಿತು. || ೧೬೭ || ಆಗ ಆಕೆಯು ತಂದೆಯನ್ನು ಕುರಿತು— ಅಪ್ಪಾ ನನ್ನ ಪತಿಯು ಹೋದಮೇಲೆ, ಈ ಸಂಸಾರದಲ್ಲಿ ನಾನು ಬದುಕಿದ್ದು, ಈ ವೈಧವ್ಯವನ್ನು ಯಾರು ಅನುಭವಿಸಬೇಕು? ಆದ್ದರಿಂದ ನಾನು ಪತಿಯೊಡನೆ ಪ್ರಾಣಬಿಡುವೆನು ಎಂದು ಅಂದಳು. || ೧೬೮ || ಆಗ ರಾಜನು ಈಗ ಸಹಗಮನ ಮಾಡಲಿಕ್ಕೆ ಬರುತ್ತದೆಯೋ ಹ್ಯಾಗೆ? ಎಂದು ಬ್ರಾಹ್ಮಣರನ್ನು ಕೇಳಿದನು. ಆಗ ಅವರು— ರಾಜಾ ಪ್ರೇತವು ಸಿಗದ ಹೊರತು ಸಹಗಮನ ಮಾಡಲಿಕ್ಕೆ ಬರುವದಿಲ್ಲ || ೧೬೯ || ನದಿಯಲ್ಲಿ ಪ್ರೇತವನ್ನು ಹುಡುಕಬೇಕು. ಪ್ರೇತವು ಸಿಕ್ಕಮೇಲೆ ಆ ಪ್ರೇತದ ಸಂಗಡ ನಿನ್ನ ಮಗಳನ್ನು ದಹನಮಾಡಬೇಕು. ಆವನು ನದಿಯಲ್ಲಿ ಮುಳುಗಿ ಕಾಣಲೊಲ್ಲನೆಂದಮೇಲೆ ಸಹಗಮನಮಾಡುವದು ಹ್ಯಾಗೆ? || ೧೭೦ || ಪ್ರೇತವು ಸಿಗುವವರೆಗೆ ಇವಳು ಹೀಗೆಯೇ ಇರಬೇಕು ಎಂದು ಹೇಳಿದರು. ಅವರ ಮಾತು ಕೇಳಿ ರಾಜನು ಅದರಂತೆ ತನ್ನ ಮಗಳಿಗೆ ಶಾಂತರೀತಿಯಿಂದ ಹೇಳಿ ಸಮಾಧಾನಮಾಡುತ್ತಿದ್ದನು. || ೧೭೧ || ಈಪ್ರಕಾರ ಸೀಮಂತಿನಿಯೂ

ಆ ಇಬ್ಬರು ರಾಜರೂ ರಾಜಮನೆತನದವರೂ ದುಃಖಿಸುತ್ತಿರಲು ಮಂತ್ರಿಗಳೂ ಪುರೋಹಿತರೂ ಮೊದಲಾದವರು ಅವರನ್ನು ಕುರಿತು— ಹೀಗೆ ಎಷ್ಟು ದುಃಖಮಾಡುತ್ತೀರಿ ? ದೈವದಲ್ಲಿ ಏನಾಗತಕ್ಕದ್ದಿರುವದೋ ಅದು ಬ್ರಹ್ಮಾದಿಗಳಿಗೂ ತಪ್ಪುವದಿಲ್ಲ || ೧೭೨ || ಹೀಗಿದ್ದು ಮನುಷ್ಯರಪಾಡೇನು ? ದೇವಸಂಕೇತದಂತೆ ಈಗ ಏನು ಆಗತಕ್ಕದ್ದು ಅದು ಆಯಿತು, ದುಃಖಿಸಿದರೆ ಉಪಯೋಗವೇನು ? ಎಂದು ಹೇಳಿ ಅವರನ್ನು ಸಮಾಧಾನಬಡಿಸಿ— ಇನ್ನು ಮನೆಗೆ ನಡೆಯಿರಿ ಎಂದರು. || ೧೭೩ || ಆಗ ಚಿತ್ರವರ್ಮನು ತನ್ನ ಮನೆಗೆ ಹೋದನು. ಇಂದ್ರಸೇನನು ಅತಿ ದುಃಖದಿಂದ ತನ್ನ ಊರಿಗೆ ಹೋಗಿ ಪುತ್ರಶೋಕವನ್ನು ಎಂದೂ ಮರೆಯದೆ || ೧೭೪ || ಮಗನ ಚಿಂತೆಯಿಂದ ದುಃಖಮಾಡುತ್ತ ರಾಜ್ಯಭೋಗದ ಪರಿವೆಯಿಲ್ಲದೆ ರಾಜ್ಯಕಾರಭಾರವನ್ನು ಸಹ ಬಿಟ್ಟುಬಿಟ್ಟನು. ಅದನ್ನು ಕಂಡು ಅವನ ದಾಯಾದಿಗಳು ವೈರತ್ವಮಾಡಿ ಕಪಟತನದಿಂದ ಅವನ ರಾಜ್ಯವನ್ನು ಅಪಹರಿಸಿ || ೧೭೫ || ಆ ಇಂದ್ರಸೇನದಂಪತಿಗಳನ್ನು ಕಾರಾಗೃಹದಲ್ಲಿಟ್ಟರು || ೧೭೬ || ಇತ್ತ ಚಿತ್ರವರ್ಮನು ಮಗಳ ಮೇಲಿನ ಮಮತ್ವದಿಂದ ತಾನೂ ಪ್ರಾಣಬಿಡಬೇಕೆಂದುಮಾಡಿ ಜನರ ನಿಂದೆಗೆ ಹೆದರಿ ಸುಮ್ಮನಾಗಿ || ೧೭೭ || ಮಗಳನ್ನು ಕುರಿತು— ಮಗಳೇ, ನಮ್ಮ ವಂಶದಲ್ಲಿ ಗಂಡುಮಕ್ಕಳಿಲ್ಲ. ನಮಗೆ ನೀನೊಬ್ಬಳೇ ಮಗಳು. ನಿನ್ನನ್ನು ನಾನು ಮಗನಂತೆ ರಕ್ಷಿಸುವೆನು. || ೧೭೮ || ಈಗ ನಿನಗೆ ವೈಧವ್ಯವು ಬಂತೆಂದು ತಿಳಿಯಬೇಡ. ಶವವು ಸಿಕ್ಕಿರುವದಿಲ್ಲ ನಿನ್ನ ಪತಿಯು ತೇಲುತ್ತ ತೇಲುತ್ತ ಎಲ್ಲಿಯಾದರೂ ಎದ್ದು ಬದುಕಿ ಯಾಕೆ ಬರಬಾರದು ? ಮುಂದಾಗುವದನ್ನು ಯಾರು ತಿಳಿಯುವರು ? ಜೋಯಿಸರು ಹತ್ತುಸಾವಿರ ವರುಷ ಪತಿಯೊಡನೆ ರಾಜ್ಯಸುಖವನ್ನು ಅನುಭವಿಸುವಳೆಂದು ಹೇಳಿದ ಮಾತು ಸುಳ್ಳಾದೀತೇ ? ಅದು ಹ್ಯಾಗಾದರೂ ಇರಲಿ, ನೀನು ಒಂದು ವರುಷದತನಕ ಹೀಗೆಯೇ ಇದ್ದು, ಆಮೇಲೆ ನಿನಗೆ ತಿಳಿದಂತೆ ನಡೆಯುವಿಯಂತೆ ಇಲ್ಲದಿದ್ದರೆ ಜನರು ನನ್ನನ್ನು ನಿಂದಿಸುವರು ಎಂದನು. | ೧೭೯ || ಈ ಪ್ರಕಾರವಾದ ತಂದೆಯ ಮಾತು ಕೇಳಿ ಸೀಮಂತಿನಿಯು ಅತಿಯಾಗಿ ಚಿಂತಿಸಿ— ದೇವಾ, ಶೂಲಪಾಣಿಯೇ, ಉಪವಾಸದಿಂದಿದ್ದು ಸೋಮವಾರ ವ್ರತವನ್ನು ಹಿಡಿದು ಪ್ರದೋಷಕಾಲದಲ್ಲಿ ನಿನ್ನನ್ನು ಮನೋಹರವಾಗಿ

ವಿಧಿಪ್ರಕಾರ ಪೂಜಿಸಿ ನಕ್ತಭೋಜನ ಮಾಡಿದಂಥ ನನಗೆ ಎಂಥ ದುಃಖ ಕೊಟ್ಟೆಯಲ್ಲಾ ? ॥ ೧೮೦ ॥ ಎಂದು ಮನಸಿನಲ್ಲಿ ಅಂದು ಮತ್ತೆ ಬಿಡದೆ ಉಪವಾಸದಿಂದಿದ್ದು, ನಿಷ್ಠೆಯಿಂದ ಸೋಮವಾರ ವ್ರತವನ್ನು ಮಾಡುತ್ತ ಒಳ್ಳೇ ಭಕ್ತಿಯಿಂದ ಈಶ್ವರನನ್ನು ಪೂಜಿಸುತ್ತಿದ್ದಳು. ॥ ೧೮೧ ॥ ಸೂತನು ಅನ್ನುತ್ತಾನೆ-- ಎಲೈ ಋಷಿಗಳಿರಾ ಮುಂದೆ ಕೇಳಿರಿ, ಅತ್ತ ಆ ರಾಜಕುಮಾರನು ನದಿಯ ಪ್ರವಾಹದಲ್ಲಿ ಮುಳುಗಿ ವಾಸುಕಿಯು ರಾಜ್ಯವಾಳುತ್ತಿದ್ದಂಥ ಪಾತಾಳಕ್ಕೆ ಹೋದನು. ॥ ೧೮೨ ॥ ಹ್ಯಾಗಂದರೆ, ಚಿತ್ರಾಂಗದನು ನೀರಿನಲ್ಲಿ ಮುಳುಗುವ ಸಮಯದಲ್ಲಿ, ಆ ನಾಗಲೋಕದ ಸ್ತ್ರೀಯರು ಆಕಾಲಿಂದೀ ನದಿಯ ತೀರಕ್ಕೆ ಬಂದಿದ್ದರು. ಆಗ ಆ ರಾಜಕುಮಾರನು ನೆಳವಿನ ಗುಂಟ ಬಂದು ನಾಗಸ್ತ್ರೀಯರು ನಿಂತ ದಂಡೆಯ ಹತ್ತರ ತೇಲಿಬರುತ್ತಿದ್ದನು ॥ ೧೮೩ ॥ ಅದನ್ನು ಕಂಡು ಆ ನಾಗಸ್ತ್ರೀಯರು ಅಂತಃಕರುಣದಿಂದ ಅವನನ್ನು ಹೊರಗೆ ತೆಗೆದುಕೊಂಡು ಬಂದು ಅಮೃತವನ್ನು ತಂದು ಅವನ ಮೇಲೆ ಸಿಂಪಡಿಸಿ ಅವನನ್ನು ಎಚ್ಚರಿಸಿದರು. ॥ ೧೮೪ ॥ ಆಮೇಲೆ ಆ ನಾಗಕನ್ಯೆಯರೆಲ್ಲರೂ ಕೂಡಿ ಅವನನ್ನು ತಮ್ಮಸಂಗಡ ಕರಕೊಂಡು ಹೋಗಿ ತಮ್ಮ ರಾಜನಾದ ತಕ್ಷಕನ ಹತ್ತರ ಬಿಟ್ಟರು. ಆಗ ಆ ರಾಜಪುತ್ರನು ವಿಚಿತ್ರವಾದ ಆ ಭೋಗವತಿ ಪಟ್ಟಣವನ್ನು ನೋಡಹತ್ತಿದನು. ॥ ೧೮೫ ॥ ಈ ಪ್ರಕಾರ ಅವನು ಆ ಪಾತಾಳ ನಗರದ ರಚನೆಯನ್ನು ನೋಡುತ್ತಿರಲು ಅದು ಇಂದ್ರಭವನದಂತೆ ಶೋಭಿಸುವದಾಗಿಯೂ ವಿದ್ಯುಲ್ಲತೆಯಂತೆ ಹೊಳೆಯುವ ರತ್ನಖಚಿತವಾದ ಗೋಪುರಗಳುಳ್ಳದ್ದಾಗಿಯೂ ॥ ೧೮೬ ॥ ಇಂದ್ರ ನೀಲ, ವೈಡೂರ್ಯ, ಮಾಣಿಕ, ಮುತ್ತುಗಳಿಂದ ಅಲಂಕೃತವಾಗಿಯೂ ಸೂರ್ಯಕಾಂತಿಯಂತೆ ಹೊಳೆಯುತ್ತಿತ್ತು. ॥ ೧೮೭ ॥ ಅಲ್ಲಿಯ ಭೂಮಿಯು ಚಂದ್ರಕಾಂತಿಯಂತೆ ಹೊಳೆಯುತ್ತಲೂ ಅಲ್ಲಿಯ ಮಹಾದ್ವಾರದ ಬಾಗಿಲುಗಳು ಹೇಮಮಯವಾಗಿ ರತ್ನಖಚಿತವಾಗಿದ್ದವು. ಅದಕ್ಕೆ ಸರಿಯಾದ ಮಂದಿರವು ಬೇರೆ ಯಾವದೂ ಇದ್ದಿಲ್ಲ. ಅಂಥ ಮಂದಿರವನ್ನು ಆ ರಾಜಪುತ್ರನು ಪ್ರವೇಶಿಸಿದನು. ॥ ೧೮೮ ॥ ಆಮೇಲೆ ಅವನು ಮುಂದಿರುವ ಅಲ್ಲಿಯ ಸಭೆಯನ್ನು ನೋಡಿದನು. ಅದು ಭವ್ಯವಾಗಿತ್ತು. ಅಲ್ಲಿಯ ಸಭಿಕರೆಲ್ಲರೂ ಸರ್ಪಾಕಾರವಾಗಿದ್ದರು ಅದನ್ನು ಕಂಡು ಆ ರಾಜಪುತ್ರನಿಗೆ ಬಹಳ

ಆಶ್ಚರ್ಯವಾಯಿತು. ಮತ್ತು ಅಲ್ಲಿ ಅಸಂಖ್ಯ ಸರ್ಪಗಳು ಕಾಣಿಸುತ್ತಿದ್ದವು. ॥ ೧೯ ॥ ಆ ಸಭಾಮಧ್ಯದಲ್ಲಿ ನಾಗರಾಜನಾದ ತಕ್ಷಕನು ಅತಿ ಎತ್ತರ ಹಾಗು ಶೋಭಾಯಮಾನವಾದ ಸಿಂಹಾಸನದ ಮಧ್ಯದಲ್ಲಿ ಸೂರ್ಯಕಾಂತಿಯಂತೆ ಹೊಳೆಯುತ್ತ ॥ ೨೦ ॥ ಮಿಂಚಿನಂತೆ ಲಖಲಖಿತವಾಗಿ ಹೊಳೆಯುವ ಸಾವಿರಾರು ಹೆಡೆಗಳುಳ್ಳವನಾಗಿ, ಆ ಸಾವಿರ ಹೆಡೆಗಳಲ್ಲಿ ರತ್ನಖಚಿತವಾದ ಒಂದು ಸಾವಿರ ಕಿರೀಟಗಳನ್ನು ಧರಿಸಿ, ಪ್ರಕಾಶಮಾನವಾದ ಪೀತಾಂಬರಧಾರಿಯಾಗಿ, ಕಿವಿಗಳಲ್ಲಿ ರತ್ನದ ಕುಂಡಲಗಳನ್ನು ಧರಿಸಿ, ಶ್ರೇಷ್ಠನಾದ ಸಭಾಸ್ಥಾನದಲ್ಲಿ ಕೂತಿದ್ದನು. ॥ ೨೧-೨೨ ॥ ಒಳ್ಳೇ ತರುಣಿಯರೂ ಅತಿ ಸುಂದರಿಯರೂ ಆದ ಅನೇಕ ಸಹಸ್ರ ನಾಗಕನ್ಯೆಯರು ನಾನಾಭರಣಗಳನ್ನು ಧರಿಸಿ ಬಂದು ಆ ತಕ್ಷಕರಾಜನನ್ನು ಸೇವಿಸುತ್ತಿದ್ದರು ॥ ೨೩ ॥ ಈ ಪ್ರಕಾರವಾದ ಸ್ಥಾನದಲ್ಲಿ ಕೂತಂಥ ತಕ್ಷಕ ಮಹಾರಾಜನನ್ನು ನೋಡಿ, ರಾಜಪುತ್ರನಾದ ಚಿತ್ರಾಂಗದನು ಅವನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೨೪ ॥ ಆಗ ತಕ್ಷಕನು ಆ ನಾಗಕನ್ಯೆಯರನ್ನು ಕುರಿತು— ಎಲೈ ಕನ್ಯೆಯರೇ, ನೀವು ಇಲ್ಲಿಗೆ ಯಾವ ರಾಜಕುಮಾರನನ್ನು ತಂದಿರಿ? ಇವನು ಒಳ್ಳೇ ಸುಲಕ್ಷಣನಾಗಿ ಕಾಣುತ್ತಾನೆ. ಇವನು ಎಲ್ಲಿ ಇದ್ದನು॥ ಇವನನ್ನು ಇಲ್ಲಿಗೇಕೆ ಕರಕೊಂಡು ಬಂದಿರಿ? ಎಂದು ಕೇಳಿದನು. ॥ ೨೫ ॥ ಆಗ ಆ ನಾಗಕನ್ಯೆಯರು— ಸ್ವಾಮೀ, ಇವನು ಯಾವ ವಂಶದವನು? ಇವನ ಹೆಸರು ಏನು? ಎಂಬದು ನಮಗೆ ಗೊತ್ತಿಲ್ಲ. ಇವನು ಯಮುನಾ ನದಿಯಲ್ಲಿ ತೇಲಿಹೋಗುತ್ತಿದ್ದನು. ಆದ್ದರಿಂದ ಇವನನ್ನು ಹಿಡಿದು ನಿಮ್ಮ ಹತ್ತರ ಕರಕೊಂಡು ಬಂದೆವು ಎಂದು ಹೇಳಿದರು. ॥ ೨೬ ॥ ಆಗ ಆ ನಾಗರಾಜನು ಆ ರಾಜಪುತ್ರನನ್ನು ಕುರಿತು— ಎಲೈ ಬಾಲಕಾ, ನೀನು ಯಾರು? ನಿನ್ನ ಹೆಸರೇನು? ನೀನು ಯಾವ ವಂಶದವನು? ಯಾವ ಕಾರಣದಿಂದ ಇಲ್ಲಿಗೆ ಬಂದೆ? ನಿನ್ನ ದೇಶವು ಯಾವದು? ಎಂದು ಕೇಳಿದನು. ॥ ೨೭ ॥ ಆಗ ಆ ರಾಜಪುತ್ರನು ಆ ತಕ್ಷಕ ರಾಜನಿಗೆ ಕೈಮುಗಿದು— ಸ್ವಾಮೀ, ಹೇಳುತ್ತೇನೆ ಕೇಳಿರಿ, ಭೂಮಂಡಲದಲ್ಲಿ ನಿಷಧ ದೇಶದ ಅರಸನೂ ಪುಣ್ಯಶ್ಲೋಕನೂ ಆದ ನಳಚಕ್ರವರ್ತಿಯು ನಮ್ಮ ಅಜ್ಜನು. ॥ ೨೮ ॥ ಆತನ ಮಗನಾದ ಈಗ

ರಾಜ್ಯವಾಳುತ್ತಿರುವಂಥ ಇಂದ್ರಸೇನನು ನಮ್ಮ ತಂದೆಯು. ಚಿತ್ರಾಂಗದನೆಂಬುವದು ನನ್ನ ಹೆಸರು. ನಾನು ನನ್ನ ಮಾವನಾದ ಚಿತ್ರವರ್ಮ ರಾಜನ ಮನೆಯಲ್ಲಿದ್ದೆನು. ‖ ೧೯೯ ‖ ನಿನ್ನೆಯ ದಿವಸ ಜಲಕ್ರೀಡೆಯಾಡುವದರ ದೆಶೆಯಿಂದ ಯಮುನಾ ನದಿಗೆ ಹೋಗಿ ಜಲಕ್ರೀಡೆಯಾಡುತ್ತಾಡುತ್ತ ವಿಧಿವಶದಿಂದ ನದಿಯಲ್ಲಿ ಮುಳುಗಿದೆನು. ‖ ೨೦೦ ‖ ಆಮೇಲೆ ನಾನು ಆ ನದಿಯ ನೆಳವಿನಗುಂಟ ತೇಲಿಹೋಗಹತ್ತಿದೆನು ಆಗ ಈ ನಾಗಕನ್ಯೆಯರು ನನ್ನನ್ನು ನೋಡಿ ನನ್ನ ಪೂರ್ವದ ಭಾಗ್ಯವಶದಿಂದ ನನ್ನನ್ನು ತಮ್ಮ ಹತ್ತರ ಕರಕೊಂಡು ಬಂದರು. ‖ ೨೦೧ ‖ ನನ್ನ ಪೂರ್ವಾರ್ಜಿತ ಪುಣ್ಯದಿಂದ ನನಗೆ ತಮ್ಮ ಚರಣದರ್ಶನವಾಯಿತು. ನನ್ನ ಜೀವನವು ಧನ್ಯವು! ನಾನು ಕೃತಾರ್ಥನಾದೆನು ಎಂದು ಅಂದನು ‖ ೨೦೨ ‖ ಅವನ ಕರುಣಾವಚನವನ್ನು ಕೇಳಿ ತಕ್ಷಕನು ಸಂತೋಷಬಟ್ಟು– ಎಲೈ ರಾಜಕುಮಾರನೇ, ನೀನು ಹೆದರಬೇಡ. ಎಂದು ಅವನಿಗೆ ಧೈರ್ಯವನ್ನು ಹೇಳಿ ‖ ೨೦೩ ‖ ಎಲೈ ಬಾಲಕನೇ, ನೀನು ನಿರ್ಮಲಚಿತ್ತನಾಗಿರುವೆ. ನೀವು ನಿಮ್ಮ ಮನೆಯಲ್ಲಿ ಸದಾ ಯಾವ ದೇವರನ್ನು ಪೂಜಿಸುವಿರಿ? ಎಂದು ಕೇಳಿದನು. ‖ ೨೦೪ ‖ ಈ ಪ್ರಕಾರವಾದ ತಕ್ಷಕನ ಮಾತು ಕೇಳಿ ಆ ರಾಜಪುತ್ರನು ಅತಿ ಹರ್ಷದಿಂದ ವಿಸ್ತಾರವಾಗಿ ಹೇಳಹತ್ತಿದನು — ಸ್ವಾಮೀ, ನಮಗೆ ಕೈಲಾಸಪತಿಯಾದ ಶ್ರೀಶಂಕರನೇ ದೇವರು ‖ ೨೦೫ ‖ ಯಾವತ್ತು ದೇವರ ದೇವನಾದಂಥ ಶ್ರೀ ಸದಾಶಿವನೂ, ಅಪೂರ್ವ ಶೋಭೆಯಿಂದ ಅವನ ವಾಮಾಂಕದಲ್ಲಿ ಕೂತಂಥ ಜಗನ್ಮಾತೆಯಾದ ಉಮಾದೇವಿಯೂ ನಮ್ಮ ಕುಲದೇವತೆಗಳು. ಅವರನ್ನೇ ನಾವು ನಿರಂತರ ಪೂಜಿಸುತ್ತಿರುವೆವು. ‖ ೨೦೬ ‖ ಸ್ವಾಮೀ, ಯಾವನಿಂದ ಬ್ರಹ್ಮನು ಹುಟ್ಟಿ, ಅನುಪಮವಾದ ಸೃಷ್ಟಿಯನ್ನು ರಚಿಸುವನೋ, ಆ ಸದಾಶಿವನು ನಿಶ್ಚಯವಾಗಿ ನಮ್ಮ ಮುಖ್ಯ ದೇವರು. ‖ ೨೦೭ ‖ ಯಾವನ ಸತ್ವಗುಣದಿಂದ ವಿಷ್ಣುವು ಹುಟ್ಟಿ ಸಕಲ ಲೋಕಗಳನ್ನು ಪ್ರತಿಪಾಲಿಸುವನೋ ಆ ಪಾರ್ವತೀ ಪತಿಯಾದ ಸದಾಶಿವನನ್ನೇ ನಾವು ಆರಾಧಿಸುವೆವು. ‖ ೨೦೮ ‖ ಯಾವನ ತಮೋಗುಣದಿಂದ ಏಕಾದಶ ರುದ್ರರು ಹುಟ್ಟಿ ಪ್ರಳಯಕಾರಿಗಳೆಂದು ಹೆಸರಾಗಿರುವರೋ ‖ ೨೦೯ ‖ ಯಾವನು ತಾನೇ ಧಾತಾ, ವಿಧಾತಾ ಆಗಿ ಸೃಷ್ಟಿ–ಸ್ಥಿತಿ–ಲಯಗಳಿಗೆ ಕಾರಣನಾಗಿರುವನೋ,

ಯಾವನು ತೇಜಸ್ಸಿಗೆ ತೇಜಸ್ವರೂಪನಾಗಿರುವನೋ ಅಂಥ ಈಶ್ವರನನ್ನು ನಾವು ಸದಾ ಪೂಜಿಸುವೆವು. ‖ ೨೧೦ ‖ ಯಾವನು ಪಂಚಭೂತಗಳಲ್ಲಿ ವ್ಯಾಪಿಸಿರುವನೋ ಅಂಥ ಶಿವನನ್ನು ನಾವು ದಿನಾಲು ಪೂಜಿಸುವೆವು. ‖ ೨೧೧ ‖ ಯಾವನು ಸರ್ವಭೂತಗಳಲ್ಲಿ ಸಂಪೂರ್ಣನಾಗಿಯೂ ಚಿನ್ಮಯನಾಗಿಯೂ ನಿರಂಜನನಾಗಿಯೂ ಅಚಿಂತನರೂಪ ವುಳ್ಳವನಾಗಿಯೂ ಇರುವನೋ ಆ ಈಶ್ವರನನ್ನು ಪೂಜಿಸುವೆವು. ‖ ೨೧೨ ‖ ಯಾವನ ಚರಿತ್ರೆಗಳು ವೇದ ಗಳಾಗಿರುವವೋ, ತಕ್ಷಕ ಮತ್ತು ಶೇಷರು ಯಾವನ ಕರ್ಣಕುಂಡಲಗಳಾಗಿರುವರೋ, ಯಾವನು ತ್ರಿನೇತ್ರನೋ ಯಾವನು ಚಂದ್ರಮೌಳಿಯೋ ಆ ಶ್ರೀ ಶಂಕರನನ್ನು ನಾವು ನಿತ್ಯ ಪೂಜಿಸುವೆವು ಎಂದು ಹೇಳಿದನು. ‖ ೨೧೩ ‖ ಈಪ್ರಕಾರ ಹೇಳಿದ ಆ ರಾಜಪುತ್ರನ ಮಾತು ಕೇಳಿ, ತಕ್ಷಕ ಮಹಾರಾಜನು ಬಹಳ ಸಂತೋಷಬಟ್ಟು ಅವನನ್ನು ಆಲಿಂಗಿಸಿ— ಎಲೈ ರಾಜಪುತ್ರಾ, ನೀನು ಮಾಡಿದ ಈಶ್ವರನ ಸ್ತುತಿಯನ್ನು ಕೇಳಿ ನಾನು ಅತ್ಯಂತ ಹರ್ಷಬಟ್ಟು ಸಂತೋಷಹೊಂದಿದೆನು. ‖ ೨೧೪ ‖ ಎಲೈ ರಾಜಪುತ್ರನೇ, ನಾನು ನಿನಗೆ ಇಲ್ಲಿಯೇ ಎಲ್ಲ ರಾಜ್ಯವನ್ನು ಕೊಡು ವೆನು. ನೀನು ಆನಂದದಿಂದ ಬೇಕಾದಷ್ಟು ಭಾಗ್ಯವನ್ನು ಭೋಗಿಸುತ್ತ ಈ ಪಾತಾಳದಲ್ಲಿಯೇ ಇರು. ‖ ೨೧೫ ‖ ನಿನಗೆ ನನ್ನ ಲೋಕದಲ್ಲಿರುವ ನಾನಾತರದ ರತ್ನಗಳನ್ನು ಕೊಡುವೆನು. ಅವುಗಳನ್ನು ನೋಡಿ ಸಮಾಧಾನ ಹೊಂದಿ ಇಲ್ಲಿಯೇ ಸುಖದಿಂದಿರು. ‖ ೨೧೬ ‖ ನೀನು ಅನುಪಮವಾದ ನಮ್ಮ ಪಾತಾಳದ ರಚನೆಯನ್ನು ನೋಡು. ನಮ್ಮ ನಗರದಲ್ಲಿ ಮನೋಹರವಾದ ಕಲ್ಪವೃಕ್ಷಗಳಿವೆ. ‖ ೨೧೭ ‖ ಭೂಲೋಕದವರ್ಯಾರೂ ಅಮೃತ ವನ್ನು ಸ್ವಪ್ನದಲ್ಲಿ ಸಹ ಎಂದೂ ಕಣ್ಣಿನಿಂದ ಕಾಣುವದು ಶಕ್ಯವಿಲ್ಲ. ಆದರೆ ನಮ್ಮ ದೇಶದಲ್ಲಿ ನೀರು ತುಂಬಿದಂತೆ ಅಮೃತ ತುಂಬಿದ ಕೆರೆ-ಬಾವಿಗಳು ಅವೆ. ಮತ್ತು ನಮ್ಮ ಮನೆಯಲ್ಲಿ ಅಮೃತ ತುಂಬಿದ ಪಾತ್ರೆಗಳು ಅವೆ. ‖ ೨೧೮ ‖ ಆ ಅಮೃತವನ್ನು ಕುಡಿಯುವದರಿಂದ ನಿನಗೆ ಇಲ್ಲಿ ಎಂದೂ ಮರಣ ಬರುವದಿಲ್ಲ ಮತ್ತು ಸ್ವಪ್ನದಲ್ಲಿ ಸಹ ರೋಗಾದಿ ಗಳ ಉಪದ್ರವವಾಗುವದಿಲ್ಲ. ಈಪ್ರಕಾರ ನಮ್ಮ ಪಟ್ಟಣವದೆ. ‖ ೨೧೯ ‖ ಆದ್ದರಿಂದ ನೀನು ಇಲ್ಲಿ ಸುಖದಿಂದ ಸ್ವಸ್ಥವಾಗಿರು ಎಂದು ಹೇಳಿದನು. ಅವನ ಮಾತು ಕೇಳಿ ಆ ರಾಜಪುತ್ರನು ಕರುಣಾವಚನದಿಂದ ವಿನಂತೀ

ಮಾಡಿಕೊಳ್ಳುತ್ತಾನೆ. ‖ ೨೦ ‖ ಏನಂದರೆ— ಪೂಜ್ಯನಾದ ನಾಗರಾಜನೇ ನನ್ನ ವಿನಂತಿಯನ್ನು ಕೇಳು. ನಮ್ಮ ವಂಶದಲ್ಲಿ ನಮ್ಮ ತಂದೆಗೆ ನಾನೊಬ್ಬನೇ ಮಗನು. ಹದಿನಾಲ್ಕು ವರುಷದ ನನ್ನ ಹೆಂಡತಿಯು ಯಾವಾಗಲೂ ಶಿವ ಪೂಜೆಯನ್ನು ಮಾಡುತ್ತಿರುವಳು. ‖ ೨೧ ‖ ಹೊಸದಾಗಿ ಮೊನ್ನೆ ಮೊನ್ನೆ ನನ್ನ ಲಗ್ನವಾಗಿದೆ ನನ್ನ ಮನಸ್ಸು ನನ್ನ ಪ್ರಿಯ ಹೆಂಡತಿಯಲ್ಲಿ ಸಿಕ್ಕುಬಿಟ್ಟದೆ. ಮತ್ತು ಈಗ ನನಗೆ ನನ್ನ ತಾಯಿ-ತಂದೆಗಳನ್ನು ನೋಡಬೇಕೆಂಬ ಅಪೇಕ್ಷೆ ಯುಂಟಾಗಿದೆ ಅವರನ್ನು ನೋಡಿದರೆ ನನಗೆ ಸಕಲೇಷ್ಟಗಳೂ ಉಂಟಾಗುವವು. ‖ ೨೨ ‖ ನಾನು ನದಿಯಲ್ಲಿ ಮುಳುಗಿ ಸತ್ತೆನೆಂದು ನನ್ನ ತಾಯಿ-ತಂದೆ, ಅತ್ತೆ-ಮಾವ ಮತ್ತು ಹೆಂಡತಿಯರು ಅತ್ಯಂತ ದುಃಖಬಡುತ್ತಿರಬಹುದು ನನ್ನ ಪತ್ನಿಯು ಜೀವವನ್ನು ಬಿಡುವದು ಸತ್ಯ, ಆದರಿಂದ ನನಗೆ ಸ್ತ್ರೀಹತ್ಯಾ ದೋಷವು ಬಂದೀತು. ‖ ೨೩ ‖ ತಮ್ಮ ಚರಣದರ್ಶನದಿಂದ ನಾನು ಬಹು ಧನ್ಯನಾದೆನು! ತಾವು ನನ್ನ ಪ್ರಾಣವನ್ನು ರಕ್ಷಿಸಿದಿರಿ. ನಾನು ತಮಗೆ ಬಹಳ ಋಣಿಯಾಗಿದ್ದೇನೆ. ಇನ್ನು ಮೇಲೆ ನನಗೆ ತೀವ್ರವಾಗಿ ನನ್ನ ತಾಯಿ-ತಂದೆಗಳ ದರುಶನವನ್ನು ಮಾಡಿಸಿರಿ ಇಷ್ಟೇ ನನ್ನ ಅಪೇಕ್ಷೆಯು ಅದೆ ಎಂದು ಅಂದನು. ‖ ೨೪ ‖ ಆ ರಾಜಪುತ್ರನ ಮಾತು ಕೇಳಿ ತಕ್ಷಕನು ಬಹಳ ಸಂತೋಷಬಟ್ಟು, ಅವನಿಗೆ ನಾನಾವಿಧವಾದ ರತ್ನಗಳನ್ನು ಕೊಟ್ಟು, ಬೇಕಾದಷ್ಟು ಅಮೃತವನ್ನು ಕುಡಿಸಿ, ಅವನ ಹೆಂಡತಿಯ ಸಲುವಾಗಿ ಸ್ವಲ್ಪ ಅಮೃತವನ್ನು ಕೊಟ್ಟನು. ‖ ೨೫ ‖ ಆಮೇಲೆ ಅವನಿಗೆ ಕಲ್ಪವೃಕ್ಷದ ಫಲ ಗಳನ್ನೂ, ನಾನಾವಿಧವಾದ ಅಪೂರ್ವ ವಸ್ತ್ರಾಭರಣಗಳನ್ನೂ ಮತ್ತು ಪೃಥ್ವಿಯಮೇಲೆ ಇರದಂಥ ಬೇರೆ ಅಪೂರ್ವ ವಾದ ಅನೇಕ ವಸ್ತುಗಳನ್ನು ಕೊಟ್ಟನು. ‖ ೨೬ ‖ ಆಮೇಲೆ ಅವನನ್ನು ಕುರಿತು— ಎಲೈ ರಾಜಪುತ್ರನೇ, ನೀನು ಯಾವ ಯಾವ ಕಾಲದಲ್ಲಿ ಯಾವ ಯಾವ ಕಾರ್ಯಕ್ಕಾಗಿ ನನ್ನನ್ನು ಸ್ಮರಿಸುತ್ತೀಯೋ, ಆ ನಿನ್ನ ಕಾರ್ಯ ಗಳೆಲ್ಲವೂ ಸಿದ್ಧಿಸುವವೆಂದು ತಿಳಿ ಎಂದು ಹೇಳಿ ‖ ೨೭ ‖ ಮತ್ತಿಷ್ಟು ಸಂತೋಷವನ್ನು ಹೊಂದಿ, ಮತ್ತೆ ಅನೇಕ ವಸ್ತುವಾಹನಗಳನ್ನು ಮನೋವೇಗವುಳ್ಳ ಒಂದು ಉತ್ತಮವಾದ ಕುದುರೆಯನ್ನೂ ಕೊಟ್ಟು, ಅವನ ಸಂಗಡ ತನ್ನ ಒಬ್ಬ ಮಗನನ್ನೂ ಕೊಟ್ಟನು. ‖ ೨೮ ‖ ಈಪ್ರಕಾರ ಆ ತಕ್ಷಕ ಮಹಾರಾಜನು ರಾಜಪುತ್ರನಾದ

ಚಂದ್ರಾಂಗದನಿಗೆ ಆನಂದದಿಂದ ಇಷ್ಟೆಲ್ಲವನ್ನು ಕೊಟ್ಟು, ಆ ಮನೋಹರವಾದ ಕುದುರೆಯೊಡನೆ ತನ್ನ ಊರಿಗೆ ಹೋಗಲಿಕ್ಕೆ ಅವನಿಗೆ ಅಪ್ಪಣೆಯನ್ನು ಕೊಟ್ಟನು. ॥ ೨೯ ॥ ಆಗ ಆ ರಾಜಪುತ್ರನು ಆ ತಕ್ಷಕನಿಗೆ ವಂದಿಸಿ, ತೀವ್ರವಾಗಿ ಆ ಕುದುರೆಯನ್ನು ಹತ್ತಿ, ತಕ್ಷಕನು ಕೊಟ್ಟ ಯಾವತ್ತೂ ವಸ್ತು-ಒಡವೆಗಳನ್ನು ತಕ್ಕೊಂಡು ಸಂಗಡ ಆ ನಾಗಕುಮಾರನನ್ನು ಕರಕೊಂಡು ಮನೋವೇಗದಿಂದ ಮಾರ್ಗಕ್ರಮಣಮಾಡುತ್ತ ॥ ೩೦ ॥ ಅರಕ್ಷಣದಲ್ಲಿ ತಾನು ಮೊದಲು ಮುಳುಗಿದಲ್ಲಿಗೆ ಬಂದು, ಆ ಕುದುರೆ ಹಾಗು ತಕ್ಷಕಕುಮಾರನ ಸಹಿತವಾಗಿ ನಿರೊಳಗಿಂದ ಮೇಲಕ್ಕೆದ್ದು ನದಿಯ ದಂಡೆಯಮೇಲೆ ಬಂದು ನಿಂತನು. ॥ ೩೧ ॥ ಆದಿನ ಸೋಮವಾರವಾದ್ದರಿಂದ ಸೀಮಂತಿನಿಯು ತನ್ನ ಸೇವಕಿ ಸಖಿಯರೊಡನೆ ಸ್ನಾನಕ್ಕೆ ಬಂದು ನದಿಯ ದಂಡೆಯಮೇಲೆ ನಿಂತಿದ್ದಳು. ॥ ೩೨ ॥ ಆಗ ಅವಳು ಆ ರಾಜಪುತ್ರನನ್ನು ಆ ನಾಗಕುಮಾರನನ್ನು ಕಂಡು ಸಖಿಯರನ್ನು ಕರೆದು— ಸಖಿಯರೇ, ನದಿಯೊಳಗಿಂದ ಒಬ್ಬ ನಾಗಕುಮಾರನ ಸಹಿತವಾಗಿ ಯಾರೋ ಒಬ್ಬರು ಬಂದರು ನೋಡಿರಿ. ಅವನನ್ನು ನೋಡಿ ಈಗ ನನ್ನ ಮನಸ್ಸಿನಲ್ಲಿ ಒಂದು ಆಶ್ಚರ್ಯವು ತೋರುತ್ತದೆ. ॥ ೩೩ ॥ ಯಾವನೋ ಒಬ್ಬ ರಾಕ್ಷಸನು ತನ್ನ ವೇಷವನ್ನು ಬದಲಿಸಿ, ಈರೀತಿಯಿಂದ ಮನುಷ್ಯರೂಪವನ್ನು ಧರಿಸಿ ಬಂದಂತೆ ಕಾಣುತ್ತದೆ. ಮತ್ತು ಅವನು ಅಶ್ವಾರೂಢನಾಗಿ ಅತಿ ಮನೋಹರನಾಗಿ ಕಾಣಿಸುತ್ತಾನೆ. ॥ ೩೪ ॥ ಅವನ ರೂಪವು ಹ್ಯಾಗೆ ಅದೆ ನೋಡಿರಿ! ಇವನು ಸೂರ್ಯನಂತೆ ಪ್ರಕಾಶಿಸುತ್ತ, ದಿವ್ಯ ವಸ್ತ್ರಾಭರಣಗಳನ್ನು ಧರಿಸಿ, ಸುಗಂಧಯುಕ್ತವಾದ ದಿವ್ಯ ಪುಷ್ಪಮಾಲಿಕೆಗಳನ್ನು ಧರಿಸಿರುವನು. ॥ ೩೫ ॥ ಅವನು ಧರಿಸಿದ ಸುಗಂಧದ್ರವ್ಯಗಳ ವಾಸನೆಯು ಹತ್ತು ಗಾವುದಗಳ ವರೆಗೆ ಹಬ್ಬುತ್ತಿರುವದು. ಇಂಥ ರೂಪವಂತನನ್ನು ಈ ಮೊದಲು ಎಲ್ಲಿಯೋ ನೋಡಿದಂತೆ ನನಗೆ ಭಾಸವಾಗುತ್ತದೆ. ॥ ೩೬ ॥ ಎಂದು ಸೀಮಂತಿನಿಯು ಭಯಭೀತಳಾಗಿ, ನಿಂತು ನಿಂತು ಅವನ ರೂಪವನ್ನು ದಿಟ್ಟಿಸಿ ನೋಡಿ, ತನ್ನ ಪತಿಯ ರೂಪದಂತೆ ಕಾಣುತ್ತಾನೆಂದು ಮನಸ್ಸಿನಲ್ಲಿ ತನ್ನ ಪತಿಯ ರೂಪವನ್ನು ಧ್ಯಾನಿಸುತ್ತಿದ್ದಳು. ॥ ೩೭ ॥ ಆಗ ಆ ರಾಜಪುತ್ರನು ಆಕೆಯನ್ನು ನೋಡಿ ಮನಸ್ಸಿನಲ್ಲಿ— ಈಕೆಯು ಸ್ವರೂಪದಿಂದ ನನ್ನ ಹೆಂಡತಿಯಂತೆ ಕಾಣು

ತ್ತಾಳೆ, ಆದರೆ ಈಕೆಯ ಕಂಠದಲ್ಲಿ ಮಂಗಳಸೂತ್ರವಿಲ್ಲ. ಮುತ್ತಿನ ಸರಗಳಿಲ್ಲ. ॥ ೨೩೮ ॥ ದೇಹದ ಗುರ್ತು ನೋಡಿದರೆ, ಈಕೆಯು ಅರಿಷಿಣ, ಕುಂಕುಮಗಳನ್ನು ಹಚ್ಚಿಲ್ಲ, ಕೈಗಳಲ್ಲಿ ಬಳೆಗಳಿಲ್ಲ. ಆದರೂ ಇವಳು ನನ್ನ ಹೆಂಡತಿ ಎಂದು ಅನ್ನಲಿಕ್ಕೆ ಅಡ್ಡಿಯಿಲ್ಲ ಆದರೆ ನಾನು ಸತ್ತೆನೆಂಬ ಚಿತ್ತದಲ್ಲಿಯ ಚಿಂತೆಯಿಂದ ರೂಪ ಬಾಡಿದವಳಾಗಿ ಕಾಣುತ್ತಿರಬಹುದು ॥ ೨೩೯ ॥ ಎಂದು ಮನಸ್ಸಿನಲ್ಲಿ ವಿಚಾರ ಮಾಡುತ್ತ, ಆಕೆಯ ಪೂರ್ವ ರೂಪವನ್ನು ಮನಸ್ಸಿನಲ್ಲಿ ತಂದು, ಕುದುರೆಯಿಂದ ಇಳಿದು ಆ ನದಿಯ ದಂಡೆಯಲ್ಲಿಯೇ ಕುಳಿತು ॥ ೨೪೦ ॥ ಆಕೆಯನ್ನು ಕರೆದು ಅತಿ ಪ್ರೇಮದಿಂದ— ಎಲೌ ಸ್ತ್ರೀಯಳೇ, ನೀನು ಯಾರ ಮಗಳು? ನಿನ್ನ ಗಂಡನಾರು? ಹೇಳು. ॥೨೪೧॥ ಈ ಕೋಮಲವಾದ ಬಾಲ್ಯದಲ್ಲಿ ನಿನ್ನ ಮುಖವು ಬಾಡಿರುವ ಕಾರಣವೇನು? ಶೋಕದಿಂದ ಬಾಡಿರುವಂತೆ ಕಾಣುತ್ತದೆ. ನಾನು ನಿನ್ನನ್ನು ಈ ಪ್ರಕಾರ ಪ್ರೀತಿಯಿಂದ ಕೇಳುತ್ತೇನೆ. ಆದ್ದರಿಂದ ನನಗೆ ಎಲ್ಲವನ್ನೂ ವಿಸ್ತಾರ ವಾಗಿ ಹೇಳು. ಆಮೇಲೆ ನಿನಗೊಂದು ಆನಂದದ ಸಂಗತಿಯನ್ನು ಹೇಳುವೆನು ಅಂದನು. ॥ ೨೪೨ ॥ ಅವನ ಮಾತು ಕೇಳಿ ಸೀಮಂತಿನಿಯು ಲಜ್ಜೆಯಿಂದ ತಾನು ಮಾತಾಡದೆ ತನ್ನ ಒಬ್ಬ ಸಖಿಯರನ್ನು ಕರೆದು ಆತನಿಗೆ ತನ್ನ ಎಲ್ಲ ಸಂಗತಿಯನ್ನು ಹೇಳು ಎಂದಳು. ॥ ೨೪೩ ॥ ಆಗ ಆ ಸಖಿಯು ಆ ರಾಜಪುತ್ರನನ್ನು ಕುರಿತು— ಸ್ವಾಮೀ, ಈಕೆಯ ಹೆಸರು ಸೀಮಂತಿನಿಯು ಚಿತ್ರವರ್ಮ ರಾಜನ ಮಗಳು. ಮತ್ತು ನಿಷಧ ದೇಶದ ಇಂದ್ರಸೇನನ ಸೊಸೆಯು. ಮತ್ತು ಚಂದ್ರಾಂಗದನೆಂಬ ರಾಜಪುತ್ರನ ಹೆಂಡತಿಯು. ॥ ೨೪೪ ॥ ಈಕೆಯ ಅತಿ ಸುಂದರ ಪತಿ ಯಾದ ಚಂದ್ರಾಂಗದನು ಈ ನದಿಯಲ್ಲಿ ಅತಿಶಯವಾಗಿ ಜಲಕ್ರೀಡೆ ಮಾಡುತ್ತಿರಲು ಇಲ್ಲಿಯೇ ಮುಳುಗಿದನು. ॥ ೨೪೫ ॥ ಎಷ್ಟು ಹುಡುಕಿದರೂ ಸಿಗಲಿಲ್ಲ. ಆದರಿಂದ ಈಕೆಯು ತನಗೆ ವೈಧವ್ಯ ಬಂತೆಂದು ಈಗ ಮೂರು ವರ್ಷ ಗಳಿಂದ ದುಃಖ ಶೋಕಗಳನ್ನು ಮಾಡುತ್ತಿರುವದರಿಂದ ಈಕೆಯ ಸೌಂದರ್ಯವು ಕಡಿಮೆಯಾಗಿದೆ ॥ ೨೪೬ ॥ ಆದರೂ ಈಕೆಯು ಸೋಮವಾರ ವ್ರತವನ್ನು ಬಿಟ್ಟುಬಿಡದೆ ಮಾಡುತ್ತ ಉಪವಾಸ ಮತ್ತು ಪೂಜಾದಿಗಳನ್ನು ಆಚರಿಸುತ್ತಿರುವಳು. ಈ ದಿನ ಸೋಮವಾರವಾದ್ದರಿಂದ ಸ್ನಾನದದೆಶೆಯಿಂದ ನದಿಗೆ ಬಂದಿರುತ್ತಾಳೆ. ॥ ೨೪೭ ॥

ಈಕೆಯ ಮಾವನ ಸ್ಥಿತಿಯನ್ನು ಕೇಳಿರಿ— ಅವನು ಪುತ್ರಶೋಕದಿಂದ ಅತಿ ದುಃಖಿತನಾಗಿರಲು ಅವನ ದಾಯಾದಿಗಳು ಅವನ ರಾಜ್ಯವನ್ನು ಹರಣಮಾಡಿ ಆ ದಂಪತಿಗಳನ್ನು ಕಾರಾಗೃಹದಲ್ಲಿ ಹಾಕಿರುವರು. ॥ ೨೪೮ ॥ ಆದಕಾರಣ ಈ ಸೀಮಂತಿನಿಯು ಅವರ ಬಿಡುಗಡೆಯ ಸಲುವಾಗಿ ನಿತ್ಯ ಶಿವಪೂಜೆ ಮಾಡುವದಲ್ಲದೆ ಸೋಮವಾರ ದಿವಸವಂತೂ ಉಪವಾಸದಿಂದಿದ್ದು ಶೂಲಪಾಣಿಯನ್ನು ಪೂಜಿಸುತ್ತಿರುವಳು. ಎಂದು ಹೇಳಿದರು. ॥ ೨೪೯ ॥ ಇಷ್ಟು ಸಖಿಯು ಹೇಳಿದಮೇಲೆ ಸೀಮಂತಿನಿಯು ತಾನೇ ಸ್ವತಃ ಆ ರಾಜಪುತ್ರನನ್ನು ಕುರಿತು— ಮಹಾರಾಜ, ನೀವು ಯಾವ ಕಾರಣಕ್ಕಾಗಿ ನಮ್ಮನ್ನು ಇಷ್ಟೆಲ್ಲ ಕೇಳುತ್ತೀರಿ ? ಕಂದರ್ಪದಂತೆ ರೂಪವುಳ್ಳ ನೀವು ಯಾರು ? ॥ ೨೫೦ ॥ ನೀವು ದೇವತೆಗಳೋ ಅಥವಾ ಗಂಧರ್ವರೋ ಕಿನ್ನರರೋ ಅಥವಾ ಸಿದ್ಧರೋ ಯಾರು ? ನೀವು ಮನುಷ್ಯ ರೂಪದಿಂದ ಬಂದು, ಯಾವ ಕಾರ್ಯಕ್ಕಾಗಿ ನಮಗೆ ಇಷ್ಟು ಕೇಳುತ್ತೀರಿ ? ॥ ೨೫೧ ॥ ಸ್ವಾಮೀ ನೀವು ಒಳ್ಳೇ ಸ್ನೇಹಭಾವದಿಂದಲೂ ಪ್ರೀತಿಯಿಂದಲೂ ನಮ್ಮನ್ನು ಇಷ್ಟು ವಿಚಾರಿಸುತ್ತಿರುವದರಿಂದ ಪೂರ್ವದಲ್ಲಿ ನಾನು ನಿಮ್ಮನ್ನು ನೋಡಿದಂತಿದೆ. ಆದರೆ ಈಗ ತಮ್ಮ ಗುರುತು ತಿಳಿಯಲೊಲ್ಲದು. ॥ ೨೫೨ ॥ ನಾನು ಮನಸ್ಸಿನಲ್ಲಿ ನೀವು ನಮ್ಮ ಆಪ್ತರೆಂದು ತಿಳಿದಿರುವೆನು. ಆದರೆ ಈಗ ನೀವು ನಿಮ್ಮ ಹೆಸರನ್ನು ಹೇಳಿರಿ, ಎಂದು ತನ್ನ ಪತಿಯ ರೂಪವನ್ನು ನೆನಿಸಿದಳು. ॥ ೨೫೩ ॥ ಈಪ್ರಕಾರ ತನ್ನ ಪತಿಯ ರೂಪವನ್ನು ನೆನಿಸಿ ಸೀಮಂತಿನಿಯು ಅತಿ ಪ್ರಳಾಪಮಾಡಹತ್ತಿ ಕಣ್ಣೀರು ಸುರಿಸುತ್ತ ಭೂಮಿಯಮೇಲೆ ಬಿದ್ದು ಬಹಳವಾಗಿ ದುಃಖಿಸುತ್ತಿದ್ದಳು. ॥ ೨೫೪ ॥ ಆಕೆಯ ದುಃಖವನ್ನು ನೋಡಿ ಆ ರಾಜಪುತ್ರನು ಕಸಿಕರಪಟ್ಟು ತನಗೆ ದುಃಖಬಂದರೂ ಅದನ್ನು ಒಂದು ಮುಹೂರ್ತಕಾಲ ತಡಕೊಂಡು ಸುಮ್ಮನಿದ್ದು ಆಮೇಲೆ ತಾನೂ ದುಃಖಮಾಡಹತ್ತಿದನು. ॥ ೨೫೫ ॥ ಅವನು ಈಪ್ರಕಾರ ದುಃಖಮಾಡಿ ಕೆಲವು ಹೊತ್ತಿನಮೇಲೆ ಮೋರೆಯನ್ನು ತೊಳೆದುಕೊಂಡು— ಎಲೈ ಸೀಮಂತಿನಿಯೇ, ನಾನು ಸಿದ್ಧನು. ನೀನು ಇನ್ನು ಕೆಲವುಹೊತ್ತು ಸುಮ್ಮನಿದ್ದು ನನ್ನ ಮಾತು ಕೇಳು ಎಂದನು. ॥ ೨೫೬ ॥ ಅಂದರೂ ಆಕೆಯು ಅತಿಯಾಗಿ ದುಃಖಿಸುತ್ತಿರುವದನ್ನು ನೋಡಿ, ಆ ರಾಜಕುಮಾರನು ಆಕೆಯ ಹತ್ತರ ಬಂದು

ತೀವ್ರವಾಗಿ ಆಕೆಯ ಕೈಯನ್ನು ಹಿಡಿದು ಪ್ರೀತಿಯಿಂದ ಸಮಾಧಾನಮಾಡುತ್ತ || ೨೫೭ || ಆಕೆಯನ್ನು ಏಕಾಂತ ದಲ್ಲಿ ಕರೆದು— ಎಲೈ ಸೀಮಂತಿನಿಯೇ, ನಿನ್ನ ಗಂಡನನ್ನು ನಾನು ಸ್ವತಃ ನೋಡಿದ್ದೇನೆ. ಅವನು ಬದುಕಿ ಸುಖವಾಗಿರುವನು ನೀನು ಏನೂ ಚಿಂತೆಮಾಡಬೇಡ ಇನ್ನು ಸುಖದಿಂದ ಇರು. || ೨೫೮ || ನೀನು ಮಾಡುವ ವ್ರತದ ಪುಣ್ಯಪ್ರಭಾವದಿಂದ ನಿನ್ನ ಪತಿಯು ತೀವ್ರವಾಗಿ ಅಂದರೆ ಇವತ್ತಿನಿಂದ ಮೂರನೇ ದಿವಸ ನಿನಗೆ ಭೆಟ್ಟಿ ಯಾಗುವನು. ಇನ್ನುಮೇಲೆ ನೀನು ಏನೂ ಚಿಂತೆಮಾಡಬೇಡ. || ೨೫೯ || ಎಲೌ ತರುಣಿಯೇ, ನಿನ್ನ ಪತಿಯು ನನ್ನ ಸಖನು ಮತ್ತು ಅವನು ನನ್ನ ಪ್ರಾಣವು ಈ ವಿಷಯದಲ್ಲಿ ನಾನು ಈಶ್ವರನ ಆಣೆಮಾಡಿ ಹೇಳುತ್ತೇನೆ. ನೀನು ಮನಸಿನಲ್ಲಿ ಏನೂ ಸಂಶಯಮಾಡಬೇಡ. ನಾನು ಹೇಳುವ ಮಾತು ಸತ್ಯವೆಂದು ತಿಳಿ ಎಂದನು. ||೨೬೦|| ಈಪ್ರಕಾರ ಆಕೆಗೆ ಏಕಾಂತದಲ್ಲಿ ಹೇಳಿ— ಇದನ್ನು ಈಗಲೇ ಪ್ರಕಟಮಾಡಬೇಡ ಎಂದು ಹೇಳಿದನು. ಅದನ್ನು ಕೇಳಿ ಸೀಮಂತಿನಿಗೆ ಅತಿ ದುಃಖವಾಯಿತು || ೨೬೧ || ಅದರಿಂದ ಆಕೆಯು ಧಾರೆಯಾಗಿ ಕಣ್ಣೀರು ಸುರಿಸುತ್ತ ಪ್ರೇಮದಿಂದ ಬಿಕ್ಕಿಬಿಕ್ಕಿ ಅಳುತ್ತ ಮನಸಿನಲ್ಲಿ ವಿಚಾರಮಾಡಿ— ಇವನೇ ಸತ್ಯವಾಗಿ ನನ್ನ ಪತಿಯು ! || ೨೬೨ || ನನ್ನ ಪತಿಯ ಮುಖದಂತೆಯೇ ಇವನ ಮುಖಕಮಲವದೆ. ಇವನ ಕಣ್ಣುಗಳು ಸುಂದರ ಹಾಗು ಅತಿ ಕೋಮಲ ವಾಗಿವೆ. ಇವನ ಕಂಠಸ್ವರವು ಮಂಜುಳವಾಗಿದ್ದು, ಒಳ್ಳೇ ಗಂಭೀರತನದಿಂದ ಮಾತಾಡುವನು. || ೨೬೩ || ಇವನ ಮಾತುಗಳು ನನ್ನ ಪತಿಯ ಮಾತುಗಳಂತೆ ಮೃದುವಾಗಿರುವವು. ಇವನು ನನ್ನ ಪತಿಯಂದೇ ತಿಳಿದು ನನ್ನ ಕೈಹಿಡಿದು ನನ್ನ ಸಂಗಡ ಒಳ್ಳೇ ಹರ್ಷದಿಂದ ಮಾತಾಡಿದನು. ಬೇರೆಯವರಿಗೆ ನನ್ನ ಕೈಹಿಡಿಯುವ ಧೈರ್ಯ ವಾಗುತ್ತಿತ್ತೇ? ಇವನು ನನ್ನ ಕೈಹಿಡಿದಾಗ ನನ್ನ ಪತಿಯ ಕೈಯಂತೆ ಈತನ ಕೈಯೂ ಅತಿ ಮೃದುವಾಗಿ ಹತ್ತಿತು. || ೨೬೪ || ನನ್ನ ಪತಿಯ ಎಲ್ಲ ಲಕ್ಷಣಗಳ ಗುರ್ತುಗಳು ನನಗೆ ಗೊತ್ತವೆ. ಈತನಲ್ಲಿ ನನ್ನ ಪತಿಯ ಎಲ್ಲ ಚಿನ್ಹಗಳು ಅವೆ. ಅಂದಮೇಲೆ ನಿಶ್ಚಯವಾಗಿ ಈತನೇ ನನ್ನ ಪ್ರಾಣಪತಿಯು. || ೨೬೫ || ಎಂದು ಅವನನ್ನು ದಿಟ್ಟಿಸಿ ನೋಡುತ್ತ ಪ್ರೇಮದಿಂದ ಧಾರೆಯಾಗಿ ಕಣ್ಣೀರು ಸುರಿಸುತ್ತಿರಲು ಒಳ್ಳೇ ಕೌತುಕಪಟ್ಟು

ವಿಚಾರಿಸಿ ಆಮೇಲೆ ಮತ್ತೆ ಅನುಮಾನ ಮಾಡಹತ್ತಿದಳು. || ೨೬೬ || ನಾನು ದುರ್ದೈವಿ ಇರುತ್ತೇನೆ ಮೂರು ವರುಷವಾಯಿತು ನದಿಯಲ್ಲಿ ಮುಳುಗಿಹೋದ ಪತಿಯು ಈಗ ಹ್ಯಾಗೆ ಬದುಕಿ ಬಂದಾನು? ನನಗೆ ಇದೆಲ್ಲಿಂದ ಭ್ರಾಂತಿಬಂತು? || ೨೬೭ || ಸತ್ತುಹೋದ ಪತಿಯು ಮೂರು ವರುಷಗಳನಂತರ ಬದುಕಿ ಬಂದದ್ದನ್ನು ನಾನು ಎಲ್ಲಿಯೂ ಕಂಡಿಲ್ಲ ಕೇಳಿಲ್ಲ. ಇದೇನು ಸ್ವಪ್ನವೋ ಅಥವಾ ಭ್ರಾಂತಿಯೋ ಎಂಬುವದು ನನ್ನ ಮನಸಿಗೆ ಯಾವದೂ ತಿಳಿಯುಲೊಲ್ಲದು || ೨೬೮ || ಇವನು ಧೂರ್ತ (ಲಬಾಡ ಮನುಷ್ಯ) ನೋ ಅಥವಾ ವೇಷಧಾರಿ ರಾಕ್ಷಸನೋ ಅಥವಾ ಕಿನ್ನರನೋ ತಿಳಿಯದು. ಇವನು ಕಪಟದಿಂದ ಒಮ್ಮಿಂದೊಮ್ಮೆ ಈ ನದೀತೀರದಲ್ಲಿ ಪ್ರಕಟನಾಗಿರುವನು ಎಂದು ಅನೇಕ ರೀತಿ ಕಲ್ಪನಾಮಾಡುತ್ತಿದ್ದಳು || ೨೬೯ || ಆಮೇಲೆ ಮತ್ತೆ ಮನಸಿನಲ್ಲಿ— ಅಥವಾ ನಾನು ಶಿವವ್ರತವನ್ನು ಮಾಡಿದ್ದರಿಂದ ಶ್ರೀ ಗಿರಿಜಾನಾಥನು ಮೆಚ್ಚಿ ನನ್ನ ಪತಿಯನ್ನು ಬದುಕಿಸಿ ಕಳಿಸಿದನೋ ಅಥವಾ ನನ್ನ ಸಂಕಟವನ್ನು ನೋಡಿ ಮೈತ್ರೇಯಿಯು ಶಿವವ್ರತವನ್ನು ಹೇಳಿರುವಳೆಂದು ಆಕೆಯ ದೇಶೆಯಿಂದ ಶಿವನು ಇವನನ್ನು ಕಳಿಸಿರುವನೋ ತಿಳಿಯದು. ||೨೭೦|| ಶ್ರೀ ಶಂಕರನು ಪ್ರಸನ್ನನಾದರೆ ಯಾರಿಗೆ ದುಃಖ ಉಂಟಾದೀತು? ಈ ಬಗ್ಗೆ ನಿಶ್ಚಯವಾದದ್ದನ್ನು ವಿಚಾರ ಮಾಡಿ ನೋಡಬೇಕು ಎಂದು ಸೀಮಂತಿನಿಯು ಆಲೋಚಿಸುತ್ತಿದ್ದಳು. || ೨೭೧ || ಈ ಪ್ರಕಾರ ಆಗಲು ಆ ರಾಜಪುತ್ರನು ಆ ಕುದುರೆಯನ್ನು ಹತ್ತಿ ಪ್ರೀತಿಯಿಂದ— ಎಲೈ ಸೀಮಂತಿನಿಯೇ, ಇವತ್ತಿನಿಂದ ೩ನೇ ದಿವಸ ನಿನ್ನ ಪತಿಯು ನಿನಗೆ ಭೆಟ್ಟಿಯಾಗುವನು. ಈಗ ನನಗೆ ಅಪ್ಪಣೆ ಕೊಡು ಎಂದು ಆಕೆಯ ಅಪ್ಪಣೆಯನ್ನು ತಕ್ಕೊಂಡು || ೨೭೨ || ಚಂದ್ರಾಂಗದನು ಆ ವಾಸುಕಿ ಪುತ್ರನೊಡನೆ ಮನೋವೇಗದಿಂದ ಹೊರಟು ಅತಿ ಶೀಘ್ರದಿಂದ ತನ್ನ ತಂದೆಯ ನಗರಕ್ಕೆ ಬಂದು ಆ ತಕ್ಷಕಪುತ್ರನಿಗೆ ಕೆಲವು ಮಾತು ಹೇಳಿ ಆ ಪಟ್ಟಣದೊಳಗೆ ಕಳಿಸಿದನು. || ೨೭೩ || ಏನಂದರೆ, ಎಲೈ ತಕ್ಷಕ ಕುಮಾರನೇ, ನೀನು ಊರೊಳಗೆ ನಮ್ಮ ವೈರಿಗಳ ಹತ್ತರ ಹೋಗಿ ಅವರಿಗೆ ಮೊದಲು ನಮಜೂತಿಯಿಂದ ನಮ್ಮ ರಾಜ್ಯವನ್ನು ನಮಗೆ ಬಿಟ್ಟುಕೊಡೆಂದು ಹೇಳು. ಅವರು ಒಂದು ವೇಳೆ ನಿನ್ನ ಮಾತು ಕೇಳದಿದ್ದರೆ ನಿಮ್ಮನ್ನು ಕೊಲ್ಲುವೆನೆಂದು ಹೇಳು.

ಎಂದು ಹೇಳಿಕಳಿಸಿದನು. ॥ ೨೭೪ ॥ ಈ ಪ್ರಕಾರ ಚಂದ್ರಾಂಗದನ ಮಾತು ಕೇಳಿ ಆ ನಾಗಕುಮಾರನು ತೀವ್ರವಾಗಿ ರಾಜಭವನಕ್ಕೆ ಹೋಗಿ ನಿಂತು ಆ ವೈರಿ ರಾಜನನ್ನು ಕುರಿತು ಕಠೋರ ಮಾತಿನಿಂದ— ॥ ೨೭೫ ॥ ಎಲೈ ಕೃತ್ರಿಮ ರಾಜನೇ, ಇಂದ್ರಸೇನನ ಮಗನಾದ ಚಂದ್ರಾಂಗದನು ಕಾಲಿಂದೀ ನದಿಯಲ್ಲಿ ಮುಳುಗಿ ಸತ್ತನೆಂದು ಕೇಳಿ, ಆ ಇಂದ್ರಸೇನನು ದುಃಖದಲ್ಲಿದ್ದಾಗ್ಗೆ ನೀನು ಅವನ ರಾಜ್ಯವನ್ನು ಅನ್ಯಾಯದಿಂದ ತಕ್ಕೊಂಡು ಆ ದಂಪತಿಗಳನ್ನು ಬಂದಿಯಲ್ಲಿ ಹಾಕಿರುವಿ. ಆದರೆ ಆ ಚಂದ್ರಾಂಗದನು ಕಾಲಿಂದೀ ನದಿಯಲ್ಲಿ ಮುಳುಗಿ ಸಾಯದೆ ತಕ್ಷಕನ ದರ್ಶನಕ್ಕಾಗಿ ಪಾತಾಳಕ್ಕೆ ಹೋಗಿದ್ದನು. ಅಲ್ಲಿ ಅವನಿಗೆ ತಕ್ಷಕನ ಸ್ನೇಹವಾಯಿತು. ಆದರಿಂದ ಆ ತಕ್ಷಕನು ಚಂದ್ರಾಂಗದನಿಗೆ ೯ ಸಾವಿರ ನಾಗಸೈನ್ಯವನ್ನು ಕೊಟ್ಟಿರುವನು ಅದು ನೆನಸಿದಾಗ ಬರುವದು. ಈಗ ಆ ಚಂದ್ರಾಂಗದನು ಸತ್ಯವಾಗಿ ಊರಹೊರಗೆ ಬಂದು ನಿಂತಿರುವನು ನೀವು ಕುಟುಂಬಸಹಿತವಾಗಿ ತೀವ್ರ ಅವನ ಭೆಟ್ಟಿಗೆ ನಡೆಯಿರಿ. ಈಗ ನಿಮಗೆ ಇನ್ನೊಂದು ಮಾತು ಹೇಳುವೆನು ಕೇಳಿರಿ, ನೀವು ಒಂದು ವೇಳೆ ಬದುಕಬೇಕೆಂಬ ಅಪೇಕ್ಷೆ ಇದ್ದರೆ ಆ ಇಂದ್ರಸೇನನನ್ನು ಪುನಃ ಸಿಂಹಾಸನದಲ್ಲಿ ಸ್ಥಾಪಿಸಿ ತೀವ್ರವಾಗಿ ಚಂದ್ರಾಂಗದನ ಚರಣಕ್ಕೆ ಶರಣು ಹೋಗಿರಿ. ॥ ೨೭೬-೨೭೭-೨೭೮-೨೭೯ ॥ ತಕ್ಷಕ ಮಹಾರಾಜನು ನಿಮ್ಮ ಪಾರುಪತ್ಯಮಾಡುವದಕ್ಕೆ ನನ್ನನ್ನು ಕಳಿಸಿರುವನು. ಈಗ ನೀವು ನನ್ನ ಮಾತು ಕೇಳದಿದ್ದರೆ ಈ ಕೂಡಲೇ ನಾನೇ ನಿಮ್ಮ ಪ್ರಾಣವನ್ನು ತಕ್ಕೊಳ್ಳುವೆನು ಎಂದು ಹೇಳಿದನು. ॥೨೮೦॥ ಆ ನಾಗಕುಮಾರನ ಮಾತು ಕೇಳಿ ಚಂದ್ರಾಂಗದ ವೈರಿಗಳು ಹೆದರಿ ಮನಸಿನಲ್ಲಿ— ನಾವು ತಿಳಿದೂ ತಿಳಿದೂ ದುರ್ಬುದ್ಧಿ ಮಾಡಿ ಇಂದ್ರಸೇನನ ರಾಜ್ಯವನ್ನು ಅಪಹರಿಸಿದ್ದು ಸತ್ಯವು. ಈಗ ಅವರಿಗೆ ಶರಣು ಹೋಗಲಿಕ್ಕೇಬೇಕು. ॥ ೨೮೧ ॥ ನಾವು ಒಂದು ವೇಳೆ ಬಲಾತ್ಕಾರದಿಂದ ಅವರ ರಾಜ್ಯವನ್ನು ಅವರಿಗೆ ಕೊಡದೆ, ಈಗ ಶರಣುಹೋಗದಿದ್ದರೆ ಆ ತಕ್ಷಕನು ನಮ್ಮನ್ನು ಸಂಹರಿಸುವನು ನಮ್ಮ ಪ್ರಾಣವಂತೂ ಉಳಿಯುವದಿಲ್ಲ. ಮತ್ತು ನಾವು ಕಡೆತನಕ ಜನರ ನಿಂದೆಗೆ ಪಾತ್ರರಾಗುವೆವು. ಆದ್ದರಿಂದ ಈಗ ನಾವು ಅವರಿಗೆ ಶರಣು ಹೋಗುವದೇ ಯೋಗ್ಯವು. ॥ ೨೮೨ ॥ ಎಂದು ಮನಸಿನಲ್ಲಿ ವಿಚಾರಮಾಡಿ ಕೂಡಲೆ ಆ ಇಂದ್ರಸೇನ ದಂಪತಿ

ಗಳನ್ನು ಸೆರೆಮನೆಯಿಂದ ಹೊರಗೆ ತೆಗೆದು ಅವರಿಗೆ ಮಂಗಳಸ್ನಾನಮಾಡಿಸಿ ದಿವ್ಯ ವಸ್ತ್ರಾಭರಣಗಳನ್ನು ಉಡಿಸಿ ಸಿಂಹಾಸನದಲ್ಲಿ ಕೂಡ್ರಿಸಿದರು. ‖ ೨೮೩ ‖ ಆಮೇಲೆ ಎಲ್ಲರೂ ಕೈಮುಗಿದು ವಿನಯದಿಂದ— ಇಂದ್ರಸೇನ ಮಹಾರಾಜನೇ, ನಮ್ಮಿಂದ ತಪ್ಪಾಯಿತು. ನಾವು ನಿನಗೆ ಶರಣುಬಂದಿದ್ದೇವೆ, ಶೀವ್ರ ನಮ್ಮ ಪ್ರಾಣವನ್ನು ರಕ್ಷಿಸು ಎಂದು ಅವನ ಚರಣಕ್ಕೆ ನಮಸ್ಕರಿಸಿದರು. ‖ ೨೮೪ ‖ ಆಗ ತಕ್ಷಕ ಪುತ್ರನು ಇಂದ್ರಸೇನನನ್ನು ಕುರಿತು ಸ್ವಾಮೀ, ಕಾಲಿಂದೀ ನದಿಯಲ್ಲಿ ಮುಳುಗಿ ಪಾತಾಳಕ್ಕೆ ವಾಸುಕೀ ಭೆಟ್ಟಿಗೆ ಹೋದ ನಿಮ್ಮ ಮಗ ಚಂದ್ರಾಂಗದನು ಈಗ ಊರ ಹೊರಗೆ ಬಂದು ನಿಂತಿರುವನು ಎಂದು ಹೇಳಿದನು. ‖ ೨೮೫ ‖ ಆಮಾತು ಕೇಳಿದ ಕೂಡಲೆ ಇಂದ್ರಸೇನನು ಹರ್ಷಬಟ್ಟು ಹಿಂದಿನ ಅತ್ಯಂತ ದುಃಖವನ್ನು ನೆನಿಸಿ, ಕೂಡಲೆ ಪತ್ನಿಸಹಿತ ಮೂರ್ಛೆಬಂದು ಭೂಮಿಯಮೇಲೆ ಬಿದ್ದನು. ‖ ೨೮೬ ‖ ಆಗ ಆ ನಾಗಕುಮಾರನು ಅವರನ್ನು ಎಬ್ಬಿಸಿ— ಮಹಾರಾಜ, ನೀವು ಇನ್ನ್ಯಾಕೆ ದುಃಖಮಾಡುತ್ತೀರಿ ? ಸರ್ವಥಾ ದುಃಖಮಾಡಬೇಡಿರಿ. ಈಗ ನಿಮ್ಮ ಮಗನು ಆನಂದದಿಂದ ತೀವ್ರ ವಾಗಿ ನಮ್ಮ ಭೆಟ್ಟಿಗೆ ಬರುವನು ಎಂದು ಹೇಳಿದನು ‖ ೨೮೭ ‖ ಅವನ ಮಾತು ಕೇಳಿ ಇಂದ್ರಸೇನನು ಅತ್ಯಾನಂದವನ್ನು ಹೊಂದಿ ಮಂತ್ರಿಯನ್ನು ಕರೆದು ನಗರವನ್ನು ಶೃಂಗರಿಸಲಿಕ್ಕೆ ಹೇಳಿದನು. ‖ ೨೮೮ ‖ ಆಮೇಲೆ ಅವನು ಯಾವತ್ತು ಬಂಧುಗಳು, ರಾಣೀವಾಸದ ಸ್ತ್ರೀಯರೊಡನೆ ವಾದ್ಯ ವೈಭವದಿಂದ ಮಗನ ಭೆಟ್ಟಿಗೆ ನಡೆದನು ‖ ೨೮೯ ‖ ಅವನ ಸಂಗಡ ಮಂತ್ರಿಗಳು, ಪುರೋಹಿತರು, ಸಕಲ ಪ್ರಜೆಗಳು ಮೊದಲಾದವರೆಲ್ಲರೂ ಹೊರಟರು— ಸತ್ತ ಮಗನು ಮೂರು ವರ್ಷದಮೇಲೆ ಹ್ಯಾಗೆ ಬದುಕಿ ಬಂದನೆಂಬ ಕೌತುಕ ವನ್ನು ನೋಡೋಣ ನಡೆಯಿರಿ ಎಂದೆನ್ನುತ್ತ ‖ ೨೯೦ ‖ ಎಲ್ಲರೂ ಬಹು ಆನಂದಪಟ್ಟರು. ಆಗ ಇಂದ್ರಸೇನ ರಾಜನು ಅತ್ಯಂತ ಹರ್ಷಬಟ್ಟು ಒಳ್ಳೇ ಪ್ರೀತಿಯಿಂದ— ಇನ್ನು ನಾನು ತೀವ್ರವಾಗಿ ಮಗನ ಮುಖವನ್ನು ನೋಡು ವೆನು ಎಂದು ಆನಂದದಿಂದ ನಡೆದನು ‖ ೨೯೧ ‖ ಆಗ ಅನೇಕ ವಾದ್ಯ ವೈಭವಗಳ ರಭಸವು ನಡೆದಿರಲು ಜನರು ಒಳ್ಳೇ ಸಂತೋಷದಿಂದ ಜಯಜಯಕಾರ ಮಾಡುತ್ತ ಉಲ್ಲಾಸದಿಂದ ನಡೆದಿದ್ದರು. ‖ ೨೯೨ ‖ ಈ ಪ್ರಕಾರ

ಇಂದ್ರಸೇನನು ಉತ್ಸವದಿಂದ ಹೋಗಿ ದೂರದಿಂದ ಸುಂದರಾಕಾರನಾಗಿ ನಿಂತ ಚಂದ್ರಾಂಗದನನ್ನು ಕಣ್ತುಂಬ ನೋಡಿದನು. ತಂದೆ-ತಾಯಿಗಳನ್ನು ನೋಡಿದಕೂಡಲೆ ಚಂದ್ರಾಂಗದನು ಓಡಿ ಬಂದು ಅವರ ಪಾದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡಿದನು. ‖ ೨೯೩ ‖ ಆಗ ಇಂದ್ರಸೇನ ಮಹಾರಾಜನು ಅತಿ ಪ್ರೀತಿಯಿಂದ ತೀವ್ರವಾಗಿ ಮಗನನ್ನು ಬಿಗಿದಪ್ಪಿಕೊಂಡನು. ಆಗ ಅಂತಃಕರಣವು ಉಕ್ಕೇರಿ ಬರಲು ಮಗನ ನೆತ್ತಿಯನ್ನು ಮೂಸಿನೋಡಿ, ಸದ್ಗದಿತಕಂಠನಾಗಿ, ಧಾರೆಯಾಗಿ ಆನಂದಾಶ್ರುಗಳನ್ನು ಸುರಿಸುತ್ತಿದ್ದನು. ‖ ೨೯೪ ‖ ಮುಂದೆ ಕೆಲಹೊತ್ತಿನ ಮೇಲೆ ಸಮಾಧಾನಹೊಂದಿ— ಅಪ್ಪಾ, ಬಾಳಾ, ನನ್ನ ಪ್ರಾಣಪದಕವೇ, ಚಂದ್ರಾಂಗದಾ, ನೀನು ನದಿಯಲ್ಲಿ ಮುಳುಗಿ ಎಷ್ಟು ಕಷ್ಟಪಟ್ಟೆಯೋ ಏನೋ? ದೈವಯೋಗದಿಂದಲೂ ವಾಸುಕಿ ಮಹಾರಾಜನ ಕೃಪೆಯಿಂದಲೂ ಬದುಕಿ ಬಂದದ್ದರಿಂದ ನನಗೆ ಹಿಡಿಸಲಾರದಷ್ಟು ಆನಂದವಾಗಿದೆ! ನೀನು ಇಲ್ಲದ್ದರಿಂದ ನಾನು ಬಹಳ ಕಷ್ಟಬಟ್ಟು, ಜೀವವಿದ್ದೂ ಇಲ್ಲದವನಂತೆ ಆಗಿದ್ದೆನು. ಎಂದು ತನ್ನ ದುಃಖವನ್ನು ಹೇಳಿದನು. ‖ ೨೯೫ ‖ ಆಮೇಲೆ ಅವನ ತಾಯಿಯು ಅವನನ್ನು ಅಪ್ಪಿಕೊಂಡು ಅತಿಶಯ ದುಃಖ ಮಾಡಿದಳು. ಆಗ ಅವನು ತಾಯಿಯನ್ನು ಸಮಾಧಾನ ಮಾಡಿ— ಅಪ್ಪಾ, ನನ್ನ ಸಲುವಾಗಿ ನೀನು ಬಹಳ ಕಷ್ಟಬಟ್ಟೆ! ‖ ೨೯೬ ‖ ನನ್ನ ಆನಂದಕ್ಕಾಗಿ ನಾನು ಜಲಕ್ರೀಡೆಯಾಡಲಿಕ್ಕೆ ಹೋಗಿ ನದಿಯೊಳಗೆ ಮುಳುಗಿ ನಿಮಗೆ ಬಹಳ ದುಃಖ ಕೊಟ್ಟೆನು. ತಂದೆ-ತಾಯಿಗಳಿಗೆ ದುಃಖ ಕೊಡುವಂಥ ಮಗನು ಮಗನಲ್ಲ! ಅವನು ವೈರಿಯೇ ಸರಿ. ನಿಮಗೆ ನಾನು ಅತಿಶಯ ದುಃಖ ಕೊಟ್ಟೆನು ಸ್ವಲ್ಪಾದರೂ ಸುಖವನ್ನು ಕೊಡಲಿಲ್ಲ. ‖ ೨೯೭ ‖ ಆದರೆ ನಾನು ಪಾತಾಳಕ್ಕೆ ಹೋಗಿ ಮಹಾಶೇಷನ ಹತ್ತಿರ ಇಷ್ಟು ದಿವಸಗಳ ವರೆಗೆ ಸುಖವಾಗಿದ್ದೆನು. ಆದರೆ ನೀವು ಮಾತ್ರ ನನ್ನ ಸಲುವಾಗಿ ಅಹೋರಾತ್ರಿ ದುಃಖಿಸಿದಿರಿ. ‖೨೯೮‖ ಸತ್ಯವಾಗಿ ನನ್ನ ಮನಸ್ಸು ಕಟ್ಟಿಗೆಯಂತೆ ಕಠಿಣವಾಗಿರುವದು ತಾಯಿಯ ಅಂತಃಕರಣವು ಮೇಣದಂತಿರುವದು. ಮಕ್ಕಳ ಸಲುವಾಗಿ ಆಕೆಗೆ ಬಹಳ ಕಷ್ಟವಾಗುವದು. ‖ ೨೯೯ ‖ ತಾಯಿ-ತಂದೆಗಳಿಗಾಗುವ ದುಃಖವನ್ನು ತಿಳಿಯದಂಥ ಮಗನು ಶತಮೂರ್ಖನು! ಒಂದು ಘಳಿಗೆ ಸ್ತನಪಾನ ಮಾಡಿಸಿದ ತಾಯಿಯ ಋಣವನ್ನು ತೀರಿಸುವದು

ಅಶಕ್ಯವು ॥ ೩೦೦ ॥ ಮಗನಿಗೆ ತಾಯಿಯ ಹೊರತು ಉಳಿದ ದೇವರು ಹೆಚ್ಚಿನವರಲ್ಲ. ಆವನು ತಾಯಿಯ ಋಣದಿಂದ ಎಂದೂ ಮುಕ್ತನಾಗಲಾರನು. ತಾಯಿಯೆಂದರೆ ಪಾರ್ವತೀಸಮಾನವು. ॥ ೩೦೧ ॥ ಯಾವನು ತನ್ನ ತಾಯಿಗೆ ದುಃಖ ಕೊಡುವನೋ ಅವನು ನರಕಕ್ಕೆ ಹೋಗುವನು. ಅವನ ವಂಶದಲ್ಲಿ ಮಕ್ಕಳಾಗುವದಿಲ್ಲ. ಆವನು ಸಪ್ತಜನ್ಮಗಳ ವರೆಗೆ ದರಿದ್ರನಾಗುವನು. ॥ ೩೦೨ ॥ ಎಂದು ಚಂದ್ರಾಂಗದನು ತನ್ನ ತಾಯಿಗೆ ವಿನಯದಿಂದ ಈ ಪ್ರಕಾರವಾಗಿ ಹೇಳಿ, ಆಮೇಲೆ ತನ್ನ ಅಕ್ಕತಂಗಿಯರಿಗೂ, ಆಪ್ತೇಷ್ಟರಿಗೂ, ಮಂತ್ರಿಗಳಿಗೂ, ಪುರೋಹಿತರಿಗೂ, ಪ್ರಜೆಗಳಿಗೂ ಭೆಟ್ಟಿಯನ್ನು ಕೊಟ್ಟು ಎಲ್ಲರನ್ನೂ ಸಮಾಧಾನ ಮಾಡಿದನು. ॥೩೦೩॥ ಆಮೇಲೆ ಎಲ್ಲರೂ ಅತಿಶಯ ಸಮಾರಂಭದಿಂದ ಊರೊಳಗೆ ಹೊಕ್ಕು ರಾಜಮಂದಿರವನ್ನು ಪ್ರವೇಶಿಸಿದರು ॥೩೦೪॥ ಆಮೇಲೆ ಇಂದ್ರಸೇನನು ಆ ತಕ್ಷಕಪುತ್ರನಿಗೆ ಅತಿ ಹರ್ಷದಿಂದ ಅನೇಕ ವಸ್ತ್ರ-ಭೂಷಣಗಳನ್ನು ಕೊಟ್ಟು ಮರ್ಯಾದೆಮಾಡಿ ಗೌರವಸಿದನು. ॥೩೦೫॥ ಆಮೇಲೆ ಚಂದ್ರಾಂಗದನು ತಂದೆಯನ್ನು ಕುರಿತು— ಹೇ, ತಂದೆಯೇ, ಆ ತಕ್ಷಕ ಮಹಾರಾಜನು ನನ್ನ ಪ್ರಾಣವನ್ನು ಉಳಿಸಿದ್ದಲ್ಲದೆ ನನಗೆ ಅಪಾರವಾದ ದ್ರವ್ಯವನ್ನು ಕೊಟ್ಟನು. ॥೩೦೬॥ ಮತ್ತು ಅನೇಕ ಸುಂದರ ವಸ್ತ್ರಾಭರಣಗಳನ್ನೂ ರತ್ನಗಳನ್ನೂ ಕೊಟ್ಟಿರುವನು. ಎಂದು ತಕ್ಷಕನು ಮಾಡಿದ ಉಪಕಾರವನ್ನು ವಿಸ್ತಾರವಾಗಿ ಹೇಳಿದನು. ಆಗ ಇಂದ್ರಸೇನನು ಮಗನು ತಂದ ದ್ರವ್ಯವನ್ನೂ ವಸ್ತ್ರ-ಒಡವೆಗಳನ್ನೂ ನೋಡಿ ಸಂತೋಷಪಟ್ಟು— ತಕ್ಷಕನು ಮಹಾಧನ್ಯನು! ಎಂದನು. ॥ ೩೦೭ ॥ ಆಮೇಲೆ ಮತ್ತೆ ಅನೇಕ ವಸ್ತ್ರಾಲಂಕಾರಗಳಿಂದ ಆ ನಾಗಪುತ್ರನನ್ನು ಮನ್ನಿಸಿ ಕಳುಹಿದನು ಬಳಿಕ ಇಂದ್ರಸೇನನು ಹರ್ಷದಿಂದ ತನ್ನ ಮಗನು ಬಂದ ಸುದ್ದಿಯನ್ನು ತನ್ನ ಬೀಗನಾದ ಚಿತ್ರವರ್ಮ ರಾಜನಿಗೆ ತಿಳಿಸುವದಕ್ಕಾಗಿ, ತೀವ್ರವಾಗಿ ಪತ್ರಬರೆದು ಚಾರರಕೈಯಲ್ಲಿ ಕೊಟ್ಟನು ॥ ೩೦೮ ॥ ಏನಂದರೆ— ನನ್ನ ಸೊಸೆಯು ಮುಖ್ಯವಾಗಿ ಬಹು ದೈವಾನಳು! ಆಕೆಯ ಧರ್ಮದ ಬಲದಿಂದಲೇ ನನ್ನ ಮಗನು ಬದುಕಿ ಬಂದನು. ॥ ೩೦೯ ॥ ಆಕೆಯು ಬಿಟ್ಟೂಬಿಡದೆ ಒಳ್ಳೇ ಭಕ್ತಿಯಿಂದ ಶ್ರೀ ಶಂಕರನನ್ನು ಆರಾಧಿಸಿದ ಪುಣ್ಯದಿಂದಲೇ, ಆಕೆಯ ಬಳೆ, ಹೆಳಲು, ಕುಂಕುಮಗಳು ಸ್ಥಿರವಾದವು ಆದರಿಂದ ನನ್ನ ಮಗನು ಬದುಕಿ ಬಂದನು.

ನನ್ನ ಸೊಸೆಯು ಅಖಂಡ ಸೌಭಾಗ್ಯವತಿಯು ! ॥ ೩೧೦ ॥ ಎಂದು ಪತ್ರವನ್ನು ಬರೆದು ತೀವ್ರವಾಗಿ ಚಿತ್ರವರ್ಮ ನಿಗೆ ಮುಟ್ಟುವಂತೆ ಚಾರರನ್ನು ಕಳಿಸಿದನು ॥ ೩೧೧ ॥ ಆ ಚಾರರು ಆ ಪತ್ರವನ್ನು ತಕ್ಕೊಂಡು ತೀವ್ರವಾಗಿ ಹೊರಟು, ಚಿತ್ರವರ್ಮ ರಾಜನ ಹತ್ತರ ಹೋಗಿ ಆ ಪತ್ರವನ್ನು ಕೊಟ್ಟು, ಆನಂದದಿಂದ ಚಂದ್ರಾಂಗದನ ಶುಭ ವಾರ್ತೆಯನ್ನು ವಿಸ್ತಾರವಾಗಿ ಹೇಳಿದನು ॥ ೩೧೨ ॥ ಅದನ್ನು ಕೇಳಿ ಚಿತ್ರವರ್ಮನೂ ಸೀಮಂತಿನಿಯೂ ಸಕಲ ಪರಿವಾರದವರೂ ಮಹಾ ಸಂತೋಷವನ್ನು ಹೊಂದಿದರು. ಆಗ ಚಿತ್ರವರ್ಮನು ಬ್ರಾಹ್ಮಣರಿಗೆ ಅಪಾರ ಧಾನ ಧರ್ಮಗಳನ್ನುಮಾಡಿ, ಆ ಬಂದ ಚಾರರಿಗೆ ಅನೇಕ ವಸ್ತ್ರಭೂಷಣಗಳನ್ನು ಕೊಟ್ಟು ಸಂತೋಷಬಡಿಸಿದನು. ಸೀಮಂತಿನಿಯು ತನ್ನ ಸಖಿಯರನ್ನು ಕುರಿತು--- ಅವ್ವಾ ಸಖಿಯರೇ, ಮೊನ್ನೆ ಸೋಮವಾರ ದಿವಸ ನದಿಯೊಳ ಗಿಂದ ಬಂದು ಮಾತನಾಡಿದ ಪುರುಷನೇ ಸತ್ಯವಾಗಿ ನನ್ನ ಪತಿಯು. ಆಹಾ ! ಗಿರಿಜಾರಮಣನ ಅಗಾಧ ಲೀಲೆ ಯನ್ನು ವರ್ಣಿಸಲಶಕ್ಯವು ಎಂದು ಆನಂದಸಾಗರದಲ್ಲಿ ತೇಲಾಡುತ್ತಿದ್ದಳು. ॥ ೩೧೩ ॥ ಇತ್ತ ಇಂದ್ರಸೇನನು ಮನಸಿನಲ್ಲಿ--- ತನ್ನ ಪುತ್ರನಾದ ಚಂದ್ರಾಂಗದನ ಲಗ್ನವನ್ನು ಮತ್ತೊಮ್ಮೆ ತೀವ್ರವಾಗಿ ಒಳ್ಳೇ ವಿಜೃಂಭಣೆಯಿಂದ ಮಾಡಬೇಕೆಂದು ತನ್ನ ರಾಜಪರಿವಾರ ಹಾಗು ಸೇನಾಸಹಿತವಾಗಿ ಸಕಲೈಶ್ವರ್ಯದಿಂದ ಕೂಡಿ ಹೊರಟು ಚಿತ್ರ ವರ್ಮನ ನಗರಕ್ಕೆ ಬಂದನು. ॥ ೩೧೪ ॥ ಆ ಸುದ್ದಿಯನ್ನು ಕೇಳಿ ಚಿತ್ರವರ್ಮನು ಒಳ್ಳೇ ಸಮಾರಂಭದಿಂದ ಬೀಗರನ್ನು ಎದುರ್ಗೊಂಡು ಊರೊಳಗೆ ಕರಕೊಂಡು ಬಂದು ಅರಮನೆಯಲ್ಲಿ ಇಳಿಸಿದನು. ಆಮೇಲೆ ಇಂದ್ರ ಸೇನನು ಅಲ್ಲಿ ಅತಿಶಯವಾಗಿ ಮಹೋತ್ಸವಗಳನ್ನುಮಾಡಿ ಒಳ್ಳೇ ಧುರಂಧರವಾಗಿ ಪುನಃ ಚಂದ್ರಾಂಗದ-ಸೀಮಂತಿ ನಿಯರ ಲಗ್ನಮಾಡಿದನು ಆಮೇಲೆ ಆ ದಂಪತಿಗಳು ಅನ್ಯೋನ್ಯವಾಗಿ ಆನಂದದಿಂದ ಭೆಟ್ಟಿಯನ್ನು ತಕ್ಕೊಂ ಡರು. ॥ ೩೧೫ ॥ ಬಳಿಕ ಚಂದ್ರಾಂಗದನು ತನ್ನ ಪತ್ನಿಗೆ ಒಳ್ಳೇ ಪ್ರೀತಿಯಿಂದ ಪಾತಾಳದಿಂದ ತಂದ ಅಪೂರ್ವ್ಯ ವಾದ ಯಾವತ್ತು ವಸ್ತು ಒಡವೆಗಳನ್ನು ಕೊಟ್ಟದ್ದಲ್ಲದೆ ತಕ್ಷಕನು ಕೊಟ್ಟ ಅಮೃತವನ್ನು ಆಕೆಗೆ ಕುಡಿಸಿದನು ಆಗ ಅಲ್ಲಿ ಮಹಾ ಆನಂದವು ನಡೆಯಿತು. ॥ ೩೧೬ ॥ ಆಮೇಲೆ ಚಂದ್ರಾಂಗದನು ಸೀಮಂತಿನಿಗೆ ಕಲ್ಪವೃಕ್ಷದ

ಫಲಗಳನ್ನು ಕೊಟ್ಟು ಸಂತೋಷಬಡಿಸಿದನು. ಆಕೆಗೆ ಕೊಟ್ಟಂಥ ಅಮೌಲ್ಯ ವಸ್ತ್ರಾಭರಣಗಳ ಕಾಂತಿಯು ಹತ್ತು ಗಾವುದಗಳವರೆಗೆ ಹೋಯಿತು || ೩೧೭ || ಚಿತ್ರವರ್ಮನ ರಾಜಪರಿವಾರದವರಿಗೂ ಆ ರಾಜ್ಯದ ಸಕಲ ಪ್ರಜೆಗಳಿಗೂ ಆದ ಆನಂದಕ್ಕೆ ಪಾರವಿಲ್ಲದಂತಾಯಿತು. ಈಪ್ರಕಾರ ಇಂದ್ರಸೇನನು ಉತ್ಸಾಹದಿಂದ ಲಗ್ನಮಾಡಿ ಸೀಮಂತಿನಿಸಹಿತ ಸಕಲಪರಿವಾರದೊಡನೆ ತನ್ನ ಪಟ್ಟಣಕ್ಕೆ ನಡೆದನು. ಮೂರು ಲೋಕದಲ್ಲಿ ಸೀಮಂತಿನಿಯ ವೈಭವಕ್ಕೆ ಸರಿಯಿಲ್ಲದಂತಾಯಿತು || ೩೧೮ || ಆಗ ಆಕೆಯು ತನ್ನ ಪತಿಯ ಕೈಯನ್ನು ಹಿಡಕೊಂಡು ಸುಖ ಸಲ್ಲಾಪದ ಮಾತಾಡುತ್ತ ನಡೆದಿದ್ದಳು. ಈಪ್ರಕಾರ ಇಂದ್ರಸೇನನು ತನ್ನ ಪಟ್ಟಣಕ್ಕೆ ಹೋಗಿ ಚಂದ್ರಾಂಗದನಿಗೆ ರಾಜ್ಯಾಭಿಷೇಕಮಾಡಲು ಅವನು ೧೦ ಸಾವಿರ ವರುಷ ಸುಖದಿಂದ ರಾಜ್ಯವಾಳಿದನು. ಎಂದು ಸೂತನು ಆ ಋಷಿಗಳಿಗೆ ಹೇಳಿದನು. || ೩೧೯ || ಎಲೈ ಸುವಾಸಿನಿಯೇ ಕೇಳು, ಆ ಸೀಮಂತಿನಿಯು ಸೋಮವಾರ ಉಪ ವಾಸದಿಂದಲೂ ಭಕ್ತಿಯಿಂದಲೂ ಬಿಟ್ಟೂಬಿಡದೆ ಗೌರಿಹರನನ್ನು ಪೂಜಿಸಿದ ಪುಣ್ಯಪ್ರಭಾವದಿಂದ ಇಷ್ಟಾರ್ಥವನ್ನು ಪಡೆದಳು. || ೩೨೦ || ಆ ಸೋಮವಾರ ವ್ರತವು ಈಪ್ರಕಾರ ವಿಚಿತ್ರವಾಗಿರುವದು. ಆದ್ದರಿಂದ ನೀನೂ ನನ್ನ ಮಾತಿನಮೇಲೆ ವಿಶ್ವಾಸವಿಟ್ಟು ಆ ವ್ರತವನ್ನು ಮಾಡು, ಆದರಿಂದ ನಿನ್ನ ಹೆಳಲೂ, ಕಂಕಣಗಳೂ ಸೌಮಾಂಗಲ್ಯವೂ ಅಖಂಡವಾಗಿರುವವು ನಿನಗೆ ಅನೇಕ ಹೆಣ್ಣು ಗಂಡು ಮಕ್ಕಳಾಗುವರು ಎಂದು ಶ್ರೀಗುರುಗಳು ಆಕೆಗೆ ಪ್ರೀತಿಯಿಂದ ಹೇಳಿದರು. || ೩೨೧-೩೨೨ || ಶ್ರೀಗುರುಗಳ ಮಾತುಕೇಳಿ ಆ ದಂಪತಿಗಳು ವಿನಯದಿಂದ—ಸ್ವಾಮೀ ಗುರುಗಳೇ ತಮ್ಮ ಚರಣಸೇವೆಯೇ ನಮ್ಮ ಸರ್ವ ಮನೋರಥಗಳನ್ನು ಪೂರ್ಣಮಾಡುವದು ಅಂದಮೇಲೆ ನಮಗೆ ಬೇರೆ ವ್ರತವ್ಯಾತಕ್ಕೆಬೇಕು ? || ೩೨೩ || ನೀವು ನಮ್ಮ ಪ್ರಾಣನಾಯಕರಾಗಿರುವಿರಿ. ಆದ್ದರಿಂದ ನಮಗೆ ನಿಮ್ಮ ಹೊರತು ಬೇರೆ ಏನೂ ಗೊತ್ತಿಲ್ಲ. ತಮ್ಮ ಸ್ಮರಣಮಾತ್ರದಿಂದ ನಮಗೆ ಎಲ್ಲವೂ ಸಿದ್ಧಿಸುವವು ಎಂದು ಶ್ರೀಗುರು ಗಳ ಚರಣಗಳಿಗೆ ನಮಸ್ಕರಿಸಿದರು. || ೩೨೪ || ಆಗ ಶ್ರೀಗುರುಗಳು— ಎಲೈ ದಂಪತಿಗಳೇ, ನೀವು ನಮ್ಮ ಮಾತಿನಂತೆ ಆ ಸೋಮವಾರ ವ್ರತವನ್ನು ಮಾಡಿರಿ. ಆ ಸೇವೆಯೇ ನಮಗೆ ಮುಟ್ಟುವದು ಎಂದು ಹೇಳಿ

ದರು. || ೩೨೫ || ಶ್ರೀಗುರುಗಳ ಅಪ್ಪಣೆಯಂತೆ ಅವರು ಅಲ್ಲಿಯೇ ಸೋಮವಾರ ವ್ರತವನ್ನು ಹಿಡಿದು ಶ್ರೀಸಾಂಬ ಸದಾಶಿವನ ಪೂಜೆಯನ್ನು ಮಾಡಿದರು. ಆಮೇಲೆ ಆ ದಂಪತಿಗಳ ತಾಯಿ-ತಂದೆಗಳು ಅವರ ಭೆಟ್ಟಿಯ ಸಲುವಾಗಿ ಬಂದು || ೩೨೬ || ತಮ್ಮ ಮಕ್ಕಳಿಂದ ಎಲ್ಲ ಸಂಗತಿಯನ್ನು ಸಾದ್ಯಂತವಾಗಿ ಕೇಳಿ, ಅವರ ತಾಯಂದಿರು ಅತ್ಯಂತ ಸಂತೋಷವನ್ನು ಹೊಂದಿ, ಆತ್ಯಾನಂದದಿಂದ ಶ್ರೀಗುರುಗಳನ್ನು ಪೂಜಿಸಿ, ಅಪರಿಮಿತ ದ್ರವ್ಯವನ್ನು ಖರ್ಚು ಮಾಡಿ ಬ್ರಾಹ್ಮಣರ ಸಮಾರಾಧನೆ ಮಾಡಿದರು. ಆಮೇಲೆ ಆನಂದದಿಂದಲೂ ಭಕ್ತಿಯಿಂದಲೂ ಮತ್ತೆ ಅಹೋರಾತ್ರಿ ಅನೇಕ ಸಮಾರಂಭಗಳನ್ನು ಮಾಡಿದರು || ೩೨೭-೩೨೮ || ಈ ಪ್ರಕಾರವಾಗಿ ಆದಮೇಲೆ ಅವರೆಲ್ಲರೂ ಶ್ರೀ ಗುರುಗಳಿಗೆ ವಂದಿಸಿ, ಅವರ ಅಪ್ಪಣೆ ತಕ್ಕೊಂಡು ತಮ್ಮ ತಮ್ಮ ಊರುಗಳಿಗೆ ಹೋದರು ಈ ಸುದ್ದಿಯು ನಾಲ್ಕೂ ರಾಷ್ಟ್ರಗಳಲ್ಲಿ ಹಬ್ಬಿ ಶ್ರೀ ಗುರುಗಳ ಪ್ರಸಿದ್ಧಿಯು ಬಹಳವಾಯಿತು. || ೩೨೯ || ಮುಂದೆ ಶ್ರೀ ಗುರುಗಳ ಆಶೀರ್ವಾದದಿಂದ ಆ ದಂಪತಿಗಳಿಗೆ ಪೂರ್ಣಾಯುಷಿಗಳಾದ ೫ ಮಂದಿ ಮಕ್ಕಳಾದರು. || ೩೩೦ || ಆ ದಂಪತಿಗಳು ಪ್ರತಿವರುಷ ಗುರುಗಳ ದರ್ಶನಕ್ಕೆ ಗಾಣಗಾಪುರಕ್ಕೆ ಬರುತ್ತಿದ್ದರು. ಎಲೈ ಶಿಷ್ಯನಾದ ನಾಮ ಧಾರಕನೇ ಶ್ರೀ ಗುರುಗಳ ಮಹಾತ್ಮೆಯು ಈ ಪ್ರಕಾರವಾಗಿರುತ್ತದೆ. || ೩೩೧ || ಎಂದು ಸಿದ್ಧರು ಹೇಳುವ ಗುರುಚರಿತ್ರೆಯನ್ನು ನಾಮಧಾರಕನು ಅತಿ ಪ್ರೀತಿಯಿಂದ ಕೇಳುತ್ತಿದ್ದನೆಂದು || ೩೩೨ || ಗುರುಭಕ್ತನಾದ ಸರಸ್ವತೀ ಗಂಗಾಧರನು ಶ್ರೋತೃಗಳನ್ನು ಕುರಿತು ವಿನಯದಿಂದ— ಶ್ರೀ ಗುರು ನರಸಿಂಹ ಸರಸ್ವತಿ ಸ್ವಾಮಿಗಳು ವಂಶಪರಂಪರೆಯಾಗಿ ನಮ್ಮ ಗುರುಗಳೂ || ೩೩೩ || ಹಾಗು ಈ ಪ್ರಕಾರ ವರದ ಮೂರ್ತಿಗಳೂ ಆಗಿದ್ದಾರೆ. ಎಲ್ಲರೂ ಕೇಳಿರಿ. ಶ್ರೀ ಗುರುಗಳನ್ನು ಭಕ್ತಿಯಿಂದ ಸೇವಿಸಿದರೆ ಅವರು ತೀವ್ರವಾಗಿ ಪ್ರಸನ್ನರಾಗಿ ಭಕ್ತರ ಮನೋರಥಗಳನ್ನು ಪೂರ್ಣ ಮಾಡುವರು. ನೀವು ಮನಸ್ಸಿನಲ್ಲಿ ಏನೂ ಸಂದೇಹಮಾಡಬೇಡಿರಿ. || ೩೩೪ || ಸಕ್ಕರೆಯ ರುಚಿಯನ್ನು ಹೇಳಲಿಕ್ಕೆ ಬೇರೆ ಯಾತರ ಉಪಮಾ ಕೊಡಬೇಕು ? ಅದು ಮನಸ್ಸಿಗೆ ತಿಳಿದೇ ಇರುತ್ತದೆ. ಹಾಗು ಕೈಯೊಳಗಿನ ಕಂಕಣವನ್ನು ನೋಡಲಿಕ್ಕೆ ಕನ್ನಡಿಯು ಯಾತಕ್ಕೆ ಬೇಕು ? || ೩೩೫ || ಯತಿಗಳಾದ

ಶ್ರೀ ಗುರುಗಳ ಕೀರ್ತಿಯು ಎಲ್ಲಕಡೆಯಲ್ಲಿ ಹಬ್ಬಿ ಭೂಮಂಡಲದಲ್ಲಿ ಪ್ರಖ್ಯಾತವಾಯಿತು ಅವರ ಮಹಿಮೆಯ ದೃಷ್ಟಾಂತಗಳು ಪ್ರತ್ಯಕ್ಷವಾಗಿ ಕಂಡಮೇಲೆ ಪ್ರಮಾಣಿಸಿ ನೋಡುವ ಕಾರಣವೇನು ? ॥ ೩೬ ॥ ಯಾವತ್ತೂ ಜನರು ಕೇಳಿರಿ. ನಿಮಗೆ ಉತ್ತಮ ಹಿತವನ್ನು ಹೇಳುವೆನು. ಶ್ರೀ ಗುರುಗಳ ಸೇವೆಯನ್ನು ಮಾಡುವವರ ಮನಸ್ಸಿನ ಇಚ್ಛೆಗಳು ತೀವ್ರವಾಗಿ ಪೂರ್ಣವಾಗುವವು ॥ ೩೭ ॥ ಅಮೃತದ ಅರವಟ್ಟಿಗೆಯಲ್ಲಿ ಉತ್ತಮವಾದ ಅಮೃತವನ್ನು ಹಾಕಿಟ್ಟಿದೆ ಅದನ್ನು ಬೇಕಾದಷ್ಟು ಕುಡಿಯಿರಿ. ಅಂದರೆ ಅಮೃತದಂತಿರುವ ಗುರುಚರಿತ್ರೆಯನ್ನು ಒಳ್ಳೇ ಭಕ್ತಿ, ಪ್ರೀತಿಗಳಿಂದ ಓದಿರಿ ಹಾಗು ಕೇಳಿರಿ. ॥ ೩೮ ॥ ಗುರುಚರಿತ್ರೆಯು ಕಾಮಧೇನು ಸ್ವರೂಪವಾಗಿರುವದು. ಅದನ್ನು ಕೇಳಲು ಪತಿತನು ಸಹ ಪಾವನನಾಗುವನು ಇದಕ್ಕೆ ಕಾಮಧೇನುವೆಂಬ ಹೆಸರು. ಆದ್ದರಿಂದ ಈ ಗುರುಚರಿತ್ರೆಯು ಇಚ್ಛಿಸಿದ್ದನ್ನು ಕೊಡುವದು ॥ ೩೯ ॥ ಗುರುಚರಿತ್ರೆಯ ಈ ೩೫ನೇ ಅಧ್ಯಾಯದಲ್ಲಿ ವಿಖ್ಯಾತವಾದ ಸೀಮಂತಿನಿಯ ಆಖ್ಯಾನವನ್ನು ಹೇಳಿರುವದು. ॥ ೪೦ ॥

ಇತಿ ಶ್ರೀಗುರು ಚರಿತ್ರ ಪರಮಕಥಾ ಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ ಕಚ-ದೇವಯಾನಿ ಆಖ್ಯಾನ ಸಹಿತ ಸೀಮಂತಿನಿ ಆಖ್ಯಾನಂ ನಾಮ ಪಂಚ ತ್ರಿಂಶೋಽಧ್ಯಾಯಃ ॥ ೩೫ ॥ ಶ್ರೀ ಗುರುದೇವದತ್ತ ॥

— ೩೫ನೇ ಅಧ್ಯಾಯು ಸಮಾಪ್ತ —

—: ಇಲ್ಲಿಗೆ ೪ನೇ ದಿವಸದ ಸಪ್ತಾಹವು ಸಮಾಪ್ತವಾಯಿತು. :—

# ೩೬ನೇಯ ಅಧ್ಯಾಯ

## ಶ್ರೀಗುರುಗಳು ಬ್ರಾಹ್ಮಣಪತ್ನಿಯ ಪರಾನ್ನದ ಅಪೇಕ್ಷೆಯನ್ನು ಬಿಡಿಸಿ, ಆ ಬ್ರಾಹ್ಮಣನಿಗೆ ಬ್ರಾಹ್ಮಣರ ಆಚಾರ ಧರ್ಮಗಳನ್ನು ಹೇಳಿದ್ದು.

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಶಿಷ್ಯೋತ್ತಮ ನಾಮಧಾರಕನು ಸಿದ್ಧರ ಚರಣಗಳನ್ನು ಹಿಡಿದು, ವಿನಯ-ಭಕ್ತಿಗಳಿಂದ ಕೈಮುಗಿದು ॥ ೧ ॥ —ಸ್ವಾಮೀ, ಜಯ ಜಯ ಸಿದ್ಧ ಮುನಿಗಳೇ, ನೀವು ಭವಸಾಗರ ತಾರಕರೂ, ಬ್ರಹ್ಮಜ್ಞಾನಿಗಳೂ, ಅವಿದ್ಯಾ ಎಂಬ ಕತ್ತಲೆಗೆ ಸೂರ್ಯರೂ ಆಗಿದ್ದೀರಿ. ॥ ೨ ॥ ನಾನು ಮಾಯಾಮೋಹವೆಂಬ ರಾತ್ರಿಯಲ್ಲಿ ನಿದ್ರಿಸ್ತನಾಗಿ ಎಚ್ಚರಿಕೆಯಿಲ್ಲದವನಾಗಿದ್ದೆನು. ಕೃಪಾಸಾಗರ ಗುರುಗಳಾದ ತಾವು ನನ್ನನ್ನು ಎಚ್ಚರಿಸಿದಿರಿ. ॥ ೩ ॥ ಮತ್ತು ಕತ್ತಲೆಯನ್ನು ನಾಶ ಮಾಡುವ ಸೂರ್ಯರೂ, ಚಿನ್ಮಯಾತ್ಮರೂ ಆದ ತಾವು ನನಗೆ ದರ್ಶನ ಕೊಟ್ಟು, ನನ್ನನ್ನು ಈ ಭವಸಾಗರದಿಂದ ದಾಟಿಸಿದಿರಿ. ॥ ೪ ॥ ಹಾಗು ನನ್ನ ಅಜ್ಞಾನವೆಂಬ ಅಂಧಃಕಾರವನ್ನು ಕಳೆದು, ನನಗೆ ಜ್ಞಾನಾಮೃತವನ್ನು ಕುಡಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿದಿರಿ. ಸ್ವಾಮೀ, ಗುರುಕಥಾಮೃತವನ್ನು ಕೇಳುವದರಲ್ಲಿ ನನ್ನ ಮನಸ್ಸು ಇನ್ನೂ ತೃಪ್ತಿಯಾಗಿಲ್ಲ. ಆದಕಾರಣ ತಾವು ದಯಮಾಡಿ ಮುಂದೆ ಕಥೆಯು ಯಾವ ಪ್ರಕಾರವಾಗಿ ನಡೆಯಿತೆಂಬದನ್ನು ನನಗೆ ತೀವ್ರವಾಗಿಯೂ ವಿಸ್ತಾರವಾಗಿಯೂ ನಿರೂಪಿಸಬೇಕೆಂದು ಭಕ್ತಿಭಾವದಿಂದ ಬೇಡಿಕೊಂಡು ಅವರ ಪಾದಕ್ಕೆ ನಮಸ್ಕಾರ ಮಾಡಿದನು. ಆಗ ಸಿದ್ಧರು ಅವನ ತಲೆಯಮೇಲೆ ಅಭಯಕರವನ್ನಿತ್ತು ॥ ೫-೬-೭ ॥ —ಎಲೈ ನಾಮಧಾರಕನೇ, ಮುಂದೆ ಕಥೆಯು ಒಳ್ಳೇ ಸರಸವಾಗಿ ಆಯಿತು. ನೀನು ಏಕಚಿತ್ತದಿಂದ ಕೇಳು. ಅದರಿಂದ ಎಲ್ಲರಿಗೂ ಜ್ಞಾನವಾಗುವದು. ॥ ೮ ॥ ಶ್ರೀ ಗುರುಗಳು ಗಾಣಗಾಪುರದಲ್ಲಿದ್ದಾಗ ಅವರ ಮಹಿಮೆಯು

ಅಪರಂಪಾರವಾಗಿ ಬೆಳೆಯಿತು. ಆ ಮಹಿಮೆಯನ್ನೆಲ್ಲ ಹೇಳಹತ್ತಿದರೆ ಕಥೆಯು ವಿಸ್ತಾರವಾಗುವದು. ಆದರಿಂದ ಸಂಕ್ಷಿಪ್ತವಾಗಿ ಹೇಳುವೆನು. ॥ ೯ ॥ ಶ್ರೀ ಗುರುಗಳು ಸಾಕ್ಷಾತ್ ಶ್ರೀ ಹರಿಯ ಅವತಾರವಾದ್ದರಿಂದ ವಿಸ್ತಾರ ಹಾಗು ಅಪರಂಪಾರವಾದ ಅವರ ಮಹಿಮೆಯನ್ನು ವರ್ಣಿಸಲಿಕ್ಕೆ ಯಾರಿಗೂ ಶಕ್ಯವಿಲ್ಲ ॥ ೧೦ ॥ ಮುಂದೆ ಕೇಳು. ಆ ಗಾಣಗಾಪುರದಲ್ಲಿ ವೇದಜ್ಞನೂ ಬಹು ವಿರಕ್ತನೂ, ಬಹುಶ್ರುತನೂ, ಸತ್ಕರ್ಮದಿಂದ ನಡೆಯುವವನೂ ಆದ ಒಬ್ಬ ಬ್ರಾಹ್ಮಣನಿದ್ದನು. ॥ ೧೧ ॥ ಅವನು ಎಂದೂ ದಾನವನ್ನು ತಕ್ಕೊಳ್ಳುತ್ತಿದ್ದಿಲ್ಲ. ಪರಾನ್ನವನ್ನು ಉಣ್ಣು ತ್ತಿದ್ದಿಲ್ಲ ಸುಳ್ಳಾಡುತ್ತಿದ್ದಿಲ್ಲ ಮತ್ತು ಯಾರ ಸಂಗಡಲೂ ವಾದಿಸುತ್ತಿದ್ದಿಲ್ಲ ॥ ೧೨ ॥ ಅವನು ನಿತ್ಯ ಶುಷ್ಕ ಭಿಕ್ಷೆಯನ್ನು ಮಾಡಿ, ಅದರಿಂದ ಉದರಂಭರಣ ಮಾಡುತ್ತಿದ್ದನು. ಆದರೆ ಮನೆಯಲ್ಲಿ ಅವನ ಹೆಂಡತಿಯು ಮಾತ್ರ ಬಹು ಸಿಟ್ಟಿನವಳಾಗಿದ್ದಳು ॥ ೧೩ ॥ ಆ ಬ್ರಾಹ್ಮಣನು ತಾನು ನಿತ್ಯ ಯಾಚನೆ ಮಾಡಿ ಕಷ್ಟದಿಂದ ಸಂಸಾರ ಮಾಡುತ್ತಿದ್ದರೂ ಪ್ರತಿನಿತ್ಯ ಅತಿಥಿ-ಅಭ್ಯಾಗತರನ್ನು ಪೂಜಿಸುತ್ತ ಉಣ್ಣುತ್ತಿದ್ದನು. ಹಾಗೇ ಎಂದೂ ಉಣ್ಣು-ತ್ತಿದಿಲ್ಲ. ॥ ೧೪ ॥ ಅವನು ತನ್ನ ಹೆಂಡತಿಯನ್ನು ಸಹ ಎಲ್ಲಿಯೂ ಊಟಕ್ಕೆ ಕಳಿಸುತ್ತಿದ್ದಿಲ್ಲ. ಆ ಗ್ರಾಮಕ್ಕೆ ನಿತ್ಯ ಧನವಂತ ಗೃಹಸ್ಥರು ಬಂದು ನಿತ್ಯ ಸಮಾರಾಧನೆ ಮಾಡಿ ಸಹಸ್ರಗಟ್ಲೆ ಬ್ರಾಹ್ಮಣರಿಗೆ ಮಿಷ್ಟಾನ್ನ ಭೋಜನ ಮಾಡಿ ಸುತ್ತಿದ್ದರು. ॥ ೧೫ ॥ ಆಗ ಆ ಊರ ಬ್ರಾಹ್ಮಣ-ಮುತ್ತೈದೆಯರೆಲ್ಲರೂ ದಿನಾಲು ಆ ಸಮಾರಾಧನೆಯಲ್ಲಿ ಊಟ ಮಾಡುತ್ತಿದ್ದರು. ಅವರಲ್ಲಿ ಕೆಲವರು ಆ ಬ್ರಾಹ್ಮಣನ ಹೆಂಡತಿಯ ಹತ್ತರ ಬಂದು, ತಾವು ಊಟ ಮಾಡಿದ ಪಕ್ವಾನ್ನಗಳನ್ನು ಸವಿಸವಿಯಾಗಿ ವರ್ಣಿಸಿ ಹೇಳುತ್ತಿದ್ದರು. ॥ ೧೬ ॥ ಅವಳು ಅದನ್ನು ಕೇಳಿ ನಾನಾರೀತಿಯಾಗಿ ದುಃಖಿಸಿ ಮನಸ್ಸಿನಲ್ಲಿ ಮಿಡುಕುತ್ತ— ಸ್ವಾಮೀ, ಶಂಕರಾ, ಶ್ರೀಹರೀ ನಾರಾಯಣಾ, ನಾವೆಂಥಾ ಅದೃಷ್ಟ-ಹೀನರು ! ನಾವು ಸ್ವಪ್ನದಲ್ಲಾದರೂ ಇಂಥ ಮಿಷ್ಟಾನ್ನವನ್ನು ಕಾಣೆವು ! ದರಿದ್ರನಾದ ಪತಿಯನ್ನು ಮಾಡಿ ಕೊಂಡು ನಾನು ಸದಾ ಕಷ್ಟಬಡತ್ತಿರುವೆನು ॥ ೧೭-೧೮ । ದೇವಾ, ನನ್ನ ಪೂರ್ವಜನ್ಮದಲ್ಲಿ ಮಾಡಿದ ಕರ್ಮ ದಂತೆ ಈಗ ನನಗೆ ಇಂಥ ದರಿದ್ರನೂ ಹೀನನೂ ಆದ ಪತಿಯು ದೊರಕಿ ಸದಾ ದರಿದ್ರತನದಿಂದ ವರ್ತಿಸು

ಸ್ತ್ರೀಯೆ. ॥ ೧೯ ॥ ಈ ಊರ ಯಾವತ್ತು ಬ್ರಾಹ್ಮಣರು ಪೂರ್ವದಲ್ಲಿ ಮಾಡಿದ ಸುಕೃತದಿಂದ ಈಗ ತಮ್ಮ ಸ್ತ್ರೀಯರೊಡನೆ ಹೋಗಿ ನಿತ್ಯ ಪರಾನ್ನವನ್ನು ಉಣ್ಣುತ್ತಿರುವರು. ಅವರು ದೈವಾನರು. ॥ ೨೦ ॥ ನನ್ನ ಪತಿಯು ದೈವಹೀನನು! ಎಂದೂ ಪರಾನ್ನಭೋಜನಕ್ಕೆ ಹೋಗುವದಿಲ್ಲ. ನಾರಾಯಣಾ, ಏನು ಮಾಡಲಿ? ಎಂದು ಮನಸ್ಸಿನಲ್ಲಿ ಬಹು ಚಿಂತಿಸುತ್ತಿದ್ದಳು. ॥ ೨೧ ॥ ಹೀಗಿರುವಾಗ ಒಂದು ದಿವಸ ಮಹಾ ಧನಿಕನಾದ ಒಬ್ಬ ಬ್ರಾಹ್ಮಣನು ಶ್ರಾದ್ಧ ಮಾಡಬೇಕು ಮತ್ತು ಬ್ರಾಹ್ಮಣ ದಂಪತ್ತುಗಳಿಗೆ ಭೋಜನ ಮಾಡಿಸಬೇಕೆಂದು ಗಾಣಗಾಪುರಕ್ಕೆ ಬಂದನು. ॥ ೨೨ ॥ ಆಮೇಲೆ ಅವನು ಅಲ್ಲಿಯ ಅನೇಕ ಬ್ರಾಹ್ಮಣ ದಂಪತಿಗಳಿಗೆ ಆಮಂತ್ರಣ ಕೊಟ್ಟನು. ಅದರಂತೆ ಬ್ರಾಹ್ಮಣನ ಪತ್ನಿಗೂ ಆಮಂತ್ರಣ ಕೊಡಲಿಕ್ಕೆ ಬಂದನು ॥ ೨೩ ॥ ಆಗ ಆಕೆಯು ಕೂಡಲೆ ತನ್ನ ಪತಿಯ ಹತ್ತರ ಬಂದು— ಸ್ವಾಮೀ, ಪ್ರಾಣೇಶ್ವರನೇ, ಈ ದಿವಸ ದಂಪತ್ತು ಭೋಜನಕ್ಕೆ ಬರಬೇಕೆಂದು ನಮಗೆ ಆಮಂತ್ರಣ ಕೊಡಲಿಕ್ಕೆ ಬಂದಿದ್ದಾರೆ. ॥ ೨೪ ॥ ಅಲ್ಲಿ ನಾನಾತರದ ಪಕ್ವಾನ್ನಗಳ ಊಟವಾಗುವದಲ್ಲದೆ, ಮೇಲೆ ವಸ್ತ್ರಗಳೂ ಅಪಾರ ದಕ್ಷಿಣೆಯೂ ದೊರೆಯುವವು. ॥ ೨೫ ॥ ಆದ್ದರಿಂದ ತಾವು ಆಮಂತ್ರಣಕ್ಕೆ ಒಪ್ಪಬೇಕು. ಇಲ್ಲದಿದ್ದರೆ ನನಗಾದರೂ ಹೋಗಲಿಕ್ಕೆ ಅಪ್ಪಣೆ ಕೊಡಬೇಕು. ಯಾಕಂದರೆ ಮಿಷ್ಟಾನ್ನವನ್ನುಣ್ಣಬೇಕೆಂದು ನನಗೆ ಬಹಳ ಇಚ್ಛೆಯಾಗಿದೆ ಎಂದು ಹೇಳಿದಳು. ॥ ೨೬ ॥ ಆಕೆಯ ಮಾತು ಕೇಳಿ ಆ ಬ್ರಾಹ್ಮಣನು— ಎಲೈ ಸ್ತ್ರೀಯೇ, ನಾನಂತೂ ಪರಾನ್ನಭೋಜನಕ್ಕೆ ಬರುವದಿಲ್ಲ. ನೀನೊಬ್ಬಳೇ ಹೋಗಿ ಸುಖವಾಗಿ ಊಟ ಮಾಡಿ ಬಾ. ಅದಕ್ಕೆ ನನ್ನದೇನೂ ಅಡ್ಡಿಯಿಲ್ಲ ಎಂದು ಹೇಳಿದನು. ॥ ೨೭ ॥ ಈ ಪ್ರಕಾರ ಆಕೆಯು ಪತಿಯ ಆಜ್ಞೆಯನ್ನು ಹೊಂದಿ, ಆ ಧನಿಕನ ಹತ್ತರ ಬಂದು— ಅಯ್ಯಾ, ನನ್ನ ಪತಿಯು ಪರಾನ್ನಕ್ಕೆ ಬರುವದಿಲ್ಲ. ನಾನೊಬ್ಬಳೇ ಬರುವೆನು. ಬರಲ್ಯೋ ಹ್ಯಾಗೆ? ಎಂದು ಕೇಳಿದಳು ॥ ೨೮ ॥ ಆಗ ಆ ಧನಿಕನು— ಅಮ್ಮಾ, ನಾನು ದಂಪತ್ತಭೋಜನ ಮಾಡಿಸಬೇಕೆಂದು ಬಂದಿದ್ದೇನೆ. ನೀವು ದಂಪತಿಗಳಿಬ್ಬರೂ ಭೋಜನಕ್ಕೆ ಬರುವದಾದರೆ ಬರಬೇಕು ಎಂದನು. ॥ ೨೯ ॥ ಆ ಧನಿಕನ ಮಾತು ಕೇಳಿ ಆ ಸ್ತ್ರೀಯು ಮನಸ್ಸಿನಲ್ಲಿ ಬಹಳ ಖೇದಬಟ್ಟು— ಇನ್ನೇನುಮಾಡಲಿ?

ಎಂದು ಮನಸ್ಸಿನಲ್ಲಿ ವಿಚಾರ ಮಾಡುತ್ತ ॥ ೩೦ ॥ ನನ್ನ ದೈವವು ಎಂಥಾ ಕೆಟ್ಟದ್ದಾಯಿತಲ್ಲಾ ! ಈ ಪತಿಯು ಕಾಲೊಳಗೆ ನಾನು ಸ್ವಪ್ನದಲ್ಲಿ ಸಹ ಮಿಷ್ಟಾನ್ನವನ್ನು ಕಾಣೆನು. ॥ ೩೧ ॥ ಎಂದು ಮನಸ್ಸಿನಲ್ಲಿ ವಿಚಾರ ಮಾಡುತ್ತ ಅವಳು ಹಾಗೆಯೇ ಶ್ರೀಗುರು ನರಸಿಂಹ ಸರಸ್ವತಿಗಳ ಹತ್ತರ ಬಂದು ಸಾಷ್ಟಾಂಗ ನಮಸ್ಕಾರ ಮಾಡಿ, ಬಹು ವಿನಯದಿಂದ— ॥ ೩೨ ॥ ಸ್ವಾಮೀ, ನಮಗೆ ಮಿಷ್ಟಾನ್ನ ಭೋಜನದ ಔತಣಗಳು ಬರುತ್ತವೆ. ಆದರೆ ನನ್ನ ಪತಿಯು ಎಂದೂ ಪರಾನ್ನಕ್ಕೆ ಹೋಗುವದಿಲ್ಲ ಆದರಿಂದ ನಾನು ಎಂದೂ ಮಿಷ್ಟಾನ್ನವನ್ನು ಕಾಣುವಂತಿಲ್ಲ. ಏನು ಮಾಡಬೇಕು ? ನನಗೆ ಪರಾನ್ನ ಉಣ್ಣಬೇಕೆಂಬ ಇಚ್ಛೆ ಬಹಳ ಅದೆ. ॥ ೩೩ ॥ ಸ್ವಾಮೀ, ಇವತ್ತಿನ ದಿವಸ ಒಬ್ಬ ಧನಿಕನು ಬಂದು ನಮಗೆ ದಂಪತ್ತ ಭೋಜನಕ್ಕೆ ಹೇಳಲಿಕ್ಕೆ ಬಂದಿದ್ದನು. ಆದರೆ ನನ್ನ ಪತಿಯು ಅದಕ್ಕೆ ಒಪ್ಪಲಿಲ್ಲ. ಇದಕ್ಕೇನು ಮಾಡಲಿ ? ॥ ೩೪ ॥ ಸ್ವಾಮೀ, ಈಗ ತಾವು ನನ್ನ ಮೇಲೆ ಕೃಪಾಮಾಡಿ ನನ್ನ ಪತಿಯನ್ನು ಕರೆಯಿಸಿ— ಈ ದಿನ ಶ್ರಾದ್ಧದ ಔತಣದಲ್ಲಿ ಮಿಷ್ಟಾನ್ನ ಭೋಜನವಾಗುವದಲ್ಲದೆ ವಸ್ತ್ರಗಳೂ, ದಕ್ಷಿಣೆಯೂ ದೊರೆಯುವವು ಕಾರಣ ನೀನು ಊಟಕ್ಕೆ ಹೋಗೆಂದು ನನ್ನ ಪತಿಗೆ ಹೇಳಿರಿ ಎಂದಳು. ॥ ೩೫ ॥ ಆಕೆಯ ಮಾತು ಕೇಳಿ ಶ್ರೀ ಗುರುಗಳು ನಕ್ಕು ಕೂಡಲೆ ಆ ಬ್ರಾಹ್ಮಣನನ್ನು ಕರೆಯಿಸಿ ಹೇಳುತ್ತಾರೆ— ॥ ೩೬ ॥ ಎಲೈ ಬ್ರಾಹ್ಮಣನೇ, ಕೇಳು. ನಿನ್ನ ಹೆಂಡತಿಯ ಮನಸ್ಸಿನಲ್ಲಿ ಮಿಷ್ಟಾನ್ನವನ್ನುಣ್ಣಬೇಕೆಂಬ ಇಚ್ಛೆಯು ಬಹಳ ವಾಗಿದೆ. ॥ ೩೭ ॥ ಆದಕಾರಣ ಈ ದಿನ ನೀನು ಆ ಔತಣಕ್ಕೆ ಹೋಗಿ ನಿನ್ನ ಸತಿಯ ಮನಸ್ಸಿನ ಇಚ್ಛೆಯನ್ನು ಪೂರ್ಣ ಮಾಡು. ಕುಲಸ್ತ್ರೀಯರ ಮನಸ್ಸು ಸದಾ ದುಃಖಿಸುವಂಥಾದ್ದಿರಬಾರದು ಎಂದು ಹೇಳಿದರು. ॥ ೩೮ ॥ ಅವರ ಮಾತು ಕೇಳಿ ಆ ಬ್ರಾಹ್ಮಣನು ವಿನಯದಿಂದ ಕೈ ಮುಗಿದು— ಸ್ವಾಮೀ, ನಾನು ಎಂದೂ ಪರಾನ್ನವನ್ನು ತಕ್ಕೊಳ್ಳಬಾರದೆಂದು ನೇಮ ಮಾಡಿದ್ದೇನೆ. ಆದರೆ ಗುರುಗಳಾಜ್ಞೆಯನ್ನು ಸಿರಸಾವಹಿಸಿ ಈ ದಿನ ನಾನು ಊಟಕ್ಕೆ ಹೋಗುವೆನು. ॥ ೩೯ ॥ ಯಾವನು ಗುರುಗಳಾಜ್ಞೆಯನ್ನು ನಡಿಸುವದಿಲ್ಲವೋ ಅವನು ರೌರವ ನರಕ ವನ್ನು ಹೊಂದುವನು ಎಂದನು. ॥ ೪೦ ॥ ಅವನು ಈ ಪ್ರಕಾರ ಗುರುಗಳ ಮಾತನ್ನು ಕೇಳಿ ತನ್ನ ಹೆಂಡತಿ

ಯನ್ನು ಕರಕೊಂಡು ಭೋಜನಕ್ಕೆ ಹೊರಟನು. ಆಗ ಅವನ ಹೆಂಡತಿಗೆ ಬಹಳ ಆನಂದವಾಯಿತು. ‖ ೪೧ ‖ ಆಮೇಲೆ ಆ ಧನಿಕ ಬ್ರಾಹ್ಮಣನು ತನ್ನ ಪಿತ್ರನಾಮವನ್ನು ಉಚ್ಚರಿಸಿ, ಸಂಕಲ್ಪಮಾಡಿ, ಉಳಿದ ಎಲ್ಲ ದಂಪತಿಗಳನ್ನು ಪೂಜಿಸಿದಂತೆ, ಈ ದಂಪತಿಗಳನ್ನೂ ಪೂಜಿಸಿ ಅನೇಕ ಮಿಷ್ಟಾನ್ನಗಳನ್ನು ಬಡಿಸಿದನು. ‖ ೪೨ ‖ ಭೋಜನ ಮಾಡುವ ಕಾಲದಲ್ಲಿ ಆ ಬ್ರಾಹ್ಮಣ ಸ್ತ್ರೀಯ ಕಣ್ಣಿಗೆ ನಾಯಿ-ಹಂದಿಗಳು ಬಂದು ತಮ್ಮ ಎಲೆಗಳಲ್ಲಿ ತಮ್ಮ ಸಂಗಡ ಬಹು ಆನಂದದಿಂದ ಉಣ್ಣುವಂತೆ ವಿಪರೀತವಾಗಿ ಕಾಣಿಸಿತು. ‖ ೪೩ ‖ ಆಗ ಆವಳು ಮನಸಿನಲ್ಲಿ ಅಸಹ್ಯಬಟ್ಟು, ಕೂಡಲೆ ತಾನು ಊಟಮಾಡುವ ಅನ್ನವನ್ನು ಬಿಟ್ಟು ಎದ್ದು, ಅಲ್ಲಿ ಊಟಮಾಡುತ್ತಿರುವ ಯಾವತ್ತೂ ಸ್ತ್ರೀ-ಪುರುಷರನ್ನು ಕುರಿತು— ಎಲೈ ನಾವೆಲ್ಲರು ನಾಯಿ-ಹಂದಿಗಳ ಎಂಜಲವನ್ನು ತಿಂದೆವು ಎಂದು ಹೇಳಿ, ‖೪೪‖ ಚಿಂತಾಕ್ರಾಂತಳಾಗಿ ಹಾಗೆಯೇ ಮನೆಗೆ ಬಂದು ತನ್ನ ಪತಿಗೆ— ನಾವು ಈದಿನ ನಾಯಿ-ಹಂದಿಗಳ ಎಂಜಲವನ್ನು ತಿಂದೆವೆಂದು ಹೇಳಿದಳು. ‖ ೪೫ ‖ ಆಗ ಆ ಬ್ರಾಹ್ಮಣನು— ಎಲೈ ಸ್ತ್ರೀಯಳೇ, ನಾನೂ ದೈವಹೀನನಾದ್ದರಿಂದ ನಿನ್ನ ದೆಶೆಯಿಂದ ನನಗೂ ಪರಾನ್ನ ಭೋಜನವು ಘಟಿಸಿ, ನಾನೂ ನಾಯಿ-ಹಂದಿಗಳ ಎಂಜಲವನ್ನು ತಿನ್ನುವ ಪ್ರಸಂಗ ಬಂತು. ‖ ೪೬ ‖ ಎಂದು ಹೆಂಡತಿಗೆ ಅಂದು ಅವರಿಬ್ಬರೂ ಗುರುಗಳ ಹತ್ತರ ಬಂದು ಭಕ್ತಿಯಿಂದ ಅವರಿಗೆ ನಮಸ್ಕರಿಸಿದರು. ‖ ೪೭ ‖ ಆಗ ಶ್ರೀಗುರುಗಳು ಆಕೆಯನ್ನು ಕುರಿತು— ಅಮ್ಮಾ, ಪರಾನ್ನದ ಸುಖವು ಹೇಗಿತ್ತು ? ನೀನು ಸದಾ ಪತಿಯನ್ನು ದೂಷಿಸುತ್ತಿದ್ದಿ, ಈಗ ನಿನ್ನ ಮನೋರಥವು ಪೂರ್ಣವಾಯಿತೇ ? ಎಂದು ಕೇಳಿದರು. ‖ ೪೮ ‖ ಅವರ ಮಾತು ಕೇಳಿ ಆಕೆಯು ಶ್ರೀಗುರುಚರಣಗಳಿಗೆ ನಮಸ್ಕರಿಸಿ ಕೈಮುಗಿದು ವಿನಯದಿಂದ— ಸ್ವಾಮೀ, ನನ್ನ ಅಪರಾಧವನ್ನು ಕ್ಷಮಿಸಿರಿ. ‖ ೪೯ ‖ ಮಂದಮತಿಯಾದ ನಾನು ಜುಲುಮೆಯಿಂದ ನನ್ನ ಪತಿಯನ್ನು ಪರಾನ್ನಕ್ಕೆ ಕರಕೊಂಡು ಹೋಗಿ ಅವರಿಗೆ ದೋಷವನ್ನುಂಟುಮಾಡಿದೆನು. ತಾವು ನನ್ನನ್ನು ಕ್ಷಮಿಸಬೇಕು ಎಂದು ಹೇಳಿಕೊಂಡಳು. ‖ ೫೦ ‖ ಆಗ ಚಿಂತಾಯುಕ್ತನಾದ ಆ ಬ್ರಾಹ್ಮಣನು— ಸ್ವಾಮಿ ಗುರುಗಳೇ, ನಾನು ಪರಾನ್ನತಕ್ಕೊಳ್ಳಬಾರದೆಂದು ಮನಸಿನಲ್ಲಿ ಸಂಕಲ್ಪಮಾಡಿದ್ದೆನು. ಆದರೆ ನನಗೆ ಈ

ಅ ೩೬

ವೈರಿಯಾದ ಹೆಂಡತಿಯು ಸಿಕ್ಕದ್ದರಿಂದ ನನ್ನ ವ್ರತಭಂಗವಾಗಿ ನನಗೆ ಅಪಾರವಾದ ದೋಷವು ಬಂತು, ಏನು ಮಾಡಲಿ? ಎಂದನು. || ೫೧–೫೨ || ಅವನ ಮಾತುಕೇಳಿ ಶ್ರೀಗುರುಗಳು ನಕ್ಕು— ಎಲೈ ಬ್ರಾಹ್ಮಣನೇ, ಈಗ ನೀನು ನಿನ್ನ ಹೆಂಡತಿಯ ವಾಸನಾ ಪೂರ್ಣಮಾಡಿದಿ ಅದರಿಂದ ಈಗ ಆಕೆಯ ಮನಸ್ಸು ಸಮಾಧಾನ ವಾಯಿತು. || ೫೩ || ಇನ್ನುಮೇಲೆ ಈಕೆಯು ಎಂದೂ ಪರಾನ್ನವನ್ನು ಇಚ್ಛಿಸುವದಿಲ್ಲ. ನೀನು ಹೇಳಿದಂತೆ ಕೇಳುವಳು. ನೀನು ಏನೂ ಚಿಂತೆಮಾಡಬೇಡ ನಿನಗೆ ಏನೂ ದೋಷವಿಲ್ಲೆಂದು ತಿಳಿ. || ೫೪ || ಯಾತರಿಂದ ಸಹಜವಾಗಿ ಧರ್ಮ ಘಟಿಸುವದೋ ಅಂಥ ಒಂದು ಮಾತು ಹೇಳುವೆನು ಕೇಳು. ಯಾವನಾದರೊಬ್ಬ ಮನುಷ್ಯನಿಗೆ ದೇವ-ಪಿತೃಕರ್ಮ ಮಾಡುವಾಗ ಒಬ್ಬನೂ ಬ್ರಾಹ್ಮಣನು ಸಿಗದೆ ಅವನ ಕಾರ್ಯಕ್ಕೆ ಅಡ್ಡಿಯಾದರೆ ಆಗ ನೀನು ಅಲ್ಲಿ ಊಟಕ್ಕೆ ಹೋಗಬೇಕು ಅದಕ್ಕೆ ದೋಷವಿಲ್ಲ. ಆಗ ನೀನು ಹೋಗದಿದ್ದರೆ ಮಾತ್ರ ನಿನಗೆ ಅನಂತ ದೋಷವು ಬರುವದೆಂದು ತಿಳಿ ಎಂದು ಹೇಳಿದರು || ೫೫–೫೬ ||

ಅವರ ಮಾತು ಕೇಳಿ ಆ ಬ್ರಾಹ್ಮಣನು ಕೈಮುಗಿದು ಸಾಷ್ಟಾಂಗ ನಮಸ್ಕಾರಮಾಡಿ— ಸ್ವಾಮೀ ನನ್ನ ವಿನಂತಿಯನ್ನು ಕೇಳಿರಿ. || ೫೭ || ಯಾರ ಮನೆಯಲ್ಲಿ ಊಟಮಾಡಬೇಕು? ಯಾರ ಮನೆಯ ಅನ್ನವು ದೋಷಕರವು? ಯಾರ ಮನೆಗೆ ಎಂದೂ ಊಟಕ್ಕೆ ಹೋಗಬಾರದು ಎಂಬದನ್ನು ನನಗೆ ನಿರೂಪಿಸಬೇಕೆಂದು ಪ್ರಾರ್ಥಿಸಿದನು || ೫೮ || ಈಪ್ರಕಾರ ಆ ಬ್ರಾಹ್ಮಣನ ಮಾತು ಕೇಳಿ ಶ್ರೀಗುರುಗಳು ಅವನು ಕೇಳಿದ ಪ್ರಶ್ನೆಗೆ ಸರಿಯಾದ ಉತ್ತರವನ್ನು ಸವಿಸ್ತಾರವಾಗಿ ಹೇಳುವರು. ಎಲೈ ಶ್ರೋತೃಗಳೇ ನೀವೂ ಸಮಾಧಾನದಿಂದ ಕೇಳಿರಿ. || ೫೯ || ಆಗ ಶ್ರೀಗುರುಗಳು— ಎಲೈ ಬ್ರಾಹ್ಮಣನೇ, ನೀನು ಊಟಮಾಡುವ ಮನೆಗಳನ್ನು ಕೇಳುತ್ತೀ, ಹೇಳುವೆನು ಕೇಳು ತಮ್ಮ ಗುರುಗಳ ಹಾಗು ಶಿಷ್ಯರ ಮನೆಗಳಲ್ಲಿ ಊಟಾವಾಡಬೇಕು. || ೬೦ || ವಿದ್ವಾಂಸ ವೈದಿಕರ ಮನೆಯಲ್ಲಿ, ಸೋದರಮಾವನ ಮನೆಯಲ್ಲಿ, ಹೆಣ್ಣುಕೊಟ್ಟ ಮಾವನ ಮನೆಯಲ್ಲಿ, ಸಹೋದರ ಮೊದಲಾದ, ಸಾಧುಜನರ ಮನೆಯಲ್ಲಿ ಅವಶ್ಯವಾಗಿ ಊಟಮಾಡಬೇಕು. || ೬೧ || ಇವುಗಳ ಹೊರತು ಉಳಿದವರ

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

ಮನೆಗೆ ಬ್ರಾಹ್ಮಣನು ಸಿಗದೆ ಕಾರ್ಯಕ್ಕೆ ಅಡ್ಡಿಯಾದರೆ ಆಗ ಅವರ ಮನೆಗೆ ನಿರ್ವಾಹವಿಲ್ಲದೆ ಹೋದರೆ ಗಾಯತ್ರೀ ಜಪಮಾಡಬೇಕು ಅಂದರೆ ದೋಷ ಬರುವದಿಲ್ಲ ಎಂದು ಹೇಳಿದರು. ॥ ೬೨ ॥ ಆಗ ಆ ಬ್ರಾಹ್ಮಣನು— ಸ್ವಾಮಿ ಗುರುಗಳೇ ನಿಷಿದ್ಧ ಅನ್ನಗಳ್ಯಾವು ? ಯಾರ ಮನೆಯಲ್ಲಿ ಉಣ್ಣಬಾರದೆಂಬದನ್ನು ಹೇಳಿರಿ ಅಂದನು. ॥ ೬೩ ॥ ಆಗ ಗುರುಗಳು— ಎಲೈ ಬ್ರಾಹ್ಮಣಾ, ಇನ್ನು ಋಷಿಗಳಿಂದ ಪ್ರಣೀತವಾದ ಸ್ಮೃತಿಚಂದ್ರಿಕೆಯಲ್ಲಿ ಹೇಳಿದಂತೆ ನಿನಗೆ ಕ್ರಮವಾಗಿ ಅವರಂಪಾರವಾವ ಉಣ್ಣಬಾರದವರ ಮನೆಗಳನ್ನು ಹೇಳುವೆನು ಕೇಳು. ॥ ೬೪ ॥ ನಿತ್ಯ ತಂದೆ-ತಾಯಿಗಳಿಂದ ನೇವಿಸಿಕೊಳ್ಳುವ ದೋಷಿಯ ಮನೆಯಲ್ಲಿ, ಧನಲೋಭಿ ಬ್ರಾಹ್ಮಣನ ಮನೆಯಲ್ಲಿ, ಉಣ್ಣ ಬಾರದು ॥ ೬೫ ॥ ಪುತ್ರ-ಕಲತ್ರಾದಿಗಳನ್ನು ಕಷ್ಟಬಡಿಸಿ ವಿಪ್ರರಿಗೆ ದಾನಧರ್ಮಮಾಡುವವನ ಮನೆಯಲ್ಲಿ ಉಣ್ಣಬಾರದು. ಉಂಡರೆ ದೋಷ ಬರುವದು ॥ ೬೬ ॥ ಗರ್ವಿಷ್ಠನ ಮನೆಯಲ್ಲಿ, ಚಿತ್ರಗಾರನ ಮನೆಯಲ್ಲಿ, ಶಸ್ತ್ರಧಾರಿಯ ಮನೆಯಲ್ಲಿ, ಮಲ್ಲಯುದ್ಧಗಾರ ಬ್ರಾಹ್ಮಣನ ಮನೆಯಲ್ಲಿ, ವೀಣಾ ಬಾರಿಸುವವರ ಮನೆಯಲ್ಲಿ ॥೬೭॥ ಬಹಿಷ್ಕೃತ ಬ್ರಾಹ್ಮಣನ ಮನೆಯಲ್ಲಿ ಯಾಚಕತನದಿಂದ ಊಟಮಾಡುವವನ ಮನೆಯಲ್ಲಿ, ಆತ್ಮಸ್ತುತಿಮಾಡಿ ಕೊಳ್ಳುವವನ ಮನೆಯಲ್ಲಿ, ಪರನಿಂದಕನ ಮನೆಯಲ್ಲಿ ॥ ೬೮ ॥ ಬಹುಜನರು ಬಂದು ಅನ್ನವನ್ನುಮಾಡಿ ಬೇರೆ ವೈಶ್ವದೇವಮಾಡದ ಬ್ರಾಹ್ಮಣನ ಮನೆಯಲ್ಲಿ ಉಣ್ಣಬಾರದು ಉಂಡರೆ ಮಹಾ ದೋಷ ಬರುವದು. ॥ ೬೯ ॥ ಕೇಳು (ಎಲ್ಲರಿಗೂ ಗುರುವೆಂದಿಸಿಕೊಂಡು ತಾನು ಉಪದೇಶಕೊಟ್ಟ ಶಿಷ್ಯನು ದುರ್ಜನತೆಯುಳ್ಳವನಾದರೆ ಆ ಗುರುವಿನ ಮನೆಯಲ್ಲಿ ಉಣ್ಣಬಾರದು ) ॥ ೭೦ ॥ ಸದಾ ಸಿಟ್ಟುಳ್ಳ ಬ್ರಾಹ್ಮಣನ ಮನೆಯಲ್ಲಿ, ಸ್ತ್ರೀಯನ್ನು ಬಿಟ್ಟ ಪುರುಷನ ಮನೆಯಲ್ಲಿ ॥ ೭೧ ॥ ಧನಗರ್ವಿತನ ಮನೆಯಲ್ಲಿ, ತಾಮಸಿಯ ಮನೆಯಲ್ಲಿ, ಕೃಪಣನ ಮನೆಯಲ್ಲಿ, ನಿರ್ದಯನ ಮನೆಯಲ್ಲಿ, ವ್ಯಭಿಚಾರಿಯ ಮನೆಯಲ್ಲಿ, ಡಾಂಭಿಕ ಹಾಗು ದುರಾಚಾರಿ ಬ್ರಾಹ್ಮಣನ ಮನೆಯಲ್ಲಿ ॥ ೭೨ ॥ ಗಂಡ ಮತ್ತು ಮಕ್ಕಳನ್ನು ಬಿಟ್ಟು ಬೇರೆಯಾಗಿರುವ ಬ್ರಾಹ್ಮಣ ಸ್ತ್ರೀಯಳ ಮನೆಯಲ್ಲಿ, ॥ ೭೩ ॥ ಸ್ತ್ರೀಜಿತನ ಮನೆಯಲ್ಲಿ, ಸುವರ್ಣಕಾರ ಬ್ರಾಹ್ಮಣನ ಮನೆಯಲ್ಲಿ, ಸದಾ ಭಿಕ್ಷೆಬೇಡುವವನ ಮನೆಯಲ್ಲಿ ಉಣ್ಣ

ಬಾರದು ಅದರಿಂದ ಮಹಾ ದೋಷ ಬರುವದು. ॥ ೭೪ ॥ ಖಳನಾದ ರಾಜಸೇವಕನ ಮನೆಯಲ್ಲಿ, ಲೋಹ ಮತ್ತು ಕಟ್ಟಿಗೆ ಒಡೆಯುವವನ ಮನೆಯಲ್ಲಿ, ಅಗಸನ ಮನೆಯಲ್ಲಿ ॥ ೭೫ ॥ ಮದ್ಯಪಾನಮಾಡುವವನ ಮನೆಯಲ್ಲಿ, ಉದರಪೂರ್ತಿಯಾಚನೆ ಮಾಡುವವನ ಮನೆಯಲ್ಲಿ, ಸೂಳೆಯರಲ್ಲಿ, ಬ್ರಾಹ್ಮಣನು ದಾನ ತಕ್ಕೊಳ್ಳಬಾರದು. ॥ ೭೬ ॥ ಕಳ್ಳತನದ ವಿದ್ಯಾ ಇದ್ದವನ ಮನೆಯಲ್ಲಿ, ದ್ವಾರಪಾಲಕನ ಮನೆಯಲ್ಲಿ, (ಕುಟಿಲ) ಮೋಸಗಾರನ ಮನೆಯಲ್ಲಿ ಅನ್ನ ತಕ್ಕೊಂಡರೆ ಮಹಾ ದೋಷ ಬರುವದು ॥ ೭೭ ॥ ಶೂದ್ರನಿಂದ ದುಡ್ಡು ತಕ್ಕೊಂಡು ಅಧ್ಯಯನಮಾಡಿಸುವ ಬ್ರಾಹ್ಮಣನ ಮನೆಯಲ್ಲಿ, ಕುಮಾರಿಗಳನ್ನು ಮಾರುವ ಬ್ರಾಹ್ಮಣನ ಮನೆಯಲ್ಲಿ ಉಣ್ಣಬಾರದು. ॥ ೭೮ ॥ ಭಾಗವತ ಕೀರ್ತನ ಇಲ್ಲದವನ ಮನೆಯಲ್ಲಿ, ಜೂಜುಗಾರನ ಮನೆಯಲ್ಲಿ, ಅತಿ ನಿಷ್ಠುರನ ಮನೆಯಲ್ಲಿ, ಸ್ನಾನವಿಲ್ಲದೆ ಊಟಮಾಡುವವನ ಮನೆಯಲ್ಲಿ ಉಣ್ಣಬಾರದು ॥ ೭೯ ॥ ಸಾಯಂಸಂಧ್ಯಾಮಾಡದವನ ಮನೆಯಲ್ಲಿ, ಎಂದೂ ದಾನಮಾಡದವನ ಮನೆಯಲ್ಲಿ, ಪಿತೃಕರ್ಮ ಬಿಟ್ಟವನ ಮನೆಯಲ್ಲಿ ಉಣ್ಣಬಾರದು. ॥ ೮೦ ॥ ದಾಂಭಿಕತನದಿಂದ ಜಪಮಾಡುವವನ ಮನೆಯಲ್ಲಿ, ಕಪಟತನದಿಂದ ಜಪಮಾಡುವವನಲ್ಲಿ, ದ್ರವ್ಯ ತಕ್ಕೊಂಡು ಜಪಮಾಡುವವನ ಮನೆಯಲ್ಲಿ ಉಣ್ಣಬಾರದು ॥ ೮೧ ॥ ಸಾಲಕೊಟ್ಟು ಉಪಕಾರ ತೋರಿಸಿ ಅನ್ಯಾಯದಿಂದ ದ್ರವ್ಯ ಸಂಚಯಮಾಡುವವನ ಮನೆಯಲ್ಲಿ ॥ ೮೨ ॥ ವಿಶ್ವಾಸಘಾತಕಿಯ ಮನೆಯಲ್ಲಿ, ಅನೀತಿಯುಳ್ಳವನ ಮನೆಯಲ್ಲಿ, ಪಕ್ಷಪಾತನಮಾಡುವವನ ಮನೆಯಲ್ಲಿ, ಸ್ವಧರ್ಮಬಿಟ್ಟು ದುರಾಚಾರಿಯಾದವನ ಮನೆಯಲ್ಲಿ, ಹಿರಿಯರ ಆಚಾರಗಳನ್ನು ಬಿಟ್ಟವನ ಮನೆಯಲ್ಲಿ ಉಣ್ಣಬಾರದು. ॥ ೮೩ ॥ ವಿದ್ವಾಂಸ ಹಾಗು ಸಾಧುಗಳಾದ ಬ್ರಾಹ್ಮಣರನ್ನು ಅತಿ ದ್ವೇಷಿಸುವವನ ಮನೆಯಲ್ಲಿ ಉಣ್ಣಬಾರದು. ॥ ೮೪ ॥ ಕುಲದೇವರನ್ನೂ ತಾಯಿ-ತಂದೆಗಳನ್ನೂ ಬಿಟ್ಟು ದೂರ ಹೋದಂಥವನ ಮನೆಯಲ್ಲಿ, ತಮ್ಮ ಗುರುವನ್ನೇ ನಿಂದಿಸುವವನ ಮನೆಯಲ್ಲಿ ॥ ೮೫ ॥ ಗೋ-ಬ್ರಾಹ್ಮಣ-ಸ್ತ್ರೀ ವಧ ಮಾಡುವವನ ಮನೆಯಲ್ಲಿ ॥ ೮೬ ॥ ಸದಾ ಆಶಾಬದ್ಧನಾಗಿ, ಸದಾ ಒಬ್ಬರ ಬಾಗಿಲವನ್ನು ಹಿಡಿದು ಧರಣೇವಾಚೀ ಕೂತು ಆಗ್ರಹದಿಂದ ದಾನ ತಕ್ಕೊಳ್ಳುವವನ

ಮನೆಯಲ್ಲಿ ಉಣ್ಣಬಾರದು. || ೮೭ || ಸಮಸ್ತ ಜಾತಿಯವರಿಗೆ ಶರಣು ಮಾಡುವವನು ಚಾಂಡಾಲನ ಸಮಾನನೆಂದು ತಿಳಿದು ಅವನ ಮನೆಯಲ್ಲಿ, ಬ್ರಾಹ್ಮಣರಿಗೆ ನಮಸ್ಕಾರ ಮಾಡದವನ ಮನೆಯಲ್ಲಿ || ೮೮ || ಸದಾ ಸಿಟ್ಟಿನಿಂದ ತನ್ನ ಮಗಳು ಹಾಗು ಅಳಿಯನನ್ನು ದೂಷಿಸುವಂಥವನ ಮನೆಯಲ್ಲಿ, ಮಕ್ಕಳಿಲ್ಲದವರ ಮನೆಯಲ್ಲಿ || ೮೯ || ತಾನು ಮನೆಯಲ್ಲಿ ಪಂಚಮಹಾಯಜ್ಞವನ್ನು ಮಾಡಿ, ೨ನೇಯವರ ಮನೆಯಲ್ಲಿ ಉಂಡವನಿಗೆ ಪರಪಾಕ ಮಾಡುವವನೆಂಬ ಹೆಸರು ಬರುವದರಿಂದ ಅವನ ಮನೆಯಲ್ಲಿ ಉಣ್ಣಬಾರದು. || ೯೦ || ಲಗ್ನವಾದನಂತರವಾದರೂ ಪಂಚಮಹಾಯಜ್ಞ ಮಾಡದವನ ಮನೆಯಲ್ಲಿ, ಸ್ಥಾಲೀಪಾಕನಿ ವೃತ್ತಿಯನ್ನು ತಿಳಿಯದವನ ಮನೆಯಲ್ಲಿ ಉಣ್ಣಬಾರದು. || ೯೧ || ತನ್ನ ಮನೆಯ ಅನ್ನವನ್ನು ದೂಷಣಮಾಡಿ ಪರಾನ್ನವನ್ನು ಸ್ತುತಿಸುವವನ ಮನೆಯಲ್ಲಿ ಅನ್ನ ತೆಗೆದುಕೊಂಡರೆ ಅಂಧಕ ಮತ್ತು ಅಲ್ಪಾಯುಷಿಯೂ ಆಗುವನು || ೯೨ || ಅಡಿಗೆಯನ್ನು ಮಾಡಿ ಉದರಂಭರಣ ಮಾಡುವವನ ಮನೆಯಲ್ಲಿ ಉಂಡವನು ಕುರುಡನೂ, ಕಿವುಡನೂ, ಮೇಧಾಶಕ್ತಿ ಇಲ್ಲದವನೂ, ಹೀನ ಶರೀರದವನೂ ಆಗಿ ಅಲ್ಪಾಯುಷಿಯಾಗುವನು. ಕಾರಣ ಅಡಿಗೆಯವರ ಮನೆಯಲ್ಲಿ ಉಣ್ಣಬಾರದು. ||೯೩-೯೪|| ತಾನು ಗೃಹಸ್ಥನಾಗಿದ್ದು ದಾನ-ಧರ್ಮ ಮಾಡದೆ ಇದ್ದವನಿಗೆ 'ಅಪಚ' ಎಂಬ ಹೆಸರು. ಅಂಥವನ ಮನೆಯಲ್ಲಿ ಉಣ್ಣಬಾರದು. || ೯೫ || ತಾನು ಪರಗೃಹದಲ್ಲಿ ವಾಸ ಮಾಡಿ ಪರಾನ್ನವನ್ನುಣ್ಣುವ ಬ್ರಾಹ್ಮಣನ ಪುಣ್ಯವೆಲ್ಲ ಆ ಮನೆಯ ಯಜಮಾನನಿಗೆ ಹೋಗುತ್ತದೆಂದು ತಿಳಿ. || ೯೬ || ಮತ್ತು ಪರರ ಮನೆಯಲ್ಲಿದ್ದು ಪರಾನ್ನವನ್ನು ಸ್ಪರ್ಶ ಮಾಡಿದವನಿಗೆ ಕೂಡಲೆ ಆ ಯಜಮಾನನ ಪಾಪವು ಬಂದು ಸೇರುವದು. ಆದಕಾರಣ ಆ ಅನ್ನವು ನಿಷಿದ್ಧವಾದ್ದರಿಂದ ಪರಾನ್ನವನ್ನುಣ್ಣಬಾರದು. || ೯೭ || ಪರರಿಂದ ಭೂ-ಗೋ-ಸುವರ್ಣ, ರತ್ನ, ಗಜ, ಕುದುರೆಗಳನ್ನು ದಾನ ತಕ್ಕೊಂಡರೆ ದೋಷವಿಲ್ಲ. ಆದರೆ ಪರಾನ್ನವನ್ನು ತಕ್ಕೊಳ್ಳುವದರಿಂದ ಅತಿ ದೋಷ ಬರುವದು. || ೯೮ || ಪರಾನ್ನ ತಕ್ಕೊಳ್ಳುವಂಥ ಬ್ರಾಹ್ಮಣನಿಗೆ ಸಮಸ್ತ ಪಾಪಗಳು ಬರುವವು. ಆದರಂತೆ ಪರಸ್ತ್ರೀ ಸಂಗ ಮಾಡಿದರೂ ನರಕವಾಗುವದು. || ೯೯ || ಪರಗೃಹದಲ್ಲಿ ವಾಸ ಮಾಡುವವನ ಐಶ್ವರ್ಯವು ಬೇಗ ನಾಶವಾಗು

ವದು. ಅಮವಾಸ್ಯೆಯ ದಿವಸ ಪರಾನ್ನವನ್ನುಂಡರೆ ಒಂದು ತಿಂಗಳ ಪುಣ್ಯವು ಹೋಗುವದು. ॥ ೧೦೦ ॥ ಕರೆಯದೆ ಮುದ್ದಾಂ ಸಾಯಂಕಾಲಕ್ಕೆ ಪರಾನ್ನಕ್ಕೆ ಹೋದರೆ ದೋಷ ಬರುವದು. ಶೂದ್ರನು ಊಟಕ್ಕೆ ಕರೆಯಲಿಕ್ಕೆ ಬಂದರೆ ಹೋಗಬಾರದು. ॥ ೧೦೧ ॥ ತನ್ನ ಮಗಳು ಹಡೆಯುವ ತನಕ ಆಕೆಯ ಮನೆಗೆ ಊಟಕ್ಕೆ ಹೋಗಬಾರದು. ಆಕೆಗೆ ಮಕ್ಕಳಾದ ನಂತರ ಆನಂದದಿಂದ ಹೋಗಬೇಕು. ॥ ೧೦೨ ॥ ಸೂರ್ಯ-ಚಂದ್ರ ಗ್ರಹಣ ಕಾಲಗಳಲ್ಲಿ ದಾನ ತಕ್ಕೊಳ್ಳಬಾರದು. ಹಡೆದ ವೃದ್ಧಿ ಹಾಗು ಸತ್ತ ಸೂತಕ ಇದ್ದವರ ಮನೆಗೆ ಊಟಕ್ಕೆ ಹೋಗಬಾರದು. ॥ ೧೦೩ ॥ ಎಲೈ ಬ್ರಾಹ್ಮಣನೇ, ಈ ರೀತಿ ಬ್ರಾಹ್ಮಣರ ಆಚಾರಗಳನ್ನು ತಿಳಿದು ಆಚರಿಸುವವನಿಗೆ ಬಡತನವು ಎಂದೂ ಬರುವದಿಲ್ಲ ॥ ೧೦೪ ॥ ಸಮಸ್ತ ದೇವತೆಗಳೂ ಅವನ ವಶರಾಗುವದಲ್ಲದೆ ಅಷ್ಟಸಿದ್ಧಿಗಳುಂಟಾಗುವವು. ಅವನ ಮನೆಯಲ್ಲಿ ಕಾಮಧೇನುವು ನಿರಂತರ ವಾಸಿಸುವಳು. ॥ ೧೦೫ ॥ ಬ್ರಾಹ್ಮಣರು ಮಧಾಂದರಾಗಿ, ಆಚಾರವನ್ನು ಬಿಟ್ಟು ಧರ್ಮಭ್ರಷ್ಟರಾದ್ದರಿಂದ ಅವರು ಸದಾ ಬಡತನದಿಂದ ಜೀವಿಸುತ್ತ ದುಃಖಿಸುತ್ತಿರುವರು ಎಂದು ಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. ॥ ೧೦೬ ॥ ಆಮೇಲೆ ಮತ್ತೆ ಆ ಬ್ರಾಹ್ಮಣನು ಶ್ರೀ ಗುರುಗಳಿಗೆ ಕೈ ಮುಗಿದು— ಸ್ವಾಮೀ, ದಯಾನಿಧಿಯೇ, ಕೃಪಾಸಾಗರನೇ, ತ್ರೈಮೂರ್ತಿ ಅವತಾರನೇ, ಭಕ್ತೋದ್ಧಾರಕನೇ, ಗುರುಗಳೇ ತಾವು ನನಗೆ ಬ್ರಾಹ್ಮಣರ ಸಕಲ ಆಚಾರ ಧರ್ಮಗಳನ್ನು ಹೇಳಬೇಕು ಎಂದು ಬೇಡಿಕೊಂಡನು. ॥ ೧೦೭-೧೦೮ ॥ ಆಗ ಶ್ರೀ ಗುರುಗಳು— ಎಲೈ ಬ್ರಾಹ್ಮಣನೇ, ನೀನು ಬ್ರಾಹ್ಮಣರ ಆಚಾರ ಧರ್ಮಗಳನ್ನು ಕೇಳುತ್ತೀ. ಪೂರ್ವದಲ್ಲಿ ಋಷಿಗಳು ಆಚರಿಸಿದಂಥ ಧರ್ಮಗಳನ್ನು ಹೇಳುತ್ತೇನೆ ಕೇಳು. ॥೧೦೯॥ ಪೂರ್ವದಲ್ಲಿ ಅನೇಕ ಜನ ಋಷಿಗಳು ನೈಮಿಷಾರಣ್ಯದಲ್ಲಿ ಬಹು ದಿವಸದಿಂದ ತಪಸ್ಸು ಮಾಡುತ್ತಿದ್ದರು. ಆಗ ಅಲ್ಲಿಗೆ ಪರಾಶರ ಋಷಿಗಳು ಬರಲು ಅವರಿಗೆ ಆ ಎಲ್ಲ ಋಷಿಗಳೂ ನಮಸ್ಕಾರ ಮಾಡಿದರು. ॥ ೧೧೦ ॥ ಆಮೇಲೆ ಯಾವತ್ತು ಋಷಿಗಳು ಕೂಡಿ ವಿನಯದಿಂದ ಕೈಮುಗಿದು— ಸ್ವಾಮೀ, ಪರಾಶರ ಋಷಿಗಳೇ, ಬ್ರಾಹ್ಮಣರ ಆಚಾರಗಳನ್ನು ಹ್ಯಾಗೆ ಆಚರಿಸಬೇಕು ? ॥ ೧೧೧ ॥ ಈಗ ನಾವು ಕೆಲವು ಆಚಾರಿಗಳನ್ನು ಮಾಡುತ್ತೇವೆ. ಆದರೆ

ನಮ್ಮ ಮನಸ್ಸಿನಲ್ಲಿ ಕೆಲವು ಸಂಶಯ ಬಂದಿವೆ ತಾವು ಬ್ರಹ್ಮ ಋಷಿಗಳಾದ್ದರಿಂದ ತಮ್ಮನ್ನು ಕೇಳಿಕೊಳ್ಳುತ್ತೇವೆ. ನೀವು ನಮಗೆ ಅವುಗಳನ್ನು ಉಪದೇಶ ಮಾಡಬೇಕು ॥ ೧೧೨ ॥ ಗುರೂಪದೇಶದ ಹೊರತು ಯಾವದೇ ಮಂತ್ರವು ಗ್ರಾಹ್ಯವೂ ಪವಿತ್ರವೂ ಆಗುವದಿಲ್ಲ. ಅಂಥ ಸದ್ಗುರುಗಳೂ ಸತ್ಪಾತ್ರರೂ ಆದ ತಾವು ನಮಗೆ ದಯಮಾಡಿ ಆ ಎಲ್ಲ ಆಚಾರ ಧರ್ಮಗಳನ್ನು ಹೇಳಬೇಕು, ಎಂದು ಪ್ರಾರ್ಥಿಸಿದರು. ॥ ೧೧೩ ॥ ಆಗ ಪರಾಶರರು— ಎಲೈ ಋಷಿಗಳಿರಾ, ನಿಮಗೆ ಬ್ರಾಹ್ಮಣರ ಎಲ್ಲ ಆಚಾರ ಧರ್ಮಗಳನ್ನು ಹೇಳುವೆನು ನೀವು ಅದರಂತೆ ಆಚರಿಸಿದರೆ ಪ್ರಯಾಸವಿಲ್ಲದೆ ನಿಮಗೆ ಸರ್ವಸಿದ್ಧಿಯಾಗುವದು. ಎಂದು ಹೇಳಹತ್ತಿದರು. ಎಲೈ ಬ್ರಾಹ್ಮಣನೇ ನೀನು ಏಕಚಿತ್ತ ದಿಂದ ಕೇಳು ಎಂದು ಶ್ರೀಗುರುಗಳು ಅಂದು ಪರಾಶರರು ಹೇಳಿದಂತೆ ಕ್ರಮವಾಗಿ ಹೇಳಹತ್ತಿದರು— ॥ ೧೧೪ ॥

## ಬ್ರಾಹ್ಮಣರ ಆಚಾರ ಧರ್ಮಗಳು

ಪರಾಶರರು— ಬ್ರಾಹ್ಮಣನಾದವನು ರಾತ್ರಿ ೪ನೇ ಯಾಮದಲ್ಲಿ ಬ್ರಾಹ್ಮ್ಯ ಮುಹೂರ್ತದಲ್ಲಿ ಅಂದರೆ ೫ ಘಳಿಗೆ ರಾತ್ರಿ ಇರುತ್ತ ಎಚ್ಚರಾಗಿ ಹಾಸಿಗೆಯ ಮೇಲೆಯೇ ಕೂತು ಶ್ರೀ ಗುರುಗಳನ್ನು ಸ್ಮರಿಸಿ, ಆಮೇಲೆ ಬ್ರಹ್ಮ-ವಿಷ್ಣು-ಮಹೇಶ್ವರರನ್ನೂ ॥ ೧೧೫ ॥ ಸೂರ್ಯಾದಿ ನವಗ್ರಹಗಳನ್ನೂ, ಸನತ್ಕುಮಾರ-ಸನಂದನ-ಸನಾತನ ರನ್ನೂ ॥ ೧೧೬ ॥ ನಾರದ-ತುಂಬರರನ್ನೂ, ಸಕಲ ಸಿದ್ಧರನ್ನೂ ಯೋಗಿಗಳನ್ನೂ ಸಪ್ತ ಸಮುದ್ರಗಳನ್ನೂ ಸಪ್ತ ಪಿತೃ ದೇವತೆಗಳನ್ನೂ ॥ ೧೧೭ ॥ ಸಪ್ತಪರ್ವತ, ಸಪ್ತಋಷಿ, ಸಪ್ತದ್ವೀಪ, ಸಪ್ತಭುವನಗಳನ್ನೂ ಸ್ಮರಿಸಬೇಕು. ಈ ಪ್ರಕಾರ ಪ್ರಾತಃಸ್ಮರಣಾವಿಧಿ ಇರುತ್ತದೆ. ॥ ೧೧೮ ॥ ಆಮೇಲೆ ಹಾಸಿಗೆಯಿಂದ ಎದ್ದು ಎರಡು ಆಚಮನ ಮಾಡಬೇಕು. ಬಳಿಕ ಮೂತ್ರವಿಸರ್ಜನೆ ಮಾಡಿ ಬಂದು ಶುದ್ಧಾಚಮನ ಮಾಡಬೇಕು. ॥ ೧೧೯ ॥ ಎಲೈ ಋಷಿಗಳೇ ಆಯಾ ಸಮಯದಲ್ಲಿ ಮಾಡುವ ಆಚಮನ ವಿಧಿಯನ್ನು ಹೇಳುತ್ತೇನೆ ಕೇಳಿರಿ ಎಂದು ಪರಾಶರರು ಹೇಳಹತ್ತಿದರು. ॥ ೧೨೦ ॥ ಸ್ನಾನದ ಪೂರ್ವದಲ್ಲಿ, ಸ್ನಾನವಾದನಂತರ, ನೀರು ಕುಡಿಯುವಾಗ, ಮಲಗುವಾಗ,

ಎದ್ದಾಗ, ॥ ೧೨೧ ॥ ಊಟಕ್ಕೆ ಕೂಡ್ರುವಾಗ, ಊಟವಾದಮೇಲೆ, ಅಧೋವಾಯು ಬಂದಾಗ, ಕೆಟ್ಟ ಪದಾರ್ಥ ನೋಡಿದಾಗ, ॥ ೧೨೨ ॥ ಆಕಳಿಸಿದಾಗ, ಸೀತಾಗ, ಮೂತ್ರ ವಿಸರ್ಜನೆ ಮಾಡಿ ಕೈಕಾಲು ತೊಳೆದುಕೊಂಡ ಮೇಲೆ ಎರಡೆರಡು ಆಚಮನ ಮಾಡಬೇಕು. ಅಂದರೆ ಮನುಷ್ಯನು ಶುದ್ಧನಾಗುವನು. ॥ ೧೨೩ ॥ ಒಂದುವೇಳೆ ಆಚಮನಕ್ಕೆ ಹತ್ತರ ನೀರಿಲ್ಲದಿದ್ದರೆ ಶ್ರೋತ್ರಾಚಮನ ಮಾಡಬೇಕು. ಅಂದರೆ ಬಲಗಿವಿಯನ್ನು ಮುಟ್ಟಬೇಕು. ಆದರಿಂದ ಬ್ರಾಹ್ಮಣನು ಶುದ್ಧನಾಗುವನು. ॥ ೧೨೪ ॥ ಯಾಕಂದರೆ ಬ್ರಾಹ್ಮಣನ ಬಲಗಿವಿಯಲ್ಲಿ ಅಗ್ನಿ , ನೀರು, ಚಂದ್ರ, ವರುಣ, ಸೂರ್ಯ, ಇಂದ್ರ, ವಾಯು ಎಂಬ ಸಪ್ತದೇವತೆಗಳು ಗುಪ್ತವಾಗಿರುವರು. ಆದಕಾರಣ ಬಲಗಿವಿಯಲ್ಲಿ ಮುಟ್ಟಿದಕೂಡಲೇ ಆಚಮನದ ಫಲವು ಬಂದು ಬ್ರಾಹ್ಮಣನು ಶುದ್ಧನಾಗುವನು. ಎಲೈ ಋಷಿಗಳೇ ಮುಂದೆ ಕೇಳಿರಿ. ॥ ೧೨೫-೧೨೬-೧೨೭ ॥ ಈ ಮೊದಲು ಹೇಳಿದಂತೆ ಮೂತ್ರವಿಸರ್ಜನೆ ಮಾಡಿ ಸಾಧಾರಣ ಕೈಕಾಲು ಮೋರೆ ತೊಳಕೊಂಡು ಎರಡು ಆಚಮನ ಮಾಡಿದಮೇಲೆ ಮೌನವೆಂಬ ಸ್ನಾನವನ್ನು ಮಾಡಿ, ಅರುಣೋದಯವಾಗುವವರೆಗೆ ಶುದ್ಧಾಸನದಲ್ಲಿ ಕೂತು ॥ ೧೨೮ ॥ ಗಾಯತ್ರೀ ಮಂತ್ರದ ಹೊರತು ಉಳಿದ ಮಂತ್ರ ಸ್ತೋತ್ರಗಳನ್ನು ಅಂದು ಪವಿತ್ರನಾಗಬೇಕು. ಅರುಣೋದಯವಾದಮೇಲೆ ಬಹಿರ್ಭೂಮಿಗೆ ಹೋಗಬೇಕು ॥೧೨೯॥

## ಬಹಿರ್ಭೂಮಿಯ ವಿಧಿ

ಬಹಿರ್ಭೂಮಿಗೆ ಹೋಗುವಾಗ ಜನಿವಾರವನ್ನು ಬಲಗಿವಿಗೆ ಸುತ್ತಿ, ತಲೆಗೆ ವಂಜೆ ಅಥವಾ ದೋತರವನ್ನು ಸುತ್ತಿಕೊಂಡು, ನೈಋತ್ಯದಿಕ್ಕಿಗೆ ಹೋಗಿ, ಹಗಲು ಉತ್ತರ ಮುಖವಾಗಿ, ರಾತ್ರಿ ದಕ್ಷಿಣ ಮುಖವಾಗಿ ಕೆಳಗೆ ಮೋರೆ ಮಾಡಿಕೊಂಡು ಕೂತು, ವಿವೇಕಿಯಾದವನು ಮೋರೆ ಮೇಲೆ ಮಾಡಿ ನಾಲ್ಕೂಕಡೆಗೆ ಸೂರ್ಯ, ಚಂದ್ರ, ನಕ್ಷತ್ರ, ಆಕಾಶ, ಸ್ತ್ರೀ ಮುಂತಾದವರನ್ನು ನೋಡದೆ ಮೌನವಾಗಿರಬೇಕು. ॥ ೧೩೦-೧೩೧-೧೩೨ ॥ ಶುದ್ಧನಾಗದೆ ಕಚ್ಚೆಯನ್ನು ಹಾಕಿದರೆ ಮತ್ತು ಮೂತ್ರ-ವಿಸರ್ಜನೆಯ ಕಾಲದಲ್ಲಿ ಕಚ್ಚೆಯನ್ನು ಕಳೆಯದಿದ್ದರೆ

ಅವನು ಯಮಪುರಕ್ಕೆ ಹೋಗಿ ನರಕವನ್ನು ಅನುಭವಿಸಬೇಕಾಗುವದು. ॥ ೧೩೩ ॥ ನೀರಿಲ್ಲದ ಪ್ರಸಂಗದಲ್ಲಿ ಬಹಿರ್ಭೂಮಿಗೆ ಹೋದರೆ ಗಂಗೆಯನ್ನು ಸ್ಮರಿಸಿ ಮಣ್ಣಿನಿಂದ ಶುದ್ಧಿ ಮಾಡಿಕೊಳ್ಳಬೇಕು. ಆಗ ಏನೂ ತಿನ್ನಬಾರದು. ಎಂದು ಅಂದು ॥ ೧೩೪ ॥ ಪರಾಶರರು ಮತ್ತೆ— ಎಲೈ ಋಷಿಗಳೇ ಇನ್ನು ಬಹಿರ್ಭೂಮಿಗೆ ಕೂಡ್ರುವ ಸ್ಥಳಗಳನ್ನು ಹೇಳುವೆನು ಕೇಳಿರಿ. ॥ ೧೩೫ ॥ ಕೇವಲ ಭೂಮಿಯಮೇಲೆ ಮಲ-ವಿಸರ್ಜನೆ ಮಾಡಬಾರದು, ಒಣಗಿದ ಎಲೆ ಅಥವಾ ಹುಲ್ಲಮೇಲೆ ಕೂಡ್ರಬೇಕು. ಹಸರು ಎಲೆಗಳಮೇಲೆ ಕೂಡ್ರಬಾರದು ॥೧೩೬॥ ಯಾವ ಬ್ರಾಹ್ಮಣನು ನಿಂತು ಮೂತ್ರ ಹೊಯ್ಯುತ್ತಾನೋ ಅವನ ಗತಿಯನ್ನು ಏನು ಹೇಳಲಿ! ಅವನ ಮೈಯಲ್ಲಿರುವ ಕೂದಲಗಳಷ್ಟು ವರುಷ ನರಕದಲ್ಲಿರುವನು ॥ ೧೩೭ ॥ ಮುಂದೆ ಕೇಳಿರಿ, ಮಲ-ವಿಸರ್ಜನೆ ಮಾಡಿ, ಕೈಯಲ್ಲಿ ಶಿಶ್ನವನ್ನು ಹಿಡಕೊಂಡು ಎದ್ದು, ನೀರಿನ ಪಾತ್ರೆಯ ಹತ್ತರ ಹೋಗಿ ಶುದ್ಧ ಮಾಡಿಕೊಂಡು, ಆಮೇಲೆ ಮಣ್ಣಿನಿಂದ ಶುದ್ಧ ಮಾಡಿಕೊಳ್ಳಬೇಕು. ॥ ೧೩೮ ॥ ಆಗ ಶುದ್ಧಿಗೆ ಯಾವ ಮಣ್ಣು ತರಬಾರದು ಯಾವ ಮಣ್ಣು ತರಬೇಕು ಎಂಬದನ್ನು ಹೇಳುವೆನು ಕೇಳಿರಿ. ಇರಿವೆಹುತ್ತಿನ ಮಣ್ಣು, ಇಲಿಗುದ್ದಿನ ಮಣ್ಣು, ನದಿಯೊಳಗಿನ ಮಣ್ಣು, ॥ ೧೩೯ ॥ ಜನರು ಓಡಾಡುವ ದಾರಿಯಲ್ಲಿಯ ಮಣ್ಣು, ಗಿಡದ ಬುಡದಲ್ಲಿಯ ಮಣ್ಣು, ದೇವಾಲಯದೊಳಗಿನ ಮಣ್ಣು, ತೀರ್ಥಕ್ಷೇತ್ರಗಳಲ್ಲಿಯ ಮಣ್ಣು ತರಬಾರದು. ॥ ೧೪೦ ॥ ಸೇದುವ ಹಾಗು ಇಳಿಯುವ ಬಾವಿಗಳಲ್ಲಿಯ ಮಣ್ಣು, ಕೆರೆ-ಹೊಂಡ-ಸರೋವರಗಳಲ್ಲಿಯ ಮಣ್ಣು ತರಬೇಕು ಆದರಿಂದ ಬಹು ಪುಣ್ಯವುಂಟು. ಮೊದಲು ಆ ಮಣ್ಣಿಗೆ ನೀರಿನಿಂದ ಪ್ರೋಕ್ಷಿಸಿ ಶುದ್ಧತ್ವಕ್ಕೆ ತಕ್ಕೊಳ್ಳಬೇಕು. ॥ ೧೪೧ ॥ ನೆಲ್ಲಿಕಾಯಿಯಷ್ಟು ಮಣ್ಣಿನ ಗುಳಿಗೆಗಳನ್ನು ಮಾಡಿ ಲಿಂಗಕ್ಕೆ ಒಂದು, ಅಪಾನದ್ವಾರಕ್ಕೆ ೫ ಗುಳಿಗೆ ಹಚ್ಚಿ ತೊಳೆಯಬೇಕು. ಒಂದೊಂದು ಕೈಗೆ ಹತ್ತತ್ತು ಹಚ್ಚಿ ತೊಳೆಯಬೇಕು. ॥ ೧೪೨ ॥ ಒಂದೊಂದು ಕಾಲಿಗೆ ಏಳೇಳು ಗುಳಿಗೆ ಹಚ್ಚಿ ತೊಳೆಯಬೇಕು, ಎಲೈ ಋಷಿಗಳೇ ನಿಮಗೆ ಇನ್ನೂ ಕೆಲವು ಮಾತು ಹೇಳುವೆನು ಕೇಳಿರಿ. ॥೧೪೩॥ ಈ ಪ್ರಕಾರ ಮೃತ್ತಿಕಾಶುದ್ಧಿಯನ್ನು ಮೂತ್ರ-ವಿಸರ್ಜನೆಯ ಕಾಲದಲ್ಲಿ ಒಮ್ಮೆ, ಮಲವಿಸರ್ಜನೆಯ ಕಾಲದಲ್ಲಿ

ಎರಡುಸಾರೆ, ಮೈಥುನಾಂತ್ಯದಲ್ಲಿ ಮೂರುಸಾರೆ ಮಾಡಿಕೊಳ್ಳಬೇಕು. ॥ ೧೪೪ ॥ ಇನ್ನೊಂದು ಪ್ರಕಾರವದೆ. ಈ ರೀತಿಯಾಗಿ ಗೃಹಸ್ಥನು ಆಚರಿಸಬೇಕು ಬ್ರಹ್ಮಚಾರಿಯು ಇದರ ಎರಡಷ್ಟು ॥ ೧೪೫ ॥ ವಾನಪ್ರಸ್ಥನು ಇದರ ಮೂರಷ್ಟು, ಸನ್ಯಾಸಿಯು ಇದರ ನಾಲ್ಕಷ್ಟು ವೃತ್ತಿಕೆಯಿಂದ ಶುದ್ಧ ಮಾಡಿಕೊಳ್ಳಬೇಕೆಂಬದನ್ನು ಲಕ್ಷದಲ್ಲಿಡಬೇಕು. ನ್ಯೂನತೆಯಿಲ್ಲದೆ ಈ ಪ್ರಕಾರ ಮಾಡಿದರೆ ಧರ್ಮ ಸಿದ್ಧಿಯಾಗುವದು. ॥೧೪೬॥ ಹಗಲು ಈ ರೀತಿ ಆಚರಿಸಬೇಕು. ರಾತ್ರಿ ಇದರ ಅರ್ಧ, ಸಂಕಟಕಾಲದಲ್ಲಿಯೂ ದಾರೀ ನಡೆಯುವಾಗಲೂ ಅದರ ಅರ್ಧ ಆಚರಿಸಬೇಕು. ॥ ೧೪೭ ॥ ಮುಂಜಿ ಮಾಡಿಕೊಂಡವನೂ ಈ ರೀತಿ ಆಚರಿಸಬೇಕು. ಈ ಶುದ್ಧಿಯು ೪ ವರ್ಷದವರಿಗೆ ಇರುತ್ತದೆ ॥ ೧೪೮ ॥ ಮಲವಿಸರ್ಜನೆಮಾಡಿ ಶುದ್ಧನಾದಮೇಲೆ ಕಚ್ಚಿಹಾಕಿಕೊಂಡು ಬ್ರಾಹ್ಮಣನು ಎಂಟು ಸಾರೆ, ಕ್ಷತ್ರಿಯನು ಆರು ಸಾರೆ, ॥ ೧೪೯ ॥ ವೈಶ್ಯನು ನಾಲ್ಕು ಸಾರೆ, ಶೂದ್ರನು ಎರಡು ಸಾರೆ ಬಾಯಿ ಮುಕ್ಕಳಿಸಬೇಕು. ಹೆಚ್ಚು ಸಾರೆ ಮಾಡಬಾರದು ॥ ೧೫೦ ॥ ಈಪ್ರಕಾರ ಬ್ರಾಹ್ಮಣನು ಎಂಟು ಸಾರೆ ಬಾಯಿಮುಕ್ಕಳಿಸಿ, ಮೂರು ಸಾರೆ ಆಚಮನಮಾಡಿ ನಿರ್ಮಲನಾಗಿ ಶುದ್ಧಸ್ಥಾನದಲ್ಲಿ ಕೂತು ಕುಲದೇವರನ್ನು ಸ್ಮರಿಸಬೇಕು. ॥ ೧೫೧ ॥ ಆಮೇಲೆ ಮೌನ ಆಚಮನಮಾಡಬೇಕು. ಆಮೇಲೆ ೨೪ ನಾಮಗಳಿಂದ ೨೪ ಸ್ಥಳಗಳನ್ನು ಮುಟ್ಟಿ ಪುನಃ ಆಚಮನ ಮಾಡಬೇಕು ಅದರ ವಿಧಿಯನ್ನು ಹೇಳುವೆನು. ॥ ೧೫೨ ॥ ಬ್ರಾಹ್ಮಣನ ಬಲ ಅಂಗೈಯಲ್ಲಿ ಪ್ರಖ್ಯಾತವಾದ ೫ ತೀರ್ಥಗಳುಂಟೆಂದು ಶ್ರುತಿಯಲ್ಲಿ ಹೇಳಿದೆ. ಆ ತೀರ್ಥಗಳನ್ನು ಹೇಳುವೆನು ಕೇಳಿರಿ. ॥ ೧೫೩ ॥ ಅಂಗುಷ್ಠ ಮೂಲದ ಅಂಗೈಯಲ್ಲಿ **ಅಗ್ನಿತೀರ್ಥ** ಹಾಗು **ಬ್ರಹ್ಮತೀರ್ಥ**ಗಳು ಅವೆ. ತರ್ಜನೀ ಅಂಗುಷ್ಠಗಳ ಮಧ್ಯದಲ್ಲಿ **ಪಿತೃತೀರ್ಥ**ವದೆ ॥ ೧೫೪ ॥ ತರ್ಜನೀ ಮಧ್ಯ, ಅನಾಮಿಕ, ಕನಿಷ್ಠ ಈ ನಾಲ್ಕು ಬೆರಳುಗಳ ತುದಿಯಲ್ಲಿ **ದೇವತೀರ್ಥ**ವದೆ. ಕಿರಿಬೆರಳಿನ ತುದಿಯಲ್ಲಿ **ಋಷಿತೀರ್ಥ**ವದೆ ॥ ೧೫೫ ॥ ಈಪ್ರಕಾರ ತೀರ್ಥಗಳನ್ನು ತಿಳಕೊಂಡು ದೇವ-ಪಿತೃ-ಋಷಿತರ್ಪಣಮಾಡಬೇಕು. ವಿದ್ವಾನ್ ಬ್ರಾಹ್ಮಣರು ಮೊದಲು ಬ್ರಹ್ಮತೀರ್ಥದಲ್ಲಿ ಆಚಮನಮಾಡಬೇಕು. ॥ ೧೫೬ ॥ ಹ್ಯಾಗೆಂದರೆ, ಬ್ರಾಹ್ಮಣನು ಬ್ರಹ್ಮತೀರ್ಥದಲ್ಲಿ **ಕೇಶವ, ನಾರಾಯಣ,**

**ಮಾಧವ** ಎಂದು ಆಚಮನಮಾಡಿ, ದೇವತೀರ್ಥದಿಂದ ನೀರುಬಿಟ್ಟು **ಗೋವಿಂದ** ನಾಮವನ್ನು ಉಚ್ಚರಿಸಬೇಕು. || ೧೫೭ || **ವಿಷ್ಣು-ಮಧುಸೂದನ** ನಾಮಗಳಿಂದ ಎರಡೂ ಕೈ ತೊಳೆಕೊಂಡು, **ತ್ರಿವಿಕ್ರಮ-ವಾಮನ** ನಾಮಗಳಿಂದ ಎರಡೂ ಗಲ್ಲಗಳನ್ನು ಸ್ಪರ್ಶಮಾಡಬೇಕು. **ಶ್ರೀಧರ** ನಾಮದಿಂದ ಅಂಗೈಯಿಂದ ತುಟಿಯನ್ನು ಮುಟ್ಟಬೇಕು. || ೧೫೮ || ಪುನಃ **ಹೃಷಿಕೇಶ** ನಾಮದಿಂದ ಹಸ್ತವನ್ನೂ, **ಪದ್ಮನಾಭನೆಂದು** ಎರಡೂ ಪಾದಗಳನ್ನು **ದಾಮೋದರನೆಂದು** ಬಲಗೈಯ ಐದೂ ಬೊಟ್ಟುಗಳಿಂದ ಶಿಖಾಸ್ಥಾನವನ್ನು || ೧೫೯ || **ಸಂಕರ್ಷಣ** ಎಂದು ನಾಲ್ಕೂ ಬೊಟ್ಟುಗಳಿಂದ ಪೃಷ್ಠದೇಶವನ್ನೂ, **ವಾಸುದೇವ-ಪ್ರದ್ಯುಮ್ನ** ನಾಮಗಳಿಂದಲೂ ತರ್ಜನೀ-ಅಂಗುಷ್ಟಗಳಿಂದಲೂ ಮೂಗಿನ ಎರಡು ಹೊಳ್ಳೆಗಳನ್ನೂ || ೧೬೦ || **ಅನಿರುದ್ಧ-ಪುರುಷೋತ್ತಮ** ಎಂದು ಅಂಗುಷ್ಠ-ಅನಾಮಿಕೆಗಳಿಂದ ನೇತ್ರಗಳನ್ನೂ, **ಅಧೋಕ್ಷಜ-ನಾರಸಿಂಹ** ಎಂದು ಎರಡೂ ಕಿವಿಗಳನ್ನೂ **ಅಚ್ಯುತ** ಎಂದು ನಾಭಿಯನ್ನೂ || ೧೬೧ || ,ಜನಾರ್ಧನ ಎಂದು ಹೃದಯವನ್ನೂ, **ಉಪೇಂದ್ರ** ಎಂದು ಐದೂ ಬೆರಳುಗಳಿಂದ ತಲೆಯನ್ನೂ, **ಹರಿ-ಕೃಷ್ಣ** ನಾಮಗಳಿಂದ ಎರಡೂ ಭುಜಗಳನ್ನೂ, ಐದು ಬೊಟ್ಟುಗಳಿಂದ ವಿಧಿಪೂರ್ವಕ ಸ್ಪರ್ಶಮಾಡಬೇಕು. || ೧೬೨ || ಈರೀತಿ ಸಾಯಂಕಾಲದಲ್ಲಿಯೂ ಮಾಡಬೇಕು. ಮತ್ತು ವೇಳೆವೇಳೆಗೂ ಮಾಡಬೇಕು. ಅಶಕ್ಯ ಅಥವಾ ಸಂಕಟ ಕಾಲದಲ್ಲಿ ಮಾಡುವ ವಿಧಾನಗಳು ಬೇರೆ ಇರುವವು ಹೇಳುವೆನು ಕೇಳಿರಿ. || ೧೬೩ || ಅಶಕ್ಯ ಮತ್ತು ಸಂಕಟಕಾಲಗಳಲ್ಲಿ ಬ್ರಹ್ಮತೀರ್ಥದಲ್ಲಿ ಮೂರು ಸಾರೆ ಆಚಮನಮಾಡಿ, ಗೋವಿಂದ ನಾಮದಿಂದ ಕೈತೊಳೆದು, ಮುಖಸ್ಪರ್ಶಮಾಡಿ ಸಂಧ್ಯಾದ ಹೊರತಾಗಿ ಉಳಿದ ಮಂತ್ರಗಳನ್ನು ಅನ್ನಬೇಕು. || ೧೬೪ || ಮತ್ತೊಂದು ವಿಧಾನವು ಹ್ಯಾಗಂದರೆ— ದೇವತೀರ್ಥದಲ್ಲಿ ಮೂರು ಸಾರೆ **ಆಚಮನಮಾಡಿ,** ಗೋವಿಂದ ನಾಮದಿಂದ ಕೈತೊಳೆದು ಕಣ್ಣು-ಕಿವಿಗಳನ್ನು ಸ್ಪರ್ಶಮಾಡಬೇಕು. ||೧೬೫|| ಆಗ ಶೂದ್ರಾದಿ ಕೀಳು ಜನರ ಸ್ಪರ್ಶವಾದರೆ ಇದೇ ರೀತಿಯಾಗಿ ಆಚಮನಮಾಡಬೇಕೆಂದು ಶ್ರೀಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. || ೧೬೬ || ಮಳೆಯಲ್ಲಿ ತೋಯಿಸಿಕೊಂಡು ಬಂದಾಗ ಮತ್ತು ಸ್ನಾನ ಭೋಜನಗಳ

ಪೂರ್ವದಲ್ಲಿಯೂ ಅಂತ್ಯದಲ್ಲಿಯೂ ನಿಶ್ಚಿತವಾಗಿ ಎರಡೆರಡು ಆಚಮನವಮಾಡಬೇಕು. ॥ ೧೬೭ ॥ ಫಲಾಹಾರ ಮಾಡಿದಾಗ, ನೀರು ಕುಡಿದಾಗ, ಸ್ಮಶಾನದಲ್ಲಿ ತಿರುಗಾಡಿ ಬಂದಾಗ ಎರಡೆರಡು ಆಚಮನಮಾಡಬೇಕು ಅಂದರೆ ಶುದ್ಧವಾಗುವದು. ॥ ೧೬೮ ॥ ಆಗ ಒಂದುವೇಳೆ ನೀರಿಲ್ಲದಿದ್ದರೆ ಶ್ರೋತ್ರಾಚಮನಮಾಡಬೇಕು. ಅಥವಾ ಮೌನಾಚಮನಮಾಡಬೇಕು. ॥ ೧೬೯ ॥ ಎಲ್ಲೈ ಬ್ರಾಹ್ಮಣಾ ಆಚಮನ ವಿಧಿ ಈಪ್ರಕಾರ ಇರುತ್ತದೆ. ಈರೀತಿ ಯಿಂದ ಭಕ್ತಿಯಿಂದ ಆಚರಿಸಿದವರಿಗೆ ಎಂದೂ ಬಡತನ ಬರುವದಿಲ್ಲ. ॥ ೧೭೦ ॥ ಇನ್ನು ಪರಾಶರರು ಹೇಳುವ ಹಲ್ಲುತಿಕ್ಕುವ ವಿಧಿಯನ್ನು ಕೇಳು. ॥ ೧೭೦ ॥

## ದಂತಧಾವನ ವಿಧಾನಗಳು

ಪರಾಶರರು— ಎಲ್ಲೈ ಋಷಿಗಳೇ, ನಿಮಗೆ ಇನ್ನು ದಂತಧಾವನ ವಿಧಾನವನ್ನು ಹೇಳುವೆನು ಕೇಳಿರಿ. ಸಮಸ್ತ ಪರ್ವಣಿಗಳಲ್ಲಿಯೂ ಪ್ರತಿಪದಾ-ಷಷ್ಠಿಗಳಲ್ಲಿಯೂ ॥ ೧೭೧ ॥ ನವಮೀ-ದ್ವಾದಸಿಗಳಲ್ಲಿಯೂ, ಶನಿ-ಭಾನು-ಮಂಗಳವಾರಗಳಲ್ಲಿಯೂ, ಶ್ರಾದ್ಧ ಹಾಗು ವಿವಾಹ ದಿನಗಳಲ್ಲಿಯೂ ದಂತಧಾವನ ಮಾಡಬಾರದು. ॥ ೧೭೨ ॥ ಮುಳ್ಳುಗಿಡದ ಕಟ್ಟಿಗೆ, ತಾಡ, ಮಾಡ, ಕೇದಿಗೆ, ಖರ್ಜೂರ, ತೆಂಗು ಈ ವೃಕ್ಷಗಳ ಕಡ್ಡಿಗಳಿಂದ ಹಲ್ಲು ತಿಕ್ಕಿದರೆ ಚಾಂಡಾಲಜನ್ಮ ಬರುವದು. ॥ ೧೭೩ ॥ ಖದಿರ, ಕರಂಜ, ಆಷಾಢ, ಅತ್ತಿ, ಎಕ್ಕಿ, ಆಲ. ಕವಳಿ (ಕರವಂದಿ) ಈ ಗಿಡಗಳು ಪುಣ್ಯವೃಕ್ಷಗಳಾದ್ದರಿಂದ ಅವುಗಳ ಕಡ್ಡಿಗಳಿಂದ ಹಲ್ಲು ತಿಕ್ಕಿಕೊಳ್ಳಬೇಕು, ॥ ೧೭೪ ॥ ನಾಲ್ಕು ವರ್ಣದವರು ಕ್ರಮವಾಗಿ ಅಂದರೆ ಬ್ರಾಹ್ಮಣರು ೧೨ ಅಂಗುಲ, ಕ್ಷತ್ರಿಯರು ೯ ಅಂಗುಲ, ವೈಶ್ಯ-ಶೂದ್ರರು ಆರಾರು ಅಂಗುಲ ಉದ್ದ ಕಡ್ಡಿಗಳಿಂದ ಹಲ್ಲುತಿಕ್ಕಿಕೊಳ್ಳಬೇಕು. ॥ ೧೭೫ ॥ ಈಪ್ರಕಾರ ಹಲ್ಲು ತಿಕ್ಕುವ ಕಡ್ಡಿಯನ್ನು ಮುರಿಯುವಾಗ ಆಯುಃಪ್ರಜಾ ಎಂಬ ಮಂತ್ರವನ್ನು ಅನ್ನಬೇಕು. ॥ ೧೭೬ ॥ ಹಲ್ಲು ತಿಕ್ಕಿದ ಆ ಕಡ್ಡಿಯನ್ನು ನೈಋುತ್ಯ ದಿಕ್ಕಿನಲ್ಲಿ ಚಲ್ಲಿ ೧೨ ಸಾರೆ ಬಾಯಿಮುಕ್ಕಳಿಸಿ, ಎರಡು ಸಾರೆ ಆಚವನ ಮಾಡಬೇಕು. ॥ ೧೭೭ ॥

## ಇನ್ನು ಸ್ನಾನದ ವಿಧಿಯನ್ನು ಕೇಳಿರಿ

ಆಮೇಲೆ ಪ್ರಾತಃಸ್ನಾನ ಮಾಡಬೇಕು. ಅದು ಎಲ್ಲಕ್ಕೂ ಶ್ರೇಷ್ಠವು. ಪ್ರಾತಃಸ್ನಾನಮಾಡಿದರೆ ಆದರಿಂದ ಸರ್ವಸಾಧನವಾಗಿ ತೇಜಸ್ಸು, ಬಲ, ಆಯುಸ್ಸು ಹೆಚ್ಚಾಗುವದು. ॥ ೧೭೮ ॥ ಮತ್ತು ದುಃಸ್ವಪ್ನವು ನಾಶವಾಗಿ, ಯಾವತ್ತು ದೇವತೆಗಳು ವಶರಾಗುವರು. ಹಾಗು ಸೌಭಾಗ್ಯ, ಸುಖ, ಹರ್ಷಗಳು ಉಂಟಾಗುವವು. ಮತ್ತು ದಾರಿದ್ರ್ಯ, ಚಿಂತಾ, ಶೋಕಗಳು ಹರಣವಾಗುತ್ತವೆ ॥ ೧೭೯ ॥ ಯತಿ, ತಪಸ್ವಿ, ಸನ್ಯಾಸಿಗಳು ತ್ರಿಕಾಲ ಸ್ನಾನಮಾಡಬೇಕು. ಬ್ರಹ್ಮಚಾರಿಯು ವಿಧಿಪೂರ್ವಕ ಒಮ್ಮೆ ಸ್ನಾನಮಾಡಬೇಕು. ॥ ೧೮೦ ॥ ಗೃಹಸ್ಥನೂ ವಾನಪ್ರಸ್ಥನೂ ಪ್ರಾತಃಕಾಲ, ಮಧ್ಯಾಹ್ನಕಾಲಗಳಲ್ಲಿ ಸ್ನಾನಮಾಡಬೇಕು. ಹೀಗೆ ನಿತ್ಯವೂ ಮಾಡಿದರೆ ಸಕಲ ಪಾಪಗಳೂ ನಾಶವಾಗುವವು. ಆದ ಕಾರಣ ನಿತ್ಯ ಹರ್ಷದಿಂದ ಸ್ನಾನಮಾಡಬೇಕು. ॥ ೧೮೧ ॥ ಎಲೈ ಋಷಿಗಳೇ, ಒಂದುವೇಳೆ ಅಶಕ್ಯವಾದ ಸಂಕಟ ಬಂದಾಗ ಅಥವಾ ನಿರ್ಮಲವಾದ ನೀರು ಸಿಗದ ವೇಳೆಯಲ್ಲಿ ಯಾವ ಪ್ರಕಾರ ಸ್ನಾನಮಾಡಬೇಕೆಂಬದನ್ನು ಹೇಳುವೆನು ಕೇಳಿರಿ. ॥ ೧೮೨ ॥ ಆಗ ಅಗ್ನಿಸ್ನಾನವನ್ನಾಗಲಿ, ಭಸ್ಮಸ್ನಾನವನ್ನಾಗಲಿ, ವಾಯುಸ್ನಾನವನ್ನಾಗಲಿ ಅಥವಾ ಆಪೋಹಿಷ್ಠಾ ಮಂತ್ರದಿಂದ ವಿಧಿಪೂರ್ವಕವಾಗಿ ಮಂತ್ರಸ್ನಾನವನ್ನು ಮಾಡಬೇಕು. ॥ ೧೮೩ ॥ ಮತ್ತೊಂದು ರೀತಿ ಸ್ನಾನದ ಫಲವು ಏನಂದರೆ— ಭಕ್ತಿಭಾವ ಇದ್ದವರಿಗೆ ಗುರುಗಳ ಹಾಗು ದೇವತಾದರ್ಶನ ಮಾತ್ರದಿಂದ ತೀರ್ಥಸ್ನಾನದ ಫಲವು ಬರುತ್ತದೆ ॥ ೧೮೪ ॥ ಅಥವಾ ತಂದೆ-ತಾಯಿಗಳ ದರ್ಶನಮಾಡಿಕೊಂಡು, ಭಕ್ತಿಯಿಂದ, ಅವರ ಚರಣ ತೀರ್ಥವನ್ನು ತಕ್ಕೊಂಡು ಮೈಮೇಲೆ ಪ್ರೋಕ್ಷಿಸಿಕೊಂಡರೆ ಆದರಿಂದ ತೀರ್ಥಸ್ನಾನದ ಫಲವು ಬರುವದು. ॥ ೧೮೫ ॥ ಅಥವಾ ಮಳೆಯಲ್ಲಿ ತೋಯಿಸಿಕೊಂಡು ಗಾಳಿಯನ್ನು ಬಡಿಸಿಕೊಂಡರೆ ಇಲ್ಲವೆ ಗೋಧೂಳಿಯಲ್ಲಿ ಕುಳಿತರೆ ಸ್ನಾನದ ಫಲವು ಬರುವದು. ॥೧೮೬॥ ಚಾಂಡಾಲನ ಸ್ಪರ್ಶವಾದರೆ ಜಲಸ್ನಾನದಿಂದ ಶುದ್ಧವಾಗುವದು. ಶೂದ್ರಸ್ಪರ್ಶವಾದರೆ ಉಪಸ್ನಾನಮಾಡ

ಬೇಕು. ॥ ೧೮೭ ॥ ದೇಹವು ಆರೋಗ್ಯದಿಂದಿದ್ದರೆ ಜಲಸ್ನಾನ ಮುಖ್ಯವು. ಸಂಧಿ-ವಿಗ್ರಹ-ಸಂಕಟ ಸಮಯಗಳಲ್ಲಿ ಉಪಸ್ನಾನಮಾಡಬೇಕು. ॥ ೧೮೮ ॥ ಪ್ರಾತಃಕಾಲಕ್ಕೆ ಶೀತೋದಕವೇ ಉತ್ತಮ. ದೇಹದಲ್ಲಿ ಅಶಕ್ತತೆಯಿದ್ದರೆ ಬಿಸಿನೀರಿನಿಂದ ಸ್ನಾನಮಾಡಬೇಕು. ॥ ೧೮೯ ॥ ನೀರು ಸ್ವತಃ ಪವಿತ್ರವಾದದ್ದು, ಅದಕ್ಕೆ ಅಗ್ನಿಸಂಪರ್ಕವಾದರೆ ಕೇಳುವದೇನು ? ಅದು ಹೆಚ್ಚು ಪವಿತ್ರವಾಗುವದು. ಗೃಹಸ್ಥನು ಬಿಸಿನೀರಿನಿಂದ ಸ್ನಾನಮಾಡುವದೇ ಯೋಗ್ಯವು ॥ ೧೯೦ ॥ ಗೃಹಸ್ಥನು ನಿತ್ಯ ಮನೆಯಲ್ಲಿ ಸ್ನಾನಮಾಡುವಾಗ ಸ್ನಾನಕ್ಕೆ ನೀರು ತೋಡಿಟ್ಟುಕೊಳ್ಳುವ ಪಾತ್ರೆಯಲ್ಲಿ ಮೊದಲು ಸ್ವಲ್ಪ ತಣ್ಣೀರನ್ನು ಹಾಕಿ, ಆಮೇಲೆ ಅದರಲ್ಲಿ ಬಿಸಿನೀರು ಬೆರಿಸಿಕೊಂಡು ಆಚಮನಮಾಡಿ ಸಂಕಲ್ಪಮಾಡಬೇಕು ॥ ೧೯೧ ॥ ಆಮೇಲೆ ಆಪೋಹಿಷ್ಠಾ ಮಂತ್ರದಿಂದಲೂ ಮೂರು ಸಾರೆ ಗಾಯತ್ರೀ ಮಂತ್ರದಿಂದಲೂ ಆ ಸ್ನಾನದ ನೀರನ್ನು ಅಭಿಮಂತ್ರಿಸಿ ಸ್ನಾನಮಾಡಬೇಕು. ಮನೆಯಲ್ಲಿ ಸ್ನಾನಮಾಡುವಾಗ ಅಘಮರ್ಷಣವನ್ನು ತರ್ಪಣವನ್ನು ಮಾಡುವ ಕಾರಣವಿಲ್ಲ. ಸ್ನಾನವಾದನಂತರ ತಾವು ಉಟ್ಟ ಒದ್ದೆ ವಸ್ತ್ರವನ್ನು ತಮ್ಮ ಕೈಯಿಂದಲೇ ಹಿಂಡಬಾರದು. ॥ ೧೯೨ ॥ ಪುತ್ರೋತ್ಸವ, ಸಂಕ್ರಾಂತಿ, ಶ್ರಾದ್ಧದಿನ, ಮೃತದಿನ, ಅಮಾವಾಸ್ಯ, ಪೌರ್ಣಿಮೆಗಳಲ್ಲಿ ಬಿಸಿನೀರಿನಿಂದ ಸ್ನಾನಮಾಡಬಾರದು. ॥ ೧೯೩ ॥ ಸ್ನಾನಮಾಡಿದ ಮೇಲೆ ಚಂಡಿಕೆಯನ್ನು ಕಟ್ಟಿ, ದರ್ಭಹಸ್ತದಿಂದ ಸೂರ್ಯಾಭಿಮುಖವಾಗಿ ಯಾರ ಸಂಗಡಲೂ ಮಾತನಾಡದೇ ಮೌನವಾಗಿರಬೇಕು ॥ ೧೯೪ ॥ ಆ ಮೇಲೆ ಆಚಮನ ಮಾಡಿ **ದೇವಸ್ಯತ್ವಾ** ಎಂಬ ಮಂತ್ರವನ್ನು ಜಪಿಸಿ, ತೀವ್ರವಾಗಿ ಉಪವಸ್ತ್ರವನ್ನು ತಕ್ಕೊಂಡು **ಅವಧೂತ** ಎಂಬ ಮಂತ್ರವನ್ನು ಅನ್ನುತ್ತ ಆ ಉಪವಸ್ತ್ರವನ್ನು ಹಿಂಡಿ, **ಉದ್ಯಂತ** ಎಂಬ ಮಂತ್ರವನ್ನು ಜಪಿಸುತ್ತ, ಆ ವಸ್ತ್ರವನ್ನು ಸೂರ್ಯನಿಗೆ ತೋರಿಸಿ ಅದರಿಂದ ಮೈ ಒರಿಸಿಕೊಂಡು, ಆ ಉಪವಸ್ತ್ರವನ್ನುಟ್ಟು, ಆ ಉಟ್ಟ ಒದ್ದೆ ವಸ್ತ್ರವನ್ನು ಕಳೆದು ಬಂದು ಆಚಮನ ಮಾಡಿ **ದೇವಸ್ಯತ್ವಾ, ಆವಹಂತೀ, ವಿತಸ್ವತೀ** ಎಂಬ ಮಂತ್ರಗಳಿಂದ ಒಗೆದ ಪವಿತ್ರವಾದ ಒಣ ವಸ್ತ್ರವನ್ನುಟ್ಟುಕೊಂಡು ತಂತ್ರದಿಂದ ಎರಡು ಆಚಮನ ಮಾಡಬೇಕು. ಆ ಉಪವಸ್ತ್ರವನ್ನು ಹಿಂಡಿ ಮತ್ತೆ ಆಚಮನ ಮಾಡಬೇಕು. ॥ ೧೯೫ ॥

## ಮಂತ್ರಸ್ನಾನವಿಧಿ ಹಾಗು ಮಾನಸಸ್ನಾನವಿಧಿ



ಎಲೈ ಋಷಿಗಳೇ, ಇನ್ನು ಮಂತ್ರಸ್ನಾನ ವಿಧಿಯನ್ನು ಹೇಳುವೆನು ಕೇಳಿರಿ. ಆಪೋಹಿಷ್ಠಾದಿ ಮಂತ್ರ ದಿಂದ ಮೊದಲು ಪಾದ-ತಲೆ-ಹೃದಯಗಳಲ್ಲಿ ಪ್ರೋಕ್ಷಿಸಿಕೊಂಡು ಆಮೇಲೆ ಅದೇ ಮಂತ್ರದಿಂದ ಸರ್ವ ಶರೀರದ ಮೇಲೆ ಪ್ರೋಕ್ಷಿಸಿಕೊಳ್ಳಬೇಕು. ‖ ೨೦೦-೨೦೧ ‖ ಈ ಪ್ರಕಾರ ಮಂತ್ರಸ್ನಾನ ಮಾಡಿ ಪುನಃ ಆಚಮನ ಮಾಡಿ ವಿಧಿಯಿಂದಲೂ ಭಕ್ತಿಯಿಂದಲೂ ಮಾನಸಸ್ನಾನ ಮಾಡಬೇಕು ‖ ೨೦೨ ‖ ಹ್ಯಾಗಂದರೆ ಚತುರ್ಭುಜಗಳಿಂದ-ಲಂಕೃತನಾದ ನಾರಾಯಣನೆಂಬ ವಿಷ್ಣುಮೂರ್ತಿಯನ್ನು ಭಕ್ತಿಯಿಂದ ಧ್ಯಾನ ಮಾಡಿದರೆ ಆದು ಮಾನಸಸ್ನಾನ ವಾಗುವದು. ‖ ೨೦೩ ‖ ಅಥವಾ **ಅಪವಿತ್ರಃ ಪವಿತ್ರೋವಾ** ಎಂಬ ಮಂತ್ರದಿಂದ ಹರಿಯನ್ನು ಧ್ಯಾನಿಸಿ, ನೀರನ್ನು ದೇಹದಮೇಲೆ ಪ್ರೋಕ್ಷಿಸಿಕೊಂಡರೆ ಸ್ನಾನದ ಫಲವು ಬರುವದು. ‖ ೨೦೪ ‖ ನದೀತೀರದಲ್ಲಿರುವ ಮನುಷ್ಯನು ಅಶಕ್ತನಾಗಿದ್ದರೆ ಭಕ್ತಿಯಿಂದ ಗಂಗೆಯನ್ನು ಸ್ಮರಿಸಿ, ಒದ್ದೆಬಟ್ಟೆಯಿಂದ ಮೈಯನ್ನು ಒರಿಸಿಕೊಳ್ಳ ಬೇಕು. ‖ ೨೦೫ ‖

## ಮಂಗಲಸ್ನಾನವಿಧಿ

ಎಲೈ ಬ್ರಾಹ್ಮಣರೇ, ಇನ್ನು ಮಂಗಳಸ್ನಾನವಿಧಿಯನ್ನು ಹೇಳುವೆನು ಕೇಳಿರಿ. ರವಿವಾರ ಮಂಗಳ (ಅಭ್ಯಂಗ) ಸ್ನಾನ ಮಾಡಿದರೆ ಜ್ವರ ಬರುವ ಸಂಭವ ಕಾರಣ ಆ ದಿನ ಮಾಡಬಾರದು. ‖ ೨೦೬ ‖ ಸೋಮವಾರ ಮಂಗಲಸ್ನಾನ ಮಾಡಿದರೆ ಕಾಂತಿ ಹಾನಿಯಾಗುವದು. ಮಂಗಳವಾರ ಮಾಡಿದರೆ ಮೃತ್ಯು ಬರುವ ಸಂಭವವು. ಬುಧವಾರ ಮಾಡಿದರೆ ಐಶ್ವರ್ಯ ಪ್ರಾಪ್ತಿಯಾಗುವದು. ಗುರುವಾರ ಮಾಡಿದರೆ ಧನ ಹಾನಿಯಾಗುವದು. ‖೨೦೭‖ ಶುಕ್ರವಾರ ಮಂಗಲಸ್ನಾನ ಮಾಡಿದರೆ ಪುತ್ರಘಾತವಾಗುವ ಸಂಭವವು. ಶನಿವಾರ ಮಾಡಿದರೆ ಸಕಲ ಸಂಪತ್ತು ಉಂಟಾಗುವದು. ಈ ಪ್ರಕಾರ ತಿಳಿದು ಮಂತಳಸ್ನಾನ ಮಾಡಬೇಕು. ‖ ೨೦೮ ‖

ದಿನಾಲು ಮನೆಯಲ್ಲಿ ಸ್ನಾನ ಮಾಡುವಾಗ ಹಗಲು ಪೂರ್ವ ಮುಖವಾಗಿಯೂ ರಾತ್ರಿ ಪಶ್ಚಿಮ ಮುಖವಾಗಿಯೂ ಕೂತುಕೊಂಡು ಸ್ನಾನ ಮಾಡಬೇಕು. ॥ ೨೦೯ ॥ ನದಿಯಲ್ಲಿ ಸ್ನಾನ ಮಾಡಬೇಕಾದರೆ ಪ್ರವಾಹದ ಎದುರಾಗಿ ನಿಂತು ಅಘಮರ್ಷಣ ಮಾಡಿ, ಆಮೇಲೆ **ನಮೋಗ್ನಯೇಪ್ಸುಮತೇ** ಎಂಬ ಮಂತ್ರದಿಂದ ನದಿಗೆ ನಮಸ್ಕರಿಸಬೇಕು. ॥ ೨೧೦ ॥ ಆಮೇಲೆ **ಯದಪಾಂಕ್ರೂರಮಂ** ಎಂಬ ಮಂತ್ರದಿಂದ ನೀರನ್ನು ಎರಡೂ ಕೈಗಳಿಂದ ಮೂರು ಸಾರೆ ಓರೆ ಮಾಡಿ, **ಇಮಂಮೇ ಗಂಗೇ** ಎಂಬ ಮಂತ್ರವನ್ನು ಜಪಿಸಬೇಕು. ॥ ೨೧೧ ॥ ಆಮೇಲೆ **ಋತಂ ಚ ಸತ್ಯಂ ಚ** ಎಂಬ ಮಂತ್ರವನ್ನು ಜಪಿಸಿ ನದಿಯಲ್ಲಿ ವಿಧಿಪೂರ್ವಕ ಸ್ನಾನ ಮಾಡಬೇಕು. ॥ ೨೧೨ ॥ ರೋದನ, ವಮನ, ಮೈಥುನ, ದುಃಸ್ವಪ್ನ ದರ್ಶನಗಳ ಅಂತ್ಯದಲ್ಲಿ ಸ್ನಾನ ಮಾಡಿದರೆ ಶುದ್ಧನಾಗುವನು. ॥ ೨೧೩ ॥

## ವಸ್ತ್ರವಿಧಾನ

ಎಲೈ ಋಷಿಗಳಿರಾ, ಇನ್ನು ನಿಮಗೆ ವಸ್ತ್ರವಿಧಾನವನ್ನು ಹೇಳುವೆನು ಕೇಳಿರಿ. ಗೃಹಸ್ಥನು ಕಚ್ಚೆಹಾಕದೆ ಒದ್ದೆ ವಸ್ತ್ರವನ್ನು ಉಡಬಾರದು. ॥ ೨೧೪ ॥ ಕೆಂಪು ಬಟ್ಟೆ, ಹರಕು ಬಟ್ಟೆ, ಒಂದೇ ಬಟ್ಟೆ ಧರಿಸಿ ಜಪ ಮಾಡಿದರೆ ಆ ಪುಣ್ಯವು ರಾಕ್ಷಸರಿಗೆ ಹೋಗುವದು. ॥ ೨೧೫ ॥ ಬಿಳೀ ವಸ್ತ್ರಗಳು ಬ್ರಾಹ್ಮಣರಿಗೆ ಮುಖ್ಯವು. ಉತ್ತರೀಯವಾದ ಬಹಿರ್ವಾಸವು ಉಪವಸ್ತ್ರವಾಗಿರಬೇಕು. ॥ ೨೧೬ ॥ ಈ ಪ್ರಕಾರ ದೋತರವನ್ನುಟ್ಟುಕೊಂಡ ನಂತರ ವಿಧಿಪ್ರಕಾರ ಮಂತ್ರದಿಂದ ಭಸ್ಮವನ್ನು ಹಚ್ಚಬೇಕು. ॥ ೨೧೭ ॥

## ಭಸ್ಮ ಅಥವಾ ಗೋಪಿಚಂದನ ಧಾರಣವಿಧಿ

ಹಿಂದಕ್ಕಾಗಲಿ ಈಗಾಗಲಿ ಯಜ್ಞಮಾಡಿದ ಸ್ಥಳದ ಹಾಗು ಅಗ್ನಿಹೋತ್ರ ಬ್ರಾಹ್ಮಣರ ಮನೆಯಲ್ಲಿರುವ ಶುದ್ಧವಾದ ಭಸ್ಮವನ್ನು ಹಚ್ಚಬೇಕು. ಒಂದು ವೇಳೆ ಶುದ್ಧ ಭಸ್ಮವು ಸಿಗದಿದ್ದರೆ ಮುಖ್ಯವಾದ ದ್ವಾರಾವತಿಯ

ಗೋಪಿಚಂದನವನ್ನು ಹಚ್ಚಬೇಕು ಬೇರೆ ಅಂಥ ಇಂಥ ಮಣ್ಣುಗಳನ್ನು ತಕ್ಕೊಳ್ಳಬಾರದು. ‖ ೨೧೮ ‖ ಒಂದು ವೇಳೆ ದ್ವಾರಾವತೀ ಗೋಪೀಚಂದನ ಸಿಗದಿದ್ದರೆ ಶುದ್ಧವಾದ ಗಂಗಾಮೃತ್ತಿಕೆಯಿಂದ ಊರ್ಧ್ವಪುಂಡ್ರವಾಗಿ ಹಚ್ಚಬೇಕು. ಆದರಿಂದ ಅವರಿಗೆ ವಿಷ್ಣುಸಾಯುಜ್ಯವಾಗುವದು. ‖ ೨೧೯ ‖ ಪುಷ್ಟಿಯನ್ನು ಬಯಸುವವನು ಅಂಗುಷ್ಟದಿಂದಲೂ, ಆಯುಷ್ಯವು ಹೆಚ್ಚಾಗಬೇಕೆಂಬುವವನು ಮಧ್ಯಬೆರಳಿನಿಂದಲೂ ಹಚ್ಚಬೇಕು ‖ ೨೨೦ ‖ ಅನ್ನಾಪೇಕ್ಷೆಯುಳ್ಳವನು ಅನಾಮಿಕೆಯಿಂದಲೂ ಮುಕ್ತಿಯನ್ನು ಬಯಸುವವನು ತರ್ಜನಿ ಬೆರಳಿನಿಂದಲೂ ಗೋಪೀ ಚಂದನವನ್ನು ಧರಿಸಬೇಕು. ಉಗುರಿನಿಂದ ಹಚ್ಚಿದರೆ ಮಹಾಪಾಪ ಬರುವದು. ‖ ೨೨೧ ‖ ೧೦ ಅಂಗುಲ ಪ್ರಮಾಣ ಹಚ್ಚುವದು ಉತ್ತಮ. ೮-೯ ಅಂಗುಲ ಪ್ರಮಾಣ ಹಚ್ಚುವದು ಮಧ್ಯಮ. ೫-೬-೭ ಅಂಗುಲ ಪ್ರಮಾಣ ಶೂರ್ಪಾಕಾರವಾಗಿ ಹಚ್ಚಬಹುದು. ‖ ೨೨೨ ‖ ೨-೩-೪ ಅಂಗುಲ ಪ್ರಮಾಣ ಹಚ್ಚುವದು ಅಧಮ ಪಕ್ಷವು. ಹನ್ನೆರಡು ವಿಷ್ಣುನಾಮಗಳಿಂದ ಆಯಾ ಸ್ಥಾನಗಳಲ್ಲಿ ಹಚ್ಚಬೇಕು. ‖ ೨೨೩ ‖ ಅಂದರೆ ಕೇಶವ ಎಂದು ಹಣೆಯಲ್ಲಿ, ನಾರಾಯಣ ಎಂದು ನಾಭಿಯಲ್ಲಿ, ಮಾಧವ ಎಂದು ಹೃದಯದಲ್ಲಿ ಕಮಲಪುಷ್ಪದಂತೆ. ‖ ೨೨೪ ‖ ಗೋವಿಂದ ಎಂದು ಕಂಠದಲ್ಲಿ, ವಿಷ್ಣು ಎಂದು ಟೊಂಕದಲ್ಲಿ, ಮಧುಸೂದನ ಎಂದು ಬಲಭುಜದಲ್ಲಿ, ತ್ರಿವಿಕ್ರಮ ಎಂದು ನಾಭಿಯ ಉತ್ತರದಲ್ಲಿ, ‖ ೨೨೫ ‖ ವಾಮನ ಎಂದು ಬಾಹುವಿನಲ್ಲಿ, ಶ್ರೀಧರನೆಂದು ಬಲ ಗಿವಿಯಲ್ಲಿ, ಹೃಷೀಕೇಶನೆಂದು ಎಡಗಿವಿಯಲ್ಲಿ. ಪದ್ಮನಾಭನೆಂದು ಬಲದ ಟೊಂಕದಲ್ಲಿ, ‖ ೨೨೬ ‖ ದಾಮೋದರ ನೆಂದು ಶಿರದಲ್ಲಿ, ಈಪ್ರಕಾರ ಗೋಪೀಚಂದನದಿಂದ ನಿತ್ಯ ಊರ್ಧ್ವಪುಂಡ್ರಗಳನ್ನು ಹಚ್ಚಿದರೆ ಪಾತಕಗಳು ಸುಟ್ಟು ಹೋಗುವವು. ‖ ೨೨೭ ‖ ದ್ವಾರಾವತಿಯ ಗೋಪೀಚಂದನ ಹಚ್ಚಿ, ಅವರಮೇಲೆ ಭಸ್ಮವನ್ನು ಹಚ್ಚಿದರೆ ಹರಿ-ಹರರು ಪ್ರೀತರಾಗಿ ಭುಕ್ತಿ-ಮುಕ್ತಿಗಳುಂಟಾಗುವವು. ‖ ೨೨೮ ‖ ವಿವಾಹಾದಿ ಶುಭದಿನ, ದೇವತಾಕಾರ್ಯ ದ್ದಿನ, ಶ್ರಾದ್ಧದಿನ, ಮಂಗಲಸ್ನಾನ ಮಾಡಿದಾಗ, ಸೂತಕಬಂದಾಗ ಗೋಪೀಚಂದನ ಹಚ್ಚಬಾರದು. ‖ ೨೨೯ ‖ ಇನ್ನು ಬ್ರಹ್ಮಯಜ್ಞಾದಿ ತರ್ಪಣಗಳಿಗೆ ಬೇಕಾದ ದರ್ಭೆಗಳು ೧೦ ತರದವು ಅವೆ ಅವುಗಳ ಬಗ್ಗೆ ವಿಸ್ತಾರವಾಗಿ

ಹೇಳುವೆನು ಕೇಳಿರಿ. ॥ ೩೩೦ ॥ ದರ್ಭೆಗಳಲ್ಲಿ ದೂರ್ವಾ, ಉಶೀರ (ಲಾವಂಚ), ಕುಶ, ಕಾಶ, ಸಕುದ, ಗೋಧೂಮ, ವ್ರೀಹಿ, ಮೌಂಜೀಷ, ಮುಸ್ತಕ ದರ್ಭೆ ಎಂದು ಮುಖ್ಯ ೧೦ ಭೇದಗಳಿವೆ. ॥ ೩೩೧ ॥ ನಿತ್ಯವೂ ದೂರ್ವಾತರಬೇಕು ಅದು ಸಾಧಿಸದಿದ್ದರೆ ಶ್ರಾವಣ-ಭಾದ್ರಪದ ಮಾಸಗಳಲ್ಲಿ ವರ್ಷಕ್ಕೆ ಬೇಕಾಗುವಷ್ಟು ಸಂಗ್ರಹಿಸಬೇಕು. ॥ ೩೩೨ ॥ ಬ್ರಾಹ್ಮಣನಿಗೆ ನಾಲ್ಕು, ಕ್ಷತ್ರಿಯ ಹಾಗು ವೈಶ್ಯರಿಗೆ ಮೂರು, ಶೂದ್ರನಿಗೆ ಒಂದು ದೂರ್ವಾಗಳು ಬೇಕೆಂದು ನಿಯಮವಾಗಿದೆ. ॥ ೩೩೩ ॥ ಅನುಪಮವಾದ ದೂರ್ವಾದ ಮಹಿಮೆಯು ಅಗಾಧವಾಗಿದೆ. ಅದರ ತುದಿಯಲ್ಲಿ ಬ್ರಹ್ಮನೂ, ಮಧ್ಯದಲ್ಲಿ ವಿಷ್ಣುವೂ, ಮೂಲದಲ್ಲಿ ರುದ್ರನೂ ಇರುವರು. ॥ ೩೩೪ ॥ ತುದಿಯಲ್ಲಿ ನಾಲ್ಕು ಅಂಗುಲ, ಗಣ್ಣಿನ ಬುಡದಲ್ಲಿ ಎರಡು ಅಂಗುಲಉಳ್ಳ ದೂರ್ವೆಯನ್ನು ಬ್ರಾಹ್ಮಣನು ಧರಿಸಬೇಕು. ಅದರ ಮಹಿಮೆಯು ದೊಡ್ಡದಾಗಿರುತ್ತದೆ. ॥ ೩೩೫ ॥ ಏನಂದರೆ ಚಕ್ರದಿಂದ ವಿಷ್ಣುವು, ತ್ರಿಶೂಲದಿಂದ ಶಂಕರನು ರಾಕ್ಷಸರನ್ನು ನಾಶಮಾಡಿದಂತೆ ॥ ೩೩೬ ॥ ಮತ್ತು ಇಂದ್ರನು ವಜ್ರಾಯುಧದಿಂದ ದೈತ್ಯರನ್ನು ನಾಶಮಾಡಿದಂತೆ ॥ ೩೩೭ ॥ ಅಗ್ನಿಯಿಂದ ಹುಲ್ಲು ಬಣವಿಯು ಕೂಡಲೇ ನಾಶವಾಗುವಂತೆ ಬ್ರಾಹ್ಮಣನು ದರ್ಭೆಯನ್ನು ಸ್ಪರ್ಶಮಾಡಿ ಧರಿಸಿದಕೂಡಲೆ ಅವನ ಪಾಪರಾಶಿಯು ನಾಶವಾಗುವದು. ॥ ೩೩೮ ॥ ಬ್ರಹ್ಮಯಜ್ಞ ಮತ್ತು ಜಪ ಮಾಡುವಾಗ ದರ್ಭೆಯ ತುದಿಯಲ್ಲಿ ಗಂಟುಹಾಕಬೇಕು. (ಎರಡೇ ದರ್ಭೆಗಳಿದ್ದರೆ ಗಂಟುಹಾಕಬಾರದು) ಬ್ರಾಹ್ಮಣನು ಭೋಜನ ಸಮಯಲ್ಲಿ ಭಕ್ತಿಯಿಂದ ವರ್ತುಳಾಕಾರ ದರ್ಭೆಯನ್ನು ಧರಿಸಬೇಕು ॥ ೩೩೯ ॥ ಕರ್ಮ ಮಾಡುವಾಗ ದೂರ್ವೆಗೆ ಗಂಟುಹಾಕಿ ಧರಿಸಿದರೆ ಕರ್ಪೂರಕ್ಕೆ ಅಗ್ನಿತಗಲಿದ ಕೂಡಲೆ ಅದು ಸುಟ್ಟು ಹೋಗುವಂತೆ ಅವನ ಪಾಪವು ಕೂಡಲೆ ನಾಶವಾಗುವದು. ॥ ೩೪೦ ॥ ಹನ್ನೊಂದು ಅಂಗುಲ ಪ್ರಾದೇಶಮಾತ್ರ ಉದ್ದವಾದ ಎರಡು ದರ್ಭೆಗಳನ್ನು ಪವಿತ್ರಮಾಡಿ ನಿತ್ಯದಲ್ಲಿ ಧರಿಸಬೇಕು ಅದು ಮುಖ್ಯವಾದದ್ದು. ಆದರಿಂದ ಮನುಷ್ಯನು ಪವಿತ್ರನಾಗುವನು. ॥ ೩೪೧ ॥ ಜಪ–ಹೋಮ–ದಾನ–ವೇದಾಧ್ಯಯನ, ಪಿತೃಕರ್ಮಗಳನ್ನು ಮಾಡುವಾಗ ಬಂಗಾರದ ಅಥವಾ ಬೆಳ್ಳಿಯ ಉಂಗುರ ಧರಿಸಿ ಮೇಲೆ ದರ್ಭೆಯ ಪವಿತ್ರ ಧರಿಸಬೇಕು. ॥ ೩೪೨ ॥ ದೇವ

ಹಾಗು ಪಿತೃ ಕರ್ಮ ಮಾಡುವಾಗ ಬಂಗಾರ ಕೂಡಿದ ಬೆಳ್ಳಿ ಉಂಗುರವನ್ನು ಮಧ್ಯ ಬೆರಳಿನಲ್ಲಿ, ತರ್ಜನೀ ಬೆರಳಿನಲ್ಲಿ ಬೆಳ್ಳಿಯ ಉಂಗುರವನ್ನೂ ಅನಾಮಿಕೆಯಲ್ಲಿ ಬಂಗಾರದ ಉಂಗುರವನ್ನೂ ದರಿಸಬೇಕು. ॥ ೨೪೩ ॥ ಕನಿಷ್ಠ ಬೆರಳಿನಲ್ಲಿ ಪವಿತ್ರವಾದ ಆಕಳ ಕೋಡಿನ ಉಂಗುರ ಇಟ್ಟುಕೊಳ್ಳಬೇಕು. ತಂದೆಯು ಜೀವದಿಂದಿದ್ದವರು ತರ್ಜನೀ ಬೆರಳಿನಲ್ಲಿ ಉಂಗುರವನ್ನಿಡಬಾರದು ॥ ೨೪೪ ॥ ಯೋಗಾಭ್ಯಾಸ ಮಾಡುವವರು ಉತ್ತರೀಯವನ್ನೂ ತರ್ಜನೀ ಬೆರಳಿನಲ್ಲಿ ಉಂಗುರವನ್ನೂ ಕಾಲಲ್ಲಿ ಪಾದುಕಾಗಳನ್ನೂ ಧರಿಸಬಾರದು. ಮತ್ತು ಗಯಾ ಶ್ರಾದ್ಧ ಮಾಡಬಾರದು. ॥ ೨೪೫ ॥ ನವರತ್ನಮುದ್ರಿಕೆಯನ್ನು ಧರಿಸಿದವರಿಗೆ ಪಾಪ ಹತ್ತುವದಿಲ್ಲ ಕಾರಣ ಬ್ರಾಹ್ಮಣನು ಒಂದಾದರೂ ರತ್ನವುಳ್ಳ ಉಂಗುರವನ್ನು ಧರಿಸಬೇಕು ಅದು ಪವಿತ್ರವಾದದ್ದು. ॥ ೨೪೬ ॥

## ಪ್ರಾತಃಸಂಧ್ಯಾವಿಧಿ

ಮತ್ತೆ ಪರಾಶರರು— ಎಲೈ ಋಷಿಗಳೇ, ನಿಮಗೆ ಪ್ರಾತಃಸಂಧೆಯ ವಿಧಾನವನ್ನು ಹೇಳುವೆನು ಕೇಳಿರಿ. ನಕ್ಷತ್ರ ಇರುವಾಗಲೇ ಸಂಧ್ಯೆಯನ್ನು ಪ್ರಾರಂಭಿಸಿ ಸೂರ್ಯೋದಯವಾದಮೇಲೆ ಅರ್ಘ್ಯ ಕೊಡಬೇಕು. ॥ ೨೪೭ ॥ ಇನ್ನೂ ಸೂರ್ಯೋದಯಕ್ಕೆ ತಡವಿದ್ದರೆ ಸೂರ್ಯೋದಯ ಆಗುವತನಕ ಜಪಮಾಡುತ್ತ ನಿಂತು ಸೂರ್ಯೋದಯ ಆದಕೂಡಲೆ ಅರ್ಘ್ಯ ಕೊಡಬೇಕು. ಅದಕ್ಕೂ ಪೂರ್ವದಲ್ಲಿ ಕೊಟ್ಟ ಅರ್ಘ್ಯವು ವ್ಯರ್ಥವಾಗುವದು ಎಂದರು ॥೨೪೮॥ ಆಗ ಆ ಎಲ್ಲ ಋಷಿಗಳು— ಸ್ವಾಮೀ, ಪರಾಶರ ಮುನಿಗಳೇ, ಸಂಧ್ಯೆಯನ್ನು ಯಾವ ವಿಧಿಯಿಂದ ಮಾಡಬೇಕೆಂಬುದನ್ನು ನಮಗೆ ವಿಸ್ತಾರವಾಗಿ ಹೇಳಿರಿ ಎಂದು ಕೇಳಿದರು. ॥ ೨೪೯ ॥ ಇತ್ತ ಶ್ರೀಗುರುಗಳು ಆ ಬ್ರಾಹ್ಮಣನನ್ನು ಕುರಿತು— ಎಲೈ ಬ್ರಾಹ್ಮಣನೇ, ಪರಾಶರಸ್ಮೃತಿಯಲ್ಲಿ ಹೇಳಿದಂತೆ ನಿನಗೆ ಸಂಧ್ಯಾವಿಧಿಯನ್ನು ಹೇಳುವೆನು ಕೇಳು. ॥ ೨೫೦ ॥ ಗಾಯತ್ರೀ ಜಪವನ್ನು ಮಾಡುವಾಗ ಮುಖ್ಯವಾಗಿ ಚಂಡಿಕೆಯನ್ನು ಕಟ್ಟಿಕೊಂಡು, ಕೈಯಲ್ಲಿ ದರ್ಭೆಯನ್ನು ಧರಿಸಿ ಯೋಗ್ಯವಾದ ಆಸನವನ್ನು ಹಾಕಬೇಕು. ॥ ೨೫೧ ॥ ದೇವತೀರ್ಥದಲ್ಲಿ ಎರಡು ಆಚಮನ

ಮಾಡಿ ವಿಷ್ಣುನಾಮವನ್ನು ಸ್ಮರಿಸಿ ನ್ಯಾಸಪೂರ್ವಕ ವಿಸ್ತಾರವಾಗಿ ಪ್ರಾಣಾಯಾಮ ಮಾಡಬೇಕು. ॥ ೨೫೨ ॥ ಪ್ರಣವಕ್ಕೆ ಪರಬ್ರಹ್ಮ ಋಷಿಯು, ಪರಮಾತ್ಮನೇ ದೇವತೆಯು, ಗಾಯತ್ರೀ ಛಂದಸ್ಸು, ಪ್ರಾಣಾಯಾಮೇ ವಿನಿಯೋಗಃ ಎಂದು ಅನ್ನಬೇಕು. ॥ ೨೫೩ ॥ ಓಂ ಎಂಬ ವ್ಯಾಹೃತಿಯು ಸತ್ಯಜ್ಞಾನವುಳ್ಳದ್ದು. 'ಓಂ ಅಂ' ಎಂದು ನಾಭಿಯನ್ನೂ, 'ಓಂ ಉಂ' ಎಂದು ಹೃದಯವನ್ನೂ, 'ಓಂ ಮಂ' ಎಂದು ತಲೆಯನ್ನೂ ಸ್ಪರ್ಶ ಮಾಡಬೇಕು. ಮುಖ್ಯವಾಗಿ ಸಪ್ತವ್ಯಾಹೃತಿಗಳೂ, ಅವುಗಳಿಗೆ ಪ್ರತ್ಯೇಕ ಸಪ್ತ; ದೇವತೆಗಳೂ, ಋಷಿಗಳೂ, ಸಪ್ತ ಛಂದಸ್ಸುಗಳೂ ಉಂಟು. ಅವುಗಳನ್ನು ಹೇಳುವೆನು ಕೇಳಿರಿ. ॥ ೨೫೪ ॥ ಈ ಸಪ್ತವ್ಯಾಹೃತಿಗಳಿಗೂ ಪ್ರಜಾಪತಿಯೇ ಋಷಿಯು. ಅಗ್ನಿ, ವಾಯು, ಗುರು, ಸೂರ್ಯ, ವರುಣ, ಇಂದ್ರ, ವಿಶ್ವದೇವ ಎಂಬ ಸಪ್ತದೇವತೆಗಳುಂಟು. ಇನ್ನು ಸಪ್ತ ಛಂದಸ್ಸುಗಳನ್ನು ಹೇಳುವೆನು. ॥ ೨೫೫–೨೫೬ ॥ ಗಾಯತ್ರೀ, ಉಷ್ಣಿಕ, ಅನುಷ್ಟುಪ, ಬೃಹತೀ, ಪಂಕ್ತಿ, ತ್ರಿಷ್ಟುಪ್, ಜಗತಿ ಎಂಬ ಏಳು ಮುಖ್ಯ ಛಂದಸ್ಸುಗಳುಂಟು. ಪ್ರಾಣಾಯಾಮೇ ವಿನಿಯೋಗಃ ॥ ೨೫೭ ॥ 'ಓಂ ಭೂಃ' ಎಂದು ಪಾದವನ್ನೂ, 'ಓಂ ಭುವಃ' ಎಂದು ಮೊಳಕಾಲನ್ನೂ, 'ಓಂ ಸ್ವಃ' ಎಂದು ಗುಹ್ಯವನ್ನೂ, 'ಓಂ ಮಃ' ಎಂದು ನಾಭಿಯನ್ನೂ, 'ಓಂ ಜನಃ' ಎಂದು ಹೃದಯವನ್ನೂ, 'ಓಂ ತಪಃ' ಎಂದು ಕಂಠವನ್ನೂ, ॥ ೨೫೮ ॥ 'ಓಂ ಸತ್ಯಂ ಭೂಃ' ಎಂದು ಹಣೆಯನ್ನೂ ಸ್ಪರ್ಶ ಮಾಡಬೇಕು ಗಾಯತ್ರಿಯ ಗಾಯತ್ರೀ ಛಂದಸ್ಸಿಗೆ ವಿಶ್ವಾಮಿತ್ರ ಋಷಿಯು ಅಧಿಪತಿಯು. ಸವಿತಾ ದೇವತಾ, ಪ್ರಾಣಾಯಾಮೇ ವಿನಿಯೋಗಃ ॥ ೨೫೯ ॥ ಓಂ ಭೂಃ ಹೃದಯಾಯ ನಮಃ । ಓಂ ಭುವಃ ಶಿರಸೇಸ್ವಾಹಾ । ಓಂ ಸ್ವಃ ಶಿಖಾಯೈವಷಟ್ । ಓಂ ತತ್ಸವಿತುರ್ವರೇಣ್ಯಂ ಕವಚಾಯ ಹುಂ ॥ ೨೬೦ ॥ ಓಂ ಭರ್ಗೋದೇವಸ್ಯ ಧೀಮಹಿ ನೇತ್ರತ್ರಯಾಯವೌಷಟ್ । ಓಂ ಧಿಯೋಯೋನಃ ಪ್ರಚೋದಯಾತ್, ಅಸ್ತ್ರಾಯಫಟ್, ಓಂ ಭೂರ್ಭುವಃ ಸ್ವರೋಂ ಇತಿ ದಿಗ್ಬಂಧಃ ಎಂದು ಷಡಂಗನ್ಯಾಸ ಮಾಡಬೇಕು. ॥ ೨೬೧ ॥ ಪ್ರಾಣಾಯಾಮೇ ವಿನಿಯೋಗಃ ಎಂದು ಅಂದು, ಓಂ ಆಪಃ ಎಂದು ಸ್ತನವನ್ನೂ, ಓಂ ಜೋತಿಃ ಎಂದು ನೇತ್ರವನ್ನೂ, ಓಂ ರಸಃ ಎಂದು ನಾಲಿಗೆಯನ್ನೂ, ಓಂ ಅಮೃತಂ

ಎಂದು ಹಣೆಯನ್ನು ಸ್ಪರ್ಶ ಮಾಡಬೇಕು. ॥ ೨೬೧ ॥ ಪ್ರಾಣಾಯಾಮ ಮಾಡುವದಕ್ಕೆ ಪ್ರಜಾಪತಿ ಋಷಿಯು ಬ್ರಹ್ಮ, ಅಗ್ನಿ, ವಾಯು, ಸೂರ್ಯರು ದೇವತೆಗಳು. ॥ ೨೬೩ ॥ ಓಂ ಬ್ರಹ್ಮಭೂರ್ಭುವಃ ಸ್ವರೋಂ ಎಂದು ಮೂರು ಸಾರೆ ಪ್ರಾಣಾಯಾಮ ಮಾಡಬೇಕು ಈ ತ್ರಿಪದಾ ಗಾಯತ್ರಿಯನ್ನು ಯಾರು ಜಪಿಸುತ್ತಾರೋ ಅವರಿಗೆ ಸರ್ವಸಿದ್ಧಿಯಾಗುವದು ॥ ೨೬೪ ॥ ಗಾಯತ್ರಿಗೆ ಬ್ರಹ್ಮ, ಅಗ್ನಿ, ವಾಯು, ಸೂರ್ಯ ಇವರೇ ಅಧಿದೇವತೆಗಳು. ಬ್ರಹ್ಮನೇ ಮುಖ್ಯ ಋಷಿಯು. ಇನ್ನು ನಿಮಗೆ ಸಪ್ತಲೋಕನ್ಯಾಸಗಳನ್ನು ಹೇಳುವೆನು ಕೇಳಿರಿ ॥ ೨೬೫ ॥ ಪಾದನ್ಯಾಸವು ಭೂರ್ಲೋಕವು. ಜಾನುವು ಭುವರ್ಲೋಕವು, ಗುಹ್ಯವು ಸ್ವರ್ಲೋಕವು, ನಾಭಿಯು ಮಹರ್ಲೋಕವು, ॥ ೨೬೬ ॥ ಹೃದಯವು ಜನೋಲೋಕವು, ಕಂಠವು ತಪೋಲೋಕವು, ಹುಬ್ಬು, ಹಣೆಯೂ ಮುಖ್ಯವಾಗಿ ಶಿರವೂ ಸತ್ಯಲೋಕವು ಎಂದು ಹೇಳುವರು. ॥ ೨೬೭ ॥ ಗಾಯತ್ರಿಯನ್ನು ಪ್ರಾರ್ಥಿಸಿ, ವಿಧಿಪೂರ್ವಕ ಪ್ರಾಣಾಯಾಮ ಮಾಡಬೇಕು. ಹ್ಯಾಗಂದರೆ ಬ್ರಹ್ಮಚಾರಿಯೂ ಗೃಹಸ್ಥನೂ ಐದೂ ಬೆರಳುಗಳಿಂದ ॥ ೨೬೮ ॥ ವಾನಪ್ರಸ್ಥ, ಸನ್ಯಾಸಿ, ಹಾಗು ಯತಿಗಳು ಅನಾಮಿಕಾ, ಕನಿಷ್ಠಿಕಾ, ಅಂಗುಷ್ಠಗಳಿಂದ ಮೂಗನ್ನು ಹಿಡಿದು ಓಂ ಭೂಃ। ಓಂ ಭುವಃ। ಓಂ ಸ್ವಃ। ಓಂ ಮಹಃ। ಓಂ ಜನಃ। ಓಂ ತಪಃ। ಓಂ ಸತ್ಯಂ। ಓಂ ತತ್ಸವಿತುರ್ವರೇಣ್ಯಂ, ಓಂ ಬರ್ಗೋದೇವಸ್ಯ ಧೀಮಹಿ, ಧಿಯೋ ಯೋನಃ ಪ್ರಚೋದಯಾತ್, ಓಂ ಅಪೋ ಜ್ಯೋತಿ ರಸೋಽಮೃತಂ, ಬ್ರಹ್ಮ ಭೂರ್ಭುವಃ ಸ್ವರೋಂ, ಓಂ ವಿಷ್ಣವೇ ನಮಃ। ಎಂದು ಒಂದೆರಡು ಬೆರಳುಗಳಿಂದ ಎಡಗಡೆಯ ಮೂಗಿನ ಹೊಳ್ಳೆಯನ್ನು ಮುಚ್ಚಿ, ಬಲಗಡೆಯ ಹೊಳ್ಳೆಯಿಂದ ಕೆಲವು ಕ್ಲಿಪ್ತ ಕಾಲದ ವರೆಗೆ ವಾಯುವನ್ನು ಮೇಲಕ್ಕೆ ಎಳಕೊಂಡು, ಅಲ್ಲಿ ಅಷ್ಟೇ ವೇಳೆ ತಡೆದು, ಮತ್ತೆ ಅಷ್ಟೇ ವೇಳೆಯಲ್ಲಿ ಎಡಗಡೆಯ ಹೊಳ್ಳೆಯಿಂದ ಆ ವಾಯುವನ್ನು ಹೊರಗೆ ಬಿಡಬೇಕು. ಇದಕ್ಕೆ ಪ್ರಾಣಾಯಾಮವೆಂದೆನ್ನುವರು. ಬರಬರುತ್ತ ಆ ವಾಯುವನ್ನು ಎಳಕೊಳ್ಳುವ ಮೇಲೆ ಒಂದು ಸ್ಥಾನದಲ್ಲಿ ನಿಲ್ಲಿಸುವ ಹಾಗು ಹೊರಗೆ ಬಿಡುವ ವೇಳೆಯನ್ನು ಬೆಳಿಸಬಹುದು. ಈ

ಪ್ರಕಾರ ಮೂರು ಸಾರೆ ಪ್ರಾಣಾಯಾಮ ಮಾಡಿ ತ್ರಿಕಾಲಸಂಧ್ಯಾ ಮಾಡುವ ಕಾಲಕ್ಕೂ ಈಪ್ರಕಾರ ಪ್ರಾಣಾಯಾಮ ಮಾಡಬೇಕು. ॥ ೨೧೯–೨೨೦ ॥

## ಮಾರ್ಜನವಿಧಿ

ಎಲೈ ಋಷಿಗಳೇ, ಸ್ಮೃತಿಚಂದ್ರಿಕೆಯಲ್ಲಿದ್ದಂತೆ ಇನ್ನು ಮಾರ್ಜನವಿಧಿಯನ್ನು ಹೇಳುವೆನು ಕೇಳಿರಿ. ॥೨೨೧॥ ಆಪೋಹಿಷ್ಠಾ ಎಂಬ ಸೂಕ್ತಕ್ಕೆ ಸಿಂಧುದ್ವೀಪ ಋಷಿ, ಗಾಯತ್ರೀ ಛಂದಸ್ಸು, ಆಪೋ ದೇವತೆಯು, ಮಾರ್ಜನೇ ವಿನಿಯೋಗಃ ॥ ೨೨೨ ॥ ಎಂದು ಮಂತ್ರವನ್ನು ಅಂದು ಕುಶದ ಪವಿತ್ರ ಧರಿಸಿ ಮಾರ್ಜನ ಮಾಡಿಕೊಳ್ಳಬೇಕು. **ಯಸ್ಯಕ್ಷಯಾಯ ಜನ್ಮಥಾ** ಎಂಬ ಮಂತ್ರದಿಂದ ಪಾದಗಳಲ್ಲಿ ಪ್ರೋಕ್ಷಿಸಿಕೊಳ್ಳಬೇಕು ॥ ೨೨೩ ॥ **ಆಪೋ-ಜನ ಯಥಾಚನಃ** ಎಂಬ ಮಂತ್ರದಿಂದ ತಲೆಯಮೇಲೆ ಪ್ರೋಕ್ಷಿಸಿಕೊಳ್ಳಬೇಕು. **ಸೂರ್ಯಶ್ಚ** ಎಂಬ ಮಂತ್ರದಿಂದ ನೀರನ್ನು ಪ್ರಾಶನಮಾಡಬೇಕು. ॥ ೨೨೪ ॥ ಆಮೇಲೆ ಎರಡು ಆಚಮನ ಮಾಡಬೇಕು. **ದಧಿಕ್ರಾವಣೋ** ಎಂಬ ಮಂತ್ರವನ್ನು ಜಪಿಸಿ, **ಆಪೋಹಿಷ್ಠಾ** ಮಂತ್ರದಿಂದ ಪುನಃ ಮೂರುಸಾರೆ ಮಾರ್ಜನ ಮಾಡಿಕೊಳ್ಳಬೇಕು ಆಮೇಲೆ **ಹಿರಣ್ಯವರ್ಣ** ಎಂಬ ಸೂಕ್ತದಿಂದ ಮಾರ್ಜನ ಮಾಡಿಕೊಂಡು, **ದ್ರುಪದಾದಿವೇತಿ** ಮಂತ್ರದಿಂದ ನೀರನ್ನು ಮೂಸಿನೋಡಿ ಎಡಕ್ಕೆ ಒಗೆಯಬೇಕು. ॥ ೨೨೫ ॥ ಬಳಿಕ ಎರಡು ಆಚಮನ ಮಾಡಬೇಕು ಇನ್ನು ಮಾರ್ಜನ ವಿಧಾನವನ್ನು ಹೇಳುವೆನು. ತೀರ್ಥ ಸೌಟಿನಲ್ಲಿ ನೀರು ತಕ್ಕೊಂಡು ಅದನ್ನು ಎಡಗೈಯಲ್ಲಿ ಹಿಡಿದು ಮಾರ್ಜನ ಮಾಡಿಕೊಳ್ಳುವದು ವಿಶೇಷವಾದದ್ದಿರುತ್ತದೆ. ॥ ೨೨೬ ॥ ಬೆಳ್ಳಿ, ಬಂಗಾರ, ತಾಮ್ರದ ಸೌಟುಗಳು ಹಾಗು ಕಟ್ಟಿಗೆ ಸೌಟುಗಳು ಪವಿತ್ರವಾದವುಗಳು ಅವು ಸಿಗದಿದ್ದರೆ ಎಡಗೈ ಅಂಗೈಯಲ್ಲಿ ನೀರು ಹಾಕಿಕೊಂಡು ಮಾರ್ಜನ ಮಾಡಿಕೊಳ್ಳಬೇಕು. ॥ ೨೨೭ ॥ ಮಣ್ಣಿನ, ದ್ವಿಮುಖಿ, ಭಿನ್ನವಾದ ಪಾತ್ರೆಗಳು ಅಶುದ್ಧವು. ಅವನ್ನು ದೇವ ಪಿತೃಕರ್ಮಗಳಲ್ಲಿ ಸಹ ಉಪಯೋಗಿಸಬಾರದು, ಎಂದು ಶ್ರೀಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. ॥ ೨೨೮ ॥

ಪರಾಶರರು ಋಷಿಗಳನ್ನು ಕುರಿತು ಇನ್ನು ಮಾರ್ಜನ ಸಂಖ್ಯೆಯನ್ನು ಹೇಳುವೆನು ಕೇಳಿರಿ— ತಲೆಯಲ್ಲಿ ಎಂಟು ಸಾರೆ, ಪಾದಗಳಲ್ಲಿ ಒಂಬತ್ತು ಸಾರೆ, **ಯಸ್ಯಕ್ಷಯಾಯ** ಎಂಬ ಮಂತ್ರದಿಂದ ಭೂಮಿಗೆ ಮಾರ್ಜನ ಮಾಡಬೇಕು ॥ ೨೭೯ ॥ ಮಧ್ಯಾಹ್ನದಲ್ಲಿ **ಆಪಃಪುಸಂತು** ಎಂಬ ಮತ್ರದಿಂದಲೂ, ಸಾಯಂಕಾಲದಲ್ಲಿ **ಅಗ್ನಿಶ್ಚ** ಎಂಬ ಮಂತ್ರದಿಂದಲೂ ನೀರನ್ನು ಪ್ರಾಶನ ಮಾಡಬೇಕು ॥ ೨೮೦ ॥ ಆಮೇಲೆ ಎರಡು ಆಚಮನ ಮಾಡಲಿಕ್ಕೇಬೇಕು. ನೀರನ್ನು ಮೂಸಿನೋಡಿ ಬಿಟ್ಟು ಒಮ್ಮೆ ಆಚಮನ ಮಾಡಬೇಕು ॥ ೨೮೧ ॥

## ಅರ್ಘ್ಯದ ವಿಧಾನ

ಮತ್ತೆ ಪರಾಶರರು— ಎಲೈ ಋಷಿಗಳಿರಾ, ಅರ್ಘ್ಯ ಕೊಡುವ ವಿಧಾನವನ್ನು ಹೇಳುವೆನು ಕೇಳಿರಿ ಆಕಳ ಕೋಡಿನಷ್ಟು ಎತ್ತರದ ಮೇಲಿಂದ ಭಕ್ತಿಯಿಂದ ಅರ್ಘ್ಯ ಕೊಡಬೇಕು. ॥ ೨೮೨ ॥ ಹ್ಯಾಗಂದರೆ ಪ್ರಾತಃಕಾಲ, ಮತ್ತು ಸಾಯಂಕಾಲಗಳಲ್ಲಿ ಗಾಯತ್ರೀ ಮಂತ್ರದಿಂದ ಮೂರು ಮೂರು ಸಾರೆ ಅರ್ಘ್ಯ ಕೊಡಬೇಕು. ಮಧ್ಯಾಹ್ನದಲ್ಲಿ **ಹಂಸಃಶುಚಿಷ** ಎಂಬ ಮಂತ್ರದಿಂದ ಅರ್ಘ್ಯ ಕೊಡಬೇಕು ॥ ೨೮೩ ॥ ಪ್ರಾತಃಕಾಲ-ಮಧ್ಯಾಹ್ನ ಕಾಲಗಳಲ್ಲಿ ನಿಂತುಕೊಂಡು ಸಾಯಂಕಾಲದಲ್ಲಿ ಕೂತುಕೊಂಡು ಅರ್ಘ್ಯ ಕೊಟ್ಟು, ಆಮೇಲೆ ಮೂರು ಸಾರೆ ಆಚಮನ ಮಾಡಿ **ಆಸಾವಾದಿತ್ಯ** ಎಂಬ ಮಂತ್ರದಿಂದ ನೀರು ಬಿಡುತ್ತ ಪ್ರದಕ್ಷಿಣೆ ಮಾಡಬೇಕು. ॥ ೨೮೪ ॥ ಅರ್ಘ್ಯ ಕೊಡುವ ಕಾರಣದ ಕಥೆಯನ್ನು ವಿಸ್ತಾರವಾಗಿ ಹೇಳುವೆನು ಕೇಳಿರಿ ಮಂದೇಹರೆಂಬ ಬಹು ಕ್ರೂರರಾದ ಮೂವತ್ತು ಕೋಟಿ ರಾಕ್ಷಸರು ಇರುವರು, ॥ ೨೮೫ ॥ ಅವರು ನಿತ್ಯ ಸೂರ್ಯನ ಸಂಗಡ ಯುದ್ಧ ಮಾಡಲಿಕ್ಕೆ ಬರುವರು. ಆಗ ದೇವತೆಗಳು ಸೂರ್ಯನಿಗೆ ಅಪಜಯವಾದೀತಲ್ಲಾ ಎಂದು ಸಂಶಯ ಪಡುತ್ತ— ॥ ೨೮೬ ॥ ಸೂರ್ಯನಿಗೆ ಅಪಜಯವಾದರೆ ಉದಯಾಸ್ತಗಳು ಆಗಲಿಕ್ಕಿಲ್ಲ ಬ್ರಾಹ್ಮಣರ ಆಚಾರಗಳೂ ಸ್ವಾಹಾಕಾರ ಸ್ವಧಾಕಾರಗಳೂ ನಡೆಯಲಿಕ್ಕಿಲ್ಲ. ॥ ೨೮೭ ॥ ಈ ಪ್ರಕಾರ ಸ್ವಾಹಾಕಾರ, ಸ್ವಧಾಕಾರಗಳು ನಿಂತರೆ ಹವಿಸ್ಸು ಸಿಗದೆ

ದೇವತೆಗಳಾದ ನಮಗೆ ಉಪವಾಸವಾದೀತು, ಸೃಷ್ಟಿಯ ಉತ್ಪತ್ತಿಯಾಗದೆ ಹಾಗೇ ನಿಂತೀತು ಎಂದು ಯಾವತ್ತು ದೇವತೆಗಳು ಹೆದರಿ ಬ್ರಾಹ್ಮಣರಿಗೆ ಅರ್ಘ್ಯ ಕೊಡುವ ಉಪಾಯವನ್ನು ಹೇಳಿರುವರು. ॥ ೨೫೮ ॥ ಆದಕಾರಣ ಬ್ರಾಹ್ಮಣರು ಅರ್ಘ್ಯ ಕೊಡುತ್ತಾರೆ. ಆ ಅರ್ಘ್ಯವು ವಜ್ರಾಯುಧಕ್ಕೆ ಸಮಾನವಾಗಿ ಆ ದೈತ್ಯರಿಗೆ ಬಡಿಯುತ್ತದೆ. ಅದರಿಂದ ಆವರು ನಿತ್ಯವೂ ಪರಾಜಯ ಹೊಂದಿ ಹೋಗುವರು. ॥ ೨೫೯ ॥ ಆ ದೈತ್ಯರು ಬ್ರಹ್ಮವಂಶದವರಿದ್ದು ಅವರನ್ನು ಸಂಹಾರ ಮಾಡಿದಂತಾಗುವದರಿಂದ ಬ್ರಹ್ಮಹತ್ಯಾದೋಷವು ಬರುವದು. **ಅಸಾವಾದಿತ್ಯೋ ಬ್ರಹ್ಮ** ಎಂಬ ಮಂತ್ರದಿಂದ ನಾಲ್ಕು ಹೆಜ್ಜೆಗಳಷ್ಟು ಪ್ರದಕ್ಷಿಣೆ ಮಾಡಿದರೆ ಅದರಿಂದ ಭೂಪ್ರದಕ್ಷಿಣೆ ಮಾಡಿದ ಪುಣ್ಯವುಂಟಾಗಿ ಆ ಬ್ರಹ್ಮಹತ್ಯಾ ದೋಷವು ಪರಿಹಾರವಾಗುವದು ॥ ೨೬೦-೨೬೧ ॥

## ಸಂಧ್ಯಾ ಮಾಡುವ ಸ್ಥಾನ ಹಾಗು ಅದರ ಫಲ

ಮತ್ತೆ ಪರಾಶರರು— ಎಲೈ ಋಷಿಗಳೇ, ನಿಮಗೆ ಸಂಧ್ಯಾ ಮಾಡುವ ಸ್ಥಳಗಳನ್ನೂ ಅವುಗಳ ಫಲವನ್ನೂ ಹೇಳುವೆನು ಕೇಳಿರಿ. ನಿತ್ಯ ಮನೆಯಲ್ಲಿ ಮಾಡಿದರೆ ಒಂದು ಪಟ್ಟು ಫಲವು ಬರುವದು. ॥ ೨೬೨ ॥ ಊರ ಹೊರಗೆ ಮಾಡಿದರೆ ೧೦ ಪಟ್ಟು ಫಲವು ಬರುವದು. ನದಿಯಲ್ಲಿ ಮಾಡಿದರೆ ನೂರು ಪಟ್ಟು ಫಲ ಬರುವದು. ಪುಷ್ಕರ ತೀರ್ಥದಲ್ಲಿ ಮಾಡಿದರೆ ಒಂದು ಸಾವಿರ ಪಟ್ಟು ಫಲ ಬರುವದು ದೇವಗಂಗಾ ನದಿಯಲ್ಲಿ ಮಾಡಿದರೆ ಕೋಟಿ ಪಟ್ಟು ಫಲ ಬರುವದು ॥ ೨೬೩ ॥ ಊರ ಹೊರಗೆ ಸಂಧ್ಯೆಯನ್ನು ಮಾಡಿದ ಕೂಡಲೆ ಸುರಾಪಾನ, ದಿವಾಮೈಥುನ, ಸುಳ್ಳು ಸಾಕ್ಷಿ ಹೇಳಿದ ಪಾಪಗಳು ಕೂಡಲೆ ಸುಟ್ಟುಹೋಗುವವು. ॥ ೨೬೪ ॥

## ಜಪ ಮಾಡುವ ಸ್ಥಳಗಳು

ಇತ್ತ ಶ್ರೀಗುರುಗಳು— ಎಲೈ ಬ್ರಾಹ್ಮಣಾ, ಪರಾಶರರು ಋಷಿಗಳಿಗೆ ಜಪ ಮಾಡುವ ಸ್ಥಳವನ್ನು ವಿಸ್ತಾರವಾಗಿ ಹೇಳುವರು ಕೇಳು. ॥ ೨೬೫ ॥ ಮನೆಯಲ್ಲಿ ಜಪಿಸಿದರೆ ಒಂದು ಪಟ್ಟು ಫಲ, ಗ್ರಾಮದ ಹೊರಗೆ ಜಪಿಸಿದರೆ

ಎರಡು ಪಟ್ಟು ಫಲ, ನದೀ ತೀರದಲ್ಲಿ ಜಪಿಸಿದರೆ ಮೂರು ಪಟ್ಟು ಫಲ, || ೧೯೬ || ಆಕಳು ಕಟ್ಟುವ ಹಾಗು ವೃಂದಾವನ ಇರುವ ಸ್ಥಳಗಳಲ್ಲಿ ೧೦ ಪಟ್ಟು ಫಲ, ಅಗ್ನಿಹೋತ್ರ ಸ್ಥಾನದಲ್ಲಿ ೧೦೦ ವಟ್ಟು ಫಲ, || ೧೯೭ || ತೀರ್ಥ ಹಾಗು ದೇವತಾ ಸನ್ನಿಧಿಯಲ್ಲಿ ಸಾವಿರ ಫಲ, ಹರಿ ಸನ್ನಿಧಿಯಲ್ಲಿ ಶತಕೋಟಿ ಫಲ, ಶಿವ ಸನ್ನಿಧಿಯಲ್ಲಿ ಅನಂತ ಫಲ ಬರುವದು. || ೧೯೮ ||

## ಜಪಕ್ಕೆ ಕೂಡುವ ಆಸನದ ವಿಧಿ ಹಾಗು ಅದರ ಪುಣ್ಯಪಾಪಗಳು

ಎಲೈ ಋಷಿಗಳೇ, ಜಪ ಮಾಡುವ ಯೋಗ್ಯ ಆಸನ ನಿಷೇಧ ಆಸನ ಮತ್ತು ಅವುಗಳಿಂದ ಬರುವ ಪುಣ್ಯ-ಪಾಪಗಳನ್ನು ಹೇಳುವೆನು ಕೇಳಿರಿ || ೧೯೯ || ಕಟ್ಟಿಗೆಯ ಆಸನದ ಮೇಲೆ ಕೂತು ಜಪ ಮಾಡಿದರೆ ನಿರಂತರ ದುಃಖಿ ಹಾಗು ದರಿದ್ರನಾಗುವನು || ೨೦೦ || ಚಿಗುರೆಲೆಯ ಮೇಲೆ ಕೂತರೆ ದುಃಖಿಯಾಗುವನು. ವಸ್ತ್ರದ ಮೇಲೆ ಕೂತರೆ ದರಿದ್ರನಾಗುವದು, ಕಲ್ಲಮೇಲೆ ಕೂತರೆ ರೋಗಿಯಾಗುವನು. || ೨೦೧ || ಭಸ್ಮದಮೇಲೆ ಕೂತರೆ ವ್ಯಾಧಿನಾಶವಾಗುವದು ಕಂಬಳಿಯ ಮೇಲೆ ಕೂತರೆ ಸುಖ-ಸಂತೋಷಗಳಾಗುವವು. ಕೃಷ್ಣಾಜಿನದ ಮೇಲೆ ಕೂತರೆ ಜ್ಞಾನಪ್ರಕಾಶವಾಗುವದು ವ್ಯಾಘ್ರಚರ್ಮದಮೇಲೆ ಕೂತರೆ ಮೋಕ್ಷವಾಗುವದು. || ೨೦೨ || ಕುಶಾಸನದ ಮೇಲೆ ಕೂತರೆ ಸರ್ವ ರೋಗನಿವಾರಣೆಯಾಗಿ, ವಶೀಕರಣ ಉಂಟಾಗುವದು ಮತ್ತು ಅದರಿಂದ ಪಾಪಗಳೆಲ್ಲ ದಹಿಸಿ ಆಯುಷ್ಯ, ಪ್ರಜ್ಞೆಯೂ ಹೆಚ್ಚಾಗುವವು. || ೨೦೩ || ಗಾಯತ್ರಿಯನ್ನು ಧ್ಯಾನ ಮಾಡಿ ಓಂ ಎಂದು ಪವಿತ್ರವಾಗಿ ಜಪಿಸಿದರೆ ಸರ್ವ ಪಾಪಗಳೂ ಹೋಗುವವು || ೨೦೪ ||

## ಗಾಯತ್ರಿಯ ಸ್ವರೂಪ ವರ್ಣನ

ಈ ಗಾಯತ್ರಿ ಸ್ವರೂಪವನ್ನು ವರ್ಣಿಸಲಿಕ್ಕೆ ಆಶ್ಚರ್ಯಕರವಾಗಿರುವದು. ಗಾಯತ್ರೀ ದೇವಿಯು ರಕ್ತಾಂಗಿಯು. ರಕ್ತವಸ್ತ್ರ ಧಾರಿಣಿಯು. ಹಂಸವಾಹಿನಿಯು ಇರುವಳು. || ೨೦೫ || ಆಕಾರವು ಬ್ರಹ್ಮನು

ಅಧಿದೇವತಾ, ಗಾಯತ್ರಿಗೆ ನಾಲ್ಕು ಮುಖಗಳೂ ನಾಲ್ಕು ಭುಜಗಳೂ ಉಂಟು. ಆಕೆಯ ಕೈಯಲ್ಲಿ ಕಮಂಡಲವನ್ನೂ ಅಕ್ಷಸೂತ್ರವನ್ನೂ ಧರಿಸಿರುವಳು. || ೩೦೬ || ಎಲೈ ಬ್ರಾಹ್ಮಣರೇ ಕೇಳಿರಿ— ಇದರ ಸಮಾಗಮದಲ್ಲಿ ಋಗ್ವೇದ ಇರುತ್ತದೆ. ಅಗ್ನಿಹೋತ್ರ ಫಲವನ್ನು ಆವಾಹಿಸುವೆನು ಎಂದು ಅಂದು ಆಮೇಲೆ **"ಆಯಾತು ವರದಾ ದೇವಿ"** ಎಂದು ಜಪಿಸಬೇಕು. || ೩೦೭ || ಈ ಗಾಯತ್ರೀ ಮಂತ್ರಕ್ಕೆ ಋಷಿ, ದೇವತಾ, ಗಾಯತ್ರೀ ನಾದ್ರಶ್ಯಗಳು ಪ್ರಸಿದ್ಧವಾಗಿರುತ್ತವೆ ಇನ್ನು ನಿಮಗೆ ಪ್ರಾತಃಸಂಧ್ಯೆಯ ವಿಧಿಯನ್ನು ಹೇಳುವೆನು ಕೇಳಿರಿ || ೩೦೮ ||
ವಿಶ್ವೇ ದೇವಾ ಋಷಯಃ

## ಪ್ರಾತಃಸಂಧ್ಯಾವಿಧಿ

ಗಾಯತ್ರೀ ದೇವತಾ, ಗಾಯತ್ರೀ ಅನುಷ್ಟುಪ್‌ಛಂದಃ। **ಓಂ ಆದಿತ್ಯ ದೇವತಾ ದೇವಾ।** ಈ ಪ್ರಕಾರ ಭೇದವನ್ನು ಪ್ರಾತಃಸಂಧ್ಯೆಯಲ್ಲಿ ಹೇಳುವರು. ಗಾಯತ್ರೀ ದೇವತಾ ಗಾಯತ್ರೀ ಛಂದಃ || ೩೦೯ || ಗಾಯತ್ರೀ ಆವಾಹನೇ ವಿನಿಯೋಗಃ। ಈ ಪ್ರಕಾರ ಮಧ್ಯಾಹ್ನ ಸಂಧ್ಯೆಯಲ್ಲಿ ಹೇಳುವರು. ಸವಿತಾ ದೇವತಾ, ಗಾಯತ್ರೀ ಛಂದಃ ಸರಸ್ವತೀ ಆವಾಹನೇ ವಿನಿಯೋಗಃ ಎಂದು ಸಾಯಂಸಂಧ್ಯಾದಲ್ಲಿ ಹೇಳುವರು. || ೩೧೦ ||

## ಪ್ರಾತಃಸಂಧ್ಯೆಯ ಗಾಯತ್ರೀ ಧ್ಯಾನ

ಗಾಯತ್ರೀ ದೇವತಾ, ಗಾಯತ್ರೀ ಅನುಷ್ಟುಪ್ ಛಂದಃ ಗಾಯತ್ರೀ ಆವಾಹನೇ ವಿನಿಯೋಗಃ ಎಂದು ಗಾಯತ್ರೀ ಧ್ಯಾನ ಮಾಡಬೇಕು. ಹ್ಯಾಗಂದರೆ— ಗಾಯತ್ರಿಯು ರಕ್ತಾಂಗಿ, ರಕ್ತವಸ್ತ್ರಧಾರಿಣಿ, ಹಂಸವಾಹನೆ, || ೩೧೧ || ಚತುರ್ಬಾಹು, ಚತುರ್ಮುಖವುಳ್ಳವಳು ಕೈಗಳಲ್ಲಿ ಕಮಂಡಲು ಮತ್ತು ಅಕ್ಷಸೂತ್ರಗಳನ್ನು ಧರಿಸಿದವಳು. ಋಗ್ವೇದ ಸಹಿತ ಅಗ್ನಿಹೋತ್ರ ಫಲವುಳ್ಳವಳು. || ೩೧೨ || ಎಂದು ಧ್ಯಾನ ಮಾಡಿ, ಆಮೇಲೆ

ಅಕ್ಷರಜ್ಞಾನದಿಂದ ಏಕಚಿತ್ತನಾಗಿ ಜಪಿಸಬೇಕು ॥ ೩೧೩ ॥ ಹ್ಯಾಗಂದರೆ-- ಓಂಕಾರ್ಕ ಶಿಖಾಮಾವಾ ಹಯಾಮಿ, ಛಂದ ಋಷೀನಾವಾ ಹಯಾಮಿ, ಶ್ರೀಯಮಾವಾ ಹಯಾಮಿ, ಬಲಮಾವಾ ಹಯಾಮಿ. ॥ ೩೧೪ ॥ ಈ ಪ್ರಕಾರವಾಗಿ ಅಂದು ಯೋಗ್ಯ ವೇಳೆಗೆ ಪ್ರಾತಃಸಂಧ್ಯಾ ಮಾಡಬೇಕು. ಇನ್ನು ಧ್ಯಾನ ಆವಾಹನಪೂರ್ವಕ ಮಧ್ಯಾಹ್ನ ಸಂಧ್ಯಾ ಹ್ಯಾಗೆ ಮಾಡಬೇಕೆಂಬದನ್ನು ಹೇಳುವೆನು ಕೇಳಿರಿ. ॥ ೩೧೫ ॥

## ಮಧ್ಯಾಹ್ನ ಸಂಧ್ಯಾವಿಧಿ ಮತ್ತು ಧ್ಯಾನ

ಎಲೈ ಋಷಿಗಳೇ ಕೇಳಿರಿ— ಅಭಿಭುರೋ ಸಾವಿತ್ರೀ, ಯೌವನ ಸಾವಿತ್ರೀ ದೇವತಾ, ಸಾವಿತ್ರೀ ಛಂದಃ, ಸಾವಿತ್ರೀ ಆವಾಹನೇ ವಿನಿಯೋಗಃ ಎಂದು ಆಮೇಲೆ ಗಾಯತ್ರೀ ಧ್ಯಾನ ಮಾಡಬೇಕು ॥೩೧೬॥ ಹ್ಯಾಗಂದರೆ— ಶ್ವೇತಾಂಗಿ, ಶ್ವೇತವಸ್ತ್ರಧಾರಿಣಿ, ಪವಿತ್ರವಾದ ವೃಷಭವಾಹಿನಿ, ಉಕಾರ, ರುದ್ರಗಣದೇವತೆ, ಪಂಚಮುಖಿ, ॥ ೩೧೭ ॥ ವರದ ಹಾಗು ಅಭಯ ಹಸ್ತಗಳುಳ್ಳವಳು, ರುದ್ರಾಕ್ಷಮಾಲೆ, ತ್ರಿಶೂಲಗಳನ್ನು ಧರಿಸಿದವಳು ಯಜು-ರ್ವೇದದ ಅಗ್ನಿಷ್ಟೋಮದ ಫಲವುಳ್ಳವಳು ಎಂದು ಧ್ಯಾನ ಮಾಡಿ ॥ ೩೧೮ ॥ ಆಮೇಲೆ ಓಂಕಾರಶಿಖಾಮಾವಾ ಹಯಾಮಿ ಛಂದ ಋಷಿನಾವಾಹಯಾಮಿ, ಹ್ರಿಯಮಾವಾಹಯಾಮಿ ಎಂದು ಜಪ ಮಾಡಿ ಮಧ್ಯಾಹ್ಯ ಸಂಧ್ಯಾ ಮಾಡಬೇಕು ॥ ೩೧೯ ॥

## ಸಾಯಂಸಂಧ್ಯಾವಿಧಿ ಗಾಯತ್ರೀ ಧ್ಯಾನ

ಎಲೈ ಋಷಿಗಳೇ, ಈಗ ನಿಮಗೆ ಸಾಯಂಸಂಧ್ಯಾ ಧ್ಯಾನ-ವಿಧಾನಗಳನ್ನು ಹೇಳುವೆನು ಏಕಚಿತ್ತದಿಂದ ಕೇಳಿರಿ. ॥ ೩೨೦ ॥ ಅಭಿಭುರೋ ಸರಸ್ವತಿ, ವೃದ್ಧಾ ಸರಸ್ವತಿ ದೇವತಾ, ಸರಸ್ವತೀ ಛಂದಃ । ಸರಸ್ವತ್ಯಾವಾಹನೇ ವಿನಿಯೋಗಃ ಎಂದು ಅಂದಮೇಲೆ ಗಾಯತ್ರೀ ಧ್ಯಾನ ಮಾಡಬೇಕು. ಹ್ಯಾಗಂದರೆ— ಕೃಷ್ಣಾಂಗಿ,

ಕೃಷ್ಣವಸ್ತ್ರಧಾರಿಣಿ, ಗರುಡವಾಹನೆ, ‖ ೩೨೧ ‖ ಮಕಾರ, ವಿಷ್ಣುದೇವತೆ, ಚತುರ್ಭುಜಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳನ್ನು ಧರಿಸಿದವಳು, ಸಾಮವೇದ ಸ್ವರೂಪಳು, ‖ ೩೨೨ ‖ ವಾಜಪೇಯ ಯಜ್ಞದ ಫಲವುಳ್ಳವಳು ಎಂದು ಧ್ಯಾನ ಮಾಡಬೇಕು. ‖ ೩೨೩ ‖ ಆಮೇಲೆ ಓಂಕಾರಶಿಖಾಮಾವಾಹಯಾಮಿ, ಛಂದಋಷಿನಾವಾಹ ಯಾಮಿ, ಶ್ರೀಮಾವಾಹಯಾಮಿ, ಬಲಮಾವಾಹಯಾಮಿ, ಗಾಯತ್ರೀಯಾ ಗಾಯತ್ರಿ ಛಂದಃ, ಎಂದು ಸಾಯಂ ಸಂಧ್ಯಾ ಮಾಡಬೇಕೆಂದು ಪರಾಶರರು ಋಷಿಗಳಿಗೆ ಹೇಳಿ ಮತ್ತೆ ಹೇಳುವರು. ‖ ೩೨೪ ‖ ಆಮೇಲೆ ಪಂಚ ಶೀರ್ಷೋಪನಯನೇ ವಿನಿಯೋಗಃ । ಪ್ರಣವಸ್ಯ ಪರಬ್ರಹ್ಮ ಋಷಿಃ । ಪರಮಾತ್ಮಾ ದೇವತಾ, ದೈವೀ ಗಾಯತ್ರೀ ಛಂದಃ ‖ ೩೨೫ ‖ ಉದಾತ್ತ ಸ್ವರಿತಸ್ವರಃ, ಶುಕ್ಲವರ್ಣಃ, ಜ್ಯೋತಿಸ್ವರೂಪಂ, ಸರ್ವ ದೇವಮಯಂ ಜಗತ್ಸ್ವ-ರೂಪಂ, ಅಕಾರ, ಉಕಾರ, ಮಕಾರ ಗಣಃ, ಅಗ್ನಿರ್ವಾಯುಸೂರ್ಯ (ಋಷಯಃ) ಗಾಯತ್ರೀ ತ್ರಿಷ್ಟುಪ್, ಜಗತೀ ಛಂದಃ । ಬ್ರಹ್ಮ ವಿಷ್ಣು ಮಹೇಶ್ವರ ದೇವತಾಃ । ಋಗ್ಯಜುಸ್ಸಾಮ ಸ್ವರೂಪಗಳು, ‖ ೩೨೬ ‖ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿಗಳು ಉಪಸ್ಥಾನಗಳು, ಭೂಮ್ಯಾಕಾಶದ್ಯೌಃ ತತ್ವಗಳು ಉದಾತ್ತ ಅನುದಾತ್ತ ಸ್ವರಿತಸ್ವರಗಳು ‖ ೩೨೭ ‖ ಪೀತ, ವಿದ್ಯುತ್-ಕೃಷ್ಣವರ್ಣಗಳು ಪ್ರಾತರ್ಮಧ್ಯಾಹ್ನ ತೃತೀಯ ಸವನಗಳು, ವಿಶ್ವತೇಜಸ ಪ್ರಾಜ್ಞ ಸ್ವರೂಪಗಳು ಜಾಗೃತ-ಸ್ವಪ್ನ-ಸುಷುಪ್ತಿ ಅವಸ್ಥೆಗಳು ಇರುವವು. ‖ ೩೨೮ ‖ ಈ ಪ್ರಕಾರ ತ್ರಿಪದಾ ಗಾಯತ್ರಿಗೆ ಮೂರು ಪ್ರಕಾರದ ಧ್ಯಾನಗಳು ಅವೆ. ಇನ್ನು ಜಪದ ವಿಧಾನವನ್ನು ಹೇಳುವೆನು ಏಕಚಿತ್ತ ದಿಂದ ಕೇಳಿರಿ. ‖ ೩೨೯ ‖

## ಗಾಯತ್ರೀ ಜಪದ ವಿಧಾನವು

ಮಮೋಪಾತ್ತ ದುರಿತಕ್ಷಯದ್ವಾರಾ, ಶ್ರೀ ಪರಮೇಶ್ವರ ಪ್ರೀತ್ಯರ್ಥಂ, ಜಪೇವಿನಿಯೋಗಃ, ಓಂ ಅಂ ನಾಭೌ, ಉಂ ಹೃದಯೆ, ಮಂ ಕಂಠೆ, ‖ ೩೩೦ ‖ ಓಂ ಭೂಃ ಅಕ್ಷರ ಮಂತ್ರಕ್ಕೆ ಗಾಯತ್ರೀ ಛಂದಸ್ಸು,

ಅಗ್ನಿದೇವತೆ, ವಿಶ್ವಾಮಿತ್ರ ಋಷಿಯು ॥ ೩೩೧ ॥ ಷಡ್ಜಸ್ವರ, ಶ್ವೇತವರ್ಣ, ಎಂದು ಅಂದು ಪಾದಸ್ಪರ್ಶ ಮಾಡಿಕೊಂಡು ಪ್ರಾಣಾಯಾಮ ಮಾಡಿ ೨ನೇ ವ್ಯಾಹೃತಿಯನ್ನು ಅನ್ನಬೇಕು. ॥ ೩೩೨ ॥ ಓಂ ಭುವಃ ಎಂಬ ಅಕ್ಷರ ಮಂತ್ರಕ್ಕೆ ಉಷ್ಣಿಕ್ ಛಂದಸ್ಸು, ವಾಯುದೇವತೆ, ಭೃಗು ಋಷಿಯು ॥ ೩೩೩ ॥ ಋಷಭಸ್ವರ, ಶಾಮವರ್ಣ ರೂಪ, ಈ ಪ್ರಕಾರ ರೂಪ ಉಚ್ಚಾರ ಮಾಡಿ ಪಾದಸ್ಪರ್ಶ ಮಾಡಿ ಈ ಪ್ರಕಾರ ನೀವು ಧ್ಯಾನ ಮಾಡಿ ಆಮೇಲೆ ಜಾನುಮಧ್ಯದಲ್ಲಿ ನ್ಯಾಸ ಮಾಡಬೇಕು ॥ ೩೩೪ ॥ ಹ್ಯಾಗಂದರೆ, ಪ್ರಾಣಾಯಾಮೇ ವಿನಿಯೋಗಃ ಎಂದು ಭಕ್ತಿಭಾವದಿಂದ ಜಾನುಮಧ್ಯದಲ್ಲಿ ನ್ಯಾಸ ಮಾಡಬೇಕು. ಆಮೇಲೆ ಓಂ ಸ್ವಃ ಎಂಬ ವ್ಯಾಹೃತಿ ಅಂದು ಭಕ್ತಿಯಿಂದ ಧ್ಯಾನ ಮಾಡಬೇಕು ಹ್ಯಾಗಂದರೆ— ॥ ೩೩೫ ॥ ಸ್ವಃ ವ್ಯಾಹೃತಿ ಮಂತ್ರಕ್ಕೆ ಅನುಷ್ಟುಪ್ ಛಂದಸ್ಸು, ಸವಿತಾ ದೇವತೆ, ಭಾರದ್ವಾಜ ಋಷಿ, ॥ ೩೩೬ ॥ ಗಾಂಧಾರ ಸ್ವರ, ಪೀತವರ್ಣ, ಕಟಸ್ಪರ್ಶ ಮಾಡಿ ಪ್ರಾಣಾಯಾಮೇ ವಿನಿಯೋಗಃ ಎಂದು ತೃತೀಯವ್ಯಾಹೃತಿ ಮಂತ್ರ ಅನ್ನಬೇಕು. ॥ ೩೩೭ ॥ ಓಂ ಮಹಃ ಮಂತ್ರಕ್ಕೆ ಬೃಹತೀ ಛಂದಸ್ಸು, ಬೃಹಸ್ಪತಿ ದೇವತಾ, ಮುಖ್ಯವಾಗಿ ವಸಿಷ್ಠ ಋಷಿ ॥ ೩೩೮ ॥ ಮಧ್ಯಮ ಸ್ವರ, ಪಿಶಂಗ ವರ್ಣ, ಈ ಪ್ರಕಾರ ಧ್ಯಾನ ಮಾಡಿ ನಾಭಿ ಮುಟ್ಟಿ ಕೂಡಲೆ ಪ್ರಾಣಾಯಾಮೇ ವಿನಿಯೋಗಃ ಎಂದು ಅನ್ನಿರಿ. ॥ ೩೩೯ ॥ ಓಂ ಜನಃ ಮಂತ್ರಕ್ಕೆ ಪಂಕ್ತಿ ಛಂದಸ್ಸು, ವರುಣ ದೇವತಾ, ಗೌತಮ ಋಷಿ, ಪಂಚಮ ಸ್ವರ, ॥೩೪೦॥ ನೀಲವರ್ಣದ ರೂಪ, ಈ ಪ್ರಕಾರ ಹೃದಯ ಮುಟ್ಟಿ ನ್ಯಾಸ ಮಾಡಿ ಪ್ರಾಣಾಯಾಮ ಮಾಡಬೇಕು. ॥ ೩೪೧ ॥ ಓಂ ತಪಃ ಮಂತ್ರಕ್ಕೆ ತ್ರಿಷ್ಟುಪ್ ಛಂದಸ್ಸು, ಇಂದ್ರ ದೇವರು, ಕಶ್ಯಪ ಋಷಿಯು, ಧೈವತ ಸ್ವರ, ॥ ೩೪೨ ॥ ಲೋಹವರ್ಣ ಎಂದು ಕರಸ್ಪರ್ಶಮಾಡಿ ನ್ಯಾಸ ಮಾಡಿ ಪ್ರಾಣಾಯಾಮ ಮಾಡಬೇಕು. ॥ ೩೪೩ ॥ ಓಂ ಸತ್ಯಂ ಎಂಬ ಮಂತ್ರಕ್ಕೆ ಜಗತೀ ಛಂದಸ್ಸು, ವಿಶ್ವೇದೇವರು, ಅಂಗೀರಸ ಋಷಿಯು, ನಿಷಾದ ಸ್ವರ, ॥ ೩೪೪ ॥ ಕನಕ ವರ್ಣದ ರೂಪ ಎಂದು ಹುಬ್ಬು-ಹಣೆಗಳನ್ನು ಮುಟ್ಟಿ ಭಕ್ತಿಯಿಂದ ನ್ಯಾಸ ಮಾಡಿ ಪ್ರಾಣಾಯಾಮ ಮಾಡಬೇಕು. ॥ ೩೪೫ ॥ ಇಷ್ಟು ನ್ಯಾಸ ಮಾಡಿ ಕೈಗಳನ್ನು ತಲೆಯಮೇಲಿಡಿರಿ. ಆಮೇಲೆ ವಿಧಾನಪೂರ್ವಕ ಧ್ಯಾನ

ಮಾಡಿರಿ. ಹೇಳುತ್ತೇನೆ ಕೇಳಿರಿ— ॥ ೩೪೬ ॥ ತಲೆಯನ್ನು ಮುಟ್ಟಿ ಅನುಷ್ಟುಪ್ ಛಂದಃ, ಪ್ರಜಾಪತಿ ಋಷಿ, ಪರಮಾತ್ಮಾ ದೇವತಾ ॥ ೩೪೭ ॥ ಎಂದು ಪ್ರಾಣಾಯ ಮಾಡಿ ಆಮೇಲೆ ಭಕ್ತಿಯಿಂದ ಓಂ ಆಪೋ ಜ್ಯೋತಿ ಎಂದು ಮಂತ್ರ ಅನ್ನಬೇಕು. ॥ ೩೪೮ ॥ ಹ್ಯಾಗಂದರೆ— ಓಂ ಆಪೋಜ್ಯೋತಿ ರಸೋಮೃತಂ ಬ್ರಹ್ಮ ಭೂರ್ಭುವಃ ಸ್ವರೋಂ ಎಂದು ಅಂದು ತ್ರಿಪದಾ ಗಾಯತ್ರೀ ಧ್ಯಾನ ಮಾಡಿ ಅದೇ ರೀತಿಯಿಂದ ಅಂಗನ್ಯಾಸ ಮಾಡಬೇಕು. ॥ ೩೪೯ ॥ ಎಲೈ ಋಷಿಗಳೇ ಕೇಳಿರಿ— ೨೪ ಅಕ್ಷರಗಳುಳ್ಳ ತ್ರಿಪದಾ ಗಾಯತ್ರೀ ಮಂತ್ರದ ಪ್ರತಿಯೊಂದು ಅಕ್ಷರಕ್ಕೆ ನ್ಯಾಸವನ್ನು ಹೇಳುವೆನು. ॥ ೩೫೦ ॥ ಈ ತ್ರಿಪದಾ ಗಾಯತ್ರೀ ಮಂತ್ರಕ್ಕೆ ಪ್ರತಿಯೊಂದು ಅಕ್ಷರಕ್ಕೂ ವಿಶ್ವಾಮಿತ್ರ ಋಷಿ ಹಾಗು ಗಾಯತ್ರೀ ಛಂದಸ್ಸು ಇವು ಮುಖ್ಯವಾಗಿರುವವು. ದೇವತಾ ಮುಂತಾದವು ಬೇರೆ ಬೇರೆ ಇರುವವು. ಕಾರಣ ಅವುಗಳ ವರ್ಣ, ದೇವತಾ, ನ್ಯಾಸಗಳನ್ನು ಹೇಳುವೆನು ಏಕಚಿತ್ತದಿಂದ ಕೇಳಿರಿ. ॥ ೩೫೧-೩೫೨ ॥ ಓಂ ತತ್ಸವಿತುರ್ವರೇಣ್ಯಂ, ಭರ್ಗೋ ದೇವಸ್ಯ ಧೀಮಹಿ ಧೀಯೋ ಯೋನಃ ಪ್ರಚೋದಯಾತ್ ಈ ತ್ರಿಪದಾ ಗಾಯತ್ರೀ ಮಂತ್ರದ ಒಂದೊಂದು ಅಕ್ಷರಕ್ಕೆ ನ್ಯಾಸ ದೇವತಾ ಮುಂತಾದವುಗಳನ್ನು ಹೇಳುವೆನು

(೧) **'ತತ್'** ವರ್ಣ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಅಗ್ನಿದೇವತಾ, ಅಗಸೇ ಹೂವಿನ ವರ್ಣ, ವಾಯುವ್ಯ ಕೋನಸ್ಥಾನ ಎಂದು ಪಾದಾಂಗುಷ್ಠನ್ಯಾಸ ಮಾಡಬೇಕು. ಅಂದರೆ ಎಲ್ಲ ಪಾಪ ನಾಶವಾಗುವವು ॥ ೩೫೩-೩೫೪ ॥

(೨) **ತ್ಸ,** ವರ್ಣ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ವಾಯುದೇವತೆ, ಹಳದಿಯ ಬಣ್ಣಾ, ಸೌಮ್ಯ ರೂಪ ಎಂದು ತಿಳಿದು ಗುಲ್ಫನ್ಯಾಸ ಮಾಡಬೇಕು. ಇದರಿಂದ ಉಪ ಪಾಪ ಪರಿಹಾರವಾಗುವದು. ॥ ೩೫೫-೩೫೬ ॥

(೩) **ವಿ,** ವರ್ಣಮಂತ್ರಕ್ಕೆ ವಿಶ್ವಾಮಿತ್ರ ಋಷಿ, ದೇವೀ ಗಾಯತ್ರೀ ಛಂದಸ್ಸು, ಸೂರ್ಯ ದೇವತೆ, ಇಂದ್ರನೀಲ ಮಿಂಚಿನ ಬಣ್ಣ ಎಂದು ತಿಳಿದು ಜಂಘನ್ಯಾಸ ಮಾಡಬೇಕು. ಇದರಿಂದ ಮಹಾ ಪಾಪ ಪರಿಹಾರ ವಾಗುವದು. || ೩೫೭-೩೫೮ ||

(೪) **ತು,** ವರ್ಣ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ವಿದ್ಯುದ್ದೇವತೆ, ಬೆಂಕಿಯ ಕಾಂತಿ, ಸೌಮ್ಯ ರೂಪ ಎಂದು ತಿಳಿದು ಇದಕ್ಕೂ ಜಾನುನ್ಯಾಸ ಮಾಡಬೇಕು. ಆದರಿಂದ ಮಹಾರೋಗ ಪರಿ ಹಾರವಾಗುವದು || ೩೫೯-೩೬೦ ||

(೫) **ರ್ವ,** ವರ್ಣಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಯಮ ದೇವತೆ, ಬೆಂಕಿಯ ಕಾಂತಿ, ಸೌಮ್ಯ ರೂಪ, ಊರುನ್ಯಾಸ ಮಾಡಿದರೆ ಭ್ರೂಣಹತ್ಯಾ ಪಾಪ ಪರಿಹಾರವಾಗುವದು || ೩೬೧-೩೬೨ ||

(೬) **ರೇ,** ವರ್ಣ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ವರುಣ ದೇವತಾ ಇರು ವದು. ಶುದ್ಧ ಸ್ಫಟಿಕ ಕಾಂತಿ, ಗುಹ್ಯ ಸ್ಥಳದಲ್ಲಿ ನ್ಯಾಸ ಮಾಡಬೇಕು, ಇದರಿಂದ ಅಗಮ್ಯಾಗಮನ ಪಾಪ ಹೋಗುವದು | ೩೬೩ ||

(೭) **ಣಿ,** ವರ್ಣಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ವಿದ್ಯುತ್ಪ್ರಕಾಶ ರೂಪ, ಬಾರ್ಹಸ್ಪತ್ಯ ಎಂಬ ಹೆಸರು, ಬೃಹಸ್ಪತಿ ದೇವತಾ ಎಂದು ತಿಳಿದು ವೃಷಣನ್ಯಾಸ ಮಾಡಬೇಕು. ಇದರಿಂದ ಅಭಕ್ಷ್ಯಪಾಪ ನಾಶವಾಗುವದು. || ೩೬೪-೩೬೫ ||

**ಯಂ,** ಎಂಬ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ತಾರಕ ದೇವತೆ, ಶಾಂತಾಕಾರ ವರ್ಣ, ಕಟಿಸ್ಥಾನ, ಸಗುಣನ್ಯಾಸ ಮಾಡಬೇಕು. ಇದರಿಂದ ದೇಹಹತ್ಯಾಪಾಪ ನಾಶವಾಗುವದು. || ೩೬೬-೩೬೭ ||

(೮) **ಭ,** ಎಂಬ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಪರ್ಜನ್ಯ ದೇವತಾ, ಉತ್ತಮವಾದ ಮೇಘವರ್ಣ, ಎಂದು ತಿಳಿದು ನಾಭಿನ್ಯಾಸ ಮಾಡಬೇಕು. ಇದರಿಂದ ಗುರುಹತ್ಯಾ ಪಾಪ ನಾಶವಾಗುವದು. ॥ ೩೬೮-೩೬೯ ॥

(೯) **ಗೋ,** ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ರಕ್ತವರ್ಣ, ಇಂದ್ರ ದೇವತೆ, ಉದರನ್ಯಾಸ ಮಾಡಬೇಕು. ಇದರಿಂದ ಗೋಹತ್ಯಾ ಪಾಪ ನಾಶವಾಗುವದು ॥ ೩೭೦-೩೭೧ ॥

(೧೦) **ದೇ,** ಎಂಬ ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಗಂಧರ್ವ ದೇವತೆ ಎಂದು ತಿಳಿದು ಸ್ತನನ್ಯಾಸ ಮಾಡಬೇಕು. ಇದರಿಂದ ಸ್ತ್ರೀಹತ್ಯಾ ಪಾಪ ನಾಶವಾಗುವದು. ॥ ೩೭೨-೩೭೩ ॥

(೧೧) **ವ,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಶುಕ್ಲ ವರ್ಣ, ರುದ್ರ ಹಾಗು ಪೂಜಾ ದೇವತೆಗಳು, ಹೃದಯನ್ಯಾಸ ಮಾಡಬೇಕು. ಇದರಿಂದ ವೈಶ್ಯ ಸ್ತ್ರೀಸಂಗ ಮಾಡಿದ ದೋಷ ಪರಿಹಾರವಾಗುವದು. ॥ ೩೭೪-೩೭೫ ॥

(೧೨) **ಸ್ಯ,** ಎಂಬ ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಚೆನ್ನದಂತೆ ಸುರಸ ವರ್ಣ, ಮಿತ್ರ ದೇವತೆ, ಎಂದು ತಿಳಿದು ಕಂಠನ್ಯಾಸ ಮಾಡಬೇಕು. ಇದರಿಂದ ಖೊಟ್ಟಿ ವ್ಯವಹಾರ ಮಾಡಿದ ಪಾಪ ನಾಶವಾಗುವದು. ॥ ೩೭೬-೩೭೭ ॥

(೧೩) **ಧೀ,** ಎಂಬ ಅಕ್ಷರಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಬಿಳೀ ಕಮಲದ ಬಣ್ಣ, ತ್ವಷ್ಟಾ, ಹಾಗು ವಿಷ್ಣು ದೇವತೆಗಳು, ಎಂದು ತಿಳಿದು ದಂತನ್ಯಾಸ ಮಾಡಬೇಕು. ಇದರಿಂದ ಪಿತೃಹತ್ಯಾ ಪಾಪ ನಾಶವಾಗುವದು. ॥ ೩೭೮-೩೭೯ ॥

(೧೪) **ಮು,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ತೇಜೋಮಯವಾದ ಪದ್ಮವರ್ಣ, ವಾಸುದೇವ ದೇವತೆ, ಎಂದು ತಿಳಿದು ತಾಲುಸ್ಥಾನನ್ಯಾಸ ಮಾಡಬೇಕು. ಇದರಿಂದ ಸರ್ವ ಜನ್ಮದ ಪಾಪ ನಾಶವಾಗುವದು. ‖ ೩೮೦-೩೮೧ ‖

(೧೫) **ಹಿ,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಶಂಖ ವರ್ಣ, ವಾಸುದೇವ ಹಾಗು ಮೇರು ದೇವತೆಗಳು, ಎಂದು ನಾಸಿಕನ್ಯಾಸ ಮಾಡಬೇಕು, ಇದರಿಂದ ಸರ್ವ ಪಾಪ ನಾಶವಾಗುವದು. ‖ ೩೮೨-೩೮೩ ‖

(೧೬) **ಧೀ,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಸೋಮದೇವತೆ, ಪಾಂಡುರ ವರ್ಣ, ಎಂದು ನೇತ್ರನ್ಯಾಸ ಮಾಡಬೇಕು. ಇದರಿಂದ ಪಾಣಿಗ್ರಹಣ ಪಾಪ ನಾಶವಾಗುವದು ‖ ೩೮೪-೩೮೫ ‖

(೧೭) **ಯೋ,** ಎಂಬ ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ರಕ್ತದಂತೆ ಗೌರವರ್ಣ, ಯಮದೇವತೆ, ಎಂದು ಭ್ರೂಮಧ್ಯ ನ್ಯಾಸ ಮಾಡಬೇಕು ಇದರಿಂದ ಪ್ರಾಣಿಹತ್ಯಾ ಪಾಪ ನಾಶವಾಗುವದು. ‖ ೩೮೬-೩೮೭ ‖

(೧೮) **ಯೋ,** ಎಂಬ ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಚಿನ್ನದ ವರ್ಣ, ವಿಶ್ವೇ ದೇವತೆ, ಎಂದು ಲಲಾಟನ್ಯಾಸ ಮಾಡಬೇಕು. ಇದರಿಂದ ಸರ್ವ ಪಾಪ ಪರಿಹಾರ. ‖೩೮೮-೩೮೯‖

(೧೯) **ನಃ,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಸೂರ್ಯಸಮಾನ ಕಾಂತಿ, ಅಶ್ವಿನೀ ದೇವತೆಗಳು, ಎಂದು ಉದಿತ ಪ್ರಾಣ್ಮುಖಾನ್ಯಾಸ ಮಾಡಬೇಕು ಇದರಿಂದ ದೇಹವು ಕಾಂತಿಕರವಾಗುವದು. ‖ ೩೯೦-೩೯೧ ‖

(೨೦) **ಪ್ರ,** ಎಂಬ ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ನೀಲವರ್ಣ, ಪ್ರಜಾಪತಿ ದೇವತಾ, ಎಂದು ದಕ್ಷಿಣಭಾಗ ನ್ಯಾಸ ಮಾಡಬೇಕು ಇದರಿಂದ ವಿಷ್ಣುಸಾಯುಜ್ಯವಾಗುವದು. || ೩೯೨-೩೯೩ ||

(೨೧) **ಚೋ,** ಎಂಬ ಅಕ್ಷರ ಮಂತ್ರಕ್ಕೆ, ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಕುಂಕುಮದ ವರ್ಣ, ಸರ್ವ ದೇವತೆಗಳು ಎಂದು ಪಶ್ಚಿಮಭಾಗದ ನ್ಯಾಸ ಮಾಡಬೇಕು. ಇದರಿಂದ ಸರ್ವ ದೇವ ಪದವಿ ಯುಂಟಾಗುವದು. || ೩೯೪-೩೯೫ ||

(೨೨) **ದ,** ಎಂಬ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಶುಕ್ಲವರ್ಣ, ರುದ್ರದೇವತೆ, ಉತ್ತರಭಾಗನ್ಯಾಸ ಮಾಡಬೇಕು. ಇದರಿಂದ ಕೈಲಾಸಪದ ಪ್ರಾಪ್ತಿಯಾಗುವದು || ೩೯೬-೩೯೭ ||

(೨೩) **ಯಾ,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ಸುರಸವಾದ ಸುವರ್ಣ ರೂಪ, ಬ್ರಹ್ಮನು ದೇವತೆ ಎಂದು ಶಿರನ್ಯಾಸ ಮಾಡಬೇಕು. ಇದರಿಂದ ಬ್ರಹ್ಮಪದವಾಗುವದು || ೩೯೮-೩೯೯ ||

(೨೪) **ತ್,** ಎಂಬ ಅಕ್ಷರ ಮಂತ್ರಕ್ಕೆ ವಿಶ್ವಾಮಿತ್ರ ಋಷಿ, ಗಾಯತ್ರೀ ಛಂದಸ್ಸು, ವಿಷ್ಣು ದೇವತೆ, ಎಂದು ಶಿಖಾನ್ಯಾಸ ಮಾಡಬೇಕು. ಇದರಿಂದ ವಿಷ್ಣುರೂಪ ಉಂಟಾಗಿ ವೈಕುಂಠವಾಸವಾಗುವದು. ||೪೦೦-೪೦೧||

ಈ ಪ್ರಕಾರ ೨೪ ಅಕ್ಷರ ಮಂತ್ರಕ್ಕೆ ವಿಧಿಪ್ರಕಾರ ನ್ಯಾಸ ಮಾಡಬೇಕು ಆಮೇಲೆ ತಲೆಯಮೇಲೆ ಹಸ್ತ ವನ್ನಿಟ್ಟು, ಬೇರೆ ನ್ಯಾಸ ಮಾಡಬೇಕು || ೪೦೨ || ಶಿರಸ್ಥಾನದ ನ್ಯಾಸಕ್ಕೆ ಅನುಷ್ಟುಪ್ ಛಂದಸ್ಸು, ಪ್ರಖ್ಯಾತ ಪ್ರಜಾಪತಿ ಋಷಿ, ಪರಮಾತ್ಮ ದೇವತಾ, ಎಂದು ತಿಳಿದು, || ೪೦೩ || ಪ್ರಾಣಾಯಾಮೇ ವಿನಿಯೋಗಃ ಎಂದು ಓಂ **ಆಪಃ** ಎಂದು ಸ್ತನವನ್ನೂ, ಜ್ಯೋತಿಃ ಎಂದು ನೇತ್ರಗಳನ್ನೂ. ಸ್ಪರ್ಶ ಮಾಡಿ, ಓಂ **ರಸಃ** ಎಂದು

ನಾಲಿಗೆಯನ್ನು ಮುಟ್ಟಿ ನ್ಯಾಸ ಮಾಡಬೇಕು. || ೪೦೪ || ಮತ್ತು **ಅಮೃತ** ಎಂದು ಹಣೆಯನ್ನೂ ತಲೆಯನ್ನೂ ಸ್ಪರ್ಶಮಾಡಿ **ಬ್ರಹ್ಮಭೂರ್ಭುವಸ್ಸ್ವರೋಂ** ಎಂಬದಕ್ಕೂ ಇದೇ ವಿಧಿಪ್ರಕಾರ ನ್ಯಾಸ ಮಾಡಿರಿ. || ೪೦೫ || ಇಷ್ಟು ನ್ಯಾಸ ಮಾಡಿ ಮೂರು ಸಾರೆ ಗಾಯತ್ರಿಯನ್ನು ಜಪಿಸಬೇಕು ಆಮೇಲೆ ವ್ಯಾಪಕವಾದ ರೂಢಿಯ ನ್ಯಾಸ ಮಾಡಿ, ಮೂರು ಸಾರೆ ಕರಶುದ್ಧಿ ಮಾಡಬೇಕು. || ೪೦೬ || **ಭೂರ್ಭುವಸ್ವಃ** ಎಂದು ವಿಶೇಷವಾದ ನ್ಯಾಸ ಮಾಡಿ, ಗಾಯತ್ರಿಯ ೧೦ ಪದಗಳಿಗೆ ದಶಾಂಗುಲಿಗಳಿಂದ ಪಾದ ಪ್ರಮಾಣನ್ಯಾಸ ಮಾಡಬೇಕು. || ೪೦೭ || ಅಂಗುಷ್ಠ ಮೂಲವನ್ನು ಹಿಡಿದು, ಕನಿಷ್ಠಾಂಗುಲಿಯಿಂದ ಸ್ಪರ್ಶಿಸಿ, ಎರಡೂ ಕೈಗಳ ಹಾಗೂ ಎರಡೂ ಕಾಲುಗಳ ೧೦-೧೦ ಅಂಗುಲಗಳ ನ್ಯಾಸ ಮಾಡಬೇಕು. || ೪೦೮ || ಆಮೇಲೆ ಗಾಯತ್ರಿಯ ೨೪ ಅಕ್ಷರಗಳಿಗೆ, ತರ್ಜನೀ ಮೂಲದಿಂದ ಆರಂಭ ಮಾಡಿ ಕನಿಷ್ಠಿಕಾಪರ್ಯಂತ ಹರ್ಷದಿಂದ ಅಂಗುಲಿನ್ಯಾಸ ಮಾಡಬೇಕು. ಆಮೇಲೆ ಪ್ರಣವ ಸಹಿತ ಸಮಸ್ತ ಷಡಂಗನ್ಯಾಸ ಮಾಡಬೇಕು. || ೪೧೦ || ಹ್ಯಾಗಂದರೆ, ಓಂ ಭೂಃ ಹಿರಣ್ಯಾತ್ಮನೇ ಅಂಗುಷ್ಠಾಭ್ಯಾಂ ನಮಃ ಹೃದಯಾಯ ನಮಃ । ಓಂ ಭುವಃ ಪ್ರಜಾಪತ್ಯಾತ್ಮನೇ ತರ್ಜನೀಭ್ಯಾಂ ನಮಃ ಶಿರಸೇ ಸ್ವಾಹಾ, ಓಂ ಸ್ವಃ ಸೂರ್ಯಾತ್ಮನೇ ಮಧ್ಯಮಾಭ್ಯಾಂ ನಮಃ ಶಿಖಾಯೈವಷಟ್ । ಓಂ ಮಃ ಬ್ರಹ್ಮಾತ್ಮನೇ, ಅನಾಮಿಕಾಭ್ಯಾಂ ನಮಃ ಕವಚಾಯ ಹುಂ । ಓಂ ಜನಃ ಸೋಮಾತ್ಮನೇ, ಕನಿಷ್ಠಿಕಾಭ್ಯಾಂ ನಮಃ ನೇತ್ರತ್ರಯಾಯವೌಷಟ್ ಓಂ ತಪಃ ರುದ್ರಾತ್ಮನೇ, ಓಂ ಸತ್ಯಂ ಸರ್ವಾತ್ಮನೇ ಓಂ ಪ್ರಚೋದಯಾತ್ ಸತ್ಯಾತ್ಮನೇ ಕರತಲಕರಪೃಷ್ಠಾಭ್ಯಾಂ ನಮಃ ಅಸ್ತ್ರಾಯ ಫಟ್ ಈ ಪ್ರಕಾರ ಉಭಯ ಹಸ್ತಾಂಗುಲಿನ್ಯಾಸ ಮಾಡಬೇಕು. ಮತ್ತು ಓಂ ತತ್ಸವಿತುಃ ಅಂಗುಷ್ಠಾಭ್ಯಾಂ ನಮಃ ಹೃದಯಾಯ ನಮಃ । ವರೇಣ್ಯಂ ತರ್ಜನೀಭ್ಯಾಂ ನಮಃ ಶಿರಸೇ ಸ್ವಾಹಾ । ಓಂ ಭರ್ಗೋದೇವಸ್ಯ ಮಧ್ಯಮಾಭ್ಯಾಂ ನಮಃ । ಶಿಖಾಯೈವಷಟ್, ಓಂ ಧೀಮಹಿ ಅನಾಮಿಕಾಭ್ಯಾಂ ನಮಃ ಕವಚಾಯ ಹುಂ । ಓಂ ಧಿಯೋ ಯೋನಃ ಕನಿಷ್ಠಿಕಾಭ್ಯಾಂ ನಮಃ ನೇತ್ರತ್ರಯಾಯವೌಷಟ್, ಓಂ ಪ್ರಚೋದಯಾತ್ ಕರತಲಕರಪ್ರಷ್ಠಾಭ್ಯಾಂ ನಮಃ ಅಸ್ತ್ರಾಯ ಫಟ್ ಈ ಪ್ರಕಾರ ಷಡಂಗನ್ಯಾಸ ಮಾಡ

ಬೇಕು. || ೪೧೧ ರಿಂದ ೪೧೭ || ಆಮೇಲೆ ದಶಸ್ಥಾನಗಳಲ್ಲಿ ಅಂಗನ್ಯಾಸ ಮಾಡಬೇಕು. ಅವುಗಳ ಹೆಸರುಗಳನ್ನು ಹೇಳುವೆನು ಕೇಳಿರಿ. || ೪೧೮ || ಪಾದ, ಜಾನು, ಕಟಿ, ನಾಭಿ, ಹೃದಯ, ಕಂಠ, ತಾಲು, ನೇತ್ರ, ಲಲಾಟ, ಶಿರ, ಈ ಹತ್ತು ಸ್ಥಾನಗಳನ್ನು ಸ್ಪರ್ಶ ಮಾಡಿ ನ್ಯಾಸ ಮಾಡಬೇಕು. || ೪೧೯ || ಗಾಯತ್ರೀ ಮಂತ್ರದ ೧೦ ಪದಗಳ ೧೦ ಸ್ಥಳಗಳ ಅಂಗನ್ಯಾಸಕ್ಕೆ (೧) ತತ್‌ಪಾದ, (೨) ಸವಿತುಃ ಜಾನು, (೩) ವರೇಣ್ಯಂ ನಾಭಿ, (೪) ಭರ್ಗೋ ನಾಭಿ, (೫) ದೇವಸ್ಯ ಹೃದಯ, (೬) ಧೀಮಹಿ ಕಂಠ, (೭) ಧಿಯೋ ತಾಲು, (೮) ಯೋ ನೇತ್ರ, (೯) ನಃ ಹಣೆ, (೧೦) ಪ್ರಚೋದಯಾತ್ ತಲೆ. ಈ ಪ್ರಕಾರ ೧೦ ಸ್ಥಾನಗಳ ನ್ಯಾಸ ಮಾಡಬೇಕು. || ೪೨೦-೪೨೧-೪೨೨ || ಇನ್ನು ಗಾಯತ್ರೀ ಮಂತ್ರದ ೨೪ ಅಕ್ಷರಗಳಿಗೆ ಪಾದಾಂಗುಷ್ಠದಿಂದ ಶಿಖಾಪರ್ಯಂತ ೨೪ ಸ್ಥಾನಗಳಲ್ಲಿ ನ್ಯಾಸ ಮಾಡಬೇಕು. ಅದನ್ನು ಕೇಳಿರಿ. || ೨೪೩ || ತಂ ಪಾದಾಂಗುಷ್ಠಾಭ್ಯಾಂ ನಮಃ । ತ್ಸಂ, ಗುಲ್ಫಯೋ ನಮಃ । ವಿಂ, ಜಂಘಯೋರ್ನಮಃ । ತುಂ ಜಾನುಭ್ಯಾಂ ನಮಃ । || ೪೨೪ || ವಂ ಊರುಭ್ಯಾಂ ನಮಃ । ರೇಂ ಗುಹ್ಯಾಯ ನಮಃ । ಣೀಂ ವೃಷಣಾಯ ನಮಃ । ಯಂ ಕಟಿಭ್ಯಾಂ ನಮಃ || ೪೨೫ || ಭಂ ನಾಭ್ಯೈ ನಮಃ । ರ್ಗೋಂ ಉದರಾಯ ನಮಃ । ದೇಂ ಸ್ತನಾಭ್ಯಾಂ ನಮಃ । ವಂ ಹೃದಯಾಯ ನಮಃ || ೪೨೬ || ಶ್ಯಂ ಕಂಠಾಯ ನಮಃ । ಧೀಂ ದಂತೇಭ್ಯೋ ನಮಃ । ಮಂ ತಾಲವೇ ನಮಃ । ಹಿಂ ನಾಶಿಕಾಯೈ ನಮಃ || ೪೨೭ || ಧಿಂ ನೇತ್ರಾಭ್ಯಾಂ ನಮಃ । ಯೋಂ ಭ್ರುವೋರ್ಮಧ್ಯಾಯ ನಮಃ । ಯೋಂ ಲಲಾಟಾಯ ನಮಃ । ನಃ ಪ್ರಾಙ್ಮುಖಾಯ ನಮಃ || ೪೨೮ || ಪ್ರಂ ದಕ್ಷಿಣಮುಖಾಯ ನಮಃ । ಚೋಂ ಪಶ್ಚಿಮಮುಖಾಯ ನಮಃ । ದಂ ಉತ್ತರಮುಖಾಯ ನಮ । ಯಾಂ ಮುರ್ಧ್ನೇ ನಮಃ । ತಂ ಶಿಖಾಯೈವಷಟ್ || ೪೨೯ || ಈ ಪ್ರಕಾರ ನ್ಯಾಸ ಮಾಡಿ, ಪುನಃ ಪಾದಾಂಗುಷ್ಠ ಹಿಡಿದು ಕಟಿಪರ್ಯಂತ, ಊರ್ಧ್ವನ್ಯಾಸ ಮಾಡಬೇಕು. || ೪೩೦ || ಹ್ಯಾಗಂದರೆ– ತಕಾರ ಪಾದಾಂಗುಷ್ಠಸ್ಥಾನ, ತ್ಸಕಾರ ಗುಲ್ಫಸ್ಥಾನ, ವಿಕಾರ ಜಂಘಾಸ್ಥಾನ, || ೪೩೧ || ತುಕಾರ ಜಾನುಸ್ಥಾನ, ವರ್ಕಾರ ಊರೂಸ್ಥಾನ, ರೇಕಾರ ಗುಹ್ಯಪೂರ್ವಕ ಸ್ಥಾನ, ಣಿಕಾರ

ವೃಷಣಸ್ಥಾನ, ಯಕಾರ ಕಟಿಸ್ಥಾನ ಈ ಪ್ರಕಾರ ನ್ಯಾಸ ಮಾಡಬೇಕು. ॥ ೪೩೨ ॥ ತಿಮೇಲೆ ಶಿಖಾ ಹಿಡಿದು ನಾಭಿಪರ್ಯಂತ ಇಳಿಕೆಯ ರೂಪದಿಂದ ನ್ಯಾಸ ಮಾಡಬೇಕು. ಅದರ ಆದಿ ಅಂತಗಳನ್ನು ಹೇಳುವೆನು ಏಕಚಿತ್ತದಿಂದ ಕೇಳಿರಿ. ॥ ೪೩೩ ॥ ತಂ ಶಿಖಾಯೈ ನಮಃ । ಯಾಂ ಮೂರ್ಧ್ನಿ ನಮಃ । ದಂ ಉತ್ತರ ಶಿಖಾಯಾಂ, ಚೋಂ ಪಶ್ಚಿಮ ಶಿಖಾಯಾಂ ನಮಃ ॥ ೪೩೪ ॥ ಪ್ರಂ ದಕ್ಷಿಣ ಶಿಖಾಯಾಂ, ನಂ ಪ್ರಾಙ್ಮುಖೇ ನಮಃ । ಯೋಂ ಲಲಾಟೇ ನಮಃ । ಯೋಂ ಭ್ರುವೋರ್ಮಧ್ಯೇ ನಮಃ ॥ ೪೩೫ ॥ ಧಿಂ ನೇತ್ರತ್ರಯೋ ನಮಃ । ಹಿಂ ನಾಸಿಕಯೋಃ ನಮಃ । ಮಂ ತಾಲೌ ನಮಃ । ಧಿಂ ದಂತೇಷು ನಮಃ ॥ ೪೩೬ ॥ ಸ್ಯಂ ಕಂಠೇ ನಮಃ । ವಂ ಹೃದಯೇ ನಮಃ । ದೇಂ ಸ್ತನಯೋಃ ಗೋಂ ಉದರೇ ನಮಃ, ಭಂ ನಾಭೌ ನಮಃ ॥ ೪೩೭ ॥ ಇನ್ನು ಪ್ರಣವಾದಿ ನಮೋಂತನ್ಯಾಸ ಮಾಡಬೇಕು. ಅಕಾರ ನಾಭೌ, ಉಕಾರ ಹೃದಯೆ, ಮಕಾರ ಮುಖೇ, ನಕಾರ ಲಲಾಟೇ, ಮಕಾರ ಶಿರಸ್ಸಿನಲ್ಲಿ ಕೈಯಿಂದ ಮುಟ್ಟಿ ನ್ಯಾಸ ಮಾಡಿ ನಮುಸ್ಕಾರ ಮಾಡಬೇಕು. ॥ ೪೩೮ ॥ ಎಲೈ ಋಷಿಗಳೇ ಕೇಳಿರಿ— ಆಮೇಲೆ ೨೪ ಮುದ್ರಾ ಸಂಪುಟಗಳನ್ನು ಮಾಡಬೇಕು. ಅವುಗಳನ್ನು ವಿಸ್ತಾರವಾಗಿ ಹೇಳುವೆನು ಕೇಳಿರಿ. ॥ ೪೩೯ ॥ ಸುಮುಖಂ, ಸಂಪುಟಂ, ವಿತತಂ, ವಿಸ್ತೃತಂ, ದ್ವಿಮುಖಂ, ತ್ರಿಮುಖಂ, ಚತುರ್ಮುಖಂ, ಪಂಚಮುಖಂ, ॥ ೪೪೦ ॥ ಷಣ್ಮುಖಂ, ಅಧೋಮುಖಂ, ವ್ಯಾಪಕಾಂಜಲಿಕಂ, ಶಕಟಂ, ಯಮಪಾಶಂ, ಗ್ರಂಥಿತಂ, ಉಲ್ಮುಕೋಲ್ಮುಕಂ, ॥ ೪೪೧ ॥ ಪ್ರಲಂಬಂ, ಮುಷ್ಟಿಕಂ, ಮತ್ಸ್ಯಃ, ಕೂರ್ಮಃ, ವರಾಹಃ, ಸಿಂಹಾಕ್ರಾಂತಂ, ಮಹಾಕ್ರಾಂತಂ, ಮುದ್ಗರಂ ಪಲ್ಲವಂ ಎಂದು ೨೪ ಮುದ್ರಾಗಳು ಇರುತ್ತವೆ. ॥೪೪೨॥ ಈ ಪ್ರಕಾರವಾದ ಮುದ್ರಾಗಳನ್ನು ತಿಳಿದು ಯಾರು ಜಪ ಮಾಡುವದಿಲ್ಲವೋ ಅವರು ಮಾಡಿದ ಗಾಯತ್ರೀ ಜಪವು ಸರ್ವವೂ ನಿಷ್ಫಲವಾಗುವದು. ಈ ಪವಿತ್ರವಾದ ಮುದ್ರಾಗಳನ್ನು ಮಾಡಿದವರಿಗೆ ಗಾಯತ್ರಿಯು ಪ್ರಸನ್ನಳಾಗುವಳು. ಆದಕಾರಣ ಈ ಮುದ್ರಾಪೂರ್ವಕ ಜಪ ಮಾಡಬೇಕು. ॥ ೪೪೩–೪೪೪ ॥ ಈ ಮುದ್ರಾಯುಕ್ತವಾದ ಗಾಯತ್ರೀ ಜಪವನ್ನು ಗೌಪ್ಯವಾಗಿ ಮಾಡಬೇಕು. ಯೋಗ್ಯ ರೀತಿ ಪ್ರಾಣಾಯಾಮ ಮಾಡಿ, ಸಮಸ್ತ ಪಾಪ

ಕ್ಷಯಾರ್ಥಂ ಎಂದು ಸಂಕಲ್ಪ ಮಾಡಿ ದಿನಾಲು ೧೦೮ ಗಾಯತ್ರೀ ಜಪ ಮಾಡಬೇಕು. ಆ ಜಪಮಾಲೆಯನ್ನೂ ಜಪ ಮಾಡುವದನ್ನೂ ಶಿಷ್ಯನು, ಗುರುಗಳು, ಗುರುಪುತ್ರನು, ತನ್ನ ಮಗನು ನೋಡಿದರೆ ದೋಷವಿಲ್ಲ. || ೪೪೫ || ಈ ಗಾಯತ್ರಿಯ ಪ್ರಥಮ ಪಾದಕ್ಕೆ ಋಗ್ವೇದ ಋಷಿ, ಭೂಮಿ ತತ್ತ್ವವು, ಬ್ರಹ್ಮನು ದೇವತೆ, ತ್ರಿಷ್ಟುಪ್ ಛಂದಸ್ಸು, ಎಂದು ಅನ್ನಬೇಕು. || ೪೪೬ || ಗಾಯತ್ರಿಯ ೨ನೇ ಪಾದಕ್ಕೆ ಯಜುರ್ವೇದ ಋಷಿಯು, ಪ್ರಾಣಾಪಾನವ್ಯಾನ ತತ್ವಗಳು, ರುದ್ರ ದೇವರು, ಜಗತೀ ಛಂದಸ್ಸು ಆದೆ. || ೪೪೭ || ಗಾಯತ್ರಿಯ ೩ನೇ ಪಾದಕ್ಕೆ ಸಾಮವೇದ ಋಷಿಯು, ಋಗ್ಯಜುಸಾಮ ತತ್ವಗಳು, ವಿಷ್ಣು ದೇವತೆ, ತ್ರಿಷ್ಟುಪ್ ಛಂದಸ್ಸು ಉಳ್ಳದ್ದಾಗಿದೆ. ಸಕಲ ಪಾಪ ಕ್ಷಯಾರ್ಥಂ ಜಪೇ ವಿನಿಯೋಗಃ || ೪೪೮ || ಎಂದು ಆಮೇಲೆ ಭೂಮಿಸ್ತಂಭವು, ಗಾಯತ್ರೀ ಛಂದಸ್ಸು, ಬ್ರಹ್ಮನು ದೇವರು, ಬ್ರಹ್ಮಪದ ಪ್ರಾಪ್ತಿಯೆಂದು ತಿಳಿಯಬೇಕು || ೪೪೯ || ಆಮೇಲೆ ಮೊದಲು ಗಾಯತ್ರಿಯ ಧ್ಯಾನ ಮಾಡಿ ಬಳಿಕ ಜಪ ಮಾಡಬೇಕು. ನಿಮಗೆ ಆ ಗಾಯತ್ರಿಯ ಧ್ಯಾನದ ವಿಧಾನವನ್ನು ಹೇಳುವೆನು ಏಕ ಚಿತ್ತದಿಂದ ಪರಣ ಮಾಡಿರಿ. || ೪೫೦ || ಹ್ಯಾಗಂದರೆ—

**ಶ್ಲೋಕ** || ಮುಕ್ತಾವಿದ್ರುಮ ಹೇಮನೀಲಧವಳಚ್ಛಾಯೈರ್ಮುಖೈಃ ತ್ರೀಕ್ಷಣೈಃ ||
ಯುಕ್ತಾಮಿಂದುಕಲಾನಿ ಬದ್ಧಮುಕುಟಾಂ ತತ್ವಾರ್ಥ ವರ್ಣಾತ್ಮಿಕಾಂ ||
ಗಾಯತ್ರೀಂ ವರದಾಭಯಾಂಕುಶಕಶಾ: ಶುಭ್ರಂ ಕಪಾಲಂ ಗದಾಂ ||
ಶಂಖಂ ಚಕ್ರಮಥಾರದಿಂದ ಯುಗಲಂ ಹಸ್ತೈರ್ವಹಂತೀಂ ಭಜೇ || || ೪೫೧ ||

ಈ ಪ್ರಕಾರ ಧ್ಯಾನ ಮಾಡಿ, ನಾಸಿಕಾಗ್ರದಲ್ಲಿ ದೃಷ್ಟಿಯನ್ನಿಟ್ಟು ಜಪ ಮಾಡಿ, ಕಡೆಗೆ ಷಡಂಗನ್ಯಾಸವನ್ನು ಮಾಡಿ ಜಪವನ್ನು ಮುಗಿಸಬೇಕು. || ೪೫೨ || ಗಾಯತ್ರೀ ಮಂತ್ರದ ಪ್ರಶಂಸಾವನ್ನು ಕೇಳಿರಿ. ಮಂತ್ರವೆಂಬ ಎರಡಕ್ಷರವು ಪಾಪವನ್ನು ಹರಣ ಮಾಡುವದು. || ೪೫೩ || **ಮಂತ್ರ** ಎಂಬಲ್ಲಿ ಮಂ ಕಾರಕ್ಕೆ ತಮ್ಮ ಮನಸ್ಸು

ಎಂದೂ ತ್ರ ಕಾರಕ್ಕೆ ತಮ್ಮ ಪ್ರಾಣವೆಂದೂ ತಿಳಿದು, ಮನಸ್ಸನ್ನೂ ಪ್ರಾಣವನ್ನೂ ಏಕ ಮಾಡಿ ಜಪ ಮಾಡಬೇಕು. ಅಂದರೆ ಪಾಪ ಪರಿಹಾರವಾಗುವದು. ॥ ೪೫೪ ॥ ಇನ್ನು "ಜಪ" ಎಂಬದು ಎರಡಕ್ಷರದ್ದು. ಇದು ಭೂಮಿಯಲ್ಲಿ ಪ್ರಖ್ಯಾತವಾಗಿರುತ್ತದೆ. ಎರಡಕ್ಷರದ ಅರ್ಥವೇನಂದರೆ— ಜ ಅಂದರೆ ಜನ್ಮವನ್ನು ಛೇದಿಸುವದು. ಪ ಅಂದರೆ ಜನ್ಮದ ಪಾಪವನ್ನು ನಾಶ ಮಾಡುವದು ಎಂಬರ್ಥ ॥ ೪೫೫ ॥ ನಾಲ್ಕೂ ವೇದಗಳಿಗೆ ಮೂಲವಾದ ಗಾಯತ್ರಿಯು ಸಕಲ ಪಾಪಗಳನ್ನು ನಾಶ ಮಾಡುವದು. ಇದರಿಂದ ವೇದಪಠಣದ ಫಲವು ಬರುವದು. ॥೪೫೬॥ ಇಂಥ ಗಾಯತ್ರೀ ಮಂತ್ರವನ್ನು ಜಪಿಸದೆ ಇದ್ದ ಮನುಷ್ಯನ ಜನ್ಮವು ಹಂದಿಯಂತೆ ವ್ಯರ್ಥವಾಗುವದು. ಇದನ್ನು ನಿರ್ಧಾರದಿಂದ ಜಪಿಸಿದರೆ ಮನಸ್ಸಿನಲ್ಲಿ ಚಿಂತಿಸಿದ ಫಲವು ಉಂಟಾಗುವದು ॥ ೪೫೭ ॥

## ಗಾಯತ್ರೀ ಜಪ ಮಾಡುವ ಸ್ಥಳ, ಆಸನ, ವಿಧಾನ, ಫಲಗಳು

ನೀರಿನಲ್ಲಿ ಕೂತು ಜಪ ಮಾಡಬಾರದು ಹಾಗೆ ಮಾಡಿದರೆ ಅವನು ಕೂಡಲೆ ಪ್ರಜ್ಞಾಹೀನನಾಗುವನು ಇದರ ಕಾರಣವನ್ನು ನಿಮಗೆ ವಿಸ್ತಾರವಾಗಿ ಹೇಳುವೆನು ಬ್ರಾಹ್ಮಣನ ಮುಖದಲ್ಲಿ ಮೂರು ಅಗ್ನಿಗಳು ಅವೆ. ॥ ೪೫೮ ॥ ಅಂದರೆ ಆಹವನೀಯ, ಗಾರ್ಹಪತ್ಯ, ದಕ್ಷಿಣಾಗ್ನಿ ಎಂಬ ವಿಖ್ಯಾತವಾದ ಅಗ್ನಿಗಳು ಅವೆ. ಅಗ್ನಿಗೆ ಉದಕ ಸಂಪರ್ಕವಾದಕೂಡಲೆ ಅಗ್ನಿಯ ತೇಜಸ್ಸು ಹೊರಟು ಹೋಗುವದು. ॥ ೪೫೯ ॥ ಆದ್ದರಿಂದ ನೀರಿನಲ್ಲಿ ಕೂಡ್ರದೆ ಬೇರೆ ಉತ್ತಮ ಆಸನದಲ್ಲಿ ಕೂತು ನಾಭಿಗೆ ಕೈಯಿಂದ ಮುಟ್ಟಿ ಜಪಮಾಲೆ ಹಿಡಿದು ಜಪ ಮಾಡಬೇಕು ॥ ೪೬೦ ॥ ಪ್ರಾತಃಕಾಲದಲ್ಲಿ ನಿಂತುಕೊಂಡು ಜಪ ಮಾಡಬೇಕು ಮಧ್ಯಾಹ್ನದಲ್ಲಿ ಹೃದಯವನ್ನು ಮುಟ್ಟಿ ಕೂತಾಗಲಿ, ನಿಂತಾಗಲಿ ಜಪಿಸಬೇಕು. ॥ ೪೬೧ ॥ ಸಾಯಂಕಾಲದಲ್ಲಿ ಮುಖವನ್ನು ಮುಟ್ಟಿ ಕೂತುಕೊಂಡು ನಿರ್ಮಲ ಮನಸಿನಿಂದ ವೃಕ್ಷವನ್ನು ನೋಡುತ್ತ ಜಪ ಮಾಡಬೇಕು, ವೃಕ್ಷವು ಸಮೀಪವಾಗಿರದಿದ್ದರೆ ನಾಸಿಕಾಗ್ರದಲ್ಲಿ ದೃಷ್ಟಿಯನ್ನಿಟ್ಟು ಜಪ ಮಾಡಬೇಕು. ॥ ೪೬೨-೪೬೩ ॥ ಬ್ರಹ್ಮಚಾರಿಯೂ ಗೃಹಸ್ಥನೂ

+ ದಿಗಂಬರಾ ದಿಗಂಬರಾ +

೧೦೮ ಸಾರೆ ಜಪ ಮಾಡಬೇಕು. ವಾನಪ್ರಸ್ಥನೂ, ಸಂನ್ಯಾಸಿಯೂ ಒಂದು ಸಾವಿರ ಜಪ ಮಾಡಬೇಕು. ||೪೬೪|| ತೊಂದರೆಯ ಪ್ರಸಂಗದಲ್ಲಿ ೨೮ ಸಾರೆ, ಅಶಕ್ತತೆಯಲ್ಲಿದ್ದಾಗ ೧೦ ಸಾರೆ ಜಪ ಮಾಡಬೇಕು. || ೪೬೫ || ಮನಸಿನಲ್ಲಿ ಜಪಿಸುವದು ಉತ್ತಮ, ಗೌಪ್ಯವಾಗಿ ಜಪಿಸುವದು ಮಧ್ಯಮ, ಗಟ್ಟಿಯಾಗಿ ಜಪಿಸುವದು ಕನಿಷ್ಠವು. || ೪೬೬ || ಗಾಯತ್ರೀಗೆ ಮೂರು ಪಾದಗಳುಂಟು. ಅವುಗಳನ್ನು ಕೂಡಿಸಿ ಅನ್ನಬಾರದು. ಅಂದರೆ ಮಹಾದೋಷ ಬಂದು ನರಕವಾಗುವದು. || ೪೬೭ || ಆ ತ್ರಿಪದಾ ಗಾಯತ್ರಿಯನ್ನು (೧) **ಓಂ ತತ್ಸವಿತುರ್ವರೇಣ್ಯಂ,** (೨) **ಭರ್ಗೋ ದೇವಸ್ಯ ಧೀಮಹಿ,** (೩) **ಧೀಯೋಯೋನಃ ಪ್ರಚೋದಯಾತ್.** ಈ ಪ್ರಕಾರ ಮೂರು ಭಾಗ ಮಾಡಿ, ಬೇರೆ ಬೇರೆಯಾಗಿ ಅತಿ ಹರ್ಷದಿಂದ ಅಂದರೆ ಆದರಿಂದ ಬ್ರಹ್ಮಹತ್ಯಾದಿ ಪಾತಕಗಳು ನಾಶವಾಗಿ ಅನಂತ ಪುಣ್ಯ ಬರುವದು. || ೪೬೮ || ಗಾಯತ್ರಿಯನ್ನು ಅಂಗುಷ್ಠದಿಂದ ಜಪಿಸಿದರೆ ಒಂದು ಪಟ್ಟು ಪುಣ್ಯ, ಬೆರಳುಗಳ ಗೆರೆಗಳನ್ನು ಎಣಿಸಿ ಜಪ ಮಾಡಿದರೆ ೧೦ ಪಟ್ಟು ಪುಣ್ಯ, ಶಂಖಮಣಿಯಿಂದ ಮಾಡಿದರೆ ನೂರು ಪಟ್ಟು ಪುಣ್ಯ, ಹವಳಗಳಿಂದ ಮಾಡಿದರೆ ಸಹಸ್ರಪಟ್ಟು ಪುಣ್ಯ ಬರುವದು || ೪೬೯ || ಸ್ಫಟಿಕಮಣಿಯಿಂದ ಜಪಿಸಿದರೆ ೧೦ ಸಹಸ್ರ ಪುಣ್ಯ, ಮುತ್ತಿನಿಂದ ಜಪಿಸಿದರೆ ಲಕ್ಷ ಫಲ, ಪದ್ಮಾಕ್ಷಿ ಮಣಿಯಿಂದ ನಿರ್ಗುಣವಾಗಿ ಮಾಡಿದರೆ ೧೦ ಲಕ್ಷ ಫಲವು ಬರುವದು. || ೪೭೦ || ಬಂಗಾರದಿಂದ ಜಪಿಸಿದರೆ ಕೋಟಿ ಪುಣ್ಯ, ಕುಶ, ಮತ್ತು ರುದ್ರಾಕ್ಷಿಗಳಿಂದ ಜಪಿಸಿದರೆ ಅನಂತ ಪುಣ್ಯ ಬರುವದು. ಆದಕಾರಣ ನಿತ್ಯವೂ ಮಾಲೆಯನ್ನು ಹಿಡಿದು ಗೌಪ್ಯವಾಗಿ ಜಪಿಸಬೇಕು. || ೪೭೧ || ಕರಕಮಲದಲ್ಲಿ ಗೌಪ್ಯವಾಗಿ ಮಾಲೆಯನ್ನು ಹಿಡಿದು ನಿಶ್ಚಲ ಮನದಿಂದ ಜಪ ಮಾಡಿರಿ. ಆದರಿಂದ ಸುಖವಾಗಿ ಅನಂತ ಫಲ ಬರುವದು || ೪೭೨ || ಜಪಮಾಲೆಯ ಮಧ್ಯದಲ್ಲಿರುವ ಮೇರು ಮಣಿಗೆ ಮೇರು ಎಂಬ ಹೆಸರು. ಆ ಮೇರುವಿನ ಹತ್ತರ ಮಣಿಯಿಂದ ಜಪವನ್ನು ಆರಂಭ ಮಾಡಿ ಆ ಮೇರುವಿನ ತನಕ ಜಪ ಮಾಡಿ ಮತ್ತೆ ಮಾಲೆಯನ್ನು ತಿರುವ ಬೇಕು. ಆ ಮೇರುವನ್ನು ದಾಟಿ ಹಾಗೇ ಜಪ ಮಾಡುತ್ತ ಹೋದರೆ ಅಪಾರವಾದ ಪಾಪ ಬರುವದು. ಆಗ ಮೂರು ಸಾರೆ ಪ್ರಾಣಾಯಾಮ ಮಾಡಿದರೆ ಆ ಮೇರು ದಾಟಿದ

+ ಶ್ರೀಪಾದವಲ್ಲಭ ದಿಗಂಬರಾ +

ದೋಷವು ಪರಿಹಾರವಾಗುವದು. ॥ ೪೭೩ ॥ ದಿನಾಲು ೧೧ ರಂತೆ ಮೂರು ದಿನ ಗಾಯತ್ರೀ ಜಪ ಮಾಡಿದರೆ ಮೂರು ದಿವಸಗಳಲ್ಲಿ ಮಾಡಿದ ಸರ್ವ ಪಾಪ ನಾಶವಾಗುವದು. ॥ ೪೭೪ ॥ ನಿತ್ಯ ೧೦೮ ಗಾಯತ್ರೀ ಜಪ ಮಾಡಿದರೆ ಕೂಡಲೇ ಅಘೋರ ಪಾಪ ನಾಶವಾಗುವದು. ಏಕಾಗ್ರ ಮನದಿಂದ ೧ ಸಾವಿರ ಜಪ ಮಾಡಿದರೆ ಉಪಪಾತಗಳು ನಾಶವಾಗುವವು. ॥ ೪೭೫ ॥ ಕೋಟಿ ಜಪ ಮಾಡಿದರೆ ಮಹಾ ಪಾತಕಗಳು ನಾಶವಾಗಿ, ಮನಸಿನಲ್ಲಿ ಇಚ್ಛಿಸಿದ ಫಲಗಳು ತೀವ್ರವಾಗಿ ಲಭಿಸುವವು ॥ ೪೭೬ ॥ ದೃಢ ಮನಸಿನಿಂದ ಜಪಿಸಬೇಕು. ಹಿಂದುಮುಂದು ನೋಡಬಾರದು. ಶೂದ್ರರನ್ನು ನೋಡಬಾರದು ಅವರ ಸಂಗಡ ಮಾತಾಡಬಾರದು. ॥ ೪೭೭ ॥ ಒಬ್ಬರಿಂದ ದ್ರವ್ಯವನ್ನು ಹೊಂದಿ ಜಪಿಸುವವನು ಅನಂತ ದೋಷವನ್ನು ಹೊಂದಿ ಚಾಂಡಾಲನಾಗಿ ಹುಟ್ಟುವನು. ॥ ೪೭೮ ॥ ಜಪ ಮಾಡುವಾಗ ವೃಷಣವನ್ನು ತುರಿಸಿಕೊಂಡರೆ ಶ್ರೋತ್ರಾಚಮನ ಮಾಡಬೇಕು. ಅಂದರೆ ದೋಷ ಪರಿಹಾರವಾಗುವದು ॥ ೪೭೯ ॥ ಯಾಕಂದರೆ ಬ್ರಾಹ್ಮಣನ ಬಲಗಿವಿಯಲ್ಲಿ ಸಪ್ತ ದೇವತೆಗಳಿರುವದರಿಂದ ಅದನ್ನು ಮುಟ್ಟಿದರೆ ಆ ಕೂಡಲೆ ಪಾಪವು ಹೋಗುವದು. ॥ ೪೮೦ ॥ ಜಪ ಮಾಡುವ ಕಾಲದಲ್ಲಿ ಚಾಂಡಾಲನನ್ನು ನೋಡಿದರೆ ದ್ವಿರಾಚಮನ ಮಾಡಿದರೆ ಶುದ್ಧನಾಗುವದು ಪತಿತನೊಡನೆ ಮಾತಾಡಿದರೆ ಸ್ನಾನ ಮತ್ತು ಆಚಮನಗಳನ್ನು ಮಾಡಬೇಕು ॥ ೪೮೧ ॥ (ಮೌನದಿಂದ ಜಪ ಮಾಡುವದು ಉತ್ತಮ. ಅದಕ್ಕೆ ತೊಂದರೆ ಬಂದ ಪ್ರಸಂಗದಲ್ಲಿ **ತದ್ವಿಷ್ಣೋ** ಎಂಬ ಮಂತ್ರವನ್ನು ಅಂದಕೂಡಲೆ ಸಕಲ ದೋಷವು ಹೋಗುವದು. ॥ ೪೮೨ ॥ ಜಪ ಮಾಡುವಾಗ ನಿದ್ದೆ ಬಂದರೆ, ಆಕಳಿಕೆ ಬಂದರೆ, ಅಧೋವಾಯು ಬಂದರೆ, ಕ್ರೋಧ ಬಂದರೆ ಅದು ಪಾಪರೂಪವಾಗುವದು. ॥ ೪೮೩ ॥ ಒಂದುವೇಳೆ ತಿಳಿಯದೆ ಈ ಪ್ರಕಾರ ದೋಷ ಬಂದರೆ ಶ್ರೋತ್ರಾಚಮನ ಮಾಡಬೇಕು. ಮತ್ತು ಅಗ್ನಿ, ಸೂರ್ಯ, ಆಕಳುಗಳ ದರ್ಶನ ಮಾಡಬೇಕು. ಹಾಗೂ ವಿಷ್ಣುಮಂತ್ರವನ್ನು ಜಪಿಸಬೇಕು. ॥ ೪೮೪ ॥ ಈ ಪ್ರಕಾರ ವಿಧಿಯಿಂದ ಗಾಯತ್ರೀ ಜಪ ಮಾಡಿದರೆ ಮನಸ್ಸಿನ ಇಚ್ಛೆಗಳು ಪೂರ್ಣವಾಗುವವು ಯಾವತ್ತು ಋಷಿಗಳೇ ಕೇಳಿರಿ ಎಂದು ಪರಾಶರರು ಹೇಳಿದರು. ॥ ೪೮೫ ॥

ಈ ಪ್ರಕಾರ ಗಾಯತ್ರೀ ಜಪ ಮಾಡಿದಮೇಲೆ ಪ್ರಾತಃಕಾಲದಲ್ಲಿ **ಮಿತ್ರಸ್ಯ** ಎಂಬ ಮಂತ್ರವನ್ನೂ, ಮಧ್ಯಾಹ್ನದಲ್ಲಿ **ಉದುತ್ಯ** ಎಂಬ ಮಂತ್ರವನ್ನೂ, ಸಾಯಂಕಾಲದಲ್ಲಿ **ಇಮಂ ಮೇ ವರುಣ** ಎಂಬ ಮಂತ್ರವನ್ನೂ ಅನ್ನಬೇಕು. ‖ ೪೮೬ ‖ ಆಮೇಲೆ ತಮ್ಮ ತಮ್ಮ ಶಾಖಾ ಪರತ್ವದಿಂದ ವೃದ್ಧಾಚಾರ ಪ್ರಕಾರ ಇರುವ ವಿಧಿಯುಕ್ತ ಮಂತ್ರಗಳನ್ನು ಅನ್ನುತ್ತ ಪ್ರದಕ್ಷಿಣಾ ಪೂರ್ವಕವಾಗಿ ನಾಲ್ಕೂದಿಕ್ಕಿಗೆ ನಮಸ್ಕರಿಸುತ್ತ ಆನ್ನತಕ್ಕ ವಿಧಿಯುಕ್ತ ಮಂತ್ರಗಳನ್ನು ಅಂದು ಭಕ್ತಿಯಿಂದ ಗೋತ್ರ-ಪ್ರವರಗಳನ್ನು ಉಚ್ಚರಿಸಿ, ಯಸ್ಯಸ್ಮೃತ್ಯಾ ಬಿಟ್ಟು ನಮಸ್ಕಾರ ಮಾಡಿ ಆಚಮನ ಮಾಡಿ ಸಂಧ್ಯಾ ಮುಗಿಸಬೇಕು ‖ ೪೮೭-೪೮೮ ‖ ಈ ಪ್ರಕಾರ ಸಂಧ್ಯಾ ಮಾಡಿದಮೇಲೆ ಔಪಾಸನ ಮಾಡಬೇಕು ಆದರ ವಿಧಾನವನ್ನು ಹೇಳುತ್ತೇನೆ ಎಂದು ಶ್ರೀಗುರುಗಳು ಆ ಬ್ರಾಹ್ಮಣನಿಗೆ ಹೇಳಹತ್ತಿದರು ‖ ೪೮೯ ‖ ಪ್ರಾತಃಕಾಲ, ಸಾಯಂಕಾಲ ಎರಡೂ ವೇಳೆ ಉತ್ತಮ ರೀತಿಯಿಂದ ಔಪಾಸನ ಮಾಡಬೇಕು. ಬ್ರಾಹ್ಮಣರು ಎರಡೂ ಒಮ್ಮೆಲೇ ಮಾಡಬಾರದು. ಎಲ್ಲರೂ ಬೇರೆ ಬೇರೆಯಾಗಿ ಈ ಪ್ರಕಾರ ಮಾಡಬೇಕೆಂದು ತಿಳಿಯಿರಿ. ‖ ೪೯೦ ‖ ಒಣಗಿದ ಅನ್ನದಿಂದ ಕುಳ್ಳು ಬೆಂಕಿಯಲ್ಲಿಯೂ ಭೂಮಿಯಮೇಲೆಯೂ ಔಪಾಸನ ಮಾಡಬಾರದು. ವಿಹಿತವಾದ ಸ್ಥಂಡಿಲಾ ಮಾಡಬೇಕು ಅಥವಾ ನೀರಿನಿಂದ ನೆಲವನ್ನು ಸಾರಿಸಿ ಅಲ್ಲಿ ಅಗ್ನಿಯನ್ನು ಹಾಕಿ ಔಪಾಸನ ಮಾಡಬೇಕು. ‖ ೪೯೧ ‖ ಅಗ್ನಿಯನ್ನು ಕುಂಡದಲ್ಲಿ ಸ್ಥಾಪಿಸಿ, ನಿತ್ಯ ಉಪಾಸನ ಮಾಡಬೇಕು. ಆ ಅಗ್ನಿಗೆ ಕೈಯಿಂದ, ಎಲೆಯಿಂದ, ಮತ್ತು ಮೊರದಿಂದ ಗಾಳಿಯನ್ನು ಹಾಕಬಾರದು. ‖ ೪೯೨ ‖ ಅಗ್ನಿಗೆ ಎಲೆಯಿಂದ ಬೀಸಿದರೆ ವ್ಯಾಧಿಷ್ಟನಾಗುವನು. ಮೊರದಿಂದ ಬೀಸಿದರೆ ಧನಕ್ಷಯವಾಗಿ ದರಿದ್ರನಾಗುವನು. ಬಾಯಿಂದ ಊದಿದರೆ ಆಯುಷ್ಯವು ಕಡಿಮೆಯಾಗುವದು ಕೈಯಿಂದ ಬೀಸಿದರೆ ಮೃತ್ಯು ಬರುವದು. ‖ ೪೯೩ ‖ ಆದಕಾರಣ ಬೀಸಣಿಕೆಯಿಂದಾಗಲೀ ಊದುಗೊಳವೆಯಿಂದಾಗಲಿ ಗಾಳೀ ಹಾಕಿ, ಕಟ್ಟಿಗೆಗಳನ್ನು ಹಾಕಿ ಅಗ್ನಿಯು ಒಳ್ಳೇ ಪ್ರದೀಪ್ತವಾಗಿ ಉರಿಯುತ್ತಿರುವಂತೆ ಮಾಡಬೇಕು. ‖ ೪೯೪ ‖ ಯಾವಕಡೆಗೆ ಉತ್ತಮರೀತಿಯಾಗಿ ಅಗ್ನಿಯು ಉರಿಯುತ್ತದೋ ಅಲ್ಲಿಯೇ ಆಹುತಿ ಹಾಕಬೇಕು. ಸಮಿಧಾಗಳನ್ನು ಬ್ರಾಹ್ಮಣರೇ ತರಬೇಕು.

ಶೂದ್ರರ ಕೈಯಿಂದ ತರಿಸಬಾರದು. ॥ ೪೯೫ ॥ ಮತ್ತು ಕೇಳಿರಿ, ಸಮಿಧಾ, ಹೂವು, ದೂರ್ವಾಗಳನ್ನು ಶೂದ್ರರಿಂದ ತರಿಸಬಾರದು. ಹೋಮ ದ್ರವ್ಯಗಳು ವಿಶೇಷವಾದವುಗಳಿರುವವು ಅವುಗಳ ಹೆಸರುಗಳನ್ನು ಹೇಳುವೆನು ಕೇಳಿರಿ. ॥ ೪೯೬ ॥ ಬತ್ತ, ಸಾವಕ್ಕಿ, ಕಡಬತ್ತ, ನವಣೆ, ಗೋದಿ, ಜೋಳ, ಎಳ್ಳು ಇವು ಮುಖ್ಯವಾಗಿರುತ್ತವೆ. ॥ ೪೯೭ ॥ ೬೦ ತರದ ದ್ರವ್ಯಗಳು ಇರುತ್ತವೆ ಇವುಗಳಿಗೆ ತುಪ್ಪವನ್ನು ಕೂಡಿಸಿ ಪ್ರಮಾಣಕ್ಕೆ ಸರಿಯಾಗಿ ಆಹುತಿಯನ್ನು ಕೊಡುವದು ಮುಖ್ಯ ಕಾರಣವಾಗಿರುತ್ತದೆ. ಆಹುತಿಗಳು ಪ್ರಮಾಣಕ್ಕಿಂತ ಹೆಚ್ಚುಕಡಿಮೆ ಆಗಬಾರದು ॥ ೪೯೮ ॥ ಸಮಯಕ್ಕೆ ತುಪ್ಪ ಇರದಿದ್ದರೆ ಹೋಮಕ್ಕೆ ಎಳ್ಳು ಪವಿತ್ರವಾಗಿರುವವು ಅಂದಮೇಲೆ, ಹೋಮ ದ್ರವ್ಯಗಳಲ್ಲಿ ಎಳ್ಳ ಎಣ್ಣೆಯನ್ನು ಮಿಶ್ರ ಮಾಡಬೇಕು, ಅದು ಪವಿತ್ರವಾಗಿರುತ್ತದೆ. ॥ ೪೯೯ ॥ ಔಪಾಸನ ಮಾಡಿದಮೇಲೆ ಬ್ರಹ್ಮಯಜ್ಞ ತರ್ಪಣ ಮಾಡಬೇಕು ಆದರ ವಿಧಿಯನ್ನು ಹೇಳುವೆನು ಎಂದು ಶ್ರೀ ಗುರುಗಳು ಆ ಬ್ರಾಹ್ಮಣನಿಗೆ ಅಂದರು ॥ ೫೦೦ ॥ ಮುಖ್ಯವಾಗಿ ಸಕಲ ಪ್ರಾತಃಕರ್ಮ ಮುಗಿಸಿಕೊಂಡು ಮಧ್ಯಾಹ್ನ ಬ್ರಹ್ಮಯಜ್ಞ ಮಾಡಬೇಕು. ಅಥವಾ ಉಪಾಸನಾದಿ ಕರ್ಮ ಮಾಡಿದಮೇಲೆ ಬ್ರಹ್ಮಯಜ್ಞ ಮಾಡಿದರೂ ಅಡ್ಡಿಯಿಲ್ಲ ॥ ೫೦೧ ॥ ಮುಖ್ಯವಾಗಿ ಬ್ರಾಹ್ಮಣರು ನೀರಿನ ಸನ್ನಿಧಿಯ ಸ್ಥಳದಲ್ಲಿ ತರ್ಪಣ ಮಾಡಬೇಕು. ಆ ಮೇಲೆ ಮೂರು ಪ್ರಾಣಾಯಾಮ ಮಾಡಿ ವಿದ್ಯುದಸಿ ಎಂಬ ಮಂತ್ರವನ್ನು ಜಪಿಸಬೇಕು ॥ ೫೦೨ ॥ ಬಳಿಕ ದೂರ್ವೆಯನ್ನು ತಕ್ಕೊಂಡು ಬಲಗೈಯಲ್ಲಿ ಹಿಡಿದು, ಪೂರ್ವ ಅಥವಾ ಉತ್ತರ ಮುಖವಾಗಿ ಕುಳಿತು, ಎಡಗಾಲಮೇಲೆ ಬಲಗಾಲನ್ನಿಟ್ಟು ಕೂಡ್ರಬೇಕು. ॥ ೫೦೩ ॥ ಎರಡೂ ಕೈಗಳ ಸಂಪುಟದಿಂದ ಬಲದ ಮೊಳಕಾಲಮೇಲಿಟ್ಟು, ಮೂರುಸಾರೆ ಪ್ರಣವನ್ನು ಉಚ್ಚರಿಸಬೇಕು ಬಳಿಕ ಋಚಾಕ್ಷರ ಮಂತ್ರವನ್ನು ಅನ್ನಬೇಕು. ॥ ೫೦೪ ॥ ಬಳಿಕ ಓಂ ಭೂರ್ಭುವಃಸ್ವಃ ಎಂದು ಅಂದು ಓಂ ತತ್ಸವಿತುರ್ವರೇಣ್ಯಂ, ಭರ್ಗೋದೇವಸ್ಯಧೀಮಹಿ, ಧಿಯೋಯೋನಃಪ್ರಚೋದಯಾತ್, ಎಂದು ತ್ರಿಪದಾ ಗಾಯತ್ರಿಯನ್ನು ಉಚ್ಚರಿಸಿ ಆ ಮೇಲೆ ಹತ್ತುಸಾರೆ ಜಪಾ ಮಾಡಬೇಕು. ॥ ೫೦೫ ॥ ಸ್ವಾಧ್ಯಾಯ ದಿನಗಳಲ್ಲಿ ಶಕ್ತಿ ಇದ್ದಷ್ಟು ವೇದಗಳನ್ನು ಅನ್ನಬೇಕು.

ಅಸ್ವಾಧ್ಯಾಯ ದಿವಸಗಳಲ್ಲಿ ಪನ್ನದೊಳಗಿನ ಒಂದು ಋಚಾ ಅನ್ನಬೇಕು. ॥ ೫೦೬ ॥ ಒಂದುವೇಳೆ ಅದು ಬರದಿದ್ದರೆ ಬೇರೆ ವಿಶೇಷವಾದ ಮಂತ್ರ ಅನ್ನಬೇಕು. ನಂತರ **ನಮೋ ಬ್ರಹ್ಮಣೇ** ಮಂತ್ರವನ್ನು ಮೂರುಸಾರಿ ಜಪಿಸಬೇಕು. ॥ ೫೦೭ ॥ **ವೃಷ್ಟಿರಸಿ** ಎಂಬ ಮಂತ್ರವನ್ನು ಜಪಿಸಿ, ನೀರನ್ನು ಸ್ಪರ್ಶಮಾಡಿ ತರ್ಪಣವನ್ನು ಕೊಡಬೇಕು. ॥ ೫೦೮ ॥ ಬ್ರಹ್ಮಯಜ್ಞ ಮಾಡಲಿಕ್ಕೆ ಮುಖ್ಯವಾಗಿ ದರ್ಭೆಯು ಬೇಕು. ಬ್ರಹ್ಮಯಜ್ಞದಿಂದ ವಸು-ರುದ್ರ-ಆದಿತ್ಯರೂ ಸರ್ವ ದೇವತೆಗಳೂ, ಪಿತೃಗಳೂ ತೃಪ್ತರಾಗುವರು. ॥ ೫೦೯ ॥ ಒಂದೊಂದು ದಿವಸ ಬ್ರಹ್ಮಯಜ್ಞ ಮಾಡಲಿಕ್ಕೆ ಅನುಕೂಲಾಗದಿದ್ದರೆ ಅಥವಾ ರಾತ್ರಿ ಸಮಯವಾದರೆ ಆಗ ಗಾಯತ್ರೀ ಜಪ ಮಾಡಿದರೆ ವೇದ ಪಠಣದ ಫಲವು ಬರುವದು. ॥ ೫೧೦ ॥ ದೇವತರ್ಪಣವನ್ನು ಕುಶಾಗ್ರದಲ್ಲಿಯೂ, ಋಷಿ ತರ್ಪಣವನ್ನು ಕುಶದ ಮಧ್ಯದಲ್ಲಿಯೂ, ಪಿತೃ ತರ್ಪಣವನ್ನು ಕುಶದ ಮೂಲದಲ್ಲಿಯೂ ಕೊಡಬೇಕು. ॥ ೫೧೧ ॥ ತರ್ಪಣವನ್ನು ಪಾತ್ರೆಯಲ್ಲಿ ಬಿಡಬಾರದು. ನೀರಿನಲ್ಲಿ ಮಾಡಬೇಕು ನಿತ್ಯ ಬರೇ ಭೂಮಿಯಲ್ಲಿ ತರ್ಪಣ ಕೊಡಬಾರದು. ಅದು ನಿಷಿದ್ಧವಾಗುವದು. ॥ ೫೧೨ ॥ ಭೂಮಿಯಮೇಲೆ ಧರ್ಭೆಯನ್ನಿಟ್ಟು ವಿಧಿಯುಕ್ತ ಹಾಗು ಭಕ್ತಿ ಪುರಸ್ಸರವಾಗಿ ತರ್ಪಣ ಕೊಡಬೇಕು. ಎಂದು ಶ್ರೀ ಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. ॥ ೫೧೩ ॥ ಕೈಯಲ್ಲಿ ಎಳ್ಳನ್ನು ತಕ್ಕೊಂಡು ತರ್ಪಣ ಕೊಡಬೇಕು. ಕಲ್ಲಮೇಲೆ, ನೆಲದಮೇಲೆ, ಮರದ ಪಾತ್ರೆಗಳಲ್ಲಿ ॥ ೫೧೪ ॥ ಮತ್ತು ರೋಮಕೂಪಾದಿ ಸ್ಥಾನಗಳಲ್ಲಿ ಎಳ್ಳನ್ನಿಡಬಾರದು. ಇಟ್ಟರೆ ಅದರಿಂದ ದುಃಖ ಬರುವದು, ಎಳ್ಳುಗಳಲ್ಲಿ ಹುಳಾ ಆಗುವದರಿಂದ ಈ ಐದು ಸ್ಥಾನಗಳು ನಿಷಿದ್ಧವೆಂದು ಹೇಳಿದೆ. ॥ ೫೧೫ ॥ ಮನೆಯಲ್ಲಿ ತರ್ಪಣ ಕೊಡಲಿಕ್ಕೆ ಎಳ್ಳು ತಗೋಬಾರದು. ಎಲ್ಲೈ ಋಷಿಗಳೇ ಕೇಳಿರಿ ನೀರಿನಿಂದ ತರ್ಪಣ ಕೊಡಬೇಕು. ॥ ೫೧೬ ॥ ಬಿಳೇ ಎಳ್ಳು ದೇವತೆಗಳಿಗೂ, ಧೂಮ್ರವರ್ಣದ್ದು ಋಷಿಗಳಿಗೂ, ಕರೇ ಎಳ್ಳು ಪಿತೃಗಳಿಗೂ ತರ್ಪಣಕ್ಕೆ ಯೋಗ್ಯವು. ॥ ೫೧೭ ॥ ಯಜ್ಞೋಪವೀತ ಸವ್ಯದಿಂದ ದೇವತೆಗಳಿಗೆ ಬಂದು ಒಂದು ಸಾರೆ, ನಿವೀತಿಯಿಂದ ಋಷಿಗಳಿಗೆ ೨-೨ ಸಾರೆ, ಅಪಸವ್ಯದಿಂದ ಪಿತೃಗಳಿಗೆ ಮೂರು ಮೂರು ಸಾರೆ ತರ್ಪಣ ಕೊಡಬೇಕು. ॥ ೫೧೮-೫೧೯ ॥

ಮಾತಾ, ಪಿತಾಮಹಿ, ಪ್ರಪಿತಾಮಹಿ ಇವರಿಗೆ ಮೂರು ಮೂರು ಸಾರೆ, ಉಳಿದ ಸ್ತ್ರೀಯರಿಗೆ ಒಂದೊಂದುಸಾರೆ, ಸಾಪತ್ನಿ ಮಾತಾಗೂ, ಗುರುಪತ್ನಿಗೂ ಎರಡೆರಡುಸಾರೆ ತರ್ಪಣ ಕೊಡಬೇಕು. ॥ ೫೨೦ ॥ ದೇವ-ಬ್ರಹ್ಮ-ಋಷಿಗಳ ತರ್ಪಣಕ್ಕೆ ಅಕ್ಷತೆಯು ಮುಖ್ಯ, ಕರಿಯ ಎಳ್ಳು ಪಿತೃಗಳಿಗೆ ಮುಖ್ಯವು. ಇದರಿಂದ ಅನಂತ ಪುಣ್ಯ ಬರುವದು. ॥ ೫೨೧ ॥ ಶುಕ್ರವಾರ, ಆದಿತ್ಯವಾರ, ಮಘಾನಕ್ಷತ್ರ ದಿವಸ, ಪಾಡ್ಯಾ, ಷಷ್ಠಿ, ನವಮಿ, ಏಕಾದಶಿ ಗಳಲ್ಲಿ ತಿಲಪರ್ಣ ಮಾಡಬಾರದು. ॥ ೫೨೨ ॥ ವಿವಾಹ ಉಪನಯನಗಳಲ್ಲಿಯೂ, ಜನ್ಮ ನಕ್ಷತ್ರ, ಜನ್ಮದಿನ ಗಳಲ್ಲಿಯೂ ತಮ್ಮ ಮನೆಯಲ್ಲಿ ಶುಭದಿನ, ಶುಭಕಾರ್ಯ ನಡೆದದಿವಸ ತಿಲತರ್ಪಣ ಮಾಡಬಾರದು. ॥ ೫೨೩ ॥ ಆಗ ನೀರಿನಿಂದ ತರ್ಪಣ ಮಾಡಬೇಕು. ಆಗ ಕೈಯಲ್ಲಿ ಬಂಗಾರದ ಮುದ್ರೆಯ ಉಂಗರವನ್ನೂ ದರ್ಭೆಯ ಪವಿತ್ರವನ್ನೂ ಧರಿಸಬೇಕು. ॥ ೫೨೪ ॥ ಕಾಲು ತೊಳೆಯದೆ ಶುದ್ಧ ಸ್ಥಾನದಲ್ಲಿ ಹೋಗಿ ಕೂತರೆ, ಎಳ್ಳಿಲ್ಲದೆ ತರ್ಪಣ ಮಾಡಿದರೆ, ದಕ್ಷಿಣೆ ಇಲ್ಲದೆ ಶ್ರಾದ್ಧ ಮಾಡಿದರೆ ಅದು ನಿಷ್ಫಲವಾಗುವದು. ॥ ೫೨೫ ॥ ಮೇಲೆ ಹೇಳಿದ ನಿಷಿದ್ಧ ದಿನಗಳಲ್ಲಿ ಮಾತ್ರ ನೀರಿನಿಂದ ತರ್ಪಣ ಮಾಡಬೇಕು ದೀಪಾವಳಿಯ ಚತುರ್ದಶಿ ದಿವಸ ತರ್ಪಣ ಕೊಡಬೇಕು. ॥ ೫೨೬ ॥ ಕೃಷ್ಣ ಅಂಗಾರಕ ಚತುರ್ದಶಿ ದಿವಸ ಸವ್ಯದಿಂದ ಯಮನ ಹೆಸರಿನಿಂದ ತರ್ಪಣ ಕೊಡಬೇಕು. ॥ ೫೨೭ ॥ ಆ ಯಮನಿಗೆ (೧) ಯಮ, (೨) ಧರ್ಮರಾಜ, (೩) ಮೃತ್ಯು, ೪ ಅಂತಕ, (೫) ವೈವಸ್ವತ, (೬) ಕಾಲ, (೭) ಸರ್ವಭೂತಕ್ಷಯ, (೮) ಔದುಂಬರ, (೯) ದಧ್ನ, (೧೦) ನೀಲ, (೧೧) ಪರಮೇಷ್ಠಿ, (೧೨) ವೃಕೋದರ, (೧೩) ಚಿತ್ರರೇಖಾ, (೧೪) ಚಿತ್ರಗುಪ್ತ ಎಂದು ಹದಿನಾಲ್ಕು ಹೆಸರುಗಳುಂಟು. ಆದ್ದರಿಂದ ಒಂದೊಂದು ಎಳ್ಳು ತಕ್ಕೊಂಡು ಆಮೇಲೆ ಯಮನ ಒಂದೊಂದೇ ಹೆಸರು ತಕ್ಕೊಂಡು ನದಿಯಲ್ಲಿ ಮೂರುಸಾರೆ ತರ್ಪಣ ಕೊಡಬೇಕು. ॥ ೫೨೮-೫೨೯-೫೩೦-೫೩೧ ॥ ಇದರಿಂದ ಸರ್ವ ಪಾಪಗಳು ನಾಶವಾಗು ವವು. ರೋಗವೂ ಅಪಮೃತ್ಯುವೂ ಎಂದಿಗೂ ಬರುವದಿಲ್ಲ. ಮತ್ತು ಗ್ರಹಗಳ ಪೀಡೆಯಾಗುವದಿಲ್ಲ. ॥ ೫೩೨ ॥ ಮಾಘ ಶುದ್ಧ ಅಷ್ಟಮಿಯಲ್ಲಿ ಭೀಷ್ಮ ತರ್ಪಣ ಮಾಡಬೇಕು. ಆದರಿಂದ ಒಂದು ವರ್ಷದ ಪಾಪ ನಾಶವಾಗು

ವದು. || ೫೩೩ || ಈ ಪ್ರಕಾರ ತರ್ಪಣ ಮಾಡಿ ಯಾವತ್ತು ಬ್ರಾಹ್ಮಣರು ಸೂರ್ಯನ ಹೆಸರಿನಿಂದ ಮೂರು ಅರ್ಘ್ಯ ಕೊಡಬೇಕು. ಎಂದು ಪರಾಶರರು ನೈಮಿಷಾರಣ್ಯದ ಋಷಿಗಳಿಗೆ ಹೇಳಿದರೆಂದು ಶ್ರೀ ನರಸಿಂಹ ಸರಸ್ವತಿ ಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. || ೫೩೪ || ಎಂದು ಸಿದ್ಧರು ನಾಮಧಾರಕನನ್ನು ಕುರಿತು— ಎಲೈ ನಾಮಧಾರಕಾ, ಕೃಪಾ ಮೂರ್ತಿಗಳಾದ ಶ್ರೀ ಗುರುಗಳು ಸರ್ವ ವಿಧಿಪ್ರಕಾರ ಬ್ರಾಹ್ಮಣರ ವಿಹಿತಾಚಾರಗಳನ್ನು ಆ ಬ್ರಾಹ್ಮಣನಿಗೆ ಹೇಳಿದರು. || ೫೩೫ || ಇತ್ತ ಸರಸ್ವತೀ ಗಂಗಾಧರನು ಈ ಪ್ರಕಾರ ಬ್ರಾಹ್ಮಣರ ಆಚಾರಗಳಿರುತ್ತವೆ ಇವುಗಳಂತೆ ಬಿಟ್ಟೂಬಿಡದೆ ಆಚರಿಸಬೇಕು ಆದರಿಂದ ಸರ್ವಾಭೀಷ್ಟಗಳು ,ಸಾಧಿಸುವವು ಎಂದು ಹೇಳಿದನು. || ೫೩೬ || ಹೀಗೆ ಶ್ರೀ ಗುರು ಚರಿತ್ರಾವೃತದಲ್ಲಿ ಸಿದ್ಧನಾಮಧಾರಕ ಸಂವಾದದಲ್ಲಿ ವೇದೋಪನಿಷದ ಮತಿತಾರ್ಥ ಆಚಾರ ನಿರೂಪಣ ಮಾಡಿದ ಅಧ್ಯಾಯವಿರುತ್ತದೆ. || ೫೩೭ ||

ಇತಿ ಶ್ರೀಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಆಹ್ನಿಕ ಕರ್ಮನಿರೂಪಣಂ ನಾಮ ಷಟ್‌ತ್ರಿಂಶೋಽಧ್ಯಾಯಃ || ೩೬ || ಶ್ರೀ ಗುರುದೇವದತ್ತ.

— ೩೬ನೇ ಅಧ್ಯಾಯ ಸಮಾಪ್ತ —

---

# ೩೭ನೇಯ ಅಧ್ಯಾಯ

## ಶ್ರೀಗುರುಗಳು ಆಬ್ರಾಹ್ಮಣನಿಗೆ ಐಹ್ನಿಕ ಕರ್ಮ ನಿಗೂಪಿಸಿದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ನಾಮಧಾರಕನು ವಿನಯದಿಂದ— ಸ್ವಾಮೀ, ಸಿದ್ಧ ಮುನಿಗಳೇ, ಶ್ರೀಗುರುಗಳು ಆ ಬ್ರಾಹ್ಮಣನಿಗೆ ಆಚಾರ ಧರ್ಮಗಳನ್ನು ಹೇಳಿದ ನಂತರ ಮುಂದೆ ಏನು ಹೇಳಿದರು ? ಮುಂದೆ ಕಥೆಯು ಯಾವ ಪ್ರಕಾರವಾಗಿ ನಡೆಯಿತು ? ಎಂದು ಕೇಳಿದನು. ॥ ೧ ॥ ಆಗ ಸಿದ್ಧರು— ನಿಜ ಶಿಷ್ಯನಾದ ನಾಮಧಾರಕನೇ ಕೇಳು. ಶ್ರೀಗುರುಗಳು ಪ್ರತ್ಯಕ್ಷ ನಾರಾಯಣನ ಅವತಾರವು. ಅವರು ಸರ್ವ ಆಚಾರಗಳನ್ನು ತಿಳಿದವರಾದ್ದರಿಂದ ಕೃಪೆಯಿಂದ ಎಲ್ಲ ಹೇಳುತ್ತಾರೆ ॥ ೨ ॥ ಮತ್ತು ತ್ರೈಮೂರ್ತಿಯ ಅವತಾರವಾದಂಥ ಶ್ರೀ ಗುರುಗಳಿಗೆ ಆಚಾರಗಳನ್ನು ಹೇಳಲಿಕ್ಕೆ ಏನು ಪ್ರಯಾಸವಾದೀತು ? ಪತೀತನಿಗೆ ಜ್ಞಾನವನ್ನು ಕೊಟ್ಟು ಯಾವ ರೀತಿಯಿಂದಾದರೂ ವೇದವನ್ನು ಹೇಳಿಸಲಿಲ್ಲವೇ ? ॥ ೩ ॥ ಈ ಪ್ರಕಾರ ದಯಾವಂತರೂ ಭಕ್ತರಿಗೆ ಕಲ್ಪವೃಕ್ಷವೂ ಆದಂಥ ಶ್ರೀ ಗುರುಗಳು ಆ ಬ್ರಾಹ್ಮಣನಮೇಲೆ ಕೃಪೆಮಾಡಿ ಇನ್ನುಮೇಲೆ ಆಹ್ನಿಕ ಕರ್ಮಗಳ ಆಚಾರಗಳನ್ನು ಹೇಳಹತ್ತಿದರು, ಕೇಳು. ॥ ೪ ॥

ಶ್ರೀ ಗುರುಗಳು— ಎಲೈ ಬ್ರಾಹ್ಮಣಾ, ಗೃಹರಕ್ಷಣದ ಉದ್ದಿಶ್ಯವಾಗಿ, ಮಂಥನದಿಂದ ತೀವ್ರ ಅಗ್ನಿಯುಂಟಾಗುವ ಕಟ್ಟಿಗೆಯನ್ನೂ ಕರೀ ಬೆಕ್ಕನ್ನೂ ಸಂಪಾದಿಸಬೇಕು. ॥ ೫ ॥ ಪವಿತ್ರವಾದ ಶ್ರೀಗಂಧ ಚಂದನಗಳನ್ನೂ ರತ್ನವನ್ನೂ ತುಪ್ಪವನ್ನೂ ಎಳ್ಳನ್ನೂ ಕೃಷ್ಣಾಜಿನವನ್ನೂ ಭಾಗ ವಸ್ತ್ರ (ಲೌಕರಿಯ ವಸ್ತ್ರ) ವನ್ನೂ ಮನೆಯಲ್ಲಿ ಸಂಪಾದಿಸಿಟ್ಟಿರಬೇಕು. ಇದರಿಂದ ಯಾವ ಪಾಪದ ಬಾಧೆಯಾಗಲಿಕ್ಕೆ ಶಕ್ಯವಿಲ್ಲ. ॥ ೬ ॥ ಮತ್ತು

ಮನೆಯಲ್ಲಿ ಬಿಳೀ ರೆಕ್ಕೆಗಳುಳ್ಳ ಸಾರಸ ಪಕ್ಷಿಯನ್ನು ಸಾಕಬೇಕು. ಹಾಗು ಮುಖ್ಯವಾಗಿ ಸಮಸ್ತ ಪಾಪಗಳನ್ನು ನಾಶ ಮಾಡುವಂಥ ಆಕಳನ್ನು ಸಾಕಬೇಕು. || ೭ ||

## ದೇವಪೂಜೆಯ ವಿಧಾನ

ಪರಾಶರರು— ಎಲೈ ಋಷಿಗಳೇ, ಇನ್ನು ನಿಮಗೆ ದೇವಪೂಜೆಯ ವಿಧಾನವನ್ನು ಹೇಳುವೆನು. ಏಕಮನದಿಂದ ಕೇಳಿರಿ. ಮೊದಲು ಎಲ್ಲರ ಪ್ರಾತರ್ವಿಧಿಗಳಾದ ನಂತರ ಸರ್ವ ಮನೆಯು ಹಾಗು ದೇವರ ಮನೆಯು ಕಸಕಡ್ಡಿಗಳನ್ನು ತೆಗೆದು ಸಾರಿಸಿ ಶುದ್ಧ ಮಾಡಬೇಕು. || ೮ || ಹ್ಯಾಗಂದರೆ— ಬೆಳ್ಳಿ, ಬಂಗಾರ, ತಾಮ್ರ ಮತ್ತು ಮಣ್ಣಿನ ಪಾತ್ರೆಗಳಲ್ಲಿ ನೀರು ತಕ್ಕೊಂಡು ವಿಧಿಪ್ರಕಾರ ಮನೆಯನ್ನು ಸಾರಿಸಿ ಶುದ್ಧ ಮಾಡಬೇಕು ಇನ್ನು ನಿಷಿದ್ಧ ಪಾತ್ರೆಗಳನ್ನು ಹೇಳುವೆನು ಕೇಳಿರಿ. || ೯ || ಕಂಚಿನ ಪಾತ್ರೆಯಿಂದ, ಕನ್ಯೆಯ ಕೈಯಿಂದ, ಶೂದ್ರ ಜಾತಿಯವರಿಂದ ಮತ್ತು ಎಡಗೈಯಲ್ಲಿ ವಸ್ತ್ರ ಹಿಡಿದು ಸಾರಿಸಬಾರದು, ಬಲಗೈಯಿಂದ ಸಾರಿಸಬೇಕು. || ೧೦ || ಸಾರಿಸಬೇಕಾದರೆ ನೈಋತ್ಯ ದಿಕ್ಕಿನಿಂದ ಆರಂಭ ಮಾಡಿ ಸಾರಿಸಬೇಕು. ಮತ್ತು ರಾತ್ರಿಯಲ್ಲಿ ನೀರಿನಿಂದ ಸಾರಿಸಬಾರದು. ಅಗತ್ಯ ಬಿದ್ದರೆ ಭಸ್ಮವನ್ನು ಬೆರಿಸಿ ಸಾರಿಸಬೇಕು. || ೧೧ || ಇತರ ಹಾಗು ದೇವರ ಮನೆಗಳನ್ನು ರಂಗವಲ್ಲಿಗಳಿಂದ ಅಲಂಕರಿಸಿ ನಿರ್ಮಲ ಮಾಡಬೇಕು. ಆಮೇಲೆ ಶುಭಾಸನದಲ್ಲಿ ಕೂತು ದೇವಪೂಜೆಯನ್ನು ಮಾಡಬೇಕು. || ೧೨ || ಬ್ರಾಹ್ಮಣರಿಗೆ ಸಂಧ್ಯಾ ಹ್ಯಾಗೆ ಮುಖ್ಯವೋ ಹಾಗೆ ದೇವಪೂಜೆಯೂ ಮುಖ್ಯವು. ಆದ್ದರಿಂದ ಭಕ್ತಿಯಿಂದಲೂ ಏಕಚಿತ್ತದಿಂದಲೂ ತ್ರಿಕಾಲದಲ್ಲಿ ದೇವತಾರ್ಚನ ಮಾಡಬೇಕು. || ೧೩ || ತ್ರಿಕಾಲ ಸಾಧಿಸದಿದ್ದರೆ ಒಳ್ಳೇ ಹರ್ಷದಿಂದ ಪ್ರಾತಃಕಾಲದಲ್ಲಿ ಮಾಡಬೇಕು, ಅದೂ ಸಾಧಿಸದಿದ್ದರೆ ಮಧ್ಯಾಹ್ನ ಕಾಲದಲ್ಲಾದರೂ ಮಾಡಲಿಕ್ಕೇ ಬೇಕು. || ೧೪ || ಸಾಯಂಕಾಲದಲ್ಲಿ ಭಕ್ತಿಯಿಂದ ಮಂತ್ರಪುಷ್ಪವನ್ನು ಮಾಡಬೇಕು. ಅದು ಸಾಧಿಸದಿದ್ದರೆ ಭೋಜನಕ್ಕೆ ಕೂಡ್ರುವಮುಂದೆ ಮಾಡಬೇಕು. || ೧೫ || ಎಲೈ ಬ್ರಾಹ್ಮಣನೇ ಕೇಳು. ಬ್ರಾಹ್ಮಣ

ಕುಲದಲ್ಲಿ ಹುಟ್ಟಿ ಯಾವನು ನಿತ್ಯ ದೇವಪೂಜೆಯನ್ನೂ ವೈಶ್ವದೇವವನ್ನೂ ಮಾಡದೇ ಊಟ ಮಾಡುವನೋ ಅವನು ತೀವ್ರವಾಗಿ ಯಮಪುರಕ್ಕೆ ಹೋಗಿ ನಿರಂತರ ನರಕದ ದುಃಖವನ್ನು ಅನುಭವಿಸುವನು. ॥ ೧೬-೧೭ ॥ ದೇವಪೂಜೆಯನ್ನು ಆರು ವಿಧದಿಂದ ಮಾಡಬಹುದು (೧) ಉದಕವೇ ನಾರಾಯಣ ಸ್ವರೂಪವೆಂದು ವಿಶೇಷ ವಾಗಿ ಹೇಳಿದ್ದರಿಂದ ಶುದ್ಧ ಪಾತ್ರೆಯಲ್ಲಿ ಶುದ್ಧ ನೀರನ್ನು ತುಂಬಿ ಭಕ್ತಿಯಿಂದ ಅದನ್ನು ವಿಧಿಪ್ರಕಾರ ಪೂಜಾ ಮಾಡಬೇಕು. ॥ ೧೮ ॥ (೨) ಎರಡನೇ ಪ್ರಕಾರವೇನಂದರೆ ಅಗ್ನಿಯನ್ನು ಭಕ್ತಿಯಿಂದ ಪೂಜಿಸುವದು ಹೆಚ್ಚಿನದು. (೩) ಮೂರನೇದು ಮಾನಸಪೂಜೆಯು ಅತಿ ವಿಶೇಷವಾದದ್ದೆಂದು ತಿಳಿಯಿರಿ. ॥ ೧೯ ॥ (೪) ನಾಲ್ಕನೇದು ಸೂರ್ಯನ ಪೂಜೆಯಿಂದ ನಾರಾಯಣನು ಸಂತುಷ್ಟನಾಗುವನು. (೫) ಐದನೇದು ಸಾಧಾರಣ ಪಕ್ಷದಿಂದ ಸ್ಥಂಡಿಲದಲ್ಲಿ ದೇವರನ್ನು ಆವಾಹಿಸಿ ಪೂಜಿಸಬೇಕು (೬) ಆರನೇದು ಅಲ್ಪಬುದ್ಧಿಯವರಿಗೆ ಮೂರ್ತಿಪೂಜೆಯು ಉಕ್ತವಾಗಿದೆ. ॥ ೨೦ ॥ ಬುದ್ಧಿವಂತರಾದ ಜ್ಞಾನಿಗಳಿಗೆ ಯಜ್ಞಪುರುಷನ ಪೂಜೆಯು ಮುಖ್ಯವು. ಅವರು ಹಾಗೆ ಮಾಡುತ್ತ ಹೋದರೆ ಅವರಿಗೆ ಮೊದಲು ಸ್ವರ್ಗವಾಗಿ ಕಡೆಗೆ ಮೋಕ್ಷವಾಗುವದು ॥ ೨೧ ॥ ಅಥವಾ ಆಕಳನ್ನು ಪೂಜಿಸ ಬೇಕು. ಉತ್ತಮರಾದ ಹಾಗು ವೇದಶಾಸ್ತ್ರಗಳನ್ನು ಬಲ್ಲಂಥ ಬ್ರಾಹ್ಮಣರನ್ನು ಪೂಜಿಸುವದು ವಿಶೇಷವಾದದ್ದು. ಮನಃಪೂರ್ವಕವಾಗಿ ಗುರುಪೂಜೆಯನ್ನು ಮಾಡುವದರಿಂದ ಪ್ರತ್ಯಕ್ಷ ತ್ರಿಮೂರ್ತಿಗಳು ಸಂತುಷ್ಟರಾಗುವರು. ॥೨೨॥ ಗುರುಗಳು ತ್ರೈಮೂರ್ತಿ ಸ್ವರೂಪವೆಂದು ಸಮಸ್ತ ಶ್ರುತಿ ಸ್ಮೃತಿಗಳು ಹೇಳುವವು. ಆದಕಾರಣ ಗುರುಗಳ ಪೂಜೆ ಯಿಂದ ಸಕಲಾಭೀಷ್ಟಗಳೂ ಚತುರ್ವಿಧ ಪುರುಷಾರ್ಥಗಳೂ ಸಾಧಿಸುವವು. ॥ ೨೩ ॥ ಕಲಿ ಪ್ರವೇಶವಾದಬಳಿಕ ಆಗಿನ ಜನರ ಮನಸ್ಸು ಏನು ಮಾಡಿದರೂ ಅಷ್ಟು ಸ್ಥಿರವಾಗಿ ಉಳಿಯುವದಿಲ್ಲವೆಂದು ಅವರ ಉದ್ಧಾರಕ್ಕಾಗಿ ಶ್ರೀಮನ್ನಾರಾಯಣನು ಒಂದು ಉಪಾಯವನ್ನು ಮಾಡಿರುವನು. ॥ ೨೪ ॥ ಏನಂದರೆ ಹೃಷೀಕೇಶನಾದ ಆತನು ಚಕ್ರಾಂಕಿತವಾದ ಶಾಲಿಗ್ರಾಮಗಳನ್ನು ಪ್ರಸಿದ್ಧಮಾಡಿರುವನು. ಆ ಶಾಲಿಗ್ರಾಮ ತೀರ್ಥವನ್ನು ತಕ್ಕೊಂಡರೆ ಸಕಲ ಪಾಪಗಳು ನಾಶವಾಗುವವು. ॥ ೨೫ ॥ ಶ್ರೀಗುರುಗಳ ಆಜ್ಞೆಯಿಂದ ವೇದೋಕ್ತ ಮಂತ್ರಗಳಿಂದ ವಿಧಿ

ಪೂರ್ವಕವಾಗಿ ಮೂರ್ತಿಪೂಜಾ ಮಾಡಬೇಕು. || ೨೬ || ಸ್ತ್ರೀಯರಿಗೂ ಶೂದ್ರರಿಗೂ ವೇದಮಂತ್ರದಿಂದ ಪೂಜೆಯನ್ನು ಹೇಳಬಾರದು. ಗುರುಗಳ ಆಜ್ಞೆಯಿಂದ ಆಗಮೋಕ್ತ ವಿಧಿಯಿಂದ ಪೂಜಾ ಮಾಡಬೇಕು. || ೨೭ || ಶ್ರೀಗುರುಗಳಾಜ್ಞೆಯಿಂದ ಪೂಜಿಸಿದಂಥ ಕಲ್ಲು, ಕಟ್ಟಿಗೆಗಳ ಮೂರ್ತಿಗಳೇ ದೇವರಾಗಿ ಪ್ರಸನ್ನವಾಗುವವು. || ೨೮ || ದೇವಪೂಜಾ ಮಾಡತಕ್ಕವರು ಶುದ್ಧಾಸನದಲ್ಲಿ ಕೂತು, ಮೂರು ಪ್ರಾಣಾಯಾಮ ಮಾಡಿ **ಪಿಭ್ಯೋ ಮಾತಾ** ಎಂಬ ಮಂತ್ರವನ್ನು ಹೇಳಿ ಪರಮಾತ್ಮನನ್ನು ಎಚ್ಚರಿಸಬೇಕು. || ೨೯ || ೧೨ ಸಾರೆ ಪ್ರಣವವನ್ನು ಉಚ್ಚರಿಸಿ, ತಲೆಯಮೇಲೆ ನೀರನ್ನು ಪ್ರೋಕ್ಷಿಸಿಕೊಂಡು, ಸಂಕಲ್ಪ ಮಾಡಿ ಅಂಗನ್ಯಾಸದಿಂದ ಕಲಶ ಪೂಜಾ ಮಾಡಬೇಕು. || ೩೦ || ದೇವರ ದಕ್ಷಿಣ ಭಾಗದಲ್ಲಿ (ಅಂದರೆ ಬಲಗಡೆಗೆ) ಕಲಶವನ್ನಿಟ್ಟು ಭಕ್ತಿಯಿಂದ ಅದನ್ನು ಪೂಜೆ ಮಾಡಿ ಆಮೇಲೆ ಶಂಖಪೂಜಾ ಮಾಡಬೇಕು. || ೩೧ || ನಂತರ ದೇವರ ಮೇಲಿನ ನಿರ್ಮಾಲ್ಯವನ್ನು ತೆಗೆದು ನೈಋತ್ಯ ದಿಕ್ಕಿಗೆ ಹಾಕಿ ಆನಂದದಿಂದ ಒಗೆದ ವಸ್ತ್ರವನ್ನು ಹೊತ್ತುಕೊಂಡು ದೀಪವನ್ನು ಪ್ರಜ್ವಲಿಸಬೇಕು || ೩೨ || ಬಳಿಕ ಮನಸಿನಲ್ಲಿ ಶ್ರೀಗುರುವನ್ನು ನೆನಿಸಿ, ತ್ರಿಕರಣಪೂರ್ವಕವಾಗಿಯೂ ವಿಧಿಪೂರ್ವಕವಾಗಿಯೂ ಪೀಠಪೂಜಾ ಮಾಡಬೇಕು. || ೩೩ || ಆ ಪೀಠದ ನಾಲ್ಕೂ ದ್ವಾರಗಳನ್ನು ಪೂಜಿಸಿ, ವಿಧಿಯಿಂದ ದಿಕ್ಪಗಳನ್ನು ಪೂಜಿಸಿಸಬಳಿಕ **ಶಾಂತಾಕಾರಂ** ಎಂಬ ಮಂತ್ರದಿಂದ ಪರಮಾತ್ಮನನ್ನು ಧ್ಯಾನಿಸಿ ಮಂತ್ರೋಕ್ತವಾಗಿ ಆವಾಹನ ಮಾಡಬೇಕು. || ೩೪ ||

**ಸಹಸ್ರ ಶೀರ್ಷಾ** ಎಂದು ಆವಾಹಿಸಿ, **ಪುರುಷಏವೇದಂ** ಎಂದು ಆಸನವನ್ನೂ, **ಏತಾವಾನಸ್ಯ** ಎಂದು ಪಾದ್ಯವನ್ನೂ, ಕೊಡಬೇಕು. || ೩೫ || **ತ್ರಿಪಾದೂರ್ಧ್ವ** ಎಂದು ಅರ್ಘ್ಯವನ್ನೂ, **ತಸ್ಮಾದ್ವಿರಾಡ** ಎಂದು ಆಚಮನವನ್ನೂ ಅರ್ಪಿಸಬೇಕು. || ೩೬ || **ಯತ್ಪುರುಷೇಣ** ಎಂದು ದೇವರಿಗೆ ಮಲಾಪಕರ್ಷಣ ಸ್ನಾನ ಮಾಡಿಸಿ ಬಳಿಕ ಪಂಚಾಮೃತಗಳಿಂದ ಸ್ನಾನ ಮಾಡಿಸಬೇಕು. || ೩೭ || ಆ ಮೇಲೆ ರುದ್ರಸೂಕ್ತ, ಪುರುಷಸೂಕ್ತ, ಶ್ರೀ ಸೂಕ್ತಗಳಿಂದ ಶ್ರುತಿ ಮಾರ್ಗದಿಂದ ನ್ಯಾಸ ಮಾಡಿ ಶುದ್ಧ ಸ್ನಾನಮಾಡಿಸಬೇಕು. || ೩೮ ||

ಅನನ್ಯ ಭಕ್ತಿಯಿಂದ ಗಂಧಾಕ್ಷತೆಗಳನ್ನು ಏರಿಸಬೇಕು. ॥ ೪೦ ॥ ಆಮೇಲೆ **ತಸ್ಮಾದಶ್ವಾಅಜಾಯಂತ** ಎಂದು ಮಂತ್ರವನ್ನು ಅನ್ನುತ್ತ ಮನಃಪೂರ್ವಕವಾಗಿಯೂ ಏಕಚಿತ್ತದಿಂದಲೂ ಹೂವುಗಳನ್ನು ಏರಿಸಬೇಕು. ॥ ೪೧ ॥

## ಪುಷ್ಪಗಳ ವಿಧಾನ

ಎಲೈ ಋಷಿಗಳೇ, ಇನ್ನು ಪುಷ್ಪಗಳನ್ನು ಏರಿಸುವ ವಿಧಾನವನ್ನು ಹೇಳುವೆನು ಕೇಳಿರಿ. ತಾವೇ ಹಚ್ಚಿದ ಗಿಡದ ಹೂವು ಉತ್ತಮ ॥ ೪೨ ॥ ಅಡವಿಯಲ್ಲಿ ಬೆಳೆದ ಹೂವು ಮಧ್ಯಮ. ಬೆಲೆ ಕೊಟ್ಟು ಕೊಂಡ ಹೂವು ಅಧಮ ಎಂದು ಹೇಳಿದೆ. ॥ ೪೩ ॥ ಉತ್ತಮ ಹೂವು ಸಿಗದಿದ್ದರೆ ರೊಕ್ಕ ಕೊಟ್ಟು ಕೊಳ್ಳಬೇಕು. ಆ ಹೂವುಗಳಲ್ಲಿ ಬಿಳೇವು ಉತ್ತಮ, ಕೆಂಪು ಹೂವು ಮಧ್ಯಮ, ಹಳದೀ ಹೂವು ಅಧಮ, ಕರಿಯ ಮತ್ತು ಚಿತ್ರವಿಚಿತ್ರವಾದ ಹೂವುಗಳು ಅಧಮಾಧಮವಾಗಿರುವವು. ॥ ೪೪ ॥ ತಂಗಳ ಪುಷ್ಪ, ಸಚ್ಛಿದ್ರ ಹಾಗು ಹುಳ ತಿಂದಂಥ, ನೆಲದ ಮೇಲೆ ಬಿದ್ದಂಥ ಹೂವುಗಳನ್ನು ಬಿಡಬೇಕು. ॥ ೪೫ ॥ ಬಿಲ್ವಪತ್ರ, ತುಳಸಿ, ಸಹಸ್ರಪತ್ರವಾದ ಕಮಲ ಇವು ಸದಾ ದೇವರಿಗೆ ಬೇಕಾದಂಥವುಗಳಿದ್ದು, ಅವು ತಂಗಳಾಗುವದಿಲ್ಲ. ॥ ೪೬ ॥ ಕಮಲ, ಬಕುಲ, ಸಂಪಿಗೆ, ಪಾಟಲ, ಪುನ್ನಾಗ, ಮಲ್ಲಿಗೆ, ಜಾಜಿ, ಕಣಗಲು, ಕಲ್ಹಾರ ಪುಷ್ಪಗಳನ್ನು ಏರಿಸಬೇಕು. ॥ ೪೭ ॥

## ವಿಷ್ಣುವಿಗೆ ಏರಿಸಬಾರದ ಹೂವುಗಳು

ವಿಷ್ಣುಪೂಜಾ ಮಾಡುವಾಗ ಏರಿಸಬಾರದ ಹೂಗಳನ್ನು ಹೇಳುವೆನು ಕೇಳಿರಿ. ಮದಗುಣಿಕೆ, ಎಕ್ಕಿ, ಕೆಂಪು ಕಣಗಲ ॥ ೪೮ ॥ ಬೆಟ್ಟದಾವರಿ, ಲಕ್ಕಿ, ಬಿದರು, ಬೇಲ (ಬೆಳವಲ), ಹೊಂಗೆ, ಕರಂಜ, ನೆಲ್ಲಿಯಪತ್ರ, ಕೂಷ್ಮಾಂಡ ಪುಷ್ಪಗಳನ್ನು ವಿಷ್ಣುವಿಗೆ ಏರಿಸಬಾರದು. ॥ ೪೯ ॥ ಇವುಗಳನ್ನು ಏರಿಸಿದರೆ ಮಹಾದೋಷ ಬರುವದು. ಯಾವತ್ತು ಋಷಿಗಳೇ ಕೇಳಿರಿ. ವಿಷ್ಣು ಪೂಜಾ ಮಾಡುವಾಗ ಈ ಹೂವುಗಳನ್ನು ಯಾಕೆ ಏರಿಸಬಾರದೆಂಬ

ಕಾರಣವನ್ನು ಹೇಳುವೆನು ಕೇಳಿರಿ. ॥ ೫೦ ॥ ವಿಷ್ಣುವಿಗೆ ಎಕ್ಕೀ ಹೂವು ಏರಿಸಿದರೆ ತನ್ನ ನಾಶವೇ ಆಗುವದು, ಧತ್ತೂರ ಪುಷ್ಪದಿಂದ ಪ್ರಜ್ಞಾ ನಾಶವಾಗುವದು. ಕೆಂಪು ಕಂಚವಾಳದ ಹೂವಿನಿಂದ ಬಡತನ ಬರುವದು. ॥ ೫೧ ॥ ಶ್ರೀಕರ್ಣಿಕಾ ಪುಷ್ಪ ಏರಿಸಿದರೆ ಕೂಡಲೆ ಕುಲಕ್ಷಯವಾಗುವದು. ಹೆಗ್ಗಳ್ಳದ ಹೂವಿನಿಂದ ಶೋಕ ಉಂಟಾಗುವದು. ॥ ೫೨ ॥ ಕುಂದ ಪುಷ್ಪಗಳಿಂದ ದುಃಖವಾಗುವದು. ಶಾಲ್ಮಲೀ ಹೂವಿನಿಂದ ರೋಗ ಬರುವದು. ಆದಕಾರಣ ವಿಷ್ಣುವಿಗೆ ಹೂವು ಏರಿಸಬೇಕಾದರೆ ವಿಚಾರ ಮಾಡಿ ಏರಿಸಬೇಕು.

## ಈಶ್ವರನಿಗೆ ಏರಿಸಬಾರದ ಹೂವುಗಳು

ಎಲೈ ಋಷಿಗಳೇ, ಇನ್ನು ಈಶ್ವರನಿಗೆ ಏರಿಸಬಾರದ ಹೂಗಳನ್ನು ಹೇಳುವೆನು ಕೇಳಿರಿ. ಕಪಿತ್ಥ, ಕೇದಿಗೆ, ಶಂಶಾಂತ (ಚಂದ್ರಕಾಂತ), ಕರೇಬಣ್ಣದ ಹೂಗಳನ್ನು ಏರಿಸಬಾರದು. ॥ ೫೩ ॥ ಮತ್ತು ಕಾಷ್ಠ, ಅರಳಿ, ಕರಂಜ (ಹುಲಿ ಉಗರಿನ ಹೂವು), ಬಕುಲ, ದಾಳಿಂಬ, ಕೋಲುಮಲ್ಲಿಗೆ, ನಂದಿಬಟ್ಟಲು, ಐದು ತರದ ನಿಂಬೆ, ಮಾಧವೀ ॥ ೫೫ ॥ ಮಾವು, ಕುಂದ, ಯೂಥಿಕಾ, ಜಾಜಿ, ಯಾವತ್ತು ಕೆಂಪು ಹೂಗಳು. ಇವುಗಳನ್ನು ಈಶ್ವರನಿಗೆ ಏರಿಸಬಾರದು. ಏರಿಸಿದರೆ ಪಾಪ ಬರುವದು. ಈಶ್ವರನಿಗೆ ಮುಖ್ಯವಾಗಿ ಬಿಳೇ ಹೂಗಳು ಮುಖ್ಯ. ॥ ೫೬ ॥ ಗಣಪತಿಗೆ ತುಳಸಿಯನ್ನು ಏರಿಸಬಾರದು. ನಿತ್ಯ ಕರಿಕೆಯನ್ನು ಏರಿಸಬೇಕು. ಶಕ್ತಿ ದೇವತೆಗಳಿಗೆ ಕರಿಕೆಯನ್ನು ಏರಿಸಬಾರದು. ॥ ೫೭ ॥ ಈ ರೀತಿಯಿಂದ ವಿಚಾರ ಮಾಡಿ ಆಯಾ ದೇವರಿಗೆ ಆಯಾ ಹೂವುಗಳನ್ನು ಏರಿಸಿದರೆ ತೀವ್ರವಾಗಿ ಮನಕಾಮನೆಗಳು ಪೂರ್ಣವಾಗಿ ಚತುರ್ವಿಧ ಪುರುಷಾರ್ಥಗಳು ಸಿದ್ಧಿಸುವವು. ॥ ೫೮ ॥ ಆಮೇಲೆ **ಯತ್ಪುರುಷಂ** ಎಂಬ ಮಂತ್ರದಿಂದ ದೇವರಿಗೆ ಪರಿಮಳ ದ್ರವ್ಯವನ್ನೂ ಸುಗಂಧ ಧೂಪವನ್ನೂ ಅರ್ಪಿಸಬೇಕು. **ಬ್ರಾಹ್ಮಣೋಸ್ಯ** ಎಂಬ ಮಂತ್ರದಿಂದ ಏಕಾರ್ತಿಕ್ಯ ದೀಪವನ್ನು ಅರ್ಪಿಸಬೇಕು. ॥ ೫೯ ॥ **ಚಂದ್ರಮಾ ಮನಸೋ** ಎಂಬ ಮಂತ್ರದಿಂದ ನೈವೇದ್ಯವನ್ನು ಮಾಡಿ, **ನಾಭ್ಯಾ** ಆಸೀತ

ಎಂಬ ಮಂತ್ರದಿಂದ ತಾಂಬೂಲವನ್ನು ಸಮರ್ಪಿಸಬೇಕು. ॥ ೬೦ ॥ **ಸಪ್ತಾಸ್ಯ** ಎಂಬ ಮಂತ್ರದಿಂದ ಸುವರ್ಣ ಪುಷ್ಪ ಹಾಗು ಉತ್ತರ ನೀರಾಜನ ಮಾಡಿ, **ದೇವಾಯಜ್ಞ** ಎಂಬ ಮಂತ್ರದಿಂದ ಪುಷ್ಪ ಮತ್ತು ಮಂತ್ರಾಕ್ಷತಿ ಗಳನ್ನು ಸಮರ್ಪಿಸಬೇಕು. ॥ ೬೧ ॥ **ಧಾತಾಪುರಸ್ತಾತ್** ಎಂಬ ಮಂತ್ರದಿದ ದೇವರಿಗೆ ನಮಸ್ಕರಿಸಬೇಕು.

## ನಮಸ್ಕಾರ ಮಾಡುವ ವಿಧಿಯು

ದೇವರಿಗೆ ಅತಿ ಎದುರಾಗಿ, ಹಿಂದಿನ ಮಗ್ಗಲು, ಮತ್ತು ಗರ್ಭಗ್ರಹದಲ್ಲಿ ನಮಸ್ಕರಿಸಬಾರದು. ॥ ೬೨ ॥ ವಿದ್ವಾಂಸರಿಗೆ ಹಾಗೂ ದೇವರಿಗೆ ಸವ್ಯವಾಗಿ ಪ್ರದಕ್ಷಿಣೆ ಹಾಕಿ ನಮಸ್ಕರಿಸಬೇಕು. ॥ ೬೩ ॥ ಗುರು-ತಾಯಿ-ತಂದೆಗಳೂ, ಉತ್ತಮ ಬ್ರಾಹ್ಮಣರೂ ಹೊರಗಿನಿಂದ ಬಂದರೆ ಅವರ ಎದುರಿಗೆ ಹೋಗಿ ನಮಸ್ಕರಿಸಬೇಕು. ॥ ೬೪ ॥ ಬ್ರಾಹ್ಮಣರ ಸಭೆಯ ಮುಂದೆ, ದೇವರ ಪೂಜೆಯ ಕಾಲಕ್ಕೆ ದೇವರೆದುರಿಗೆ ವಂದಿಸಬೇಕು. ಅಂದರೆ ಎಲ್ಲರಿಗೂ ನಮಸ್ಕಾರ ಮುಟ್ಟುವದು. ॥ ೬೫ ॥ ತಾಯಿ-ತಂದೆ-ಗುರುಗಳಿಗೆ ನಮಸ್ಕರಿಸಬೇಕಾದರೆ, ಬಲಗೈಯಿಂದ ಎಡ ಗಿವಿಯನ್ನೂ, ಎಡಗೈಯಿಂದ ಬಲಗಿವಿಯನ್ನೂ ಹಿಡಿದು, ಅವರ ಬಲ ಪಾದದ ಮೇಲೆ ತನ್ನ ಬಲಗೈಯನ್ನೂ, ಅವರ ಎಡ ಪಾದದ ಮೇಲೆ ತನ್ನ ಎಡಗೈಯನ್ನೂ ಇಟ್ಟು ನಮಸ್ಕರಿಸಬೇಕು. ॥ ೬೬-೬೭ ॥ ಗುರುಗಳ ಸಮಾನ ಯೋಗ್ಯರಾದವರಿಗೆ ಅಂದರೆ ತಾಯಿ-ತಂದೆ-ಸಂರಕ್ಷಕ. ಭಯನಿವಾರಕ, ಅನ್ನದಾತಾ, ಪುರೋಹಿತ, ಪುರೋಹಿತ ಪತ್ನಿ, ಮಲತಾಯಿ, ಹಿರಿಯ ಅಣ್ಣ, ದೊಡ್ಡಪ್ಪ, ಚಿಕ್ಕಪ್ಪ, ಮತ್ತು ವಯಸ್ಸಾದ ಇಷ್ಟ ಮಿತ್ರರು ಇವರೆಲ್ಲರಿಗೂ ಮೇಲೆ ಹೇಳಿದಂತೆ ನಮಸ್ಕರಿಸಬೇಕು. ॥ ೭೦ ॥

## ನಮಸ್ಕರಿಸಬಾರದ ಸ್ಥಾನಗಳು

ಮತ್ತೆ ಪರಾಶರರು— ಎಲೈ ಋಷಿಗಳಿರಾ, ನಿಮಗೆ ನಮಸ್ಕರಿಸಬಾರದ (ನಿಷಿದ್ಧ) ಸ್ಥಾನಗಳನ್ನು ಹೇಳು ವೆನು ಕೇಳಿರಿ. ವಿದ್ವಜ್ಜನರು ತಮ್ಮಕ್ಕಿಂತ ಚಿಕ್ಕವರನ್ನು ವಂದಿಸಬಾರದು. ॥ ೭೧ ॥ ಅಗ್ನಿ-ಸಮಿತ್ತು-ಹೂವು-

ದರ್ಭೆ–ಅಕ್ಷತೆಗಳನ್ನು ತಾನಾಗಲೀ ಇತರರಾಗಲೀ ಧರಿಸಿರುವಾಗ ವಂದಿಸಬಾರದು. ವಂದಿಸಿದರೆ ಅಶಸ್ತ್ರವಧದ ದೋಷವು ಬರುವದು. || ೭೨ || ತಾನು ಜಪ–ಹೋಮಗಳನ್ನು ಮಾಡುವಾಗ, ದೂರದಿಂದ ಬರುವ ಬ್ರಾಹ್ಮಣನನ್ನು ನೋಡಿ, ಮತ್ತು ಸ್ನಾನ ಮಾಡುತ್ತ ನೀರಿನಲ್ಲಿ ನಿಂತಾಗ ನಮಸ್ಕರಿಸಬಾರದು. ಅದರಿಂದ ದೋಷ ಬರುವದು. || ೭೩ || ಓಡುವ ಬ್ರಾಹ್ಮಣನಿಗೆ, ಧನಗರ್ವಿತನಿಗೆ, ಕೋಪಿಷ್ಠನಿಗೆ, ಮಂಗಲಸ್ನಾನ ಮಾಡುವವನಿಗೆ ವಂದಿಸಬಾರದು. ವಂದಿಸಿದರೆ ಪಾಪ ಬರುವದು. || ೭೪ || ಒಂದು ಕೈಯಿಂದ ಬ್ರಾಹ್ಮಣರಿಗೆ ವಂದಿಸಬಾರದು; ಮತ್ತು ಸೂತಕನನ್ನೂ ಮೂರ್ಖನನ್ನೂ ವಂದಿಸಬಾರದು. || ೭೫ || ಈ ಪ್ರಕಾರ ದೇವರಿಗೆ ಪ್ರದಕ್ಷಿಣಾ ನಮಸ್ಕಾರ ಮಾಡಿ ರಾಜೋಪಚಾರ ಪೂಜಾ ಮಾಡುವ ಮುಂದೆ ಗೀತ, ನೃತ್ಯ, ವಾದ್ಯಗಳಿಂದ ದೇವರನ್ನು ಸಂತೋಷಬಡಿಸಿ, ಭಕ್ತಿಯಿಂದ ಪ್ರಾರ್ಥನಾ ಮಾಡಿ ಆಮೇಲೆ ಸನಕಾದಿಗಳ ಪೂಜಾ ಮಾಡಬೇಕು. || ೭೬ || ಈ ಪ್ರಕಾರ ಅಪೂರ್ವವಾಗಿ ದೇವರ ಪೂಜಾ ಮಾಡಿ, ಆಮೇಲೆ ಪೀಠದಲ್ಲಿ ಹಸ್ತವನ್ನಿಟ್ಟು ಪೂಜಿಸಿ, ಆನಂದದಿಂದ ಉತ್ತರ ಪೂಜಾ ಮಾಡಿ ಉದ್ವಾರ್ಜನೆ ಮಾಡಬೇಕು. || ೭೭ || ಎಲೈ ಋಷಿಗಳಿರಾ, ಕೇಳಿರಿ. ಈ ಪ್ರಕಾರ ಭಕ್ತಿಯಿಂದ ದೇವಪೂಜಾ ಮಾಡಬೇಕು. ಸಂಸ್ಕೃತವಾದ ಅನ್ನವಾದಮೇಲೆ ವೈಶ್ವದೇವ ಮಾಡಬೇಕು. || ೭೮ ||

## ವೈಶ್ವದೇವ ವಿಧಿಯು

ಸಂಸ್ಕೃತವಾದ ಅನ್ನದಿಂದ ವೈಶ್ವದೇವ ಮಾಡಬೇಕು. ಕುಂಡದಲ್ಲಿ ಅಗ್ನಿಯನ್ನು ಅಲಂಕರಿಸಿ, ಆ ಅಗ್ನಿಕುಂಡಕ್ಕೆ ಅನ್ನವನ್ನು ತೋರಿಸಿ, ತುಪ್ಪವನ್ನು ಹಾಕಿ ೫ ಭಾಗ ಮಾಡಬೇಕು. || ೭೯ || ೧ನೇ ಭಾಗದಲ್ಲಿ ೧೦ ಆಹುತಿಗಳನ್ನು ಕೊಟ್ಟು, ೨ನೇ ಭಾಗದಲ್ಲಿ ಬಲಿಹರಣ ಕೊಡಬೇಕು. ೩ನೇ ಭಾಗದಲ್ಲಿ ಅವಧಾನ ಮಾಡಿ, ೪ನೇ ಭಾಗದಲ್ಲಿ ಪಿತೃಯಜ್ಞ ಮಾಡಬೇಕು. || ೮೦ || ೫ನೇ ಭಾಗದಲ್ಲಿ ಅತಿಥಿಗಳನ್ನು ಸಂತೋಷಬಡಿಸಬೇಕು. ಈ ಪ್ರಕಾರ ವಿಧಿಯುಕ್ತ ಮಂತ್ರದಿಂದ ವೈಶ್ವದೇವ ಮಾಡಬೇಕು. ಅನ್ನ ಇಲ್ಲದ ದಿವಸ ಅಕ್ಕಿಯಿಂದ ವೈಶ್ವದೇವ

ಮಾಡಬೇಕು. ॥ ೮೧ ॥ ವೈಶ್ವದೇವ ಸಮಯದಲ್ಲಿ ಕಳ್ಳನಾಗಲಿ, ಚಾಂಡಾಲನಾಗಲಿ ಅತಿಥಿಯಾಗಿ ಬಂದರೆ ಆನಂದಬಟ್ಟು ಅವರನ್ನು ಮನೋಭಾವದಿಂದ ಪೂಜಿಸಿ ಅವರಿಗೆ ಅನ್ನ ಹಾಕಬೇಕು. ॥ ೮೨ ॥ ಎಲೈ ಋಷಿಗಳೇ ಯಮನು ತನ್ನ ದೂತರನ್ನು ಕುರಿತು— ಎಲೈ ದೂತರೇ, ವೈಶ್ವದೇವ ಮಾಡುವವರ ಸಮೀಪಕ್ಕೆ ಹೋಗಬಾರದೆಂದು ವಿಷ್ಣುವಿನ ಆಜ್ಞೆಯಾಗಿದೆ. ಕಾರಣ ಅಂಥವರ ಹತ್ತಿರ ಹೋಗಬೇಡಿರಿ ಎಂದು ಹೇಳಿದ್ದಾನೆ. ॥ ೮೩ ॥ ಎಲೈ ಋಷಿಗಳೇ ಮುಂದೆ ಕೇಳಿರಿ. ವೈಶ್ವದೇವ ಕಾಲದಲ್ಲಿ ತಾಯಿ–ತಂದೆಗಳನ್ನು ಕೊಂದವನಾಗಲಿ, ನಾಯಿಯಾಗಲಿ, ಶ್ವಪಚನಾಗಲಿ, ಚಾಂಡಾಲನಾಗಲಿ ಅತಿಥಿಯಾಗಿ ಬಂದರೆ ಅವರ ಕುಲ-ಗೋತ್ರಗಳನ್ನು ವಿಚಾರ ಮಾಡದೆ ಅವರಿಗೆ ಅನ್ನ ಹಾಕಬೇಕು. ಅತಿಥಿಗಳು ವಿಮುಖರಾದರೆ ಅವನ ಪಿತೃಗಳು ೧೬ ವರುಷಗಳ ವರೆಗೆ ಮನೆಗೆ ಬರುವದಿಲ್ಲ. ॥ ೮೪–೮೫ ॥ ವೈಶ್ವದೇವ ಮಾಡತಕ್ಕ ಬ್ರಾಹ್ಮಣನು ಒಂದು ವೇಳೆ ಪ್ರವಾಸಿಯಾಗಿದ್ದಾಗ, ಔಷಧ, ತುಪ್ಪ, ಮೊಸರು, ಹಾಲು, ಗಡ್ಡೆಗೆಣಸು, ಹಣ್ಣುಗಳಿಂದ ದೇವಯಜ್ಞ ಮಾಡಬೇಕು. ॥ ೮೬ ॥ ತಿಳಿದವರು ಅನ್ನದ ಹೊರತು ಅವಧಾನ ಮಾಡಬಾರದು. ಬ್ರಾಹ್ಮಣನು ಪಂಚಮಹಾಯಜ್ಞ ಮಾಡಬೇಕು. ಅದು ಆಗದಿದ್ದರೆ ಚಾಂದ್ರಾಯಣ ಮಾಡಬೇಕು. ॥ ೮೭ ॥ ವೈಶ್ವದೇವ ಇಲ್ಲದ ಕಾಲದಲ್ಲಿ ಸಹ ಮನೆಗೆ ಭಿಕ್ಷುಕನು ಬಂದರೆ ಅವನಿಗೆ ಭಿಕ್ಷೆ ಹಾಕಬೇಕು. ಆದರಿಂದ ಪಾಪನಾಶವಾಗಿ ವೈಶ್ವದೇವ ಫಲವು ಬರುವದು. ॥ ೮೮ ॥ ಬಲಿಹರಣವನ್ನು ತಾನೇ ತೆಗೆದರೆ ಪಾಪ ಬರುವದು. ಆಗ ಚಾಂದ್ರಾಯಣ ಮಾಡಬೇಕಾಗುವದು. ಆದ್ದರಿಂದ ಬಲಿಹರಣವನ್ನು ಬೇರೆಯವರಿಂದ ತೆಗಿಸಬೇಕು. ॥ ೮೯ ॥ ಬಲಿಹರಣ ತೆಗೆಯದೆ ಹಾಗೇ ಊಟ ಮಾಡಿದರೆ ಆರು ಪ್ರಾಣಾಯಾಮ ಮಾಡಬೇಕು. ಅಂದರೆ ಅದರ ದೋಷವು ಹೋಗುವದು. ॥ ೯೦ ॥ ಮುಖ್ಯವಾಗಿ ನಿತ್ಯ ಗೋಪೂಜಾ ಮಾಡಿ ಗೋಗ್ರಾಸ ಕೊಡುವದು ವಿಶೇಷವಾದದ್ದು. ನಿತ್ಯ ಶ್ರಾದ್ಧ ಮಾಡಿ ಅನ್ನವನ್ನು ಸಮರ್ಪಿಸಬೇಕು. ॥ ೯೧ ॥ ಬ್ರಹ್ಮಚಾರಿಗೆ ಸ್ವಧಾಕಾರ, ಪಿಂಡದಾನ, ಅಗ್ನೌಕರಣ ಮಾಡಬಾರದು. ಮತ್ತು ತಾಂಬೂಲ ದಕ್ಷಿಣೆಗಳನ್ನು ಸಹ ಕೊಡಬಾರದು. ॥ ೯೨ ॥ ವೈಶ್ವದೇವ ಆದಮೇಲೆ ತನ್ನ ಮನೆಯ ತಲೆಬಾಗಿಲದಲ್ಲಿ

ನಿಂತು ಆಕಳನ್ನು ಹಿಂಡುವಷ್ಟು ಕಾಲದವರೆಗೆ ನಿಂತು ಅತಿಥಿಗಳು ಬರುವದನ್ನು ನೋಡಬೇಕು. ಅವರು ಬಂದರೆ ಅವರ ಪೂಜಾ ಮಾಡಿ ಅನ್ನ ಹಾಕಬೇಕು. || ೯೩ || ಆ ಕಾಲದಲ್ಲಿ ಬಳಲಿಬಂದ ಅತಿಥಿಯನ್ನೂ ಅಸ್ತಮಯ ಕಾಲ ದಲ್ಲಿ ಬಂದ ಅತಿಥಿಯನ್ನೂ ಭಕ್ತಿಯಿಂದ ಪೂಜಿಸಬೇಕು. || ೯೪ || ವರ್ಣಾನಾಂ ಬ್ರಾಹ್ಮಣೋ ಗುರುಃ, ಎಂದು ವೇದಶಾಸ್ತ್ರಗಳು ಹೇಳುತ್ತವೆ. ವೈಶ್ವದೇವ ಸಮಯದಲ್ಲಿ ಬಂಧ ಅತಿಥಿಯು ಸರ್ವರಿಗೂ ಗುರುವು. || ೯೫ || ವೈಶ್ವದೇವ ಸಮಯದಲ್ಲಿ ಬಂದ ಅತಿಥಿಯನ್ನು ಒಂದೇ ಮನಸಿನಿಂದ ಪೂಜಿಸಿದರೆ ಶ್ರೀಶಂಕರ, ಬ್ರಹ್ಮ, ಇಂದ್ರ, ಅಗ್ನಿ, ವಾಯುಗಳ, ಅರ್ಯಮಾದಿ ಸಕಲ ದೇವತೆಗಳೂ ತೃಪ್ತರಾಗಿ ಅವನೂ ದೇವತ್ವವನ್ನು ಹೊಂದು ವನು. || ೯೬–೯೭ || ಅತಿಥಿಯ ಪಾದ ತೊಳೆದರೆ ಸಕಲ ಪಿತೃಗಳೂ ತೃಪ್ತರಾಗುವರು. ಅನ್ನದಾನದಿಂದ ಬ್ರಹ್ಮ–ವಿಷ್ಣು–ಮಹೇಶ್ವರರು ತೃಪ್ತರಾಗುವರು. || ೯೮ || ಯತೀಶ್ವರ ಮೊದಲಾದವರು ಬ್ರಹ್ಮಚಾರಿಗಳು ಯಾವ ಸಮಯದಲ್ಲಿ ಮನೆಗೆ ಬಂದರೂ ಅವರಿಗೆ ಮುಖ್ಯವಾಗಿ ಅನ್ನ ಕೊಡಬೇಕು. ಅದರಿಂದ ಮಹಾ ಪುಣ್ಯವು ಬರು ವದು. || ೯೯ || ಅತಿಥಿಗೆ ಒಂದು ತುತ್ತು ಅನ್ನ ಕೊಟ್ಟಮಾತ್ರಕ್ಕೆ ಮೇರುಪರ್ವತದಷ್ಟು ಪುಣ್ಯ ಬರುವದು. ಅವರಿಗೆ ಉತ್ತಮ ನೀರು ಕುಡಿಯಲಿಕ್ಕೆ ಕೊಟ್ಟರೆ ಸಮುದ್ರ ದಾನ ಮಾಡಿದಷ್ಟು ಪುಣ್ಯ ಬರುವದು. || ೧೦೦ || ಅತಿಥಿಯು ಮನೆಗೆ ಬಂದಾಗ ಅವನನ್ನು ಬಿಟ್ಟು ಊಟ ಮಾಡಿದವನು ಮೊದಲು ನಾಯಿಯಾಗಿಯೂ ಹಿಂದಿನಿಂದ ಕತ್ತೆಯಾಗಿಯೂ ಹುಟ್ಟುವನು. || ೧೦೧ || ಆದ್ದರಿಂದ ಅತಿಥಿಯನ್ನು ಪೂಜಿಸಿ ಅವನ ಸಂಗಡ ಊಟ ಮಾಡ ಬೇಕು. ಊಟದಲ್ಲಿ ಪಕ್ಷಪಾತ ಮಾಡಿದರೆ ದೋಷ ಬರುವದು. || ೧೦೨ || ಗೃಹಸ್ತನು ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಸಂತೋಷದಿಂದ ಊಟ ಮಾಡಬೇಕು. ಆಮೇಲೆ ಬಾಯಿ, ಎರಡು ಕೈ ತೊಳಕೊಂಡು ಎರಡು ಕಾಲು ತೊಳಕೊಳ್ಳಬೇಕು. ಈ ಪ್ರಕಾರ ಈ ಐದೂ ಸ್ಥಾನ ಹಸಿಯಾಗಿದ್ದರೆ ಅವನು ಶತಾಯುಷಿ-ಯಾಗುವನು. || ೧೦೩–೧೦೪ ||

## ಊಟಕ್ಕೆ ಕೂಡ್ರುವ ಮಂಡಲವಿಧಿ

ಭೋಜನ ಕಾಲದಲ್ಲಿ ಎರಡೂ ಪಾದಗಳನ್ನು ಜೋಡಿಸಿ, ಪೂರ್ವಮುಖವಾಗಿ ಕೂತುಕೊಂಡು ಮೌನ ದಿಂದಲೂ ಏಕಚಿತ್ತದಿಂದಲೂ ಊಟ ಮಾಡಬೇಕು. || ೧೦೫ || ಊಟ ಮಾಡುವಾಗ ಪಾತ್ರೆಯ ಬುಡಕ್ಕೆ ಮಂಡಲವನ್ನು ಮಾಡಿ ಮೇಲೆ ಭಸ್ಮವನ್ನು ಪ್ರೋಕ್ಷಿಸಬೇಕು. ಬ್ರಾಹ್ಮಣನು ಚೌಕು, ಕ್ಷತ್ರಿಯನು ತ್ರಿಕೋನ, ವೈಶ್ಯನು ವರ್ತುಳಾಕಾಶ || ೧೦೬ || ಶೂದ್ರನು ಅರ್ಧ ಚಂದ್ರಾಕಾರ ಮಂಡಲ ಮಾಡಬೇಕು. ಆಮೇಲೆ ಆದರಲ್ಲಿ ಬ್ರಹ್ಮ, ವಸು, ರುದ್ರ, ಆದಿತ್ಯ ಮೊದಲಾದ ಶ್ರೇಷ್ಠ ದೇವತೆಗಳನ್ನು ಆವಾಹಿಸಬೇಕು. || ೧೦೭ || ಆ ಮಂಡಲದಲ್ಲಿ ಪಿತಾಮಹಾದಿ ದೇವತೆಗಳು ಹುಟ್ಟುವರು ಆದಕಾರಣ ಮಂಡಲವಿಲ್ಲದೆ ಎಂದೂ ಉಣ್ಣಬಾರದು. || ೧೦೮ || ಒಂದು ವೇಳೆ ಮಂಡಲವಿಲ್ಲದೆ ಹಾಗೇ ಉಂಡರೆ ಆ ಅನ್ನದ ರಸವನ್ನು ಪಿಶಾಚರೂ ರಾಕ್ಷಸರೂ ಒಯ್ಯುವರು. || ೧೦೯ ||

## ಊಟಕ್ಕೆ ಕೂಡ್ರುವ ದಿಕ್ಕು

ಪೂರ್ವಾಭಿಮುಖವಾಗಿ ಕೂತು ಊಟ ಮಾಡುವದು ಉತ್ತಮ. ಪಶ್ಚಿಮ ಮುಖವು ಮಧ್ಯಮ. ಪಿತೃ ಕಾರ್ಯದಲ್ಲಿ ಉತ್ತರಮುಖವಾಗಿ ಕೂಡ್ರಬೇಕು. ದಕ್ಷಿಣಮುಖವಾಗಿ ಎಂದೂ ಕೂಡ್ರಬಾರದು. || ೧೧೦ ||

## ಊಟಕ್ಕೆ ಯೋಗ್ಯವಾದ ಪಾತ್ರೆಗಳು

ಊಟಕ್ಕೆ ಚಿನ್ನ-ಬೆಳ್ಳಿ-ತಾಮ್ರ ಪಾತ್ರೆಗಳೂ ಕಮಲದ ಎಲೆ, ಮುತ್ತಲ ಎಲೆ, ಬಾಳೆಯ ಎಲೆ, ತುಮರಿ ಎಲೆ, ಹಲಸಿನ ಎಲೆ, ಇಪ್ಪಿ ಎಲೆ ಮುಂತಾದವು ಪುಣ್ಯಕರವಾದವುಗಳೆಂದು ತಿಳಿಯಬೇಕು. || ೧೧೧ || ಆದರೆ

ಗೃಹಸ್ಥನು ತಾಮ್ರಪಾತ್ರೆಯಲ್ಲಿ ಉಣ್ಣಬಾರದು. ಯತಿಗಳು ಬಂಗಾರ, ಬೆಳ್ಳಿ, ತಾಮ್ರ, ಮುತ್ತಿನ ಚಿಪ್ಪು, ಶಂಖ, ಸ್ಫಟಿಕ, ಪಾಷಾಣ ಪಾತ್ರೆಗಳನ್ನು ಉಪಯೋಗಿಸಬೇಕು. ॥ ೧೧೨ ॥ ಸುಳಿ ಬಾಳಿಯ ಎಲೆ, ನೀರು ಹತ್ತಿದ ಕಮಲದ ಎಲೆ, ಚಿಗುರು ಮುತ್ತಲ ಎಲೆಗಳಲ್ಲಿ ॥ ೧೧೩ ॥ ಮತ್ತು ಆಲ, ಅರಳಿ, ಎಕ್ಕಿ, ಪಡುವಲ, ಕದಂಭ, ಕೋಮಲವಾದ ಕಂಚವಾಳದ ಎಲೆ, ಸಾಗವಾನಿ ಎಲೆಗಳಲ್ಲಿ ಉಂಡರೆ ಚಾಂದ್ರಾಯಣ ವ್ರತ ಮಾಡಬೇಕು. ॥ ೧೧೪ ॥ ಲೋಹಪಾತ್ರೆಯನ್ನು ಕೈಯಲ್ಲಿ ಹಿಡಿದು ಉಂಡರೆ, ತಾಮ್ರದ ಮಣ್ಣಿನ ಪಾತ್ರೆಗಳಲ್ಲಿ ಉಂಡರೆ ಡಬ್ಬಬಿದ್ದ ಎಲೆ, ಹತ್ತಿಯ ಎಲೆ, ಅರಿವೆಗಳಲ್ಲಿ ಉಂಡರೆ ಕೂಡಲೆ ನರಕವಾಗುವದು. ॥ ೧೧೫ ॥ ಕಂಚಿನ ಪಾತ್ರೆಯಲ್ಲಿ ಊಟ ಮಾಡಿದರೆ ಯಶಸ್ಸೂ, ಬಲವೂ ಪ್ರಜ್ಞೆಯೂ, ಆಯುಸ್ಸೂ ಹೆಚ್ಚಾಗುವವು. ಆದ್ದರಿಂದ ಗ್ರಹಸ್ಥರಿಗೆ ಊಟಕ್ಕೆ ಕಂಚಿನ ಪಾತ್ರೆಯೇ ಶ್ರೇಷ್ಠವು. ॥ ೧೧೬ ॥ ಕಂಚಿನ ಪಾತ್ರೆಯು ಐದು ಶೇರು ತೂಕಕ್ಕಿಂತ ಕಡಿಮೆ ಇರಬಾರದು. ಹೆಚ್ಚಾದರೆ ಉತ್ತಮೋತ್ತಮ ಆರು ಶೇರು ತೂಕದ್ದಿದ್ದರೆ ಬಂಗಾರದಂತೆ ಶ್ರೇಷ್ಠವಾದದ್ದು. ॥ ೧೧೭ ॥ ವಿಧವೆಯರೂ, ಯತಿಗಳೂ, ಬ್ರಹ್ಮಚಾರಿಗಳೂ, ಕಂಚಿನ ಪಾತ್ರೆಯಲ್ಲಿ ಊಟವನ್ನು ಮಾಡಬಾರದು, ತಾಂಬೂಲ ಹಾಕಿಕೊಳ್ಳಬಾರದು. ಆದರಲ್ಲಿರುವ ಎಣ್ಣೆ ಹಚ್ಚಿಕೊಂಡು ಸ್ನಾನ ಮಾಡಬಾರದು. ॥ ೧೧೮ ॥ ಔಡಲ ಎಲೆಯಲ್ಲಿ ಉಂಡರೆ ನಾಯಿಯ ಚರ್ಮಕ್ಕಿಂತಲೂ ಹೆಚ್ಚು ನಿಷೇಧವು. ಎರಡನೇಯವರು ಉಂಡ ಒಡಕ ಪಾತ್ರೆಯಲ್ಲಿ ಉಣ್ಣುವದು ಅದಕ್ಕೂ ಹೆಚ್ಚು ನಿಷೇಧವು ॥ ೧೧೯ ॥ ಒಡಕ ಕಂಚಿನ ಪಾತ್ರೆಯಲ್ಲಿ ಉಂಡರೆ ದೋಷ ಬರುವದು. ಸಂಧ್ಯಾಕಾಲದಲ್ಲಿ ಹರ್ಷದಿಂದ ಉಂಡರೆ ಮಹಾಪಾತಕಿಯಾಗುವನು. ॥ ೧೨೦ ॥ ಪತಿತನು ಹತ್ತರಿದ್ದರೆ ಉಣ್ಣಬಾರದು, ಶೂದ್ರರು ಉಂಡ ಶೇಷಾನ್ನವನ್ನು ಬ್ರಾಹ್ಮಣನು ಉಣ್ಣಬಾರದು. ॥ ೧೨೧ ॥ ಶ್ರಾದ್ಧದ ದಿನ ಸಂಗಡ ಸಣ್ಣ ಹುಡುಗರನ್ನು ಕೂಡ್ರಿಸಿಕೊಂಡು ಉಣ್ಣಬಾರದು. ಆಗ ಬ್ರಾಹ್ಮಣನು ತನ್ನ ಆಸನವನ್ನು ತಾನೇ ಹಾಕಬಾರದು. ॥ ೧೨೨ ॥ ಬ್ರಾಹ್ಮಣನು ಮಂದಮತಿಯಾಗಿ ತನ್ನ ಕೈಯಲ್ಲಿ ತಾನೇ ಆಪೋಷನವನ್ನು ಹಾಕಿಕೊಳ್ಳಬಾರದು. ಮತ್ತು ತನ್ನ ಕೈಯಲ್ಲಿ ತಾನೇ ಎಣ್ಣೆಯನ್ನು ಹಾಕಿ

ಕೊಂಡು ಹಚ್ಚಿಕೊಳ್ಳಬಾರದು. || ೧೨೩ || ತನ್ನ ಎಲೆಯ ಬುಡಕ್ಕೆ ತಾನೇ ಮಂಡಲ ಮಾಡಿಕೊಳ್ಳಬಾರದು, ಬೇರೆಯವರು ಮಾಡಬೇಕು. ಹೆಂಡತಿಯು ಮಾಡಬೇಕು. ತಾನೇ ಮಾಡಿಕೊಳ್ಳುವ ಪ್ರಸಂಗ ಬಂದರೆ ಎಡಗೈಯಿಂದ ಮಾಡಿಕೊಳ್ಳಬೇಕು. ತಾನೇ ಮಂಡಲ ಮಾಡಿಕೊಂಡರೆ ಆಯುಸ್ಸು ಕಡಿಮೆಯಾಗುವದಲ್ಲದೆ, ಅವನಿಗೆ ಪುತ್ರಘಾತಕನೆಂಬ ಹೆಸರು ಬರುವದು. || ೧೨೪ || ಎಲೆಯಮೇಲೆ ಬಡಿಸಿದ ಅನ್ನಕ್ಕೆ ಅಭಿಗಾರ ಹಾಕಿದಮೇಲೆ ನಮಸ್ಕರಿಸಬೇಕು. ಆಮೇಲೆ ಕೈಯಲ್ಲಿ ನೀರು ತಕ್ಕೊಂಡು ವ್ಯಾಹೃತಿ ಮಂತ್ರದಿಂದ ಆ ಅನ್ನಕ್ಕೆ ಪ್ರೋಕ್ಷಿಸಿ ಪವಿತ್ರ ಮಾಡಬೇಕು, ನಂತರ ಆ ಎಲೆಯಮೇಲಿನ ಅನ್ನವನ್ನು ಇಷ್ಟದೇವತಾ, ಕುಲದೇವತಾ, ಗುರುಗಳಿಗೆ ನೈವೇದ್ಯ ತೋರಿಸಿ ಕೈಮುಗಿದು, ಅದೇ ಮಂತ್ರದಿಂದ ಪರಿಷೇಚನ ಮಾಡಿ ಚಿತ್ರಗುಪ್ತರನ್ನು ವಂದಿಸಿ || ೧೨೫–೧೨೬ || ಅನ್ನವನ್ನು ಸ್ಪರ್ಶಮಾಡಿ ಅವರಿಗೆ ಬಲಿಕೊಟ್ಟು ಕೂಡಲೆ ಅವುಗಳನ್ನು ಕೂಡಿಸಿ, ಎಡಗೈಯನ್ನು ನೆಟ್ಟಗೆ ತೊಳಕೊಂಡು || ೧೨೭ || ಎಡಗೈ ಅಂಗುಷ್ಠ, ತರ್ಜನೀ, ಮಧ್ಯ ಬೆರಳುಗಳಿಂದ ಪಾತ್ರೆಯನ್ನು ಹಿಡಿದು ಎರಡನೆಯವರಿಂದ ಬಲಗೈಯಲ್ಲಿ ಆಪೋಷಣ ಹಾಕಿಸಿಕೊಳ್ಳಬೇಕು. ಊಟವಾಗುವತನಕ ಎಡಗೈಯಿಂದ ಪಾತ್ರೆಯನ್ನು ಹಿಡಿದಿರಬೇಕು. ಅಥವಾ ಮೊದಲೇ ಹಿಡಿದಿರಬಾರದು. || ೧೨೮ || ಆಪೋಷನದ ನೀರು ಬಿಟ್ಟು ಬೇರೆ ನೀರು ತಕ್ಕೊಂಡರೆ ನಾಯಿಯ ಮೂತ್ರವನ್ನು ತಕ್ಕೊಂಡಂತೆಯೇ ಸರಿ. || ೧೨೯ || ಆಪೋಷನವನ್ನು ಹಿಡಿದಂಥ ಬ್ರಾಹ್ಮಣರಿಗೆ ನಮಸ್ಕರಿಸಬಾರದು. ಅವನಿಂದ ಆಶೀರ್ವಾದವನ್ನು ತಕ್ಕೊಳ್ಳಬಾರದು. ಅದರಿಂದ ಇಬ್ಬರಿಗೂ ದೋಷ ಬರುವದು. || ೧೩೦ || ಬ್ರಾಹ್ಮಣನು ಆಪೋಷಣವನ್ನು ಹಾಕಿಸಿಕೊಂಡು ಮೌನದಿಂದಿದ್ದು ಒಂದು ಶಬ್ದವನ್ನು ಸಹ ಉಚ್ಚರಿಸದೆ, ಮಂತ್ರಪೂರ್ವಕ ಆಪೋಷನ ತಕ್ಕೊಂಡು ಆಮೇಲೆ ಪ್ರಾಣಾಹುತಿಯನ್ನು ತಕ್ಕೊಳ್ಳಬೇಕು. || ೧೩೧ || ಆಪೋಶನವಿಲ್ಲದೆ ಉಂಡ ಪಾಪ ಹೋಗುವದಕ್ಕೆ ೧೦೮ ಸಾರೆ ಗಾಯತ್ರೀ ಜಪ ಮಾಡಬೇಕು. || ೧೩೨ || ಎಲೈ ಋಷಿಗಳೇ, ನಿಮಗೆ ಪ್ರಾಣಾಹುತಿಯನ್ನು ತಕ್ಕೊಳ್ಳುವ ವಿಧಾನವನ್ನು ಹೇಳುವೆನು ಕೇಳಿರಿ, ಪ್ರಾಣಾಗ್ನಿಹೋತ್ರ ಮಾಡಿದರೆ, ಹತ್ತಿಯ ರಾಶಿಗೆ ಬೆಂಕಿ ಹತ್ತಲು ಅದು ಕೂಡಲೆ ಭಸ್ಮವಾಗು

ವಂತೆ ಅವನ ಪಾಪಗಳೆಲ್ಲ ಭಸ್ಮವಾಗುವವು. ॥ ೧೩೩–೧೩೪ ॥ ಪ್ರಾಣಾಹುತಿಯ ಲಕ್ಷಣವೇನಂದರೆ ಅದರಿಂದ ಚತುರ್ವಿಧ ಪುರುಷಾರ್ಥಗಳು ಸಾಧಿಸುವವು. ಪ್ರಾಣಾಹುತಿಯನ್ನು ತಕ್ಕೊಳ್ಳುವ ಮುಂದೆ ಗೀತೆಯಲ್ಲಿ ಹೇಳಿದ ಪ್ರಖ್ಯಾತವಾದ ಶ್ಲೋಕವನ್ನು ಅಂದು ತಕ್ಕೊಳ್ಳಬೇಕು. ॥ ೧೩೧ ॥ ಏನಂದರೆ—

**ಶ್ಲೋಕ ॥ ಅಹಂ ವೈಶ್ವಾನರೋ ಭೂತ್ವಾ, ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನ ಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥ ೧೩೬ ॥**

ಅನ್ನಂ ಬ್ರಹ್ಮ ರಸೋವಿಷ್ಣು, ಭೋಕ್ತಾ ದೇವ ಮಹೇಶ್ವರಃ ॥ ಎಂಬ ಮಂತ್ರವನ್ನೂ "ಅಗ್ನಿರಸ್ಮಿ" ಎಂಬ ಮಂತ್ರವನ್ನೂ ಅಂದು ಆಪ್ರೋಷನವನ್ನು ತಕ್ಕೊಳ್ಳಬೇಕು. ಅಂದರೆ ಅನ್ನದೋಷವಾಗುವದಿಲ್ಲ. ॥ ೧೩೭ ॥ ಆಮೇಲೆ ಪ್ರಾಣಾಹುತಿಯನ್ನು ತಕ್ಕೊಳ್ಳಬೇಕು. ಪ್ರಾಣಾಹುತಿಯನ್ನು ತಕ್ಕೊಳ್ಳಲಿಕ್ಕೆ ೫ ಪ್ರಖ್ಯಾತವಾದ ಮಂತ್ರಗಳಿರುತ್ತವೆ. ಅವುಗಳನ್ನು ಕ್ರಮವಾಗಿ ಹೇಳುವೆನು ಕೇಳಿರಿ. (೧) ಅಂಗುಷ್ಠ–ತರ್ಜನಿ–ಮಧ್ಯ ಅಂಗುಲಗಳಿಂದ ಅತಿ ಸ್ವಲ್ಪ ಅನ್ನ ತಕ್ಕೊಂಡು **ಓಂ ಪ್ರಾಣಾಯ ಸ್ವಾಹಾ** ಎಂದು ಬಾಯಿಯಲ್ಲಿ ಹಾಕಿಕೊಳ್ಳಬೇಕು. ॥ ೧೩೮ ॥ ಇದರಂತೆ (೨) ಮಧ್ಯಮ–ಅನಾಮಿಕಾ–ಅಂಗುಷ್ಠಗಳಿಂದ ಅತಿ ಸ್ವಲ್ಪ ಅನ್ನ ತಕ್ಕೊಂಡು **ಓಂ ಅಪಾನಾಯ ಸ್ವಾಹಾ** ಎಂದೂ, (೩) ಅಂಗುಷ್ಠ–ಅನಾಮಿಕಾ–ಕನಿಷ್ಠ ಅಂಗುಲಿಗಳಿಂದ ಅನ್ನ ತಕ್ಕೊಂಡು **ಓಂ ವ್ಯಾನಾಯ ಸ್ವಾಹಾ** ಎಂದೂ ॥ ೧೩೯ ॥ (೪) ಅಂಗುಷ್ಠ – ತರ್ಜನೀ – ಕನಿಷ್ಠಗಳಿಂದ ಅನ್ನ ತಕ್ಕೊಂಡು **ಓಂ ಉದಾನಾಯ ಸ್ವಾಹಾ** ಎಂದು, (೫) ಐದೂ ಅಂಗುಲಿಗಳಿಂದ ಸ್ವಲ್ಪ ಅನ್ನ ತಕ್ಕೊಂಡು **ಓಂ ಸಮಾನಾಯ ಸ್ವಾಹಾ, ಓಂ ಬ್ರಹ್ಮಣೇ ಸ್ವಾಹಾ** ಎಂದು ಆಹುತಿ ತಕ್ಕೊಳ್ಳಬೇಕು. ॥ ೧೪೦ ॥ ಪ್ರಾಣಾಹುತಿಯ ಅನ್ನವನ್ನು ಹಲ್ಲಿಗೆ ಹಚ್ಚದೆ ಕೇವಲ ಗಂಟಲಿನಿಂದಲೇ ನುಂಗಬೇಕು. ಆಮೇಲೆ ಮೌನವಾಗಿರಬೇಕು. ॥ ೧೪೧ ॥

## ಮೌನವಾಗಿರುವ ಕಾಲಗಳು

ಎಲೈ ಋಷಿಗಳೇ, ನಿಮಗೆ ಮೌನವಾಗಿರುವ ಕಾಲಗಳನ್ನು ಹೇಳುವೆನು ಕೇಳಿರಿ. ಸ್ನಾನಮಾಡುವಾಗ ಒಳ್ಳೇ ಮೌನವಾಗಿರಬೇಕು. ಆಗ ಮೌನವಾಗಿರದಿದ್ದರೆ ಸ್ನಾನದ ಫಲಬರುವದಿಲ್ಲ. ॥ ೧೪೨ ॥ ಹೋಮ ಮಾಡುವಾಗ ಮೌನವಾಗಿರಬೇಕು. ಇಲ್ಲದಿದ್ದರೆ ಕೂಡಲೆ ಲಕ್ಷ್ಮಿಯು ಹೋಗುವಳು. ಊಟಮಾಡುವಾಗ ಮೌನದಿಂದಿರದಿದ್ದರೆ ಅಪಮೃತ್ಯು ಬರುವ ಸಂಭವವು. ॥ ೧೪೩ ॥ ಊಟವಾಗುವವರೆಗೆ ಮೌನವಾಗಿರಲಿಕ್ಕೆ ಅಶಕ್ಯವಾದರೆ ಪ್ರಾಣಾಹುತಿಯನ್ನು ತಕ್ಕೊಳ್ಳುವವರೆಗಾದರೂ ಮೌನವಾಗಿರಬೇಕು. ಎಂದು ಆ ಬ್ರಾಹ್ಮಣನಿಗೆ ಶ್ರೀಗುರುಗಳು ಹೇಳಿದರು ॥ ೧೪೪ ॥ ತಂದೆ ಹಾಗು ಹಿರೇ ಅಣ್ಣಂದಿರು ಜೀವಂತ ಇದ್ದವರು ಮೌನ ಹಿಡಿಯ ಬಾರದು. ಶ್ರಾದ್ಧಾನ್ನ ಊಟಮಾಡುವಾಗ ಮೌನ ಹಿಡಿಯಬೇಕು. ॥ ೧೪೫ ॥ ೫ ಪ್ರಾಣಾಹುತಿ ಕೊಡುವಾಗ ಮೌನವಾಗಿರುವದು ಎಲ್ಲರಿಗೂ ಯೋಗ್ಯವು. ಆದರೆ ತಂದೆ, ಹಿರಿ ಅಣ್ಣ ಇದ್ದವರು ಮೌನ ಹಿಡಿದರೆ ಅಧಃಪಾತ ವಾಗುವದು. ॥ ೧೪೬ ॥

## ಊಟಮಾಡುವ ಕ್ರಮ

ಊಟಕ್ಕೆ ಕೂತ ಕೂಡಲೆ ಮೊದಲು ಮಧುರಾನ್ನವನ್ನುಣ್ಣಬೇಕು. ಮಧ್ಯದಲ್ಲಿ ಗಟ್ಟಿ ಅನ್ನವನ್ನೂ ಉಣ್ಣ ಬೇಕು. ॥ ೧೪೭ ॥ ಭೋಜನಾಂತ್ಯದಲ್ಲಿಯೂ ದ್ರವಾನ್ನವನ್ನುಣ್ಣಬೇಕು. ತೀವ್ರ ಊಟಾಮಾಡಬೇಕು. ॥ ೧೪೮ ॥ ಅಂದರೆ ಆಕಳು ನೀರು ಕುಡಿಯುವಷ್ಟು ಹೊತ್ತಿನಲ್ಲಿ ಊಟಮಾಡಬೇಕು. ಶೀಘ್ರ ಭೋಜನವು ಮುಖ್ಯವು. ॥ ೧೪೯ ॥

## ಊಟಮಾಡುವ ಸ್ಥಿತಿ

ಎಷ್ಟು ತುತ್ತು ಊಟಮಾಡಬೇಕೆಂಬುವ ಊಟದ ಸ್ಥಿತಿಯನ್ನು ಹೇಳುವೆನು ಕೇಳಿರಿ. ಸನ್ಯಾಸಿ-ಮುನಿ-ಯತಿ ಇವರು ೮ ತುತ್ತು ಊಟಮಾಡಬೇಕು. || ೧೫೦ || ಅರಣ್ಯವಾಸಿಗಳು ೧೬ ತುತ್ತು, ಗೃಹಸ್ಥನು ೩೨ ತುತ್ತು, ಬ್ರಹ್ಮಚಾರಿಯು ಬೇಕಾದಷ್ಟು ಊಟ ಮಾಡಬೇಕು. || ೧೫೧ || ತಮ್ಮ ಬಾಯೊಳಗೆ ಹಿಡಿಯುವಷ್ಟು ದೊಡ್ಡ ತುತ್ತು ತಕ್ಕೊಳ್ಳಬೇಕು. ಹೆಚ್ಚು ದೊಡ್ಡ ತುತ್ತು ತಕ್ಕೊಂಡು ಅರ್ಧ ಬಾಯೊಳಗೆ, ಅರ್ಧ ಕೈಯೊಳಗೆ ಉಳಿದರೆ ಅದರಿಂದ ಉಚ್ಛಿಷ್ಟನ್ನುಂಡ ಫಲ ಬರುವದು. || ೧೫೨ || ಅರ್ಧ ತುತ್ತು ಉಂಡು ಉಳಿದ ಅರ್ಧ ತಮ್ಮ ಎಡೆಯಲ್ಲಿ ಹಾಕಿ ಉಂಡರೆ ಅದು ಉಚ್ಛಿಷ್ಟವನ್ನುಂಡಂತಾಗುವದು. ಕಾರಣ ಅದಕ್ಕಾಗಿ ಚಂದ್ರಾಯಣ ವ್ರತಮಾಡಬೇಕು. || ೧೫೩ || ಒಂದೇ ಎಲೆಯಲ್ಲಿ ಆಪ್ತಿಷ್ಟರನ್ನೂ ಇತರರನ್ನೂ ಕೂಡ್ರಿಸಿಕೊಂಡು ಊಟ ಮಾಡಬಾರದು. ಮುಂಜಿ ಆಗದ ಮತ್ತು ಲಗ್ನವಾಗದ ಸಣ್ಣ ಮಕ್ಕಳನ್ನು (ಹೆಣ್ಣು-ಗಂಡು) ಕೂಡ್ರಿಸಿಕೊಂಡರೆ ಅಡ್ಡಿಯಿಲ್ಲ. || ೧೫೪ || ಅನ್ನವನ್ನು ಚಲ್ಲಬಾರದು. ಅದರಲ್ಲಿ ವಿಶೇಷವಾಗಿ ತುಪ್ಪ-ಪಾಯಸಗಳನ್ನು ಚಲ್ಲಬಾರದು. ಕಡೆಗೆ ಒಂದು ತುತ್ತು ಮಾತ್ರ ಅನ್ನವನ್ನು ಬಿಟ್ಟು ಉಳಿದದ್ದನ್ನೆಲ್ಲ ಉಣ್ಣಬೇಕು. || ೧೫೫ || ಊಟ ಮುಗಿಯುವವರೆಗೆ ಪಾತ್ರೆಯನ್ನು ಎಡಗೈಯಿಂದ ಹಿಡಿದಿರಲಿಕ್ಕೇಬೇಕು. ಮರೆತು ಬಿಟ್ಟರೆ ಅಷ್ಟಕ್ಕೇ ಊಟ ಬಿಟ್ಟು ಏಳಬೇಕು. || ೧೫೬ || ಆದ್ದರಿಂದ ಬ್ರಾಹ್ಮಣರು ಪಾತ್ರೆಯನ್ನು ಬಿಡಬಾರದು, ಅಥವಾ ಮೊದಲೇ ಹಿಡಿಯಬಾರದು ಆದರಿಂದ ದೋಷವಿಲ್ಲ. || ೧೫೭ || ತಲೆಗೆ ವಸ್ತ್ರವನ್ನು ಸುತ್ತಿಕೊಂಡು, ಅಥವಾ ದಕ್ಷಿಣಕ್ಕೆ ಮೋರೆ ಮಾಡಿ ಕುಳಿತುಕೊಂಡು, ಎಡಗಾಲ ಮೇಲೆ ಕೈಯನ್ನಿಟ್ಟು ಉಂಡರೆ ಆ ಅನ್ನವನ್ನು ರಾಕ್ಷಸರು ಒಯ್ಯುವರು. || ೧೫೮ || ಎಡಗೈಯನ್ನು ನೆಲದಮೇಲೆ ಊರಿ ಉಂಡರೆ ರೋಗ ಬರುವದು. ಐದೂ ಬೊಟ್ಟುಗಳಿಂದ ತುತ್ತು ತಕ್ಕೊಂಡು ಊಟಮಾಡಬೇಕು. || ೧೫೯ || ಒಂದಾದರೂ ಬೊಟ್ಟು ಬಿಟ್ಟು ಊಟಮಾಡಿದರೆ ಗೋಮಾಂಸ

ವನ್ನು ತಿಂದ ದೋಷವು ಬರುವದು. ಮತ್ತು ನಾನಾರೀತಿ ದೋಷಗಳಿರುತ್ತವೆ. ಇನ್ನು ಊಟಮಾಡುವ ಹಾಗು ಮಾಡಬಾರದ ಸ್ಥಳಗಳನ್ನು ಹೇಳುವೆನು ಕೇಳಿರಿ. || ೧೬೦ ||

## ಊಟಮಾಡುವ ಹಾಗೂ ಮಾಡಬಾರದ ಸ್ಥಳಗಳು, ರೀತಿಗಳು

ಆನೆ-ಕುದುರೆಗಳನ್ನು ಹತ್ತಿಕೊಂಡು, ಸ್ಮಶಾನದಲ್ಲಿ, ದೇವಾಲಯದಲ್ಲಿ, ಶಯನಸ್ಥಾನದಲ್ಲಿ ಕೂತು ಊಟ ಮಾಡಬಾರದು. || ೧೬೧ || ಕೈಯಲ್ಲಿ ಪಾತ್ರೆಯನ್ನು ಹಿಡಿದು, ಒದ್ದೆಯನ್ನುಟ್ಟುಕೊಂಡು, ಹಸೀ ಕೂದಲುಳ್ಳವ ನಾಗಿ, ಹೊರಗೆ ಕೈಯನ್ನೂ ಚಂಡಿಕೆಯನ್ನೂ ಬಿಟ್ಟುಕೊಂಡು ಊಟಮಾಡಿದರೆ ಪಾಪ ಬರುವದು. || ೧೬೨ || ಸವ್ಯ ಅಥವಾ ಮಾಲಾಕಾರ ಜನಿವಾರಉಳ್ಳವನಾಗಿ, ಎದುರಿಗೆ ಪಾದರಕ್ಷಾಗಳನ್ನು ನೋಡದೆ ಊಟಮಾಡಬೇಕು. || ೧೬೩ || ತುತ್ತು, ನೀರು, ಗಡ್ಡೆಗೆಣಸು, ಹಣ್ಣು, ಕಬ್ಬುಗಳನ್ನು ಅರ್ಧ ತಿಂದು ಉಳಿದ ಅರ್ಧವನ್ನು ಅದೇ ಪಾತ್ರೆಯಲ್ಲಿಟ್ಟರೆ ಉಚ್ಛಿಷ್ಟದೋಷ ಬರುವದು || ೧೬೪ || ಸ್ನಾನಮಾಡದೆ, ಹೋಮಮಾಡದೆ ಉಂಡ ಅನ್ನವು ಕ್ರಿಮಿಗೆ ಸಮಾನವೆಂದು ಪರಾಶರರು ಹೇಳಿದರು. || ೧೬೫ || ಎಲೆಯನ್ನು ಬುಡಮೇಲೆಮಾಡಿ ಹಾಕಿಕೊಂಡು ಅದರಮೇಲೆ ಊಟಮಾಡಿದರೆ, ಮತ್ತು ರಾತ್ರಿಯಲ್ಲಿ ದೀಪವಿಲ್ಲದೆ ಉಂಡರೆ ಹುಳಗಳನ್ನು ತಿಂದ ಪಾಪವು ಬರು ವದು. || ೧೬೬ || ಆಗ ದೀಪ ಹೋದರೆ ಪಾತ್ರೆಯನ್ನು ಹಿಡಕೊಂಡು ಪುನಃ ದೀಪ ಹಚ್ಚುವವರೆಗೆ ಕೂತು, ದೀಪ ಹಚ್ಚಿದಮೇಲೆ ಎಲೆಯಲ್ಲಿದ್ದಷ್ಟನ್ನೇ ಪೂರ್ಣ ಊಟಮಾಡಬೇಕು. ಮತ್ತೆ ಹೆಚ್ಚು ಹಾಕಿಸಿಕೊಂಡು ಉಂಡರೆ ದೋಷ ಬರುವದು. ಎಂದು ಶ್ರೀಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. || ೧೬೭-೧೬೮ || ಊಟಮಾಡು ವಾಗ ಚಂಡಿಕೆಯನ್ನು ಮುಟ್ಟಬಾರದು. ಕಥೆ ಹೇಳಬಾರದು. ಆಕಾಶವನ್ನು ನೋಡಬಾರದು ಕತ್ತಲೆಯಲ್ಲಿ ಉಣ್ಣಬಾರದು. | ೧೬೯ || ಎಲೆಯಲ್ಲಿ ತನ್ನ ಹೆಂಡತಿಗೆ ಒಂದು ತುತ್ತು ಸಹ ಅನ್ನವನ್ನಿಡದೆ ಉಂಡವನಿಗೆ ಮಹಾದೋಷ ಬರುವದು. ಆಕೆಯು ಆ ಅನ್ನವನ್ನು ಉಣ್ಣದಿದ್ದರೆ ಆಕೆಗೆ ಮಹಾದೋಷವು ಬರುವದು. ||೧೭೦||

ದೇವರಿಲ್ಲದ ಹಾಳು ದೇಗುಲದಲ್ಲಿ, ಮನೆಯ ದೇವರ ಹತ್ತಿರ, ನೀರಿನ ಸಮೀಪದಲ್ಲಿ ಕೂತು, ಮೂರೂ ಸಂಜೆಯ ಮುಂದೆ ಉಣ್ಣಬಾರದು. ‖ ೧೭೧ ‖ ಮತ್ತು ಕಲ್ಲಿನಮೇಲೆ ಪಾತ್ರೆಯನ್ನಿಟ್ಟು ಉಣ್ಣಬಾರದು. ಊಟಮಾಡುವಾಗ ಸ್ತ್ರೀಯರ ಮುಖ ನೋಡುತ್ತ, ‖ ೧೭೨ ‖ ಮತ್ತು ಸ್ತ್ರೀಯರ ಪಂಕ್ತಿಯಲ್ಲಿ ಉಣ್ಣಬಾರದು, ಹಾಗೆ ಉಂಡರೆ ಉಚ್ಛಿಷ್ಟ ಭಕ್ಷಣಮಾಡಿದ ದೋಷ ಬರುವದು. ತನ್ನ ಹೆಂಡತಿಯೊಡನೆ ಊಟಮಾಡಿದರೆ ದೋಷವಿಲ್ಲ. ‖೧೭೩‖ ಥಾಲಿಯಲ್ಲಿಯ ಅರ್ಧ ನೀರನ್ನು ಕುಡಿದು, ಉಳಿದ ನೀರನ್ನು ಮತ್ತೆ ಕುಡಿದರೆ ಉಚ್ಛಿಷ್ಟವಾಗುವದು ಕುಡಿಯುವ ಪ್ರಸಂಗವೇ ಬಂದರೆ ಅದರಲ್ಲಿಯ ಸ್ವಲ್ಪ ನೀರನ್ನು ಕೆಳಗೆ ಚೆಲ್ಲಿ ಉಳಿದದ್ದನ್ನು ಕುಡಿಯಬೇಕು. ‖ ೧೭೪ ‖ ವಸ್ತ್ರವನ್ನು ಹಿಂಡಿದ ನೀರನ್ನು ಕುಡಿದರೆ ಮಹಾದೋಷವುಂಟು. ಮುಂದೆ ಮೊದಲು ನಾಯಿಯಾಗಿ ಹುಟ್ಟಿ, ಆಮೇಲೆ ನರಕವನ್ನನುಭೋಗಿಸಬೇಕಾಗುವದು. ‖ ೧೭೫ ‖ ಹಾಲು, ನೀರು, ತುಪ್ಪ, ಆಪೋಶನದ ನೀರು ಕುಡಿಯುವಾಗ ಶಬ್ದಮಾಡಬಾರದು ಶಬ್ದವಾದರೆ ಸುರಾಪಾನಮಾಡಿದಂತಾಗುವದು. ‖ ೧೭೬ ‖ ಮಹಾನದಿಯ ಅಥವಾ ಮಹಾಜಲದ ನೀರಿಗೆ ಬಾಯಿಹಚ್ಚಿ ನೀರು ಕುಡಿದರೆ ಹಾಗು ನಿಂತು ನೀರು ಕುಡಿದರೆ ಅದು ಸುರಾಪಾನಕ್ಕೆ ಸಮವಾಗುವದು. ‖ ೧೭೭ ‖ ಜ್ಞಾನವಂತರು ಎರಡೂ ಕೈಗಳನ್ನು ಕೂಡಿಸಿ ಬೊಗಸೆಯಿಂದ ನೀರು ಕುಡಿಯಬಾರದು. ಬಲಗೈಯಿಂದಲೇ ಕುಡಿಯಬೇಕು. ಕುಡಿಯುವ ನೀರಿಗೆ ಎಡಗೈಯನ್ನು ಹಚ್ಚಬಾರದು. ‖ ೧೭೮ ‖ ಸಭೆಯಲ್ಲಿ ಎಲ್ಲರೂ ಏಕಾಸನದಲ್ಲಿ ಕೂತಾಗ, ಅಥವಾ ತನ್ನ ಹಾಸಿಗೆಯಮೇಲೆ ಕೂತಾಗ ನೀರು ಕುಡಿದರೆ ಮಹಾದೋಷ ಬರುವದು. ‖ ೧೭೯ ‖ ಊಟಕ್ಕೆ ಒಡಕ ಪಾತ್ರೆಯಿಂದ ಬಡಿಸಬಾರದು. ಊಟಕ್ಕೆ ಕೂತಾಗ ಬೇರೆ ಜಾತಿಯವರನ್ನು ರಜಶ್ವಲೆಯರನ್ನೂ, ಚಾಂಡಾಲರನ್ನೂ, ನಾಯಿಗಳನ್ನೂ ನೋಡಬಾರದು. ‖ ೧೮೦ ‖ ತಮ್ಮಸಂಗಡ ಅವರಿಗೆ ಊಟಕ್ಕೆಸಹ ಹಾಕಬಾರದು. ಹಾಕುವ ಪ್ರಸಂಗ ಬಂದರೆ ಅವರ ಶಬ್ದವು ಕೇಳದಂತೆ ದೂರ ಕೂಡಿಸಿ ಅವರಿಗೆ ಬಡಿಸುವ ಪಾತ್ರಗಳನ್ನೇ ಬೇರೆ ಮಾಡಿ ಬಡಿಸಬೇಕು. ಅವರಿಗೆ ಬಡಿಸಿದ ಪಾತ್ರೆಗಳಲ್ಲಿ ಉಳಿದ ಪದಾರ್ಥಗಳನ್ನು ಒಳಗಿನ ಪದಾರ್ಥಗಳಲ್ಲಿ ಕೂಡಿಸಬಾರದು.) ಊಟ ಮಾಡುವಾಗ ಅನ್ಯ ಜಾತಿಯವರ,

ರಜಸ್ವಲೆಯರ, ಚಾಂಡಾಲರ, ನಾಯಿಗಳ ದರ್ಶನವಾದರೆ ಮತ್ತು ಅವರ ಶಬ್ದವು ಕಿವಿಗೆ ಬಿದ್ದರೆ ಅಷ್ಟಕ್ಕೇ ಊಟ ಬಿಟ್ಟು ಏಳಬೇಕು. ಹಾಗೇ ಉಂಡರೆ ಮಹಾ ದೋಷ ಬರುವದು. ॥ ೧೮೧ ॥ ಜಗಳದ ಶಬ್ದ, ಕುಟ್ಟುವ ಹಾಗು ಬೀಸುವ ಸಪ್ಪಳ, ಅಪಶಬ್ದಗಳನ್ನು ಕೇಳುತ್ತ ಮತ್ತು ಸ್ಪೃಷ್ಟಾಸ್ಪೃಷ್ಟವಾದ ಅನ್ನವನ್ನು ಉಣ್ಣಬಾರದು. ॥ ೧೮೨ ॥ ಅಪರಿಚಿತ ಜನರನ್ನು ತಮ್ಮ ಪಂಕ್ತಿಯಲ್ಲಿ ತಮ್ಮ ಹತ್ತರ ಕೂಡ್ರಿಸಿಕೊಳ್ಳಬಾರದು. ಕೂಡ್ರಿಸಿಕೊಳ್ಳುವ ಪ್ರಸಂಗ ಬಂದರೆ ತಮ್ಮ ಅವರ ಎಲಿಯ ನಡುವೆ ನೀರು ಅಥವಾ ಭಸ್ಮದಿಂದ ಗೆರೆಯನ್ನು ಹಾಕಬೇಕು. ॥ ೧೮೩ ॥ ಅಥವಾ ತಮಗೂ ಅವರಿಗೂ ನಡುವೆ ಕಂಬ ಹಾಗು ಬಾಗಿಲ ಬಂದರೆ ಶುದ್ಧವು ಅಥವಾ ತನ್ನ ಎಲೆಯಸುತ್ತ ನೀರು ಸುತ್ತುಗಟ್ಟಿದರೆ ಒಳ್ಳೇದು ದೋಷವಿಲ್ಲ. ॥ ೧೮೪ ॥ ಬ್ರಾಹ್ಮಣನು ಕರೇ ವಸ್ತ್ರವನ್ನುಟ್ಟುಕೊಂಡು ಉಣ್ಣಬಾರದು. ಉಂಡರೆ ಅಪಾರ ದೋಷ ಬರುವದು. ಕಚ್ಚೆ ಹಾಕದೆ ಇದ್ದಂಥ ಸ್ತ್ರೀಯರು ಬಡಿಸಿದ ಅನ್ನವು ಎಂಜಲನ್ನಕ್ಕೆ ಸಮಾನವೆಂದು ತಿಳಿದು ಅದನ್ನು ಉಣ್ಣಬಾರದು. ॥ ೧೮೫ ॥ ಬ್ರಾಹ್ಮಣರು ಈ ಪ್ರಕಾರ ಸರ್ವವನ್ನೂ ವಿಚಾರ ಮಾಡಿ ಭೋಜನ ಮಾಡಬೇಕು ಊಟವೆಲ್ಲಾ ಮುಗಿದಮೇಲೆ **ವಿಕಿರಿದ-ವಿಲೋಹಿತ** ಎಂಬ ಮಂತ್ರವನ್ನು ಅಂದು ಎಲೆಯಲ್ಲಿ ಉಳಿದ ಅನ್ನವನ್ನು ಅಭಿಮಂತ್ರಿಸಬೇಕು. ॥ ೧೮೬ ॥ ಹ್ಯಾಗಂದರೆ ವಿಕಿರೀದೇ ಎಂದು ಅಂದು ಅನ್ನವನ್ನು ಅಭಿಮಂತ್ರಿಸುವಾಗ **ಅಘೋರಋಷಿಃ, ರುದ್ರದೇವತಾ, ಅನುಷ್ಟುಪ್‌ಛಂದಃ, ಅನ್ನಾಭಿಮಂತ್ರಣೇ ವಿನಿಯೋಗಃ** ॥ ೧೮೭ ॥ ಎಂದು ಮಂತ್ರವನ್ನು ಜಪಿಸಿ, ಅಶೇಷಾನ್ನವನ್ನು ಸ್ವಲ್ಪ ಕೈಯಲ್ಲಿ ತಕ್ಕೊಂಡು, ಯಮನ ಹೆಸರಿನಿಂದ ಬಲಿಯನ್ನು ಹಾಕಿ, ಬಳಿಕ ಉತ್ತರಾಪೋಶನವನ್ನು ತೆಗೆದುಕೊಳ್ಳಬೇಕು. ॥ ೧೮೮ ॥ ಆ ಮೇಲೆ ಪಾತ್ರೆಯಲ್ಲಿ ಉಳಿದ ಎಲ್ಲ ಶೇಷಾನ್ನವನ್ನು ಕೈಯಲ್ಲಿ ತಕ್ಕೊಂಡು **ರೌರವ** ಎಂಬ ಮಂತ್ರವನ್ನು ಅಂದು ಎಲೆಯ ಹತ್ತರ ನೆಲದಮೇಲಿಡಬೇಕು. ॥ ೧೮೯ ॥ ಆ ಮೇಲೆ ಎದ್ದು ಕೈ-ಬಾಯಿ-ಕಾಲುಗಳನ್ನು ತೊಳಕೊಳ್ಳಲಿಕ್ಕೆ ಹೋಗಬೇಕು. ಆಗ ಉಟ್ಟ ಧೋತರವನ್ನು ಮೇಲೆ ಸಿಗಿಸಿಕೊಂಡು ಕೆಳಗೆ ಕೂತು ಕೈ-ಬಾಯಿಗಳನ್ನು ತೊಳಕೊಳ್ಳಬೇಕು. ಧೋತರವನ್ನು ಮೇಲೆ ಸಿಗಿಸಿ

ಕೊಳ್ಳದೆ ಹಾಗೇ ಕೈ ತೊಳಕೊಂಡರೆ ಆತ್ಮಘಾತಕಿಯಾಗುವನು. ॥ ೯೦ ॥ ಎರಡೂ ಕೈಗಳನ್ನು ತಿಕ್ಕಿ ತೊಳಕೊಂಡು ಬಾಯಿಯನ್ನು ತೊಳಕೊಳ್ಳುವಾಗ ಮಧ್ಯ ಮಾಂಗುಲಿಯಿಂದ ಒಳಗೆ ಆಡಿಸಿ ಹಲ್ಲು ತಿಕ್ಕಬೇಕು, ತರ್ಜನೀ, ಅಂಗುಷ್ಠಗಳಿಂದ ತಿಕ್ಕಿದರೆ ರೌರವ ನರಕವಾದೀತು. ॥ ೯೧ ॥ ಆ ಮೇಲೆ ಹಲ್ಲಿನಲ್ಲಿ ಏನಾದರೂ ಸಿಕ್ಕಿದ್ದರೆ ಅದನ್ನು ಕಡ್ಡಿಗಳಿಂದ ತಕ್ಕೊಳ್ಳಬೇಕು, ಕೈಯಲ್ಲಿದ್ದ ಪವಿತ್ರವನ್ನು ತೆಗೆದು ನೈಋತ್ಯ ದಿಕ್ಕಿಗೆ ಚಲ್ಲಬೇಕು. ॥ ೯೨ ॥ **ಅಂಗುಷ್ಠಮಾತ್ರ ಪುರುಷ** ಎಂಬ ಮಂತ್ರ ಅಂದು ಮತ್ತೆ ಎರಡೂ ಕೈಗಳನ್ನು ತಿಕ್ಕಿ ತೊಳಕೊಂಡು ಆ ಹಸೀ ಕೈಯಿಂದ ಕಣ್ಣಮೇಲೆ ಆಡಿಸಬೇಕು. ಅಂದರೆ ಚಕ್ಷುರೋಗವಾಗುವದಿಲ್ಲ. ॥ ೯೩ ॥ ಆ ಮಂತ್ರ ಅನ್ನದೆ ಹಸೀ ಕೈ ಆಡಿಸದೆ ಇದ್ದರೆ ನಿಶ್ಚಯವಾಗಿ ಚಕ್ಷುರೋಗಿಯಾಗುವನು. ಆದ್ದರಿಂದ ಉಂಡು ಕೈ ತೊಳಕೊಂಡ ನೀರು ಆರೋಗ್ಯವು. ॥ ೯೪ ॥ ಆ ಮೇಲೆ ದ್ವಿರಾಚಮನ ಮಾಡಿ **ಆಯಂಗೌ** ಎಂಬ ಮಂತ್ರವನ್ನೂ **ದ್ರುಪದಾದಿವೇನ್ಮುಮುಚಾನಃ** ಎಂಬ ಮಂತ್ರವನ್ನೂ ಅಂದು ಕಾಲುಗಳನ್ನು ತೊಳಕೊಳ್ಳಬೇಕು. ॥ ೯೫ ॥ ಆ ಮೇಲೆ **ಪ್ರಾಣಾನಾಂ ಗ್ರಂಥಿರಸಿ** ಎಂಬ ಮಂತ್ರ ಅನ್ನುತ್ತ ಮತ್ತೆ ಭೋಜನ ಮಾಡಿದ ಸ್ಥಳಕ್ಕೆ ಹೋಗಿ ಕೂತು, ದ್ವಿರಾಚಮನ ಮಾಡಿ ನಾಶಿಕವನ್ನು ಸ್ಪರ್ಶಮಾಡಬೇಕು. ॥ ೯೬ ॥ ಆ ಮೇಲೆ ಅಗಸ್ತ್ಯರನ್ನೂ ಕುಂಭಕರ್ಣ, ವಡವಾಗ್ನಿ, ವೃಕೋದರ, ಶನೇಶ್ವರ, ಇಲ್ವಲ, ವಾತಾಪಿಯರನ್ನೂ ಸ್ಮರಿಸಿ ನಾನು ಉಂಡ ಅನ್ನವನ್ನು ಜೀರ್ಣ ಮಾಡಿರಿ ಎಂದು ಹೊಟ್ಟೆಯಮೇಲೆ ಕೈಯಾಡಿಸಬೇಕು. ॥ ೯೭ ॥ ಆಮೇಲೆ ಅಗ್ನಿಗೆ ಕೈ ತೋರಿಸಬೇಕು. ಇನ್ನೊಂದು ಮಾತು ಹೇಳುವದೇನಂದರೆ ಬಂಧುಗಳಿದ್ದವರು ಮಾತ್ರ ವಸ್ತ್ರದಿಂದ ಕೈ ಒರಿಸಿಕೊಳ್ಳಬಾರದು. ॥ ೯೮ ॥ ಆಮೇಲೆ ಶ್ರೀಗುರುಗಳನ್ನೂ ಕುಲದೇವರನ್ನೂ ಸ್ಮರಿಸಬೇಕು. ಎಲೈ ಬ್ರಾಹ್ಮಣನೇ, ಈ ಪ್ರಕಾರ ವಿಧಾನದಿಂದ ಊಟ ಮಾಡಬೇಕೆಂದು ಪರಾಶರರು ಆ ಋಷಿಗಳಿಗೆ ಹೇಳಿದರು ಎಂದು ಗುರುಗಳು ಅಂದರು. ॥ ೯೯ ॥ ಆಗ ಆ ಬ್ರಾಹ್ಮಣನು ಮತ್ತೆ ವಿನಯದಿಂದ ಕೈಮುಗಿದು:— ಸ್ವಾಮೀ, ನನಗೆ ಭೋಜನ ಪ್ರಕಾರವನ್ನು ತಿಳಿಸಿದಿರಿ. ಆದರೆ ಈಗ ಯೋಗ್ಯ ಹಾಗು ನಿಷಿದ್ಧ ಅನ್ನಗಳ್ಯಾವವೆಂಬುದನ್ನು

ದಯಮಾಡಿ ಹೇಳಬೇಕು ಎಂದನು. ॥ ೨೦೦ ॥ ಅವನ ಮಾತು ಕೇಳಿ ಶ್ರೀಗುರುಗಳು ಪ್ರೀತಿಯಿಂದಲೂ ಸಂತೋಷದಿಂದಲೂ ಎಲೈ ಬ್ರಾಹ್ಮಣನೇ ಕೇಳು, ಎಂದು ಹೇಳಹತ್ತಿದರು. ॥ ೨೦೧ ॥ ಸರಸ್ವತೀ ಗಂಗಾಧರನು— ಎಲೈ ಶ್ರೋತೃಗಳೇ ಶ್ರೀ ಗುರುಗಳು ಬ್ರಾಹ್ಮಣರ ಎಲ್ಲ ಆಚಾರಗಳನ್ನು ಹೇಳಿದರೆಂದು ಆ ಬ್ರಾಹ್ಮಣನು ವಿನಂತೀ ಮಾಡಿಕೊಳ್ಳಲಾಗಿ ಶ್ರೀ ಗುರುಗಳು ಮತ್ತೆ ಹೇಳುವರು ಕೇಳಿರಿ. ॥ ೨೦೨ ॥

## ನಿಷಿದ್ಧವಾದ ಅನ್ನಗಳು

ಎಲೈ ಬ್ರಾಹ್ಮಣನೇ, ವೈಶ್ವದೇವ ಇಲ್ಲದ ಅನ್ನ, ಗಣಾನ್ನ, ಉಪ್ಪು ಹೆಚ್ಚಾದ ಅನ್ನ, ಬಹು ಜೀನಸು ಮಿಶ್ರಿತವಾದ ಅನ್ನಗಳನ್ನು ಉಣ್ಣಬಾರದು. ॥ ೨೦೩ ॥ ಮತ್ತು ಬಳ್ಳೊಳ್ಳಿ, ಗಜ್ಜರಿ, ಉಳ್ಳೀಗಡ್ಡಿ, ಮೂಲಂಗಿ, ಬದನೇಕಾಯಿ, ಹಾಲಗುಂಬಳಕಾಯಿ, ಛತ್ರಾಕಾರವಾದ ಯಾವತ್ತು ತೊಪ್ಪಲಪಲ್ಯೆಗಳನ್ನು ಹಾಕಿದ ಅನ್ನವನ್ನು ಉಣ್ಣಬಾರದು. ॥ ೨೦೪ ॥ ಆಡು, ಆಕಳು, ಎಮ್ಮೆಗಳು ಈದ ೧೦ ದಿವಸ ಅವುಗಳ ಹಾಲು ಉಣ್ಣಬಾರದು. ಮಳೆ ಬಂದು ತುಂಬಿದ ಹೊಸ ನೀರನ್ನು ಮೂರು ದಿವಸ ಬಿಡಬೇಕು. ॥ ೨೦೫ ॥ ಪ್ರತಿಪದೆಯ ದಿವಸ, ಕೂಷ್ಮಾಂಡ, ಡೋರಲಿ, ಪಡುವಲ, ಮೂಲಂಗಿ, ಬೆಳುವಲಕಾಯಿ ಹಣ್ಣು, ನೆಲ್ಲೀಕಾಯಿಗಳನ್ನು ತಿನ್ನಬಾರದು. ತಿಂದರೆ ಪಾಪ ಬರುವದು. ॥ ೨೦೬ ॥ ಸ್ವರ್ಗ ಮತ್ತು ಮೋಕ್ಷಗಳನ್ನು ಬಯಸುವವರು ಅಷ್ಟಮಿಯ ದಿನ ಅತ್ತಿಯ ಹಣ್ಣು ತಿನ್ನಬಾರದು. ರವಿವಾರ ಮತ್ತು ಸಪ್ತಮಿ ದಿನಗಳಲ್ಲಿ ರಾತ್ರೀ ನೆಲ್ಲೀಕಾಯಿ ತಿನ್ನಬಾರದು. ॥ ೨೦೭ ॥ ಶುಕ್ರವಾರ ಬೆಳವಲ ಹಣ್ಣು, ಶನಿವಾರ ಶಮೀ ಫಲ ತಿನ್ನಬಾರದು. ತಿಂದರೆ ಲಕ್ಷ್ಮಿಯು ಬಿಟ್ಟು ದೂರ ಹೋಗುವಳು. ಆದಕಾರಣ ಆ ದಿವಸ ತಿನ್ನಬಾರದು. ॥ ೨೦೮ ॥ ರಾತ್ರಿಯಲ್ಲಿ ನೆಲ್ಲೀಕಾಯಿ ತಿಂದರೆ ಪ್ರಜ್ಞಾ ಮತ್ತು ವೀರ್ಯಗಳು ನಾಶವಾಗುವವು. ಆದಕಾರಣ ನೆಲ್ಲೀಕಾಯಿ ರಾತ್ರಿ ತಿನ್ನಬಾರದು. ॥ ೨೦೯ ॥ ಉಗುರು ಕೂದಲು ಬಿದ್ದ ಅನ್ನವನ್ನು ಉಣ್ಣುವವನು ಬೆಕ್ಕೆಂದು ತಿಳಿಯಬೇಕು. ಕಾಗೆ, ಹದ್ದು, ಕೋಳಿಗಳು ಮುಟ್ಟಿದ

ಅನ್ನವನ್ನು ತಿನ್ನಬಾರದು. ॥ ೨೧೦ ॥ ಮತ್ತು ಆಕಳು, ಇಲಿಗಳು ತಿಂದ ಅನ್ನ, ಅದೇಃಕೇಶ ಸ್ಪರ್ಶವಾದ ಅನ್ನ, ಇವು ಎಂಜಲಾನ್ನವಾದ್ದರಿಂದ ಅವು ನಿಷಿದ್ಧವು, ಅವುಗಳನ್ನು ತಿನ್ನಬಾರದು. ॥ ೨೧೧ ॥ ಒಂದು ಕೈಲೆ ಬಡಿಸಿದ ಅನ್ನ, ಹಳಸಿದ ತಂಪಾದ ತಂಗಳನ್ನಗಳು ನಿಷಿದ್ಧವಾದವುಗಳು. ಕಾರಣ ಅವುಗಳನ್ನು ತಿನ್ನಬಾರದು ಎಂದು ಆಚಾರದಲ್ಲಿ ಹೇಳಿದೆ. ॥ ೨೧೨ ॥ ಮತ್ತು ತುಪ್ಪ ಹಾಗು ಎಣ್ಣೆ ಕೂಡಿದ ತಂಗಳನ್ನವು ನಿಷಿದ್ಧವು. ಆದರೆ ತುಪ್ಪ ಎಣ್ಣೆಗಳಲ್ಲಿ ಕರಿದ ಪದಾರ್ಥಗಳು ಮಾತ್ರ ತಂಗಳವಲ್ಲ ನಿಷಿದ್ಧವಲ್ಲ. ॥ ೨೧೩ ॥ ಬ್ರಾಹ್ಮಣನು ಮಾರುವ ಹಾಲು, ತುಪ್ಪಗಳನ್ನು ಕೊಂಡವರಿಗೆ ಮಹಾದೋಷ ಬರುವದು. ಪ್ರತ್ಯಕ್ಷ ಬೆಂಕಿಯಲ್ಲಿ ಸುಟ್ಟದ್ದನ್ನು ತಿನ್ನ ಬಾರದು. ॥ ೨೧೪ ॥ ಉದ್ದಿನ ಒಡೆಗಳು, ಮತ್ತು ಅರಳ ಹಿಟ್ಟು ಇವು ಎಂದೂ ತಂಗಳವಲ್ಲ. ॥ ೨೧೫ ॥ ಬೇಯಿಸಿದ ಗಡ್ಡೆ-ಗೆಣಸುಗಳು, ಜವೆಗೋದಿಯ ಪಾಯಸ, ಬೆಲ್ಲ ಕೂಡಿದ ಅನ್ನಗಳು ತಂಗಳಲ್ಲ. ॥ ೨೧೬ ॥ ಇವು ಹೊಲಸು ಸ್ಥಳದಲ್ಲಿದ್ದರೆ ಮಾತ್ರ ದೋಷವು. ಶುದ್ಧ ಸ್ಥಾನದಲ್ಲಿದ್ದರೆ ದೋಷವಿಲ್ಲ. ॥ ೨೧೭ ॥ ಅವುಗಳನ್ನು ತಿನ್ನಲಿಕ್ಕೆ ಬರುತ್ತದೆ. ಎಳ್ಳು ಕೂಡಿದ ಭಕ್ಷ್ಯವನ್ನು ರಾತ್ರಿ ತಿನ್ನಬಾರದು. ತಿಂದರೆ ಮಹಾದೋಷ ಬರುವದು, ಎಂದು ಹೇಳಿದರು. ॥ ೨೧೮ ॥

## ತಾಂಬೂಲ ವಿಧಿಯು

ಈ ಪ್ರಕಾರ ಮಧ್ಯಾಹ್ನ ಊಟವಾದನಂತರ ಉತ್ತಮ ರೀತಿಯಿಂದ ತಾಂಬೂಲವನ್ನು ಹಾಕಿಕೊಳ್ಳ ಬೇಕು. ಹ್ಯಾಗಂದರೆ ಅಡಿಕೆಯಪುಡಿ, ವಿಳೀದ ಎಲೆ, ಸುಣ್ಣಗಳನ್ನು ತೀವ್ರವಾಗಿ ತಾವು ತಗೋಬೇಕು. ಬ್ರಾಹ್ಮಣರು ಮೊದಲಾದವರಿಗೆ ಕೊಡಬೇಕು. ॥ ೨೧೯ ॥ ಒಂದು ಅಡಿಕೆ ಕೊಡುವದರಿಂದ ಯೋಗ್ಯ ಸುಖವಾಗುವದು. ಎರಡು ಕೊಡುವದರಿಂದ ನಿಶ್ಚಯವಾಗಿ ಆರೋಗ್ಯವಾಗುವದು. ಮೂರು ಕೊಡುವದರಿಂದ ಮಹಾ ಭಾಗ್ಯ ಬರುವದು, ನಾಲ್ಕು ಕೊಡುವದರಿಂದ ದುಃಖವಾಗುವದು. ॥ ೨೨೦ ॥ ಐದು ಅಡಿಕೆ ಕೊಡುವದರಿಂದ ಆಯುಸ್ಸೂ

ಮತ್ತು ಪ್ರಜ್ಞೆಯೂ ಬಹಳ ಬೆಳೆಯುವವು. ಆರು ಅಡಿಕೆ ಕೊಟ್ಟರೆ ಮರಣ ಬರುವದೆಂದು ಹೇಳುತ್ತಾರೆ, ಕಾರಣ ಆರು ಅಡಿಕೆ ಕೊಡಬಾರದು. ‖ ೨೧ ‖ ಎಲೆಯ ತುದಿಯನ್ನೂ ಬುಡವನ್ನೂ ತೆಗೆಯಬೇಕು. ತೆಗೆಯದೆ ಒಂದು ವೇಳೆ ಹಾಗೇ ತಿಂದರೆ ಜೇನೆ ಬರುವ ಸಂಭವವದೆ. ತುದಿ ಎಲಿ ತಿಂದರೆ ಮಹಾ ಪಾಪ ಬರುವದು. (ಸುಣ್ಣದ) ಜೀರ್ಣ ಕೊಳೆತ ಎಲೆ ತಿಂದರೆ ಆಯುಷ್ಯ ಕ್ಷೀಣವಾಗುವದು. ಎಲೆಯ ಹಿಂದಿನ ನಾರು ತೆಗೆಯದೆ ಎಲೆ ತಿಂದರೆ ಬುದ್ಧಿ ನಾಶವಾಗುವದು. ಎರಡು ಎಲೆ ತಿಂದರೆ ಮಹಾ ದೋಷವು ಒಂದು, ವಿಶೇಷವಾಗಿ ಐಶ್ವರ್ಯ ನಾಶವಾಗುವದು ಎಂದು ಋಷಿಗಳ ವಚನವದೆ ‖ ೨೨-೨೩ ‖ ಎಲೆ ಇಲ್ಲದೆ ಕೇವಲ ಅಡಿಕೆಯನ್ನೇ ಬಾಯೊಳಗೆ ಹಾಕಿಕೊಂಡರೆ ಅಸಖಿಯಾಗಿ ಏಳು ಜನ್ಮಗಳಲ್ಲಿ ದರಿದ್ರರಾಗಿ ದುಃಖವನ್ನು ಅನುಭವಿಸುತ್ತ, ಅಂತ್ಯ ಕಾಲದಲ್ಲಿ ಅಜ್ಞಾನಿಯಾಗುವನು. ‖ ೨೪ ‖ ಯತೀಶ್ವರರು, ಬ್ರಹ್ಮಚಾರಿಗಳು, ರಜಸ್ವಲಾ ಸ್ತ್ರೀಯರು, ವಿಧವೆಯರು ತಾಂಬೂಲವನ್ನು ತಿನ್ನಬಾರದು. ಒಂದುವೇಳೆ ತಿಂದರೆ, ಆ ಎಲಿ-ಅಡಿಕೆಗಳು ಗೋಮಾಂಸದಂತೆಯೂ, ಅದರ ರಸವು ಸುರಾಪಾನದ ಸಮವೂ ಆಗುವವು. ‖ ೨೫ ‖ ಈ ಪ್ರಕಾರ ಮಧ್ಯಾಹ್ನದ ಕೆಲಸ ಆದನಂತರ ಸಂಜೆಯ ಸಂಧ್ಯಾವಂದನೆಯ ಕಾಲ ಬರುವತನಕ ಏನಾದರೂ ಗೃಹಕೃತ್ಯದ ಕಡೆಗೆ ನೋಡಬೇಕು ಆ ಮೇಲೆ ಸಾಯಂಕಾಲವಾಗುತ್ತ ಬಂದಮೇಲೆ ಸಂಧ್ಯಾವಂದನೆಯನ್ನು ಪ್ರಾರಂಭ ಮಾಡಿ ಸೂರ್ಯನು ಅರ್ಧ ಮುಳುಗಿರುವಾಗ ಅರ್ಘ್ಯ ಕೊಡಬೇಕು.' ‖ ೨೬ ‖ ಹ್ಯಾಗಂದರೆ ಕೂತುಕೊಂಡು ಪ್ರಾತಃಕಾಲದಲ್ಲಿ ಹೇಳಿದ ಮಂತ್ರದಿಂದ ಮೂರು ಅರ್ಘ್ಯ ಕೊಡಬೇಕು. ಆ ಕಾಲ ಮೀರಿದರೆ ನಾಲ್ಕನೇ ಅರ್ಘ್ಯ ಕೊಡಬೇಕು. ಬಳಿಕ ಪ್ರಾತಃಕಾಲ ಸಂಧ್ಯೆಯಲ್ಲಿ ಹೇಳಿದಂತೆ ಗಾಯತ್ರೀ ಮಂತ್ರ ಜಪಿಸಿದನಂತರ ಇಮಂಮೇವರುಣ ಎಂಬ ಮಂತ್ರವನ್ನು ಅಂದು ‖ ೨೭ ‖ ಗೋತ್ರ ಪ್ರವರಗಳನ್ನು ಉಚ್ಚರಿಸಿ ಸಂಧ್ಯೆಯನ್ನು ಮುಗಿಸಿ ಆ ಮೇಲೆ ಔಪಾಸನ ಮಾಡಬೇಕು. ಆ ಮೇಲೆ ಸಾಯಂಕಾಲದ ಭೋಜನ ಮಾಡಬೇಕು. ಮುಖ್ಯವಾಗಿ ರಾತ್ರಿ ಹಾಲೂ ಅನ್ನವನ್ನು ಉಣ್ಣಬೇಕು. ಆಗ ಊಟಕ್ಕೆ ಕೂಡ್ರುವ ರೀತಿಯನ್ನು ಹೇಳುವೆನು ಕೇಳು. ‖ ೨೮ ‖ ರಾತ್ರಿಯಲ್ಲಿ ಊಟಕ್ಕೆ

ಕೊಡ್ರುವಾಗ **ಋತಂತ್ವಾಸತ್ಯಂ** ಎಂಬ ಮಂತ್ರವನ್ನು ಅಂದು ಪರಿಸಿಂಚನ ಮಾಡಬೇಕು. ಆ ಮೇಲೆ ಪ್ರಾತಃಕಾಲದ ಊಟದ ವಿಧಿಯಂತೆ ಈಗಲೂ ಊಟ ಮಾಡಬೇಕು. || ೨೯ || ಈ ಪ್ರಕಾರ ರಾತ್ರಿ ಊಟವಾದನಂತರ ಒಂದು ಪ್ರಹರ ವೇದಾಭ್ಯಾಸ ಮಾಡಿ ಆ ಮೇಲೆ ಮಲಗಲಿಕ್ಕೆ ಹಾಸಿಗೆಯ ಮೇಲೆ ಹೋಗಬೇಕು. ಎಲೈ ಬ್ರಾಹ್ಮಣಾ ಈ ಪ್ರಕಾರ ವಿಧಿಯಿಂದ ಆಚರಣೆ ಮಾಡಬೇಕು. || ೩೦ ||

## ಮಲಗುವ ವಿಧಾನ

ಎಲೈ ವಿದ್ವಾನ್ ಬ್ರಾಹ್ಮಣರೇ ಪರಾಶರರ ವಚನದಂತೆ ಮಲಗುವ ವಿಧಾನವನ್ನು ಹೇಳುವೆನು ಕೇಳಿರಿ. || ೩೧ || ಮಂಚವು ನಿರ್ಮಲವಾಗಿರಬೇಕು. ಆ ಮಂಚವು ಮೂರು ಕಾಲಿನದು, ಭಿನ್ನವಾದದ್ದು, ದೂಷಣವಾದದ್ದು ಆಗಿರಬಾರದು. ಮತ್ತು ಅದು ಅತ್ತಿ, ಅರಳಿ, ಬಸರಿ ಕಟ್ಟಿಗೆಗಳಿಂದ ಮಾಡಿದ್ದಾಗಿರಬಾರದು. || ೩೨ || ನೀರಲ ಕಟ್ಟಿಗೆಯಿಂದ ಮಾಡಿದ್ದು ನಿಷಿದ್ಧವು. ಸತ್ತ ಆನೆಯ ದಂತದ್ದು ಬಿಡಬೇಕು. ಒಡಕ ಕಟ್ಟಿಗೆಯಿಂದ ಮಾಡಿದ್ದರೆ ಅದನ್ನು ಉಪಯೋಗಿಸಬಾರದು. ಆದಕಾರಣ ಮಂಚವು ಚಲೋದೂ ಮತ್ತು ಗಟ್ಟಿಮುಟ್ಟಿಯಾದದ್ದೂ ಆಗಿರಬೇಕು. || ೩೩ ||

### ಮಂಚ ಮಾಡಿಸುವ ತಿಥಿ-ವಾರ-ನಕ್ಷತ್ರಗಳು

ಮಂಚವನ್ನು ಒಳ್ಳೇ ಮುಹೂರ್ತದಲ್ಲಿ ಮಾಡಿಸಬೇಕು ಅಥವಾ ಖರೀದಿ ಮಾಡಬೇಕು ಧನಿಷ್ಠಾ, ಭರಣಿ, ಮೃಗಶಿರಾ ನಕ್ಷತ್ರಗಳು ದೂಷಣವಾದವುಗಳು. ಶುಭಾಶುಭ ವಾರಗಳನ್ನು ಹೇಳುವೆನು ಕೇಳಿರಿ. || ೩೪ || ಭಾನುವಾರ ಲಾಭದಾಯಕವು. ಸೋಮವಾರ ಅತಿ ಸುಖವಾಗುವದು. ಮಂಗಳವಾರ ದುಃಖವು. ಬುಧವಾರ ಮಹಾಪೀಡಾ ಆಗುವದು. || ೩೫ || ಗುರುವಾರ ಹೆಣದರೆ ಆರು ಮಕ್ಕಳಾಗುವರು. ಶುಕ್ರವಾರ ವಿಶೇಷ

ಫಲವಾಗುವದು. ಶನಿವಾರ ಮರಣ ಬಂದೀತು. || ೨೩೬ || ತನ್ನ ಮನೆಯಲ್ಲಿ ಪೂರ್ವ ದಿಕ್ಕಿಗೆ ತಲೆ ಮಾಡಿ ಮಲಗಬೇಕು. ಮಾವನ ಮನೆಯಲ್ಲಿ ದಕ್ಷಿಣ ದಿಕ್ಕಿಗೆ ತಲೆ ಮಾಡಿ ಮಲಗಬೇಕು. ಪ್ರಯಾಣ ಕಾಲದಲ್ಲಿ ಪಶ್ಚಿಮಕ್ಕೆ ತಲೆ ಮಾಡಿ ಮಲಗಬೇಕು. || ೨೩೭ || ಉತ್ತರ ದಿಕ್ಕು ಯಾವಾಗಲೂ ನಿಷಿದ್ಧವು. ಈ ಪ್ರಕಾರ ದಿಕ್ಕುಗಳ ಫಲವನ್ನೂ ಹೇಳಿರುತ್ತದೆ. ಕಾರಣ ಋಷಿಗಳ ಮತದಂತೆ ಶುಭಾಚಾರಗಳನ್ನು ಬ್ರಾಹ್ಮಣರು ಆಚರಣೆ ಮಾಡಬೇಕು. || ೨೩೮ || ಮಲಗುವಾಗ ತಲೆದಿಂಬಿನ ಹತ್ತರ ನೀರು ತುಂಬಿದ ಕುಂಭವನ್ನೂ ಅನೇಕ ಮಂಗಲದ್ರವ್ಯವನ್ನೂ ಇಟ್ಟು, ರಾತ್ರಿ ಸೂಕ್ತವನ್ನು ಹೇಳಿ ವಿಷ್ಣುಸ್ಮರಣ ಮಾಡಬೇಕು. || ೨೩೯ || ಆಮೇಲೆ ಅಗಸ್ತ್ಯರನ್ನು ಸ್ಮರಿಸಬೇಕು. ನಂತರ ಮಾಧವ-ಮುಕುಂದ ಎಂದೆನ್ನುತ್ತ ಆಸ್ತೀಕ ಮತ್ತು ಕಪಿಲ ಋಷಿಗಳನ್ನೂ ಸರ್ಪಗಳನ್ನೂ ಸ್ತುತಿಸಬೇಕು. || ೨೪೦ ||

## ಮಲಗಲಿಕ್ಕೆ ನಿಷಿದ್ಧ ಸ್ಥಳಗಳು

ಎಲೈ ಋಷಿಗಳೇ ಮಲಗಲಿಕ್ಕೆ ನಿಷಿದ್ಧವಾದಂಥ ಸ್ಥಾನಗಳನ್ನು ಹೇಳುವೆನು ಸರ್ವರೂ ಕೇಳಿರಿ. ಜೀರ್ಣವಾದ ದೇವಾಲಯದಲ್ಲಿ, ಸ್ಮಶಾನದಲ್ಲಿ, ಮರದ ಬುಡದಲ್ಲಿ || ೨೪೧ || ನಾಲ್ಕು ಬೀದಿಗಳ ನಡುವೆ, ಈಶ್ವರ ದೇವಾಲಯದಲ್ಲಿ, ತಾಯಿ–ತಂದೆಗಳು ಮಲಗುವ ಸ್ಥಳದಲ್ಲಿ, ಉಸುಕಿನ ಹತ್ತರ, ಕೆರೆಯ ಕೆಳಗೆ, ನದಿಯ ದಂಡೆ, ಮತ್ತು ಘೋರವಾದ ಸ್ಥಳಗಳಲ್ಲಿ ಮಲಗಬಾರದು || ೨೪೨–೨೪೩ || ಮತ್ತು ಧಾನ್ಯ ರಾಶಿಯಮೇಲೆ, ಮುರುಕ ಮನೆಗಳಲ್ಲಿ ಮಲಗಬಾರದು. ಹಿರಿಯರು ಕೆಳಗೆ ಮಲಗಿದಾಗ ಕಿರಿಯರು ಮಂಚದ ಮೇಲೆ ಮಲಗಬಾರದು. || ೨೪೪ || ಒದ್ದೆಬಟ್ಟೆ ಉಟ್ಟುಕೊಂಡು, ಬತ್ತಲೆಯಾಗಿ, ತಲೆಯನ್ನು ಕಟ್ಟಿಕೊಂಡು, ದೀಪ ಇದ್ದಲ್ಲಿ, ಮಲಗಬಾರದು. || ೨೪೫ || ಪೂರ್ವ ಹಾಗು ಅಪರ ರಾತ್ರಿಯಲ್ಲಿ ಮತ್ತು ರಜಸ್ವಲೆಯಾದ ೪ನೇ ದಿವಸ ಸ್ತ್ರೀಯೊಡನೆ ಮಲಗಬಾರದು. || ೨೪೬ || ಆಗ ಮಾಲಾಕಾರ ಜನಿವಾರ ಇರಬೇಕು. ರಾತ್ರಿ ಸ್ತ್ರೀಯೊಡನೆ

ಮಲಗಿದಾಗ ಆಕೆಯ ಯೋನಿಯನ್ನು ನೋಡಬಾರದು. ನೋಡಿದರೆ ಆಯುಷ್ಯವು ಕ್ಷೀಣವಾಗುವದು. ಕಾರಣ ದಂಪತಿಗಳು ಮಲಗುವ ಸ್ಥಳದಲ್ಲಿ ದೀಪವಿರಬಾರದು. ॥ ೨೪೭ ॥ ನೀಲಿಯ ವಸ್ತ್ರವನ್ನುಟ್ಟ ಸ್ತ್ರೀಸಂಗ ಮಾಡಿದರೆ ಆಗ ಹುಟ್ಟುವ ಮಗನು ಚಾಂಡಾಲನಾಗುವನು. ಕಾರಣ ಆಗ ಸ್ತ್ರೀಯರು ಶುಭ್ರವನ್ನುಡುವದು ವಿಶೇಷವಾಗಿರುತ್ತದೆ. ॥ ೨೪೮ ॥ ರಜಸ್ವಲೆಯಾಗದಂಥ ಸ್ತ್ರೀಸಂಗ ಮಾಡಿದರೆ ಮಹಾದೋಷ ಬರುವದು. ಮತ್ತೊಂದು ಪ್ರಕಾರ ಇರುವದು. ॥ ೨೪೯ ॥ ಪರಾಶರರು-- ಎಲೈ ಋಷಿಗಳೇ, ಕೇಳಿರಿ. ೧೦ ವರುಷದ ಕನ್ಯೆಯು ರಜಸ್ವಲೆ ಎನಿಸುವಳು. ॥ ೨೫೦ ॥ ಸ್ತ್ರೀಯಳಿಗೆ ಋತುಕಾಲವಿದ್ದಾಗ ಅವಳ ಪತಿಯು ಬೇರೂರಿಗೆ ಹೋದರೆ ಅವನಿಗೆ ಭ್ರೂಣಹತ್ಯಾ ದೋಷವು ಬರುವದು ॥ ೨೫೧ ॥ ಸ್ತ್ರೀಯು ಮುದಿಕೆ, ಬಂಜೆ, ಹಡೆದ ಮಕ್ಕಳು ಸಾಯುವಂಥವಳು, ಬಹಳ ಹೆಣ್ಣು ಹಡೆಯುವವಳು ಆಗಿದ್ದರೆ ಮಾತ್ರ ಆಕೆಗೆ ಋತುಕಾಲವಿರುವದಿಲ್ಲ. ಆಗ ಅವಳ ಪತಿಯು ಬೇರೆ ಊರಿಗೆ ಹೋದರೆ ದೋಷವಿಲ್ಲ ॥ ೨೫೨ ॥ ಋತುವಾದ ೪ನೇ ದಿವಸ ಗರ್ಭಿಣಿಯಾದ ಸ್ತ್ರೀಯ ಪುತ್ರನು ಅಲ್ಪಾಯುಷಿಯಾಗುವನು ೫ನೇ ದಿವಸ ಗರ್ಭಿಣಿಯಾದ ಸ್ತ್ರೀಗೆ ಕನ್ಯಾ ಹುಟ್ಟುವದು ೬ನೇ ದಿವಸ ಗರ್ಭಿಣಿಯಾದ ಸ್ತ್ರೀಗೆ ಪುತ್ರನು ಹುಟ್ಟುವನು ॥ ೨೫೩ ॥ ಹೀಗೆ ವಿಷಮ ದಿವಸಗಳಲ್ಲಿ ಗರ್ಭಿಣಿಯಾದ ಸ್ತ್ರೀಯು ಹೆಣ್ಣು ಹಡೆಯುವಳು. ಸಮ ದಿವಸಗಳಲ್ಲಿ ಗರ್ಭಿಣಿಯಾದ ಸ್ತ್ರೀಯು ಗಂಡು ಹಡೆಯುವಳು. ಸ್ತ್ರೀಯು ಮೈ ತೊಳಕೊಂಡ ಅಂದರೆ ೫ನೇ ದಿವಸದಿಂದ ಮುಂದೆ ಹತ್ತು ದಿವಸ ಋತುಕಾಲ ಇರುವದು. ಗರ್ಭದಾನವಾಗುವಾಗ ಚಂದ್ರಬಲವಿರಬೇಕು. ಇದನ್ನು ವಿಚಾರ ಮಾಡಿ ಸ್ತ್ರೀ ಸಂಗ ಮಾಡಬೇಕು. ॥ ೨೫೪ ॥ ಮೂಲ, ಮಘಾ, ರೇವತಿ ನಕ್ಷತ್ರಗಳಿದ್ದ ದಿವಸ ಸ್ತ್ರೀಸಂಗ ಮಾಡಬಾರದು. ಸಂಭೋಗ ಸಮಯದಲ್ಲಿ ಸತಿ-ಪತಿಗಳು ಸಂತೋಷದಿಂದಿರಬೇಕು. ಅವರಲ್ಲಿ ಯಾರೂ ಸಿಟ್ಟಾದವರಿರಬಾರದು. ॥ ೨೫೫ ॥ ಗರ್ಭಸ್ಥಾಪನಾ ಆಗುವ ಸಮಯದಲ್ಲಿ ಸ್ತ್ರೀ-ಪುರುಷರ ಮನಸ್ಸು ಸತ್ವ-ರಜ-ತಮ-ಗುಣಗಳಲ್ಲಿ ಯಾವ ಗುಣದಿಂದ ಕೂಡಿರುತ್ತದೋ ಆ ಗುಣದಂತೆ ಪಿಂಡವು ಹುಟ್ಟುವದು. ॥ ೨೫೬ ॥ ಎಲೈ ಬ್ರಾಹ್ಮಣಾ,

ಪರಾಶರ ಮಹಾಮುನಿಗಳು ಆ ಸಕಲ ಋುಷಿಗಳಿಗೆ ಈ ಪ್ರಕಾರ ಬ್ರಾಹ್ಮಣರ ಸಕಲ ಆಚಾರಗಳನ್ನೆಲ್ಲ ಹೇಳಿದರು. ಅವರು ಅದರಂತೆ ಆಚರಿಸುತ್ತಾರೆ. ‖ ೨೫೭ ‖ ಈ ಪ್ರಕಾರವಾದ ಆಚಾರಗಳನ್ನು ವಿಧಿಪ್ರಕಾರ ಯಾರು ಆಚರಿಸುತ್ತಾರೋ ಅವರ ಮನೆಯಲ್ಲಿ ಬಡತನವು ಹ್ಯಾಗೆ ಬರಬೇಕು ? ಎಂದೂ ಬರುವದಿಲ್ಲ. ‖ ೨೫೮ ‖ ಅವನು ದೇವರಿಗೆ ವಂದ್ಯನಾಗುವನು. ಅವನ ಮನೆಗೆ ಕಾಮಧೇನುವೇ ಬರುವದು. ಅವನ ಮನೆಯಲ್ಲಿ ಅಖಂಡವಾಗಿ ಲಕ್ಷ್ಮಿಯು ವಾಸಿಸುವಳು. ಅವನು ಪುತ್ರ-ಪೌತ್ರರಿಂದ ಕೂಡಿಕೊಂಡು ಆನಂದದಿಂದಿರುವನು. ‖ ೨೫೯ ‖ ಅವನು ಶತಾಯುಷಿಯಾಗುವನು ಅವನಿಗೆ ಯಾವ ದೋಷವೂ ಹತ್ತುವದಿಲ್ಲ. ಅವನು ಕಲಿಕಾಲಕ್ಕೆ ಎಂದೂ ಅಂಜುವದಿಲ್ಲ. ಅವನು ಬ್ರಹ್ಮಜ್ಞಾನಿಯಾಗುವನು ‖ ೨೬೦ ‖ ಅವನಿಗೆ ಕಾಲವೃತ್ಯ್ಯವೇ ತಪ್ಪುವದು. ಅಂದಮೇಲೆ ಅಪಮೃತ್ಯುವಂತೂ ಎಂದೂ ಬರಲಿಕ್ಕೆ ಶಕ್ಯವಿಲ್ಲ ಆದಕಾರಣ ಈ ಪ್ರಕಾರವಾದ ಆಚಾರಗಳನ್ನು ನಿತ್ಯ ವಿಧಿಪ್ರಕಾರ ಆಚರಿಸುತ್ತಿರಬೇಕೆಂದು ಶ್ರೀಗುರುಗಳು ಹೇಳಿದರು ‖ ೨೬೧ ‖ ಈ ಪ್ರಕಾರವಾಗಿ ಹೇಳಿದ ಗುರುವಚನವನ್ನು ಕೇಳಿ ಆ ಬ್ರಾಹ್ಮಣನು ಶ್ರೀ ಗುರುಚರಣಕ್ಕೆ ನಮಸ್ಕಾರ ಮಾಡಿ— ಕೃಪಾಸಾಗರ ಗುರುಮೂರ್ತಿಯೇ ತಮ್ಮ ಉಪದೇಶದಿಂದ ನಾನು ಉದ್ಧಾರ ಆದೆನು ‖ ೨೬೨ ‖ ಸ್ವಾಮೀ, ಹೃಷೀಕೇಶನಾದ ನೀನು ಭಕ್ತ ಜನರನ್ನು ಉದ್ಧರಿಸುವದಕ್ಕಾಗಿ ಅವತರಿಸಿರುತ್ತೀರಿ. ನನ್ನ ಅಜ್ಞಾನಾಂಧಕಾರವನ್ನು ಕಳೆದು ನನಗೆ ಜ್ಞಾನ ಪ್ರಕಾಶವನ್ನುಂಟು ಮಾಡಿದಿರಿ ‖ ೨೬೩ ‖ ಈ ಪ್ರಕಾರ ಆ ಬ್ರಾಹ್ಮಣನು ವಿನಂತೀ ಮಾಡಿಕೊಂಡು ಮತ್ತೆ ಗುರುಚರಣವನ್ನು ಹಿಡಿದು ನಮಸ್ಕರಿಸಿದನು. ಆಗ ಶ್ರೀ ಗುರುಗಳು ಸಂತೋಷಬಟ್ಟು ಪ್ರಸನ್ನರಾಗಿ ‖ ೨೬೪ ‖ —ಎಲೈ ಬ್ರಾಹ್ಮಣನೇ, ನಿನಗೆ ಹರ್ಷದಿಂದ ಎಲ್ಲ ಆಚಾರ ಧರ್ಮಗಳನ್ನು ಹೇಳಿದೆನು. ನೀನು ಆ ಆಚಾರಗಳನ್ನು ಮಾಡುತ್ತ ಸುಖವಾಗಿ ಇರು. ಈಗ ನೀನು ಮತ್ತೆ ಭಿಕ್ಷೆಗೆ ಹೋಗಬೇಡ ‖ ೨೬೫ ‖ ಅದರಿಂದ ನಿನ್ನ ಮನಸಿನ ಅಪೇಕ್ಷೆಗಳೆಲ್ಲ ಪೂರ್ಣವಾಗುವವು. ನಿನಗೆ ಗಂಡು-ಹೆಣ್ಣುಮಕ್ಕಳಾಗುವರು. ಅವರನ್ನು ನೋಡುತ್ತ ನೀನು ಆನಂದ ಹೊಂದುವಿ. ಈ ವಿಷಯವಾಗಿ ಮನಸಿನಲ್ಲಿ ಏನೂ ಸಂಶಯ ಹಿಡಿಯಬೇಡ, ಎಂದರು. ‖ ೨೬೬ ‖

ಈ ಪ್ರಕಾರ ಬ್ರಾಹ್ಮಣನು ಶ್ರೀಗುರುಗಳಿಂದ ವರವನ್ನು ಪಡಕೊಂಡು ಸಂತೋಷದಿಂದ ತನ್ನ ಮನೆಗೆ ಹೋಗಿ ಅದೇ ಪ್ರಕಾರ ಆಚರಿಸಹತ್ತಿ ಸಕಲ ಪುರುಷಾರ್ಥಗಳನ್ನು ಪಡೆದನು. ॥ ೨೬೭ ॥ ಎಂದು ಸಿದ್ಧರು ನಾಮಧಾರಕನಿಗೆ ಹೇಳಿ ಮತ್ತೆ— ಎಲೈ ನಾಮಧಾರಕಾ, ಶ್ರೀ ಗುರುಚರಿತ್ರೆಯು ಈ ಪ್ರಕಾರವಾಗಿರುವದು. ಇದನ್ನು ಕೇಳಿದರೆ ಎಲ್ಲರಿಗೂ ಜ್ಞಾನವಾಗುವದು. ಮೂಢನಿಗೂ ಸಹ ಬ್ರಹ್ಮಜ್ಞಾನವಾಗುವದು. ॥ ೨೬೮ ॥ ಸುರಸವಾದ ಈ ಕಥೆಯು ಅಜ್ಞಾನವೆಂಬ ಕತ್ತಲೆಗೆ ಪ್ರಕಾಶವಾದ ಜ್ಯೋತಿಯಾಗಿರುವದು. ಇದನ್ನು ಕೇಳುವದರಿಂದ ಮನಸ್ಸಿನ ಇಚ್ಛೆಗಳು ಪೂರ್ಣವಾಗುವವು. ॥ ೨೬೯ ॥ ಎಂದು ಹೇಳಿದರೆಂದು ಸರಸ್ವತೀ ಗಂಗಾಧರನು— ಗುರುಚರಿತ್ರೆಯು ಕಲ್ಪತರುವಾಗಿರುವದು. ಕೇಳಿದರೆ ಮನಸಿಗೆ ಬಹಳ ಸಂತೋಷವಾಗುವದು. ಸಕಲಾಭೀಷ್ಟಗಳು ಸಾಧಿಸುವವು ಎಂದನು. ॥ ೨೭೦ ॥

ಇತಿ ಶ್ರೀಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ ಆಹ್ನಿಕ ಕರ್ಮನಿರೂಪಣಂ ನಾಮ ಸಪ್ತತ್ರಿಂಶೋಽಧ್ಯಾಯಃ ॥ ೩೭ ॥ ಶ್ರೀ ಗುರುದೇವದತ್ತ ॥

— ೩೭ನೇ ಅಧ್ಯಾಯ ಸಮಾಪ್ತ —

---

# ೩೮ನೇಯ ಅಧ್ಯಾಯ

## ಭಾಸ್ಕರ ಬ್ರಾಹ್ಮಣನು ಮೂರು ಮಂದಿಗೆ ಮಾಡಿದ ಅಡಿಗೆಯಲ್ಲಿ ಶ್ರೀ ಗುರುಗಳು ಅಕ್ಷಯ ಮಾಡಿ ನಾಲ್ಕು ಸಾವಿರ ಬ್ರಾಹ್ಮಣರನ್ನೂ ಊರೊಳಗಿನ ಎಲ್ಲ ಜಾತಿಯ ಜನರನ್ನೂ ಜಲಚರ ಪ್ರಾಣಿಗಳನ್ನೂ ಉಣಿಸಿದ್ದು

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋ ನಮಃ । ಆ ಮೇಲೆ ನಾಮಧಾರಕನು ಸಿದ್ಧರನ್ನು ಕುರಿತು ವಿನಯದಿಂದ— ಸ್ವಾಮೀ, ಶ್ರೀ ಗುರುಗಳ ಪ್ರತಾಪ ವರ್ಣನೆಯೆಂಬ ಅಮೃತ ತುಂಬಿದ ಕೊಡವಿದ್ದು, ಆ ಅಮೃತವನ್ನು ಕುಡಿಯಬೇಕೆಂದು ನನ್ನ ಇಚ್ಛೆಯಾಗಿದೆ. ಆದಕಾರಣ ಮುಂದೆ ಗುರುಚರಿತ್ರೆಯು ಯಾವ ಪ್ರಕಾರವಾಗಿ ನಡೆಯಿತೆಂಬದನ್ನು ಕೃಪೆಯಿಂದ ನನಗೆ ಹೇಳಿ, ತೀವ್ರವಾಗಿ ನನ್ನನ್ನು ಸಮಾಧಾನ ಪಡಿಸಬೇಕು ಎಂದು ಅವರ ಚರಣಕ್ಕೆ ನಮಿಸಿದನು. ॥ ೧-೨ ॥ ಆಗ ಸಿದ್ಧರು— ಎಲೈ ಶಿಷ್ಯನೇ ಕೇಳು, ನೀನು ಕೇಳಿ ಕೇಳಿದಂತೆ ನನಗೆ ಗುರುಚರಿತ್ರೆಯು ನೆನವಾಗಿ ಸಂತೋಷವಾಗುವದಲ್ಲದೆ. ॥ ೩ ॥ ನಿನ್ನ ದೆಶೆಯಿಂದ ಸುರಸವಾದ ಮುಂದಿನ ಗುರುಚರಿತ್ರೆಯು ನನ್ನ ನೆನಪಿಗೆ ಬಂದು ನನಗೂ ಲಾಭವಾಯಿತು. ಮುಂದೆ ಒಂದು ವಿಚಿತ್ರ ಸಂಗತಿಯಾಯಿತು ಹೇಳುವೆನು ಕೇಳು. ॥ ೪ ॥

ಶ್ರೀ ಗುರುಗಳು ತಮಗೆ ಯಾವದೇ ಶಿಷ್ಯರಾಗಲಿ ಭಕ್ತರಾಗಲಿ ಭಕ್ತಿಯಿಂದ ದ್ರವ್ಯವನ್ನು ತಂದುಕೊಟ್ಟರೆ, ಅವರು ಆ ದುಡ್ಡನ್ನು ತಾವು ತೆಗೆದುಕೊಳ್ಳದೆ ಬ್ರಾಹ್ಮಣರ ಸಮಾರಾಧನೆ ಮಾಡಿರಿ ಎಂದು ಹೇಳುತ್ತಿದ್ದರು. ಆದರಂತೆ ಅವರು ಮಾಡುತ್ತಿದ್ದರು ಎಂದು ನಿನಗೆ ಹಿಂದೆ ಹೇಳಿದ್ದೇನೆ. ॥ ೫ ॥ ಅದರಂತೆ ಅನೇಕ ಭಕ್ತಜನರು ಬಂದು ದಿನಾಲು ಸಮಾರಾಧನೆ ಮಾಡುತ್ತಿದ್ದರು. ಆ ಮಠದಲ್ಲಿ ಒಂದು ದಿವಸವಾದರೂ ಸಮಾರಾಧನೆ ತಪ್ಪು

ತ್ತಿದ್ದಿಲ್ಲ. ॥ ೬ ॥ ಹೀಗೆ ನಡೆದಿರಲು ಒಂದು ದಿವಸ ಕಾಶ್ಯಪ ಗೋತ್ರದವನೂ ಗುರುಭಕ್ತನೂ ಆದ ಭಾಸ್ಕರನೆಂಬ ಒಬ್ಬ ಅತಿ ಬಡವನಾದ ಬ್ರಾಹ್ಮಣನು ಶ್ರೀ ಗುರುಗಳಿಗೆ ಭಿಕ್ಷಾ ಮಾಡಿಸಬೇಕೆಂದು ಸಂಕಲ್ಪ ಮಾಡಿ, ಮೂರು ಮಂದಿಗೆ ಸಾಲುವಷ್ಟು ಅಕ್ಕಿ, ಕಣಕ, ಬೇಳೆ ಮತ್ತು ಅದಕ್ಕೆ ಸರಿಯಾಗಿ ಉಳಿದ ಎಲ್ಲ ಪದಾರ್ಥಗಳನ್ನು ಒಂದು ಅರಿವೆಯಲ್ಲಿ ಕಟ್ಟಿಕೊಂಡು ತನ್ನ ಊರಿಂದ ಹೊರಟು ಶ್ರೀ ಗುರುಗಳ ದರ್ಶನಾಪೇಕ್ಷೆಯಿಂದ ಗಾಣಗಾಪುರಕ್ಕೆ ಬಂದನು. ಅಲ್ಲಿ ಶ್ರೀ ಗುರುಗಳನ್ನು ಕಂಡು ಭಕ್ತಿಯಿಂದ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ವಿನಯದಿಂದ ಅವರನ್ನು ಸ್ತುತಿಸಹತ್ತಿದನು ಆ ದಿವಸವೂ ಮಠದಲ್ಲಿ ಭಕ್ತರು ಸಮಾರಾಧನೆ ಮಾಡುತ್ತಿದ್ದರು ಅವರು ಅವನನ್ನು ಕಂಡು ಅವನಿಗೂ ಊಟಕ್ಕೆ ಆಮಂತ್ರಣ ಕೊಟ್ಟು ಮುಂದೆ ಅವನು ಗುರುಗಳ ಹತ್ತಿರ ಇದ್ದಾಗಲೇ ಕೆಲವು ಭಕ್ತರು ಬಂದು ಅವನನ್ನು ಊಟಕ್ಕೆ ಕರೆದರು ಆಗ ಅವನು ತನ್ನ ಗಂಟನ್ನು ಆ ಮಠದಲ್ಲಿಯೇ ಇಟ್ಟು ಊಟಕ್ಕೆ ನಡೆದನು. ॥ ೭-೧೨ ॥ ಊಟವಾಗುವದರೊಳಗೆ ಸಂಜೆಯಾಯಿತು ಆ ಮೇಲೆ ಅವನು ಮಠಕ್ಕೆ ಬಂದು ತನ್ನ ಗಂಟು ತಕ್ಕೊಂಡು ನಿದ್ರೆ ಮಾಡಬೇಕೆಂದು ಒತ್ತಟ್ಟಿಗೆ ಹೋಗಿ ಆ ಗಂಟನ್ನು ತಲೆದಿಂಬಿನ ಹತ್ತರ ಇಟ್ಟುಕೊಂಡು ಮಲಗಿಕೊಂಡನು ॥ ೧೩ ॥ ಇದೇ ಪ್ರಕಾರ ನಿತ್ಯ ಭಕ್ತರು ಬಂದು ನಿತ್ಯ ಸಮಾರಾಧನೆ ಮಾಡುತ್ತಿದ್ದರು. ಅಲ್ಲಿ ಅವನಿಗೆ ಔತಣ ಬರುತ್ತಿತ್ತು ಅದರಿಂದ ಅವನು ನಿತ್ಯ ಸಮಾರಾಧನೆಯಲ್ಲಿ ಉಣ್ಣುತ್ತಿದ್ದನು. ಮಠದಲ್ಲಿ ಒಂದು ದಿವಸವಾದರೂ ಸಮಾರಾಧನೆ ತಪ್ಪುತ್ತಿದ್ದಿಲ್ಲ. ಆದ್ದರಿಂದ ಆ ಬ್ರಾಹ್ಮಣನ ಸಮಾರಾಧನೆಗೆ ಹೊತ್ತೆ ಸಿಗುತ್ತಿದ್ದಿಲ್ಲ ॥ ೧೪ ॥ ಆಗ ಅಲ್ಲಿಯ ಸಮಸ್ತ ಬ್ರಾಹ್ಮಣರು ಅವನ ಸಂಗತಿಯನ್ನು ತಿಳಿದು ಹಾಸ್ಯ ಮಾಡುತ್ತ ಆಹಾ ಇಲ್ಲಿ ನೋಡಿರಿ! ಈ ಬ್ರಾಹ್ಮಣನು ಇಲ್ಲಿ ಶ್ರೀ ಗುರುಗಳಿಗೆ ಭಿಕ್ಷೆ ಮಾಡಿಸಿ ಸಮಾರಾಧನೆ ಮಾಡಬೇಕೆಂದು ಹೇಳಿ ಭಕ್ತಿಯಿಂದ ಸ್ವಲ್ಪ ಸಾಮಾನು ತಂದು ತಾನು ನಿತ್ಯಾ ಸಮಾರಾಧನೆಯಲ್ಲಿ ಊಟ ಮಾಡಿ ಮಲಗಿಬಿಡುವನು. ॥ ೧೫ ॥ ಇವನು ತಂದ ಸಾಮುಗ್ರಿಯಿಂದ ಒಬ್ಬರ ಹೊಟ್ಟೆಸಹ ಪೂರಾ ತುಂಬುವದಿಲ್ಲ. ಗುರುಗಳ ಶಿಷ್ಯರು ಬಹುಜನರಿರುವರು ತಾನು ತಂದ ಸ್ವಲ್ಪ ಪದಾರ್ಥಗಳಿಂದ ಇಷ್ಟುಮಂದಿಗೆ ಸಮಾರಾ

ಧನೆ, ಹ್ಯಾಗೆ ಮಾಡುತ್ತಾನೋ ತಿಳಿಯದು. ಸಮಾರಾಧನೆ ಮಾಡುತ್ತೇನೆಂದು ಅನ್ನುತ್ತಾನೆ. ॥ ೧೬ ॥ ಹೀಗೆ ಅನ್ನಲಿಕ್ಕೆ ಇವನಿಗೆ ನಾಚಿಕೆಯಾದರೂ ಹ್ಯಾಗೆ ಬರುವದಿಲ್ಲವೋ? ಎಂದು ಹಾಸ್ಯ ಮಾಡುತ್ತ— ಎಲೈ ಬ್ರಾಹ್ಮಣನೇ, ನೀನು ತಂದ ಸಾಮಾನುಗಳಿಂದ ನೀನೇ ಅಡಿಗೆ ಮಾಡಿ, ನಮ್ಮಲ್ಲಿ ಒಬ್ಬಬ್ಬರಿಗೆ ಹಾಕಿ ನೀನು ಊರಲ್ಲಿ ಮಧುಕರಿ ಬೇಡಿ ಉಣ್ಣು, ॥ ೧೭ ॥ ಎಂದು ಅನೇಕ ರೀತಿಯಾಗಿ ವಿನೋದ ಮಾಡುತ್ತಿದ್ದರು. ಹೀಗೆಯೇ ಮೂರು ತಿಂಗಳುಗಳು ಕಳೆದವು. ॥ ೧೮ ॥ ಒಂದು ದಿವಸವಾದರೂ ಅವನ ಸಮಾರಾಧನೆಗೆ ಸವಡು ಸಿಗಲಿಲ್ಲ. ಅವನು ನಿತ್ಯದಂತೆ ನಿತ್ಯ ಸಮಾರಾಧನೆಯಲ್ಲಿ ಉಂಡು ಬಂದು ಆ ಗಂಟನ್ನು ತಲೆದಿಂಬಿನ ಹತ್ತರ ಇಟ್ಟುಕೊಂಡು ಮಲಗುತ್ತಿದ್ದನು. ॥ ೧೯ ॥ ಅಲ್ಲಿಯ ಬ್ರಾಹ್ಮಣರು ಮೂರು ತಿಂಗಳು ಕ್ರಮಿಸಿದರೂ ನಿತ್ಯವೂ ಅವನನ್ನು ಕಂಡು ಪರೋಪರಿಯಾಗಿ ಹಾಸ್ಯ ಮಾಡುತ್ತಿದ್ದರು. ಅದನ್ನು ಒಂದು ದಿವಸ ಕೃಪಾಸಾಗರರಾದ ಶ್ರೀ ಗುರುಗಳು ಕೇಳಿ ॥ ೨೦ ॥ ಆ ಭಾಸ್ಕರ ಬ್ರಾಹ್ಮಣನನ್ನು ಕರೆದು— ಎಲೈ ಬ್ರಾಹ್ಮಣನೇ, ಈ ದಿನ ನೀನು ನಮಗೆ ಭಿಕ್ಷೆಯನ್ನು ಮಾಡಿಸಬೇಕು ಕಾರಣ ತೀವ್ರವಾಗಿ ನೀನೇ ಅಡಿಗೆಯನ್ನು ಮಾಡು ಎಂದು ನಿರೂಪಿಸಿದರು. ॥ ೨೧ ॥ ಆ ಮಾತು ಕೇಳಿ ಅವನು ಬಹಳ ಸಂತೋಷಬಟ್ಟು ಶ್ರೀ ಗುರು ಚರಣಗಳಿಗೆ ನಮಸ್ಕರಿಸಿ, ಹರ್ಷದಿಂದ ಸಾಮಾನುಗಳ ಸಿದ್ಧತೆ ಮಾಡಲಿಕ್ಕೆ ನಡೆದು ॥ ೨೨ ॥ ಎರಡಶೇರು ತುಪ್ಪವನ್ನೂ, ಇಬ್ಬರಿಗೆ ತಕ್ಕಷ್ಟು ಕಾಯಿಪಲ್ಯೆಗಳನ್ನೂ ತಂದು ಸ್ನಾನಮಾಡಿ, ಶುಚಿರ್ಭೂತನಾಗಿ ಅಡಿಗೆಯನ್ನು ಮಾಡಿದನು. ॥ ೨೩ ॥ ಆಗ ಅಲ್ಲಿಯ ಯಾವತ್ತೂ ಬ್ರಾಹ್ಮಣರು ಕೂಡಿ ಗುರುಗಳ ಹತ್ತಿರ ಬಂದು— ಸ್ವಾಮೀ, ಶ್ರೀ ಗುರುಗಳೇ, ಈ ದಿವಸ ನಾವು ಮತ್ತೆ ನಮ್ಮ ಮನೆಯಲ್ಲಿ ಜೋಳದನ್ನವನ್ನು ಊಟ ಮಾಡುವ ಪಾಳಿ ಬಂತು. ॥ ೨೪ ॥ ನಿತ್ಯ ಮಠದಲ್ಲಿ ಸಮಾರಾಧನೆಯಾಗುತ್ತಿತ್ತು. ಮಿಷ್ಟಾನ್ನ ಭೋಜನ ಮಾಡುತ್ತಿದ್ದೆವು. ಈ ಭಾಸ್ಕರ ಬ್ರಾಹ್ಮಣನು ಎಲ್ಲಿಂದ ಬಂದನೋ ಏನೋ? ಈ ದಿವಸ ಸಮಾರಾಧನೆಯು ನಿಂತುಹೋಯಿತು! ಏನು ಮಾಡಬೇಕು ಎಂದು ಅಂದರು. ॥ ೨೫ ॥ ಆದನ್ನು ಕೇಳಿ ಶ್ರೀಗುರುಗಳು—ಎಲೈ ಬ್ರಾಹ್ಮಣರೇ, ನೀವು ಮನೆಗೆ ಹೋಗಬೇಡಿರಿ. ತೀವ್ರ

ವಾಗಿ ಸ್ನಾನ ಮಾಡಿಕೊಂಡು ಬಂದು ಈ ಹೊತ್ತು ಈ ಮಠದಲ್ಲಿಯೇ ಊಟ ಮಾಡಿರಿ ಎಂದು ಹೇಳಿದರು. ||೨೬||
ಆಗ ಆ ಬ್ರಾಹ್ಮಣರು ಮನಸ್ಸಿನಲ್ಲಿ— ಶ್ರೀ ಗುರುಗಳ ಮಠದಲ್ಲಿ ಬೇಕಾದಷ್ಟು ಅನ್ನ ಸಾಮಗ್ರಿಯದೆ. ಆ ಸಾಮಗ್ರಿ ಯಿಂದ ಶ್ರೀ ಗುರುಗಳು ಬೇರೆ ಅಡಿಗೆ ಮಾಡಿಸಬಹುದು. ಆದಕ್ಕಾಗಿ ಅವರು ನಮಗೆ ಈ ಪ್ರಕಾರ ಹೇಳುತ್ತಾರೆ. || ೨೭ || ಎಂದು ಅಂದುಕೊಂಡು ಎಲ್ಲರೂ ನದಿಯ ಸ್ನಾನಕ್ಕೆ ಹೋದರು ಆ ಮೇಲೆ ಶ್ರೀ ಗುರುಗಳು ಆ ಭಾಸ್ಕರ ನನ್ನು ಕರೆದು— ಎಲೈ ಬ್ರಾಹ್ಮಣನೇ, ಈ ದಿನ ಬಹಳ ಮಂದಿ ಬ್ರಾಹ್ಮಣರಿಗೆ ಊಟಕ್ಕೆ ಹೇಳಿದ್ದೇನೆ. ನೀನು ತೀವ್ರ ಅಡಿಗೆಯನ್ನು ಮಾಡು ಇಷ್ಟು ಮಂದಿಯ ಊಟವಾಗುವದರೊಳಗೆ ಸಂಜೆಯಾದೀತು ? ಎಂದು ಅಂದರು. ||೨೮||
ಆಗ ಅವನು ಕೂಡಲೇ— ಸ್ವಾಮೀ, ಈಗ ಅಡಿಗೆಯಾಗಿದೆ ಎಂದು ಹೇಳಿದನು. ಅದಕ್ಕೆ ಗುರುಗಳು— ಹಾಗಾದರೆ ಈಗ ನೀನು ಓಡುತ್ತ ನದಿಗೆ ಹೋಗಿ ಆ ಎಲ್ಲ ಬ್ರಾಹ್ಮಣರನ್ನು ಊಟಕ್ಕೆ ಕರೆ ಎಂದರು. || ೨೯ ||
ಆದರಂತೆ ಅವನು ನದಿಗೆ ಹೋಗಿ— ಸ್ವಾಮೀ ಬ್ರಾಹ್ಮಣರೇ, ಶ್ರೀಗುರುಗಳು ತಮ್ಮನ್ನು ಊಟಕ್ಕೆ ಕರೆಯುತ್ತಾರೆ. ತೀವ್ರವಾಗಿ ಬರಬೇಕು ಎಂದು ಕರೆದನು || ೩೦ || ಆಗ ಯಾವತ್ತೂ ಬ್ರಾಹ್ಮಣರು— ಎಲೈ ಇಷ್ಟುಮಂದಿಗೆ ಅಡಿಗೆಯಾಗಬೇಕಾದರೆ ಸಂಜೆಯಾಗುತ್ತದೆ. ಈಗ ನೀನು ತೀವ್ರವಾಗಿ ಹೋಗಿ ಮೊದಲು ಶ್ರೀಗುರುಗಳಿಗೆ ಭಿಕ್ಷೆ ಯನ್ನು ಮಾಡಿಸು. ಹೋಗು ಹೋಗು ತೀವ್ರವಾಗಿ ಹೋಗು ಎಂದರು. || ೩೧ || ಅವರ ಮಾತು ಕೇಳಿ ಆ ಬ್ರಾಹ್ಮಣನು ಹಾಗೆಯೇ ತಿರುಗಿ ಬಂದು ಶ್ರೀಗುರುಗಳನ್ನು ಕುರಿತು— ಸ್ವಾಮೀ, ಗುರುಗಳೇ ನಾನು ತಮ್ಮ ಅಪ್ಪಣೆಯಂತೆ ಆ ಎಲ್ಲ ಬ್ರಾಹ್ಮಣರನ್ನು ಊಟಕ್ಕೆ ಕರೆದೆನು. ಆದರೆ ಅವರು— ಈಗ ನಾವು ಊಟಕ್ಕೆ ಬರುವ ದಿಲ್ಲ. ಇಷ್ಟು ಮಂದಿಗೆ ಅಡಿಗೆ ಆಗುವದರೊಳಗೆ ಸಂಜೆಯಾಗುತ್ತದೆ. ಕಾರಣ ನಾವು ಸಂಜೆಗೆ ಊಟಕ್ಕೆ ಬರು ತ್ತೇವೆಂದು ಅಂದರು ಎಂದನು. || ೩೨ || ಆಗ ಶ್ರೀಗುರುಗಳು— ಎಲೈ ಬ್ರಾಹ್ಮಣನೇ, ಈ ದಿನ ನಾನು ಎಲ್ಲ ಬ್ರಾಹ್ಮಣರ ಪಂಕ್ತಿಯಲ್ಲಿಯೇ ನಿನ್ನ ಭಿಕ್ಷೆಯನ್ನು ತಕ್ಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ. || ೩೩ || ಆದ್ದರಿಂದ ನೀನು ಎಲ್ಲ ಬ್ರಾಹ್ಮಣರೊಡನೆ ನನಗೆ ಭಿಕ್ಷೆಯನ್ನು ಹಾಕಬೇಕು. ಇದಕ್ಕೆ ನೀನು ಒಪ್ಪದಿದ್ದರೆ ನಾನು ನಿನ್ನ

ಭಿಕ್ಷೆಯನ್ನೇ ಸ್ವೀಕರಿಸುವದಿಲ್ಲ. ಎಂದು ಹೇಳಿದರು. || ೩೪ || ಆ ಮಾತು ಕೇಳಿ ಭಾಸ್ಕರನು ಕೈಮುಗಿದು— ಸ್ವಾಮೀ ನನಗೆ ತಮ್ಮ ಅಪ್ಪಣೆಯೇ ಶಿರಸಾಮಾನ್ಯವು. ಆ ಅಪ್ಪಣೆಯಂತೆ ನಾನು ಆ ಎಲ್ಲ ಬ್ರಾಹ್ಮಣರೊಡನೆ ತಮಗೆ ಭಿಕ್ಷೆ ಮಾಡಿಸುವೆನು ಎಂದು || ೩೫ || ಮನಸ್ಸಿನಲ್ಲಿ ವಿಚಾರ ಮಾಡುತ್ತ— ತ್ರೈಮೂರ್ತಿ ಸ್ವರೂಪರಾದ ಶ್ರೀ ಗುರುಗಳು ಈಗ ಮನುಷ್ಯ ರೂಪ ಧರಿಸಿರುವರು. ಇವರು ಯಾವ ರೀತಿಯಿಂದ ಹೇಳುತ್ತಾರೆಂಬುದು ನನಗೆ ತಿಳಿಯುವದಿಲ್ಲ. ಇವರು ತಮ್ಮ ಮಾತನ್ನು ಸತ್ಯವಾಗಿ ಮಾಡೇಮಾಡುವರು. || ೩೬ || ಇವರ ಮಹಿಮೆಯೂ ಯಾರಿಗೂ ತಿಳಿಯುವದಿಲ್ಲ. ಅದರ ಚಿಂತೆ ನನಗೇಕೆ? ಎಂದು ಅವನು ಶ್ರೀ ಗುರುಗಳಿಗೆ ಕೈಮುಗಿದು ವಿನಯದಿಂದ— ಸ್ವಾಮೀ, ಆ ಬ್ರಾಹ್ಮಣರು ನಾನು ಕರೆದರೆ ಬರುವದಿಲ್ಲ. ನನ್ನ ಮಾತಿಗೆ ಅವರು ಹಾಸ್ಯ ಮಾಡುತ್ತಾರೆ ಎಂದು ಹೇಳಿದನು. || ೩೭ || ಆಗ ಶ್ರೀಗುರುಗಳು ಮತ್ತೊಬ್ಬ ಶಿಷ್ಯನನ್ನು ಕರೆದು— ಎಲೈ ಶಿಷ್ಯನೇ, ನೀನು ತೀವ್ರವಾಗಿ ನದಿಗೆ ಹೋಗಿ, ನಾನು ಕರೆಯುತ್ತೇನೆಂದು ಹೇಳಿ ಆ ಎಲ್ಲ ಬ್ರಾಹ್ಮಣರನ್ನು ಬೇಗನೆ ಊಟಕ್ಕೆ ಕರೆದುಕೊಂಡು ಬಾ ಎಂದು ಅಂದರು. || ೩೮ || ಅದರಂತೆ ಆ ಶಿಷ್ಯನು ಕೂಡಲೆ ಓಡುತ್ತ ನದಿಗೆ ಹೋಗಿ, ಆ ಬ್ರಾಹ್ಮಣರನ್ನು ಕರೆದನು. ಕೂಡಲೇ ಅವರು ಸ್ನಾನ ಮಾಡಿ ಮಠಕ್ಕೆ ಬಂದರು. || ೩೯ || ಆಗ ಶ್ರೀಗುರುಗಳು— ಎಲೈ ಬ್ರಾಹ್ಮಣರೇ, ಕೇಳಿರಿ. ಈ ದಿನ ಈ ಭಾಸ್ಕರ ಬ್ರಾಹ್ಮಣನು ಸಮಾರಾಧನೆ ಮಾಡುತ್ತಾನೆ. ಕಾರಣ ನೀವೆಲ್ಲ ಕುಟುಂಬ ಸಹಿತ ಇಲ್ಲಿಯೇ ಭೋಜನ ಮಾಡಿರಿ. ಅಡಿಗೆಯಾಗಿದೆ, ತೀವ್ರವಾಗಿ ಎಲೆ ಹಾಕಿರಿ ಎಂದು ಹೇಳಿದರು. || ೪೦ || ಇತ್ತ ಆ ಭಾಸ್ಕರ ಬ್ರಾಹ್ಮಣನನ್ನು ಕರೆದು— ಎಲೈ ಬ್ರಾಹ್ಮಣನೇ, ಈಗ ಎಲ್ಲ ಬ್ರಾಹ್ಮಣರು ಬಂದು ನಿಂತರುತ್ತಾರೆ. ತೀವ್ರವಾಗಿ ಅವರಿಗೆ ನಾಲ್ಕು ಸಾವಿರ ಎಲೆಗಳನ್ನು ಹಾಕು. ||೪೧|| ಮತ್ತು ಈಗ ನೀನು ಈ ಎಲ್ಲ ಬ್ರಾಹ್ಮಣರನ್ನು ಕುರಿತು ಈಗ ನಾನು ಹೇಳುವಂತೆ ವಿನಯದಿಂದ ಹೇಳು. ಏನಂದರೆ— ಎಲೈ ಬ್ರಾಹ್ಮಣರೇ, ಈ ದಿನ ನನ್ನ ಸಮಾರಾಧನೆಯದೆ ದಯಮಾಡಿ ತಾವು ಕುಟುಂಬ ಸಹಿತ ಇಲ್ಲಿಯೇ ಭೋಜನ ಮಾಡಿಕೊಂಡು ಹೋಗಿರಿ ಎಂದು ವಿನಂತೀ ಮಾಡಿಕೋ ಎಂದು ಹೇಳಿದರು. || ೪೨ ||

ಗುರುಗಳ ಅಪ್ಪಣೆಯಂತೆ ಅವನು ಎಲ್ಲ ಬ್ರಾಹ್ಮಣರಿಗೆ ಕೈಮುಗಿದು ಶ್ರೀಗುರುಗಳು ಹೇಳಿದಂತೆ ಹೇಳಿದನು. ಆಗ ಆ ಬ್ರಾಹ್ಮಣರು ನಕ್ಕು— ಎಲೈ ಭಾಸ್ಕರ ಬ್ರಾಹ್ಮಣನೇ, ನಮಗೆ ಇಲ್ಲಿ ಊಟ ಮಾಡಿರಿ ಎಂದು ಏನು ಹೇಳುತ್ತೀ. || ೪೩ || ಏನು ಊಟ ಮಾಡಬೇಕು? ನಾವು ಇಷ್ಟುಮಂದಿ ಇರುತ್ತೇವೆ. ನೀನು ಮಾಡಿದ ಅಡಿಗೆಯನ್ನು ಹಂಚಿದರೆ ಒಬ್ಬೊಬ್ಬರಿಗೆ ಒಂದೊಂದು ಅಗಳು ಸಹ ಬರಲಿಕ್ಕಿಲ್ಲ! ವಿನಂತಿಯಿಂದ ಇಷ್ಟು ಬ್ರಾಹ್ಮಣರನ್ನು ಊಟಕ್ಕೆ ಕರೆಯುತ್ತೀ, ನಿನಗೆ ನಾಚಿಕೆ ಬರುವದಿಲ್ಲವೇ? ಎಂದು ಅಂದರು. || ೪೪ || ಆಗ ಅವರಲ್ಲಿ ವೃದ್ಧ ಬ್ರಾಹ್ಮಣನು ಆ ಎಲ್ಲ ಬ್ರಾಹ್ಮಣರನ್ನು ಕುರಿತು— ಎಲೈ ಬ್ರಾಹ್ಮಣರೇ, ಸುಮ್ಮನೆ ಈ ಬ್ರಾಹ್ಮಣನನ್ನು ನಿಂದಿಸಬೇಡಿರಿ. ನೀವು ಅನ್ನುವ ಮಾತನ್ನು ಗುರುಗಳು ಕೇಳ್ಯಾರು. ಇವನು ಗುರುಗಳು ಹೇಳಿದಂತೆ ನಿಮಗೆ ಹೇಳಿದನು ಎಂದರು. || ೪೫ || ಆಗ ಎಲ್ಲರೂ ಈ ಮಾತು ಯೋಗ್ಯವು! ಯೋಗ್ಯವು! ಎಂದು ಎಲ್ಲರಿಗೂ ಎಲೆಗಳನ್ನು ಹಾಕಿದರು. ಆಮೇಲೆ ಆ ಭಾಸ್ಕರ ಬ್ರಾಹ್ಮಣನು ಒಳ್ಳೇ ಭಕ್ತಿಯಿಂದ ಶ್ರೀಗುರುಗಳನ್ನು ಷೋಡಶೋಪಚಾರ ವಿಧಿಯಿಂದ || ೪೬ || ಮನಃಪೂರ್ವಕ ಉತ್ತಮರೀತಿಯಾಗಿ ಪೂಜಿಸಿ ಮಂಗಳಾರತಿಯನ್ನು ಮಾಡಿದನು. ಆದರಿಂದ ಶ್ರೀಗುರುಗಳು ಸಂತೋಷಬಟ್ಟು— ಎಲೈ ಬ್ರಾಹ್ಮಣನೇ, ತೀವ್ರವಾಗಿ ನನಗೊಂದು ಎಲೆ (ಮಣಿ) ಯನ್ನು ಹಾಕು. || ೪೭ || ನೀನು ಮಾಡಿದ ಎಲ್ಲ ಅಡಿಗೆಯನ್ನು ನನ್ನ ಹತ್ತಿರ ತಂದಿಡು ಎಂದರು. ಆಗ ಅದರಂತೆ ಅಡಿಗೆಯನ್ನು ಅವರ ಹತ್ತರ ತಂದಿಟ್ಟನು. || ೪೮ || ಆಗ ಗುರುಗಳು ಅವನನ್ನು ಕುರಿತು— ಎಲೈ ಬ್ರಾಹ್ಮಣನೇ, ಅದರಮೇಲೆ ಈ ನನ್ನ ಕಾಷಾಯ ವಸ್ತ್ರವನ್ನು ಮುಚ್ಚು. ಎಂದು ಹೇಳಿ ಅವನ ಕೈಯಲ್ಲಿ ಆ ವಸ್ತ್ರವನ್ನು ಕೊಟ್ಟರು. || ೪೯ || ಆಗ ಅವನು ಅಡಿಗೆಯಮೇಲೆ ಆ ವಸ್ತ್ರವನ್ನು ಮುಚ್ಚಿದನು. ಆಗ ಶ್ರೀಗುರುಗಳು ಕಮಂಡಲೋದಕವನ್ನು ತಮ್ಮ ಕೈಯಲ್ಲಿ ತಕ್ಕೊಂಡು ಅಭಿಮಂತ್ರಿಸಿ ಆ ಅಡಿಗೆಯಮೇಲೆ ಪ್ರೋಕ್ಷಿಸಿ— || ೫೦ || ಎಲೈ ಭಾಸ್ಕರನೇ, ಅಡಿಗೆಯಮೇಲೆ ಹೊಚ್ಚಿದ ಈ ವಸ್ತ್ರವನ್ನು ಮಾತ್ರ ತೆಗೆಯಬೇಡ. ಈಗ ಅಡಿಗೆ ಮಾಡಿದ ಪಾತ್ರೆಗಳೊಳಗಿಂದ ಆಯಾ ಪದಾರ್ಥಗಳನ್ನು ಬೇರೊಂದು ಪಾತ್ರೆಗೆ ಅಷ್ಟಷ್ಟೇ ತಕ್ಕೊಂಡು ತೀವ್ರವಾಗಿ ಬಡಿಸ

ಬೇಕು || ೫೧ || ಅದರಂತೆ— ತುಪ್ಪವನ್ನಾದರೂ ಬೇರೆ ಪಾತ್ರೆಗೆ ತೆಗೆದುಕೊಂಡು ಬಡಿಸಬೇಕು ಎಂದು ಹೇಳಿದರು. || ೫೨ || ಆಮೇಲೆ ಅವನು ಶ್ರೀಗುರುಗಳ ಸಹಿತವಾಗಿ ಎಲ್ಲರಿಗೂ ಎಲೆಗಳನ್ನು ಹಾಕಿ, ಗುರುಗಳ ಎಲೆಗೆ ಅಭಿಗಾರವನ್ನು ಹಾಕಿ, ಅವರ ಅಪ್ಪಣೆಯಂತೆ ಅವರ ಎಲೆಯಿಂದ ಆರಂಭ ಮಾಡಿ ಕ್ರಮದಂತೆ ಎಲ್ಲ ಪದಾರ್ಥಗಳನ್ನು ಬಡಿಸಹತ್ತಿದರು ಆಗ ಜನರು ಆ ಕೌತುಕವನ್ನು ನೋಡುತ್ತ, ಈ ಪ್ರಕಾರ ನಡೆದದ್ದು ಮಹದಾಶ್ಚರ್ಯವೆಂದು ಹೊಗಳುತ್ತಿದ್ದರು. || ೫೩ || ಆಗ ಶ್ರೀ ಗುರುಗಳು ಆ ಬ್ರಾಹ್ಮಣರನ್ನು ಕುರಿತು— ಏಳಿರಿ ತೀವ್ರವಾಗಿ ಬಡಿಸಿರಿ ಎಂದರು. ಆಗ ಅನೇಕ ಮಂದಿ ಬಡಿಸಲಿಕ್ಕೆ ಎದ್ದು ಬಡಿಸಲಿಕ್ಕೆ ಹತ್ತಿದರು. || ೫೪ || ಆಗ ಭಾಸ್ಕರನು ತಾನು ಮೂಲ ಪಾತ್ರೆಗಳಿಂದ ಆ ಎಲ್ಲ ಪದಾರ್ಥಗಳನ್ನು ಬೇರೆ ಬೇರೆ ಪಾತ್ರೆಗಳಿಗೆ ತುಂಬಿ ತುಂಬಿ ಕೊಡುತ್ತಿದ್ದನು. ಜನರು ಬಡಿಸಲಿಕ್ಕೆ ಒಯ್ಯುತ್ತಿದ್ದರು. ಕೂಡಲೆ ಆ ಪಾತ್ರೆಗಳು ಮತ್ತೆ ತುಂಬಿಯೇ ಇರುತ್ತಿದ್ದವು. ಅವರೆಲ್ಲರೂ ಬಡಿಸುತ್ತಿದ್ದರು. ಅದರಂತೆ ತುಪ್ಪವನ್ನೂ ಬೇರೆ ಬೇರೆ ಪಾತ್ರೆಗಳಲ್ಲಿ ತುಂಬಿ ತುಂಬಿ ಕೊಡುತ್ತಿದ್ದರು. ಗುರುಗಳ ಅನುಗ್ರಹದಿಂದ ಹೀಗೆ ಎಷ್ಟು ಬಡಿಸಿದರೂ ಮೊದಲು ಅಡಿಗೆ ಮಾಡಿದ ಪಾತ್ರೆಗಳಲ್ಲಿ ಎಲ್ಲ ಪದಾರ್ಥಗಳೂ ಅದರಂತೆ ತುಪ್ಪವೂ ತುಂಬಿಯೇ ಇರುತ್ತಿದ್ದವು. || ೫೫ || ಹೀಗೆ ಎಲ್ಲ ಪಂಕ್ತಿಗೂ ಬಡಿಸಿದರು. ಆಮೇಲೆ ಗುರುಗಳ ಸಹಿತವಾಗಿ ಎಲ್ಲರೂ ಊಟಕ್ಕೆ ಕೂತರು. ಶ್ರೀ ಗುರುಗಳು ಎಲ್ಲ ಬ್ರಾಹ್ಮಣ ಪಂಕ್ತಿಯಲ್ಲಿ ಕುಳಿತು ಹರ್ಷದಿಂದ ಊಟ ಮಾಡುತ್ತ— || ೫೬ || ಬ್ರಾಹ್ಮಣರು ಕೇಳಿದಂತೆ ಯಾರ್ಯಾರಿಗೆ ಏನೇನು ಬೇಕೊ ಆದನ್ನು ಬಡಿಸಿರಿ ಎಂದರು. ಇತ್ತ ಭಾಸ್ಕರನು ಬ್ರಾಹ್ಮಣರಿಗೆ ಕೈ ಮುಗಿದು— ಸ್ವಾಮೀ, ಯಾರ್ಯಾರಿಗೆ ಏನೇನು ಬೇಕು ಕೇಳಿರಿ. ಅವುಗಳನ್ನು ತೀವ್ರವಾಗಿ ತಂದು ಬಡಿಸುವೆವು. ಹೊತ್ತು ಬಹಳಾಯಿತು. ನೀವು ಹಸಿದು ಬಹಳ ಕಷ್ಟಬಟ್ಟಿರಿ. ಅದಕ್ಕೆ ನನ್ನನ್ನು ಕ್ಷಮಿಸಿ ಹೊಟ್ಟೆತುಂಬ ಸಾವಕಾಶವಾಗಿ ಊಟ ಮಾಡಿರಿ ಎಂದು ಹೇಳಿ || ೫೭ || ತಾನು ಅವರಿಗೆ ದೊನ್ನೆ ತುಂಬ ತುಪ್ಪವನ್ನು ಹಾಕುತ್ತಾ || ೫೮ || ಮತ್ತೆ ಅನೇಕ ತರದ ಭಕ್ಷ್ಯಗಳನ್ನೂ, ಪಾಯಸಗಳನ್ನೂ, ಎಲಿ ಪಲ್ಯೆ, ಕಾಯಿಪಲ್ಯೆ, ಸಕ್ಕರೆ, ಉಪ್ಪು ಮೊಸರು ಹಾಲು ಮೊದಲಾದವುಗಳನ್ನೂ ಯಥೇಷ್ಟವಾಗಿ

ಬಡಿಸಿದನು. ಎಲ್ಲರೂ ಬೇಕಾದಷ್ಟು ಉಂಡು ದಣಿದು (ಆದರೂ ಗುರುಗಳ ಆಜ್ಞೆಯಂತೆ ಆ ಬ್ರಾಹ್ಮಣನು ಮತ್ತೆ ಮೇಲಿಂದಮೇಲೆ ತುಪ್ಪ ಮೊದಲಾದವುಗಳನ್ನು ತಕ್ಕೊಂಡು ಬಡಿಸಹತ್ತಿದನು. ಆಗ ಆ ಎಲ್ಲ ಬ್ರಾಹ್ಮಣರು)— ಸ್ವಾಮೀ, ಗುರುಗಳೇ, ನಾವು ಇಷ್ಟು ಹೊತ್ತಿನವರೆಗೆ ಆ ಕಂಠ ಪರಿಯಂತ ಉಂಡು ಸಾಕಾಗಿದೆ. ಇನ್ನು ಬಡಿಸುವದನ್ನು ಸಾಕುಮಾಡಿರಿ ಎಂದು ಹೇಳಿ ॥ ೫೯ ॥ ಎಲ್ಲರೂ ತೃಪ್ತರಾಗಿ ಎದ್ದು ಕೈ-ಬಾಯಿಗಳನ್ನು ತೊಳೆದುಕೊಂಡು ಬಂದರು ಅಷ್ಟರಲ್ಲಿ ಅನೇಕ ಭಕ್ತರು ಕೂಡಲೇ ಆ ಎಂಜಲ ಎಲೆಗಳನ್ನು ತೆಗೆದು ಸಾರಿಸಿದ್ದರು. ಇದೆಲ್ಲವನ್ನು ಕಂಡು ಆ ಬ್ರಾಹ್ಮಣರು ಇದು ಮಹಾ ಆಶ್ಚರ್ಯವೆಂದೆನ್ನುತ್ತಿದ್ದರು. ॥ ೬೦ ॥ ಆ ಮೇಲೆ ಎಲ್ಲರಿಗೂ ತಾಂಬೂಲವನ್ನು ಕೊಟ್ಟರು. ಆಗ ಶ್ರೀ ಗುರುಗಳು ಆ ಎಲ್ಲ ಬ್ರಾಹ್ಮಣರನ್ನು ಕುರಿತು— ಎಲೈ ಬ್ರಾಹ್ಮಣರೇ, ನಿಮ್ಮ ಪುತ್ರ, ಮಿತ್ರ, ಕಲಿತ್ರರು ಮನೆಯಲ್ಲಿದ್ದರೆ ಎಲ್ಲರನ್ನೂ ಕಳಿಸಿರಿ ಅವರೂ ಊಟ ಮಾಡಿಹೋಗಲಿ, ಎಂದು ಹೇಳಿದರು. ॥ ೬೧ ॥ ಆದರಂತೆ ಆ ಊರಲ್ಲಿದ್ದ ಎಲ್ಲ ಬ್ರಾಹ್ಮಣ ಸುವಾಸಿನಿ ಮೊದಲಾದವರು ಬಂದು ಪಂಚಭಕ್ಷ್ಯ ಪರಮಾನ್ನಗಳನ್ನುಂಡು ಹೋದರು. ಆಮೇಲೆ ಗುರುಗಳು-ಈ ಗ್ರಾಮದಲ್ಲಿರುವ ಶೂದ್ರಾದಿಗಳನ್ನು ಕರೆಯಿರಿ. ॥೬೨॥ ತೀವ್ರವಾಗಿ ಅವರ ಪುತ್ರ-ಮಿತ್ರ-ಕಲತ್ರ ಸಹಿತವಾಗಿ ಕರೆಯಿರಿ ಅವರೂ ಉಂಡು ಹೋಗಲಿ ಎಂದರು. ಅದರಂತೆ ಅವರೂ ಬಂದು ಊಟ ಮಾಡಿಕೊಂಡು ಹೋದರು. ॥ ೬೩ ॥ ಆಮೇಲೆ ಶ್ರೀ ಗುರುಗಳು ಈ ಊರಲ್ಲಿ ಮತ್ಯಾರು ಉಳಿದರು ? ಎಂದು ಕೇಳಲು ಆಗ ಆ ಬ್ರಾಹ್ಮಣನು— ಸ್ವಾಮೀ, ಅಂತ್ಯಜರು ಮಾತ್ರ ಉಳಿದಿರುವರು. ಎಂದು ಹೇಳಿದರು. ॥ ೬೪ ॥ ಆಗ ಗುರುಗಳು— ಹಾಗಾದರೆ, ಆ ಎಲ್ಲ ಅಂತ್ಯಜರನ್ನೂ ಕರೆದು ಅವರು ತೃಪ್ತರಾಗುವಂತೆ ತೀವ್ರವಾಗಿ ಅವರಿಗೆ ಬೇಡಿದಷ್ಟು ಅನ್ನವನ್ನು ಕೊಡಿರಿ. ॥ ೬೫ ॥ ಎಂದು ಅವರಿಗೂ ಸಾಕಾಗುವಷ್ಟು ಬಡಿಸಿ ಕೊಡಿಸಿದರು. ಆದರಿಂದ ಅವರೂ ಉಂಡು ತೃಪ್ತರಾದರು. ಆಮೇಲೆ ಶ್ರೀಗುರುಗಳು— ಈ ಗ್ರಾಮದಲ್ಲಿ ಯಾವ ಪ್ರಾಣಿಯೂ ಹಸಿದು ಉಳಿಯಬಾರದು. "ಹಸಿದವರು ಬಂದು ಉಂಡು ಹೋಗಿರಿ" ಎಂದು ಡಂಗುರವನ್ನು ಹೊಡೆಯಿರಿ. ॥ ೬೬ ॥ ಹಸಿದವರನ್ನು ತೀವ್ರವಾಗಿ ಕರೆಯಿರಿ ಎಂದು ಹೇಳಿದರು. ಅವರ ಆಜ್ಞೆಯಂತೆ ಕೆಲವರು

ಇಡೀ ಗ್ರಾಮದಲ್ಲಿ ತಿರುಗಾಡಿ ಹುಡುಕಿದರು. || ೧೭ || ಯಾವ ಪ್ರಾಣಿಯೂ ಉಪವಾಸದಿಂದ ಇದ್ದಿಲ್ಲ. ಎಲ್ಲರೂ ಉಂಡು ತೃಪ್ತರಾಗಿದ್ದರು. ಆಗ ಗುರುಗಳು ಆ ಭಾಸ್ಕರನಿಗೆ ಊಟ ಮಾಡಲಿಕ್ಕೆ ಹೇಳಿದರು. || ೧೮ || ಆಗ ಅವನು ಊಟ ಮಾಡಿದನು. ಆಮೇಲೆ ಅವನು ಅಡಿಗೆಯನ್ನು ನೋಡಲಾಗಿ ತಾನು ಮೊದಲು ಮಾಡಿದಷ್ಟು ಆ ಎಲ್ಲ ಪದಾರ್ಥಗಳು ಆ ಪಾತ್ರೆಗಳಲ್ಲಿ ತುಂಬಿಯೇ ಇದ್ದವು ಅದರಂತೆ ಅವನು ಗುರುಗಳಿಗೆ ತಿಳಿಸಿದನು || ೧೯ || ಆಗ ಅವರು— ಎಲೈ ಬ್ರಾಹ್ಮಣನೇ, ಈ ಅನ್ನವನ್ನು ತೀವ್ರವಾಗಿ ಒಯ್ದು ಇಲ್ಲಿಯ ನದಿ ಮೊದಲಾದ ಜಲಾಶಯಗಳಲ್ಲಿ ಹಾಕು. ಜಲಚರಗಳು ತಿನ್ನುವವು ಎಂದು ಹೇಳಿ ಆ ಊರ ಎಲ್ಲ ನೀರಿನಲ್ಲಿ ಆ ಅನ್ನವನ್ನು ಹಾಕಿಸಿದರು. ಅದರಿಂದ ಎಲ್ಲ ಜಲಚರಗಳು ತೃಪ್ತಿಯನ್ನು ಹೊಂದಿದವು || ೨೦ || ಈ ಪ್ರಕಾರ ಆ ದಿವಸ ವಿಚಾರ ಮಾಡಲು ನಾಲ್ಕು ಸಾವಿರ ಜನರ ಸಮಾರಾಧನೆಯಾಯಿತು ಇದು ಭೂಮಿಯಲ್ಲೆಲ್ಲ ಪ್ರಸಾರವಾಯಿತು. ಇದನ್ನೆಲ್ಲ ಕೇಳಿ ಜನರು ಒಳ್ಳೇ ಆಶ್ಚರ್ಯಪೆಂಡೆನ್ನುತ್ತಿದ್ದರು || ೨೧ || ಇಷ್ಟೆಲ್ಲ ಆದಮೇಲೆ ಶ್ರೀಗುರುಗಳು ಆ ಭಾಸ್ಕರ ಬ್ರಾಹ್ಮಣನನ್ನು ಕರೆದು— ಎಲೈ ಭಾಸ್ಕರ ಬ್ರಾಹ್ಮಣನೇ, ಇಂದಿಗೆ ನಿನ್ನ ಯಾವತ್ತೂ ಬಡತನವು ಹೋಯಿತು. ನೀನು ಪುತ್ರ-ಪೌತ್ರರೊಂದಿಗೆ ಸುಖವಾಗಿರು ಎಂದು ವರವನ್ನು ಕೊಟ್ಟರು. || ೨೨ || ಅದನ್ನು ಕೇಳಿ ಯಾವತ್ತು ಜನರು ಸುಮ್ಮನಾಗಿ ತಮ್ಮತಮ್ಮೊಳಗೆ— ಈ ಹೊತ್ತು ಒಳ್ಳೇ ಕೌತುಕವನ್ನು ಕಂಡೆವು. ಸ್ವಲ್ಪೇ ಮಾಡಿದ ಅನ್ನದಲ್ಲಿ ನಾಲ್ಕು ಸಾವಿರ ಜನರು ಹೇಗೆ ಉಂಡರು? ಎಂದು ಅನ್ನುತ್ತಿದ್ದರು || ೨೩ || ಆಗ ಅವರಲ್ಲಿ ಒಬ್ಬನು— ಎಲೈ ಬ್ರಾಹ್ಮಣರೇ, ಇದು ಶ್ರೀಗುರುಗಳ ಮಹಿಮೆಯು. ಇವರು ಸಂಪೂರ್ಣ ತ್ರೈಮೂರ್ತಿ ಅವತಾರವಾಗಿದ್ದು ಈಗ ನರಸಿಂಹ ಸರಸ್ವತಿ ಸ್ವಾಮಿಗಳಾಗಿರುವರು. ಅದರಿಂದ ಅವರು ಅನ್ನಪೂರ್ಣೆಯನ್ನು ಸ್ಮರಿಸಿರುವರು. ಎಂದನು. || ೨೪ || ಮತ್ತೊಬ್ಬನು— ಇದೊಂದು ಅಪೂರ್ವವನ್ನು ನೋಡಿದೆವು. ಹಿಂದಕ್ಕೆ ಪಾಂಡವರ ಮನೆಗೆ ರಾತ್ರಿ ದುರ್ವಾಸರು ಶಿಷ್ಯಸಮೇತ ಅನ್ನಾರ್ಥಿಯಾಗಿ ಹೋಗಿದ್ದರು. || ೨೫ || ಆಗ ಆ ಪಾಂಡವರ ಸತ್ವವು ಹೋದೀತೆಂದು ತಿಳಿದು ಕೂಡಲೆ ಶ್ರೀಕೃಷ್ಣನು ಬಂದು ಅವರಿಗೆ ಅನ್ನವನ್ನು ಅಕ್ಷಯವಾಗಿ ದೊರಕಿಸಿಕೊಟ್ಟು

ಕಾಪಾಡಿದನು ಎಂಬ ಕಥೆಯನ್ನು ಕೇಳಿದ್ದೆವು. ಆದರೆ ಈಗ ಈ ಎರಡನೇ ಅಪೂರ್ವವಾದ ಸಂಗತಿಯನ್ನು ಪ್ರತ್ಯಕ್ಷವಾಗಿ ಕಂಡೆವು. ॥ ೭೬ ॥ ಈ ದಂಡಧಾರಿಗಳಾದ ಶ್ರೀಗುರುಗಳು ಮನುಷ್ಯರಂತೆ ಕಾಣುವರು. ಆದರೆ ಇವರು ಸತ್ಯವಾಗಿ ತ್ರೈಮೂರ್ತಿ ಅವತಾರವು ಇವರ ಮಹಿಮೆಯು ಅಪಾರವಾಗಿರುತ್ತದೆ ಅದು ನಮಗೆ ತಿಳಿಯುವದಿಲ್ಲ. ॥ ೭೭ ॥ ಇವರಿಗೆ ಮನುಷ್ಯರೆಂದು ಯಾರು ಅನ್ನುತ್ತಾರೋ ಅವರಿಗೆ ಅಧೋಗತಿಯಾಗುವದು. ಇವರನ್ನು ವರ್ಣಿಸಲಿಕ್ಕೆ ನಮಗೆ ಬುದ್ಧಿಯು ಸಾಲದು. ಶ್ರೀಗುರುಗಳು ನಿಶ್ಚಯವಾಗಿ ಪರಬ್ರಹ್ಮ ಮೂರ್ತಿಯು ॥ ೭೮ ॥ ಇವರು ದೇವರೇ ಆಗದಿದ್ದರೆ ಸ್ವಲ್ಪ ಅನ್ನವನ್ನು ಅಕ್ಷಯವಾಗಿ ಹೇಗೆ ಮಾಡಿದರು? ಎರಡೂವರಿ ಮೂರು ಸೇರು ಪದಾರ್ಥವಿದ್ದು ನಾಲ್ಕು ಸಾವಿರ ಮಂದಿ ಹೇಗೆ ಉಂಡಿತು? ॥ ೭೯ ॥ ಈ ಮೊದಲು ಮತ್ತೆ ಕೆಲವು ಹೊಸ ಸಂಗತಿಗಳಾದವಲ್ಲ! ಅವನ್ನು ನಾವು ಕಣ್ಣುಟ್ಟು ನೋಡಲಿಲ್ಲವೇ? ಇವರು ಪ್ರೇತವನ್ನು ಸಜೀವಗೊಳಿಸಿದರು ಮತ್ತು ಒಣಗಿದ ಮರವನ್ನು ಚಿಗುರಿಸಿದರು ॥ ೮೦ ॥ ಇವರ ಮತ್ತೊಂದು ಮಹಿಮೆಯನ್ನು ಕೇಳಿರಿ ಅದಕ್ಕೆ ಯಾರ ಉಪಮೆಯನ್ನು ಕೊಡಬಹುದು? ಇವರು ಕುಮಶಿಯಲ್ಲಿ ತ್ರಿವಿಕ್ರಮ ಯತಿಗೆ ವಿಶ್ವರೂಪ ತೋರಿಸಲಿಲ್ಲವೇ? ॥ ೮೧ ॥ ಶ್ರೀ ಗುರುಗಳು ಇದೇ ಊರಲ್ಲಿ ಮೊನ್ನೆ ಮೊನ್ನೆ ತಮ್ಮ ಭಿಕ್ಷೆಗೆ ಗೊಡ್ಡೆಮ್ಮೆಯಿಂದ ಹಾಲು ಕರೆಯಿಸಲಿಲ್ಲವೇ? ಮತ್ತು ಭಸ್ಮವನ್ನಭಿಮಂತ್ರಿಸಿ ಪತಿತನಿಂದ ವೇದವನ್ನು ಹೇಳಿಸಲಿಲ್ಲವೇ ॥ ೮೨ ॥ ಮತ್ತೊಂದು ವಿಚಿತ್ರವಾಯಿತು ಒಬ್ಬ ಕುಷ್ಠರೋಗಿಯು ಬಂದು ಇವರ ದರ್ಶನ ಹೊಂದಿದ ಕೂಡಲೇ ಅವನು ನಿರ್ಮಲ ದೇಹವುಳ್ಳವನಾದದ್ದನ್ನು ನಾವು ಕಣ್ಣುಟ್ಟು ನೋಡಿದ್ದೇವೆ ॥ ೮೩ ॥ ಶ್ರೀಗುರುಗಳು ಭಕ್ತನಾದ ನೇಕಾರನಿಗೆ ಕ್ಷಣದಲ್ಲಿ ಶ್ರೀಶೈಲಕ್ಕೆ ಕರಕೊಂಡು ಹೋಗಿ ಅಲ್ಲಿ ಅವನಿಗೆ ದೇವರನ್ನು ತೋರಿಸಿಕೊಂಡು ಬರಲಿಲ್ಲವೇ? ಮತ್ತೊಬ್ಬ ಭಕ್ತನಿಗೆ ಒಂದು ಕ್ಷಣ ಸಹ ಹತ್ತದೆ ಕಾಶೀ ಕ್ಷೇತ್ರವನ್ನು ತೋರಿಸಲಿಲ್ಲವೆ? ॥ ೮೪ ॥ ಇವರು ಮಾಡಿದ ಚರಿತ್ರೆಗಳು ಮತ್ತೆ ಬೇಕಾದಷ್ಟು ಇವೆ. ಹೇಳಹತ್ತಿದರೆ ಅಪಾರವಾಗುವವು. ಈ ಭೂಮಿಯಲ್ಲಿರುವ ಎಲ್ಲ ದೇವತೆಗಳಲ್ಲಿ ಇಷ್ಟು ಸಾಮರ್ಥ್ಯವಿಲ್ಲ ॥ ೮೫ ॥ ಇಷ್ಟು ಸಿದ್ಧಿಗಾಗಿ ಸರ್ವ ದೇವತೆಗಳನ್ನು ಒಲಿಸಿಕೊಳ್ಳ

ಕೊಳ್ಳುವದು ಬಹಳ ಆಯಾಸವಾಗುವದು. ಆದರೆ ಶ್ರೀಗುರುಗಳ ದರ್ಶನಮಾತ್ರದಿಂದಲೇ ಸಕಲಾಭೀಷ್ಟಗಳೂ ಸಾಧಿಸುವವು. ॥ ೮೬ ॥ ಎಂದು ಬ್ರಾಹ್ಮಣರು ಅನ್ನುತ್ತಿದ್ದರು. ಈ ಪ್ರಕಾರ ಅನೇಕ ಅಪೂರ್ವವಾದ ಕೌತುಕಗಳಾಗುವವೆಂಬ ಖ್ಯಾತಿಯನ್ನು ಕೇಳಿ ಸಮಸ್ತ ಜನರು ಅನೇಕ ಸಾರೆ ಶ್ರೀಗುರುಗಳ ದರ್ಶನಕ್ಕೆ ಬರುತ್ತಾರೆ ಎಂದು ಅನ್ನುತ್ತಿದ್ದರು. ॥ ೮೭ ॥ ಎಂದು ಸಿದ್ಧರು ನಾಮಧಾರಕನನ್ನು ಕುರಿತು— ಎಲೈ ಶಿಷ್ಯನೇ, ಶ್ರೀಗುರುಚರಿತ್ರೆಯು ಈ ಪ್ರಕಾರವಾಗಿರುವದು. ಆದಕಾರಣ ಶ್ರೀ ಗುರುಗಳಿಗೆ ಬಹುಮಂದಿ ಶಿಷ್ಯರಾದರು. ॥ ೮೮ ॥ ನಾನಾ ರಾಷ್ಟ್ರದ ಭಕ್ತ ಜನರು ಬಂದು ಏಕಚಿತ್ತದಿಂದಲೂ ಅಂತಃಕರಣದಿಂದೂ ಶ್ರೀ ಗುರುಗಳ ಸೇವೆ ಮಾಡುತ್ತಾರೆ. ಆ ಭಕ್ತ ಜನರಿಗೆ ಶ್ರೀಗುರುಗಳು ಪ್ರಸನ್ನರಾಗುವರು ಎಂದರು. ॥ ೮೯ ॥ ಆಗ ಸರಸ್ವತೀ ಗಂಗಾಧರನು— ಎಲೈ ಸಮಸ್ತ ಭಕ್ತ ಶ್ರೋತೃಗಳೇ, ಕೇಳಿರಿ ಶ್ರೀ ಗುರುಗಳನ್ನು ಭಜಿಸಿರಿ ಭಜಿಸಿರಿ ಎಂದು ಹೇಳಿದನು. ॥ ೯೦ ॥

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀನರಸಿಂಹಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ ಅನ್ನಪೂರ್ತಿಕ ದ್ವಿಜ ಚತುಸಹಸ್ರ ಭೋಜನಂ ನಾಮ ಅಷ್ಟ ತ್ರಿಂಶತ್ತಮೋಽಧ್ಯಾಯಃ ॥ ೩೮ ॥ ಶ್ರೀಗುರು ದತ್ತಾತ್ರೇಯಾರ್ಪಣಮಸ್ತು ॥ ಈ ಗುರುಚರಿತ್ರದ ಅಧ್ಯಾಯದಲ್ಲಿ ಶ್ರೀಗುರುಗಳು ಅನ್ನವನ್ನು ಅಕ್ಷಯ ಮಾಡಿ ೪ ಸಾವಿರ ಮಂದಿಗೆ ಉಣಿಸಿದರೆಂದು ಹೇಳಿದೆ. ॥ ೯೧ ॥

— ಶ್ರೀ ಗುರುದೇವದತ್ತ —

॥ ಇಲ್ಲಿಗೆ ೫ನೇ ದಿವಸದ ಸಪ್ತಾಹ ಪಾರಾಯಣವು ಮುಗಿಯಿತು ॥

— ೩೮ನೇ ಅಧ್ಯಾಯ ಸಮಾಪ್ತ —

# ೩೯ನೇಯ ಅಧ್ಯಾಯ





## ಅರವತ್ತು ವರ್ಷದ ಬಂಜೆಗೆ ಶ್ರೀಗುರುಗಳು ಸಂತಾನ ಕೊಟ್ಟಿದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕನೇ, ಮುಂದೆ ಒಂದು ಅಪೂರ್ವ ಸಂಗತಿಯಾಯಿತು. ಶ್ರೀ ಗುರುಗಳ ಕೃಪೆಯಿಂದ ೬೦ ವರ್ಷದ ಬಂಜೆಗೆ ಪುತ್ರಸಂತಾನವಾಯಿತು. ಆ ಸಂಗತಿಯನ್ನು ಹೇಳುವೆನು ಕೇಳು. ॥ ೧ ॥ ಗಾಣಗಾಪುರದಲ್ಲಿ ಆಪಸ್ತಂಭ ಶಾಖೆಯ ಶೌನಕ ಗೋತ್ರ ಪ್ರವರವುಳ್ಳ ಸೋಮನಾಥನೆಂಬ ಒಬ್ಬ ಬ್ರಾಹ್ಮಣನಿದ್ದನು. ॥ ೨ ॥ ಅವನಿಗೆ "ಗಂಗಾ" ಎಂಬ ಪತಿವ್ರತಾಶಿರೋಮಣಿಯಾದ ಹೆಂಡತಿ ಇದ್ದು, ಅವನು ವೇದಶಾಸ್ತ್ರಗಳನ್ನು ಬಲ್ಲವನಾಗಿ ಅದರಂತೆ ಆಚರಣೆ ಮಾಡುತ್ತ ಇಬ್ಬರೂ ಸಂತೋಷದಿಂದ ಸಂಸಾರ ಮಾಡಿಕೊಂಡಿದ್ದರು. ॥ ೩ ॥ ಆಕೆಯು ಅರವತ್ತು ವರ್ಷದ ಮುದುಕೆಯಾಗಿದ್ದರೂ ಆಕೆಯ ಹೊಟ್ಟೆಯಿಂದ ಒಂದೂ ಸಂತಾನವಾಗಿದ್ದಿಲ್ಲ. ಆದ್ದರಿಂದ ಆ ಊರಲ್ಲಿ ಆಕೆಯು ಬಂಜಿ ಎಂದು ಹೆಸರಾಗಿದ್ದಳು. ॥ ೪ ॥ ಆಕೆಯು ನಿರಂತರ ಭಕ್ತಿಯಿಂದ ಪತಿಯನ್ನು ಸೇವಿಸುತ್ತ ನಿತ್ಯ ತಪ್ಪದೆ ಗುರುದರ್ಶನಕ್ಕೆ ಬರುವ ಒಂದು ನೇಮವನ್ನು ಇಟ್ಟುಕೊಂಡದ್ದಲ್ಲದೆ ॥ ೫ ॥ ಪ್ರತಿನಿತ್ಯ ಆರತಿಯನ್ನು ತಕ್ಕೊಂಡು ಬಂದು ಶ್ರೀಗುರುಗಳಿಗೆ ಆರತಿಯನ್ನು ಮಾಡುತ್ತಿದ್ದಳು. ಹೀಗೆ ಅನೇಕ ದಿವಸಗಳಾಗಿ ಹೋದವು. ॥ ೬ ॥ ಹೀಗೆ ನಡೆದಿರಲು ಒಂದು ದಿವಸ ಶ್ರೀಗುರುಗಳು ಆಕೆಯ ಭಕ್ತಿಗೆ ಮೆಚ್ಚಿ ನಕ್ಕು ಆಕೆಯನ್ನು ಕುರಿತು— ॥ ೭ ॥ ಅವ್ವಾ ಗಂಗಾಬಾಯೀ, ನೀನು ನಿತ್ಯ ನಮ್ಮ ಮಠಕ್ಕೆ ಬಂದು ನಮಗೆ ಆರತಿಯನ್ನು ಮಾಡುತ್ತೀಯಲ್ಲಾ? ಯಾವ ಅಪೇಕ್ಷೆಯಿಂದ ನೀನು ಆರತಿಯನ್ನು ಮಾಡುತ್ತೀ ಎಂಬದನ್ನು ವಿಸ್ತಾರವಾಗಿ ಹೇಳು. ॥ ೮ ॥ ನಿನ್ನ ಮನಸ್ಸಿನಲ್ಲಿರುವ ಅಭೀಷ್ಟವನ್ನು ತೀವ್ರವಾಗಿ ಹೇಳು. ಶ್ರೀ ಹರಿ-ಹರ-ಗುರುಗಳ ಕೃಪೆ

ಯಿಂದ ನಿನ್ನ ಇಷ್ಟಾರ್ಥವು ಸಿದ್ಧಿಯಾಗುವದು ಎಂದು ಹೇಳಿದರು ॥ ೯ ॥ ಆಗ ಆಕೆಯು ಶ್ರೀ ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ವಿನಯದಿಂದ ಕೈಮುಗಿದು— ಸ್ವಾಮೀ, ನಾನು ನಿಷ್ಪುತ್ರಕಳಾಗಿ ಲೋಕನಿಂದೆಗೊಳಗಾದ ಒಬ್ಬ ಪಾಪಿಯು ! ॥ ೧೦ ॥ ಸ್ವಾಮೀ, "ಅಪುತ್ರಸ್ಯ ಗತಿರ್ನಾಸ್ತಿ" ಎಂಬ ಶಾಸ್ತ್ರವಿದೆಯಷ್ಟೇ? ಪುತ್ರರಿಲ್ಲದ ಸ್ತ್ರೀಯರು ಮಹಾ ಪಾಪಿಗಳು ಹಾಗು ಮಹಾ ದೋಷಿಗಳು. ಅವರ ಮುಖವನ್ನು ನೋಡಬಾರದೆಂದು ಜನರು ಅನ್ನುವರು. ಅದರಂತೆ ನನ್ನನ್ನೂ ನಿಂದಿಸುವರು. ॥ ೧೧ ॥ ಸ್ವಾಮೀ, ನನಗೆ ಇಷ್ಟು ವಯಸ್ಸಾದರೂ ಒಂದೂ ಮಕ್ಕಳಾಗಲಿಲ್ಲ ಯಾವಳ ಹೊಟ್ಟೆಯಲ್ಲಿ ಮಕ್ಕಳಾಗಲಿಲ್ಲವೋ ಆಕೆಯ ಜನ್ಮವು ವ್ಯರ್ಥವು. ಅತ್ತೆಯ ಮನೆಯ ೨೧, ತೌರುಮನೆಯ ೨೧ ಕುಲದ ಪಿತೃಗಳು-- ನಮ್ಮ ವಂಶದಲ್ಲೀ ಯಾವವಳಾದರೊಬ್ಬಳು ಯಾವಾಗ ಪುತ್ರನನ್ನು ಪಡೆಯುವಳೋ ಆಗ ನಮಗೆ ಹಿತವಾಗುವದು ಮತ್ತು ಅವನು ನಮ್ಮೆಲ್ಲರನ್ನೂ ಉದ್ಧರಿಸುವನು ಎಂದು ಚಿಂತಿಸುತ್ತ ತಮ್ಮ ವಂಶದಲ್ಲಿ ಪುತ್ರರಾಗುವ ಹಾದಿಯನ್ನು ನೋಡುತ್ತಿರುತ್ತಾರೆ ॥ ೧೨-೧೩ ॥ ಸ್ವಾಮೀ, ಪುತ್ರರಿಲ್ಲದವರ ಮನೆಯು ಸದಾ ಅಪವಿತ್ರವು ಅವರಿಗೆ ಅರಣ್ಯವು ದೂರವೆನಿಸುವದಿಲ್ಲ "ಯಥಾರಣ್ಯಂ ತಥಾ ಗೃಹಂ" ಎಂಬಂತೆ ಅವರ ಮನೆಯೇ ಅರಣ್ಯವಾಗಿ ತೋರುವದು. ಅದರಂತೆ ನನ್ನ ಸ್ಥಿತಿಯೂ ಆಗಿರುವದು. ॥ ೧೪ ॥ ಸ್ವಾಮೀ, ನಾನು ನಿತ್ಯ ನದೀ ಸ್ನಾನಕ್ಕೆ ಹೋದಾಗ ಅಲ್ಲಿ ಸಮಸ್ತ ಸ್ತ್ರೀಯರೂ ಆನಂದದಿಂದ ತಮ್ಮ ತಮ್ಮ ಮಕ್ಕಳನ್ನೆತ್ತಿಕೊಂಡು ಬರುವರು ॥ ೧೫ ॥ ಮತ್ತು ಆ ಮಕ್ಕಳನ್ನು ಬಗಲಲ್ಲಿ ಕೂಡ್ರಿಸಿಕೊಂಡು ಮಲಗಿಸಿಕೊಂಡು ಮುದ್ದುಕೊಟ್ಟು ಪ್ರೀತಿಯಿಂದ ನಾನಾತರದ ಆಟಗಳನ್ನು ಆಡಿಸುವರು ಸ್ವಾಮೀ, ಮಂದಭಾಗ್ಯಳಾದ ನನ್ನಹಣೆಯಲ್ಲಿ ಬ್ರಹ್ಮನು ಹಾಗೆ ಬರೆದಿಲ್ಲ ॥ ೧೬ ॥ ಅಂದಮೇಲೆ ನನಗೆ ಆ ಸುಖವು ಹ್ಯಾಗೆ ಬಂದೀತು ? ನನ್ನ ಹೊಟ್ಟೆ ಸುಡಲಿ ! ಬಗಲಲ್ಲಿ ಕೂಡ್ರಿಸಿಕೊಂಡು ಆಡಿಸಲಿಕ್ಕೆ ನನಗೆ ಮಕ್ಕಳಿಲ್ಲ. ಈ ಜಗತ್ತಿನಲ್ಲಿ ನಾನು ಹುಟ್ಟಿ ನನ್ನ ಜನ್ಮವು ವ್ಯರ್ಥವಾಯಿತು. ನಾನು ಗಂಡಸೂ ಅಲ್ಲ ! ಹೆಂಗಸೂ ಅಲ್ಲ ! ಎಂಬ ಸ್ಥಿತಿಯಾಗಿದೆ ಏನು ಮಾಡಲಿ ? ॥ ೧೭ ॥ ಪುತ್ರ-ಪೌತ್ರರಿದ್ದವರಿಗೆ ಪರಲೋಕದಲ್ಲಿ ಉತ್ತಮ ಗತಿಯಾಗುವದು.

ಮಕ್ಕಳಿಲ್ಲದವರು ಪಿಂಡ ಇಲ್ಲದವರಾಗಿ ಅಧೋಗತಿಯನ್ನು ಹೊಂದುವರು ‖ ೧೮ ‖ ಸ್ವಾಮೀ, ಇನ್ನು ನನಗೆ ಈ ಜನ್ಮವು ಸಾಕು ನನಗೆ ೬೦ ವರ್ಷಗಳಾದವು. ಇನ್ನಂತೂ ಮಕ್ಕಳಾಗುವದಿಲ್ಲ ಈಗ ತಾವು ನನ್ನಮೇಲೆ ಪೂರ್ಣ ಅಂತಃಕರಣ ಮಾಡಿ ಮುಂದಾದರೂ ನನಗೆ ಉತ್ತಮ ಜನ್ಮ ಬರುವಂತೆ ವರವನ್ನು ಕೊಡಿರಿ. ‖ ೧೯ ‖ ಸ್ವಾಮೀ, ನನ್ನ ಮನಸ್ಸಿನಲ್ಲಿ ಪುತ್ರವತಿಯಾಗಬೇಕೆಂದು ಪೂರ್ಣ ವಾಸನಾ ಅದೆ. ಆದಕಾರಣ ಆ ಮುಂದಿನ ಜನ್ಮವಲ್ಲಾದರೂ ನನಗೆ ಪುತ್ರರಾಗುವಂತೆ ವರವನ್ನು ದಯಪಾಲಿಸಿರಿ ಎಂದು ಬೇಡಿಕೊಂಡಳು. ‖ ೨೦ ‖ ಆಕೆಯ ಮಾತು ಕೇಳಿ ಶ್ರೀಗುರುಗಳು ನಕ್ಕು — ಎಲೌ ಪತಿವ್ರತೆಯೇ, ಮುಂದಿನ ಜನ್ಮವನ್ನು ಯಾರು ತಿಳಿಯುವರು ? ಒಂದುವೇಳೆ ಆಗ ನಿನಗೆ ಹಿಂದಿನ ಜನ್ಮದ ಸ್ಮರಣೆಯಾದರೂ ಹ್ಯಾಗೆ ಉಳಿದೀತು ? ‖ ೨೧ ‖ ಗಂಗಾಬಾಯಿ, ನೀನು ನಿತ್ಯವೂ ನೇಮದಿಂದಲೂ ಭಕ್ತಿಯಿಂದಲೂ ಬಂದು ನಮಗೆ ಆರತಿಯನ್ನು ಮಾಡುತ್ತಿರುವದರಿಂದ ನಮಗೆ ಬಹಳ ಸಂತೋಷವಾಗಿದೆ ‖ ೨೨ ‖ ಅದ್ದರಿಂದ ಇನ್ನುಮೇಲೆ ನಿನಗೆ ನಿಶ್ಚಯವಾಗಿ ಇದೇ ಜನ್ಮದಲ್ಲಿಯೇ ಸುಲಕ್ಷಣ ಕನ್ಯಾ-ಪುತ್ರರು ಹುಟ್ಟುವರು. ಈ ವಿಷಯವಾಗಿ ನೀನು ಏನೂ ಚಿಂತೆ ಮಾಡಬೇಡ. ಈ ನನ್ನ ವಚನವು ಸತ್ಯವೆಂದು ತಿಳಿ ಎಂದು ಹೇಳಿದರು ‖ ೨೩ ‖ ಅವರ ಮಾತು ಕೇಳಿ ಆಕೆಯು ಇದು ಉತ್ತಮ ಶಕುನವೆಂದು ತನ್ನ ಶರಗಿಗೆ ಗಂಟು ಹಾಕಿಕೊಂಡು, ಕೈಮುಗಿದು— ಸ್ವಾಮೀ, ಕೃಪಾಸಿಂಧುವೇ, ನನ್ನ ಮಾತನ್ನು ಕೇಳಿರಿ. ‖ ೨೪ ‖ ಈಗ ನನಗೆ ೬೦ ವರುಷಗಳಾಗಿದ್ದು, ನಾನು ರಜಸ್ವಲೆ ಸಹ ಆಗುವದಿಲ್ಲ. ಅಂದಮೇಲೆ ನನಗೆ ಮಕ್ಕಳಾಗುವ ಬಗೆ ಹೇಗೆ? ‖ ೨೫ ‖ ಸ್ವಾಮೀ, ನಾನು ಮಕ್ಕಳ ದೆಶೆಯಿಂದ ಇವತ್ತಿನ ವರೆಗೆ ಭಕ್ತಿಯಿಂದ ನಾನಾತರದ ವ್ರತಗಳನ್ನು, ನಾನಾ ತೀರ್ಥಯಾತ್ರೆಗಳನ್ನೂ, ಅನೇಕ ದೇವರ ಪೂಜೆಯನ್ನೂ ಮಾಡಿದೆನು ‖ ೨೬ ‖ ಮತ್ತು ಅನೇಕ ಜನರು ನನಗೆ— ಅಶ್ವತ್ಥ ಪ್ರದಕ್ಷಿಣೆ ಮಾಡು. ಅದರಿಂದ ನಿನಗೆ ಮಕ್ಕಳಾಗಿ ನಿನ್ನ ಅಪೇಕ್ಷೆಯು ಪೂರ್ಣವಾಗುವದು ಎಂದು ಹೇಳಿದರು. ‖ ೨೭ ‖ ಅವರಂತೆ ನಾನು ನನಗೆ ಪುತ್ರನು ಹುಟ್ಟ್ಯಾನು ಎಂದು ಭರವಸೆ ಹಿಡಿದು ಬಹು ದಿವಸಗಳಿಂದ ಅಶ್ವತ್ಥಪೂಜಾ, ಪ್ರದಕ್ಷಿಣಾ ಮುಂತಾದ ಸೇವಾ ಮಾಡುವದರೊಳಗೆ

ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ

ನನ್ನ ಜನ್ಮವು ಹೋಯಿತು. ॥ ೨೮ ॥ ಸ್ವಾಮೀ, ೬೦ ವರುಷಗಳ ವರೆಗೆ ಇದೇ ರೀತಿಯಿಂದ ಅತಿಶಯ ಕಷ್ಟ ಬಟ್ಟೆನು. ಈ ಜನ್ಮದಲ್ಲಂತೂ ಮಕ್ಕಳಾಗುವದಿಲ್ಲವೆಂದು ನಿಶ್ಚಯ ಮಾಡಿ ಮುಂದಿನ ಜನ್ಮದಲ್ಲಾದರೂ ಮಕ್ಕಳಾಗಲೆಂಬ ಇಚ್ಛೆಯಿಂದ ನಾನು ಇವತ್ತಿನವರೆಗೂ ಅಶ್ವತ್ಥ ಪ್ರದಕ್ಷಿಣಾ ಮುಂತಾದ ಸೇವಾ ಮಾಡುತ್ತಿರುವೆನು ॥ ೨೯-೩೦ ॥ ಸ್ವಾಮೀ, ತಾವು ನನಗೆ ಪ್ರಸನ್ನರಾಗಿ ಇದೇ ಜನ್ಮದಲ್ಲಿಯೇ ಮಕ್ಕಳಾಗುವವವೆಂದು ಈಗ ವರವನ್ನು ಕೊಟ್ಟಿರಿ. ನರಹರಿಯೇ ತಮ್ಮ ಮಾತು ಎಂದೂ ಸುಳ್ಳಾಗುವದಿಲ್ಲ ॥ ೩೧ ॥ ತಾವು ವರ ಕೊಟ್ಟಕೂಡಲೆ ನನ್ನ ಮನಸ್ಸಿನಲ್ಲಿ ಮಕ್ಕಳಾಗುವರೆಂಬ ನಿಶ್ಚಯವಾಯಿತು ಆದರೆ ಸ್ವಾಮೀ ಗುರುಗಳೇ, ನನಗೆ ಹಾಸ್ಯ ಮಾತ್ರ ಮಾಡಬೇಡಿರಿ ತಮ್ಮ ಮಾತು ಉತ್ತಮ ಶಕುನವೆಂದು ನಾನು ಆ ಕೂಡಲೆ ನನ್ನ ಶರಗಿಗೆ ಗಂಟು ಹಾಕಿಕೊಂಡೆನು ॥ ೩೨ ॥ ನನಗೆ ಮುಂದಿನ ಜನ್ಮದಲ್ಲಾದರೂ ಮಕ್ಕಳಾಗಬೇಕೆಂಬ ಇಚ್ಛೆಯಿಂದ ಇನ್ನೂ ಅಶ್ವತ್ಥಸೇವಾ ಮಾಡುತ್ತಿರುವೆನು. ಸ್ವಾಮೀ, ತಾವು ಇದೇ ಜನ್ಮದಲ್ಲಿಯೇ ಕನ್ಯಾ-ಪುತ್ರರು ಆಗುವರೆಂದು ವರವನ್ನು ಕೊಟ್ಟಿರಿ. ॥ ೩೩ ॥ ಮಕ್ಕಳ ದೆಸೆಯಿಂದ ಇವತ್ತಿನ ವರೆಗೆ ಅಶ್ವತ್ಥಸೇವಾ ಮಾಡಿ ಬಹಳ ಕಷ್ಟಬಟ್ಟೆನು. ಆ ಅಶ್ವತ್ಥನಾರಾಯಣನು ನನಗೇನು ಕೊಟ್ಟನು? ಎಲ್ಲಾ ವ್ಯರ್ಥವಾಯಿತು ಅಶ್ವತ್ಥವನ್ನು ಪೂಜಿಸುವದು ಮೂರ್ಖತನವು! ದೈವದಲ್ಲಿಲ್ಲದ್ದನ್ನು ಅವನಾದರೂ ಎಲ್ಲಿಂದ ಕೊಡುವನು? ಎಂದು ಅಂದಳು. ॥ ೩೪ ॥ ಆಕೆಯ ಮಾತು ಕೇಳಿ ಶ್ರೀಗುರುಗಳು ನಕ್ಕು— ಗಂಗಾಬಾಯಿ, ಅಶ್ವತ್ಥ ಸೇವೆಯಿಂದ ಮಹಾ ಪುಣ್ಯವುಂಟು ಆ ಸೇವೆಯು ಎಂದೂ ವ್ಯರ್ಥವಾಗುವದಿಲ್ಲ ॥ ೩೫ ॥ ಅಶ್ವತ್ಥವನ್ನು ನಿಂದಿಸಬೇಡ ಅದರ ಸೇವೆಯಿಂದ ಅನಂತ ಪುಣ್ಯ ಬರುವದು ನಾನೇ ಆ ಅಶ್ವತ್ಥನೆಂದು ತಿಳಿದು ಸೇವಾ ಮಾಡು. ಆದರಿಂದ ನಿನಗೆ ಮಕ್ಕಳಾಗುವರು. ॥ ೩೬ ॥ ಎಲೌ ಸ್ತ್ರೀಯೇ, ಈಗ ನೀನು ನನ್ನ ಮಾತು ಕೇಳಿ ಭೀಮಾ-ಅಮರಜಾ ಸಂಗಮಕ್ಕೆ ಹೋಗು ॥ ೩೭ ॥ ಅಲ್ಲಿರುವ ಗಹನವಾದ ಅಶ್ವತ್ಥವನ್ನೂ ಅದರ ಬುಡದಲ್ಲಿ ಅನುಷ್ಠಾನ ಮಾಡುತ್ತ ಕೂತ ನನ್ನನ್ನು ಏಕಮನಸಿನಿಂದ ಪೂಜಿಸಿ ಸೇವಾ ಮಾಡು. ॥ ೩೮ ॥ ಅಂದರೆ

ನಿನಗೆ ಇದೇ ಜನ್ಮದಲ್ಲಿಯೇ ನಿಶ್ಚಯವಾಗಿ ಮಕ್ಕಳಾಗುವರು. ನಿನಗೆ ಅಶ್ವತ್ಥ ನಾರಾಯಣನ ಮಹಿಮೆಯನ್ನು ಪೂರ್ಣವಾಗಿ ಹೇಳುವೆನು ಕೇಳು. ಅಲ್ಲಿ ನಾನು ವಾಸವಾಗಿರುವೆನು, ಎಂದು ಅಂದರು. ‖ ೩೯ ‖ ಈ ಪ್ರಕಾರ ವಾದ ಶ್ರೀಗುರುಗಳ ಮಾತು ಕೇಳಿ ಆಕೆಯು ವಿನಯದಿಂದ ಕೈ ಮುಗಿದು— ಸ್ವಾಮೀ, ನನಗೆ ಅಶ್ವತ್ಥ ನಾರಾಯಣನ ಸೇವೆಯ ಕ್ರಮವನ್ನು ಒಳ್ಳೇ ವಿಸ್ತಾರವಾಗಿ ಹೇಳಿರಿ. ‖ ೪೦ ‖ ಮತ್ತು ಅದರ ಮಹತ್ವವು ಎಷ್ಟಿರುತ್ತ ದೆಂಬದನ್ನು ಸ್ಪಷ್ಟವಾಗಿ ಹೇಳಿರಿ. ಅದನ್ನಾದರೂ ಕೇಳಿ ನನ್ನ ಮನಸ್ಸು ಸ್ಥಿರವಾಗಿ ನಾನು ಭಕ್ತಿಯಿಂದ ಸೇವಾ ಮಾಡುವೆನು ಎಂದಳು. ‖ ೪೧ ‖ ಆಗ ಶ್ರೀ ಗುರುಗಳು— ಗಂಗಾಬಾಯೀ, ನೀನು ಅಶ್ವತ್ಥದ ಮಹಿಮೆಯನ್ನು ತಿಳಿಯದೆ ಸುಮ್ಮನೆ ಅದನ್ನು ನಿಂದಿಸುತ್ತೀ, ಅದರ ಮಹಿಮೆಯು ಹೇಳಲಿಕ್ಕೆ ಅಪಾರವಾಗಿರುವದು ಆ ವೃಕ್ಷದಲ್ಲಿ ಸರ್ವ ದೇವತೆಗಳೂ ಇರುವರು. ‖ ೪೨ ‖ ಅಶ್ವತ್ಥದ ಮಹಿಮೆಯು ಬ್ರಹ್ಮಾಂಡ ಪುರಾಣದಲ್ಲಿ ವಿಶದವಾಗಿ ಹೇಳಿರುತ್ತದೆ. ಅದನ್ನು ಬ್ರಹ್ಮನು ನಾರದನಿಗೆ ವಿಸ್ತಾರವಾಗಿ ಹೇಳಿರುವನು. ಅದನ್ನೇ ನಾನು ನಿನಗೆ ಹೇಳು ವೆನು ಕೇಳು ‖ ೪೩ ‖ ಒಂದಾನೊಂದು ದಿವಸ ಬ್ರಹ್ಮಪುತ್ರನೂ ತ್ರಿಲೋಕಸಂಚಾರಿಯೂ ಆದ ನಾರದನು ಅಶ್ವತ್ಥ ವೃತದ ಬಗ್ಗೆ ಬ್ರಹ್ಮನನ್ನು ಕೇಳಿ ಸಂಚಾರ ಮಾಡುತ್ತ ಒಂದು ಋಷ್ಯಾಶ್ರಮಕ್ಕೆ ಬಂದನು. ‖ ೪೪ ‖ ಆಗ ಅಲ್ಲಿಯ ಋಷಿಗಳು ನಾರದನನ್ನು ಕಂಡು ಅರ್ಘ್ಯಪಾದ್ಯಾದಿ ಷೋಡಶೋಪಚಾರಗಳಿಂದ ಪೂಜಿಸಿ, ‖ ೪೫ ‖ —ಸ್ವಾಮೀ ನಾರದ ಮುನಿಗಳೇ, ನಿಮಗೆ ನಮ್ಮದೊಂದು ವಿನಂತಿ. ಏನಂದರೆ ಅಶ್ವತ್ಥದ ಮಹಿಮೆಯು ಹ್ಯಾಗಿರುತ್ತದೆಂಬದನ್ನು ನಮಗೆ ವಿಸ್ತಾರವಾಗಿ ಹೇಳಬೇಕು ಎಂದರು ‖ ೪೬ ‖ ಆಗ ನಾರದರು— ಎಲೈ ಋಷಿ ಗಳೇ ಕೇಳಿರಿ ನಾನು ಸಂಚಾರ ಮಾಡುತ್ತ ಇವತ್ತೇ ಬ್ರಹ್ಮಲೋಕಕ್ಕೆ ಹೋಗಿದ್ದೆನು. ‖ ೪೭ ‖ ಅಲ್ಲಿ ನಾನು ಸಹಜವಾಗಿ ಬ್ರಹ್ಮನನ್ನು ಕುರಿತು— ಸ್ವಾಮೀ, ಬ್ರಹ್ಮದೇವನೇ. ಸಮುಸ್ತ ಜನರು ಅಶ್ವತ್ಥವು ವಿಷ್ಣು ಸ್ವರೂಪವೆಂದು ಪೂಜಿಸುತ್ತಿರುವರು. ಅದರ ಮಹಿಮೆಯು ಯಾವ ಪ್ರಕಾರವಾಗಿರುವದು ? ‖ ೪೮ ಅದು ವಿಷ್ಣುಸ್ವರೂಪ ವಾಗಿದ್ದರೆ ಅದರ ಸೇವೆಯ ಕ್ರಮವನ್ನೂ ಫಲವನ್ನೂ ದಯಮಾಡಿ ನನಗೆ ಹೇಳಬೇಕೆಂದು ಕೇಳಿದೆನು. ‖ ೪೯ ‖

ಆಗ ಬ್ರಹ್ಮನು— ಅದರ ಮಹಿಮೆಯನ್ನೂ ಸೇವೆಯ ಕ್ರಮವನ್ನೂ ಹೇಳಿದನು. ಅದನ್ನು ಹೇಳುವೆನು ಕೇಳಿರಿ. ಬ್ರಹ್ಮನು— ಆ ಅಶ್ವತ್ಥದ ಬೊಡ್ಡೆಯಲ್ಲಿ ನಾನಿರುವೆನು ಮಧ್ಯದಲ್ಲಿ ವಿಷ್ಣುವೂ, ತುದಿಯಲ್ಲಿ ಶಂಕರನೂ ಇರುವರು. ॥ ೫೦ ॥ ಇನ್ನು ಶಾಖಾ ಮತ್ತು ಪಲ್ಲವಗಳ ಅಧಿಷ್ಠಾನವನ್ನು ಕೇಳು. ದಕ್ಷಿಣ ದಿಕ್ಕಿನ ಶಾಖೆಯಲ್ಲಿ ಶೂಲಪಾಣಿಯು ಇರುವನು. ಪಶ್ಚಿಮ ಶಾಖೆಯಲ್ಲಿ ವಿಷ್ಣುವು ಇರುವನು. ನಾನು ಉತ್ತರ ಶಾಖೆಯಲ್ಲಿರುವೆನು. ॥ ೫೧ ॥ ಪೂರ್ವ ಶಾಖೆಗಳಲ್ಲಿ ಇಂದ್ರಾದಿ ದೇವತೆಗಳಿರುವರು. ಆದಿತ್ಯದೇವನು ಸದಾ ಯಾವತ್ತು ಶಾಖೆಗಳಲ್ಲಿರುತ್ತಾನೆ. ॥ ೫೨ ॥ ಗೋ-ಬ್ರಾಹ್ಮಣರೂ, ಸಮಸ್ತ ಋಷಿಗಳೂ, ವೇದಾದಿ ಯಜ್ಞಗಳೂ ಮೂಲ ಮತ್ತು ಅಂಕುರಗಳಲ್ಲಿ ನಿರಂತರವಾಗಿರುವರು. ॥ ೫೩ ॥ ಮತ್ತು ಸಮಸ್ತ ನದಿ-ತೀರ್ಥಗಳೂ ಉಪ್ಪು ನೀರಿನ ಮೊದಲಾದ ಸಪ್ತಸಮುದ್ರಗಳೂ ನಿರಂತರವಾಗಿ ಪೂರ್ವ ಶಾಖೆಗಳಲ್ಲಿರುವವು. ಎಲೈ ಋಷಿಗಳಿರಾ ಈ ಪ್ರಕಾರ ಅಶ್ವತ್ಥ ವೃಕ್ಷವದೆ. ॥ ೫೪ ॥ ಅಕಾರವು ಮೂಲ ಸ್ಥಾನವು. ಉಕಾರವು ಬೊಡ್ಡಿ-ಹರಿ-ಟೊಂಗೆಗಳು. ಮಕಾರವು ಫಲ-ಪುಷ್ಪಗಳು. ಈ ಪ್ರಕಾರ ಅಶ್ವತ್ಥವು ಓಂಕಾರಸ್ವರೂಪವಾಗಿರುವದು. ॥ ೫೫ ॥ ಅದರಲ್ಲಿ ಅಷ್ಟವಸುಗಳೂ, ಏಕಾದಶ ರುದ್ರರೂ ಇರುವರು ತ್ರೈಮೂರ್ತಿಗಳು ಎಲ್ಲಿ ಇರುವರೊ ಅಲ್ಲಿ ಸರ್ವ ದೇವತೆಗಳಿರುವರು ॥ ೫೬ ॥ ಈ ಪ್ರಕಾರವಾಗಿರುವ ಅಶ್ವತ್ಥನಾರಾಯಣನ ಮಹಿಮೆಯನ್ನು ವರ್ಣಿಸಲಿಕ್ಕೆ ಯಾರು ಶಕ್ತರಾದಾರು ? ಆದ್ದರಿಂದ ಅದಕ್ಕೆ ಕಲ್ಪವೃಕ್ಷವೆಂದು ಹೆಸರು ಬಂದದೆ, ಎಂದು ಬ್ರಹ್ಮನು ನಾರದನಿಗೆ ಹೇಳಿದನು ಎಲೌ ಸ್ತ್ರೀಯೇ ಮುಂದೆ ಕೇಳು ॥ ೫೭ ॥ ಇತ್ತ ನಾರದನು ಮತ್ತೆ ಎಲೈ ಋಷಿಗಳೇ, ಯಾವ ಗಿಡದಲ್ಲಿ ತ್ರೈಮೂರ್ತಿಗಳು ವಾಸವಾಗಿರುವರೋ ಅವರ ಮಹಿಮೆಯನ್ನು ಎಷ್ಟು ಹೇಳಲಿ ? ಅದನ್ನು ಭಕ್ತಿಯಿಂದ ಸೇವಿಸಿದರೆ ತೀವ್ರವಾಗಿ ಕಾರ್ಯಸಿದ್ಧಿಯಾಗುವದು ಎಂದು ಬ್ರಹ್ಮನು ಹೇಳಿದನು ಎಂದು ಅಂದನು. ॥ ೫೮ ॥ ಆಗ ಋಷಿಗಳು ನಾರದನನ್ನು ಕುರಿತು ವಿನಯದಿಂದ— ಸ್ವಾಮೀ, ನಾರದರೇ ಅಶ್ವತ್ಥ ಸೇವಾ - ಪೂಜಾ ಹ್ಯಾಗೆ ಮಾಡಬೇಕು ಹೇಳಿರಿ. ॥ ೫೯ ॥ ಹಿಂದಕ್ಕೆ ನಾವು ಒಂದು ದಿವಸ ಅಥರ್ವಣ ಋಷಿಯನ್ನು ಕೇಳಿದ್ದೆವು. ಆಗ

ಅವರು ಒಂದು ರೀತಿಯಾಗಿ ಹೇಳಿದ್ದರು. || ೬೦ || ಸ್ವಾಮೀ ನಾರದರೇ, ನೀವು ಸರ್ವ ಧರ್ಮಗಳನ್ನು ಬಲ್ಲವರೂ ಬ್ರಹ್ಮರ್ಷಿಗಳೂ ಆದ್ದರಿಂದ ಅಶ್ವತ್ಥ ಸೇವೆಯ ಹಾಗು ಪೂಜೆಯ ವಿಧಾನವನ್ನೂ ನಮಗೆ ವಿಸ್ತಾರವಾಗಿ ಹೇಳಬೇಕು ಎಂದರು || ೬೧ || ಆಗ ನಾರದನು— ಎಲೈ ಋಷಿಗಳೇ, ಬ್ರಹ್ಮನು ನನಗೆ ಯೋಗ್ಯರೀತಿಯಾಗಿ ಹೇಳಿದ ಅಶ್ವತ್ಥ ಪೂಜಾ ಹಾಗು ಸೇವೆಯ ವಿಧಾನವನ್ನು ನಿಮಗೆ ಹೇಳುವೆನು ಏಕಚಿತ್ತದಿಂದ ಕೇಳಿರಿ. || ೬೨ ||

ಚೈತ್ರ-ಆಷಾಢ-ಪುಷ್ಯ ಮಾಸಗಳಲ್ಲಿಯೂ ಗುರು-ಶುಕ್ರ ಅಸ್ತಕಾಲಗಳಲ್ಲಿಯೂ ಚಂದ್ರಬಲ ಇಲ್ಲದಾಗಲೂ ಅಶ್ವತ್ಥ ಸೇವೆಗೆ ಆರಂಭ ಮಾಡಬಾರದು || ೬೩ || ಉಳಿದ ಮಾಸಗಳಲ್ಲಿ ಚಂದ್ರಬಲ, ಉತ್ತಮ ವಾರ, ತಿಥಿ, ನಕ್ಷತ್ರ, ಯೋಗ, ಕರಣ ಮೊದಲಾದವುಗಳನ್ನು ನೋಡಿ ಆ ದಿವಸ ಪೂಜಾ ಮಾಡುವ ತನಕ ಉಪವಾಸದಿಂದಿದ್ದು, ಶುಚಿರ್ಭೂತರಾಗಿ ಅಶ್ವತ್ಥ ಸೇವೆಗೆ ಆರಂಭ ಮಾಡಬೇಕು. || ೬೪ || ರವಿ-ಸೋಮ-ಶುಕ್ರವಾರಗಳಲ್ಲಿ ಮತ್ತು ಸಂಕ್ರಾಂತಿ ಕಾಲಗಳಲ್ಲಿ ಸರ್ವಥಾ ಅಶ್ವತ್ಥವನ್ನು ಮುಟ್ಟಬಾರದು. || ೬೫ || ಮತ್ತು ಸಂಧಿರಾತ್ರಿ, ರಿಕ್ತತಿಥಿ, ಪರ್ವಣಿ, ವ್ಯತೀಪಾತ, ದುರ್ದಿನ, ವೈಧೃತಿ, ಅಪರಾಹ್ಣಕಾಲಗಳಲ್ಲಿಯೂ ಸಹ ಅಶ್ವತ್ಥವನ್ನು ಮುಟ್ಟಬಾರದು. || ೬೬ || ಅಶ್ವತ್ಥಸೇವಾ ಆರಂಭ ಮಾಡುವ ದಿವಸ ಪ್ರಾತಃಕಾಲಕ್ಕೆ ಎದ್ದು ಸುಳ್ಳು ಮಾತು, ಜೂಜಿನ ಮಾತು, ನಿಂದೆಯ ಮಾತು, ಪಾಖಂಡ ವಾದದ ಮಾತು ಆಡದೆ ಹರ್ಷದಿಂದಲೂ ಮೌನದಿಂದಲೂ ಇರಬೇಕು || ೬೭ || ಆಮೇಲೆ ಸಚೈಲ ಸ್ನಾನ ಮಾಡಿ ಮಡಿಯ ನಿರ್ಮಲ ವಸ್ತ್ರವನ್ನುಟ್ಟು, ಗಂಡಸರು ಹಣೆಗೆ ಗಂಧವನ್ನು ಹಚ್ಚಿಕೊಂಡು, ಸುವಾಸಿನಿ ಸ್ತ್ರೀಯರು ಅರಿಷಿಣ-ಕುಂಕುಮಾದಿಗಳನ್ನು ಹಚ್ಚಿಕೊಂಡು ತಮ್ಮ ಯೋಗ್ಯತಾನುಸಾರ ಅಲಂಕೃತರಾಗಿ ಆ ವೃಕ್ಷದ ಸುತ್ತ ಗೋಮಯದಿಂದ ಸಾರಿಸಿ, ರಂಗೋಲಿಯಿಂದ ಶ್ರೀಕಾರ, ಶಂಖ, ಪದ್ಮಗಳನ್ನು ಹಾಕಿ, ಅವುಗಳಲ್ಲಿ ಪಂಚವರ್ಣದ ಪುಡಿಗಳನ್ನು ತುಂಬಿ, ಆಮೇಲೆ ಗಂಗಾ-ಯಮುನಾ ಎಂಬ ಎರಡು ಕಲಶಗಳಲ್ಲಿ ನೀರು ತುಂಬಿ ತಂದು ಆ ಪದ್ಮಗಳ ಮೇಲೆ ಇಡಬೇಕು. || ೬೮ || ಮತ್ತು ಪೂಜೆಯ ಹಾಗೂ ಆಚಮ್ಯೆಯ ಸಲುವಾಗಿ ಬೇರೆ ನೀರನ್ನು ತಂದಿರ

ಬೇಕು. ಆ ಮೇಲೆ ಪುಣ್ಯಾಹವಾಚನ ಪೂರ್ವಕವಾಗಿ, ಸಂಕಲ್ಪ ಮಾಡಿ ಮನಸ್ಸಿನಲ್ಲಿರುವ ಕಾಮ್ಯವನ್ನು ಉಚ್ಚರಿಸಿ ಆ ಕಲಶಗಳನ್ನು ಷೋಡಶೋಪಚಾರವಿಧಿಯಿಂದ ಪೂಜಿಸಬೇಕು || ೧೯ || ಆಮೇಲೆ ಆ ಗಂಗಾ–ಯಮುನಾ ಕಲಶಗಳನ್ನು ತಕ್ಕೊಂಡು ಅಶ್ವತ್ಥಕ್ಕೆ ಸ್ನಾನ ಮಾಡಿಸಬೇಕು ಆ ಕಲಶಗಳಲ್ಲಿ ಮತ್ತೆ ೧ ನಾರೆ ನೀರು ತುಂಬಿ ೧ ಸಾರೆ ಸ್ನಾನ ಮಾಡಿಸಬೇಕು ಈ ಪ್ರಕಾರ ಅಶ್ವತ್ಥಕ್ಕೆ ೭ ಸಾರೆ ಸ್ನಾನ ಮಾಡಿಸಬೇಕು || ೨೦ || ಆ ಮೇಲೆ ಪೂಜಾ ಮಾಡುವವರು ಮತ್ತೊಮ್ಮೆ ಸ್ನಾನ ಮಾಡಿ ಆ ಅಶ್ವತ್ಥದಲ್ಲಿ ತ್ರೈಮೂರ್ತಿ ಮೊದಲಾದ ದೇವತೆಗಳನ್ನು ಆವಾಹಿಸಿ, ಪುರುಷ ಸೂಕ್ತದಿಂದ ಅಶ್ವತ್ಥಕ್ಕೆ ಅಭಿಷೇಕ ಮಾಡಿ ಷೋಡಶೋಪಚಾರ ವಿಧಿಯಿಂದ ಪೂಜಿಸಬೇಕು || ೨೧ || ಆ ಮೇಲೆ ವಿಷ್ಣು ಮೂರ್ತಿಯನ್ನು ಧ್ಯಾನಿಸಬೇಕು. ಹ್ಯಾಗಂದರೆ— ಅಷ್ಟಭುಜಗಳುಳ್ಳಂದ, ಆ ಅಷ್ಟಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮ, ಖಡ್ಗ, ಖೇಟಕ, ಧನುರ್ಬಾಣಗಳನ್ನು ಧರಿಸಿವಂಥ, ವರದ ಹಸ್ತವುಳ್ಳಂಥ, ಪೀತಾಂಬರಧಾರಿಯಾದಂಥ, ಸದಾ ಲಕ್ಷ್ಮೀಸಹಿತನಾಗಿರುವಂಥ ವಿಷ್ಣುವೇ ಎಂದು ಧ್ಯಾನಿಸಿ ಷೋಡಶೋಪಚಾರದಿಂದ ಆ ವೃಕ್ಷವನ್ನು ಪೂಜಿಸಬೇಕು || ೨೨–೨೩–೨೪ || ಅಶ್ವತ್ಥವು ನಿಶ್ಚಯವಾಗಿ ತ್ರೈಮೂರ್ತಿಗಳ ಸ್ಥಾನವಾಗಿರುತ್ತದೆ ಶಿವಭಕ್ತಿಯ ಹೊರತು ಸ್ಥಳವಿಲ್ಲ ಆದ್ದರಿಂದ ಅದರಲ್ಲಿ ಸಮಸ್ತ ದೇವತೆಗಳನ್ನು ಆವಾಹಿಸಿ ವಿಧಿಪ್ರಕಾರ ಪೂಜಿಸಬೇಕು || ೨೫ || ಆ ಮೇಲೆ ಆ ವೃಕ್ಷಕ್ಕೆ ವಸ್ತ್ರದಿಂದಾಗಲೀ ಧಾರದಿಂದಾಗಲೀ ಸುತ್ತಬೇಕು. ಆ ಮೇಲೆ ಮತ್ತೆ ಸಂಕಲ್ಪ ಮಾಡಿ ಕಾಮ್ಯವನ್ನು ಉಚ್ಚರಿಸಿ ಪ್ರದಕ್ಷಿಣೆ ಹಾಕಲಿಕ್ಕೆ ಪ್ರಾರಂಭಮಾಡಬೇಕು || ೨೬ || ಆ ಪ್ರದಕ್ಷಿಣೆ ಹಾಕುವಮುಂದೆ ತ್ರಿಕರ್ಣಪೂರ್ವಕ ಭಕ್ತಿಯಿಂದಲೂ ಹರ್ಷದಿಂದಲೂ ಪುರುಷ ಸೂಕ್ತವನ್ನು ಅನ್ನುತ್ತಲೂ ಅಥವಾ ವಿಷ್ಣು ಸಹಸ್ರ ನಾಮಗಳನ್ನು ಅನ್ನುತ್ತಲೂ ಇಲ್ಲವೆ ಮೌನದಿಂದಲೂ ಹಾಗು ಪೂರ್ಣ ಗರ್ಭಿಣಿ ಸ್ತ್ರೀಯು ಪೂರ್ಣ ತುಂಬಿದ ಕೊಡವನ್ನು ಹೊತ್ತುಕೊಂಡು ಎಷ್ಟು ಮೆಲ್ಲಗೆ ನಡೆಯುತ್ತಾಳೋ ಅಷ್ಟು ಮೆಲ್ಲಗೆ ನಡೆಯುತ್ತಲೂ ಶುದ್ಧ ಭಾವದಿಂದಲೂ ಪ್ರದಕ್ಷಿಣೆ ಹಾಕಬೇಕು. || ೨೭–೨೮–೨೯ || ಈ ಪ್ರದಕ್ಷಿಣೆಯ ಒಂದೊಂದು ಹೆಜ್ಜೆಗೆ ಅಶ್ವಮೇಧ ಮಾಡಿದ ಪುಣ್ಯದಷ್ಟು

ಫಲ ಬರುವದು. ಒಂದು ಪ್ರದಕ್ಷಿಣೆ ಮುಗಿದಬಳಿಕ ನಡುವೆ ಒಂದು ನಮಸ್ಕಾರ ಮಾಡಬೇಕು. ॥ ೮೦ ॥
ದಿನಾಲು ಶಕ್ತಿ ಇದ್ದಷ್ಟು ಪ್ರದಕ್ಷಿಣೆ ಹಾಕುವ ನೇಮವನ್ನಿಟ್ಟುಕೊಳ್ಳಬೇಕು. ಮೊದಲಿನ ದಿನ ಮಾತ್ರ ಈ ಮೊದಲು ಹೇಳಿದ ವಿಧಿಯಿಂದ ಅಶ್ವತ್ಥವನ್ನು ಪೂಜಿಸಿ ಪ್ರದಕ್ಷಿಣೆ ಹಾಕಬೇಕು. ಉಳಿದ ದಿವಸ ಕೇವಲ ಷೋಡಶೋಪಚಾರ ದಿಂದ ಪೂಜಿಸಿ ಪ್ರದಕ್ಷಿಣಾ ಹಾಕಬೇಕು ಅದರ ಮಹಿಮೆಯನ್ನು ಹೇಳುತ್ತೇನೆ ಕೇಳಿರಿ ಎಂದು ನಾರದನು ಋಷಿ ಗಳಿಗೆ ಹೇಳುತ್ತಾನೆ. ಅವ್ವಾ ಗಂಗಾಬಾಯಿ ನೀನೂ ಚಿತ್ತಗೊಟ್ಟು ಕೇಳು. ನಾರದನು— ಎಲೈ ಋಷಿಗಳೇ ಬ್ರಹ್ಮಹತ್ಯಾ ಪಾತಕಕ್ಕೆ ಪ್ರಾಯಶ್ಚಿತ್ತವಿಲ್ಲದಿದ್ದರೂ ಅಶ್ವತ್ಥಕ್ಕೆ ಭಕ್ತಿಯಿಂದ ವಿಧಿಪ್ರಕಾರ ಎರಡು ಲಕ್ಷ ಪ್ರದಕ್ಷಿಣೆ ಹಾಕಿದರೆ ಆ ಬ್ರಹ್ಮಹತ್ಯಾ ಪಾಪವು ನಾಶವಾಗುವದು. ॥ ೮೧ ॥ ತ್ರೈಮೂರ್ತಿಗಳು ವಾಸಮಾಡಿದಂಥ ಸ್ಥಳದ ಪ್ರದಕ್ಷಿಣೆಯ ಫಲವನ್ನು ಎಷ್ಟು ಹೇಳಲಿ ? ಗುರುತಲ್ಪ ಗಮನಾದಿ ಸಮಸ್ತ ಪಾಪಗಳೂ ನಾಶವಾಗುವವು. ॥೮೨॥
ಮತ್ತು ನಾನಾತರದ ರೋಗಗಳೂ ದೋಷಗಳೂ ನಿಃಶೇಷವಾಗಿ ಪರಿಹಾರವಾಗುವವು. ಹಾಗು ವಿಧಿಪ್ರಕಾರ ಉತ್ತಮ ರೀತಿಯಿಂದ ಎರಡು ಲಕ್ಷ ಪ್ರದಕ್ಷಿಣೆ ಹಾಕಿದರೆ ಕೋಟಿಗಟ್ಲೆ ಸಾಲವಿದ್ದರೂ ತೀರುವದು. ॥ ೮೩ ॥
ವಿಧಿಪ್ರಕಾರ ಒಂದು ಸಹಸ್ರ ಪ್ರದಕ್ಷಿಣೆ ಹಾಕಿದರೆ ಅದರ ಪುಣ್ಯದಿಂದ ಜನನ, ಮರಣ, ಮುಪ್ಪು, ರೋಗ, ಸಂಸಾರ ತಾಪ, ಭಯ ಮುಂತಾದವುಗಳು ನಾಶವಾಗುವವು ಮತ್ತು ಶನಿ ಮುಂತಾದ ಗ್ರಹಗಳ ಪೀಡೆಯಾಗುವದಿಲ್ಲ. ॥೮೪॥
ಮಕ್ಕಳ ಅಪೇಕ್ಷೆಯುಳ್ಳವರು ತ್ರಿಕರಣ ಪೂರ್ವಕ ಭಕ್ತಿಯಿಂದ ವಿಧಿಪ್ರಕಾರ ಪ್ರದಕ್ಷಿಣಾ ಹಾಕಿದರೆ ಅವರು ಖಂಡಿತ ವಾಗಿಯೂ ತೀವ್ರವಾಗಿಯೂ ಮಕ್ಕಳನ್ನು ಪಡೆಯುವರು. ॥ ೮೫ ॥ ಮತ್ತು ಅವರಿಗೆ ಅಶ್ವತ್ಥನು ಚತುರ್ವಿದ ಪುರುಷಾರ್ಥಗಳನ್ನು ಕೊಡುವನು. ಪುತ್ರ ಕಾಮ್ಯವು ತೀವ್ರವಾಗುವದು. ಎಲೈ ಋಷಿಗಳೇ ಇದರಲ್ಲಿ ನೀವು ಏನೂ ಸಂಶಯ ಮಾಡಬೇಡಿರಿ. ॥ ೮೬ ॥ ಶನಿವಾರ ದಿವಸ ಅಶ್ವತ್ಥವನ್ನು ಹಿಡಿದು ಮಹಾ ಮೃತ್ಯುಂಜಯ ಜಪ ಮಾಡಿದರೆ ಅದರಿಂದ ಆ ಮನುಷ್ಯರು ಕಾಲಮೃತ್ಯುವನ್ನು ಗೆದ್ದು ಸುಖಿಯಾಗುವರು. ॥ ೮೭ ॥ ಆವನಿಗೆ ಅಪ

ಮೃತ್ಯುವಿನ ಭಯವಂತೂ ಇಲ್ಲವೇಇಲ್ಲ. ಆವನು ನಿಶ್ಚಯವಾಗಿ ಪೂರ್ಣಾಯುಷಿಯಾಗುವನು. ಆವನಿಗೆ ಶನಿ ಪೀಡೆಯಾಗುವದಿಲ್ಲ. ಆಗ ಅಶ್ವತ್ಥನನ್ನು ಪ್ರಾರ್ಥಿಸುತ್ತಿರಬೇಕು. ॥ ೮೮ ॥ ಹ್ಯಾಗಂದರೆ—

**ಶ್ಲೋಕ** ॥ ಮೂಲತೋ ಬ್ರಹ್ಮರೂಪಾಯ । ಮಧ್ಯತೋ ವಿಷ್ಣುರೂಪಿಣೇ ॥
ಅಗ್ರತೋ ಶಿವರೂಪಾಯ । ವೃಕ್ಷರಾಜಯತೇನಮಃ ॥ ೮೯ ॥

ಎಂಬ ಶ್ಲೋಕವನ್ನೂ ಆ ಮೇಲೆ ಶನಿಯ ಹತ್ತು ಹೆಸರುಗಳುಳ್ಳ

**ಶ್ಲೋಕ** ॥ ಕೋಣಸ್ಥಃ ಪಿಂಗಲೋಬಭ್ರುಃ । ಕೃಷ್ಣೋರೌದ್ರೋಹತಕೋಯಮಃ ॥
ಸೌರಿಃಶನೈಶ್ಚರೋಮಂದಃ । ಪಿಪ್ಪಲಾದೇನ ಸಂಸ್ತುತಃ ॥ ॥ ೯೦ ॥

ಈ ಶ್ಲೋಕವನ್ನೂ ಅನ್ನಬೇಕು ಅದರಿಂದ ಶನಿ ಪೀಡೆಯು ಪರಿಹಾರವಾಗುವದು. ॥ ೯೧ ॥ ಎಲೈ ಋಷಿಗಳಿರಾ, ಈ ಪ್ರಕಾರ ದೃಢಭಕ್ತಿ ಹಾಗು ದೃಢ ಚಿತ್ತಗಳಿಂದ ಅಶ್ವತ್ಥ ಸೇವಾ ಮಾಡಿದರೆ ಆವರ ಮನಸಿನ ಕಾಮನಾಮಗಳು ತೀವ್ರವಾಗಿ ಪೂರ್ಣವಾಗುವವು ಅದರಲ್ಲಿ ಮಕ್ಕಳ ಫಲವಂತೂ ತೀವ್ರವಾಗುವದು. ॥ ೯೨ ॥ ಅಮಾವಾಸ್ಯ ಮತ್ತು ಗುರುವಾರಗಳಲ್ಲಿ ಅಶ್ವತ್ಥ ಛಾಯೆಬಿದ್ದ ನೀರಿನಲ್ಲಿ ಸ್ನಾನ ಮಾಡಿದವನ ಬ್ರಹ್ಮಹತ್ಯಾದಿ ಪಾತಕಗಳು ನಾಶವಾಗುವವು. ॥ ೯೩ ॥ ಅಶ್ವತ್ಥದ ಬುಡದಲ್ಲಿ ಒಬ್ಬ ಬ್ರಾಹ್ಮಣನಿಗೆ ಊಟಕ್ಕೆ ಹಾಕಿದರೆ ಕೋಟಿ ಮಂದಿ ಬ್ರಾಹ್ಮಣರನ್ನು ಉಣಿಸಿದಷ್ಟು ಫಲವು ಬರುವದು. ॥ ೯೪ ॥ ಅಶ್ವತ್ಥದ ಬುಡದಲ್ಲಿ ಕೂತು ಯಾವದಾದರೂ ಮಂತ್ರವನ್ನು ಒಮ್ಮೆ ಜಪಿಸಿದರೆ ಮತ್ತು ವೇದ ಪಠಣ ಮಾಡಿದರೆ ಅದರಿಂದ ಅನಂತ ಫಲವು ಬರುವದು. ॥ ೯೫ ॥ ಭಕ್ತಿಯಿಂದ ಅಶ್ವತ್ಥವನ್ನು ಸ್ಥಾಪಿಸಿದವನು ತನ್ನ ೪೨ ಕುಲಗಳ ಪಿತೃಗಳು ನರಕದಲ್ಲಿದ್ದರೆ ಅವರನ್ನು ನಿರಂತರ ಸ್ವರ್ಗದಲ್ಲಿರಿಸುವನು. ॥ ೯೬ ॥ ಅಶ್ವತ್ಥವನ್ನು ಛೇದಿಸಿದವನ ೪೨ ಕುಲಗಳ ಪಿತೃಗಳು ಸ್ವರ್ಗ

ದಲ್ಲಿದ್ದರೆ ಅವರು ನರಕದಲ್ಲಿ ಬೀಳುವರು. ಮುಂದೆ ಅವನೂ ನರಕವನ್ನು ಹೊಂದುವನು ॥ ೯೭ ॥ ಅಶ್ವತ್ಥದ
ಬುಡದಲ್ಲಿ ಕೂತು ಹೋಮ ಮಾಡಿದರೆ ಅದರಿಂದ ಮಹಾ ಯಜ್ಞದ ಫಲವು ಬರುವದಲ್ಲದೆ ಅಕ್ಷಯವಾದ ಪುಣ್ಯವು
ಬರುವದು ಮತ್ತು ಪುತ್ರ ಕಾಮ್ಯವು ತೀವ್ರವಾಗುವದು. ॥ ೯೮ ॥ ಎಲೌ ಸ್ತ್ರೀಯೇ, ಈ ಪ್ರಕಾರವಾಗಿರುವ
ಅಶ್ವತ್ಥದ ಮಹಿಮೆಯನ್ನು ಬ್ರಹ್ಮನು ನಾರದನಿಗೆ ಹೇಳಿದನು. ಆ ನಾರದನಿಂದ ಆ ಋಷಿಗಳು ಕೇಳಿ
ಕೊಂಡರು. ॥ ೯೯ ॥ ಆಗ ನಾರದನು— ಎಲೈ ಋಷಿಗಳೇ ಪ್ರದಕ್ಷಿಣೆಯ ೧೦ನೇ ಪಾಲು ವೇದೋಕ್ತ ವಿಧಿ
ಯಿಂದ ಹವನ ಮಾಡಬೇಕು. ॥ ೧೦೦ ॥ ಹವನದ ೧೦ನೇ ಪಾಲು ಹರ್ಷದಿಂದ ಬ್ರಾಹ್ಮಣ ಭೋಜನ ಮಾಡಿಸ
ಬೇಕು. ಬ್ರಹ್ಮಚರ್ಯದಿಂದಿದ್ದು ಹವಿಸ್ಸಾನ್ನವನ್ನುಂಡು ವ್ರತವನ್ನು ಮಾಡಬೇಕು. ॥ ೧೦೧ ॥ ಎಲೈ ಋಷಿಗಳೇ
ಆ ಮೇಲೆ ಉದ್ಯಾಪನೆ ಮಾಡಬೇಕು ಹ್ಯಾಗಂದರೆ ಶಕ್ತ್ಯಾನುಸಾರ ಬಂಗಾರದ ಅಶ್ವತ್ಥ ವೃಕ್ಷವನ್ನು
ಮಾಡಿಸಿ, ॥ ೧೦೨ ॥ ಅದನ್ನು ವಿಧಿಪೂರ್ವಕ ಬ್ರಾಹ್ಮಣರಿಗೆ ದಾನ ಮಾಡಬೇಕು ಮತ್ತು ಸವತ್ಸವಾದ
ಬಿಳೇ ಆಕಳನ್ನು ವಿಧಿಪೂರ್ವಕವಾಗಿ ಪೂಜಿಸಿ ಬ್ರಾಹ್ಮಣರಿಗೆ ದಾನ ಮಾಡಬೇಕು ॥ ೧೦೩ ॥ ಆ ಮೇಲೆ ಆ
ಗಿಡದ ಕೆಳಗೆ ಶಕ್ತ್ಯಾನುಸಾರ ಎಳ್ಳಿನ ರಾಶಿ ಹಾಕಿ, ಅದರಮೇಲೆ ಬಿಳೇ ವಸ್ತ್ರವನ್ನು ಹೊಚ್ಚಿ, ಯಥಾಶಕ್ತಿ ದಕ್ಷಿಣೆ
ಯೊಡನೆ ಬ್ರಾಹ್ಮಣರಿಗೆ ದಾನ ಕೊಡಬೇಕು. ॥ ೧೦೪ ॥ ಎಂದು ನಾರದರು ಆ ಋಷಿಗಳಿಗೆ ಅಶ್ವತ್ಥ ಪೂಜಾ-
ವಿಧಾನವನ್ನು ಹೇಳಿದರು. ಅದರಂತೆ ಅವರು ಅರ್ಚನೆ ಮಾಡಿ ಸಕಲಾಭೀಷ್ಟಗಳನ್ನು ಹೊಂದಿದರು ॥ ೧೦೫ ॥
ಎಲೌ ಸ್ತ್ರೀಯಳೇ, ಅಶ್ವತ್ಥದ ಮಹಿಮೆಯು ಈ ಪ್ರಕಾರವಾಗಿರುತ್ತದೆ. ಅತ್ಯಂತ ಭಾವ ಭಕ್ತಿಯುಳ್ಳವರಿಗೆ ಅದ
ರಿಂದ ತೀವ್ರ ಫಲವಾಗುವದು. ॥ ೧೦೬ ॥ ಆದ್ದರಿಂದ ನೀನು ಮನಸ್ಸಿನಲ್ಲಿ ಏನೂ ಸಂಶಯ ತಕ್ಕೊಳ್ಳದೆ ಅದೇ
ರೀತಿಯಾಗಿ ಸೇವಾ ಮಾಡು ಭೀಮಾ ಅಮರಜಾ ಸಂಗಮದ ಹತ್ತರ ಭೀಮಾತೀರದಲ್ಲಿ ಆ ಅಶ್ವತ್ಥವೃಕ್ಷ
ವದೆ. ॥ ೧೦೭ ॥ ಅದೇ ನಮ್ಮ ಸ್ಥಾನವೆಂದು ತಿಳಿದು ಒಂದೇ ಮನಸ್ಸಿನಿಂದ ಅದನ್ನು ಸೇವಿಸು ಅದರಿಂದ
ನಿನ್ನ ಉದರದಿಂದ ಕನ್ಯಾ-ಪುತ್ರರು ಹುಟ್ಟಿ ನಿನ್ನ ಇಚ್ಛೆಯು ತೀವ್ರವಾಗಿ ಪೂರ್ಣವಾಗುವದು. ಎಂದು ಹೇಳಿ

ದರು. ‖ ೧೦೮ ‖ ಈ ಪ್ರಕಾರವಾದ ಶ್ರೀ ಗುರುಗಳ ಮಾತು ಕೇಳಿ ಆ ಸ್ತ್ರೀಯು ಅವರಿಗೆ ನಮಸ್ಕರಿಸಿ, ಭಕ್ತಿ ಭಾವದಿಂದ ಕೈ ಮುಗಿದು ವಿನಂತೀ ಮಾಡಿಕೊಂಡಳು. ‖ ೧೦೯ ‖ ಸ್ವಾಮೀ, ನಾನು ೬೦ ವರುಷದ ಬಂಜೆಯು. ಇನ್ನುಮೇಲೆ ನನ್ನ ಹೊಟ್ಟೆಯಿಂದ ಮಕ್ಕಳು ಹ್ಯಾಗೆ ಹುಟ್ಟುವರು? ಆದರೆ ತಮ್ಮ ನಿಶ್ಚಯದ ಮಾತಿನಂತೆ ನಾನೂ ಅಶ್ವತ್ಥ ಸೇವೆಯನ್ನು ಮಾಡಬೇಕೆಂದು ಗೊತ್ತು ಮಾಡಿರುವೆನು. ‖ ೧೧೦ ‖ ಸ್ವಾಮೀ, ಗುರು ವಾಕ್ಯವು ಕಾಮಧೇನುವಿನ ಸಮಾನವೆಂದು ಸಕಲ ವೇದ–ಪುರಾಣಗಳು ಹೇಳುವವು. ಆದ್ದರಿಂದ ಈಗ ನಾನು ಅನುಮಾನ ಮಾಡದೆ ಅಶ್ವತ್ಥ ಸೇವಾ ಮಾಡುವೆನು. ‖ ೧೧೧ ‖ ಆದರೆ ಸ್ವಾಮೀ, ಗುರುಗಳೇ ನಾನು ಇವತ್ತಿನವರೆಗೆ ಅನೇಕ ವೇಳೆ ಅಶ್ವತ್ಥ ಸೇವಾ ಮಾಡಿ ಮಾಡಿ ಬೇಸತ್ತಿದ್ದರಿಂದ, ಸತ್ಯವಾಗಿ ನನಗೆ ಆದರಲ್ಲಿ ಪ್ರೀತಿ, ಭಕ್ತಿಗಳು ಇಲ್ಲ ನಿಮ್ಮ ಮಾತಿನಲ್ಲಿ ನಂಬಿಗೆಯನ್ನಿಟ್ಟು, ನಿಮ್ಮ ಹಾಗು ಆ ಅಶ್ವತ್ಥದ ಸೇವಾ ಮಾಡುವೆನು ಎಂದು ಹೇಳಿ ಆಕೆಯು ಹಾಗೇ ಗುರುಚರಣಕ್ಕೆ ನಮಿಸಿ, ‖ ೧೧೨ ‖ ಅವರ ಅಪ್ಪಣೆ ತಕ್ಕೊಂಡು ಕೂಡಲೆ ಸಂಗಮಕ್ಕೆ ಹೋಗಿ ಷಟ್ಕುಲ ತೀರ್ಥದಲ್ಲಿ ಸ್ನಾನ ಮಾಡಿ ಅಶ್ವತ್ಥ ಸೇವಾ ಮಾಡ ಹತ್ತಿದಳು ‖ ೧೧೩ ‖ ಶ್ರೀ ಗುರುಗಳು ಹೇಳಿದ ರೀತಿಯಾಗಿ ಮೂರು ದಿವಸ ಹಗಲೂ ರಾತ್ರೀ ಆರಾಧನೆ ಮಾಡಿದಳು ‖ ೧೧೪ ‖ ಆಕೆಯು ಈ ಪ್ರಕಾರ ಗುರುಗಳ ಆಜ್ಞೆಯಂತೆ ಮೂರು ದಿವಸ ಹಗಲೂ ರಾತ್ರಿ ಸೇವಾ ಮಾಡುತ್ತಿರಲು ೩ನೇ ದಿವಸ ರಾತ್ರಿ ಆಕೆಗೆ ಒಂದು ಸ್ವಪ್ನ ಬಿತ್ತು. ‖ ೧೧೫ ‖ ಆ ಸ್ವಪ್ನದಲ್ಲಿ ಒಬ್ಬ ಬ್ರಾಹ್ಮಣನು ಬಂದು ಆಕೆಗೆ ಅಭಯವನ್ನು ಕೊಟ್ಟು— ಎಲೌ ಸ್ತ್ರೀಯಳೇ ಕೇಳು, ಈಗ ನಿನ್ನ ಕಾರ್ಯ ವಾಯಿತು ನಿನಗೊಂದು ಮಾತು ಹೇಳುವೆನು ಅದರಂತೆ ಮಾಡು. ‖ ೧೧೬ ‖ ಇನ್ನುಮೇಲೆ ನೀನು ಗಾಣಗಾ ಪುರಕ್ಕೆ ಹೋಗಿ ಅಲ್ಲಿ ಶ್ರೀಗುರುಗಳಿಗೆ ೭ ಪ್ರದಿಕ್ಷಿಣೆಗಳನ್ನು ಮಾಡಿ ಆಮೇಲೆ ಭಕ್ತಿಯಿಂದ ನಮಸ್ಕಾರ ಮಾಡು. ‖ ೧೧೭ ‖ ಅಲ್ಲಿ ಅವರು ನಿನಗೇನು ಕೊಡುತ್ತಾರೋ ಅದನ್ನು ತೀವ್ರವಾಗಿ ತಿಂದುಬಿಡು. ಆದರಿಂದ ನಿನ್ನ ಇಷ್ಟಾರ್ಥವು ಪೂರ್ಣವಾಗುವದು. ಮನಸ್ಸು ಗಟ್ಟಿ ಮಾಡಿಕೊಂಡು ತೀವ್ರವಾಗಿ ಹೋಗು ಎಂದು ಆ

ಬ್ರಾಹ್ಮಣನು ಹೇಳಿ ಅಲ್ಲಿಯೇ ಅದೃಶ್ಯನಾದನು. ॥ ೧೧೮ ॥ ಈ ಪ್ರಕಾರ ಸ್ವಪ್ನವನ್ನು ಕಂಡು ಆಕೆಯು ಕೂಡಲೆ ಎಚ್ಚತ್ತು— ಈ ಅಶ್ವತ್ಥವು ಕಲ್ಪವೃಕ್ಷವಾಗಿರುತ್ತದೆ. ಕಲ್ಪಿಸಿದ ಫಲವು ತೀವ್ರವಾಗಿ ಆಯಿತು. ॥ ೧೧೯ ॥ ಎಂದು ಬೆಳಗಾದಕೂಡಲೆ ೪ನೇ ದಿವಸ ಮುಂಜಾನೆ ಗಾಣಗಾಪುರದಲ್ಲಿಯ ಗುರುಗಳ ಮಠಕ್ಕೆ ಬಂದು, ಶ್ರೀಗುರುಗಳಿಗೆ ಹರ್ಷದಿಂದ ೭ ಪ್ರದಕ್ಷಿಣೆಗಳನ್ನು ಹಾಕಿ, ನಮಸ್ಕರಿಸಿದಳು. ॥ ೧೨೦ ॥ ಆಗ ಶ್ರೀಗುರುಗಳು ನಕ್ಕು, ಆಕೆಗೆ ಎರಡು ಫಲಗಳನ್ನು ಕೊಟ್ಟು— ಗಂಗಾಬಾಯೀ, ಈಗ ನಿನ್ನ ಕಾರ್ಯವಾಯಿತು. ಸಂತೋಷದಿಂದ ಈ ಫಲಗಳನ್ನು ಭಕ್ಷಣ ಮಾಡು. ॥ ೧೨೧ ॥ ಈಗ ನೀನು ತೀವ್ರವಾಗಿ ಮನೆಗೆ ಹೋಗಿ ಊಟ ಮಾಡು. ಸತ್ಯವಾಗಿ ನಿನ್ನ ಇಚ್ಛೆಯು ಪೂರ್ಣವಾಗುವದು. ನಿನಗೆ ಒಬ್ಬ ಕನ್ಯಾ–ಒಬ್ಬ ಪುತ್ರರು ಆಗುವಂತೆ ಇವತ್ತಿನ ದಿವಸ ನಿನಗೆ ವರವನ್ನು ಕೊಟ್ಟೆನು. ॥ ೧೨೨ ॥ ಆದಕಾರಣ ವಿಧಿಪ್ರಕಾರ ಪಾರಣೆ ಮಾಡಿದಮೇಲೆ ಈ ಫಲಗಳನ್ನು ತಿನ್ನಬೇಕು. ಮತ್ತು ಪೂರ್ವದಲ್ಲಿ ಹೇಳಿದಂತೆ ಬ್ರಾಹ್ಮಣರಿಗೆ ದಾನ ಕೊಡತಕ್ಕದ್ದನ್ನು ಕೊಡಬೇಕು. ॥ ೧೨೩ ॥ ಎಲೌ ಸ್ತ್ರೀಯೇ ವ್ರತ ಸಂಪೂರ್ಣ ಮಾಡಿ ಆ ದಾನವನ್ನು ಕೊಡು ಎಂದು ಹೇಳಿದರು. ಆದರಂತೆ ಅವಳು ಮನೆಗೆ ಹೋಗಿ ಪಾರಣೆ ಮಾಡಿ ಶ್ರೀಗುರುಗಳು ಕೊಟ್ಟ ಎರಡು ಫಲಗಳನ್ನು ತಿಂದಳು. ಅದೇ ದಿವಸ ಅಸ್ತಮಾನಕ್ಕೆ ಅವಳು ರಜಸ್ವಲೆಯಾದಳು. ॥ ೧೨೪ ॥ ಆಗ ಆಕೆಯು ಬಿಳೀ ವಸ್ತ್ರವನ್ನು ಉಟ್ಟುಕೊಂಡು, ಯಾರ ಕಡೆಗೂ ನೋಡದೆ ಹವಿಸ್ಸಾನ್ನವನ್ನುಣ್ಣುತ್ತ ಮೂರು ದಿವಸ ಮೌನದಿಂದ ಇದ್ದಳು ॥ ೧೨೫ ॥ ಈ ಪ್ರಕಾರ ಆಕೆಯು ಮೂರು ರಾತ್ರಿಗಳನ್ನು ಕಳೆದು ೪ನೇ ದಿವಸ ಸುಸ್ನಾತಳಾಗಿ ಸಂತೋಷದಿಂದ ಪತಿಯೊಡನೆ ಗುರುದರ್ಶನಕ್ಕೆ ಬಂದಳು. ॥ ೧೨೬ ॥ ಆಮೇಲೆ ಪತಿಸಹಿತ ಏಕಾಗ್ರ ಮನಸ್ಸಿನಿಂದ ಶ್ರೀಗುರುಗಳನ್ನು ಪೂಜಿಸಿದಳು. ಆಗ ಶ್ರೀಗುರುಗಳು ಸಂತೋಷದಿಂದ— ಎಲೌ ಗಂಗಾಬಾಯಿ, ಇನ್ನು ನೀನು ಪುತ್ರವಂತಿ ಆಗುವಿ ಎಂದು ಆಶೀರ್ವದಿಸಿದರು. ॥ ೧೨೭ ॥ ಆಮೇಲೆ ಅವಳು ಶ್ರೀಗುರುಗಳಿಗೆ ನಮಸ್ಕರಿಸಿ, ಪತಿಯೊಡನೆ ಮನೆಗೆ ಬಂದಳು. ೫ನೇ ದಿವಸ ದಂಪತಿಗಳು ಒಂದಾಗಲೂ ಗುರುಗಳ ಹಾಗು ಅಶ್ವತ್ಥನಾರಾಯಣನ ಕೃಪಾ ಮತ್ತು ಮಹಿಮೆಗಳಿಂದ

ಆಕೆಯು ಗರ್ಭಿಣಿಯಾದಳು. ಎಲೈ ನಾಮಧಾರಕಾ, ಕೇಳು— ಆಕೆಯು ೫ನೇ ದಿವಸ ಗರ್ಭಿಣಿಯಾದ್ದರಿಂದ ಮೊದಲು ಆಕೆಗೆ ಕನ್ಯಾ ಹುಟ್ಟುವದು. ॥ ೧೨೮ ॥ ಈ ಪ್ರಕಾರ ಆಕೆಯು ಗರ್ಭಿಣಿಯಾದಳು. ಆಗ ಆ ಊರ ಜನರು ವಿಸ್ಮಯ ಹೊಂದುತ್ತ— ಇದು ಎಂಥ ಆಶ್ಚರ್ಯದ ಸಂಗತಿಯಾಯಿತು ನೋಡಿರಿ! ॥ ೧೨೯ ॥ ೬೦ ವರುಷದ ಬಂಜೆಗೆ ಗರ್ಭಧಾರಣವಾಯಿತು! ಇದಕ್ಕೆ ಗುರುಕೃಪೆಯೇ ಕಾರಣವು ಎಂದೆನ್ನುತ್ತಿದ್ದರು. ಇತ್ತ ಶ್ರೀಷ್ಠನಾದ ಸೋಮನಾಥ ಬ್ರಾಹ್ಮಣನು ಮನಸಿನಲ್ಲಿ ಆನಂದಪಡುತ್ತಿದ್ದನು. ॥ ೧೩೦ ॥ ಈ ಪ್ರಕಾರ ದಿನದಿನಕ್ಕೆ ಆಕೆಯ ಗರ್ಭವು ಬೆಳೆಯುತ್ತ ೭ ತಿಂಗಳಾಯಿತು. ಆಗ ಆಕೆಗೆ ಉಡಿ ತುಂಬಿದರು. ಮತ್ತು ಅವಳಿಗೆ ಅಕ್ಷಯವಾದ ಬಾಗಣ ಕೊಟ್ಟು ಆರತಿಯನ್ನು ಮಾಡಿದರು. ಆಗ ಶ್ರೀಗುರುಗಳಿಗೆ ವಿನೋದ ಮಾಡುವ ಪ್ರೀತಿ ಇದ್ದದರಿಂದ ಆಕೆಗೆ ಬಾಗಣಗಳನ್ನು ಕೊಡಿರಿ ಎಂದು ಅಂದರು. ॥ ೧೩೧ ॥ ಮತ್ತು ಗುರುಗಳಾಜ್ಞೆಯಂತೆ ಎಂಟನೇ ತಿಂಗಳಲ್ಲಿ ಆ ಸೋಮನಾಥ ಬ್ರಾಹ್ಮಣನು ವಿಧಾನಪೂರ್ವಕ ಸೀಮಂತೋತ್ಸವವನ್ನು ಮಾಡಿ ಸಂತೋಷದಿಂದ ಆ ಗ್ರಾಮದಲ್ಲಿಯ ಯಾವತ್ತು ಸುವಾಸಿನಿಯರಿಗೆ ಬಾಗಣಗಳನ್ನು ಕೊಡಿಸಹತ್ತಿದನು. ॥ ೧೩೨ ॥ ಆಗ ಸಕಲ ಜನರು ಆಶ್ಚರ್ಯದಿಂದ— ಬಂಜೆಯಾದಂಥ ಬಿಳೀ ಕೂದಲುಳ್ಳ ೬೦ ವರುಷದ ಮುದುಕೆಯು ಬಸುರಾಗಿ ಆನಂದದಿಂದ ಬಾಗಿಣಗಳನ್ನು ಹ್ಯಾಗೆ ಕೊಡುತ್ತಾಳೆ ನೋಡಿರಿ, ಎಂದೆನ್ನುತ್ತಿದ್ದರು. ॥ ೧೩೩ ॥ ಅವರಲ್ಲಿ ಕೆಲವರು— ಈಕೆಯು ಭಕ್ತವರದರಾದ ಶ್ರೀಗುರು ನರಸಿಂಹ ಸರಸ್ವತಿಗಳ ಅನುಗ್ರಹದಿಂದಲೇ ಬಸುರಾದದ್ದು ನಿಜ, ಅವರ ಸೇವೆಯನ್ನು ಯಾರು ಆನಂದದಿಂದಲೂ ಭಕ್ತಿಯಿಂದಲೂ ಮಾಡುವರೋ ಅವರಿಗೆ ನಾಲ್ಕು ಪುರುಷಾರ್ಥಗಳು ಸಾಧಿಸುವವು ಈಕೆಯು ಮನಮುಟ್ಟಿ ಗುರುಸೇವೆ ಮಾಡಿದ್ದರಿಂದ ಗರ್ಭಿಣಿಯಾದಳು. ॥ ೧೩೪ ॥ ತ್ರೈಮೂರ್ತಿಗಳೇ ಶ್ರೀ ನರಸಿಂಹ ಸರಸ್ವತಿಗಳೆಂಬ ಹೆಸರಿನಿಂದ ಮನುಷ್ಯರಾಗಿ ಅವತರಿಸಿ, ಭಕ್ತಜನಮನೋಹರರಾಗಿ ಈ ಭೂಮಂಡಲದಲ್ಲಿ ಪ್ರಗಟರಾದರು. ॥ ೧೩೫ ॥ ಎಂದು ನಾನಾರೀತಿಯಾಗಿ ಶ್ರೀಗುರುಗಳನ್ನು ಸ್ತುತಿಸಿದರು. ಅತ್ತ ಆ ಸ್ತ್ರೀಯು ಅತಿ ಉಲ್ಲಾಸದಿಂದ ಆ ಊರ ಯಾವತ್ತು ಸುವಾಸಿನಿಯರಿಗೆ ಬಾಗಿಣಗಳನ್ನು

ಕೊಡುತ್ತಿದ್ದಳು. ॥ ೧೩೬ ॥ ಆಕೆಯು ಈ ಪ್ರಕಾರ ಬಾಗಿಣಗಳನ್ನು ಕೊಟ್ಟು ಬಂದು ಶ್ರೀಗುರುಗಳಿಗೆ ನಮಸ್ಕಾರ ಮಾಡಿದಳು. ಆಗ ಭಕ್ತವತ್ಸಲರಾದ ಶ್ರೀಗುರುಗಳು ಬಹು ಸಂತೋಷದಿಂದ ಆಕೆಗೆ ಆಶೀರ್ವಾದ ಮಾಡಿದರು. ॥ ೧೩೭ ॥ ಆಗ ಆಕೆಯು ಸಂತೋಷದಿಂದ ಮತ್ತೆ ದಂಡವತ್ ಸಾಷ್ಟಾಂಗ ನಮಸ್ಕಾರ ಮಾಡಿ ವಿನಯದಿಂದ ಅನೇಕ ರೀತಿಯಾಗಿ ಸ್ತೋತ್ರ ಮಾಡಹತ್ತಿದಳು ॥ ೧೩೮ ॥ ಜಯ ಜಯ ಪರಮಪುರುಷನೇ, ತ್ರೈಮೂರ್ತಿ ಅವತಾರನೇ, ತಮ್ಮ ವಾಕ್ಯವೆಂಬ ಪರಿಸಮಣಿಯಿಂದ, ಲೋಹದಂತಿರುವ ನನ್ನ ದೇಹವನ್ನು ಸುವರ್ಣವಾಗಿ ಮಾಡಿದಿರಿ. ॥ ೧೩೯ ॥ ಸ್ವಾಮೀ, ನೀವು ಜಗತ್ತನ್ನು ಉದ್ಧರಿಸುವದಕ್ಕಾಗಿ ಅವತರಿಸಿರುತ್ತೀರಿ ನೀವು ತ್ರೈಮೂರ್ತಿಗಳ ಅವತಾರವೇ ಹೊರತು ಬೇರೆಯಲ್ಲ! ॥ ೧೪೦ ॥ ತಮ್ಮ ಸ್ತುತಿಯನ್ನು ಮಾಡಲಿಕ್ಕೆ ನನ್ನ ನಾಲಿಗೆಯಲ್ಲಿ ಶಕ್ತಿಯಿಲ್ಲ. ಕೃಪಾಸಿಂಧುವೇ, ನಿಮ್ಮ ಅಪಾರ ಮಹಿಮೆಗೆ ಯಾವದೂ ಸರಿ ಇಲ್ಲ. ॥ ೧೪೧ ॥ ಎಂದು ಸ್ತೋತ್ರ ಮಾಡಿ ಮತ್ತೆ ಶ್ರೀಗುರುಗಳಿಗೆ ನಮಿಸಿ, ಅವರ ಅಪ್ಪಣೆ ಪಡೆದು ತಮ್ಮ ಮನೆಗೆ ಹೋದಳು. ॥ ೧೪೨ ॥ ಮುಂದೆ ನವಮಾಸ ತುಂಬಿದಕೂಡಲೆ ಒಂದು ಶುಭ ದಿವಸದಲ್ಲಿ ಆಕೆಯು ಒಂದು ಕನ್ಯಾರತ್ನವನ್ನು ಪಡೆದಳು. ಆ ಕೂಸನ್ನು ನೋಡಿ ತಾಯಿ–ತಂದೆಗಳು ಬಹು ಆನಂದ ಹೊಂದಿದರು. ॥ ೧೪೩ ॥ ಆಗ ಜೋಯಿಸರು ಬಂದು ಆ ಕನ್ಯೆಯ ಜಾತಕವನ್ನು ನೋಡಿ— ಎಲೈ ಸೋಮನಾಥನೇ, ಈ ಕನ್ಯೆಯು ನಿರ್ಮಲ ಮನಸಿನವಳಾಗಿ ಎಂಟು ಮಕ್ಕಳನ್ನು ಹಡೆದು ಕುಲವನ್ನು ಉದ್ಧಾರ ಮಾಡಿ ಪುತ್ರ–ಪೌತ್ರರಿಂದೊಡಗೂಡಿ ಆನಂದದಿಂದಿರುವಳು. ॥ ೧೪೪ ॥ ಎಂದು ಹೇಳಿ ಜೋಯಿಸರು ಜಾತಕವನ್ನು ಬರೆಯಲಾಗಿ ಸೋಮನಾಥನು ಆನಂದ ಹೊಂದಿ, ಬ್ರಾಹ್ಮಣರಿಗೆ ಅನೇಕ ದಾನ–ಧರ್ಮಗಳನ್ನು ಮಾಡಿದನು. ॥ ೧೪೫ ॥ ಆಮೇಲೆ ಆ ಪತಿವ್ರತೆಯಾದ ಗಂಗಾಬಾಯಿಯು ೧೧ನೇ ದಿವಸ ಶುದ್ಧ ಸ್ನಾನ ಮಾಡಿ ಬಗಲಲ್ಲಿ ಆ ಕೂಸನ್ನು ಕರಕೊಂಡು ಬಂದು ॥ ೧೪೬ ॥ ಭಕ್ತಿಯಿಂದ ಅವರ ಪಾದದ ಹತ್ತರ ಮಲಗಿಸಿ ಏಕಮನಸಿನ ಭಕ್ತಿಯಿಂದ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದಳು. ॥ ೧೪೭ ॥ ಆಗ ಶ್ರೀಗುರುಗಳು ಆಶೀರ್ವಾದ ಮಾಡಿ— ಏಳವ್ವಾ, ಪುತ್ರವಂತಿಯೇ ಏಳು ಎಂದು

ಎಬ್ಬಿಸಿ, ಒಳ್ಳೇ ಪ್ರೀತಿಯಿಂದ ಆಕೆಯನ್ನು ಸಂತೋಷಪಡಿಸಿದರು. ॥ ೧೪೮ ॥ ಆಕೆಯು ನಮಸ್ಕಾರ ಮಾಡಿ ಎದ್ದು ವಿನಯದಿಂದ ಶ್ರೀಗುರುಗಳನ್ನು ಕುರಿತು— ಸ್ವಾಮೀ, ನನಗೆ ಮೊದಲು ಪುತ್ರನಾಗಬೇಕಾಗಿತ್ತು, ಆಗಲಿಲ್ಲ. ಸರಸ್ವತಿಯಂಥ ಮಗಳಾದಳು. ಆದರೆ ಪುತ್ರನಾಗುವನೆಂಬ ತಮ್ಮ ವಚನವನ್ನು ಸತ್ಯವಾಗಿ ಮಾಡಿ, ನನ್ನನ್ನು ರಕ್ಷಿಸಿರಿ ಎಂದಳು. ॥ ೧೪೯ ॥ ಆಗ ಶ್ರೀಗುರುಗಳು ನಕ್ಕು— ಎಲೌ ಸ್ತ್ರೀಯಳೇ, ನೀನು ಏನೂ ಅನುಮಾನ ಮಾಡಬೇಡ ಇನ್ನು ಮುಂದೆ ನಿನಗೆ ನಿಶ್ಚಯವಾಗಿ ಒಬ್ಬ ಮಗನೂ ಹುಟ್ಟುವನು. ॥ ೧೫೦ ॥ ಎಂದು ಪ್ರೀತಿಯಿಂದ ಆ ಕೂಸನ್ನು ಎತ್ತಿಕೊಂಡು ಯಾವತ್ತೂ ಜನರಿಗೆ ಆ ಕನ್ಯೆಯ ಲಕ್ಷಣವನ್ನು ಹೇಳಹತ್ತಿದರು. ॥ ೧೫೧ ॥ ಈ ಕನ್ಯೆಗೆ ಬಹುಮಂದಿ ಮಕ್ಕಳಾಗುವರು ಈಕೆಯು ಶತಾಯುಷಿಯೂ ಮುತ್ತೈದೆಯೂ ಆಗಿ ಪುತ್ರ–ಪೌತ್ರರೊಡನೆ ಸುಖದಿಂದಿರುವಳು. ॥ ೧೫೨ ॥ ಈಕೆಯ ಪತಿಯು ಜ್ಞಾನಿಯಾಗಿ ನಾಲ್ಕು ವೇದಗಳನ್ನು ಅಭ್ಯಾಸಿಸುವನು. ಮತ್ತು ಅವನು ಅಷ್ಟೈಶ್ವರ್ಯ ಸಂಪನ್ನನಾಗಿ ಈ ಭೂಮಂಡಲದಲ್ಲಿ ಪ್ರಖ್ಯಾತನಾಗುವನು. ॥ ೧೫೩ ॥ ಈಕೆಯು ಪತಿವ್ರತೆಯೂ ಪುಣ್ಯಶೀಲಳೂ ಧರ್ಮನಿರತಳೂ, ಬಹು ಖ್ಯಾತಿವಂತಳೂ ಆಗಿ ಸರ್ವರಿಗೂ ವಂದ್ಯಳಾಗುವಳು ॥ ೧೫೪ ॥ ದಕ್ಷಿಣ ದೇಶದ ಒಬ್ಬ ರಾಜನು ಈಕೆಯ ದರ್ಶನಕ್ಕೆ ಬರುವನು. ಎಲೌ ಗಂಗಾಬಾಯೀ, ನಿನಗೆ ಇನ್ನೊಬ್ಬ ಜ್ಞಾನವಂತ ಪುತ್ರನಾಗುವನು, ಏನೂ ಅನುಮಾನ ಮಾಡಬೇಡ. ॥ ೧೫೫ ॥ ಎಂದು ಶ್ರೀ ಗುರುಗಳು ಆ ಕನ್ಯೆಯ ಲಕ್ಷಣಗಳನ್ನು ಹೇಳಿದರು. ಆಗ ಆ ಸ್ತ್ರೀಯು— ಸ್ವಾಮೀ, ನನಗೆ ತೀವ್ರವಾಗಿ ಪುತ್ರನಾಗುವಂತೆ ಅನುಗ್ರಹಿಸಿರಿ ಎಂದು ವಿನಂತೀ ಮಾಡಿಕೊಂಡಳು. ॥ ೧೫೬ ॥ ಎಲೌ ಸ್ತ್ರೀಯಳೇ, ನಿನಗೆ ಎಂಥಾ ಪುತ್ರನಾಗಬೇಕು ? ಮೂವತ್ತು ವರ್ಷ ಆಯುಸ್ಸುಳ್ಳ ಯೋಗ್ಯ ಪುತ್ರನಾಗಬೇಕೋ ? ಅಥವಾ ಶತಾಯುಸ್ಸುವುಳ್ಳ ಮೂರ್ಖ ಪುತ್ರನಾಗಬೇಕೋ ? ಎಂಬುದನ್ನು ತಿಳಿಸು ಎಂದರು. ॥ ೧೫೭ ॥ ಆಗ ಅವಳು— ಸ್ವಾಮೀ, ನನಗೆ ಯೋಗ್ಯ ಪುತ್ರನೇ ಆಗಬೇಕು, ಮತ್ತು ಅವನಿಗೆ ೫ ಮಂದಿ ಮಕ್ಕಳಾಗಬೇಕು. ಎಂದು ಬೇಡಿಕೊಂಡಳು. ॥ ೧೫೮ ॥ ಆಗ ಭಕ್ತವತ್ಸಲರಾದ ಶ್ರೀ ಗುರುಗಳು ಎಲೌ ಸ್ತ್ರೀಯಳೇ, ನಿನಗೆ ೩೦

ವರುಷದ ಯೋಗ್ಯ ಪುತ್ರನೇ ಆಗುವನು. ಮತ್ತು ಆವನಿಗೆ ೫ ಮಂದಿ ಮಕ್ಕಳೂ ಆಗುವರು. ಎಂದು ವರವನ್ನು ಕೊಟ್ಟರು. ಆಗ ಆ ದಂಪತಿಗಳು ಸಂತೋಷಬಟ್ಟು ತಮ್ಮ ಮನೆಗೆ ಹೋದರು. ॥ ೧೪೯ ॥ ಎಲೈ ನಾಮ-ಧಾರಕಾ, ಮುಂದೆ ಆ ಗಂಗಾಬಾಯಿಗೆ ಒಬ್ಬ ಮಗನು ಹುಟ್ಟಿದನು. ಅವನಿಗೆ ಗುರುಗಳ ಹೆಸರನ್ನೇ ಇಟ್ಟರು. ಅವನು ವೇದ ಶಾಸ್ತ್ರಗಳಲ್ಲಿ ಪ್ರಖ್ಯಾತನಾದನು. ಅವನಿಗೆ ೫ ಮಂದಿ ಮಕ್ಕಳೂ ಹುಟ್ಟಿದರು. ॥ ೧೫೦ ॥ ಆದಿರಲಿ ಇತ್ತ ಮರುದಿವಸ ಅಂದರೆ ೧೨ನೇ ದಿವಸ ಆ ದಂಪತಿಗಳು ಆ ಕನ್ಯೆಯನ್ನು ತೊಟ್ಟಿಲಲ್ಲಿ ಹಾಕಿ, ಶ್ರೀ ಗುರುಗಳು ಹೇಳಿದಂತೆ ಆ ಕನ್ಯೆಯ ಲಕ್ಷಣಗಳಿದ್ದದರಿಂದ ಆ ಕನ್ಯೆಗೆ ಸರಸ್ವತಿ ಎಂಬ ಹೆಸರನ್ನಿಟ್ಟರು. ಅದೇ ಹೆಸರಿನಿಂದ ಆಕೆಯು ಪ್ರಖ್ಯಾತಳಾದಳು. ಆಗ ಮಹಾ ಆನಂದವು ನಡೆಯಿತು. ॥ ೧೫೧ ॥ ಆಕೆಯ ಪತಿಯು ಯಜ್ಞ ಮಾಡಿ ದೀಕ್ಷಿತನಾಗಿ ಭೂಮಿಯಲ್ಲಿ ಹೆಸರಾದನು. ಆಗ ನಾಲ್ಕೂ ರಾಷ್ಟ್ರಗಳಲ್ಲಿ ಅವನ ಖ್ಯಾತಿಯು ಬಹಳವಾಯಿತು. ॥ ೧೫೨ ॥ ೬೦ ವರುಷದ ಬಂಜಿ ಮುದುಕಿಗೆ ಪುತ್ರರಾದರು. ಶ್ರೀ ಗುರುಗಳ ಕೃಪೆಯು ಈ ಪ್ರಕಾರವಾಗಿರುತ್ತದೆ. ॥ ೧೫೩ ॥ ಶ್ರೀ ಗುರುಗಳಲ್ಲಿ ಯಾರ ವಿಶ್ವಾಸವು ದೃಢವಾಗಿರುವದೋ ಅವರಿಗೆ ಶ್ರೀಗುರುಗಳು ಒಲಿದು ತಕ್ಷಣವೇ ವರವನ್ನು ಕೊಡುವರು. ಆದಕಾರಣ ಒಂದೇ ಮನಸಿನಿಂದ ಶ್ರೀ ಗುರುಗಳಲ್ಲಿ ಭಕ್ತಿಯನ್ನಿಡಬೇಕು ಎಂದು ಸಿದ್ಧರು ಹೇಳಿದರು. ॥ ೧೫೪ ॥ ಎಂದು ಸರಸ್ವತೀ ಗಂಗಾಧರನು— ಉದಾರರಾದ ಶ್ರೀ ಗುರುಗಳನ್ನು ಭಕ್ತಿಯಿಂದ ಸೇವಿಸಿದರೆ ಸಕಲಾಭೀಷ್ಟಗಳು ಸಿದ್ಧಿಸುವವು. ॥ ೧೫೫ ॥ ಯಾರು ಒಂದೇ ಭಾವದ ಭಕ್ತಿಯಿಂದ ಶ್ರೀ ಗುರುಗಳನ್ನು ಸೇವಿಸುತ್ತಾರೋ ಅವರಿಗೆ ದೈನ್ಯವು ಹ್ಯಾಗೆ ಬಾಧಿಸುವದು ? ಅವರು ಬೇಡಿಬೇಡಿದ್ದನ್ನು ಶ್ರೀ ಗುರುಗಳು ಕೊಡುವರು. ॥ ೧೫೬ ॥ ಶ್ರೀ ಗುರುಗಳೆಂದರೆ ಕಾಮಧೇನುವೆಂದು ತಿಳಿಯಿರಿ. ಮನಸಿನಲ್ಲಿ ಏನೂ ಅನುಮಾನ ಮಾಡಬೇಡಿರಿ. ಅವರು ಭಕ್ತ ಜನರು ಇಚ್ಛಿಸಿದ್ದೆಲ್ಲವನ್ನೂ ಕೊಡುವರು. ಎಂದು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ॥ ೧೫೭ ॥ ಹೀಗೆ ಗುರುಚರಿತಾಮೃತ ಈ ೩೯ನೇ ಅಧ್ಯಾಯದಲ್ಲಿ ಬ್ರಾಹ್ಮಣ ಸ್ತ್ರೀಯಳಿಗೆ ಪುತ್ರನಾದ ಕಥೆಯನ್ನು ಅದ್ಭುತವಾಗಿ ಹೇಳಿದೆ. ॥ ೧೫೮ ॥

ಇತಿ ಶ್ರೀಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ ವೃದ್ಧ ವಂಧ್ಯಾ ಪ್ರಸವೋನಾಮ ಏಕೋನ ಚತ್ವಾರಿಂಶತ್ತಮೋಧ್ಯಾಯಃ ॥ ೩೯ ॥ ಶ್ರೀಗುರುದೇವದತ್ತ॥

— ೩೯ನೇ ಅಧ್ಯಾಯ ಸಮಾಪ್ತ —

---

# ೪೦ನೇಯ ಅಧ್ಯಾಯ

## ಶ್ರೀಗುರುಗಳು ಒಣ ಕಟ್ಟಿಗೆಯನ್ನು ಚಿಗುರಿಸಿ, ನರಹರಿಯ ಕುಷ್ಠವನ್ನು ಕಳೆದದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಸಿದ್ಧರು ನಾಮಧಾರಕನನ್ನು ಕುರಿತು— ಎಲೈ ಶಿಷ್ಯನೇ, ನಿನಗೆ ಒಣ ಕಟ್ಟಿಗೆಯು ಚಿಗಿತು ಮರವಾದ ಒಂದು ಅಪೂರ್ವ ಕಥೆಯನ್ನು ಹೇಳುವೆನು ಕೇಳು ॥ ೧ ॥ ಶ್ರೀ ಗುರುಗಳು ಗಾಣಗಾಪುರದಲ್ಲಿದ್ದಾಗ ಆಪಸ್ತಂಬ ಶಾಖೆಯ ಭಾರ್ಗವ ಗೋತ್ರದ **ನರಹರಿ** ಎಂಬ ಒಬ್ಬ ಕುಷ್ಠಿ ಬ್ರಾಹ್ಮಣನು ಶ್ರೀ ಗುರುಗಳ ದರ್ಶನಕ್ಕೆ ಬಂದು ॥ ೨ ॥ ಭಕ್ತಿಯಿಂದ ಅವರಿಗೆ ವಂದಿಸಿ ಕೈಮುಗಿದುಕೊಂಡು ನಿಂತು ಬಹು ರೀತಿಯಿಂದ ಸ್ತೋತ್ರ ಮಾಡಹತ್ತಿದನು ॥ ೩ ॥ ಏನೆಂದರೆ— ಜಯ ಜಯ ಗುರುಮೂರ್ತಿಯೇ, ಭಕ್ತವತ್ಸಲನೇ, ಪರಂಜ್ಯೋತಿಯೇ, ಪರಮ ಪುರುಷನೇ, ಜಗದ್ಗುರುವೇ, ಸ್ವಾಮೀ ನಾನು ತಮ್ಮ ಕೀರ್ತಿಯನ್ನು ಕೇಳಿ ಇಲ್ಲಿಗೆ ಬಂದೆನು ॥ ೪ ॥ ಸ್ವಾಮೀ, ನಾನು ಈ ಜಗತ್ತಿನಲ್ಲಿ ಹುಟ್ಟಿ, ಕಲ್ಲಿನಂತೆ ನನ್ನ ಜನ್ಮವು ವ್ಯರ್ಥವಾಯಿತು ಕುಷ್ಠರೋಗಿಯೆಂದು ಬ್ರಾಹ್ಮಣರು ನನ್ನನ್ನು ನಿಂದಿಸುವರು. ॥ ೫ ॥ ನಾನು ಯಜುರ್ವೇದವನ್ನು ಓದಿರುವೆನು ನಾನು ಅಂಗಹೀನನೆಂದು ಯಾರೂ ನನ್ನನ್ನು ಊಟಕ್ಕೆ ಕರೆಯುವದಿಲ್ಲ. ನಿಂದಾ ಮಾಡುವರು ॥ ೬ ॥ ಜನರು ಪ್ರಾತಃಕಾಲದಲ್ಲಿ ಎದ್ದು ನನ್ನ ಮುಖವನ್ನು ಸಹ ನೋಡುವದಿಲ್ಲ ಆದರಿಂದ ನನಗೆ ಬಹಳ ದುಃಖವಾಗುವದು ಆದ್ಧರಿಂದ ಸ್ವಾಮೀ, ಇನ್ನು ನನಗೆ ಜನ್ಮವು ಸಾಕಾಗಿದೆ. ॥ ೭ ॥ ನಾನು ಜನ್ಮಾಂತರದಲ್ಲಿ ಬಹಳ ಪಾಪ ಮಾಡಿದ್ದರಿಂದಲೇ ಈಗ ಬಹು ದುಃಖವನ್ನು ಅನುಭವಿಸುವೆನು. ಸ್ವಾಮೀ, ಇನ್ನುಮೇಲೆ ನಾನು ಈ ದುಃಖವನ್ನು ಸಹಿಸಲಾರೆನು. ॥ ೮ ॥ ನಾನು ತಿರುಗುತ್ತ ತಿರುಗುತ್ತ ಅನೇಕ ತೀರ್ಥಯಾತ್ರೆಗಳನ್ನೂ, ಅನೇಕ ವ್ರತಗಳನ್ನೂ, ಅನೇಕ ದೇವರ ಪೂಜೆ

ಯನ್ನೂ ಮಾಡಿದೆನು. ಆದರೂ ನನ್ನ ಈ ವ್ಯಾಧಿಯು ಹೋಗಲಿಲ್ಲ. ॥ ೯ ॥ ಈಗ ಜಗದ್ಗುರುಗಳಾದ ತಮ್ಮ ದರ್ಶನಕ್ಕೆ ಬಂದಿರುವೆನು. ತಾವೂ ನನ್ನಮೇಲೆ ಕೃಪಾ ಮಾಡದಿದ್ದರೆ ನಾನು ಪ್ರಾಣ ಕೊಡಬೇಕೆಂದು ನಿಶ್ಚಯ ಮಾಡಿಕೊಂಡು ಬಂದಿರುವೆನು. ॥ ೧೦ ॥ ಎಂದು ಹೇಳಿ ಅವನು ಒಳ್ಳೇ ನಿಶ್ಚಯದಿಂದಲೂ ಭಕ್ತಿಯಿಂದಲೂ ಕರುಣಾವಚನದಿಂದಲೂ ವಿನಯದಿಂದಲೂ ಶ್ರೀಗುರುಗಳಿಗೆ ನಮಸ್ಕರಿಸಿದನು. ॥ ೧೧ ॥ ಆಮೇಲೆ ಮತ್ತೆ ನಾನಾರೀತಿಯಿಂದ ಸ್ತುತಿಸಿ— ಸ್ವಾಮೀ, ಲೋಹಕ್ಕೆ ಸ್ಪರ್ಶಮಣಿಯು ತಾಕಲು ಅದು ಬಂಗಾರವಾಗುವಂತೆ ತಮ್ಮ ದರ್ಶನ ಹೊಂದಿದ ಮನುಷ್ಯನು ಪವಿತ್ರನಾಗುವನು. ಇದರಲ್ಲಿ ಏನೂ ಸಂಶಯವಿಲ್ಲ. ಅದರಂತೆ ಈಗ ನಾನು ತಮ್ಮ ದರ್ಶನಕ್ಕೆ ಬಂದಿರುವೆನು ಎಂದನು. ॥ ೧೨ ॥ ಎಲೈ ನಾಮಧಾರಕನೇ, ಭಕ್ತವತ್ಸಲರಾದ ಶ್ರೀಗುರುಗಳು ಈ ಪ್ರಕಾರ ಅವನ ಕರುಣಾವಚನವನ್ನು ಕೇಳಿ ಕೃಪೆಯಿಂದ ಅವನಿಗೆ ನಿರೋಪ ಕೊಡುವರು. ಅದನ್ನು ಹೇಳುವೆನು ಕೇಳು. ॥ ೧೩ ॥ ಎಲೈ ನರಹರಿಯೇ, ನೀನು ಪೂರ್ವದಲ್ಲಿ ಬಹಳ ಪಾಪ ಮಾಡಿ ಬಹು ದೋಷಿಯಾದ್ದರಿಂದ ಈಗ ಕುಷ್ಠರೋಗಿಯಾಗಿರುವಿ ॥ ೧೪ ॥ ಈಗ ನೀನು ನಾನು ಹೇಳಿದಂತೆ ಏಕೋಭಾವ ದಿಂದ ನಡೆದರೆ ನಿನ್ನ ಪಾಪವೆಲ್ಲ ಹೋಗಿ ನಿನ್ನ ಶರೀರವು ಉತ್ತಮವಾಗುವದು ಎಂದು ಹೇಳಿದರು. ॥ ೧೫ ॥ ಅಷ್ಟರಲ್ಲಿ ಆ ಮಠದ ಪೈಕಿ ಒಬ್ಬನು ಊರಿ ಹಚ್ಚಲಿಕ್ಕೆಂದು ಒಣಗಿದ ಒಂದು ಅತ್ತಿಯ ಕಟ್ಟಿಗೆಯನ್ನು ತಕ್ಕೊಂಡು ಬಂದನು. ॥ ೧೬ ॥ ಆದನ್ನು ಕಂಡು ಗುರುಗಳು— ಎಲೈ ನರಹರಿ ಬ್ರಾಹ್ಮಣನೇ, ನೀನು ಒಳ್ಳೇ ಭಕ್ತಿಯಿಂದ ತೀವ್ರವಾಗಿ ಆ ಕಟ್ಟಿಗೆಯನ್ನು ತಕ್ಕೊಂಡು ॥ ೧೭ ॥ ಭಕ್ತಿಯಿಂದ ತೀವ್ರವಾಗಿ ಸಂಗಮಕ್ಕೆ ಹೋಗಿ, ಸಂಗಮನಾಥನ ಪೂರ್ವ ಭಾಗದಲ್ಲಿರುವ ಭೀಮಾತೀರದಲ್ಲಿ ಅದನ್ನು ನಡಿಸು ॥ ೧೮ ॥ ಆಮೇಲೆ ನೀನು ತೀವ್ರವಾಗಿ ಸಂಗಮದಲ್ಲಿ ಸ್ನಾನ ಮಾಡಿ ಮೊದಲು ಅಲ್ಲಿರುವ ಅಶ್ವತ್ಥವನ್ನು ಪೂಜಿಸಿ, ಪುನಃ ಸಂಗಮದಲ್ಲಿ ಸ್ನಾನ ಮಾಡು. ॥ ೧೯ ॥ ಆಮೇಲೆ ಎರಡೂ ಕೈಗಳಿಂದ ಎರಡು ಕಲಶಗಳ ತುಂಬ ನೀರು ತಂದು ಭಕ್ತಿಯಿಂದ ಆ ಒಣ ಕಟ್ಟಿಗೆಗೆ ಮೂರು ಸಾರೆ ಸ್ನಾನ ಮಾಡಿಸು. ಇದರಂತೆ ಪ್ರತಿದಿನ ಮಾಡು. ॥ ೨೦ ॥ ಆ ಒಣ ಕಟ್ಟಿಗೆಯು

ಯಾವಾಗ ಚಿಗಿಯುವದೋ ಆಗ ನಿನ್ನ ಪಾಪವೆಲ್ಲ ಹೋಗಿ ನಿನ್ನ ದೇಹವು ದಿವ್ಯವಾಗುವದು. ॥ ೨೧ ॥ ಎಂದು ಶ್ರೀಗುರುಗಳು ಅವನಿಗೆ ಆಜ್ಞೆ ಮಾಡಿದರು. ಆಗ ನರಹರಿಯು ಅವರ ಮಾತಿನಲ್ಲಿ ವಿಶ್ವಾಸಹೊಂದಿ ಕೂಡಲೆ ಓಡುತ್ತ ಆ ಕಟ್ಟಿಗೆಯ ಹತ್ತರ ಹೋಗಿ ॥ ೨೨ ॥ ಅದನ್ನು ಎತ್ತಿ ತಲೆಯಮೇಲಿಟ್ಟುಕೊಂಡು ತೀವ್ರವಾಗಿ ಸಂಗಮಕ್ಕೆ ಹೋಗಿ ಸಂಗಮೇಶ್ವರನ ಎದುರಿಗಿರುವ ಭೀಮಾ ತೀರದಲ್ಲಿ ಅದನ್ನು ನಡಿಸಿದನು. ॥ ೨೩ ॥ ಆಮೇಲೆ ಅವನು ಶ್ರೀಗುರುಗಳ ಆಜ್ಞೆಯಂತೆ ನಿತ್ಯವೂ ಒಳ್ಳೇ ಭಕ್ತಿಭಾವದಿಂದಲೂ ಉಪವಾಸದಿಂದಲೂ ಎರಡು ಕಲಶಗಳ ತುಂಬ ನೀರು ತಂದು ಆ ಕಟ್ಟಿಗೆಗೆ ಹಾಕುತ್ತ ಬಂದನು. ॥ ೨೪ ॥ ಈ ಪ್ರಕಾರ ಅವನು ಉಪವಾಸದಿಂದಿದ್ದು ಏಳು ದಿವಸಗಳ ವರೆಗೆ ಮಾಡಿದನು. ॥ ೨೫ ॥ ಆಗ ಅಲ್ಲಿಗೆ ಬಂದ ಯಾವತ್ತು ಜನರು ಅವನ ಆಚರಣೆಯನ್ನು ಕಂಡು ಅವನಿಗೆ ಗುರುಗಳಾಜ್ಞೆಯ ಲಕ್ಷಣವನ್ನು ಸ್ಪಷ್ಟಮಾಡಿ ಹೇಳಹತ್ತಿದರು. ॥ ೨೬ ॥ ಏನಂದರೆ— ಎಲೈ ಬ್ರಾಹ್ಮಣಾ, ನಿನಗೇನಾಗಿದೆ ? ಈ ಒಣ ಕಟ್ಟಿಗೆಯನ್ನೇಕೆ ನಡಿಸಿರುವೆ ? ಹೀಗೆ ನೀರು ಹಾಕುವದರಿಂದ ಅದು ಚಿಗಿಯುವದೆಂದು ತಿಳಿದಿರುವೆಯಾ ? ಇದರಿಂದ ನಿನಗೇನು ಲಾಭವಾಗುತ್ತದೆ ? ॥ ೨೭ ॥ ನೀನು ಈ ಒಣ ಕಟ್ಟಿಗೆಯನ್ನು ಚಿಗಿಸುವ ಪ್ರಯತ್ನವನ್ನೇಕೆ ಮಾಡುತ್ತೀ ? ಈ ಭೂಮಿಯಲ್ಲಿ ಒಣ ಕಟ್ಟಿಗೆಯು ಚಿಗಿಯುವದೆಂಬದನ್ನು ನಾವು ಎಂದೂ ಎಲ್ಲಿಯೂ ಕೇಳಿಲ್ಲ! ನೋಡಿಲ್ಲ! ಶ್ರೀಗುರುಗಳ ಇಚ್ಛೆಯು ನಿನಗೆ ಎಂದಿಗೂ ತಿಳಿಯಲಿಲ್ಲ. ॥ ೨೮ ॥ ಕೃಪಾಸಾಗರರಾದ ಶ್ರೀಗುರುಗಳು ತಮ್ಮ ನಿಜಭಕ್ತರಿಗೆ ವರವನ್ನು ಕೊಡುತ್ತಾರೆ. ಅವರ ಕೃಪೆಯು ಅಗಾಧವಾದದ್ದು. ಎಲ್ಲರ ಮೇಲೆಯೂ ಕೃಪೆ ಮಾಡುವರು. ಅವರು ಬಂದ ಭಕ್ತರ ನಿಸ್ಸೀಮ ಭಕ್ತಿಯನ್ನು ನೋಡಿ ಅವರ ಮೇಲೆ ಕೃಪಾ ಮಾಡಿ ಅವರಿಗೆ ಬೇಕಾದ ವರಗಳನ್ನು ಕೊಟ್ಟು ಅವರ ಕಾರ್ಯ ಮಾಡಿ ಕೊಡುತ್ತಾರೆ. ॥ ೨೯ ॥ ಆದರೆ ಎಲೈ ಬ್ರಾಹ್ಮಣನೇ, ಈಗ ನಿನ್ನ ಪಾಪಕ್ಕೆ ಏನೂ ಪ್ರಾಯಶ್ಚಿತ್ತವಿಲ್ಲೆಂದು ತಿಳಿದು, ಶ್ರೀಗುರುಗಳು ನಿನಗೆ ಈ ಒಣ ಕಟ್ಟಿಗೆಯನ್ನು ಕೊಟ್ಟು ಸೇವಿಸಲಿಕ್ಕೆ ಹೇಳಿರುವರು. ಗುರುಗಳ ಅಪ್ಪಣೆಯೆಂದು ಸುಮ್ಮನೆ ಯಾಕೆ ಕಷ್ಟಬಡುತ್ತೀ ? ಎಂದು ಅಂದರು. ॥ ೩೦ ॥ ಅವರ ಮಾತು ಕೇಳಿ ಆ ನರಹರಿಯು ಅವರಿಗೆ

ಕೈ ಮುಗಿದು— ಅಯ್ಯಾ ಬ್ರಾಹ್ಮಣರೇ, ನನಗೆ ಗುರುವಚನವೇ ಕಾಮಧೇನುವಾಗಿದೆ ಅವರ ವಾಕ್ಯವು ಅನ್ಯಥಾ (ವ್ಯರ್ಥ) ಹ್ಯಾಗಾದೀತು ? ॥ ೩೧ ॥ ಶ್ರೀಗುರುಗಳು ಸತ್ಯಸಂಕಲ್ಪರಿದ್ದಾರೆ. ಕಾರಣ ಅವರ ಮಾತು ಎಂದೂ ಸುಳ್ಳಾಗುವದಿಲ್ಲ. ಸತ್ಯವಾಗಿ ಈ ಒಣ ಕಟ್ಟಿಗೆಯೇ ಚಿಗಿತು ಮರವಾಗುವದೆಂದು ನಾನು ಮನಸಿನಲ್ಲಿ ನಿಶ್ಚಯ ಮಾಡಿರುವೆನು. ॥ ೩೨ ॥ ಗುರುವಾಕ್ಯವು ಎಂದೂ ಅಸತ್ಯವಾಗುವದಿಲ್ಲವೆಂದು ನನ್ನ ಮನಸ್ಸಿನ ನಿಶ್ಚಯವದೆ. ನನಗೆ ಗುರುವಾಕ್ಯವೇ ಪ್ರಮಾಣವು ಇದಕ್ಕಾಗಿ ನಾನು ಪ್ರಾಣವನ್ನಾದರೂ ಬಿಡುವೆನು. ॥ ೩೩ ॥ ಎಂದು ಹೇಳಿ ಆ ಬ್ರಾಹ್ಮಣನು ಮೊದಲಿನಂತೆ ಭಕ್ತಿಯಿಂದ ಆ ಒಣ ಕಟ್ಟಿಗೆಯನ್ನು ಸೇವಿಸಹತ್ತಿದನು. ॥ ೩೪ ॥

ಆಮೇಲೆ ಶಿಷ್ಯರು ಬಂದು ಶ್ರೀಗುರುಗಳನ್ನು ಕುರಿತು— ಸ್ವಾಮೀ, ತಾವು ಆ ನರಹರಿ ಬ್ರಾಹ್ಮಣನಿಗೆ ಒಣ ಕಟ್ಟಿಗೆಯನ್ನು ಕೊಟ್ಟು ಅದನ್ನು ಆರಾಧಿಸೆಂದು ಹೇಳಿರುವಿರಿ. ॥ ೩೫ ॥ ಅವನು ತಮ್ಮ ಮಾತಿನಲ್ಲಿ ವಿಶ್ವಾಸ ವಿಟ್ಟು, ಒಂದೇ ಮನಸಿನ ಭಕ್ತಿಯಿಂದಲೂ ಉಪವಾಸದಿಂದಿಲೂ ಏಳು ದಿವಸಗಳ ವರೆಗೆ ಆ ಕಟ್ಟಿಗೆಯನ್ನು ಸೇವಿಸುತ್ತಿರುವನು. ॥ ೩೬ ॥ ನಾವು ಅವನನ್ನು ಕುರಿತು— ಏ ಬ್ರಾಹ್ಮಣಾ, ಮೂರ್ಖತನದಿಂದ ಈ ಕಟ್ಟಿಗೆ ಯನ್ನು ಯಾಕೆ ಸೇವಿಸುತ್ತೀ ? ಎಂದು ಅನೇಕ ಹಿತದ ಮಾತುಗಳನ್ನು ಹೇಳಿದೆವು. ॥ ೩೭ ॥ ಆದರೆ ಅವನು ಆ ನಮ್ಮ ಮಾತನ್ನು ಕೇಳದೆ— ಈ ಕಟ್ಟಿಗೆಯು ಹೊರತು ನನಗೆ ಗತಿಯಿಲ್ಲ. ಗುರುವಾಕ್ಯವೇ ನನಗೆ ಕಾರಣವು. ಅವರ ವಾಕ್ಯದಂತೆ ನಾನು ಸೇವಿಸುತ್ತಿರುವೆನು. ಅವರು ತಮ್ಮ ಮಾತನ್ನು ಸತ್ಯವಾಗಿ ಮಾಡೇ ಮಾಡು ವರು. ॥ ೩೮ ॥ ಎಂದು ಅವನು ಮನಸಿನಲ್ಲಿ ನಿಶ್ಚಯ ಮಾಡಿ ಒಣ ಕಟ್ಟಿಗೆಯನ್ನೇ ಸೇವಿಸುತ್ತಿರುವನು. ಏಳು ದಿವಸವಾದರೂ ಅವನು ನೀರು ಸಹ ಕುಡಿದಿಲ್ಲ. ಎಂದು ಬಿನ್ನವಿಸಿದನು. ॥ ೩೯ ॥

ಈ ಪ್ರಕಾರ ಆ ಶಿಷ್ಯರ ಮಾತು ಕೇಳಿ ಶ್ರೀಗುರುಗಳು— ಎಲೈ ಶಿಷ್ಯರೇ, ಯಾವ ಭಕ್ತನ ಅಂತಃಕರಣ ಶುದ್ಧಿಯು ಹ್ಯಾಗಿರುವದೋ ಹಾಗೆ ಅವನಿಗೆ ಸಿದ್ಧಿಯಾಗುವದು. ॥ ೪೦ ॥ ಸಚ್ಛಿಷ್ಯನಿಗೆ ಗುರುವಾಕ್ಯವೇ ಕಾರಣವು.

ಅದು ಎಂದೂ ವ್ಯರ್ಥವಾಗುವದಿಲ್ಲ ಭಕ್ತನ ಮನಸ್ಸಿನಲ್ಲಿ ಭಕ್ತಿಯು ಹೆಚ್ಚಿಚ್ಚಾದಷ್ಟು ತೀವ್ರವಾಗಿ ಸಿದ್ಧಿಯಾಗುವದು. || ೪೧ || ಆದಕಾರಣ ಗುರುಭಕ್ತಿಯು ವಿಷಯುವಾಗಿ ಸೂತನು ಋಷಿಗಳಿಗೆ ಹೇಳಿದ ಸ್ಕಂದ ಪುರಾಣದಲ್ಲಿಯ ಒಂದು ಕಥೆಯನ್ನು ನಿನಗೆ ಹೇಳುವೆನು. ಏಕಚಿತ್ತದಿಂದ ಕೇಳು. || ೪೨ ||

ಒಂದಾನೊಂದು ದಿವಸ ನೈಮಿಷಾರಣ್ಯದಲ್ಲಿದ್ದ ಋಷಿಗಳು ಸೂತ ಪುರಾಣಿಕನನ್ನು ಕುರಿತು— ಗುರುಭಕ್ತಿಯ ಪ್ರಕಾರವನ್ನು ಕೇಳಿದರು ಆಗ ಸೂತನು ಸವಿಸ್ತಾರ ಹೇಳಿದನು. ಅದನ್ನೇ ನಾನು ನಿನಗೆ ಹೇಳುವೆನು ಕೇಳು— || ೪೩ || ಆಗ ಸೂತನು— ಎಲೈ ಋಷಿಗಳೇ ಕೇಳಿರಿ. ಈ ಭವಸಾಗರವನ್ನು ದಾಟಲಿಕ್ಕೆ ಗುರುಭಕ್ತಿಯೇ ಮುಖ್ಯ ಕಾರಣವಾಗಿರುತ್ತದೆ ಆದಕ್ಕೆ ಬೇರೆ ಉಪಾಯುವೇ ಇಲ್ಲ || ೪೪ || ಒಮ್ಮೆ ಒಬ್ಬರನ್ನು ಗುರುಗಳೆಂದು ತಿಳಿದು ಬಳಿಕ ಕೆಲವು ದಿವಸದಮೇಲೆ ಇವನು ಅಯೋಗ್ಯನು ಅಥವಾ ಜ್ಞಾನವಂತನು ಎಂದು ಅವರ ಅಂತವನ್ನು ನೋಡಬಾರದು. ಆ ಗುರುಮೂರ್ತಿಯನ್ನೇ ಮನಸಿನಲ್ಲಿ ಧ್ಯಾನಿಸುತ್ತ ಒಂದೇ ಮನಸಿನ ಭಕ್ತಿಯಿಂದ ಅವರ ಸೇವೆ ಮಾಡಬೇಕು || ೪೫ || ಗುರುಗಳಲ್ಲಿ ದೃಢಭಕ್ತಿಯಿದ್ದವರಿಗೆ ಮಾತ್ರ ಸರ್ವ ಧರ್ಮಗಳು ಸಾಧಿಸುವವು ಇದರಲ್ಲಿ ಏನೂ ಸಂದೇಹವಿಲ್ಲ ಮನಸಿನಲ್ಲಿ ಸಂಶಯುವನ್ನು ಹಿಡಿಯದೆ ಒಳ್ಳೇ ಭಕ್ತಿಯಿಂದ ಮಾತ್ರ ಸೇವಿಸಬೇಕು. || ೪೬ || ಗುರುವನ್ನು ಮಾಡಿಕೊಳ್ಳುವ ಮುಂದೆಯೇ ಪೂರ್ಣ ವಿಚಾರ ಮಾಡಿ ಒಬ್ಬರನ್ನು ಗುರುಗಳನ್ನಾಗಿ ಮಾಡಿಕೊಳ್ಳಬೇಕು. ಆಮೇಲೆ ತನ್ನ ಗುರುವು ಮನುಷ್ಯನೆಂದೆನ್ನದೆ ಮತ್ತು ಅವರ ಗುಣದೋಷಗಳನ್ನೆಣಿಸದೆ ಅವರೇ ಈಶ್ವರನೂ ತ್ರೈಮೂರ್ತಿ ಸ್ವರೂಪನೂ ಎಂದು ತಿಳಿಯಬೇಕು. || ೪೭ || ಯಾರು ಈ ಪ್ರಕಾರ ಮನಸಿನಲ್ಲಿ ನಿಶ್ಚಯ ಮಾಡಿಕೊಂಡು ಶ್ರೀಗುರುಚರಣವನ್ನು ಸೇವಿಸುವರೋ ಅವರಿಗೆ ಶೂಲಪಾಣಿಯಾದ ಶ್ರೀಶಂಕರನು ಕೂಡಲೆ ಪ್ರಸನ್ನನಾಗುವನು. || ೪೮ ||

ಶ್ಲೋಕ॥ ಮಂತ್ರೇತೀರ್ಥೇದ್ವಿಜೇದೇವೇ ದೈವಜ್ಞೇಭೇಷಜೇ, ಗುರೌ।
ಯಾದೃಶೀ ಭಾವನಾಂಕುರ್ಯಾತ್, ಸಿದ್ಧಿರ್ಭವತಿ ತಾದೃಶೀ ॥ ॥ ೪೯ ॥

ಅರ್ಥ–ಮಂತ್ರ, ತೀರ್ಥ, ಬ್ರಾಹ್ಮಣ, ದೇವರು, ಜೋಯಿಸ, ವೈದ್ಯ, ಗುರು ಇವರಲ್ಲಿ ಯಾವರೀತಿ ಭಾವನಾ ಮಾಡುವರೋ ಆ ಪ್ರಕಾರ ಸಿದ್ಧಿಯಾಗುವದು ॥ ೫೦ ॥ ಎಲೈ ಋಷಿಗಳೇ, ಗುರುಭಕ್ತಿ ಎಂಬುವದು ಯಾವ ಪ್ರಕಾರವಾಗಿರುತ್ತದೆಂಬ ಬಗ್ಗೆ ನಿಮಗೆ ದೃಷ್ಟಾಂತರೂಪವಾಗಿ ಒಂದು ಅಪೂರ್ವ ಕಥೆಯನ್ನು ಹೇಳುವೆನು ಕೇಳಿರಿ. ॥ ೫೧ ॥ ಪೂರ್ವದಲ್ಲಿ ಪಾಂಚಾಲನಗರದಲ್ಲಿ ಸಿಂಹಕೇತು ಎಂಬ ಒಬ್ಬ ರಾಜನಿದ್ದನು. ಅವನಿಗೆ ಧನಂಜಯನೆಂಬ ಒಬ್ಬ ಮಗನಿದ್ದನು. ॥ ೫೨ ॥ ಒಂದು ದಿವಸ ಆ ರಾಜಪುತ್ರನು ಬೇಟೆಯಾಡುವದಕ್ಕಾಗಿ ಸಂಗಡ ಒಬ್ಬ ಭಿಲ್ಲರ ಹುಡುಗನನ್ನು ಕರಕೊಂಡು ಮನುಷ್ಯ ಸಂಚಾರವೂ ನೀರೂ ಇಲ್ಲದಂಥ ಒಂದು ಅರಣ್ಯಕ್ಕೆ ಹೋದನು. ॥ ೫೩ ॥ ಈ ಪ್ರಕಾರ ಆ ರಾಜಪುತ್ರನು ಆ ಭಿಲ್ಲರ ಹುಡುಗನೊಡನೆ ತಿರುಗಾಡುತ್ತ ಬಹು ಶ್ರಮವನ್ನು ಹೊಂದಿ ಬಹಳ ನೀರಡಿಸಿದನು. ॥ ೫೪ ॥ ಆ ಅರಣ್ಯದಲ್ಲಿ ಶಬರಸುತನು ತಿರುಗಾಡುತ್ತಿರುವಾಗ ಅಕಸ್ಮಾತ್ತಾಗಿ ಒಂದು ಜೀರ್ಣವಾದ ಶಿವಾಲಯವನ್ನು ಕಂಡನು. ॥ ೫೫ ॥ ಅಲ್ಲಿ ಒಂದು ಭಿನ್ನವಾದ ಶಿವಲಿಂಗವು ಭೂಮಿಯಲ್ಲಿ ಬಿದ್ದಿತ್ತು. ಆ ಶಬರನು ಅದನ್ನು ತಕ್ಕೊಂಡು ಈ ಲಿಂಗವು ಚಲೋದದೆ ಎಂದು ॥ ೫೬ ॥ ಅದನ್ನು ಕೈಯಲ್ಲಿ ಹಿಡಕೊಂಡು ಒಳ್ಳೇ ಹರ್ಷದಿಂದ ನೋಡುತ್ತಿದ್ದನು. ಆ ವೇಳೆಯಲ್ಲಿ ಆ ರಾಜಪುತ್ರನು ಅವನ ಹತ್ತರ ಬಂದು ॥ ೫೭ ॥ — ಎಲೈ ಭಿಲ್ಲನೇ, ಈ ಭಿನ್ನ ಲಿಂಗವನ್ನು ತಕ್ಕೊಂಡು ಏನು ಮಾಡುತ್ತೀ? ಈ ಭೂಮಿಯಲ್ಲಿ ಲಿಂಗಾಕಾರವಾದ ಅನೇಕ ಕಲ್ಲುಗಳು ಬಿದ್ದಿರುತ್ತವೆ ಎಂದನು. ॥ ೫೮ ॥ ಆ ರಾಜಪುತ್ರನ ಮಾತು ಕೇಳಿ ಆ ಶಬರನು— ಸ್ವಾಮಿ, ನನ್ನಮನಸಿನಲ್ಲಿ ಲಿಂಗಪೂಜಾ ಮಾಡಬೇಕೆಂಬ ಇಚ್ಛೆಯು ಬಹಳವದೆ. ಕಾರಣ ಇದನ್ನು ತಕ್ಕೊಂಡೆನು ಎಂದು ಹೇಳಿದನು. ॥ ೫೯ ॥ ಅವನ ಮಾತು ಕೇಳಿ ರಾಜಪುತ್ರನು ನಕ್ಕು— ಎಲೈ ಶಬರನೇ, ಸತ್ಯವಾಗಿ ಈ ಲಿಂಗವು ಚಲೋದದೆ. ನೀನು ಒಂದೇ ಮನಸ್ಸಿನಿಂದ ಇದನ್ನು ಪೂಜಾ ಮಾಡು

ಎಂದನು. || ೬೦ || ಆಗ ಆ ಶಬರನು ಅವನಿಗೆ ಕೈಮುಗಿದು— ಸ್ವಾಮೀ, ನೀವೇ ನನ್ನ ಗುರುಗಳು. ನಾನು ಶಬರ ಜಾತಿಯವನು, ನನಗೆ ಪೂಜಾ ವಿಧಾನವು ಗೊತ್ತಿಲ್ಲ. ಆದ್ದರಿಂದ ನಾನು ಈ ಲಿಂಗವನ್ನು ಯಾವ ವಿಧಿಯಿಂದ ಪೂಜಾ ಮಾಡಬೇಕೆಂಬುದನ್ನು ನೀವು ನನಗೆ ವಿಸ್ತಾರವಾಗಿ ಹೇಳಬೇಕು ಎಂದು ಬೇಡಿ-ಕೊಂಡನು. || ೬೧-೬೨ || ಆಗ ಆ ರಾಜಪುತ್ರನು— ಎಲೈ ಶಬರನೇ, ಈ ಲಿಂಗವನ್ನು ಈಗ ನೀನು ಮನೆಗೆ ತೆಗೆದುಕೊಂಡು ಹೋಗಿ ಒಂದು ಶುದ್ಧ ಸ್ಥಳದಲ್ಲಿಡು. ಆ ಮೇಲೆ ನೀವು ದಂಪತಿಗಳಿಬ್ಬರೂ ಶುಚಿರ್ಭೂತರಾಗಿ ಮನಸಿನಲ್ಲಿ ಈ ಲಿಂಗವೇ ಪಾರ್ವತೀ ಪತಿಯಾದ ಶ್ರೀ ಶಂಕರನೆಂದೇ ನಿಶ್ಚಯವಾಗಿ ತಿಳಿದು ಪೂಜಿಸಿ, ನಾನಾ ಪ್ರಕಾರದ ಪತ್ರ-ಪುಷ್ಪಗಳನ್ನೇರಿಸಿ, ಧೂಪ ದೀಪಗಳನ್ನು ಮಾಡಿ, ಬಳಿಕ ಪ್ರತಿನಿತ್ಯ ಸ್ಮಶಾನದಿಂದ ತಂದಂಥ ಚಿತಾಭಸ್ಮವನ್ನೂ ಮತ್ತು ನೀವು ದಿನಾಲು ಊಟ ಮಾಡುವ ಪದಾರ್ಥಗಳನ್ನೂ ಯೋಗ್ಯ ರೀತಿಯಿಂದ ನೈವೇದ್ಯ ಮಾಡಬೇಕು. ಆಮೇಲೆ ಮಂಗಳಾರತಿ ಮೊದಲಾದ್ದನ್ನು ಮಾಡಿ, ನೀವಿಬ್ಬರೂ ಆ ನೈವೇದ್ಯವನ್ನು ಭಕ್ಷಣ ಮಾಡಬೇಕು. ಈ ಪ್ರಕಾರ ಈ ಲಿಂಗಪೂಜಾ ವಿಧಾನವಿರುತ್ತದೆ ಎಂದು ಹೇಳಿದನು. || ೬೩ ರಿಂದ ೬೭ || ಈ ಪ್ರಕಾರ ಆ ರಾಜಪುತ್ರನೇ ಅವನ ಗುರುವೆಂದನು. ಆ ಶಬರನಾದರೂ ಮನಸಿನಲ್ಲಿ ವಿಶ್ವಾಸವನ್ನು ಹೊಂದಿ ಇವನೇ ತನ್ನ ಗುರುವೆಂದು ನಿಶ್ಚಯ ಮಾಡಿದನು || ೬೮ || ಆಮೇಲೆ ಆ ಶಬರನು ಆ ಲಿಂಗವನ್ನು ಸಂತೋಷದಿಂದ ಮನೆಗೆ ಒಯ್ದು, ಒಳ್ಳೇ ಕೌತುಕದಿಂದ ಅದನ್ನು ತನ್ನ ಹೆಂಡತಿಗೆ ತೋರಿಸಿ— ಪ್ರಿಯೇ, ನನಗೆ ಈ ಲಿಂಗವು ಪ್ರಸನ್ನವಾಯಿತು. || ೬೯ || ಗುರುಗಳು ಹೇಳಿದಂತೆ ನಾನು ಇದನ್ನು ನಿತ್ಯ ಏಕಚಿತ್ತದಿಂದ ಪೂಜಿಸುವೆನು. ಎಂದು ಅದನ್ನು ಶುದ್ಧ ಸ್ಥಳದಲ್ಲಿಟ್ಟು ಏಕಚಿತ್ತದಿಂದ ಪೂಜಿಸುತ್ತ, ಪ್ರೀತಿಯಿಂದ ನಿತ್ಯ ಚಿತಾ ಭಸ್ಮವನ್ನು ತಂದು ನೈವೇದ್ಯ ಮಾಡುತ್ತಿದ್ದನು. || ೭೦ || ಈ ಪ್ರಕಾರ ಅವನು ಕೆಲವು ದಿವಸ ಪೂಜಾ ಮಾಡುತ್ತಿರಲು ಒಂದು ದಿವಸ ಅವನಿಗೆ ಆ ಊರಲ್ಲಿ ಚಿತಾಭಸ್ಮವು ಸಿಗಲಿಲ್ಲ. || ೭೧ || ಮತ್ತೆ ಅನೇಕ ಕಡೆ ತಿರುಗಾಡಿದರೂ ಎಲ್ಲಿಯೂ ಸಿಗಲಿಲ್ಲ. ಆಗ ಅವನು— ಈ ದಿನ ಚಿತಾಭಸ್ಮವು ಸಿಗಲಿಲ್ಲವೆಂಬ ಚಿಂತೆಯಿಂದ ಮನೆಗೆ ಬಂದನು. || ೭೨ ||

ಹಾಗೇ ಚಿಂತಿಸುತ್ತ ಹೆಂಡತಿಯನ್ನು ಕುರಿತು— ಪ್ರಿಯೇ, ಈ ದಿನ ಶ್ರೀಶಂಕರನ ನೈವೇದ್ಯಕ್ಕೆ ಈ ಊರಲ್ಲಿ ಎಲ್ಲಿಯೂ ಚಿತಾಭಸ್ಮವು ಸಿಗಲಿಲ್ಲ. ಹತ್ತೂ ದಿಕ್ಕುಗಳನ್ನು ತಿರುಗಾಡಿ ಹುಡಿಕಿ ಬಂದೆ, ಎಲ್ಲಿಯೂ ಸಿಗಲಿಲ್ಲ. ಅಂದಮೇಲೆ ಈ ದಿವಸ ಶಿವಪೂಜೆಯು ನಿಂತಿತು. ಈಗ ಏನು ಮಾಡಲಿ ಹೇಳು ? ಈಗ ನಾನು ಪ್ರಾಣವನ್ನು ಬಿಡುವೆನು. || ೭೩-೭೪ || ಗುರುಗಳು ಹೇಳಿದ ವಿಧಾನದಂತೆ ಶಿವಪೂಜಾ ಮಾಡಬೇಕು. ಹಾಗೆ ಮಾಡ ದಿದ್ದರೆ ಎಲ್ಲವೂ ವ್ಯರ್ಥವಾಗುವದು. || ೭೫ || ಗುರುವಾಕ್ಯವನ್ನು ಯಾರು ಪಾಲಿಸುವದಿಲ್ಲವೋ ಅವರು ಘೋರ ವಾದ ನರಕವನ್ನು ಹೊಂದುವರು. ಮತ್ತು ಅವನ ಪಾಪವು ಹೋಗದೆ ಅವನು ಸದಾ ದರಿದ್ರನಾಗಿರುವನು. || ೭೬ || ಮುಂದೆ ಅವನು ಅಧೋಗತಿಯನ್ನು ಹೊಂದಿ ಅಖಂಡ ನರಕದಲ್ಲಿರುವನು. ಯಾರು ನಿಶ್ಚಯದಿಂದ ಗುರುಭಕ್ತಿ ಯನ್ನು ಮಾಡುತ್ತಾರೋ ಅವರು ಈ ಭವಸಾಗರವನ್ನು ದಾಟುವರು. || ೭೭ || ಎಂದು ನಾಲ್ಕು ವೇದಗಳೂ ಆರು ಶಾಸ್ತ್ರ-ಹದಿನೆಂಟು ಪುರಾಣಗಳೂ ಹೇಳುವವು. ಆದ್ದರಿಂದ ಎಲೈ ಪ್ರಿಯೇ ಕೇಳು. ಇನ್ನು ನಾನು ಪ್ರಾಣ ವನ್ನು ಬಿಡುವೆನು ಎಂದನು. || ೭೮ || ಈ ಪ್ರಕಾರವಾದ ಪತಿಯ ಮಾತು ಕೇಳಿ ಶಬರಿಯು ನಕ್ಕು— ಪ್ರಿಯರೇ ನೀವು ಇಷ್ಟೇಕೆ ಚಿಂತೆ ಮಾಡುತ್ತೀರಿ ? ತಮಗೆ ನಾನು ಚಿತಾಭಸ್ಮವನ್ನು ಕೊಡುವೆನು. || ೭೯ || ನಮ್ಮ ಮನೆ ಯಲ್ಲಿ ಬೇಕಾದಷ್ಟು ಕಟ್ಟಿಗೆಗಳು ಅವೆ. ನನ್ನನ್ನು ಮನೆಯೊಳಗೆ ಹಾಕಿ, ಮನೆಗೆ ತೀವ್ರವಾಗಿ ಬೆಂಕಿಯನ್ನು ಹಚ್ಚಿ, ನನ್ನನ್ನು ಸುಟ್ಟುಬಿಡಿರಿ. || ೮೦ || ಅದರಿಂದ ಚಿತಾಭಸ್ಮವು ಬರುವದು. ಆಮೇಲೆ ನೀವು ಆನಂದದಿಂದ ಆ ಚಿತಾಭಸ್ಮವನ್ನು ಈಶ್ವರನಿಗೆ ನೈವೇದ್ಯ ಮಾಡಿರಿ. ಈ ಮಾತು ನಾನು ಒಳ್ಳೇ ಸಂತೋಷದಿಂದ ಹೇಳುವೆನು. ನೀವು ವ್ರತಭಂಗವನ್ನು ಮಾತ್ರ ಮಾಡಬೇಡಿರಿ || ೮೧ || ಯಾವಾಗಾದರೂ ಈ ದೇಹಕ್ಕೆ ನಾಶವಿದ್ದೇ ಇರುತ್ತದೆ. ಈ ಕಾರ್ಯಕ್ಕಾದರೂ ನಾನು ಈ ನನ್ನ ದೇಹವನ್ನು ಸಮರ್ಪಿಸುವೆನು ಎಂದು ಹೇಳಿದಳು. || ೮೨ ||'

ಹೆಂಡತಿಯ ಮಾತು ಕೇಳಿ ಶಬರನು ಮನಸ್ಸಿನಲ್ಲಿ ಖಿನ್ನನಾಗಿ— ಎಲೈ ಪ್ರಾಣೇಶ್ವರಿಯೇ, ನಾನು ನಿನ್ನ ಪ್ರಾಣವನ್ನು ಹ್ಯಾಗೆ ತೆಗೆದುಕೊಳ್ಳಲಿ ? || ೮೩ || ನೀನು ರತಿಯಂತೆ ಸುಂದರಿಯಾಗಿ ಇನ್ನೂ ಚಿಕ್ಕವಳಿರುವಿ.

ನೀನು ಈ ಸಂಸಾರದಲ್ಲಿ ಬಂದು ಇನ್ನೂ ಮಕ್ಕಳು ಮರಿಗಳ ಸುಖವನ್ನು ಹೊಂದಲಿಲ್ಲ. ॥ ೮೪ ॥ ನೀನು ಸಂಸಾರ ಸುಖವನ್ನು ಕಂಡಿಲ್ಲ. ನಿನ್ನ ತಾಯಿ-ತಂದಿಗಳು ನನಗೆ— ನಿನ್ನ ಪ್ರಾಣಪ್ರಿಯಳನ್ನು ಒಳ್ಳೇ ರೀತಿಯಾಗಿ ರಕ್ಷಿಸೆಂದು ನಿನ್ನನ್ನು ನನ್ನ ಸ್ವಾಧೀನ ಮಾಡಿದ್ದಾರೆ. ಆದ್ದರಿಂದ ನಿನ್ನನ್ನು ಕೊಲ್ಲಲಿಕ್ಕೆ ನನ್ನ ಮನಸ್ಸಿಲ್ಲ. ॥ ೮೫ ॥ ಚಂದ್ರ-ಸೂರ್ಯರ ಸಾಕ್ಷಿಯಾಗಿ ನಾನು ನಿನ್ನನ್ನು ಸಂತೋಷದಿಂದ ಲಗ್ನ ಮಾಡಿಕೊಂಡು, ನಿನ್ನನ್ನು ಚೆನ್ನಾಗಿ ರಕ್ಷಿಸುವೆನೆಂದು ನಿನ್ನ ತಂದೆ-ತಾಯಿಗಳಿಗೆ ಹೇಳಿ ಒಳ್ಳೇ ಹರ್ಷದಿಂದ ನಿನ್ನನ್ನು ಮನೆಗೆ ಕರಕೊಂಡು ಬಂದೆನು. ॥ ೮೬ ॥ ಪ್ರಿಯೇ, ಇಂಥ ನಿನ್ನನ್ನು ಈಗ ನಾನು ನಿನ್ನ ದಹನ ಮಾಡಿದರೆ ಸ್ತ್ರೀಹತ್ಯಾ ಮೊದಲಾದ ಅಸಂಖ್ಯ ಪಾಪಗಳು ಘಟಿಸುವವು, ಹ್ಯಾಗೆ ಮಾಡಲಿ ಹೇಳು ? ॥ ೮೭ ॥ ನೀನು ನನ್ನ ಪ್ರಾಣೇಶ್ವರಿಯು, ನಿನ್ನನ್ನು ಹ್ಯಾಗೆ ಕೊಲ್ಲಲಿ ? ನಿನ್ನನ್ನು ಕೊಂದರೆ ಈಶ್ವರನು ಹ್ಯಾಗೆ ಸಂತುಷ್ಟನಾದಾನು ? ಇದರಿಂದ ನನ್ನ ಪುಣ್ಯವೆಲ್ಲ ಹೋಗಿ ಪಾಪ ಬರುವದು. ॥ ೮೮ ॥ ಪ್ರಾಣಪ್ರಿಯಳೇ, ನೀನು ಇನ್ನೂ ಸುಂದರಿಯಾಗಿರುತ್ತೀ, ನಿನ್ನನ್ನು ಕೊಂದರೆ ನಿನ್ನ ತಾಯಿ-ತಂದೆಗಳು ದುಃಖದಿಂದ ನನಗೆ ಸ್ತ್ರೀ ಘಾತಕಿಯೆಂದು ಅನ್ನಲಿಕ್ಕಿಲ್ಲವೇ ? ॥ ೮೯ ॥ ಇನ್ನು ನೀನು ಈ ಶರೀರದಿಂದಲೇ ಒಳ್ಳೇ ಭಕ್ತಿಯಿಂದ ಕೂಡಿ ನಾನಾತರದ ವ್ರತಗಳನ್ನು ಮಾಡಬೇಕಾಗಿದೆ ಆದಕಾರಣ ನಾನು ನಿನ್ನನ್ನು ಹ್ಯಾಗೆ ದಹನ ಮಾಡಲಿ ? ನಿನ್ನನ್ನು ಕೊಂದರೆ ನನಗೆ ಪಾಪ ಬರುತ್ತದೆ ಎಂದು ಅಂದನು. ॥ ೯೦ ॥ ಈ ಪ್ರಕಾರ ಪತಿಯ ಮಾತು ಕೇಳಿ ಆ ಶಬರಿಯು ವಿನಯದಿಂದ— ಸ್ವಾಮೀ, ಪತಿರಾಯರೇ, ನೀವು ಇಷ್ಟು ಸುಳ್ಳು ಮಾತಾಡಲಿಕ್ಕೆ ನಿಮಗೆ ಇಷ್ಟೇಕೆ ಅಜ್ಞಾನವು ಬಂತು ? ॥ ೯೧ ॥ ಈ ಶರೀರವೆಂದರೆ ಸ್ವಪ್ನದಂತೆ ಇರುವದು. ನೀರಮೇಲಿನ ಗುಳ್ಳಿಯು ಹ್ಯಾಗೆ ಕಡೆತನಕ ಸ್ಥಿರವಾಗಿರುವದಿಲ್ಲವೋ ಹಾಗೆ ಈ ಶರೀರವು ಶಾಶ್ವತವಾದದ್ದಲ್ಲ. ಕ್ಷಣಭಂಗುರವಾದದ್ದು. ಈ ದೇಹಕ್ಕೆ ಮರಣವೇ ಸತ್ಯವಾದದ್ದಿರುತ್ತದೆ. ॥ ೯೨ ॥ ನನ್ನ ತಾಯಿ-ತಂದೆಗಳು ನನ್ನನ್ನು ನಿಮಗೆ ದಾನ ಮಾಡಿರುವರು. ಆದ್ದರಿಂದ ನಾನು ನಿಮ್ಮ ಪೂರ್ಣ ಅರ್ಧಾಂಗಿಯು. ಅಂದಮೇಲೆ ನನಗೂ ನಿಮಗೂ ಭಿನ್ನಭಾವವು ಎಲ್ಲಿಂದ ಬಂತು ? ॥ ೯೩ ॥ ನಾನು ಅಂದರೆ ನಿಮ್ಮ ಶರೀರವೇ ಸರಿ. ಮನಸಿ

ನಲ್ಲಿ ವಿಚಾರಮಾಡಿ ನೋಡಿದರೆ ನಿಮ್ಮ ಅರ್ಧ ಶರೀರವೇ ನಾನಾಗಿದ್ದೇನೆ. ನನ್ನನ್ನು ದಹನ ಮಾಡಿದರೆ ನಿಮಗೇನು ದೋಷ ಬರುವದು ? ॥ ೯೪ ॥ ಭೂಮಿಯಮೇಲೆ ಹುಟ್ಟಿದ ಪದಾರ್ಥಗಳೆಲ್ಲವೂ ನಾಶವಾಗತಕ್ಕವೇ ಸರಿ. ಈಗ ನೀವು ನನ್ನನ್ನು ಸುಟ್ಟು ನನ್ನ ದೇಹವನ್ನು ಸಫಲಗೊಳಿಸಿರಿ. ಅಂದರೆ ಇದು ಈಶ್ವರನನ್ನು ಹೊಂದುವದು. ॥ ೯೫ ॥ ನೀವು ಏನೂ ಅನುಮಾನ ಮಾಡದೆ ತೀವ್ರವಾಗಿ ನನ್ನನ್ನು ದಹನ ಮಾಡಿರಿ, ಈ ಮಾತು ನಾನು ಸಂತೋಷದಿಂದ ಹೇಳುವೆನು ॥ ೯೬ ॥ ಎಂದು ಆಕೆಯು ತನ್ನ ಪತಿಗೆ ನಾನಾರೀತಿಯಾಗಿ ಹೇಳಿ ತಾನು ಮನೆಯೊಳಗೆ ಹೋಗಿ ಪತಿಯನ್ನು ಕುರಿತು– ಇನ್ನು ತೀವ್ರವಾಗಿ ಬೆಂಕಿಯನ್ನು ಹಚ್ಚಿರಿ ಎಂದಳು. ॥ ೯೭ ॥ ಆಗ ಆ ಶಬರನು ಸಂತೋಷದಿಂದ ಮನೆಯ ಬಾಗಿಲವನ್ನಿಕ್ಕಿ ಬಂದುಮಾಡಿ ಅತಿಶಯವಾಗಿ ಉರಿಯನ್ನು ಹಚ್ಚಿದನು. ಆ ಉರಿಯು ಆಕಾಶತನಕ ಹೋಯಿತು. ॥ ೯೮ ॥ ಆಗ ಶಬರಿಯ ದೇಹವು ದಹನವಾಯಿತು. ಆ ಶಬರನು ಆ ಚಿತಾಭಸ್ಮವನ್ನು ತಕ್ಕೊಂಡು ಶಿವಪೂಜೆಯನ್ನು ಮಾಡಿ ನೈವೇದ್ಯವನ್ನು ತೋರಿಸಿದನು. ॥ ೯೯ ॥ ಈಶ್ವರನ ಪೂಜೆ ಮಾಡುವಾಗ ಅವನಿಗೆ ಬಹು ಆನಂದವಾಗಿ ತನ್ನ ಹೆಂಡತಿಯನ್ನು ಸುಟ್ಟೆನೆಂಬ ಸ್ಮರಣೆಯು ಇಲ್ಲದಂತಾಯಿತು. ॥ ೧೦೦ ॥ ಈ ಪ್ರಕಾರ ಭಕ್ತಿ–ಭಾವದಿಂದ ಈಶ್ವರನ ಪೂಜಾ ಮಾಡಿ ಪ್ರಸಾದವನ್ನು ಕೈಯಲ್ಲಿ ಹಿಡಕೊಂಡು ಹೆಂಡತಿಯನ್ನು ಕರೆದನು. ॥ ೧೦೧ ॥ ಅವನು ನಿತ್ಯವೂ ಪೂಜಾ ಮಾಡಿ ಪ್ರಸಾದವನ್ನು ಕೈಯಲ್ಲಿ ಹಿಡಕೊಂಡು, ತನ್ನ ಹೆಂಡತಿಯನ್ನು ಕರೆದು ಆ ಪ್ರಸಾದವನ್ನು ಕೊಡುತ್ತಿದ್ದನು. ॥ ೧೦೨ ॥ ಅದರಂತೆ ಅವನು ಆ ದಿವಸವೂ ತನ್ನ ಹೆಂಡತಿಯನ್ನು ಕರೆದನು. ಆಗ ಕೃಪಾಸಾಗರ ತ್ರಿಪುರಾರಿಯಾದ ಶ್ರೀ ಶಂಕರನು ಅವನ ಭಕ್ತಿಗೆ ಪ್ರಸನ್ನನಾದನು. ॥ ೧೦೩ ॥ ಆ ಕೂಡಲೆ ನಿತ್ಯದಂತೆ ಆದೇ ಶಬರಿಯು ಬಂದು ನಗುತ್ತ ಅವನೆದುರಿಗೆ ಬಂದು ನಿಂತು ಪ್ರಸಾದವನ್ನು ಇಸಗೊಂಡು ಮನೆಯೊಳಗೆ ಹೋದಳು ॥ ೧೦೪ ॥ ಆಗ ಆ ಶಬರನಿಗೆ ಮೊದಲಿನಂತೆ ಈಗ್ಯೂ ಮನೆಯು ಕಂಡಿತು. ಆಗ ಅವನು ಆಶ್ಚರ್ಯಬಟ್ಟು ಮನಸ್ಸಿನಲ್ಲಿ— ಆಹಾ ! ಇದೇನು ? ನನ್ನ ಹೆಂಡತಿಯು ಸಹಿತವಾಗಿ ಈಗ ಈ ಮನೆಯನ್ನು ದಹನ ಮಾಡಿದ್ದೆನು. ಆದರೆ ಈಗ್ಯೂ ಮನೆಯು

ಮೊದಲಿನಂತೆ ಹ್ಯಾಗೆ ತೋರುತ್ತದೆ ? ॥ ೧೦೫ ॥ ಎಂದು ಹೆಂಡತಿಯನ್ನು ಕರೆದು— ಎಲೈ ಸತಿಯೇ, ನಾನು ಆಗಲೆ ಈ ಮನೆಸಹಿತ ನಿನ್ನನ್ನು ದಹನ ಮಾಡಲಿಲ್ಲವೇ ? ಈಗ ನೀನು ಪುನಃ ಹ್ಯಾಗೆ ಬದುಕಿ ಬಂದಿ ? ಎಂದು ಕೇಳಿದನು. ॥ ೧೦೬ ॥ ಆಗ ಆಕೆಯು— ಪತಿರಾಯರೇ, ನೀವು ಮನೆಗೆ ಬೆಂಕಿ ಹಚ್ಚಿದಾಗ ನನಗೆ ನಿದ್ದೆ ಬಂದದ್ದರಿಂದ ಮಲಗಿಬಿಟ್ಟೆನು. ಇಷ್ಟು ಮಾತ್ರ ನೆನಪು ಆದೆ. ॥ ೧೦೭ ॥ ಆ ಮೇಲೆ ನನಗೆ ಅತಿಶಯ ಶೀತ ವಾಗಿ ನಿದ್ದೆ ಮಾಡುತ್ತಿದ್ದೆನು. ಈಗ ತಮ್ಮ ಸತ್ಯವಾದ ಧ್ವನಿಯನ್ನು ಕೇಳಿದಕೂಡಲೆ ಎಚ್ಚರಾಗಿ ಎದ್ದು ಬಂದೆನು. ॥ ೧೦೮ ॥ ಇದು ದೇವತಾಕಾರ್ಯವೇ ಸರಿ ಶೂಲಪಾಣಿಯು ನಮಗೆ ಪ್ರಸನ್ನನಾದನು. ಇದರಲ್ಲಿ ಏನೂ ಸಂಶಯವಿಲ್ಲ ಎಂದೆನ್ನುವಷ್ಟರಲ್ಲಿಯೇ ಭಕ್ತವತ್ಸಲನಾದ ಶ್ರೀ ಶಂಕರನು ನಿಜರೂಪವನ್ನು ಧರಿಸಿ ಆ ಲಿಂಗ ದೊಳಗಿಂದ ಎದ್ದು ಆ ದಂಪತಿಗಳೆದುರಿಗೆ ನಿಂತುಕೊಂಡನು. ॥ ೧೦೯ ॥ ಕೂಡಲೆ ಅವರು ದೀರ್ಘದಂಡ ನಮ ಸ್ಕಾರ ಹಾಕುತ್ತ ಓಡುತ್ತ ಹೋಗಿ ಆ ಶಂಕರನ ಚರಣಗಳನ್ನು ಹಿಡಿದರು. ಆಗ ಶೂಲಪಾಣಿಯು ಎಲೈ ದಂಪತಿ ಗಳಿರಾ, ನೀವು ಬೇಕಾದ ವರವನ್ನು ಬೇಡಿರಿ ಎಂದನು. ॥ ೧೧೦ ॥ ಆ ಮೇಲೆ— ಎಲೈ ಶಬರನೇ, ನಿನ್ನ ಭಕ್ತಿಗೆ ಮೆಚ್ಚಿದೆನು. ಈ ಸಂಸಾರದಲ್ಲಿ ನಿನಗೆ ಸುಖವುಂಟಾಗಲಿ, ನಿನಗೆ ಧುರಂಧರವಾಗಿ ರಾಜ್ಯವನ್ನು ಕೊಟ್ಟಿರು ವೆನು. ರಾಜ್ಯವಾಳು. ಆ ಮೇಲೆ ಸದ್ಗತಿಯಾಗಿ ಕಲ್ಪಕೋಟಿ ವರ್ಷಗಳವರೆಗೆ ಸ್ವರ್ಗ ವಾಸವಾಗುವದು ಎಂದು ವರವನ್ನು ಕೊಟ್ಟು ಅದೃಶ್ಯನಾದನು. ॥ ೧೧೧ ॥ ಗುರುಚರಣದಲ್ಲಿ ಈ ತರದ ವಿಶ್ವಾಸವು ಯಾರಿಗೆ ಇರುತ್ತದೋ ಅದರಂತೆ ಅವರಿಗೆ ಫಲವಾಗುತ್ತದೆಂದು ಸೂತನು ಆ ಋಷಿಗಳಿಗೆ ಹೇಳಿದನು. ॥ ೧೧೨ ॥ ಆದ್ದರಿಂದ ಎಲೈ ಶಿಷ್ಯರೇ, ಆ ನರಹರಿ ಬ್ರಾಹ್ಮಣನು ವಿಶ್ವಾಸದಿಂದ ಹರ್ಷಬಟ್ಟು ಆ ಒಣಗಿದ ಕಟ್ಟಿಗೆಯನ್ನು ಸೇವಿಸುತ್ತಾನೆ ಎಂದು ಹೇಳಿದರು. ॥ ೧೧೩ ॥ ಎಲೈ ನಾಮಧಾರಕನೇ ಹ್ಯಾಗೆ ಭಾವವೋ ಹಾಗೆ ಸಿದ್ಧಿಯಾಗುವದು. ಇದು ತ್ರಿಕರಣ ಪೂರ್ವಕವಾಗಿ ಸತ್ಯವಾಗಿರುತ್ತದೆ. ಆ ಮೇಲೆ ಕೃಪಾಸಾಗರರಾದ ಶ್ರೀ ಗುರುಗಳು ತಮ್ಮ ದಂಡ-ಕಮಂಡಲು ಸಹಿತ ಸಹಜವಾಗಿ ಸಂಗಮಕ್ಕೆ ಹೊರಟರು. ॥ ೧೧೪ ॥ ಅಲ್ಲಿ ಹೋಗಿ ಅಶ್ವತ್ಥದ ಬುಡದಲ್ಲಿ

ಕೂತು ಅನುಷ್ಠಾನ ಮಾಡುತ್ತಿದ್ದರು. ಆಗ ಆ ನರಹರಿ ಬ್ರಾಹ್ಮಣನು ಅವನನ್ನು ನೋಡಲಿಕ್ಕೆ ಬರುತ್ತಿದ್ದನು. ಅವನನ್ನು ಕಂಡಕೂಡಲೆ ಶ್ರೀ ಗುರುಗಳ ಮನಸ್ಸು ಪ್ರಸನ್ನವಾಯಿತು. ॥ ೧೧೫ ॥ ಆಗ ಅವರು ಸದಾ ನೀರಿನಿಂದ ತುಂಬಿದ ತಮ್ಮ ಕಮಂಡಲವನ್ನು ಕೈಯಲ್ಲಿ ತಕ್ಕೊಂಡು ಒಂದು ಆ ಒಣ ಕಟ್ಟಿಗೆಗೆ ತಾವೇ ನೀರು ಹಾಕಿದರು. ॥ ೧೧೬ ॥ ಆ ಕೂಡಲೆ ಆ ಕಟ್ಟಿಗೆಯು ಚಿಗಿಯುತ್ತ ಚಿಗಿಯುತ್ತ ಸ್ವಲ್ಪ ಹೊತ್ತಿನಲ್ಲಿ ಔದುಂಬರ ಗಿಡವಾಗಿ ಯಾವತ್ತು ಜನರಿಗೂ ಕಾಣಿಸಿತು. ॥ ೧೧೭ ॥ ಚಿಂತಾಮಣಿಯ ಸ್ಪರ್ಶದಿಂದ ಲೋಹವು ಸುವರ್ಣವಾಗುವಂತೆ ಶ್ರೀ ಗುರುಗಳ ವಾಣಿಯೆಂಬ ಅಮೃತ ರಸದಿಂದ ಆ ಒಣ ಕಟ್ಟಿಗೆಯು ಚಿಗಿತು ಗಿಡವಾಯಿತು. ॥ ೧೧೮ ॥ ಅದು ಹ್ಯಾಗೆ ಹ್ಯಾಗೆ ಚಿಗಿಯುತ್ತ ಹೋಯಿತೋ ಹಾಗೆ ಹಾಗೆ ಅವನ ಕುಷ್ಠವು ಕಡಿಮೆ ಕಡಿಮೆಯಾಗುತ್ತ ಆ ಗಿಡವು ಪೂರ್ಣವಾದಕೂಡಲೆ ಅವನ ಕುಷ್ಠವೆಲ್ಲ ಪೂರ್ಣವಾಗಿ ಹೋಗಿ ಅವನು ಸುದೇಹಿಯಾಗಿ ಸುವರ್ಣ ಕಾಂತಿಯಂತೆ ಹೊಳೆಯಹತ್ತಿದನು ॥ ೧೧೯ ॥ ಆಗ ಆ ನರಹರಿ ಬ್ರಾಹ್ಮಣನು ಅತ್ಯಂತ ಸಂತೋಷವನ್ನು ಹೊಂದಿ ಶ್ರೀ ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಬಹುರೀತಿಯಿಂದ ಸ್ತೋತ್ರ ಮಾಡಹತ್ತಿದನು. ॥ ೧೨೦ ॥
ಹ್ಯಾಗಂದರೆ—

ಇಂದುಕೋಟಿ ತೇಜ ಕರ್ಣಸಿಂಧು ಭಕ್ತವತ್ಸಲಂ ।
ನಂದನಾತ್ರಿ ಸೂನುದತ್ತ, ಇಂದಿರಾಕ್ಷ ಶ್ರೀಗುರುಂ ॥
ಗಂಧಮಾಲ್ಯ ಅಕ್ಷತಾದಿ ವೃಂದದೇವ ವಂದಿತಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ ॥ ೧೨೧ ॥

ಮಾಯಪಾಶ ಅಂಧಕಾರ ಛಾಯದೂರ ಭಾಸ್ಕರಂ ।
ಆಯತಾಕ್ಷ ಪಾಹಿ ಶ್ರೀಯಾ ವಲ್ಲಭೇಶ ನಾಯಕಂ ॥

ಸೇವ್ಯ ಭಕ್ತವೃಂದ ವರದ, ಭೂಯ, ಭೂಯ, ನಮಾಮ್ಯಹಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ || ೧೨೨ ||

ಚಿತ್ರಜಾದಿ ವರ್ಗಷಟ್ಕ ಮತ್ತ ವಾರಣಾಂಕುಶಮ್ ।
ತತ್ವಸಾರ ಶೋಭಿತಾತ್ಮ ದತ್ತ ಶ್ರೀಯಾವಲ್ಲಭಮ್ ||
ಉತ್ತಮಾವತಾರಭೂತ ಕರ್ತೃ ಭಕ್ತವತ್ಸಲಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ || ೧೨೩ ||

ವ್ಯೋಮರಾಪ ವಾಯುತೇಜ ಭೂಮಿ ಕರ್ತೃಮೀಶ್ವರಂ ।
ಕಾಮ ಕ್ರೋಧ ಮೋಹರಹಿತ ಸೋಮ ಸೂರ್ಯಲೋಚನಂ ||
ಕಾಮಿತಾರ್ಥ ದಾತೃ ಭಕ್ತ ಕಾಮಧೇನು ಶ್ರೀಗುರುಮ್ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ || ೧೨೪ ||

ಪುಂಡರೀಕ ಆಯತಾಕ್ಷ ಕುಂಡಲೇಂದು ತೇಜಸಂ ।
ಚಂಡದುರಿತ ಖಂಡನಾರ್ಥ ದಂಡಧಾರಿ ಶ್ರೀಗುರುಂ ||
ಮಂಡಲೀಕ ಮೌಲಿಮಾರ್ತಾಂಡ ಭಾಸಿ ತಾನನಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ || ೧೨೫ ||

ವೇದಶಾಸ್ತ್ರ ಸ್ತುತ್ಯಪಾದ, ಆದಿಮೂರ್ತಿ ಶ್ರೀಗುರುಂ ।
ನಾದಬಿಂದು ಕಲಾತೀತ ಕಲ್ಪಪಾದ ಸೇವ್ಯಯಂ ||

ಸೇವ್ಯ ಭಕ್ತವೃಂದ ವರದ, ಭೂಯ, ಭೂಯ ನಮಾಮ್ಯಹಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ ॥ ೧೬ ॥

ಅಷ್ಟಯೋಗ ತತ್ವನಿಷ್ಠ, ತುಷ್ಟ ಜ್ಞಾನ ವಾರಿಧಿಮ್ ।
ಕೃಷ್ಣವೇಣಿತೀರ ವಾಸ–ಪಂಚನದೀ ಸಂಗಮಮ್ ॥
ಕಷ್ಟದೈನ್ಯ ದೂರಭಕ್ತ ತುಷ್ಟ ಕಾಮ್ಯದಾಯಕಂ ।
ವಂದಯಾಮಿ ನಾರಸಿಂಹ ಸರಸ್ವತೀಶ ಪಾಹಿಮಾಂ ॥ ೧೭ ॥

ನಾರಸಿಂಹ ಸರಸ್ವತೀನಾಮ ಅಷ್ಟಮೌಕ್ತಿಕಮ್ ।
ಹಾರಕೃತ ಶಾರದೇನ ಗಂಗಾಧರ–ಆತ್ಮಜಮ್ ॥
ಧಾರಣೀಕ ದೇವ ದೀಕ್ಷ ಗುರುಮೂರ್ತಿ ತೋಷಿತಮ್ ।
ಪರಮಾತ್ಮಾನಂದ ಶ್ರೀಯಾ ಪುತ್ರಪೌತ್ರದಾಯಕಮ್ ॥ ೧೮ ॥

ನಾರಸಿಂಹ ಸರಸ್ವತೀಯ ಅಷ್ಟಕಂ ಚ ಯಃ ಪಠೇತ್ ।
ಘೋರ ಸಂಸಾರಸಿಂಧು ತಾರಣಾಖ್ಯ ಸಾಧನಂ ॥
ಸಾರಜ್ಞಾನ ದೀರ್ಘ ಆಯುರಾರೋಗ್ಯಾದಿ ಸಂಪದಮ್ ।
ಚಾರುವರ್ಗ ಕಾಮ್ಯಲಾಭ ನಿತ್ಯಮೇನ ಯಃ ಪಠೇತ್ ॥ ೧೯ ॥

ಈ ರೀತಿಯಾಗಿ ಸ್ತೋತ್ರ ಮಾಡಿ ಮತ್ತೆ ಪರೋಪರಿಯಾಗಿ ವಿನಂತೀ ಮಾಡಿಕೊಂಡು— ಸ್ವಾಮೀ, ದೇವಾ, ಶ್ರೀಹರಿಯೇ ನನ್ನಮೇಲೆ ಕೃಪಾ ಮಾಡಿದಿರಿ. ॥೧೩೦॥ ಎಂದು ಅವರ ಚರಣಕ್ಕೆ ಮತ್ತೆ ನಮಸ್ಕರಿಸಿದನು.

ಆಗ ಶ್ರೀಗುರುಗಳು— ಎಲೈ ಜ್ಞಾನರಾಶಿಯೇ ಏಳು. ಎಂದು ತಮ್ಮ ಅಭಯ ಹಸ್ತದಿಂದ ಅವನನ್ನು ಎಬ್ಬಿಸಿದರು. ॥ ೧೩೧ ॥ ಅದನ್ನು ಕಂಡು ಅಲ್ಲಿ ಬಂದ ಯಾವತ್ತು ಜನರು ವಿಸ್ಮಯಬಟ್ಟು, ಒಳ್ಳೇ ಭಕ್ತಿಭಾವದಿಂದ ಶ್ರೀಗುರುಗಳಿಗೆ ನಮಸ್ಕರಿಸುತ್ತ, ನಾನಾರೀತಿಯಿಂದ ಸ್ತೋತ್ರ ಮಾಡುತ್ತಿದ್ದರು. ॥ ೧೩೨ ॥ ಆಮೇಲೆ ಶ್ರೀಗುರುಗಳು ತಮ್ಮ ಸಕಲ ಶಿಷ್ಯರು ಹಾಗು ಅಲ್ಲಿ ಬಂದ ಬ್ರಾಹ್ಮಣರೊಡನೆ ಸಂಗಮದಿಂದ ಹೊರಟು ಗಾಣಗಾಪುರದಲ್ಲಿರುವ ಮಠಕ್ಕೆ ನಡೆದರು. ಆ ಊರ ಹೊರಗೆ ಬರುವಷ್ಟರಲ್ಲಿ ಆ ಊರ ಜನರು ಆನಂದದಿಂದ ಆರತಿಯನ್ನು ತಂದು ಶ್ರೀಗುರುಗಳಿಗೆ ಮಾಡಿದರು. ॥ ೧೩೩ ॥ ಆಮೇಲೆ ಕೇಳಿರಿ. ಶ್ರೀ ಗುರುಗಳು ಸಕಲ ಶಿಷ್ಯರೊಡನೆ ಮಠದಲ್ಲಿ ಬಂದು ಕೂತರು. ಆ ದಿವಸ ಅಸಂಖ್ಯಾತ ಸಮಾರಾಧನೆಯಾಯಿತು. ॥ ೧೩೪ ॥ ಆ ಮೇಲೆ ಶ್ರೀ ಗುರುಗಳು ಸಂತೋಷದಿಂದ ಆ ನರಹರಿ ಬ್ರಾಹ್ಮಣನನ್ನು ಕರೆದು— ಎಲೈ ಬ್ರಾಹ್ಮಣಾ, ನೀನು ಇನ್ನು ಗಂಡು-ಹೆಣ್ಣು ಮಕ್ಕಳನ್ನೂ ಸಂಪತ್ತನ್ನೂ ಗೋಧನವನ್ನೂ ಹೊಂದಿ ಸುಖವಾಗಿರು ನಿನ್ನ ಸಂತತಿಯು ಬೆಳೆಯುವದು ॥ ೧೩೫ ॥ ಈಗ ನಾನು ನಿನಗೆ ನಿಶ್ಚಯವಾಗಿ ಯೋಗೀಶ್ವರನೆಂಬ ಹೆಸರಿಟ್ಟಿದ್ದೇನೆ. ಇನ್ನುಮುಂದೆ ನೀನು ಇದೇ ಹೆಸರಿನಿಂದ ಪ್ರಸಿದ್ಧನಾಗು ಮತ್ತು ನಮ್ಮ ಯಾವತ್ತು ಶಿಷ್ಯರಲ್ಲಿ ನೀನು ಹೆಚ್ಚಿನವನು. ನೀನು ನಮ್ಮ ಭಕ್ತನು ॥ ೧೩೬ ॥ ನಿನ್ನ ವಂಶಪರಂಪರೆಯವರೆಲ್ಲರೂ ವೇದಶಾಸ್ತ್ರ ಸಂಪನ್ನ ಪುರುಷರಾಗುವರು. ನೀನು ಏನೂ ಚಿಂತೆ ಮಾಡಬೇಡ ಎಂದು ವರವನ್ನು ಕೊಟ್ಟು ॥ ೧೩೭ ॥ ಎಲೈ ನರಹರಿಯೇ, ಇನ್ನುಮೇಲೆ ನೀನು ನಿನ್ನ ಊರಿಗೆ ಹೋಗಿ ನಿನ್ನ ಹೆಂಡತಿಯನ್ನು ಕರಕೊಂಡು ಬಂದು ಈ ಗ್ರಾಮದಲ್ಲಿ ಸಂತೋಷದಿಂದ ನಮ್ಮ ಹತ್ತರ ಇರು. ॥ ೧೩೮ ॥ ಎಂದು ಶ್ರೀಗುರುಗಳು ಹೇಳಿ ಅವನಿಗೆ "ವಿದ್ಯಾಸರಸ್ವತಿ" ಎಂಬ ಮಂತ್ರವನ್ನು ಉಪದೇಶ ಮಾಡಿ ॥ ೧೩೯ ॥ ಮತ್ತೆ— ಎಲೈ ಬ್ರಾಹ್ಮಣನೇ, ನಿನಗೆ ಮೂವರು ಗಂಡುಮಕ್ಕಳಾಗುವರು ಅವರಲ್ಲಿ ಒಬ್ಬನು ಯೋಗಿ ಎಂಬ ಹೆಸರಿನಿಂದ ಬಹುರೀತಿಯಾಗಿ ನಮ್ಮ ಸೇವಾ ಮಾಡುವನು ನಿನ್ನ ವಂಶದವರೆಲ್ಲರೂ ನಮ್ಮ ದಾಸರಾಗುವರು ಎಂದು ಶ್ರೀಗುರುಗಳು ಆ ಬ್ರಾಹ್ಮಣನಿಗೆ ಹೇಳಿದರು. ॥ ೧೪೦ ॥ ಎಲೈ ನಾಮಧಾರಕನೇ,

ಶ್ರೀಗುರುಗಳು ಹೇಳಿದಂತೆ ಮುಂದೆ ಆ ಬ್ರಾಹ್ಮಣನಿಗೆ ಸಕಲವೂ ಉಂಟಾದವು. ಕೇಳು ಎಂದು ಸಿದ್ಧರು ಹೇಳಿದರು. ॥ ೧೪೧ ॥ ಎಂದು ಸರಸ್ವತೀ ಗಂಗಾಧರನು— ಈ ಭವಸಾಗರವನ್ನು ದಾಟಲಿಕ್ಕೆ ಏಕಚಿತ್ತದಿಂದ ಗುರುಚರಿತ್ರೆಯನ್ನು ವಿಸ್ತಾರವಾಗಿ ಕೇಳಿರಿ ಎಂದನು ॥ ೧೪೨ ॥ ಹೀಗೆ ಈ ಗುರುಚರಿತ್ರಾಮೃತದಲ್ಲಿ ಕುಷ್ಠಿ ಭಕ್ತನು ಉದ್ಧಾರವಾದನು. ಶ್ರೀ ಗುರುಗಳ ಅತ್ಯದ್ಭುತ ಮಹಿಮೆಯು ಪ್ರಗಟವಾಯಿತೆಂದು ಹೇಳಿದೆ. ॥ ೧೪೩ ॥

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀನರಸಿಂಹಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ, ಗುರುಭಕ್ತಿ, ಚಿತಾಭಸ್ಮೇನ ಶಬರಸ್ಯ ಶಿವ ಪೂಜೆ, ಶುಷ್ಕ ಕಾಷ್ಠ ಸಂಜೀವನ, ಬ್ರಾಹ್ಮಣ ಕುಷ್ಠ ಪರಿಹಾರಂನಾಮ ಚತ್ವಾರಿಂಶೋಽಧ್ಯಾಯಃ ॥ ೪೦ ॥ ಶ್ರೀ ಗುರುದೇವ ದತ್ತ ॥

## — ೪೦ನೇ ಅಧ್ಯಾಯ ಸಮಾಪ್ತ —

---

# ೪೧ನೇಯ ಅಧ್ಯಾಯ



## ಕಾಶೀಯಾತ್ರಾ ನಿರೂಪಣ—ತ್ವಷ್ಟಾಪುತ್ರಾಖ್ಯಾನ—ಸಾಯಂದೇವನಿಗೆ ವರಲಾಭ

ಶ್ರೀ ಗಣೇಶಾಯ ನಮಃ। ಶ್ರೀ ಸರಸ್ವತ್ಯೈ ನಮಃ। ಶ್ರೀ ಗುರುಭ್ಯೋ ನಮಃ। ಆಮೇಲೆ ನಾಮಧಾರಕನು ಎದ್ದು ನಿಂತು, ಒಳ್ಳೆ ಕೌತುಕಪಡುತ್ತ ಸಿದ್ಧರಿಗೆ ಕೈಮುಗಿದು ಸಾಷ್ಟಾಂಗ ನಮಸ್ಕಾರ ಮಾಡಿ ॥ ೧ ॥ ಜಯ ಜಯ ಸಿದ್ಧಮುನಿಗಳೇ, ನೀವು ಈ ಭವಸಾಗರವನ್ನು ದಾಟಿಸುವಂಥವರಾಗಿದ್ದೀರಿ. ನನಗೆ ನಾನಾ ಧರ್ಮಗಳಿಂದ ಕೂಡಿದ ಗುರುಚರಿತ್ರೆಯನ್ನು ನಿರೂಪಿಸಿದಿರಿ ॥ ೨ ॥ ಆದರಿಂದ ನಾನು ಧನ್ಯನಾದೆನು. ದಯಾನಿಧಿಯೇ, ನೀವು ನನಗೆ ಮಹಾ ಜ್ಞಾನವನ್ನು ಪ್ರಕಾಶಗೊಳಿಸಿ, ಗುರುಸ್ಮರಣೆ ಎಂಬ ಅಮೃತವನ್ನು ಕುಡಿಸಿದಿರಿ. ॥ ೩ ॥ ಮತ್ತು ನನ್ನನ್ನು ಧನ್ಯನನ್ನಾಗಿ ಮಾಡಿದಿರಿ. ಈಗ ತಮಗೆ ನನ್ನ ಇನ್ನೊಂದು ವಿನಂತಿ ಏನಂದರೆ, ತಾವು ಸದಾ ಶ್ರೀಗುರುಗಳ ಹತ್ತರವೇ ಇರುತ್ತಿದ್ದಿರಷ್ಟೇ ? ॥ ೪ ॥ ಅಂದಮೇಲೆ ನಮ್ಮ ಪೂರ್ವಜರು ಅವರಿಗೆ ಹ್ಯಾಗೆ ಶಿಷ್ಯರಾದರು ? ಮತ್ತು ಅವರ ಸೇವಾ ಹ್ಯಾಗೆ ಮಾಡಿದರು ? ಎಂಬದನ್ನು ನನಗೆ ವಿಸ್ತಾರವಾಗಿ ಹೇಳಬೇಕು, ಎಂದು ಬೇಡಿಕೊಂಡನು. ॥ ೫ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ನಿನಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳುವೆನು, ಏಕಚಿತ್ತದಿಂದ ಕೇಳು. ॥ ೬ ॥ ಶ್ರೀಗುರುಗಳು ಹಿಂದಕ್ಕೆ ಓಸರ ಗ್ರಾಮದಲ್ಲಿರುವಾಗ ನಿಮ್ಮ ಪೂರ್ವಜನಾದ ಸಾಯಂದೇವನು ಬಂದು ಅವರ ಭೆಟ್ಟಿಯಾಗಿ ಅತಿ ಭಕ್ತಿಯಿಂದ ಅವರನ್ನು ಮನೆಗೆ ಕರಕೊಂಡು ಹೋಗಿ ಅವರ ಪೂಜೆ ಮಾಡಿ ಅವರಿಗೆ ಭಿಕ್ಷೆ ಮಾಡಿಸಿದನು. ಆಗ ಶ್ರೀಗುರುಗಳು ಅವನ ಭಕ್ತಿಗೆ ಮೆಚ್ಚಿ, ಒಳ್ಳೇ ಪ್ರೀತಿ ಸ್ನೇಹಗಳಿಂದ ಅವನಿಗೆ ವರವನ್ನು ಕೊಟ್ಟರೆಂದು ನಿನಗೆ ಹೇಳಿದ್ದಿಲ್ಲವೇ ? ॥ ೮ ॥ ಆಮೇಲೆ ಶ್ರೀಗುರುಗಳು ಅಲ್ಲಿಂದ ದಕ್ಷಿಣಕ್ಕೆ ಹೊರಟು, ಗಾಣಗಾಪುರಕ್ಕೆ ಬಂದರು. ಅಲ್ಲಿ ಶ್ರೀಗುರುಗಳ ಮಹಿಮೆಯು ಅತಿಶಯವಾಗಿ

ಬೆಳೆದು ಹತ್ತೂ ದಿಕ್ಕುಗಳಲ್ಲಿ ಅವರ ಕೀರ್ತಿಯು ಬಹಳ ಹಬ್ಬಿತು. ॥ ೯ ॥ ಆ ಕೀರ್ತಿಯನ್ನು ಕೇಳಿ ಅನೇಕ ಭಕ್ತ ಜನರು ಅಲ್ಲಿಗೆ ಗುರುದರ್ಶನಕ್ಕಾಗಿ ಬಂದು ಸೇವೆ ಮಾಡಿ ತಮ್ಮ ಇಚ್ಛೆಗಳನ್ನು ಪೂರ್ಣ ಮಾಡಿಕೊಳ್ಳುತ್ತಿದ್ದರು. ॥ ೧೦ ॥ ಕೇವಲ ಭಕ್ತವತ್ಸಲರಾದ ಶ್ರೀ ನರಸಿಂಹಸರಸ್ವತಿ ಗುರುಗಳು ಈ ರೀತಿಯಾಗಿ ಗಾಣಗಾಪುರದಲ್ಲಿರುತ್ತಿದ್ದರು. ॥ ೧೧ ॥ ಆಗ ನಿಮ್ಮ ಪೂರ್ವಜನೂ ಶ್ರೀಗುರುಗಳ ಪ್ರಸಿದ್ಧ ಭಕ್ತನೂ ಆದ ಸಾಯಂದೇವನು ಯತಿಗಳಾದ ಶ್ರೀಗುರುಗಳ ಮಹಿಮೆಯನ್ನು ಕೇಳಿದನು. ॥ ೧೨ ॥ ಮನಸಿನಲ್ಲಿ ಒಳ್ಳೇ ಆನಂದವನ್ನು ಹೊಂದಿ, ಹರ್ಷನಿರ್ಭರನಾಗಿ ಒಳ್ಳೇ ಭಕ್ತಿಯಿಂದ ತೀವ್ರವಾಗಿ ನಡೆಯುತ್ತ ಗಾಣಗಾಪುರದ ಸಮೀಪಕ್ಕೆ ಬಂದನು. ॥ ೧೩ ॥ ಸ್ವಲ್ಪ ದೂರವಲ್ಲಿರುವ ಗಾಣಗಾಪುರವನ್ನು ಕಂಡು ಅಲ್ಲಿಂದಲೇ ದಂಡವತ್ ನಮಸ್ಕಾರ ಹಾಕುತ್ತ ನಡೆದನು. ॥೧೪॥ ಹಾಗೆ ದಂಡಪ್ರಣಾಮ ಮಾಡುತ್ತ ಮಠದೊಳಗೆ ಹೋಗಿ ಅಲ್ಲಿ ಕೂತಿರುವ ಅತಿ ಶ್ರೇಷ್ಠ ಮೂರ್ತಿಮಂತ ಶ್ರೀಗುರುಗಳನ್ನು ಕಂಡು ॥ ೧೫ ॥ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಒಳ್ಳೇ ಭಕ್ತಿಭಾವದಿಂದ ಅವರ ಪಾದದಮೇಲೆ ಉರುಳಾಡುತ್ತ, ತನ್ನ ಚೆಂಡಿಕೆಯಿಂದ ಅವರ ಪಾದಧೂಳಿಯನ್ನು ಜಾಡಿಸಿದನು ॥ ೧೬ ॥ ಆಮೇಲೆ ಎದ್ದು ಕೈ ಮುಗಿದು, ಏಕಾಗ್ರ ಮನಸಿನಿಂದ ನಿಂತು — ಸ್ವಾಮೀ, ಗುರುಮೂರ್ತಿಯೇ, ನೀವು ಜ್ಞಾನಿಗಳೂ ತ್ರೈಮೂರ್ತಿ ಅವತಾರಿಕರೂ ಆಗಿರುವಿರಿ. ಎಂದು ಸ್ತುತಿ ಮಾಡಿ— ॥ ೧೭ ॥ ಗುರುವರ್ಯರೇ, ಇಂದು ನಾನು ತಮ್ಮನ್ನು ಕಂಡು ಬಹು ಧನ್ಯನಾದೆನು. ನನ್ನ ಜನ್ಮವು ಸಾರ್ಥಕವಾಯಿತು! ನನ್ನ ಪಿತೃಗಳು ಕೃತಾರ್ಥರಾದರು! ಇವತ್ತಿಗೆ ನನ್ನ ಕೋಟಿ ಜನ್ಮಗಳ ಪಾಪಗಳು ಹೋದವು ಎಂದು ಅವರ ಚರಣಗಳನ್ನು ಹಿಡಿದು ॥ ೧೮ ॥ ಜಯ ಜಯ ಗುರುಮೂರ್ತಿಯೇ, ವಿಶ್ವಪತಿಯೇ, ಪರಮಾತ್ಮನೇ, ಪರಂಜ್ಯೋತಿಯೇ, ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳೇ, ನನ್ನನ್ನು ರಕ್ಷಿಸಿರಿ! ರಕ್ಷಿಸಿರಿ!! ॥ ೧೯ ॥ ಸ್ವಾಮೀ, ಭಕ್ತವತ್ಸಲನೇ ತಾವು ಪರಮಾತ್ಮರೇ ಇರುತ್ತೀರಿ. ತಮ್ಮ ಚರಣಮಹಿಮೆಯನ್ನು ವರ್ಣಿಸಲಿಕ್ಕೆ ನನಗೆ ಶಕ್ತಿಯಿಲ್ಲ. ॥ ೨೦ ॥ ತಮ್ಮ ಮಹತ್ವವಾದ ಚರಣಗಳಿದ್ದಲ್ಲಿ ಕೋಟ್ಯವಧಿ ತೀರ್ಥಗಳಿರುತ್ತವೆ. ಭಕ್ತವತ್ಸಲನೇ, "ಚರಣಂ ಪವಿತ್ರಂ ವಿತತಂ ಪುರಾಣಂ" ಎಂದು ವೇದಗಳು

ವರ್ಣಿಸುವವು. ॥ ೨೧ ॥ ತಾವು ನನಗೆ ನಿರಂತರ ಪ್ರತ್ಯಕ್ಷ ತ್ರಿಮೂರ್ತಿ ಅವತಾರವಾಗಿಯೇ ಕಾಣುತ್ತೀರಿ. ನೀವು ತ್ರೈಮೂರ್ತಿಗಳೇ ಆಗಿರುತ್ತೀರಿ. ॥ ೨೨ ॥ ನೀವು ಕೇವಲ ಪರಬ್ರಹ್ಮರು. ತಮ್ಮ ಒಂದು ಕೈಯಲ್ಲಿ ದಂಡವೂ ಮತ್ತೊಂದು ಕೈಯಲ್ಲಿ ಅಮೃತಕ್ಕೆ ಸಮಾನವಾದ ನೀರು ತುಂಬಿದ ಕಮಂಡಲೂ ಇವೆ. ಆ ಕಮಂಡಲ ದಲ್ಲಿರುವ ಅಮೃತವನ್ನು ಪ್ರೋಕ್ಷಿಸಿ ಸತ್ತವರನ್ನು ಬದುಕಿಸುತ್ತೀರಿ. ॥ ೨೩ ॥ ಶರಣಾಗತರಾದ ನಿಜ ಭಕ್ತರ ಪಾಪ ವನ್ನೂ ಬಡತನವನ್ನೂ ಕಳೆದು ಅವರನ್ನು ರಕ್ಷಿಸುವದಕ್ಕಾಗಿಯೇ ನೀವು ಕೈಯಲ್ಲಿ ದಂಡವನ್ನು ಧರಿಸಿರು ತ್ತೀರಿ. ॥ ೨೪ ॥ ಮೈಯಲ್ಲಿ ಭಸ್ಮವನ್ನೂ ಕೊರಳು ಕರ ಕಂಕಣ ಮೊದಲಾದ ಸ್ಥಾನಗಳಲ್ಲಿ ರುದ್ರಾಕ್ಷ ಮಾಲೆ ಗಳನ್ನೂ ಧರಿಸಿರುವಿರಿ. ನಿಮಗೆ ವ್ಯಾಘ್ರಾಸನವಿರುವದು. ನಿಮಗೆ ಚಂದ್ರನಂತೆ ಅಮೃತ ಸುರಿಸುವ ಎರಡು ಕಣ್ಣುಗಳೂ ಹಣೆಯಲ್ಲಿ ಸೂರ್ಯಾಗ್ನಿಗಳಂತಿರುವ ೩ನೇ ಕಣ್ಣೂ ಇರುವವು. ॥ ೨೫ ॥ ಭಕ್ತರಿಗೆ ಚತುರ್ವಿಧ ಪುರುಷಾರ್ಥಗಳನ್ನು ಕೊಡಲಿಕ್ಕೆ ನೀವೇ ಸಮರ್ಥರು ! ನೀವೇ ಸತ್ಯವಾಗಿ ಶ್ರೀರುದ್ರರು ! ನೀವೇ ನೃಸಿಂಹ ಸ್ವರೂಪರಾದ ಜಗದ್ಗುರುವು. ॥ ೨೬ ॥ ನೀವೇ ಪೀತಾಂಬರಧಾರಿಗಳಾಗಿ ವಿಷ್ಣು ರೂಪದಿಂದ ಭಕ್ತರನ್ನು ರಕ್ಷಿಸು ತ್ತೀರಿ. ನಿಮ್ಮ ಚರಣಗಳಲ್ಲಿ ಸಕಲ ತೀರ್ಥಗಳು ಇವೆ. ನೀವೇ ಭಕ್ತಾಭಿಮಾನಿಯಾದ ವಿಷ್ಣು ಮೂರ್ತಿಯು. ॥ ೨೭ ॥ ನೀವೇ ಬಂಜೆಗೆ ಕನ್ಯಾ-ಪುತ್ರರನ್ನು ಕೊಟ್ಟಿರಿ ಒಣ ಕಟ್ಟಿಗೆಯನ್ನು ಚಿಗುರಿಸಿ ಬ್ರಾಹ್ಮಣನ ಕುಷ್ಠವನ್ನು ಕಳೆದಿರಿ ! ಗೊಡ್ಡೆಮ್ಮೆಯಿಂದ ಹಾಲು ಹಿಂಡಿಸಿ ಕುಡಿದಿರಿ. ಬ್ರಾಹ್ಮಣರ ಸಮಾರಾಧನೆಗಾಗಿ ಅನ್ನವನ್ನು ಅಕ್ಷಯ ಮಾಡಿದಿರಿ ॥ ೨೮ ॥ ತ್ರಿವಿಕ್ರಮ ಮುನಿಗೆ ನೀವು ವಿಷ್ಣುಸ್ವರೂಪವೆಂದು ತಿಳಿಯಲಿಕ್ಕೆ ಅಂತಃಕರಣದಿಂದ ಸಾಕ್ಷೀ ರೂಪವಾಗಿ ವಿಶ್ವರೂಪವನ್ನು ತೋರಿಸಿದಿರಿ. ಆದ್ದರಿಂದ ನೀವೇ ನಿಶ್ಚಯವಾಗಿ ಸಾಕ್ಷಾತ್ ವಿಷ್ಣು ಮೂರ್ತಿಯು ! ॥ ೨೯ ॥ ಮತ್ತು ನೀವು ಪತಿತನಿಂದ ವೇದವನ್ನು ಅನಿಸಿದಿರಿ. ಈ ಪ್ರಕಾರ ಪೂರ್ವದಲ್ಲಿ ನಿಮ್ಮಿಂದ ಅಪಾರ ಮಹಿಮೆಗಳಾದವು. ಭಕ್ತರ ಉದ್ಧಾರಕ್ಕಾಗಿ ಈಗ ನೀವು ಉತ್ತಮ ನರಸಿಂಹ ಮೂರ್ತಿಯ ಅವತಾರ ಧರಿಸಿ ಬಂದಿರುವಿರಿ. ॥ ೩೦ ॥ ಎಂದು ನಾನಾರೀತಿಯಿಂದ ಶ್ರೀಗುರುಗಳನ್ನು ಸ್ತುತಿಸುತ್ತ ಮೇಲಿಂದಮೇಲೆ ನಮಸ್ಕರಿ

ಸುತ್ತ ಸದ್ಗದಿತ ಕಂಠನಾಗಿ ಮೈಯಲ್ಲಿ ರೋಮಾಂಚಗಳುಳ್ಳವನಾದನು. ‖ ೩೧ ‖ ಮತ್ತು ಆನಂದಬಾಷ್ಪಗಳನ್ನು ಸುರಿಸುವವನಾಗಿ ಮನಸಿನಲ್ಲಿ ಸಂತೋಷವು ಹೆಚ್ಚಾಗಲು ಮತ್ತೆ ನವವಿಧ ಭಕ್ತಿಯಿಂದ ಸ್ತುತಿಸಿದನು. ‖ ೩೨ ‖ ಅವನ ಸ್ತುತಿಗೆ ಶ್ರೀಗುರುಗಳು ಸಂತೋಷಬಟ್ಟು ಅವನಿಗೆ ಅಭಯ ಕೊಟ್ಟು ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟು— ಎಲೈ ನಾಯಂದೇವನೇ, ನೀನು ನಮ್ಮ ಪರಮ ಭಕ್ತನು. ‖ ೩೩ ‖ ನಿನ್ನ ಸ್ತುತಿಯಿಂದ ನನಗೆ ಬಹಳ ಸಂತೋಷವಾಗಿದೆ. ನಿನ್ನ ವಂಶದವರೆಲ್ಲರೂ ನಮ್ಮ ದಾಸರಾಗಲಿ ಎಂದು ವರವನ್ನು ಕೊಟ್ಟರು. ‖ ೩೪ ‖ ಈ ಪ್ರಕಾರ ವರವನ್ನು ಕೊಟ್ಟು ಗುರುಗಳು ಸಂತೋಷದಿಂದ ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟು— ಈಗ ನೀನು ಸಂಗಮಕ್ಕೆ ಹೋಗು ‖ ೩೫ ‖ ಸಂಗಮದಲ್ಲಿ ಸ್ನಾನ ಮಾಡಿ ಅಲ್ಲಿ ಅಶ್ವತ್ಥವನ್ನು ಪೂಜಿಸಿ, ತೀವ್ರವಾಗಿ ಮಠಕ್ಕೆ ಬಂದು ನಮ್ಮ ಪಂಕ್ತಿಯಲ್ಲಿ ಭೋಜನ ಮಾಡು ಎಂದು ಹೇಳಿದರು. ‖ ೩೬ ‖ ಈ ಪ್ರಕಾರವಾದ ಗುರುಗಳ ಅಪ್ಪಣೆಯಂತೆ ಅವನು ಕೂಡಲೆ ಸಂಗಮಕ್ಕೆ ಹೋಗಿ ಸ್ನಾನ ಮಾಡಿ, ಅಶ್ವತ್ಥವನ್ನು ಪೂಜಿಸಿ ಮಠಕ್ಕೆ ಬಂದನು. ‖ ೩೭ ‖ ಆಮೇಲೆ ವಿಧಿಪ್ರಕಾರ ಭಕ್ತಿಯಿಂದ ಶ್ರೀಗುರುಗಳನ್ನು ಪೂಜಿಸಿ ಅನೇಕ ತರದ ಪಕ್ವಾನ್ನಗಳಿಂದ ಅವರಿಗೆ ಭಿಕ್ಷೆ ಮಾಡಿಸಿದನು ‖ ೩೮ ‖ ಆಗ ಭಕ್ತವತ್ಸಲರಾದ ಶ್ರೀ ಗುರುಗಳು ಪ್ರೀತಿಯಿಂದ ತಮ್ಮ ಎಲ್ಲ ಶಿಷ್ಯರು ಸಹಿತವಾದ ಪಂಕ್ತಿಯಲ್ಲಿ ಆ ನಾಯಂದೇವನನ್ನು ತಮ್ಮ ಹತ್ತರವೇ ಕೂಡ್ರಿಸಿಕೊಂಡರು ‖ ೩೯ ‖ ಆಮೇಲೆ ಶ್ರೀಗುರುಗಳು ತಮ್ಮ ಶಿಷ್ಯರು ಹಾಗು ನಾಯಂದೇವನ ಸಹಿತವಾಗಿ ಸಂತೋಷದಿಂದ ಭೋಜನ ಮಾಡಿ ಆನಂದದಿಂದ ಮಠದಲ್ಲಿ ಬಂದು ಕೂತರು ‖ ೪೦ ‖ ಆಮೇಲೆ ನಾಯಂದೇವನನ್ನು ಕುರಿತು ಪ್ರೀತಿಯಿಂದ— ಎಲೈ ನಾಯಂದೇವಾ, ನಿನ್ನ ವಾಸಸ್ಥಳವು ಯಾವ ದೇಶದಲ್ಲಿರುವದು ? ನಿನ್ನ ಹೆಂಡರು ಮಕ್ಕಳು ಎಲ್ಲಿದ್ದಾರೆ ? ‖ ೪೧ ‖ ನೀನು ಸಂಸಾರವನ್ನು ಹ್ಯಾಗೆ ಸಾಗಿಸುತ್ತೀ ? ನೀನು ಏನು ಉದ್ಯೋಗ ಮಾಡುತ್ತೀ ? ಎಲೈ ನಾಯಂದೇವನೇ, ನಿನ್ನ ಮೇಲೆ ನಮ್ಮ ಪೂರ್ಣ ಕೃಪಾ ಉಂಟೆಂದು ಸಂತೋಷದಿಂದ ನಿನ್ನ ಕ್ಷೇಮಸಮಾಚಾರವನ್ನು ಕೇಳುತ್ತೇನೆ ಎಂದು ಅಂದರು. ‖ ೪೨ ‖ ಈ ಪ್ರಕಾರ ಗುರುಗಳ ಮಾತನ್ನು ಕೇಳಿ

ಸಾಯಂದೇವನು— ಸ್ವಾಮೀ, ವಿಸ್ತಾರವಾಗಿ ಎಲ್ಲವನ್ನೂ ಹೇಳುತ್ತೇನೆ. ನನ್ನ ಗಂಡು-ಹೆಣ್ಣು ಮಕ್ಕಳೂ ಬಂಧುಗಳೂ ಎಲ್ಲರೂ ಕ್ಷೇಮದಿಂದಿರುವರು. || ೪೩ || ದೇವಾ, ಕೃಪಾಸಿಂಧುವೇ, ನಾನು ಉತ್ತರಕಾಂಚೀ ಎಂಬ ಗ್ರಾಮದಲ್ಲಿದ್ದು ತಮ್ಮ ಕೃಪೆಯಿಂದ ಎಲ್ಲ ರೀತಿಯಿಂದಲೂ ಕ್ಷೇಮವಾಗಿದ್ದೇನೆ. || ೪೪ || ಪುತ್ರವರ್ಗ ದವರೂ, ಬಂಧುಗಳೂ ಸಂಸಾರಯಾತನೆಯನ್ನು ಅನುಭವಿಸುತ್ತಾರೆ. ನನ್ನ ಮನಸಿನಲ್ಲಿ ಶ್ರೀ ಗುರುಗಳ ಸೇವಾ ಮಾಡಬೇಕೆಂಬ ಅಪೇಕ್ಷೆಯಿದೆ. || ೪೫ || ಸ್ವಾಮೀ, ದೇವರಾಯರೇ, ಇನ್ನುಮೇಲೆ ಶ್ರೀ ಗುರುಗಳ ಸೇವಾ ಮಾಡುತ್ತ ಇಲ್ಲೇ ಇರಬೇಕೆಂದು ಮನಸಿನಲ್ಲಿ ನಿಶ್ಚಯ ಮಾಡಿಕೊಂಡು ಬಂದಿರುವೆನು ಎಂದು ಹೇಳಿದನು. || ೪೬ || ಅವನ ಮಾತು ಕೇಳಿ ಶ್ರೀಗುರುಗಳು ನಕ್ಕು— ಎಲೈ ಸಾಯಂದೇವಾ, ನಾವು ಒಂದೇ ಕಡೆಗೆ ಇರುವದಿಲ್ಲ. ಅನೇಕ ಕಡೆಗೆ ವಾಸವಾಗಿರುವೆವು ನಮ್ಮ ಸೇವಾ ಮಾಡುವದು ಬಹಳ ಕಠಿಣವದೆ. || ೪೭ || ನಾವು ಒಂದು ಸಮಯ ದಲ್ಲಿ ಆರಣ್ಯದಲ್ಲಿಯೂ ಅಥವಾ ಒಂದು ಸಮಯದಲ್ಲಿ ಊರಲ್ಲಿಯೂ ಇರುವೆವು. ನಮ್ಮ ಸಂಗಡ ಇದ್ದರೆ ನಿನಗೆ ಬಹು ಕಷ್ಟವಾಗುವದು. ಆ ಕಷ್ಟವನ್ನು ಸಹಿಸುವದು ನಿನ್ನಿಂದ ಹ್ಯಾಗೆ ಶಕ್ಯವಾದೀತು ಎಂದು ಅಂದರು. || ೪೮ || ಈ ಪ್ರಕಾರವಾಗಿ ಶ್ರೀಗುರುಗಳು ಹೇಳಿದ ಮಾತುಗಳನ್ನು ಕೇಳಿ ಆ ಸಾಯಂದೇವ ಬ್ರಾಹ್ಮಣನು ವಿನಯದಿಂದ— ಸ್ವಾಮೀ, ನನ್ನನ್ನು ಶಿಷ್ಯನನ್ನಾಗಿ ಮಾಡಿಕೊಳ್ಳಿರಿ. || ೪೯ || ಮನುಷ್ಯನು ಗುರುಸೇವೆಯನ್ನು ಮಾಡಬೇಕು. ಅವನೇ ಈ ಸಂಸಾರ ದುಃಖವನ್ನು ದಾಟುವನು. ಅಂದಮೇಲೆ ಅವನಿಗೆ ಅತಿಶಯ ದುಃಖವೆಲ್ಲಿಂದ ಬರುತ್ತದೆ? ಅವನು ಸದಾ ಸುಖಿಯಾಗಿಯೇ ಇರುವನು. || ೫೦ || ಶ್ರೀಗುರುಗಳು ತಮ್ಮ ಸೇವಕರಿಗೆ ಚತುರ್ವಿಧ ಪುರು- ಷಾರ್ಥಗಳನ್ನು ಕೊಡಲಿಕ್ಕೆ ಸಮರ್ಥರಿರುತ್ತಾರೆ. ಗುರುಭಕ್ತಿಯೇ ಮುಖ್ಯವೆಂದು ತಿಳಿದು ಮಾಡುವವನಿಗೆ ನರಕದ ಭಯವಿಲ್ಲ ಎಂದನು. || ೫೧ || ಈ ಪ್ರಕಾರ ಸಾಯಂದೇವನು ಭಕ್ತಿಯಿಂದ ವಿನಂತೀ ಮಾಡಿಕೊಳ್ಳಲಾಗಿ ಶ್ರೀಗುರುಗಳು ಸಂತೋಷಪಟ್ಟರು. || ೫೨ || ಆಮೇಲೆ ಶ್ರೀಗುರುಗಳು— ಎಲೈ ಸಾಯಂದೇವಾ, ಈಗ ನೀನು ಅಂದಂತೆ ನಿನ್ನ ಮನಸಿನಲ್ಲಿ ದೃಢ ಭಕ್ತಿ ಇದ್ದರೆ, ಅದರಂತೆ ನಮ್ಮ ಸೇವೆಯನ್ನು ಸ್ವೀಕಾರ ಮಾಡು ಎಂದು

ಅಂದರು. ॥ ೫೩ ॥ ಎಲೈ ಶಿಷ್ಯಾ ನಾಮಧಾರಕಾ ಕೇಳು. ಆಗ ನಿಮ್ಮ ಸಾಯಂದೇವನು ಮನಸ್ಸು ಗಟ್ಟಿಮಾಡಿ ಮೂರು ತಿಂಗಳ ವರೆಗೆ ಒಳ್ಳೇ ಭಕ್ತಿಯಿಂದ ಗುರುಚರಣ ಸೇವೆಯನ್ನು ಮಾಡಹತ್ತಿದನು. ॥ ೫೪ ॥ ಈ ಪ್ರಕಾರ ನಡೆದಿರಲು ಒಂದು ದಿವಸ ಶ್ರೀಗುರುಗಳು ಭಕ್ತನಾದ ಸಾಯಂದೇವನ ಮನಸ್ಸನ್ನು ಪರೀಕ್ಷಿಸುವದಕ್ಕಾಗಿ, ಉಳಿದ ಯಾವತ್ತೂ ಶಿಷ್ಯರನ್ನು ಮಠದಲ್ಲಿಯೇ ಬಿಟ್ಟು, ಹೊತ್ತು ಮುಳುಗುವ ಮುಂದೆ ನಿಮ್ಮ ಭೋಳೇ ಸಾಯಂದೇವನೊಬ್ಬನನ್ನೇ ಸಂಗಡ ಕರಕೊಂಡು ಸಂಗಮಕ್ಕೆ ಹೊರಟರು. ಸಾಯಂದೇವನೂ ಅವರ ಸಂಗಡ ಸಂಗಮಕ್ಕೆ ಹೋಗಹತ್ತಿದನು ॥ ೫೫-೫೬ ॥ ಈ ಪ್ರಕಾರ ಶ್ರೀಗುರುಗಳು ಸೂರ್ಯಾಸ್ತವಾಗುವ ಸಮಯದಲ್ಲಿ ಭಕ್ತನ ಸಹಿತವಾಗಿ ಸಂಗಮಕ್ಕೆ ಹೋಗಿ ಅಲ್ಲಿರುವ ಅಶ್ವತ್ಥಗಿಡದ ಕೆಳಗೆ ಕೂತುಕೊಂಡು ಸುಖಕರವಾದ ಮಾತಾಡುತ್ತಿದ್ದರು. ॥ ೫೭ ॥ ಮುಂದೆ ಸ್ವಲ್ಪ ಹೊತ್ತಿನಲ್ಲಿ ಸೂಯಾಸ್ತವಾಗಿ ಸ್ವಲ್ಪ ಕತ್ತಲಾಯಿತು. ಆಗ ಶ್ರೀಗುರುಗಳು ಮನಸಿನಲ್ಲಿ— ಈ ಸಾಯಂದೇವನ ಮನುಸ್ಸು ದೃಢವಾಗಿರುವದೆಂಬದನ್ನು ನೋಡಲಿಕ್ಕೆ ಏನು ಉಪಾಯ ಮಾಡಬೇಕು ಎಂದು ವಿಚಾರ ಮಾಡಿ ॥ ೫೮ ॥ ಒಮ್ಮಿಂದೊಮ್ಮೆ ಭಯಂಕರ ಗಾಳಿಯನ್ನುಂಟುಮಾಡಿದರು. ಆದರಿಂದ ದೊಡ್ಡ ದೊಡ್ಡ ಗಿಡಗಳು ಕಿತ್ತಿ ಬೀಳುವಂತೆ ಕಾಣಿಸಿತು. ಕೂಡಲೆ ಒನಿಕೆಗಡುತರ ಧಾರೆಯಿಂದ ಮಳೆಯು ಸುರಿಯಹತ್ತಿತು. ॥ ೫೯ ॥ ಆಗ ಅಲ್ಲಿಯೇ ಹತ್ತರಿದ್ದ ಸಾಯಂದೇವನು ಶ್ರೀಗುರುಗಳಿಗೆ ಚೆನ್ನಾಗಿ ವಸ್ತ್ರಗಳನ್ನು ಹೊಡಿಸಿ, ಬೆಚ್ಚಗೆ ಕೂಡ್ರಲಿಕ್ಕೆ ಆ ಗಿಡದ ಕೆಳಗೆ ಸ್ಥಳವನ್ನು ಮಾಡಿ ಕೊಟ್ಟು ಸೇವಾ ಮಾಡಿದನು. ॥ ೬೦ ॥ ಸಾಯಂದೇವನು ತಾನು ಎಲ್ಲಾ ಮಳೆಗಾಳಿಗಳನ್ನು ಸಹಿಸುತ್ತ, ಶ್ರೀಗುರುಗಳ ಎದುರಿಗೆ ಕೈ ಮುಗಿದುಕೊಂಡು ನಿಂತು, ಒಂದೇ ಮನಸಿನಿಂದ ಸೇವಾ ಮಾಡುತ್ತಿದ್ದನು. ॥ ೬೧ ॥ ಈ ಪ್ರಕಾರ ೨ ಪ್ರಹರ ರಾತ್ರಿಯಾದರೂ ಗಾಳಿಯೂ ಮಳೆಯೂ ಮತ್ತಿಷ್ಟು ಹೆಚ್ಚಾಗಿ ಶ್ರೀ ಗುರುಗಳಿಗೆ ಅತ್ಯಂತ ಚಳಿಯೂ ಹತ್ತಿತು. ॥ ೬೨ ॥ ಆಗ ಶ್ರೀ ಗುರುಗಳು— ಎಲೈ ಸಾಯಂದೇವನೇ, ನಮಗೆ ಬಹಳ ಚಳಿಯಾಗುತ್ತದೆ. ಕಾರಣ ಈಗ ನೀನು ಮಠಕ್ಕೆ ಹೋಗಿ, ಕಾಸಿಕೊಳ್ಳುವದಕ್ಕಾಗಿ ಬೆಂಕಿಯನ್ನು ತಕ್ಕೊಂಡು ಬಾ ಎಂದು

ಹೇಳಿದರು. ‖ ೬೩ ‖ ಎಲೈ ನಾಮಧಾರಕನೇ, ಈ ಪ್ರಕಾರ ಗುರುಗಳ ಅಪ್ಪಣೆಯಾದ ಕೂಡಲೆ ಮಹಾ ಜ್ಞಾನಿ ಯಾದ ಸಾಯಂದೇವನು ಅನುಮಾನ ಮಾಡದೆ ಮನಸ್ಸು ಗಟ್ಟಿಮಾಡಿಕೊಂಡು ಬೆಂಕಿಯನ್ನು ತರಲಿಕ್ಕೆ ಹೊರ ಟನು. ‖ ೬೪ ‖ ಶಿಷ್ಯನು ಹೊರಟದ್ದನ್ನು ಕಂಡು ಶ್ರೀ ಗುರುಗಳು ನಕ್ಕು— ಎಲೈ ಸಾಯಂದೇವಾ, ನೀನು ಹೋಗುವಾಗ ಬರುವಾಗ ಎಡಕ್ಕೂ ಬಲಕ್ಕೂ ಮಾತ್ರ ನೋಡಬೇಡ ಎಂದು ಹೇಳಿದರು. ‖ ೬೫ ‖ ಈ ಪ್ರಕಾರ ಗುರುಗಳ ಅಪ್ಪಣೆಯಂತೆ ಸಾಯಂದೇವನು ತೀವ್ರವಾಗಿ ಹೊರಟನು. ‖ ೬೬ ‖ ಆ ಭಯಂಕರ ಕತ್ತಲೆಯಲ್ಲಿ ಅತಿಶಯವಾಗಿ ಮಳೆ ಬರುತ್ತಿದ್ದದರಿಂದ ಹಾದಿಯು ಯಾವದೆಂಬದು ಸಹ ತಿಳಿಯುತ್ತಿದ್ದಿಲ್ಲ. ಆದರೂ ಅವನು ಭಕ್ತಿಯಿಂದ ಹೋಗುತ್ತಿದ್ದನು ‖ ೬೭ ‖ ಮನಸ್ಸಿನಲ್ಲಿ ಶ್ರೀ ಗುರುಗಳನ್ನು ಧ್ಯಾನಿಸುತ್ತ, ಆಗಾಗ್ಗೆ ಬೀಳುವ ಮಿಂಚಿನ ಬೆಳಕಿನ ಮೇಲಿಂದ ಹಾಗೇ ಮಾರ್ಗವನ್ನು ಗುರ್ತುಹಿಡಿದು ಹೋಗುತ್ತಿದ್ದನು. ‖ ೬೮ ‖ ಈ ಪ್ರಕಾರ ಹೋಗುತ್ತ ಆ ಸಾಯಂದೇವನು ತೀವ್ರವಾಗಿ ಗಾಣಗಾಪುರವನ್ನು ಮುಟ್ಟಿದನು ಕೂಡಲೆ ಮಹಾದ್ವಾರದ ಹತ್ತರ ಬಂದು ದ್ವಾರಪಾಲಕನನ್ನು ಒದರಿ ಎಬ್ಬಿಸಿ ‖ ೬೯ ‖ ಅವನಿಗೆ ಸಕಲ ವೃತ್ತಾಂತವನ್ನು ಹೇಳಿದನು. ಅವನು ಕೂಡಲೆ ಬೆಂಕಿಯನ್ನು ತಂದು ಕೊಟ್ಟನು. ಸಾಯಂದೇವನು ಅದನ್ನು ಒಂದು ಪಾತ್ರೆಯಲ್ಲಿ ಹಾಕಿ ಕೊಂಡು ತಕ್ಕೊಂಡು ನಡೆದನು. ‖ ೭೦ ‖ ಕತ್ತಲೆಯಲ್ಲಿ ದಾರಿಯು ಕಾಣುತ್ತಿದ್ದಿಲ್ಲ ಮಿಂಚಿನ ಬೆಳಕಿನಲ್ಲಿ ಹೋಗುತ್ತಿದ್ದನು. ಹೀಗೆ ಹೋಗಹೋಗುತ್ತ ಅವನು ಮನಸಿನಲ್ಲಿ— ನಾನು ಬರುವಾಗ ಶ್ರೀ ಗುರುಗಳು ಒಂದು ಮಾತು ಹೇಳಿದರಲ್ಲಾ ಎಂದು ‖ ೭೧ ‖ ವಿಚಾರ ಮಾಡುತ್ತ— ಓಹೋ ! ಹೋಗುವಾಗ ಬರುವಾಗ ನಿಶ್ಚಯ ವಾಗಿ ಎಡಕ್ಕೂ ಬಲಕ್ಕೂ ನೋಡಬೇಡ ಎಂದು ಶ್ರೀ ಗುರುಗಳು ಹೇಳಿದರು. ಹೀಗ್ಯಾಕೆ ಹೇಳಿದ್ದಾರು ? ಅಲ್ಲಿ ಯಾವಪ್ರಕಾರ ಸ್ಥಿತಿ ಇರುವದು ನೋಡುವಾ ಎಂದು ‖ ೭೨ ‖ ಬಲಕ್ಕೆ ನೋಡಲು ಅಲ್ಲಿ ಒಂದು ದೊಡ್ಡ ಐದು ಹೆಡೆಯ ಸರ್ಪವು ಕಾಣಿಸಿತು. ಅದನ್ನು ಕಂಡು ಹೆದರಿ ಎಡಕ್ಕೆ ಓಡಹತ್ತಿದನು, ಅಲ್ಲಿಯೂ ಅದರಂಥ ಅದ್ಭುತ ವಾದ ಒಂದು ದೊಡ್ಡ ಹಾವು ಕಾಣಿಸಿತು. ‖ ೭೩ ‖ ಅವೆರಡೂ ಹಾವುಗಳು ಅವನ ಸಂಗಡಲೇ ಓಡಿ ಬರುತ್ತಿ

ದ್ದವು. ಆಗ ನಿಮ್ಮ ಸಾಯಂದೇವ ಬ್ರಾಹ್ಮಣನು ಮನಸಿನಲ್ಲಿ ಹೆದರಿ ಅಂಜಿಕೆಯಿಂದ ಓಡುತ್ತ ಹೋಗುತ್ತಿದ್ದನು. || ೭೪ || ಅವನು ಆ ಕತ್ತಲೆಯಲ್ಲಿ ಹಾದೀ ಬಿಟ್ಟು ಅಡವಿಯಲ್ಲಿ ಹೋದರೂ ಆವೆರಡೂ ಸರ್ಪಗಳು ಆವನ ಸಂಗಡಲೇ ಬರುತ್ತಿದ್ದವು. ಅದನ್ನು ಕಂಡು ಮತ್ತಿಷ್ಟು ಹೆದರಿ ಅವನು ಮತ್ತಿಷ್ಟು ತೀವ್ರವಾಗಿ ಓಡುತ್ತಿದ್ದನು. || ೭೫ || ಮತ್ತು ಒಂದೇ ಮನಸ್ಸಿನಿಂದ ಶ್ರೀ ಗುರುಗಳನ್ನು ನೆನಿಸುತ್ತ ಧೈರ್ಯದಿಂದ ಹೋಗುತ್ತ ಸಂಗಮದ ಸಮೀಪಕ್ಕೆ ಹೋದನು. || ೭೬ || ಆಗ ದೂರದಿಂದ ಶ್ರೀ ಗುರುಗಳನ್ನು ನೋಡಿದನು. ಆಗ ಅವರ ಸುತ್ತುಮುತ್ತು ಸಾವಿರಾರು ದೀವಗಳ ಪ್ರಕಾಶವು ಕಾಣಿಸಿದ್ದಲ್ಲದೆ, ವೇದ ಧ್ವನಿಯೂ ಕೇಳಿಸುತ್ತಿತ್ತು. || ೭೭ || ಹಾಗೇ ಅವನು ಶ್ರೀ ಗುರುಗಳ ಹತ್ತರ ಹೋಗಲು, ಅಲ್ಲಿ ಅವನಿಗೆ ಶ್ರೀ ಗುರುಗಳೊಬ್ಬರೇ ಕಾಣಿಸಿದರೇ ಹೊರತು ಬೇರೆ ಏನೂ ಕಾಣಲಿಲ್ಲ. ಅಷ್ಟರಲ್ಲಿ ಮೋಡಹರಿದು ಪೌರ್ಣಿಮೆಯ ಚಂದ್ರನ ಪ್ರಕಾಶವು ಬಿದ್ದು ಎಲ್ಲಕಡೆಯ ಕತ್ತಲೆಯು ಹೋಯಿತು. || ೭೮ || ಆಗ ಅವನು ಆ ಅಗ್ನಿಯನ್ನು ಹೊತ್ತಿಸಿ ಪ್ರಜ್ವಲಿತ ಮಾಡಿದನು. ಅದರಿಂದ ಬಹಳವಾಗಿ ಪ್ರಕಾಶವಾಯಿತು. ಆಗ ಆ ಬ್ರಾಹ್ಮಣನು ಸಮಾಧಾನಹೊಂದಿ ಶ್ರೀ ಗುರುಗಳನ್ನು ನೋಡುತ್ತ ನಿಂತಿದ್ದನು. || ೭೯ || ಆಗ ಆವೆರಡೂ ಸರ್ಪಗಳು ಬಂದು ಶ್ರೀ ಗುರುಗಳಿಗೆ ನಮಸ್ಕರಿಸಿ ಕೂಡಲೆ ಹೊರಟು ಹೋದವು ಆಗ ಸಾಯಂದೇವನು ಅವನ್ನು ಕಂಡು ಪೂರ್ವದಂತೆ ಹೆದರಿದನು. || ೮೦ || ಅದನ್ನು ಕಂಡು ಗುರುಗಳು— ಸಾಯಂದೇವಾ, ಯಾಕೆ ಅಂಜಿದಿ ? ಈ ಹಾವುಗಳನ್ನು ಕಂಡು ಹೆದರಿದೇನು ? ನಾನು ನಿನ್ನ ರಕ್ಷಣೆಗಾಗಿ ಆ ಎರಡು ಸರ್ಪಗಳನ್ನು ಕಳಿಸಿದ್ದೆನು || ೮೧ || ಇನ್ನುಮೇಲೆ ಸ್ವಲ್ಪಾದರೂ ಹೆದರಬೇಡ ನಮ್ಮ ಸೇವೆಯು ಎಷ್ಟು ಕಠಿಣವದೆ ಎಂಬದನ್ನು ನೋಡಿದೆಯಾ ? ಇನ್ನಾದರೂ ಪೂರ್ಣ ವಿಚಾರ ಮಾಡಿ ನಮ್ಮ ಸೇವೆಯನ್ನು ಸ್ವೀಕರಿಸು. || ೮೨ || ಗುರುಭಕ್ತಿಯು ಕಠಿಣವಿರುತ್ತದೆ. ದೃಢಭಕ್ತಿಯಿಂದ ಸೇವಾ ಮಾಡುವಂಥ ಶಿಷ್ಯನು ಈ ಕಲಿಯುಗದಲ್ಲಿ ಸಿಗುವದಿಲ್ಲ. ಶಿಕ್ಕರೂ ಅಪರೂಪ ಆದ್ದರಿಂದ ನೀನೂ ಪೂರ್ಣ ವಿಚಾರ ಮಾಡು ಎಂದು ಹೇಳಿದರು. || ೮೩ || ಆಗ ಸಾಯಂದೇವನು ಅತಿ ದೀನ

ನಾಗಿ, ಶ್ರೀಗುರುಚರಣಗಳಿಗೆ ನಮಸ್ಕರಿಸಿ, ಸ್ವಾಮೀ, ನನ್ನಮೇಲೆ ಕೃಪಾ ಮಾಡಿರಿ ಎಂಬ ವಿನಯದಿಂದ ‖ ೮೪ ‖—ಹೇ ತಂದೇ, ಶ್ರೀಗುರುವೇ, ಯಾತರಿಂದ ನನ್ನ ಮನಸ್ಸು ಸ್ಥಿರವಾಗಿ ಸೇವೆ ಮಾಡುತ್ತ ಕಡೆತನಕ ನಿಮ್ಮ ಹತ್ತರ ಇರಬೇಕೋ ಅಂಥ ಗುರುಭಕ್ತಿಯ ಪ್ರಕಾರವನ್ನು ದಯಮಾಡಿ ನನಗೆ ಹೇಳಬೇಕು ಎಂದು ಬೇಡಿಕೊಂಡನು. ‖ ೮೫ ‖ ಆಗ ಶ್ರೀಗುರುಗಳು— ಎಲೈ ಸಾಯಂದೇವಾ, ಈಗ ಬ್ರಾಹ್ಮ್ಯಮುಹೂರ್ತ ಬರುವತನಕ ಈ ರಾತ್ರಿಯಲ್ಲಿ ಹೊತ್ತು ಹೋಗುವದಿಲ್ಲ. ಆದ್ದರಿಂದ ನಿನಗೆ ಒಂದು ಸುಂದರವಾದ ಕಥೆಯನ್ನು ಹೇಳುವೆನು ಕೇಳು. ‖ ೮೬ ‖

ಪೂರ್ವದಲ್ಲಿ ವ್ಯೋಮಕೇಶನಾದ ಶ್ರೀಶಂಕರನು ಕೈಲಾಸ ಶಿಖರದಲ್ಲಿ ಅರ್ಧಾಂಗಿಯಾದ ಪಾರ್ವತೀ ಸಹಿತ ಕೂತುಕೊಂಡು ಆಕೆಗೆ ಏಕಾಂತದಲ್ಲಿ ಕಥೆಗಳನ್ನು ಹೇಳುತ್ತಿದ್ದನು. ‖ ೮೭ ‖ ಆಗ ಗಿರಿಜೆಯು ಈಶ್ವರನನ್ನು ಕುರಿತು— ಸ್ವಾಮೀ, ಗುರುಭಕ್ತಿ ಎಂಬುವದು ಯಾವ ಪ್ರಕಾರವಾಗಿರುತ್ತದೆ? ಅದನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದು ಕೇಳಿದಳು. ‖ ೮೮ ‖ ಆಗ ಶ್ರೀಶಿವನು— ಎಲೈ ಗಿರಿಜೇ, ಕೇಳು ಒಂದೇ ಮನಸಿನಿಂದ ಗುರುಭಕ್ತಿಯನ್ನು ಮಾಡಬೇಕು. ಆ ಗುರುಭಕ್ತಿಯಿಂದಲೇ ಸರ್ವ ಇಷ್ಟಾರ್ಥಗಳು ಸಿದ್ಧಿಸುವವು. ಯಾವನು ಕಲ್ಯಾಣಕರ್ತನೋ ಅವನೇ ಗುರುವು. ‖ ೮೯ ‖ ಈ ಗುರುಭಕ್ತಿಯ ಬಗ್ಗೆ ಒಂದು ಆಖ್ಯಾನವಿರುವದು, ಅದನ್ನು ನಿನಗೆ ವಿಸ್ತಾರವಾಗಿ ಹೇಳುವೆನು ಎಲೈ ಗಿರಿಜೇ, ಅದನ್ನು ನೀನು ಒಂದೇ ಮನಸಿನಿಂದ ಕೇಳು. ‖ ೯೦ ‖ ಗುರುಭಕ್ತಿ ಎಂಬುವದು ಅತ್ಯಂತ ಸುಲಭವಾದದ್ದೆಂದು ತಿಳಿ. ‖ ೯೧ ‖ ಯಾಕಂದರೆ, ನಾನಾತರದ ತಪಸ್ಸು, ಅನುಷ್ಠಾನ, ಯಜ್ಞಗಳನ್ನು ಒಳ್ಳೇ ಜ್ಞಾನಪೂರ್ವಕ ಮಾಡಿದರೂ ಆಗ ಅನೇಕ ವಿಘ್ನಗಳು ಒದಗುವವು, ಆದರಿಂದ ಅವು ಸಾಧ್ಯವಾಗುವದು ದುರ್ಲಭವು ‖ ೯೨ ‖ ಒಂದು ವೇಳೆ ಅವುಗಳಿಂದ ಇಷ್ಟಾರ್ಥಗಳು ಸಿದ್ಧಿಯಾಗಬೇಕಾದರೆ ಬಹಳ ತಡವಾಗುವದು. ಯಾವನು ನಿರ್ಮಲ ಮನಸ್ಸಿನಿಂದಲೂ ಭಕ್ತಿಯಿಂದಲೂ ಗುರುಭಕ್ತಿಯನ್ನು ಮಾಡುತ್ತಾನೋ, ಅವನಿಗೆ ಆ ಕ್ಷಣವೇ ಯಜ್ಞ, ದಾನ, ತಪಸ್ಸು, ಅನುಷ್ಠಾನಗಳ ಪೂರ್ಣ ಫಲವು ಬಂದು

ಸರ್ವ ಸಿದ್ಧಿಗಳುಂಟಾಗುವವು. ॥ ೯೩ ॥ ಯಾವನು ಗುರುಕುಲವಾಸ ಮಾಡಿ ತಿಳಕೊಂಡು ಏಕಚಿತ್ತದಿಂದ ಶ್ರೀಗುರುಗಳನ್ನು ಆರಾಧಿಸುವನೋ ಅವನಿಗೆ ಸರ್ವಸಿದ್ಧಿಗಳಾಗುವವು. ಆದ್ದರಿಂದ ಗುರುಭಕ್ತಿಯು ಪ್ರಯಾಸವಿಲ್ಲದ್ದೂ ಸುಲಭವಾದದ್ದೂ ಇರುತ್ತದೆ. ॥ ೯೪ ॥ ಎಲೈ ಗಿರಿಜೇ, ಈ ಬಗ್ಗೆ ನಿನಗೆ ಒಂದು ದೃಷ್ಟಾಂತವನ್ನು ಹೇಳುತ್ತೇನೆ. ಏಕಚಿತ್ತದಿಂದ ಕೇಳು. ಬ್ರಹ್ಮನ ಪೂರ್ಣ ಅವತಾರವಾದ ತ್ವಷ್ಟಾ ಬ್ರಹ್ಮಾ ಎಂಬವನಿದ್ದನು. ॥ ೯೫ ॥ ಅವನಿಗೆ ಅತಿ ಲಾವಣ್ಯವಂತನೂ ಸುಂದರನೂ ಆದ ಒಬ್ಬ ಮಗನು ಹುಟ್ಟಿ, ಅವನು ಸರ್ವ ಧರ್ಮಗಳಲ್ಲಿ ಕುಶಲನೂ ಧೀರನೂ ಆಗಿ ಉಪನಯನಕ್ಕೆ ಯೋಗ್ಯನಾದನು. ॥ ೯೬ ॥ ಆಗ ತ್ವಷ್ಟಾ ಬ್ರಹ್ಮನು ಮಗನ ಉಪನಯನವನ್ನು ಮಾಡಿ ವಿದ್ಯಾಭ್ಯಾಸಕ್ಕೆಂದು ಅವನನ್ನು ಒಬ್ಬ ಗುರುಗಳ ಮನೆಯಲ್ಲಿ (ಹತ್ತರ) ಇಟ್ಟನು. ॥ ೯೭ ॥ ಆ ಬ್ರಹ್ಮಚಾರಿಯು ಅನೇಕ ರೀತಿಯಿಂದ ಗುರುಸೇವೆಯನ್ನು ಮಾಡುತ್ತಿದ್ದನು. ಹೀಗೆ ಕೆಲವು ದಿವಸಗಳಾದಮೇಲೆ ಒಂದು ಅಪೂರ್ವ ಸಂಗತಿಯು ವರ್ತಿಸಿತು. ॥ ೯೮ ॥ ಒಂದುದಿವಸ ಬಹಳ ಮಳೆ ಬಂದು ಆ ಗುರುಗಳ ಪರ್ಣಶಾಲೆಯು ಸೋರಹತ್ತಿತು. ॥ ೯೯ ॥ ಆಗ ಆ ಗುರುಗಳು ಆ ಬ್ರಹ್ಮಚಾರಿಯನ್ನು ಕುರಿತು— ಎಲೈ ಶಿಷ್ಯನೇ, ನಮಗೆ ಒಂದು ಗಟ್ಟಿಮುಟ್ಟಿಯಾದ ಮನೆಯನ್ನು ತೀವ್ರವಾಗಿ ಮಾಡಿಕೊಡು. ॥ ೧೦೦ ॥ ಈಗಿದ್ದ ಪರ್ಣಶಾಲೆಯು ಬಹಳ ಹಳೇದಾದ್ದರಿಂದ ಪ್ರತಿವರ್ಷ ಸೋರುತ್ತಿರುತ್ತದೆ. ಆದ್ದರಿಂದ ಎಂದೂ ಜೀರ್ಣವಾಗದಂಥ ಗಟ್ಟಿಯಾದ ಒಂದು ಮನೆಯನ್ನು ಕಟ್ಟಬೇಕು. ॥ ೧೦೧ ॥ ಮತ್ತು ಆ ಮನೆಯು ಎಂದೂ ಮುರಿಯದಂಥಾದ್ದೂ ಒಳ್ಳೇ ಸ್ಥಿರವಾಗಿರುವಂಥಾದ್ದೂ ಅತಿ ರಮ್ಯ ಹಾಗು ಮನೋಹರವಾಗಿ ಕಾಣುವಂಥಾದ್ದೂ ಸರ್ವ ಸಾಹಿತ್ಯಗಳಿಂದ ಸಹಿತವಾದಂಥಾದ್ದೂ ಒಂದು ಮನೆಯನ್ನು ತೀವ್ರ ಕಟ್ಟು ಎಂದು ಗುರುಗಳು ಹೇಳಿದರು. ॥ ೧೦೨ ॥ ಈ ಪ್ರಕಾರ ಗುರುಗಳು ಹೇಳುವ ಸಮಯದಲ್ಲಿಯೇ ಗುರುಪತ್ನಿಯು ಬಂದು ಅತಿ ಪ್ರೀತಿಯಿಂದ ಅಪ್ಪಾ ಶಿಷ್ಯ ಶಿರೋಮಣಿಯೇ ನನಗೊಂದು ಕುಪ್ಪುಸವನ್ನು ತಂದುಕೊಡು. ॥ ೧೦೩ ॥ ಅದು ನೇದದ್ದೂ ಹೊಲಿದದ್ದೂ ಆಗಿರಬಾರದು. ಅದು ವಿಚಿತ್ರವಾದ ಬಣ್ಣಗಳಿಂದ ಮಾಡಿದಂಥಾದ್ದೂ, ನನ್ನ

ಮೈಗೆ ಹಾಳತವಾಗುವಂಥಾದ್ದೂ ಇರಬೇಕು. ಅಂಥ ಒಂದು ಕುಪ್ಪುಸವನ್ನು ತೀವ್ರವಾಗಿ ತಕ್ಕೊಂಡುಬಾ ಎಂದು ಹೇಳಿದಳು. ||೧೦೪|| ಆಮೇಲೆ ಗುರುಪುತ್ರನು ಬಂದು— ಎಲೈ ಬ್ರಹ್ಮಚಾರಿಯೇ, ನಾನು ಬೇಡುವಂಥಾದ್ದನ್ನು ತೀವ್ರವಾಗಿ ತಕ್ಕೊಂಡು ಬಾ. ಏನಂದರೆ ನನಗೆ ನೀರಮೇಲೆ ನಡೆಯಲಿಕ್ಕೆ ಬರುವಂಥ ಪಾದುಕಾಗಳು ಬೇಕು. ||೧೦೫|| ಹಾಗೂ ಅವುಗಳಿಗೆ ಕೆಸರು ಹತ್ತಬಾರದು. ಅವು ನನ್ನ ಕಾಲುಗಳಿಗೆ ಹಾಳತಾಗಿರಬೇಕು. ಮತ್ತು ನಾನು ಅವುಗಳಮೇಲೆ ನಿಂತು ಎಲ್ಲಿಗೆ ಹೋಗಬೇಕೆನ್ನುವೆನೋ ಅಲ್ಲಿಗೆ ಹೋಗಬೇಕು. ಅಂಥಾ ಪಾದುಕಾಗಳನ್ನು ತೀವ್ರವಾಗಿ ತಕ್ಕೊಂಡು ಬಾ ಎಂದು ಹೇಳಿದನು. ||೧೦೬|| ಅಷ್ಟರಲ್ಲಿ ಗುರುಪುತ್ರಿಯು ಬಂದು ಏನು ಮಾಡಿದಳೆಂದರೆ, ಹೋಗುವಂಥ ಆ ಬ್ರಹ್ಮಚಾರಿಯ ಧೋತರದ ಶೆರಗನ್ನು ಹಿಡಿದು— ಎಲೈ ಬ್ರಹ್ಮಚಾರಿಯೇ ನನಗೆ ಏನಾದರೂ ತರಬೇಕು ||೧೦೭|| ನನಗೆ ಕಿವಿಯೊಳಗೆ ಹಾಕುವಂಥ ದೊಡ್ಡ ವಾಲೆಗಳನ್ನು ತಕ್ಕೊಂಡು ಬರಬೇಕು. ಮತ್ತು ನನಗೆ ಆಡಲಿಕ್ಕೆ ಒಂದು ಮನೆಯನ್ನು ತರಬೇಕು. ||೧೦೮|| ಅದು ಆನೇ ಹಲ್ಲಿನಿಂದ ಉತ್ತಮವಾಗಿ ಮಾಡಿದಂಥಾದ್ದೂ, ಒಂದೇ ಕಂಬದಿಂದ ಕೂಡಿದ್ದೂ ಎಂದೂ ಮುರಿಯದಂಥಾದ್ದೂ ಎಂದೂ ಹಳೇದಾಗದಂಥಾದ್ದೂ ಆಗಿರಬೇಕು. ||೧೦೯|| ಮತ್ತು ಅದು ಸರ್ವ ಉಪಕರಣಗಳುಳ್ಳದ್ದೂ ನಾನು ಹೋದಲ್ಲಿಗೆ ಒಯ್ಯಲಿಕ್ಕೆ ಬರುವಂಥಾದ್ದೂ ಆಗಿರಬೇಕು. ಅಂಥ ಒಂದು ಮನೆಯನ್ನು ತಕ್ಕೊಂಡು ಬಾ. ಆ ಮನೆಯಲ್ಲಿ ಕೂಡ್ರಲಿಕ್ಕೆ ಮಣೆಯೂ ಇರಬೇಕು. ||೧೧೦|| ಅದು ಯಾವಾಗಲೂ ಹೊಸದರಂತೆ ಕಾಣುತ್ತಿರಬೇಕು. ನಾನು ಅದರೊಳಗೆ ಆಡ್ತಾಡುವಂತಿರಬೇಕು. ಅಡಿಗೆಯನ್ನು ಸಿದ್ಧ ಮಾಡಲಿಕ್ಕೆ ಪಾತ್ರೆಗಳನ್ನು ಮಾಡಿಕೊಂಡು ತರಬೇಕು. ||೧೧೧|| ಬ್ರಹ್ಮಚಾರಿಯೇ, ನಿನಗೆ ಮತ್ತೊಂದು ಮಾತು ಹೇಳುವೆನು. ಅಡಿಗೆಯನ್ನು ಬೇಯಿಸಲಿಕ್ಕೆ ನನಗೆ ಕಲಿಸಬೇಕು. ಅಡಿಗೆಯನ್ನು ಮಾಡಿದಮೇಲೆ ಆ ಅಡಿಗೆಯು ಕಡೆತನಕ ಒಳ್ಳೇ ಬಿಸಿಯಾಗಿಯೇ ಇರಬಾರದು. ||೧೧೨|| ಅಡಿಗೆ ಮಾಡಿದಂಥ ಭಾಂಡಿಗಳಿಗೆ ಕಪ್ಪು ಹತ್ತಬಾರದು. ಅಂಥ ಭಾಂಡೆಗಳನ್ನೂ ಮತ್ತು ಸರ್ವ ಸೋಪಸ್ಕಾರಗಳನ್ನೂ ತಂದುಕೊಡಬೇಕು. ||೧೧೩|| ಗುರುಕನ್ಯೆಯು ಎಂದು ಅಂದಳು

ಈ ಪ್ರಕಾರ ಎಲ್ಲರೂ ಹೇಳಿದ್ದನ್ನು ಕೇಳಿ ಆ ಬ್ರಹ್ಮಚಾರಿಯು ಅದಕ್ಕೆ ಒಪ್ಪಿಕೊಂಡು, ಕೂಡಲೆ ಅಲ್ಲಿಂದ ಹೊರಟು ಮಹಾ ಅರಣ್ಯದಲ್ಲಿ ಪ್ರವೇಶಿಸಿದನು. ॥ ೧೧೪ ॥ ಅಲ್ಲಿ ಹೋಗಿ— ನಾನು ಬಾಲಕನು ಹಾಗು ಬ್ರಹ್ಮಚಾರಿಯು. ಅವರು ಹೇಳಿದ ಪದಾರ್ಥಗಳು ಎಲ್ಲಿ ಅವೆ ? ಹ್ಯಾಗೆ ಶಿಗುತ್ತವೆಂಬದು ನನಗೇನು ತಿಳಿಯಬೇಕು ? ಈಗ ಹ್ಯಾಗೆ ಮಾಡಲಿ ? ಎಂದು ಮನಸ್ಸಿನಲ್ಲಿ ಬಹಳ ಚಿಂತಿಸುತ್ತಿದ್ದನು. ॥ ೧೧೫ ॥ ನನಗೆ ಒಂದು ಎಲಿ ಹಚ್ಚಲಿಕ್ಕೆ ಗೊತ್ತಿಲ್ಲ ! ಅವರೆಲ್ಲರು ಹೇಳಿದಷ್ಟು ಪದಾರ್ಥಗಳನ್ನು ನಾನು ಹ್ಯಾಗೆ ದೊರಕಿಸಲಿ ? ಎಂದು ಏಕಾಗ್ರ ಮನಸ್ಸಿನಿಂದ ಶ್ರೀ ಗುರು ಚರಣಗಳನ್ನು ಸ್ಮರಿಸುತ್ತ ॥ ೧೧೬ ॥ ಈಗ ನಾನು ಏನು ಮಾಡಲಿ ? ನನಗೆ ಯಾರು ಗತಿಯಾದಾರು ? ಅವರು ಹೇಳಿದಷ್ಟು ಪದಾರ್ಥಗಳನ್ನು ನಾನು ತೀವ್ರವಾಗಿ ಒದಗಿಸಿಕೊಡದಿದ್ದರೆ ಶ್ರೀ ಗುರುಗಳು ನನ್ನಮೇಲೆ ಮಾತು ಹೊರಿಸ್ಯಾರು ? ॥ ೧೧೭ ॥ ಈಗ ನಾನು ಯಾರಿಗೆ ಶರಣು ಹೋಗಲಿ ? ನನ್ನ ಪ್ರಾಣವನ್ನು ಯಾರು ಉಳಿಸುವರು ? ಈ ಜಗತ್ತಿನಲ್ಲಿ ಕೃಪಾನಿಧಿಗಳಾದ ಗುರುಗಳ ಹೊರತು ನನ್ನನ್ನು ರಕ್ಷಿಸುವಂಥವರು ಬೇರೆ ಯಾರು ಇರುವರು ? ॥ ೧೧೮ ॥ ಒಂದುವೇಳೆ ಈಗ ನಾನು ಗುರುಗಳ ಮಾತು ನಡಿಸದಿದ್ದರೆ ಕೂಡಲೆ ಅವರು ನನಗೆ ಶಾಪ ಕೊಟ್ಟಾರು ! ಬ್ರಹ್ಮಚಾರಿಯೂ ಬಾಲಕನೂ ಆದ ನಾನು ಅವರ ಮಾತಿಗೆ ಯಾಕೆ ಒಪ್ಪಿಕೊಂಡಿದ್ದೇನು ? ॥೧೧೯॥ ಇನ್ನು ನನಗೇನು ಗತಿ ! ಅಜ್ಞಾನಿಯೂ ಅಶಕ್ತನೂ ಬಾಲಕನೂ ಆದ ನಾನು ಈಗ ಯಾರಹತ್ತರ ಹೋಗಲಿ ? ಅವರ ಮಾತಿಗೆ ನಾನು ಯಾಕೆ ಒಪ್ಪಿಕೊಂಡಿದ್ದೇನು ? ॥ ೧೨೦ ॥ ನನಗೆ ಮುಖ್ಯವಾಗಿ ಗುರು ವಾಕ್ಯವೇ ಕಾರಣವು. ಅವರ ಮಾತಿನ ವಿರುದ್ಧ ನಾನು ನಡೆಯುವದಿಲ್ಲ. ಇದರದೆಶೆಯಿಂದ ನನ್ನ ಜೀವವನ್ನಾದರೂ ಕೊಟ್ಟು ಗುರ್ವಾಜ್ಞೆಯನ್ನು ನಡಿಸುವೆನು. ॥ ೧೨೧ ॥ ಎಂದೆನ್ನುತ್ತ ಆ ಬಾಲಕನು ಚಿಂತೆ ಮಾಡುತ್ತ, ಆ ಮಹಾ ಅರಣ್ಯದಲ್ಲಿ ಹೋಗುತ್ತ ಅತ್ಯಂತ ಬಳಲಿ, ಏನು ಆದದ್ದಾಗಲಿ ! ಗುರುಗಳಾಜ್ಞೆಯನ್ನು ನಡಿಸುವೆನು ಎಂದು ಮನಸ್ಸಿನಲ್ಲಿ ನಿಶ್ಚಯಿಸಿ ಹೋಗುತ್ತಿದ್ದನು. ॥ ೧೨೨ ॥ ಹೀಗೆ ಅವನು ಮಾರ್ಗವನ್ನು ಕ್ರಮಿಸುತ್ತ ಮುಂದೆ ಹೋಗುತ್ತಿರಲು ಆಗ ಅವನ ಎದುರಿಗೆ ಒಬ್ಬ ಅವಧೂತರು ಬಂದು, ಆ ಬಾಲಕನನ್ನು ಕಂಡು ಕೇಳ

ಹತ್ತಿದರು. ॥ ೧೨೩ ॥ ಏನಂದರೆ, ಎಲೈ ಬಾಲಕಾ ನೀನು ಯಾರು? ಎಲ್ಲಿಗೆ ಹೋಗುತ್ತೀ? ನೀನು ಬಹು ಚಿಂತೆಯಿಂದ ವ್ಯಾಕುಲನಾದಂತೆ ಕಾಣುತ್ತೀಯಲ್ಲಾ! ಅದೆಲ್ಲವನ್ನೂ ವಿಸ್ತಾರವಾಗಿ ನನಗೆ ಹೇಳು ಅಂದರು. ॥ ೧೨೪ ॥ ಅವರು ಈ ಪ್ರಕಾರ ಅಂದದ್ದನ್ನು ಕೇಳಿ ಆ ಬ್ರಹ್ಮಚಾರಿಯು ಕೂಡಲೆ ಅವರ ಹತ್ತರ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ— ಸ್ವಾಮೀ, ನಾನು ಚಿಂತಾಸಾಗರದಲ್ಲಿ ಮುಳುಗುತ್ತೇನೆ. ನನ್ನನ್ನು ರಕ್ಷಿಸಿರಿ ರಕ್ಷಿಸಿರಿ ಎಂದನು. ॥ ೧೨೫ ॥ ದಯಾನಿಧಿಗಳೇ, ಕರುವಿನ ಸಲುವಾಗಿ ಆಕಳು ಓಡಿ ಬರುವಂತೆ ಸಾಧುಗಳಾದ ತಾವು ಇಡಿಗಂಟನಂತೆ ನನಗೆ ದರ್ಶನ ಕೊಟ್ಟಿರಿ, ನಾನು ಬಹಳ ದುಃಖಿತನಾಗಿದ್ದೆನು. ಈಗ ತಮ್ಮನ್ನು ನೋಡಿ ನನ್ನ ಮನಸ್ಸು ಶಾಂತವಾಯಿತು. ॥ ೧೨೬ ॥ ಚಂದ್ರನನ್ನು ನೋಡಿದಕೂಡಲೆ ಚಕೋರ ಪಕ್ಷಿಗೆ ಹರ್ಷವಾಗುವಂತೆ ಸ್ವಾಮೀ, ತಮ್ಮ ದರ್ಶನ ಮಾತ್ರದಿಂದ ನನಗೆ ಅತಿಶಯ ಆನಂದವಾಗಿರುವದು. ॥ ೧೨೭ ॥ ಕೃಪಾಸಿಂಧುವೇ, ಪರಮಪುರುಷನೇ, ನಾನು ಪೂರ್ವಜನ್ಮದಲ್ಲಿ ಮಾಡಿದ ಅಲ್ಪ ಪುಣ್ಯದಿಂದಲೇ ಶ್ರೇಷ್ಠರಾದ ತಮ್ಮ ದರ್ಶನವಾಯಿತು. ॥ ೧೨೮ ॥ ಸ್ವಾಮೀ, ತಮ್ಮ ಹೆಸರೇನು? ಈಗ ತಾವು ಎಲ್ಲಿಂದ ಬಂದಿರಿ? ಎಂಬದನ್ನು ಹೇಳಿರಿ. ನೋಡಿರಿ! ಇದು ನಿರ್ಮಾನುಷವಾದ ಅರಣ್ಯವು! ಇಲ್ಲಿ ನಿಮ್ಮ ಭೆಟ್ಟಿಯಾಯಿತು. ॥ ೨೯ ॥ ಅಂದಮೇಲೆ ನೀವು ನಿಶ್ಚಯವಾಗಿ ಈಶ್ವರರೇ ಆಗಿದ್ದೀರಿ. ಆಹಾ! ಗುರುಗಳು ನನ್ನಮೇಲೆ ಕೃಪಾ ಮಾಡಿದರು. ಅದರಿಂದ ಮನೋಹರರಾದ ತಮ್ಮ ದರ್ಶನವಾಗಿ ನನ್ನ ಅಂತಃಕರಣವು ಸ್ಥಿರವಾಯಿತು. ॥ ೧೩೦ ॥ ನೀವು ಕೃಪಾಳುಗಳೂ ಸತ್ಯಪ್ರಿಯರಾದ ಭಕ್ತವತ್ಸಲರೂ ಆಗಿದ್ದೀರಿ. ನಾನು ತಮ್ಮ ದಾಸನು. ನನ್ನನ್ನು ರಕ್ಷಿಸಿರಿ. ಎಂದು ಅವರ ಚರಣಕ್ಕೆ ನಮಸ್ಕರಿಸಿದನು. ॥ ೧೩೧ ॥ ಆಗ ಆ ತಪಸ್ವಿಗಳು ನಮಸ್ಕರಿಸಿದಂಥ ಬಾಲಕನನ್ನು ಕೈ ಹಿಡಿದು ಎಬ್ಬಿಸಿ, ಮಹಾ ಹರ್ಷದಿಂದ ಅಪ್ಪಿಕೊಂಡು, ಆಶ್ವಾಸನ ಕೊಟ್ಟು ಅವನನ್ನು ಸಮಾಧಾನ ಮಾಡಿ ॥ ೧೩೨ ॥ ಆಮೇಲೆ ಅವನ ಎಲ್ಲ ಸಂಗತಿಯನ್ನು ಕೇಳಿದರು. ಆ ಬಾಲಕನು ಎಲ್ಲ ಸಂಗತಿಯನ್ನು ಹೇಳಿ— ಸ್ವಾಮೀ, ಶ್ರೀಗುರು ಮೊದಲಾದವರು ಬೇಡಿದ ವಸ್ತುಗಳು ಯಾವ ರೀತಿಯಿಂದ ಸಾಧ್ಯವಾಗು

ತ್ರವೆ? ॥ ೧೩೩ ॥ ನಾನು ಬಾಲಕನು ಹಾಗು ಬ್ರಹ್ಮಚಾರಿಯು. ಅಸಾಧ್ಯವಾದ ಕೆಲಸಕ್ಕೆ ನಾನು ಒಪ್ಪಿಕೊಂಡು ಚಿಂತಾಸಾಗರದಲ್ಲಿ ಬಿದ್ದಿದ್ದೇನೆ. ಸ್ವಾಮೀ, ನನ್ನನ್ನು ರಕ್ಷಿಸಿರಿ ಎಂದನು. ॥ ೧೩೪ ॥ ಆಮೇಲೆ ಆ ಅವಧೂತರು ಅವನಿಗೆ ಅಭಯ ಕೊಟ್ಟು, ಆ ಬಾಲಕನನ್ನು ಕುರಿತು— ಎಲೈ ಬಾಲಕನೇ, ನಿನಗೊಂದು ಹಿತದ ಮಾತನ್ನು ಹೇಳುವೆನು. ಅದರಿಂದ ನಿನ್ನ ಕಾರ್ಯವು ಸಾಧಿಸುವದು. ॥ ೧೩೫ ॥ ಮಹಾಸ್ಥಾನವಾದ ಕಾಶೀಪುರವು ಒಂದು ಯೋಗ್ಯವಾದ ಸ್ಥಾನವಾಗಿರುತ್ತದೆ. ಅಲ್ಲಿ ನೀನು ಶ್ರೀ ವಿಶ್ವೇಶ್ವರನ ಆರಾಧನೆ ಮಾಡು. ಅದರಿಂದ ನಿನ್ನ ಸಕಲಾಭೀಷ್ಟಗಳು ಸಾಧಿಸುವವು. ॥ ೧೩೬ ॥ ಈ ನವಖಂಡ ಭೂಮಿಯಲ್ಲಿ ಶ್ರೀಕಾಶಿಯು ಅದಕ್ಕಿಂತ ಶ್ರೀಕಾಶಿಯು ಬೇರೆಯಾಗಿ ವಿಶೇಷ ವಿಖ್ಯಾತವಾದದ್ದು ಇರುತ್ತದೆ. ಅಲ್ಲಿ ಬ್ರಹ್ಮ-ವಿಷ್ಣು ಮತ್ತು ಋಷಿಗಳು ವರವನ್ನು ಹೊಂದಿದರು. ॥ ೧೩೭ ॥ ಏನೆಂದರೆ, ಆ ಸ್ಥಳದಲ್ಲಿ ಬ್ರಹ್ಮನು ಸೃಷ್ಟಿಯನ್ನು ರಚಿಸಲಿಕ್ಕೆ ಈಶ್ವರನಿಂದ ವರವನ್ನು ಪಡೆದನು. ಮತ್ತು ಸಮಸ್ತ ಸೃಷ್ಟಿಯನ್ನು ಪಾಲನ ಮಾಡಲಿಕ್ಕೆ ವಿಷ್ಣುವಿಗೆ ವಿಶ್ವೇಶ್ವರನು ವರವನ್ನು ಕೊಟ್ಟನು. ॥ ೧೩೮ ॥ ಕಾಶೀಪುರವು ಮಹಾಸ್ಥಾನವು. ನೀನು ಅಲ್ಲಿಗೇ ಹೋದಕೂಡಲೆ ನಿನ್ನ ಇಚ್ಛೆಯು ಪೂರ್ಣವಾಗುವದು. ನೀನು ಮನಸಿನಲ್ಲಿ ಏನೂ ಸಂಶಯವನ್ನು ಹಿಡಿಯಬೇಡ. ॥ ೧೩೯ ॥ ನೀನು ತೀವ್ರವಾಗಿ ಅಲ್ಲಿಗೆ ಹೋಗು. ನಿನ್ನ ಮನಸಿನಲ್ಲಿ ಏನೇನು ಕಾರ್ಯವಾಗಬೇಕೆಂದು ಇಚ್ಛೆಯು ಅದೆಯೋ ಆ ಇಚ್ಛೆಗಳು ಪೂರ್ಣವಾಗುವ ಸರ್ವ ವಿದ್ಯೆಯನ್ನು ಅಲ್ಲಿ ಪಡೆಯುತ್ತೀ, ಮತ್ತು ನೀನೇ ವಿಶ್ವಕರ್ಮನಾಗುತ್ತೀ, ॥ ೧೪೦ ॥ ಅಲ್ಲಿ ನಿನಗೆ ತೀವ್ರವಾಗಿ ಚತುರ್ವಿಧ ಪುರುಷಾರ್ಥಗಳು ಸಾಧಿಸುವವು. ಇದರ ಹೊರ್ತು ಮತ್ತೇನು ಸ್ವಾರ್ಥ ಅದೆ ಎಂಬದನ್ನು ನನಗೆ ಹೇಳು. ॥ ೧೪೧ ॥ ಆ ವಿಶ್ವೇಶ್ವರನು ಬಹಳ ದಯಾಳುವಾಗಿದ್ದಾನೆ. ಅವನ ಲೀಲೆಯು ವಿಚಿತ್ರವಾಗಿರುತ್ತದೆ. ಉಪಮನ್ಯು ಎಂಬ ಬಾಲಕನು ಭಕ್ತಿಯಿಂದ ಸ್ವಲ್ಪ ಹಾಲು ಕೊಡೆಂದು ಬೇಡಿಕೊಳ್ಳಲು ಶ್ರೀ ವಿಶ್ವೇಶ್ವರನು ಅವನಿಗೆ ಕ್ಷೀರಸಮುದ್ರವನ್ನೇ ಕೊಟ್ಟುಬಿಟ್ಟನು. ॥ ೧೪೨ ॥ ಆ ಮಹಾಸ್ಥಾನವು **ಆನಂದಕಾನನ** ಎಂಬ ಹೆಸರಿನಿಂದ ವಿಖ್ಯಾತವಾಗಿರುತ್ತದೆ. ಆ ಸ್ಥಳದಲ್ಲಿ ಭಕ್ತಿಯಿಂದ ಆರಾಧನಾ ಮಾಡಿದ ಯಾವತ್ತು ಜನರ

ಕಾಮನೆಗಳು ಪೂರ್ಣವಾಗುತ್ತವೆ. || ೧೪೩ || ಕಾಶೀಪುರವೆಂದು ಹೆಸರುಳ್ಳ ಅದು ಸರ್ವಧರ್ಮಗಳ ರಾಶಿ ಯಾಗಿರುತ್ತದೆ. ಆ ಕಾಶೀಪುರವು ಸಕಲ ಜೀವಜಂತುಗಳಿಗೆ ಮೋಕ್ಷಸ್ಥಾನವಾಗಿರುತ್ತದೆ. || ೧೪೪ || ಆ ಕಾಶೀ ಸ್ಥಾನದ ಮಹಿಮೆಯನ್ನು ಎಷ್ಟು ಹೇಳಲಿ ? ಆ ಕಾಶಿಯಲ್ಲಿ ಯಾರು ವಾಸ ಮಾಡುತ್ತಾರೋ, ಮತ್ತು ಆ ವಿಶ್ವೇಶ್ವರನ ದರ್ಶನ ತಕ್ಕೊಳ್ಳುತ್ತಾರೋ ಅವರ ಪಾಪಗಳು ಕೂಡಲೆ ಓಡಿಹೋಗುತ್ತವೆ. || ೧೪೫ || ಎಲ್ಲೈ ಬಾಲಕಾ, ಇಂಥ ಕಾಶೀ ಸ್ಥಾನವು ಇರಲಿಕ್ಕೆ ನೀನು ಇಷ್ಟೇಕೆ ಚಿಂತೆ ಮಾಡುತ್ತೀ ? ಆ ಕ್ಷೇತ್ರದ ಮಹಿಮೆ ಯನ್ನು ವರ್ಣಿಸಲಿಕ್ಕೆ ನನ್ನ ನಾಲಿಗೆಗೆ ಅಶಕ್ಯವಾಗಿದೆ. || ೧೪೬ || ಆ ಕಾಶೀ ಪಟ್ಟಣದಲ್ಲಿರುವ ತೀರ್ಥಗಳಿಗೆ ಸಂಚಾರ ಮಾಡುವವರಿಗೆ ಬಹು ಪುಣ್ಯ ಬಂದು ಅವರ ಒಂದೊಂದು ಹೆಜ್ಜೆಗೆ ಒಂದೊಂದು ಅಶ್ವಮೇಧ ಫಲವು ಬರುವದು. || ೧೪೭ || ಎಲ್ಲೈ ಬ್ರಹ್ಮಚಾರಿಯೇ ನೀನು ಅಲ್ಲಿಗೆ ಹೋದಕೂಡಲೆ ನಿನ್ನ ಮನಸ್ಸಿನಲ್ಲಿ ಏನೇನು ಇಚ್ಛೆ ಅವೆಯೋ ಅವೆಲ್ಲ ಪ್ರತ್ಯಕ್ಷವಾಗಿ ಕೈಗೂಡುವವು. ಆದ್ದರಿಂದ ನೀನು ಮನಸಿನಲ್ಲಿ ಏನೂ ಸಂಶಯ ಹಿಡಿಯಬೇಡ ಎಂದು ಆ ಸಾಧುಗಳು ಹೇಳಿದರು. || ೧೪೮ || ಆ ಅವಧೂತರು ಹೇಳಿದ ಮಾತು ಕೇಳಿ ಆ ಬ್ರಹ್ಮಚಾರಿಯು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ— ಸ್ವಾಮೀ, ನಾನಂತೂ ಈಗ ಅರಣ್ಯದಲ್ಲಿದ್ದೇನೆ. ಆ ಕಾಶೀಪುರವು ಎಲ್ಲಿರುತ್ತದೆ ? || ೧೪೯ || ಆ ಆನಂದ ಕಾನನವೆಂಬುವದು ಸ್ವರ್ಗದಲ್ಲಿ ಅದೆಯೋ, ಭೂಮಿಯಲ್ಲಿ ಅದೆಯೋ ಅಥವಾ ಪಾತಾಳದಲ್ಲಿ ಅದೆಯೋ ನಾನು ಎಲ್ಲಿಗೆ ಹೋಗಲಿ ? ಅದು ಎಲ್ಲಿ ಅದೆ ಎಂಬದನ್ನು ನನಗೆ ಹೇಳಿರಿ. || ೧೫೦ || ಈ ಜಗತ್ತಿನಲ್ಲಿ ಈ ಸಂಸಾರಸಾಗರದಿಂದ ದಾಟಿಸುವಂಥವರು ತಾವೊಬ್ಬರೇ ಆಗಿರುವಿರಿ. ಸ್ವಾಮೀ, ನನಗೆ ಜ್ಞಾನೋಪದೇಶವನ್ನು ಮಾಡಿ ನನ್ನನ್ನು ರಕ್ಷಿಸಿರಿ || ೧೫೧ || ಸ್ವಾಮೀ, ಇಂಥ ಮಹತ್ವವಾದ ಕಾಶೀ ಪಟ್ಟಣಕ್ಕೆ ಒಳ್ಳೇ ಹರ್ಷದಿಂದ ನನ್ನನ್ನು ಕರಕೊಂಡು ಹೋಗುವವರಾದರೂ ಯಾರು ? ಒಂದು ವೇಳೆ ಯಾರೂ ಸಿಗದಿದ್ದರೆ ನೀವೇ ಕರಕೊಂಡು ಹೋಗಿರಿ ಎಂದು ನಿಮಗೇ ವಿನಂತೀ ಮಾಡಿಕೊಳ್ಳುವೆನು. || ೧೫೨ || ನಿಮಗೆ ಬೇರೆ ಕೆಲಸವಿದ್ದರೆ, ನನಗೆ ಕಾಶಿಗೆ ಹೋಗುವ ವಿಚಾರವನ್ನು ಯಾಕೆ ಹೇಳದಿರಿ ? ನಾನು ನಿಮ್ಮ

ಬಾಲಕನು, ನಿಮಗೆ ಶರಣು ಬಂದಿದ್ದೇನೆ. ಏನು ಬೇಕಾದದ್ದು ಮಾಡಿರಿ ಎಂದು ಅವರ ಚರಣಕ್ಕೆ ನಮಸ್ಕಾರ ಮಾಡಿದನು. ॥ ೧೫೩ ॥ ಅವನ ಮಾತು ಕೇಳಿ ಆ ಸಾಧುಗಳು ಸಂತೋಷಬಟ್ಟು— ಎಲೈ ಬಾಲಕನೇ, ನಾನೇ ನಿನ್ನನ್ನು ಆಗತ್ಯವಾಗಿ ಕರಕೊಂಡು ಹೋಗುವೆನು. ನಿನ್ನದೆಶೆಯಿಂದ ನನಗೂ ಮಹಾಯಾತ್ರೆಯ ಫಲವು ಬರುವದು. ॥ ೧೫೪ ॥ ಇದರಹೊರತು ನನಗೆ ವಿಶೇಷ ಲಾಭದಾಯಕವಾದದ್ದು ಯಾವದಿರುವದು ? ಕಾಶೀವಾಸ ಮಾಡದಿರುವವನ ಜನ್ಮವು ವ್ಯರ್ಥವು. ॥ ೧೫೫ ॥ ಎಲೈ ಬಾಲಕಾ, ನಿನ್ನ ಸಲುವಾಗಿ ನನಗೂ ಕಾಶೀ ಪಟ್ಟಣದ ದರ್ಶನವಾಗುವದು. ನಡೆ ತೀವ್ರವಾಗಿ ಹೋಗೋಣ ಎಂದು ಇಬ್ಬರೂ ಹೊರಟರು. ॥ ೧೫೬ ॥ ಮನೋವೇಗದಿಂದ ನಡೆದು ಆ ಕೂಡಲೆ ವಿಶ್ವೇಶ್ವರನ ಹತ್ತರ ಬಂದರು ಆಗ ಆ ತಾಪಸಿಯು— ಎಲೈ ಬಾಲಕಾ, ನಿನ್ನನ್ನು ಕಾಶಿಗಂತೂ ಕರಕೊಂಡು ಬಂದೆನು. ಇನ್ನುಮೇಲೆ ಯಾತ್ರಾ ಮಾಡು ಎಂದು ಹೇಳಿದನು. ॥ ೧೫೭ ॥ ಆಗ ಆ ಬಾಲಕನು— ಸ್ವಾಮೀ, ದಯಾನಿಧಿಗಳೇ, ಯಾತ್ರಾ ಮಾಡೆಂದು ನನಗೆ ಹೇಳಿದಿರಿ. ಆದರೆ ನನಗೆ ಯಾತ್ರಾ ಅಂದರೇನು, ಯಾವ ರೀತಿಯಿಂದ ಯಾತ್ರಾ ಮಾಡಬೇಕು, ಇದು ನನಗೆ ಗೊತ್ತಿಲ್ಲ. ॥ ೧೫೮ ॥ ನಾನು ಬಾಲಕನು ಹಾಗು ಬ್ರಹ್ಮಚಾರಿಯು ನನಗೆ ತೀರ್ಥಗಳು ಯಾವ್ಯಾವು ? ಯಾವ ವಿಧಿಪ್ರಕಾರ ತೀರ್ಥ ಯಾತ್ರಾ ಮಾಡಬೇಕು, ಇದು ಗೊತ್ತಿಲ್ಲ ಆದನ್ನೆಲ್ಲ ತಾವು ನನಗೆ ವಿಸ್ತಾರವಾಗಿ ಹೇಳಬೇಕು ಎಂದರು. ॥ ೧೫೯ ॥ ಆಗ ಆ ಅವಧೂತರು— ಎಲೈ ಬ್ರಹ್ಮಚಾರಿಯೇ, ನಿನಗೆ ಯಾತ್ರಾವಿಧಿಯನ್ನು ಹೇಳುವೆನು. ನೀನು ನೇಮದಿಂದಲೂ ಭಕ್ತಿಪೂರ್ವಕವಾಗಿಯೂ ಯಾತ್ರಾ ಮಾಡು ಎಂದು ಯಾತ್ರೆಯ ಕ್ರಮವನ್ನು ಹೇಳಹತ್ತಿದರು. ॥ ೧೬೦ ॥

## ಬ್ರಹ್ಮಚಾರಿಗೆ ಹೇಳಿದ ಕಾಶೀಯಾತ್ರಾ ಕ್ರಮ

ಎಲೈ ಬಾಲಕನೇ, ಮೊದಲು ನೇಮದಿಂದ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಿ, ಅಲ್ಲಿಂದ ಹೊರಟು ವಿನಾಯಕನಿಗೆ ಕೈ ಮುಗಿದು, ಆಮೇಲೆ ಪಾಂಚಾಳೇಶ್ವರನಿಗೆ ನಮಿಸಬೇಕು. ॥ ೧೬೧ ॥ ಆಮೇಲೆ ಮಹಾ

ದ್ವಾರಕ್ಕೆ ಹೋಗಿ ವಿಶ್ವೇಶ್ವರನ ದರ್ಶನ ಮಾಡಿಕೊಂಡು ಮತ್ತೆ ಗಂಗಾತೀರಕ್ಕೆ ಬಂದು ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಬೇಕು. || ೧೬೨ || ಭಕ್ತಿಯಿಂದ ಮಣಿಕರ್ಣಿಕೇಶ್ವರನನ್ನು ಪೂಜಿಸಿ, ಆಮೇಲೆ ಭಕ್ತಿಯಿಂದ ಕಂಬಳೇಶ್ವರನನ್ನು ಪೂಜಾ ಮಾಡಬೇಕು. || ೧೬೩ || ಆಮೇಲೆ ಭಕ್ತಿಯಿಂದ ವಾಸುಕೀಶ್ವರನನ್ನೂ, ಹರ್ಷದಿಂದ ಪರ್ವತೇಶ್ವರನನ್ನೂ, ಆಮೇಲೆ ಗಂಗಾಕೇಶವನನ್ನು ಪೂಜಿಸಬೇಕು. || ೧೬೪ || ಆಮೇಲೆ ಲಲಿತಾದೇವಿಯನ್ನು ಪೂಜಿಸಿ ಅಲ್ಲಿಂದ ಹೊರಟು ಭಕ್ತಿಯಿಂದ ಜರಾಸಂಧೇಶ್ವರನನ್ನು ಧ್ಯಾನಿಸಿ ಪೂಜಿಸಬೇಕು. || ೧೬೫ || ಆಮೇಲೆ ಕ್ರಮವಾಗಿ ದೊಡ್ಡ ಸೋಮನಾಥೇಶ್ವರನನ್ನೂ ಶೂಲಟಂಕೇಶ್ವರನನ್ನೂ ವಾರಾಹೇಶ್ವರನನ್ನೂ ಬ್ರಹ್ಮೇಶ್ವರನನ್ನೂ ಪೂಜಿಸಬೇಕು. || ೧೬೬ || ಆಮೇಲೆ ಆಗಸ್ತೇಶ್ವರನನ್ನೂ ಕಶ್ಯಪೇಶ್ವರನನ್ನೂ ಹರಿಹರೇಶ್ವರನನ್ನೂ ಮಹಾ ಹರ್ಷದಿಂದ ವೈಜನಾಥೇಶ್ವರನನ್ನೂ ಧ್ರುವೇಶ್ವರನನ್ನೂ ಪೂಜಿಸಬೇಕು. || ೧೬೭ || ಆಮೇಲೆ ದೊಡ್ಡ ಗೋಕರ್ಣೇಶ್ವರನನ್ನೂ ಹಾಟಕೇಶ್ವರನನ್ನೂ, ಅಸ್ಥಿಕೇತು ತಟಾಕೇಶ್ವರನನ್ನೂ, ಕಿಂಕರೇಶ್ವರನನ್ನೂ ಪೂಜಿಸಬೇಕು. || ೧೬೮ || ಆಮೇಲೆ ಭಕ್ತಿಯಿಂದ ಭಾರತ ಭೂತೇಶ್ವರನನ್ನೂ, ಚಿತ್ರಗುಪ್ತೇಶ್ವರನನ್ನೂ, ಚಿತ್ರಘಂಟೇಶ್ವರನನ್ನೂ ಪೂಜಿಸಬೇಕು. || ೧೬೯ || ಆಮೇಲೆ ಒಳ್ಳೇ ಭಕ್ತಿಯಿಂದ ಪಾಶುಪತೇಶ್ವರನನ್ನೂ ಪಿತಾಮಹೇಶ್ವರನನ್ನೂ ಪೂಜಿಸಬೇಕು. || ೧೭೦ || ಆಮೇಲೆ ಕಲ್ಲೇಶ್ವರನಿಗೆ ವಂದಿಸಿ, ಆಮೇಲೆ ಒಂದೇ ಮನಸಿನಿಂದ ಚಂದ್ರೇಶ್ವರನನ್ನೂ ವಿಶ್ವೇಶ್ವರನನ್ನೂ ಪೂಜಿಸಬೇಕು. || ೧೭೧ || ಬಳಿಕ ವಿಘ್ನೇಶ್ವರನನ್ನೂ, ಅಗ್ನೀಶ್ವರನನ್ನೂ ನಾಗೇಶ್ವರನನ್ನೂ ಹರಿಶ್ಚಂದ್ರೇಶ್ವರನನ್ನೂ ಪೂಜಿಸಬೇಕು. || ೧೭೨ || ಆಮೇಲೆ ಚಿಂತಾಮಣಿ ವಿನಾಯಕನನ್ನೂ ಸೋಮನಾಥ ವಿನಾಯಕನನ್ನೂ, ವಸಿಷ್ಠ-ವಾಮದೇವರನ್ನೂ ಪೂಜಿಸಬೇಕು. || ೧೭೩ || ಮುಂದೆ ತ್ರಿಸಂಧೇಶ್ವರನೆಂಬ ದೊಡ್ಡ ಲಿಂಗವನ್ನೂ ಮನೋಹರ ವಿಶಾಲಾಕ್ಷನನ್ನೂ ಧರ್ಮೇಶ್ವರನನ್ನೂ ಪೂಜಿಸಬೇಕು. || ೧೭೪ || ಬಳಿಕ ಭಕ್ತಿಯಿಂದ ವಿಶ್ವಬಾಹುವನ್ನೂ ಆಶಾವಿನಾಯಕನನ್ನೂ ವೃದ್ಧಾದಿತ್ಯನನ್ನೂ ಮನೋಭಾವದಿಂದ ಪೂಜಿಸಬೇಕು. || ೧೭೫ || ಮುಂದೆ ದೊಡ್ಡ ಚತುರ್ವಕ್ತ್ರೇಶ್ವರನನ್ನೂ ಮನೋಹರವಾದ ಬ್ರಹ್ಮೇ-

ಶ್ವರ ಲಿಂಗವನ್ನೂ ಪೂಜಿಸಬೇಕು. ॥ ೧೭೬ ॥ ಬಳಿಕ ಪ್ರಕಾಮೇಶ್ವರನನ್ನು ಈಶ್ಯಾನೇಶ್ವರನನ್ನೂ ಚಂಡಿ ಹಾಗು ಚಂಡೀಶ್ವರನನ್ನೂ ಭಕ್ತಿಯಿಂದ ಪೂಜಿಸಬೇಕು. ॥ ೧೭೭ ॥ ಬಳಿಕ ಭವಾನೀ ಶಂಕರನನ್ನೂ, ಮನೋಹರ ಧುಂಡಿರಾಜನನ್ನೂ, ರಾಜೇಶ್ವರನನ್ನೂ ಲಾಂಗೂಲೇಶ್ವರನನ್ನೂ ಪೂಜಿಸಬೇಕು ॥ ೧೭೮ ॥ ಆಮೇಲೆ ನಕುಲೇಶ್ವರನನ್ನೂ ಭಕ್ತಿಯಿಂದ ಪರಾನ್ನ ಪರದ್ರವ್ಯೇಶ್ವರನನ್ನೂ ಪೂಜಿಸಿ ಆಮೇಲೆ ಪಾಣಿಗ್ರಹಣೇಶ್ವರನನ್ನು ಪೂಜಿಸಬೇಕು. ॥ ೧೭೯ ॥ ಆಮೇಲೆ ಗಂಗೇಶ್ವರ, ಮೋರೇಶ್ವರರನ್ನು ಪೂಜಿಸಿ, ಜ್ಞಾನವಾಪಿಯಲ್ಲಿ ಸ್ನಾನಮಾಡಿ ಜ್ಞಾನೇಶ್ವರನನ್ನೂ ನಂದಿಕೇಶ್ವರನನ್ನೂ ಪೂಜಿಸಬೇಕು ॥ ೧೮೦ ॥ ಬಳಿಕ ದೊಡ್ಡ ನಿಷ್ಕಲಂಕೇಶ್ವರ ಲಿಂಗವನ್ನೂ ಮನೋಹರವಾದ ಮಾರ್ಕಂಡೇಶ್ವರನನ್ನೂ ಅಸುರೇಶ್ವರನನ್ನೂ ಪೂಜಿಸಬೇಕು. ॥ ೧೮೧ ॥ ಆಮೇಲೆ ಬಹು ಮನೋಹರವಾದ ದೊಡ್ಡ ತಾರಕೇಶ್ವರ ಲಿಂಗವನ್ನೂ ಮಹಾಕಾಳೇಶ್ವರನನ್ನೂ ದಂಡಪಾಣಿಯನ್ನೂ ಪೂಜಿಸಬೇಕು. ॥ ೧೮೨ ॥ ಬಳಿಕ ಮಹೇಶ್ವರನನ್ನು ಪೂಜಿಸಿ ಮೋಕ್ಷೇಶ್ವರನನ್ನು ಧ್ಯಾಸಿಸಿ ಪೂಜಿಸಿ, ಉತ್ತಮ ರೀತಿಯಿಂದ ವೀರಭದ್ರೇಶ್ವರನನ್ನು ಪೂಜಿಸಬೇಕು. ॥ ೧೮೩ ॥ ಬಳಿಕ ಹರ್ಷದಿಂದ ಅವಿಮುಕ್ತೇಶ್ವರನ ಹತ್ತರ ಹೋಗಿ ಭಕ್ತಿಯಿಂದ ಪೂಜಿಸಿ, ಮೋದಾದಿ ಪಂಚವಿನಾಯಕರನ್ನು ಪೂಜಿಸಬೇಕು. ॥ ೧೮೪ ॥ ನಂತರ ಆನಂದಭೈರವನನ್ನು ಪೂಜಿಸಿ, ಪುನಃ ಮಹಾದ್ವಾರಕ್ಕೆ ಹೋಗಿ ಅಲ್ಲಿರುವ ಮನ್ಮಥಾರಿಯಾದ ವಿಶ್ವನಾಥನನ್ನು ಪೂಜಿಸಬೇಕು. ॥ ೧೮೫ ॥ ಎಲೈ ಬಾಲಕಾ, ಈ ಪ್ರಕಾರ ನೀನು ಅಂತರಗ್ರಹ ಯಾತ್ರಾ ಮಾಡಿ, ಮುಕ್ತಿ ಮಂಟಪದೊಳಗೆ ಹೋಗಿ ಮಂತ್ರವನ್ನು ಅನ್ನಬೇಕು. ॥ ೧೮೬ ॥ ಏನಂದರೆ—

**ಶ್ಲೋಕ** ॥ ಅಂತರ್ಗೃಹೇಷು ಯಾತ್ರೇಯಂ ಯಥಾವದ್ಯಾ ಮಯಾಕೃತಾ ॥
ನ್ಯೂನಾತಿರಿಕ್ತಯಾಶಂಭುಃ ಪ್ರೀಯತಾಮನಯಾ ವಿಭುಃ ॥ ೧ ॥

ಇತಿ ಮಂತ್ರಂ ಸಮುಲಚ್ಚಾರ್ಯ ಕ್ಷಣಂ ವೈ ಮುಕ್ತಿಮಾನ್ ಭವೇತ್ ॥
ವಿಶ್ರಮ್ಯಯಾಯಾದ್ಭವನೇ ನಿಷ್ಪಾಪಃ ಪುಣ್ಯಭಾಗ್ಭವೇತ್ ॥ ೨ ॥

ಈ ಪ್ರಕಾರ ಮಂತ್ರವನ್ನು ಜಪಿಸಿ, ವಿಶ್ವನಾಥನಿಗೆ ನಮಸ್ಕರಿಸಿ, ಆಮೇಲೆ ಅಲ್ಲಿಂದ ದಕ್ಷಿಣ ಮಾನಸ ಯಾತ್ರೆಗೆ ಹೊರಡಬೇಕು. ॥ ೧೮೭ ॥ ಮಣಿಕರ್ಣಿಕೆಗೆ ಹೋಗಿ ಉತ್ತರವಾಹಿನಿಯಲ್ಲಿ ಸ್ನಾನ ಮಾಡಿ, ವಿಶ್ವನಾಥನನ್ನು ಪೂಜಿಸಿ ಯಾತ್ರೆಯುದ್ದೇಶಿಯಿಂದ ಸಂಕಲ್ಪ ಮಾಡಬೇಕು. ॥ ೧೮೮ ॥ ಅಲ್ಲಿಂದ ಹರ್ಷದಿಂದ ಹೊರಟು ಭಕ್ತಿಯಿಂದ ಮೋದಾದಿ ಪಂಚ ವಿನಾಯಕರನ್ನು ಪೂಜಿಸಬೇಕು. ಆಮೇಲೆ ಧುಂಡಿ ರಾಜನನ್ನು ಪೂಜಿಸಬೇಕು. ॥ ೧೮೯ ॥ ನಂತರ ಭವಾನಿ ಶಂಕರನನ್ನು ಪೂಜಿಸಿ, ದಂಡಪಾಣಿಗೆ ನಮಸ್ಕರಿಸಿ, ಭಕ್ತಿಯಿಂದ ವಿಶಾಲಾಕ್ಷನನ್ನು ಪೂಜಿಸಬೇಕು. ॥ ೧೯೦ ॥ ಆಮೇಲೆ ಧರ್ಮಕೂಪದಲ್ಲಿ ಸ್ನಾನ ಮಾಡಿ ಹರ್ಷದಿಂದ ಶ್ರಾದ್ಧ ಮಾಡಿ ಧರ್ಮೇಶ್ವರನನ್ನೂ ಗಂಗಾಕೇಶವನನ್ನೂ ಪೂಜಿಸಬೇಕು. ॥ ೧೯೧ ॥ ಬಳಿಕ ಲಲಿತಾದೇವಿಯನ್ನು ಪೂಜಿಸಿ, ಜರಾಸಂದೇಶ್ವರನಿಗೆ ನಮಿಸಿ, ಸೋಮನಾಥನನ್ನೂ ಭಕ್ತಿಯಿಂದ ವರಾಹೇಶ್ವರನನ್ನೂ ಪೂಜಿಸಬೇಕು. ॥ ೧೯೨ ॥ ಬಳಿಕ ದಶಾಶ್ವಮೇಧ ತೀರ್ಥದಲ್ಲಿ ಸ್ನಾನ ಮತ್ತು ಶ್ರಾದ್ಧಗಳನ್ನೂ ಪ್ರಯಾಗ ತೀರ್ಥದಲ್ಲಿ ಸ್ನಾನ ಮತ್ತು ಶ್ರಾದ್ಧಗಳನ್ನೂ ಮಾಡಬೇಕು. ॥ ೧೯೩ ॥ ಆಮೇಲೆ ದಶಾಶ್ವಮೇಧೇಶ್ವರನನ್ನೂ ಪ್ರಯಾಗೇಶ್ವರನನ್ನೂ ಭಕ್ತಿಯಿಂದ ಪೂಜಿಸಿ, ಶೀತಲೇಶ್ವರನನ್ನು ಪೂಜಿಸಬೇಕು. ॥ ೧೯೪ ॥ ಎಲೈ ಬ್ರಹ್ಮಚಾರಿಯೇ, ಆಮೇಲೆ ಬಂದೀದೇವಿಯನ್ನು ಪೂಜಿಸಿ, ಮನೋಭಾವದಿಂದ ಸರ್ವೇಶ್ವರನನ್ನೂ ಭಕ್ತಿಪೂರ್ವಕ ಧುಂಡಿರಾಜನನ್ನೂ ಪೂಜಿಸಬೇಕು. ॥ ೧೯೫ ॥ ಆಮೇಲೆ ತಿಲಭಾಂಡೇಶ್ವರನನ್ನು ಪೂಜಿಸಿ, ಮುಂದೆ ರೇವಾಕುಂಡದಲ್ಲಿ ಭಕ್ತಿಯಿಂದ ಸ್ನಾನಮಾಡಿ ಆಮೇಲೆ ಮಾನಸ ಸರೋವರದಲ್ಲಿ ಸ್ನಾನಮಾಡಬೇಕು. ॥ ೧೯೬ ॥ ಆಮೇಲೆ ಅಲ್ಲಿಯೇ ಶ್ರಾದ್ಧಾದಿ ತರ್ಪಣಗಳನ್ನು ಮಾಡಿ ಮಾನಸೇಶ್ವರನನ್ನು ಪೂಜಿಸಿ ಮನಸಿನ ಇಷ್ಟಾರ್ಥಗಳನ್ನು ಪಡೆಯಬೇಕು. ॥ ೧೯೭ ॥ ಬಳಿಕ ಕೇದಾರ ಕುಂಡದಲ್ಲಿ ಸ್ನಾನ ಮಾಡಿ, ತರ್ಪಣ ಬಿಟ್ಟು ಕೇದಾರೇಶ್ವರನನ್ನು ಪೂಜಿಸಿ, ಗೌರೀಕುಂಡದಲ್ಲಿ ಸ್ನಾನ ಮಾಡಬೇಕು. ॥ ೧೯೮ ॥ ಆಮೇಲೆ ವೃದ್ಧ ಕೇದಾರೇಶ್ವರನನ್ನೂ ಹನುಮಂತೇಶ್ವರನನ್ನೂ ರಾಮೇಶ್ವರನನ್ನೂ ಪೂಜಿಸಿ ಕೃಮಿಕುಂಡಿಯಲ್ಲಿ ಸ್ನಾನಮಾಡಿ ಶ್ರಾದ್ಧ ಮಾಡಬೇಕು. ॥ ೧೯೯ ॥ ಬಳಿಕ ಸಿದ್ಧೇಶ್ವರನಿಗೆ ನಮಿಸಿ, ಸ್ವಪ್ನಕುಂಡ

ದಲ್ಲಿ ಸ್ನಾನಮಾಡಿ ಸ್ವಪ್ನೇಶ್ವರನನ್ನು ಪೂಜಿಸಿ ಗಂಗಾ-ಯಮುನಾ ಸಂಗಮ ಅಥವಾ ವರುಣಾ-ಅಸಿಗಳ ಸಂಗಮದಲ್ಲಿ ಸ್ನಾನ ಮಾಡಬೇಕು. ॥ ೨೦೦ ॥ ಆಮೇಲೆ ಸಂಗಮೇಶ್ವರನನ್ನು ಪೂಜಿಸಿ, ಲೋಲಾರ್ಕ ಕೂಪದಲ್ಲಿ ಸ್ನಾನ ಮತ್ತು ಶ್ರಾದ್ಧಗಳನ್ನು ಮಾಡಿ, ಗತಿಪ್ರದೀಪೇಶ್ವರನನ್ನು ಪೂಜಿಸಬೇಕು. ॥ ೨೦೧ ॥ ಆಮೇಲೆ ಅರ್ಕಪಿ-ನಾಯಕನನ್ನೂ, ಅಧಿಕವಾಗಿ ಪಾರಾಶರೇಶ್ವರನನ್ನೂ ಪೂಜಿಸಿ, ಸನ್ನಿಹತ್ಯ ಕುಂಡದಲ್ಲಿ ಸ್ನಾನ ಮಾಡಬೇಕು. ॥ ೨೦೨ ॥ ಆಮೇಲೆ ಕುರುಕ್ಷೇತ್ರ ಕುಂಡದಲ್ಲಿ ಭಕ್ತಿಯಿಂದ ಸ್ನಾನ ಮಾಡಿ ಅಲ್ಲಿ ಸುವರ್ಣಾದಿ ದಾನಗಳನ್ನು ಮಾಡಬೇಕು. ॥ ೨೦೩ ॥ ಬಳಿಕ ಅಮೃತಕುಂಡಿಯಲ್ಲಿ ಸ್ನಾನ ಮಾಡಿ ದುರ್ಗಾ ವಿನಾಯಕನನ್ನೂ ಭಕ್ತಿಯಿಂದ ದುರ್ಗಾದೇವಿಯನ್ನೂ ಪೂಜಿಸಬೇಕು. ॥ ೨೦೪ ॥ ಮುಂದೆ ಮನಸ್ಸಿನ ಆಪೇಕ್ಷೆಗಳನ್ನು ಪೂರ್ಣ ಮಾಡುವಂಥ ೬೪ ಮಂದಿ ಯೋಗಿನಿಯರನ್ನು ಪೂಜಿಸಬೇಕು. ಆಮೇಲೆ ಕುಕ್ಕುಟ ದ್ವಿಜನನ್ನು ವಂದಿಸಿ ಮುಂದಿನ ಮಂತ್ರವನ್ನು ಜಪಿಸಬೇಕು. ॥ ೨೦೫ ॥

**ಶ್ಲೋಕ** ॥ ವಾರಾಣಸ್ಯಾಂ ದಕ್ಷಿಣೇ ಭಾಗೇ ಕುಕ್ಕುಟೋ ನಾಮ ವೈದ್ವಿಜಃ ॥
ತಸ್ಯಸ್ಮರಣ ಮಾತ್ರೇಣ ದುಸ್ವಪ್ನಃ ಸುಸ್ವಪ್ನೋಭವೇತ್ ॥ ॥ ೨೦೬ ॥

ಮುಂದೆ ಮಾಸೋಪವಾಸಿಯನ್ನು ಪೂಜಿಸಿ, ಗೋವಾಯಿಗೆ ಏಳು ಕವಡೆಗಳನ್ನು ಹಾಕಿ ಭಕ್ತಿಯಿಂದ ವಂದಿಸಬೇಕು. ॥ ೨೦೭ ॥ ಆಮೇಲೆ ರೇಣುಕಾದೇವಿಯನ್ನು ಪೂಜಿಸಿ, ಮುಂದೆ ಶಂಖೋದ್ಧಾರಕುಂಡದಲ್ಲಿ ಹರ್ಷದಿಂದ ಸ್ನಾನಮಾಡಿ ಶಂಖ ವಿಷ್ಣುವನ್ನು ಪೂಜಿಸಬೇಕು. ॥ ೨೦೮ ॥ ಆಮೇಲೆ ಕಾಮಾಕ್ಷಿ ಕುಂಡದಲ್ಲಿ ಸ್ನಾನ ಮಾಡಿ ಕಾಮಾಕ್ಷಿದೇವಿಯನ್ನೂ, ಅಯೋಧ್ಯಾಕುಂಡದಲ್ಲಿ ಸ್ನಾನ ಮಾಡಿ ಸೀತಾರಾಮರನ್ನೂ ಪೂಜಿಸಬೇಕು. ॥ ೨೦೯ ॥ ಬಳಿಕ ಕಲವಾಂಕುಶ ಕುಂಡದಲ್ಲಿ ಸ್ನಾನ ಮಾಡಿ ಲವಾಂಕುಶರನ್ನೂ ಲಕ್ಷ್ಮೀಕುಂಡದಲ್ಲಿ ಸ್ನಾನ ಮಾಡಿ ಲಕ್ಷ್ಮೀನಾರಾಯಣರನ್ನೂ ಪೂಜಿಸಬೇಕು. ॥ ೨೧೦ ॥ ಆಮೇಲೆ ಸೂರ್ಯಕುಂಡದಲ್ಲಿ ಸ್ನಾನ

ಮಾಡಿ ಶ್ರಾದ್ಧ ಮಾಡಿ ಸಾಂಬಾದಿತ್ಯನನ್ನು ಪೂಜಿಸಿ ಮುಂದೆ ಹೋಗಬೇಕು. || ೨೧೧ || ವೈಜನಾಥ ಕುಂಡದಲ್ಲಿ ಸ್ನಾನ ಮಾಡುವದು ಉತ್ತಮವಾದದ್ದು. ಅಲ್ಲಿ ಸ್ನಾನ ಮಾಡಿ ವೈಜನಾಥೇಶ್ವರನನ್ನು ಒಂದೇ ಮನಸಿನಿಂದ ಪೂಜಿಸಬೇಕು. || ೨೧೨ || ಆಮೇಲೆ ಭಕ್ತಿಯಿಂದ ಗೋದಾವರಿ ಕುಂಡದಲ್ಲಿ ಸ್ನಾನ ಮಾಡಿ ಗೌತಮೇಶ್ವರ ಲಿಂಗವನ್ನು ಪೂಜಿಸಬೇಕು. || ೨೧೩ || ಆಮೇಲೆ ಅಗಸ್ತಿ ಕುಂಡದಲ್ಲಿ ಸ್ನಾನ ಮಾಡಿ ಅಗಸ್ತ್ಯೇಶ್ವರನಿಗೆ ನಮಿಸಿ, ಮನೋಭಾವದಿಂದಲೂ ಭಕ್ತಿಯಿಂದಲೂ ಪೂಜಾ ಮಾಡಬೇಕು. || ೨೧೪ || ಬಳಿಕ ಶುಕ್ರಕೂಪದಲ್ಲಿ ಸ್ನಾನ ಮಾಡಿ ಶುಕ್ರೇಶ್ವರನನ್ನು ಪೂಜಿಸಿ, ಮುಂದೆ ಅನ್ನಪೂರ್ಣೆಗೆ ನಮಿಸಿ ಭಕ್ತಿಯಿಂದ ಪೂಜಿಸಬೇಕು. || ೨೧೫ || ಆಮೇಲೆ ಧುಂಡಿರಾಜನನ್ನು ಪೂಜಿಸಿ, ಜ್ಞಾನವಾಪಿಯಲ್ಲಿ ಸ್ನಾನ ಮಾಡಿ ಜ್ಞಾನೇಶ್ವರನನ್ನು ಪೂಜಿಸಿ, ದಂಡಪಾಣಿಯನ್ನು ಪೂಜಿಸಬೇಕು. || ೨೧೬ || ಆಮೇಲೆ ಆನಂದ ಭೈರವನಿಗೆ ವಂದಿಸಿ, ಮಹಾದ್ವಾರಕ್ಕೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ ವಿಶ್ವನಾಥನನ್ನು ಪೂಜಿಸಬೇಕು. || ೨೧೭ || ಎಲೈ ಬ್ರಹ್ಮಚಾರಿಯೇ ಈ ಪ್ರಕಾರ ದಕ್ಷಿಣ ಮಾನಸಯಾತ್ರೆಯು ವಿಶೇಷವಾಗಿರುವದು ನೀನು ಹರ್ಷದಿಂದ ಮಾಡು ಎಂದು ಆ ಯೋಗಿವರ್ಯನು ಹೇಳಿ || ೨೧೮ || ಮತ್ತೆ ಆ ಬಾಲಕನನ್ನು ಕುರಿತು— ಎಲೈ ಬಾಲಕನೇ ಇನ್ನು ನಿನಗೆ ಉತ್ತರ ಮಾನಸ ಯಾತ್ರೆಯ ವಿಧಿಯು ಹ್ಯಾಗೆ ಅದೆ ಎಂಬದನ್ನು ಹೇಳುವೆನು ಕೇಳು.—ಹರ್ಷದಿಂದ ಸಂಕಲ್ಪವನ್ನು ಮಾಡಿ ನೀನು ಹೊರಡಬೇಕು. || ೨೧೯ || ಮೊದಲು ಪಂಚಗಂಗೆಯಲ್ಲಿ ಮಹಾ ಹರ್ಷದಿಂದ ಸ್ನಾನ ಮಾಡಬೇಕು. ಅದರಿಂದ ಕೋಟಿಜನ್ಮದ ಪಾಪವು ನಾಶವಾಗುವದೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿರುವದು. || ೨೨೦ || ಈ ಪಂಚಗಂಗೆ ಉತ್ತಮ ಹಾಗು ಪ್ರಖ್ಯಾತವಾದ ಹೆಸರುಗಳಿರುತ್ತವೆ ಹೇಳುವೆನು ಕೇಳು. ೧ ಕಿರಣಾ, ೨ **ಧೂತಪಾಪಾ, ೩ ಪುಣ್ಯ ಸರಸ್ವತಿ,** || ೨೨೧ || **ಗಂಗಾ–ಯಮುನಾ** ಕೂಡಿ ೫ ಪ್ರಸಿದ್ಧವಾಗಿರುತ್ತವೆಂದು ತಿಳಕೊಂಡು ಏಕಚಿತ್ತದಿಂದ ಕೇಳು. || ೨೨೨ || ಆ ನದಿಗೆ ಕೃತಯುಗದಲ್ಲಿ ಎಲ್ಲರೂ ಹರ್ಷದಿಂದ **ಧರ್ಮನದಿ** ಎಂದೆನ್ನುತ್ತಿದ್ದರು. ತ್ರೇತಾಯುಗದಲ್ಲಿ ಅದಕ್ಕೆ **ಧೂತಪಾಪಾ** ಎಂದೆನ್ನುತ್ತಿದ್ದರು. || ೨೨೩ || ಅದಕ್ಕೆ ದ್ವಾಪರಾ

ಯುಗದಲ್ಲಿ ಬಿಂದು ತೀರ್ಥವೆಂದು ವಿಸ್ತಾರವಾದ ಹೆಸರಿತ್ತು. ಈಗ ಕಲಿಯುಗದಲ್ಲಿ ಅದಕ್ಕೆ ಪಂಚಗಂಗಾ ಎಂಬ ಹೆಸರು ಆಯಿತು. || ೨೨೪ || ಆ ಪಂಚಗಂಗೆಯಲ್ಲಿ ಸ್ನಾನ ಮಾಡಿದರೆ ಪ್ರಯಾಗದಲ್ಲಿ ಮಾಘಮಾಸದಲ್ಲಿ ಸ್ನಾನ ಮಾಡಿದರೆ ಎಷ್ಟು ಪುಣ್ಯ ಫಲವು ಬರುವದೋ ಅದರಕಿಂತ ಕೋಟಿ ಪಟ್ಟು ಹೆಚ್ಚು ಪುಣ್ಯವು ಬರುವದು. || ೨೨೫ || ಆದ್ದರಿಂದ ನೀನು ಈ ಪ್ರಕಾರವಾಗಿ ಭಕ್ತಿಯಿಂದ ಪಂಚಗಂಗೆಯಲ್ಲಿ ಸ್ನಾನ ಮಾಡಿ ಬಿಂದು ಮಾಧವನ ಪೂಜಾ ಮಾಡಿ ಕೇಶವ ದೇವರನ್ನು ಪೂಜಿಸು. || ೨೨೬ || ಆಮೇಲೆ ಗೋವಾಲಕೃಷ್ಣನನ್ನು ಪೂಜಿಸಿ, ನೃಸಿಂಹ ಭುವ ಸಕ್ಕೆ ಹೋಗಿ ಮಂಗಳಗೌರಿಗೆ ವಂದಿಸಿಗ ಭಸ್ತೇಶ್ವರನನ್ನು ಪೂಜಿಸಬೇಕು. || ೨೨೭ || ಆಮೇಲೆ ಮಯೂಷಾ(ರಾ) ದಿತ್ಯನನ್ನು ಪೂಜಿಸಲಿಕ್ಕೆ ಭಕ್ತಿಯಿಂದ ಹೋಗಿ ಪೂಜಿಸಿ, ಪುನಃ ಹರ್ಷದಿಂದ ವಿಶ್ವೇಶ್ವರ ದರ್ಶನಕ್ಕೆ ಹೋಗ ಬೇಕು. || ೨೨೮ || ಆಮೇಲೆ ಭಕ್ತಿಯಿಂದ ಮುಕ್ತಿ ಮಂಟಪಕ್ಕೆ ಹೋಗಿ ವಿಧಿಯಿಂದ ಸಂಕಲ್ಪಿಸಿ ಉತ್ತರ ಮಾನಸಾಯಾತ್ರೆಗೆ ಹೊರಡಬೇಕು. || ೨೨೯ || ಆಮೇಲೆ ಅಲ್ಲಿಂದ ಹೊರಟು ಆದಿತ್ಯನನ್ನೂ ಅಮರ್ದ-ಕೇಶ್ವರ ನನ್ನೂ ಪಾಪ ಭಕ್ಷೇಶ್ವರನನ್ನೂ ಪೂಜಿಸಬೇಕು. || ೨೩೦ || ಆಮೇಲೆ ನವಗ್ರಹಗಳನ್ನು ಪೂಜಿಸಿ, ಕಾಲಭೈರವ ನಿಗೆ ವಂದಿಸಿ, ಕ್ಷೇತ್ರಪಾಲನನ್ನು ಪೂಜಿಸಿ, ಕಾಳಕೂಪದಲ್ಲಿ ಸ್ನಾನ ಮಾಡಬೇಕು. || ೨೩೧ || ಆಮೇಲೆ ಕಾಳೇ ಶ್ವರನನ್ನು ಪೂಜಿಸಿ, ಹಂಸ ತೀರ್ಥದಲ್ಲಿ ಸ್ನಾನ ಮಾಡಿ ಶ್ರಾದ್ಧಾದಿ ಪಿತೃ ಕರ್ಮಗಳನ್ನು ಮಾಡಬೇಕು. || ೨೩೨ || ಎಲೈ ಬಾಲಕಾ ಆಮೇಲೆ ಕೃತ್ತಿವಾಸೇಶ್ವರನನ್ನು ಪೂಜಿಸಿ ಮುಂದೆ ಹೋಗಿ ಶಂಖವಾಪಿಯಲ್ಲಿ ಸ್ನಾನ ಮಾಡ ಬೇಕು. || ೨೩೩ || ಆಮೇಲೆ ಅಲ್ಲಿ ಆಚಮನ ಮಾಡಿ ರತ್ನೇಶ್ವರನನ್ನೂ ಸೀತೇಶ್ವರನನ್ನೂ ದಕ್ಷೇಶ್ವರನನ್ನೂ ಪೂಜಿಸಬೇಕು. || ೨೩೪ || ಬಳಿಕ ಚತುರ್ವಕ್ತ್ರೇಶ್ವರನನ್ನು ಉತ್ತಮರೀತಿಯಾಗಿ ಪೂಜಿಸಿ ಮುಂದೆ ವೃದ್ಧ ಕಾಳ ಕೂಪಕ್ಕೆ ಹೋಗಿ ವಿಧಿಪ್ರಕಾರ ಸ್ನಾನ ಮಾಡಬೇಕು. || ೨೩೫ || ಆಮೇಲೆ ಕಾಳೇಶ್ವರನನ್ನು ಪೂಜಿಸಿ ಅಲ್ಲಿಂದ ಮುಂದೆ ಹೋಗಿ ಭಕ್ತಿಯಿಂದಲೂ ಹರ್ಷದಿಂದಲೂ ಅಪಮೃತ್ಯೀಶ್ವರನನ್ನು ಪೂಜಿಸಬೇಕು. || ೨೩೬ || ಆಮೇಲೆ ಮಂದಾಕಿನಿಯಲ್ಲಿ ಸ್ನಾನ ಮಾಡಿ, ಮಧ್ಯಮೇಶ್ವರನನ್ನು ಪೂಜಿಸಿ ಅಲ್ಲಿಂದ ಮುಂದೆ ಹೋಗಿ ಜಂಬುಕೇಶ್ವರನನ್ನು

ಪೂಜೆಸಬೇಕು. || ೩೩೭ || ಬಳಿಕ ವಕ್ರತುಂಡನನ್ನು ಪೂಜಿಸಿ, ಭಕ್ತಿಯಿಂದ ದಂಡಬಾತ ಕೂಪದಲ್ಲಿ ಸ್ನಾನ-ಶ್ರಾದ್ಧಗಳನ್ನು ಮಾಡಬೇಕು. || ೩೩೮ || ಮುಂದೆ ಭೂತ ಭೈರವನನ್ನೂ ಈಶಾನೇಶ್ವರನನ್ನೂ ಪೂಜಿಸಿ, ಜೈಗೀಷವ್ಯ ಗುಹಕ್ಕೆ ನಮಸ್ಕಾರ ಮಾಡಿ ಮುಂದೆ ಹೋಗಬೇಕು. || ೩೩೯ || ಆಮೇಲೆ ಘಂಟಾಕುಂಡದಲ್ಲಿ ಸ್ನಾನ ಮಾಡಿ ವ್ಯಾನೇಶ್ವರನನ್ನೂ , ಭಕ್ತಿಯಿಂದ ಕಂದುಕೇಶ್ವರನನ್ನೂ ಪೂಜಿಸಬೇಕು. || ೩೪೦ || ಬಳಿಕ ಜ್ಯೇಷ್ಠ ವಾಪಿಯಲ್ಲಿ ಸ್ನಾನ ಮಾಡಿ ಜ್ಯೇಷ್ಠೇಶ್ವರನನ್ನು ಪೂಜಿಸಿ ಹಾಗೇ ಮುಂದೆ ಹೋಗಿ ಸಪ್ತಸಾಗರ ಕುಂಡದಲ್ಲಿ ಸ್ನಾನ ಮಾಡಬೇಕು. || ೩೪೧ || ಅಲ್ಲಿಂದ ವಾಲ್ಮೀಕೇಶ್ವರನನ್ನೂ ಭಕ್ತಿಯಿಂದ ಪೂಜಿಸಿ, ಭೀಮಲೋಟಕ್ಕೆ ಹೋಗಿ ಭೀಮೇಶ್ವರನನ್ನು ಪೂಜಿಸಬೇಕು. || ೩೪೨ || ಆಮೇಲೆ ಮಾತೃ-ಪಿತೃ ಕುಂಡದಲ್ಲಿ ಸ್ನಾನ ಶ್ರಾದ್ಧಗಳನ್ನು ಮಾಡಿ ಮುಂದೆ ಪಿಶಾಚಮೋಚನ ತೀರ್ಥಕ್ಕೆ ಹೋಗಿ ಅಲ್ಲಿಯೂ ಶ್ರಾದ್ಧವನ್ನು ಮಾಡಬೇಕು. || ೩೪೩ || ಮುಂದೆ ಕಪರ್ದೇಶ್ವರನನ್ನು ಭಕ್ತಿಯಿಂದ ಪೂಜಿಸಿ, ಕರ್ಕೋಟಕ ವಾಪಿಯಲ್ಲಿ ಸ್ನಾನ ಮಾಡಬೇಕು. || ೩೪೪ || ಆಮೇಲೆ ಕರ್ಕೋಟಕೇಶ್ವರನನ್ನು ಭಕ್ತಿಯಿಂದ ಪೂಜಿಸಿ, ಮುಂದೆ ಈಶ್ವರ ಗಂಗಾತೀರ್ಥದಲ್ಲಿ ಸ್ನಾನ ದಾನಗಳನ್ನು ಮಾಡಬೇಕು. || ೩೪೫ || ಬಳಿಕ ಅಗ್ನೀಶ್ವರನನ್ನು ಪೂಜಿಸಿ, ಭಕ್ತಿಯಿಂದ ಚಕ್ರಕುಂಡದಲ್ಲಿ ಸ್ನಾನ ಮಾಡಿ ಶ್ರಾದ್ಧ-ಕರ್ಮ ಮಾಡಬೇಕು. || ೩೪೬ || ಅಲ್ಲಿಂದ ಉತ್ತರಾರ್ಕನನ್ನು ಪೂಜಿಸಿ, ಮತ್ಸ್ಯೋದರದಲ್ಲಿ ಸ್ನಾನ ಮಾಡಿ ಓಂಕಾರೇಶ್ವರನನ್ನೂ ಕಪಿಲೇಶ್ವರನನ್ನೂ ಪೂಜಿಸಬೇಕು. || ೩೪೭ || ಆಮೇಲೆ ಋಣಮೋಚನ ತೀರ್ಥದಲ್ಲಿ ಸ್ನಾನ ಮಾಡಿ ಭಕ್ತಿಯಿಂದ ಶ್ರಾದ್ಧ ಮಾಡಬೇಕು. ಮತ್ತು ಪಾಪಮೋಚನ ತೀರ್ಥದಲ್ಲಿ ಸ್ನಾನ ಮಾಡಿ ಶ್ರಾದ್ಧಾದಿ ಕರ್ಮ ಮಾಡಬೇಕು. || ೩೪೮ || ಆಮೇಲೆ ಕಪಾಲಮೋಚನ ತೀರ್ಥದಲ್ಲಿ ಸ್ನಾನ ಶ್ರಾದ್ಧ-ತರ್ಪಣಗಳನ್ನು ಮಾಡಿ ಕುಲಸ್ತಂಭದ ಹತ್ತರ ಹೋಗಿ ಭಕ್ತಿಯಿಂದ ಅದನ್ನು ಪೂಜಿಸಬೇಕು. ||೩೪೯|| ಮುಂದೆ ವೈತರಣೀ ತೀರ್ಥದಲ್ಲಿ ಸ್ನಾನ ಶ್ರಾದ್ಧಗಳನ್ನು ಮಾಡಿ ಅಲ್ಲಿ ವಿಧಿಪೂರ್ವಕ ಗೋದಾನ ಕೊಟ್ಟರೆ ಬಹಳ ಪುಣ್ಯ ಬರುವದು. || ೩೫೦ || ಮುಂದೆ ಕಪಿಲಧಾರಾ ತೀರ್ಥದಲ್ಲಿ ಸ್ನಾನ-ಶ್ರಾದ್ಧಗಳನ್ನು ಮಾಡಿ ವತ್ಸ ಸಹಿತವಾದ ಗೋವನ್ನು ಬ್ರಾಹ್ಮಣರಿಗೆ

ದಾನ ಮಾಡಬೇಕು. ॥ ೨೫೧ ॥ ಆಮೇಲೆ ವೃಷಭಧ್ವಜವನ್ನು ಪೂಜಿಸಿ, ಅಲ್ಲಿಂದ ಹೊರಟು ಜ್ವಾಲಾನರಸಿಂಹನನ್ನು ವಂದಿಸಿ, ವರುಣಾಸಂಗಮಕ್ಕೆ ಹೋಗಬೇಕು. ॥ ೨೫೨ ॥ ಅಲ್ಲಿ ಸ್ನಾನ-ಶ್ರಾದ್ಧಗಳನ್ನು ಮಾಡಿ ಕೇಶವಾದಿತ್ಯನನ್ನೂ ಆದಿಕೇಶವನನ್ನೂ ಪೂಜಿಸಿ ಮುಂದೆ ಹೋಗಬೇಕು. ॥ ೨೫೩ ॥ ಮುಂದೆ ಉತ್ತಮವಾದ ಪ್ರಹ್ಲಾದತೀರ್ಥವಿರುತ್ತದೆ. ಅಲ್ಲಿ ಸ್ನಾನ-ಶ್ರಾದ್ಧಗಳನ್ನು ಮಾಡಿ ಒಳ್ಳೇ ಭಕ್ತಿಯಿಂದ ಪ್ರಹ್ಲಾದೇಶ್ವರನನ್ನು ಪೂಜಿಸಬೇಕು. ॥ ೨೫೪ ॥ ಮುಂದೆ ಕಪಿಲಧಾರಾ ತೀರ್ಥವು ದೊಡ್ಡದು. ಅಲ್ಲಿ ಸ್ನಾನ ಮಾಡಿ ಮನೋಹರವಾಗಿ ತ್ರಿಲೋಚನೇಶ್ವರನನ್ನೂ ಅಸಂಖ್ಯಾತೇಶ್ವರನನ್ನೂ ಪೂಜಿಸಬೇಕು. ॥ ೨೫೫ ॥ ಮುಂದೆ ಹೋಗಿ ಭಕ್ತಿಯಿಂದ ಮಹಾದೇವನನ್ನೂ ಒಳ್ಳೇ ಪ್ರೀತಿಯಿಂದಲೂ ಭಕ್ತಿಯಿಂದಲೂ ದ್ರುಪದೇಶ್ವರನನ್ನೂ ಪೂಜಿಸಬೇಕು. ॥ ೨೫೬ ॥ ಆಮೇಲೆ ಗಂಗಾ–ಯಮುನಾ–ಸರಸ್ವತಿ ಎಂಬ ಮಹತ್ವವಾದ ಮೂರು ಲಿಂಗಗಳನನ್ನು ಭಕ್ತಿಯಿಂದ ಪೂಜಿಸಿ ಕಾಮ್ಯತೀರ್ಥಕ್ಕೆ ಹೋಗಬೇಕು. ॥ ೨೫೭ ॥ ಅಲ್ಲಿ ಕಾಮೇಶ್ವರನನ್ನು ಪೂಜಿಸಿ ಗೋಪ್ರತಾರ ತೀರ್ಥದಲ್ಲಿ ಸ್ನಾನಮಾಡಿ ಪಂಚಗಂಗಾಕ್ಕೆ ಹೋಗಿ ಮತ್ತೆ ಸ್ನಾನ ಮಾಡಬೇಕು ॥ ೨೫೮ ॥ ಬಳಿಕ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಿ ಜಲಶಾಯಿಯನ್ನು ಪೂಜಿಸಿ, ಹನುಮಂತನಿಗೂ ಮೋದಾದಿ ಪಂಚವಿನಾಯಕರಿಗೂ ನಮಸ್ಕರಿಸಬೇಕು. ॥ ೨೫೯ ॥ ಆಮೇಲೆ ಅನ್ನಪೂರ್ಣೆಯನ್ನೂ ಧುಂಡಿರಾಜನನ್ನೂ ಪೂಜಿಸಿ ಜ್ಞಾನವಾಪಿಯಲ್ಲಿ ಸ್ನಾನ ಮಾಡಿ ಜ್ಞಾನೇಶ್ವರನನ್ನು ಪೂಜಿಸಬೇಕು. ॥ ೨೬೦ ॥ ಆಮೇಲೆ ದಂಡಪಾಣಿಯನ್ನೂ ಮೋಕ್ಷಲಕ್ಷ್ಮೀವಿಲಾಸನಿಯನ್ನೂ ಪಂಚಪಾಂಡವರನ್ನೂ ದ್ರೌಪದೀ ದ್ರುಪದ ವಿನಾಯಕನನ್ನೂ ಪೂಜಿಸಬೇಕು. ॥ ೨೬೧ ॥ ಆಮೇಲೆ ಆನಂದ ಭೈರವನನ್ನು ಹರ್ಷದಿಂದ ಅವಿಮುಕ್ತೇಶ್ವರನನ್ನೂ ಸಂಭ್ರಮದಿಂದ ಪೂಜಿಸಿ ವಿಶ್ವನಾಥನ ಮುಂದೆ ಮಂತ್ರ ಅನ್ನಬೇಕು. ॥ ೨೬೨ ॥

**ಶ್ಲೋಕ** ॥ ಉತ್ತರಮಾನಸ ಯಾತ್ರೇಯಂ ಯಥಾ ವದ್ಯಾಮಯಾಕೃತಾ ॥
ನ್ಯೂನಾತಿರಿಕ್ತಯಾ ಶಂಭುಃ ಪ್ರಿಯತಾಮನಯಾ ವಿಭುಃ ॥ ೨೬೩ ॥

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

ಈ ಪ್ರಕಾರ ಮಂತ್ರವನ್ನು ಅಂದು ಸಾಷ್ಟಾಂಗ ನಮಸ್ಕಾರ ಮಾಡಿ ಆಮೇಲೆ ಅಲ್ಲಿಂದ ಪಂಚಕ್ರೋಶ ಯಾತ್ರೆಗೆ ಹೊರಡಬೇಕು. || ೨೬೪ || ಎಂದು ಅವಧೂತರು ಬ್ರಹ್ಮಚಾರಿಗೆ ಹೇಳಿದರು. ಎಂದು ಸಿದ್ಧರು— ಎಲೈ ನಾಮಧಾರಕಾ, ನೀನು ಗುರುಚರಿತ್ರೆಯನ್ನು ಸಂತೋಷದಿಂದ ಕೇಳುವದರಿಂದ ಈ ಪ್ರಕಾರ ಇಹ ಸೌಖ್ಯ ವನ್ನೂ ನಾಲ್ಕೂ ಪುರುಷಾರ್ಥಗಳನ್ನೂ ಹೊಂದುತ್ತೀ ಎಂದು ಹೇಳಿದರು. || ೨೬೫ || ಇತ್ತ ಸರಸ್ವತೀ ಗಂಗಾಧರನು— ಈ ಗುರುಚರಿತ್ರೆಯನ್ನು ಕೇಳಿದರೆ ಮನೋಹರವಾಗಿ ಸಕಲಾಭೀಷ್ಟಗಳು ಸಾಧಿಸುವವು ಎಂದು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. || ೨೬೬ || ಹೀಗೆ ಗುರುಚರಿತ್ರಾಮೃತದಲ್ಲಿ ಕಾಶೀಖಂಡದಲ್ಲಿ ಹೇಳಿದಂತೆ ಪುರಾಣದಲ್ಲಿ ಈ ಕಥೆಯು ಪ್ರಖ್ಯಾತವಾಗಿರುತ್ತದೆ. || ೨೬೭ ||

ಇತಿ ಶ್ರೀಗುರುಚರಿತ್ರ ಪರಮಕಥಾಕಲ್ಪತರೌ, ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಕಾಶೀ ಮಹಾಯಾತ್ರಾ ನಿರೂಪಣಂನಾಮ ಏಕಚತ್ವಾರಿಂಶತ್ತಮೋಽಧ್ಯಾಯಃ || ೪೧ || ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು.

**— ೪೧ನೇ ಅಧ್ಯಾಯ ಸಮಾಪ್ತ —**

---

ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ

# ೪೨ನೇಯ ಅಧ್ಯಾಯ



## ಪಂಚಕ್ರೋಶ ಯಾತ್ರಾ ಮತ್ತು ಕಾಶೀಕ್ಷೇತ್ರ ಮಹಿಮಾ ಬ್ರಹ್ಮಚಾರಿಗೆ ವರ ಸಿಕ್ಕದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕಾ, ಆ ಅವಧೂತರು ಆ ಬ್ರಹ್ಮಚಾರಿಯನ್ನು ಕುರಿತು ಪಂಚಕ್ರೋಶ ಯಾತ್ರೆಯ ವಿಧಿಯನ್ನು ಹೇಳಿದರು ಕೇಳು. ಆಗ ಆ ಅವಧೂತರು— ಎಲೈ ಬ್ರಹ್ಮಚಾರಿಯೇ, ಪಂಚಕ್ರೋಶ ಯಾತ್ರೆಗೆ ಹೊರಡುವ ಮುಂದೆ ಮನಸಿನಲ್ಲಿ ಸಂಕಲ್ಪ ಮಾಡಿ, ಸ್ವರ್ಗದ್ವಾರಭುವನಕ್ಕೆ ಹೋಗಿ, ಗಂಗಾ ಕೇಶವನನ್ನು ಪೂಜಿಸಿ ಹರಿಶ್ಚಂದ್ರ ಮಂಟಪಕ್ಕೆ ಹೋಗಬೇಕು. ॥ ೧ ॥ ಆಮೇಲೆ ಆ ಸ್ವರ್ಗದ್ವಾರದ ಹತ್ತಿರ ಇರುವ ವಿಸ್ತೀರ್ಣವಾದ ಮಣಿಕರ್ಣಿಕಾ ತೀರ್ಥಕ್ಕೆ ಹೋಗಿ ವಿಧಿಪ್ರಕಾರ ಸಂಕಲ್ಪ ಮಾಡಬೇಕು. ॥ ೨ ॥ ಯಾತ್ರೆಗೆ ಹೊರಡುವ ಮುನ್ನಾದಿವಸ ಹವಿಸ್ಸಾನ್ನವನ್ನುಂಡು ಶುಚಿಯಾಗಿರಬೇಕು. ಮರುದಿವಸ ಪ್ರಾತಃಕಾಲದಲ್ಲಿ ಗಂಗೆಯಲ್ಲಿ ಸ್ನಾನ ಮಾಡಬೇಕು. ॥ ೩ ॥ ಆಮೇಲೆ ವಿನಯದಿಂದಲೂ ಕರುಣಾವಚನದಿಂದಲೂ ಪುನಃ ದರ್ಶನ ಕೊಡೆಂದು ಧುಂಡಿ ರಾಜನನ್ನು ಪ್ರಾರ್ಥಿಸಬೇಕು. ॥ ೪ ॥ ಆಮೇಲೆ ಗಂಗೆಗೆ ನಮಸ್ಕಾರ ಮಾಡಿ, ವಿಶ್ವನಾಥನ ಗುಡಿಗೆ ಹೋಗಿ ಆತನನ್ನೂ ಭವಾನೀಶಂಕರನನ್ನೂ ಪೂಜಿಸಬೇಕು. ॥ ೫ ॥ ಆಮೇಲೆ ಮುಕ್ತಿಮಂಟಪಕ್ಕೆ ಹೋಗಿ ವಂದಿಸಿ, ಪುನಃ ಧುಂಡಿರಾಜನನ್ನು ಪೂಜಿಸಲಿಕ್ಕೆ ಸಂತೋಷದಿಂದ ಹೊರಡಬೇಕು. ॥ ೬ ॥ ಮತ್ತೆ ಮಹಾದ್ವಾರಕ್ಕೆ ಬಂದು ವಿಶ್ವೇಶ್ವರನನ್ನೂ ಮೋದಾದಿ ಪಂಚವಿನಾಯಕರನ್ನೂ ಪೂಜಿಸಿ ದಂಡಪಾಣಿಗೆ ನಮಿಸಬೇಕು. ॥ ೭ ॥ ಆಮೇಲೆ ಆನಂದಭೈರವನನ್ನು ಪೂಜಿಸಿ, ಪುನಃ ಮಣಿಕರ್ಣಿಕೆಗೆ ಬಂದು ಮಣಿಕರ್ಣಿಕೇಶ್ವರನನ್ನು ಪೂಜಿಸಿ, ಸಿದ್ಧಿ ವಿನಾಯಕನನ್ನು ಪೂಜಿಸಬೇಕು. ॥ ೮ ॥ ಆಮೇಲೆ ಗಂಗಾಕೇಶವನನ್ನು ಪೂಜಿಸಿ, ಲಲಿತಾದೇವಿಗೆ ವಂದಿಸಿ,

ರಾಜಸಿದ್ಧೇಶ್ವರನನ್ನು ಧ್ಯಾನಿಸಿ, ದುರ್ಲಭೇಶ್ವರನನ್ನು ಪೂಜಿಸಬೇಕು. ॥ ೯ ॥ ಆಮೇಲೆ ಸೋಮನಾಥನನ್ನೂ ಶೂಲಟಂಕೇಶ್ವರನನ್ನೂ ವಾರಾಹೇಶ್ವರ, ದಶಾಶ್ವಮೇಧೇಶ್ವರರನ್ನೂ ಪೂಜಿಸಬೇಕು. ॥ ೧೦ ॥ ಆಮೇಲೆ ಬಂದೀ ದೇವಿಯನ್ನು ಪೂಜಿಸಿ, ಸರ್ವೇಶ್ವರನಿಗೆ ನಮಿಸಿ ಕೇದಾರೇಶ್ವರನನ್ನು ಧ್ಯಾನಿಸಿ ಹನುಮಂತೇಶ್ವರನನ್ನು ಪೂಜಿಸಬೇಕು. ॥ ೧೧ ॥ ಆಮೇಲೆ ಸಂಗಮೇಶ್ವರನನ್ನೂ ಲೋಲಾರ್ಕನನ್ನೂ, ಅರ್ಕವಿನಾಯಕನನ್ನೂ ಪೂಜಿಸಿ ದುರ್ಗಾಕುಂಡದಲ್ಲಿ ಸ್ನಾನ ಮಾಡಬೇಕು. ॥ ೧೨ ॥ ಬಳಿಕ ಆರ್ಯಾ ದುರ್ಗಾದೇವಿಯನ್ನು ಪೂಜಿಸಿ, ದುರ್ಗಾ ಗಣೇಶರನ್ನು ಧ್ಯಾನಿಸಿ ಪುನಃ ದರ್ಶನ ಕೊಡೆಂದು ಪ್ರಾರ್ಥಿಸಬೇಕು. ॥ ೧೩ ॥ ಮುಂದೆ ವಿಶ್ವಕೂಪದಲ್ಲಿ ಸ್ನಾನ ಮಾಡಿ ವಿಷ್ವಕ್ಸೇಶ್ವರನನ್ನೂ ಕರ್ದಮ ತೀರ್ಥದಲ್ಲಿ ಹರ್ಷದಿಂದ ಸ್ನಾನ ಮಾಡಿ ಕರ್ದಮೇಶ್ವರದನ್ನು ಪೂಜಿಸಬೇಕು. ॥ ೧೪ ॥ ಆಮೇಲೆ ಕರ್ದಮಕೂಪಕ್ಕೆ ಹೋಗಿ ಸೋಮನಾಥನನ್ನೂ ಆಮೇಲೆ ವಿರೂಪಾಕ್ಷಲಿಂಗವನ್ನೂ ಪೂಜಿಸಬೇಕು. ॥ ೧೫ ॥ ಮುಂದೆ ಹೋಗಿ ಭಕ್ತಿಯಿಂದ ನೀಲಕಂಠನನ್ನು ಪೂಜಿಸಿ ಭಕ್ತಿಯಿಂದ ಕೈಮುಗಿದು ಮತ್ತೆ ಕರ್ದಮೇಶ್ವರನನ್ನು ಪೂಜಿಸಿ ॥ ೧೬ ॥ ಪುನಃ ದರ್ಶನ ಕೊಡೆಂದು ಹೇಳಿ ಅಲ್ಲಿಂದ ತೀವ್ರವಾಗಿ ಹೊರಟು ನಾಗನಾಥವನ್ನು ಪೂಜಿಸಬೇಕು. ॥ ೧೭ ॥ ಆಮೇಲೆ ಚಾಮುಂಡಿಯನ್ನೂ, ಮೋಕ್ಷೇಶ್ವರನನ್ನೂ, ಭಕ್ತಿಯಿಂದ ವರುಣೇಶ್ವರನನ್ನೂ ಪೂಜಿಸಬೇಕು. ॥ ೧೮ ॥ ಬಳಿಕ ವೀರಭದ್ರನನ್ನೂ ೨ನೇ ದುರ್ಗಾದೇವಿ ಹಾಗು ವಿಕಟಾಕ್ಷದೇವಿಯರನ್ನೂ ಪೂಜಿಸಬೇಕು. ॥ ೧೯ ॥ ಆಮೇಲೆ ಉನ್ಮತ್ತ ಭೈರವನನ್ನೂ ಪ್ರಖ್ಯಾತವಾದ ವಿಮಳಾರ್ಜುನನನ್ನೂ ಕಾಳಕೂಟದೇವನನ್ನೂ ಪೂಜಿಸಬೇಕು. ॥ ೨೦ ॥ ಬಳಿಕ ಮಹಾದೇವನನ್ನೂ ನಂದಿಕೇಶ್ವರನನ್ನೂ ಭೈರವನನ್ನೂ ಭೃಂಗೇಶ್ವರನನ್ನೂ ವಿಶೇಷ ರೀತಿಯಿಂದ ಮನೋಹರವಾಗಿ ಪೂಜಿಸಬೇಕು. ॥೨೧॥ ಆಮೇಲೆ ಗಣಪ್ರಿಯನನ್ನು ಪೂಜಿಸಿ, ವಿರೂಪಾಕ್ಷನಿಗೆ ನಮಿಸಿ, ಯಕ್ಷೇಶ್ವರ, ವಿಮಲೇಶ್ವರರನ್ನು ಪೂಜಿಸಬೇಕು. ॥ ೨೨ ॥ ಬಳಿಕ ಭೀಮಚಂಡಿ ಶಕ್ತಿಯನ್ನೂ ಚಂಡೀ ವಿನಾಯಕನನ್ನೂ ರವಿರಕ್ತಾಕ್ಷ ಗಂಧರ್ವನನ್ನೂ ಭಕ್ತಿಯಿಂದ ಪೂಜಿಸಬೇಕು. ॥ ೨೩ ॥ ಮುಂದೆ ದೊಡ್ಡ ಜ್ಞಾನೇಶ್ವರನನ್ನೂ ಅಮೃತೇಶ್ವರನನ್ನೂ ಮನೋಹರ

ನಾದ ಗಂಧರ್ವಸಾಗರಸನ್ನೂ ಭಕ್ತಿಯಿಂದ ಪೂಜಿಸಬೇಕು. ॥ ೨೪ ॥ ಆಮೇಲೆ ನರಕಸಮುದ್ರವನ್ನು ದಾಟಸುವದಕ್ಕೆ ಭೀಮಚಂಡಿಯನ್ನು ಪೂಜಿಸಿ, ವಿನಯದಿಂದ ಪುನಃ ದರ್ಶನ ಕೊಡೆಂದು ಹೇಳಬೇಕು. ॥ ೨೫ ॥ ಆಮೇಲೆ ಏಕವಾದ ವಿನಾಯಕನನ್ನೂ ಭೈರವನನ್ನೂ, ನಿಶ್ಚಯದಿಂದ ಸಂಗಮೇಶ್ವರನನ್ನೂ ಪೂಜಿಸಬೇಕು. ॥ ೨೬ ॥ ಆಮೇಲೆ ಭೂತನಾಥನನ್ನೂ ಸೋಮನಾಥನನ್ನೂ ವಿಖ್ಯಾತವಾದ ಕಲಾನಾಥನನ್ನೂ ಆಮೇಲೆ ತೀವ್ರವಾಗಿ ಕಪರ್ದೀಶ್ವರ ಲಿಂಗವನ್ನೂ ಪೂಜಿಸಬೇಕು ॥ ೨೭ ॥ ಆಮೇಲೆ ನಾಗೇಶ್ವರ, ಕಾಮೇಶ್ವರ, ಗಣೇಶ್ವರ, ವಿಶ್ವೇಶ್ವರನನ್ನೂ ಚತುರ್ಮುಖ ವಿನಾಯಕನನ್ನೂ ಪೂಜಿಸಬೇಕು. ॥ ೨೮ ॥ ಆಮೇಲೆ ದೇಹಲೀ ವಿನಾಯಕ, ಷೋಡಶ ವಿನಾಯಕ, ಷೋಡಶ ಉದಂಡ ಗಣೇಶರನ್ನೂ ಮನೋಹರವಾಗಿ ಪೂಜಿಸಬೇಕು. ॥ ೨೯ ॥ ಬಳಿಕ ಮಹಾ ದೊಡ್ಡದೂ ಮನೋಹರವಾದದ್ದೂ ಆದ ಉತ್ಕಲೇಶ್ವರನನ್ನೂ ಏಕಾದಶ ರುದ್ರನನ್ನೂ ಪೂಜಿಸಬೇಕು. ॥ ೩೦ ॥ ಆಮೇಲೆ ತಪೋಭೂಮಿಗೆ ಹೋಗಿ ಭಕ್ತಿಯಿಂದ ಪೂಜಿಸಿ, ಮಹಾ ಹರ್ಷದಿಂದ ರಾಮೇಶ್ವರನನ್ನೂ ಮುಂದೆ ಸೋಮನಾಥನನ್ನೂ ಪೂಜಿಸಬೇಕು ॥ ೩೧ ॥ ಮುಂದೆ ದೊಡ್ಡ ಭರತೇಶ್ವರ, ಮನೋಹರವಾದ ಲಕ್ಷ್ಮಣೇಶ್ವರ, ಶತ್ರುಘ್ನೇಶ್ವರ, ಭೂಮೀದೇವಿಯರನ್ನೂ ಪೂಜಿಸಬೇಕು. ॥ ೩೨ ॥ ಬಳಿಕ ನಕಲೇಶ್ವರನನ್ನು ಪೂಜಿಸಿ, ರಾಮೇಶ್ವರನ ಧ್ಯಾನ ಮಾಡಿ ಪುನಃ ದರ್ಶನ ಕೊಡೆಂದು ವಿನಂತೀ ಮಾಡಿಕೊಳ್ಳಬೇಕು. ॥೩೩॥ ಆಮೇಲೆ ಅಸಂಖ್ಯಾತ ವರುಣ ತೀರ್ಥಕ್ಕೆ ನಮಿಸಿ, ಭಕ್ತಿಯಿಂದ ಅಸಂಖ್ಯಾತ ಲಿಂಗಗಳನ್ನು ಪೂಜಿಸಬೇಕು. ॥ ೩೪ ॥ ಮುಂದೆ ದೊಡ್ಡದೇವ ಸಿದ್ಧೇಶ್ವರ ಲಿಂಗವನ್ನು ಮನೋಹರವಾಗಿ ಮತ್ತು ಪಶುಪಾಣಿ ವಿನಾಯಕನನ್ನು ಪೂಜಿಸಬೇಕು. ॥ ೩೫ ॥ ಆಮೇಲೆ ಪೃಥ್ವೀಶ್ವರನಿಗೆ ನಮಿಸಿ, ಶರಂಯೂಕೂಪದಲ್ಲಿ ಮತ್ತು ಕಪಿಲಧಾರಾ ತೀರ್ಥದಲ್ಲಿ ಸ್ನಾನ ಮಾಡಬೇಕು. ॥ ೩೬ ॥ ಬಳಿಕ ವೃಷಭ ಧ್ವಜವನ್ನು ಪೂಜಿಸಿ, ಜ್ವಾಲಾನರಸಿಂಹನ ಚರಣಕ್ಕೆ ವಂದಿಸಿ, ವರುಣಾ ಸಂಗಮದಲ್ಲಿ ಸ್ನಾನ ಮಾಡಿ ಶ್ರಾದ್ಧಾದಿ-ಕರ್ಮಗಳನ್ನು ಮಾಡಬೇಕು. ॥ ೩೭ ॥ ಮುಂದೆ ಸಂಗಮೇಶ್ವರ, ಉತ್ತಮವಾದ ಸರ್ವ ವಿನಾಯಕ, ಕೇಶವರನ್ನೂ ಭಕ್ತಿಯಿಂದ

ಪೂಜಿಸಬೇಕು. ‖ ೩೮ ‖ ಆಮೇಲೆ ಪ್ರಹ್ಲಾದೇಶ್ವರನನ್ನು ಪೂಜಿಸಿ, ಕಪಿಲಾತೀರ್ಥದಲ್ಲಿ ಸ್ನಾನ ಮಾಡಿ ಭಕ್ತಿ ಯಿಂದ ತ್ರಿಲೋಚನೇಶ್ವರನನ್ನು ಪೂಜಿಸಬೇಕು. ‖ ೩೯ ‖ ಮುಂದೆ ಮಹಾವೇವನನ್ನೂ ಪಂಚಗಂಗಾತೀರ ದಲ್ಲಿರುವ ಬಿಂದು ಮಾಧವನನ್ನೂ ಭಕ್ತಿಯಿಂದ ಪೂಜಿಸಬೇಕು. ‖ ೪೦ ‖ ಆಮೇಲೆ ಮಂಗಳಗೌರಿ, ಗಭಸ್ತೀ ಶ್ವರ, ವಸಿಷ್ಠ, ವಾಮದೇವ, ಪರ್ವತೇಶ್ವರನನ್ನೂ ಪೂಜಿಸಬೇಕು. ‖ ೪೧ ‖ ಆಮೇಲೆ ಮಹೇಶ್ವರನನ್ನೂ ಸಿದ್ಧಿ ವಿನಾಯಕ, ಸಪ್ತ ಪರ್ಣೇಶ್ವರ, ಸರ್ವ ಗಣೇಶನನ್ನೂ ಪೂಜಿಸಬೇಕು ‖ ೪೨ ‖ ಮತ್ತೆ ವಿವೇಕದಿಂದ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಿ, ಭಕ್ತಿಯಿಂದ ವಿಶ್ವೇಶ್ವರನನ್ನು ಸ್ಮರಿಸಿ, ಮಹಾದೇವನನ್ನು ಪೂಜಿಸ ಬೇಕು. ‖ ೪೩ ‖ ಆಮೇಲೆ ಮುಕ್ತಿ ಮಂಟಪಕ್ಕೆ ಹೋಗಿ ವಿಷ್ಣುವಿಗೆ ನಮಿಸಿ, ದಂಡಪಾಣಿ ಮತ್ತು ಧುಂಡಿರಾಜ ರನ್ನು ಪೂಜಿಸಬೇಕು. ‖ ೪೪ ‖ ಬಳಿಕ ಆನಂದ ಭೈರವನನ್ನು ಪೂಜಿಸಿ, ಆದಿತ್ಯೇ ಶನಿಗೆ ನಮಿಸಿ, ಭಕ್ತಿಯಿಂದ ಮೋದಾದಿ ಪಂಚವಿನಾಯಕರನ್ನು ಪೂಜಿಸಬೇಕು. ‖ ೪೫ ‖ ಆಮೇಲೆ ವಿಶ್ವೇಶ್ವರನನ್ನು ಪೂಜಿಸಿ, ಮೋಕ್ಷ ಲಕ್ಷ್ಮೀ ವಿಲಾಸಿನಿಯನ್ನು ನಮಿಸಿ, ದೇವರೆದುರಿಗೆ ನಿಂತು ಈ ಪ್ರಕಾರ ಮಂತ್ರ ಅನ್ನಬೇಕು. ‖ ೪೬ ‖

ಶ್ಲೋಕ॥ ಜಯ ವಿಶ್ವೇಶ ವಿಶ್ವಾತ್ಮನ್ ಕಾಶೀನಾಥ ಜಗತ್ಪತೇ ‖
ತ್ವತ್ಪ್ರಸಾದಾನ್ಮಹಾದೇವಕೃತಾ ಕ್ಷೇತ್ರ ಪ್ರದಕ್ಷಿಣಾ ‖ ‖ ೪೭ ‖

ಅನೇಕ ಜನ್ಮಪಾಪಾನಿ ಕೃತಾನಿ-ಮ-ಮ ಶಂಕರ ‖
ಗತಾನಿ ಪಂಚಕ್ರೋಶಾತ್ಮಾಕೃತಾ ಲಿಂಗ ಪ್ರದಕ್ಷಿಣಾ ‖ ‖ ೪೮ ‖

ಈ ಪ್ರಕಾರ ಮಂತ್ರವನ್ನು ಜಪಿಸಿ, ಆಮೇಲೆ ಶಿವಧ್ಯಾನ ಮಾಡಿ, ಮುಕ್ತಿ ಮಂಟಪಕ್ಕೆ ಬಂದು ಎಂಟು ಸ್ಥಳಗಳಲ್ಲಿ ನಮಿಸಬೇಕು. ‖ ೪೯ ‖ ಮೊದಲು ಮುಕ್ತಿ ಮಂಟಪ, ಸ್ವರ್ಗಮಂಟಪ, ಐಶ್ವರ್ಯ ಮಂಟಪ, ‖ ೫೦ ‖ ಜ್ಞಾನ ಮಂಟಪಗಳಿಗೆ ನಮಿಸಿ, ಮೋಕ್ಷ ಲಕ್ಷ್ಮೀವಿಲಾಸ ಸ್ಥಾನದಲ್ಲಿ ಮುಕ್ತಿ ಮಂಟಪ, ಆನಂದ ಮಂಟಪ. ‖ ೫೧ ‖

ವೈರಾಗ್ಯ ಮಂಟಪಗಳಿಗೆ ಭಕ್ತಿಯಿಂದ ವಂದಿಸಿ, ಈ ಪ್ರಕಾರ ಯಾತ್ರಾ ಮಾಡಬೇಕು. ॥ ೫೨ ॥ ಎಲೈ ಬಾಲಕಾ ನಿನಗೆ ಮತ್ತೊಂದು ಪ್ರಕಾರದ ವಿಚಾರವನ್ನು ಹೇಳುವೆನು ಕೇಳು. ಎಲೈ ಗುರುದಾಸನಾದ ಬಾಲಕನೇ ಕೇಳು. ನಿತ್ಯ ಯಾತ್ರೆಯನ್ನು ಮನೋಹರವಾಗಿ ಮಾಡಲಿಕ್ಕೇಬೇಕು. ॥ ೫೩ ॥ ಹ್ಯಾಗಂದರೆ–ಸಚೈಲಸ್ನಾನ ಮಾಡಿ ಶುಚಿಯಾಗಿ, ಚಕ್ರಪುಷ್ಕರಣಿಯಲ್ಲಿ ಸ್ನಾನ ಮಾಡಿ, ದೇವ–ಪಿತೃಗಳಿಗೆ ತರ್ಪಣ ಕೊಟ್ಟು, ಬ್ರಾಹ್ಮಣರ ಪೂಜಾ ಮಾಡಬೇಕು. ॥ ೫೪ ॥ ಆಮೇಲೆ ಅಲ್ಲಿಂದ ಹೊರಟು ದ್ರುಪದಾದಿತ್ಯೇಶ್ವರನನ್ನು ಪೂಜಿಸಿ, ದಂಪತ್ಯೇಶ್ವರನಿಗೆ ವಂದಿಸಿ, ವಿಷ್ಣುವಿನ ಪೂಜಾ ಮಾಡಬೇಕು. ॥ ೫೫ ॥ ಆಮೇಲೆ ದಂಡಪಾಣಿಗೆ ನಮಿಸಿ, ಮಹೇಶ್ವರನನ್ನು ಪೂಜಿಸಿ, ಅಲ್ಲಿಂದ ಹೊರಟು ಧುಂಡಿರಾಜನನ್ನು ಪೂಜಿಸಬೇಕು. ॥ ೫೬ ॥ ಬಳಿಕ ಜ್ಞಾನವಾಪಿಯಲ್ಲಿ ಸ್ನಾನ ಮಾಡಿ ನಂದಿಕೇಶ್ವರ, ತಾರಕೇಶ್ವರನನ್ನು ಪೂಜಿಸಿ, ಮುಂದೆ ಹೋಗಿ ॥ ೫೭ ॥ ಭಕ್ತಿಯಿಂದ ಮಹಾಕಾಲೇಶ್ವರ ನನ್ನೂ ದಂಡಪಾಣಿ ವಿನಾಯಕನನ್ನೂ ಮನೋಹರವಾಗಿ ಪೂಜಿಸಬೇಕು. ॥ ೫೮ ॥ ಎಲೈ ಬಾಲಕಾ, ಆಮೇಲೆ ವಿಶ್ವೇಶ್ವರನ ಯಾತ್ರೆಯನ್ನು ಮಾಡಬೇಕು ಓಂಕಾರೇಶ್ವರ ಲಿಂಗವನ್ನು ಪ್ರತಿಪದೆಯ ದಿವಸ ಪೂಜಿಸಬೇಕು. ॥ ೫೯ ॥ ಹ್ಯಾಗಂದರೆ— ಶುಕ್ಲ ಪ್ರತಿಪದೆಯ ದಿವಸ ಮತ್ಸ್ಯೋದರ ತೀರ್ಥದಲ್ಲಿ ಸ್ನಾನ ಮಾಡಿ ಓಂಕಾರೇಶ್ವರನನ್ನು ಪೂಜಿಸಬೇಕು ತ್ರಿಲೋಚನ ಮಹಾದೇವರ ಎರಡು ಲಿಂಗಗಳಿರುತ್ತವೆ. ॥ ೬೦ ॥ ದ್ವಿತಿಯಾ ದಿವಸ ಒಂದನ್ನೂ, ತೃತಿಯಾ ದಿವಸ ಒಂದನ್ನೂ ಪೂಜಿಸಬೇಕು. ಚತುರ್ಥೀ ದಿವಸ ಕಾಂಚೀವಾಸ ಲಿಂಗವನ್ನು ಪೂಜಿಸಬೇಕು ॥ ೬೧ ॥ ಪಂಚಮೀ ದಿವಸ ರತ್ನೇಶ್ವರನನ್ನೂ, ಷಷ್ಠಿ ದಿವಸ ಚಂದ್ರೇಶ್ವರನನ್ನೂ ಪೂಜಿಸಬೇಕು ॥ ೬೨ ॥ ಸಪ್ತಮಿ ದಿವಸ ಕೇದಾರೇಶ್ವರನನ್ನೂ ಅಷ್ಟಮೀ ದಿವಸ ಧೂಮೇಶ್ವರನನ್ನೂ ನವಮೀ ದಿವಸ ದೊಡ್ಡದಾದಂಥ ವಿಶ್ವೇಶ್ವರ ಲಿಂಗವನ್ನು ಪೂಜಿಸಬೇಕು. ಇದರಿಂದ ಮಹಾ ಪುಣ್ಯವು ಬರುವದು. ॥ ೬೩ ॥ ಆಮೇಲೆ ದಶಮೀ ದಿವಸ ಕಾಮೇಶ್ವರನನ್ನೂ ಏಕಾದಶಿ ದಿವಸ ವಿಶ್ವೇಶ್ವರನನ್ನೂ ದ್ವಾದಶಿ ದಿವಸ ಮಣಿಕರ್ಣಿಕೆ ಯಲ್ಲಿ ಮಣಿಕೇಶ್ವರನನ್ನೂ ಪೂಜಿಸಬೇಕು. ॥ ೬೪ ॥ ತ್ರಯೋದಶೀ ಪ್ರದೋಷ ಕಾಲದಲ್ಲಿ ಅವಿಮುಕ್ತೇಶ್ವರ

ನನ್ನೂ ಚತುರ್ದಶೀ ದಿವಸ ವಿಶ್ವೇಶ್ವರನನ್ನು ವಿಶೇಷವಾಗಿ ಪೂಜಿಸಬೇಕು. ‖ ೬೫ ‖ ಕಾಶೀವಾಸ ಮಾಡಿಕೊಂಡಿರುವವರು ಈ ಪ್ರಕಾರ ಯಾತ್ರಾ ಮಾಡಬೇಕು. ಇಲ್ಲದಿದ್ದರೆ, ವಿಘ್ನ ಬರುವದು. ‖ ೬೬ ‖ ಎಲೈ ಬಾಲಕಾ ಶುಕ್ಲಪಕ್ಷದಲ್ಲಿ ಈ ಪ್ರಕಾರ ಮನೋಹರವಾಗಿ ಯಾತ್ರಾ ಮಾಡಬೇಕು. ಇನ್ನು ಕೃಷ್ಣಪಕ್ಷದ ಯಾತ್ರೆಯ ವಿಧಿಯನ್ನು ಹೇಳುವೆನು ಕೇಳು. ‖ ೬೭ ‖ ಕೃಷ್ಣಪಕ್ಷ ಬಂದಮೇಲೆ ಚತುರ್ದಶಿಯಿಂದ ಆರಂಭಮಾಡಿ ಪ್ರತಿ ದಿವಸ ಯಾತ್ರಾ ಮಾಡಬೇಕು. ಆದರ ವಿಧಾನವನ್ನು ಹೇಳುತ್ತೇನೆ ಕೇಳು ‖ ೬೮ ‖ ಮೊದಲಿನ ದಿನ ವರುಣಾ ನದಿಯಲ್ಲಿ ಸ್ನಾನ ಮಾಡಿ, ಶೈಲೇಶ್ವರನ ದರ್ಶನ ಮಾಡಿಕೊಂಡು ಅದೇ ದಿವಸ ಸಂಗಮದಲ್ಲಿ ಸ್ನಾನ ಮಾಡಿ ಸಂಗಮೇಶ್ವರನನ್ನು ಪೂಜಿಸಬೇಕು ‖೬೯‖ ಆಮೇಲೆ ಸ್ವರ್ಗತೀರ್ಥದಲ್ಲಿ ಸ್ನಾನಮಾಡಿ ಹರ್ಷದಿಂದ ಸ್ವರ್ಗೇಶ್ವರನನ್ನು ಪೂಜಿಸಬೇಕು. ಎರಡನೇ ದಿವಸ ಮಂದಾಕಿನಿಯಲ್ಲಿ ಸ್ನಾನಮಾಡಿ ಮಧ್ಯಮೇಶ್ವರನನ್ನು ಪೂಜಿಸಬೇಕು ‖ ೭೦ ‖ ಆಮೇಲೆ ಮಣಿಕರ್ಣಿಕೆಯಲ್ಲಿ ಸ್ನಾನ ಮಾಡಿ ಈಶ್ಯಾನೇಶ್ವರನನ್ನೂ ಹಿರಣ್ಯಗರ್ಭೇಶ್ವರನನ್ನೂ ಪೂಜಿಸಬೇಕು. ‖ ೭೧ ‖ ಅದೇ ದಿವಸ ಧರ್ಮಕೂಪದಲ್ಲಿ ಸ್ನಾನಮಾಡಿ ಗೋಪದ್ಮೇಶ್ವರನನ್ನು ಪೂಜಿಸಬೇಕು ಎಲೈ ಬಾಲಕಾ, ಏಕಚಿತ್ತದಿಂದ ಕೇಳು. ‖ ೭೨ ‖ ಆಮೇಲೆ ಸಪ್ತಮೀ ದಿವಸ ಕಪಿಲಧಾರಾ ತೀರ್ಥದಲ್ಲಿ ಭಕ್ತಿಯಿಂದ ಸ್ನಾನ ಮಾಡಿ ವೃಷಭಧ್ವಜ ಲಿಂಗವನ್ನು ಪೂಜಿಸಬೇಕು ‖ ೭೩ ‖ ಆಮೇಲೆ ಅದೇ ದಿವಸ ಉಪಶಾಂತಿಕೂಪದಲ್ಲಿ ಭಕ್ತಿಯಿಂದ ಸ್ನಾನಮಾಡಿ ಉಪಶಾಂತೇಶ್ವರನನ್ನು ಪೂಜಿಸಬೇಕು ‖ ೭೪ ‖ ಶಿವನನ್ನು ಧ್ಯಾನಿಸುತ್ತ ಪಂಚಚೂಡಡೋಹದಲ್ಲಿ ಸ್ನಾನಮಾಡಿ ತೀವ್ರವಾಗಿ ಆ ದಿವಸ ಜ್ಯೇಷ್ಠೇಶ್ವರನನ್ನು ಪೂಜಿಸಬೇಕು. ‖ ೭೫ ‖ ಚತುಃಸಮುದ್ರ ಕೂಪದಲ್ಲಿ ಭಕ್ತಿಯಿಂದ ಸ್ನಾನ ಮಾಡಿ ಆ ದಿವಸ ಸಮುದ್ರೇಶ್ವರನನ್ನು ಹರ್ಷದಿಂದ ಪೂಜಿಸಬೇಕು. ‖ ೭೬ ‖ ಆಮೇಲೆ ದೇವರ ಮುಂದಿರುವ ಕೂಪದಲ್ಲಿ ಸಂತೋಷದಿಂದ ಸ್ನಾನ ಮಾಡಿ ಆದಿವಸ ಹರ್ಷದಿಂದ ಶುಕ್ರೇಶ್ವರನನ್ನು ಪೂಜಿಸಬೇಕು. ‖ ೭೭ ‖ ದಂಡಖಾತ ತೀರ್ಥದಲ್ಲಿ ಸ್ನಾನ ಮಾಡಿ ವ್ಯಾಘ್ರೇಶ್ವರನನ್ನು ಪೂಜಿಸಬೇಕು ‖ ೭೮ ‖ ಆಮೇಲೆ ಶೌನಕೇಶ್ವರ ತೀರ್ಥದಲ್ಲಿ ಸ್ನಾನಮಾಡಿ ಹರ್ಷದಿಂದ ಶೌನಕೇಶ್ವರನನ್ನು ಮನೋಹರವಾಗಿ ಪೂಜಿಸಬೇಕು. ‖ ೭೯ ‖ ಆಮೇಲೆ ಮನೋಹರವಾದ ಜಂಬುತೀರ್ಥದಲ್ಲಿ ಸ್ನಾನ ಮಾಡಿ ಶುಭಾಚಾರದಿಂದ

ಜಂಬುಕೇಶ್ವರನನ್ನು ಪೂಜಿಸಬೇಕು. ಈ ಪ್ರಕಾರ ೧೪ ಲಿಂಗಗಳನ್ನು ಪೂಜಿಸಬೇಕು. ॥ ೮೦ ॥ ಶುಕ್ಲ ಕೃಷ್ಣಪಕ್ಷಗಳಲ್ಲಿ ವಿಶೇಷವಾಗಿ ಅಷ್ಟಮಿಯಲ್ಲಿ ಕೆಲವು ಲಿಂಗಗಳನ್ನು ಪೂಜಿಸಬೇಕು. ಆದರಿಂದ ಮಹಾ ಪುಣ್ಯವು ಬರುವದು. ಅವುಗಳನ್ನು ಹೇಳುವೆನು ಕೇಳು ॥ ೮೧ ॥ ಆ ದಿವಸ ಭಕ್ತಿಯಿಂದ ಮೋಕ್ಷೇಶ್ವರ, ಪರ್ವತೇಶ್ವರ, ಪಶುಪತೇಶ್ವರ, ಗಂಗೇಶ್ವರ, ನರ್ಮದೇಶ್ವರರನ್ನು ಪೂಜಿಸಬೇಕು ॥ ೮೨ ॥ ಮತ್ತು ಭಕ್ತೇಶ್ವರ, ಗಭಸ್ತೀಶ್ವರ, ದೊಡ್ಡ ಮಧ್ಯಮೇಶ್ವರ, ಪ್ರಖ್ಯಾತವಾದ ತಾರಕೇಶ್ವರ ಈ ಪ್ರಕಾರ ೯ ಲಿಂಗಗಳನ್ನು ಪೂಜಿಸಬೇಕು ॥ ೮೩ ॥ ಮತ್ತೆ ಬೇರೆ ೧೧ ಲಿಂಗಗಳಿವೆ ಅವುಗಳನ್ನು ವಿಶೇಷವಾಗಿ ನಿತ್ಯ ಯಾತ್ರಾ ಮಾಡಬೇಕು ಅಂದರೆ ಅಗ್ನಿಧ್ರುವೇಶ್ವರ ॥ ೮೪ ॥ ಉರ್ವಶೀಶ್ವರ, ನಕುಲೇಶ್ವರ, ಆಷಾಢೇಶ್ವರ, ಭಾರತಭೂತೇಶ್ವರ ॥ ೮೫ ॥ ಲಾಂಗೂಲೇಶ್ವರ, ತ್ರಿಪುರಾಂತಕೇಶ್ವರ, ಮನಃಪ್ರಕಾಮೇಶ್ವರ, ॥ ೮೬ ॥ ಪ್ರೀತೇಶ್ವರ, ಮಂದಾಲಿಕೇಶ್ವರ, ತಿಲಪರ್ಣೇಶ್ವರ ಈ ಪ್ರಕಾರ ೧೧ ಲಿಂಗಗಳನ್ನು ಭಕ್ತಿಯಿಂದ ಪೂಜಿಸಬೇಕು. ॥ ೮೭ ॥ ಎಲೈ ಬಾಲಕಾ, ಈಗ ನಿನಗೆ ಶಕ್ತಿಯಾತ್ರಾ ವಿಧಿಯನ್ನು ಹೇಳುವೆನು ಕೇಳು. ಶುಕ್ಲಪಕ್ಷ ತೃತೀಯಾ ದಿವಸ ಎಂಟು ಯಾತ್ರಾ ಮಾಡಬೇಕು ॥ ೮೮ ॥ ಹ್ಯಾಗಂದರೆ ಮೊದಲು ಗೋಪ್ರೇಕ್ಷ ತೀರ್ಥದಲ್ಲಿ ಸ್ನಾನ ಮಾಡಿ ಒಳ್ಳೇ ಭಕ್ತಿಯಿಂದ ಮುಖ್ಯವಾಗಿ ಭಾಲನೇತ್ರಿಕೆಯನ್ನು ಪೂಜಿಸಬೇಕು ॥ ೮೯ ॥ ಆಮೇಲೆ ಜ್ಯೇಷ್ಠವಾಪಿಯಲ್ಲಿ ಸ್ನಾನ ಮಾಡಿ ಹರ್ಷದಿಂದ ಜ್ಯೇಷ್ಠಾಗೌರಿಯನ್ನೂ, ಶೃಂಗಾರವಾಪಿಯಲ್ಲಿ ಸ್ನಾನಪಾನಗಳನ್ನು ಮಾಡಿ ಶೃಂಗಾರ ಸೌಭಾಗ್ಯ ಗೌರಿಯನ್ನು ಪೂಜಿಸಬೇಕು. ॥ ೯೦ ॥ ಆಮೇಲೆ ವಿಶಾಲ ಗಂಗೆಯಲ್ಲಿ ಸ್ನಾನ ಮಾಡಿ ವಿಶಾಲ ಗೌರಿಯನ್ನೂ ಲಲಿತಾತೀರ್ಥದಲ್ಲಿ ಸ್ನಾನ ಮಾಡಿ ಲಲಿತಾದೇವಿಯನ್ನೂ ಪೂಜಿಸಬೇಕು ॥ ೯೧ ॥ ಆ ಮೇಲೆ ಭವಾನೀ ತೀರ್ಥ ದಲ್ಲಿ ಸ್ನಾನ ಮಾಡಿ ಭವಾನೀಯನ್ನೂ ಬಿಂದುತೀರ್ಥದಲ್ಲಿ ಸ್ನಾನ ಮಾಡಿ ಮಂಗಳಗೌರಿಯನ್ನೂ ಪೂಜಿಸಬೇಕು. ॥ ೯೨ ॥ ಆಮೇಲೆ ಲಕ್ಷ್ಮಿಯನ್ನು ಪೂಜಿಸಬೇಕು. ಈ ಪ್ರಕಾರ ಭಕ್ತಿಯಿಂದ ಇಷ್ಟುಮಂದಿ ಶಕ್ತಿ ದೇವಿಯರನ್ನು ಪೂಜಿಸಿ ವಿಧಿಪ್ರಕಾರ ಯಾತ್ರಾ ಮಾಡಬೇಕು. ॥ ೯೩ ॥ ಚತುರ್ಥೀ ದಿವಸ ತೀರ್ಥಯಾತ್ರಾ

ಮಾಡಿ ಸರ್ವಗಣಪತಿಯನ್ನು ಪೂಜಿಸಿ ಆತನಿಗೆ ಮೋದಕಗಳನ್ನು ನೈವೇದ್ಯ ಮಾಡಿ ತೀರ್ಥವಾಸಿಯಾದ ನನಗೆ ವಿಘ್ನ ಮಾಡಬೇಡವೆಂದು ಪ್ರಾರ್ಥಿಸಬೇಕು. || ೯೪ || ಮಂಗಳ ಅಥವಾ ರವಿವಾರಗಳಲ್ಲಿ ಭೈರವ ಸ್ವಾಮಿಯ ಯಾತ್ರಾ ಮಾಡಿ ದರ್ಶನ ಮಾಡಿಕೊಂಡು ಷಷ್ಠಿ ದಿವಸ ಮನೋಹರವಾಗಿ ಪೂಜಾ ಮಾಡಬೇಕು. || ೯೫ || ಸಪ್ತಮಿಯಲ್ಲಿ ಮತ್ತು ಭಾನುವಾರಗಳಲ್ಲಿ ಶ್ರೀ ಸೂರ್ಯನಾರಾಯಣನ ಯಾತ್ರೆ ಮಾಡಿ ಆತನನ್ನು ಪೂಜಿಸಿ, ಅಷ್ಟಮಿ ಹಾಗು ನವಮಿಗಳಲ್ಲಿ ಚಂಡಿ ಯಾತ್ರಾ ಮಾಡಿ ಪೂಜಿಸಬೇಕು || ೯೬ || ಎಲೈ ಬ್ರಹ್ಮಚಾರಿಯೇ, ಪ್ರತಿದಿನ ಮಾಡುವ ಅಂತರ್ಗೃಹ ಯಾತ್ರೆಯ ಕ್ರಮವನ್ನು ಕಾಶೀಖಂಡದಲ್ಲಿ ಹೇಳಿದೆ ಕೇಳು. || ೯೭ || ಈ ರೀತಿಯಾಗಿ ಕಾಶೀ ವಿಶ್ವೇಶ್ವರನ ಯಾತ್ರೆಯನ್ನು ಕ್ರಮವಾಗಿ ಮಾಡಿ ತಮ್ಮ ಹೆಸರಿನಿಂದ ಸೋಮೇಶ್ವರ ಎಂಬ ಲಿಂಗವನ್ನು ಸ್ಥಾಪಿಸಬೇಕು. || ೯೮ || ಎಲೈ ಬ್ರಹ್ಮಚಾರಿಯೇ, ನಿನಗೆ ನಾನು ಇಷ್ಟು ಹೊತ್ತಿನ ತನಕ ಹೇಳಿದಂತೆ ವಿಧಿಪ್ರಕಾರ ಯಾತ್ರಾ ಮಾಡು. ಅಂದರೆ ನಿನ್ನ ಮನಸಿನ ಇಚ್ಛೆಯು ಪೂರ್ಣವಾಗುವದು. || ೯೯ || ನಿನ್ನ ಮನಸಿನಲ್ಲಿ ಗುರುವು ಇರುತ್ತಾನೆ. ಅದರಿಂದ ಶ್ರೀಶಂಕರನು ಪ್ರಸನ್ನನಾಗುವನು. ಇದನ್ನು ನೀನು ಮನಸಿನಲ್ಲಿ ಗಟ್ಟಿಯಾಗಿ ತಿಳಕೊಂಡು ನಿರಂತರ ಶ್ರೀಗುರುಸ್ಮರಣ ಮಾಡುತ್ತ ಯಾತ್ರಾ ಮಾಡು. || ೧೦೦ || ಎಂದು ಆ ತಪಸ್ವಿಯು ಆ ಬ್ರಹ್ಮಚಾರಿಗೆ ಇಷ್ಟು ಹೇಳಿ ಕೂಡಲೇ ಅಲ್ಲಿಯೇ ಅದೃಶ್ಯನಾದನು. ಆಗ ಆ ಬ್ರಹ್ಮಚಾರಿಯು ಹರ್ಷದಿಂದ— ಸತ್ಯವಾಗಿ ಇವರೇ ನನ್ನ ಗುರುಗಳು ಹೌದು. || ೧೦೧ || ಅಥವಾ ಈಶ್ವರನೇ ಆಗಿರಬಹುದು. ನನ್ನ ಮೇಲೆ ತೀವ್ರವಾಗಿ ದಯೆಯನ್ನು ತೋರಿಸಿದರು. ಅಂದಮೇಲೆ ನನ್ನ ಕಾರ್ಯವು ನಿಶ್ಚಯವಾಗಿ ಸಾಧಿಸುವದು, ಎಂದು ಮನಸಿನಲ್ಲಿ ಗಟ್ಟಿಮಾಡಿಕೊಂಡನು. || ೧೦೨ || ಮತ್ತು ನಾನು ಒಂದೇಸವನೆ ಆರಾಧನೆ ಮಾಡದೆ ಇದ್ದರೂ ನನ್ನ ಪ್ರೀತಿಯ ಗುರುಗಳು ನನಗೆ ದರ್ಶನ ಕೊಟ್ಟರು. ಗುರುಭಕ್ತಿಯಿಂದ ಸತ್ಯವಾಗಿ ಸಕಲಾಭೀಷ್ಟಗಳು ಸಾಧಿಸುವವು. || ೧೦೩ || ಎಲ್ಲ ದೇವತೆಗಳು ತಮ್ಮನ್ನು ಪೂಜಿಸಿ ತೃಪ್ತಿಪಡಿಸಿದಮೇಲೆ ಒಲಿದು ನಮ್ಮ ಇಷ್ಟಾರ್ಥಗಳನ್ನು ಪೂರ್ಣ ಮಾಡುವರು. ಆದರೆ ಭೋಳಾಚಕ್ರವರ್ತಿಯಾದ ಈಶ್ವರನು ಕೇವಲ ಗುರು

ಕ್ರಪೆಯಿಂದಲೇ ಭೆಟ್ಟಿಯಾದನು. ॥ ೧೦೪ ॥ ಯಜ್ಞ-ದಾನ-ತಪಸ್ಸುಗಳಿಂದ ಬಹಳ ಆಯಾಸವಾಗುವದು. ಆದರೆ ನಾನು ಏನೂ ಸಾಹಸ ಮಾಡದೆ ಇದ್ದರೂ ಗುರುಗಳು ಕೃಪೆ ಮಾಡಿದ್ದರಿಂದ ನನಗೆ ವಿಶೇಷವಾಗಿ ಶಿವನು ಭೆಟ್ಟಿಯಾದನು. ॥ ೧೦೫ ॥ ಎಂದು ಆ ಬ್ರಹ್ಮಚಾರಿಯು ತಮ್ಮ ಗುರುಸ್ಮರಣ ಮಾಡುತ್ತ ತೀವ್ರವಾಗಿ ಹೋಗಿ ಭಕ್ತಿಯಿಂದ ವಿಧಿಪೂರ್ವಕವಾಗಿ ಅಲ್ಲಲ್ಲಿ ಆಚರಣೆ ಮಾಡುತ್ತ ಯಾತ್ರೆಯನ್ನು ಮಾಡಿದನು. ॥ ೧೦೬ ॥ ಆ ಬ್ರಹ್ಮಚಾರಿಯು ಈ ಪ್ರಕಾರ ಯಾತ್ರಾ ಮಾಡಿ ಭಕ್ತಿಯಿಂದ ವಿಶ್ವೇಶ್ವರನನ್ನು ಪೂಜಿಸಿದನು. ಆಗ ಯೋಮ-ಕೇಶನಾದ ಶ್ರೀಶಂಕರನು ಪ್ರಸನ್ನನಾಗಿ ನಿಜಸ್ವರೂಪದಿಂದ ಆ ಲಿಂಗದೊಳಗಿಂದ ಎದ್ದು ಅವನ ಎದುರಿಗೆ ನಿಂತು— ॥ ೧೦೭ ॥ ಎಲೈ ಬಾಲಕನೇ, ನಿನ್ನ ಗುರುಭಕ್ತಿಗೆ ಮೆಚ್ಚಿದೆನು. ಎಂದು ಅವನಿಗೆ ವರವನ್ನು ಕೊಟ್ಟನು. ಆಗ ತ್ವಷ್ಟೃಕುಮಾರನು ಸಂತೋಷ ಹೊಂದಿ ಸರ್ವ ವೃತ್ತಾಂತವನ್ನು ಹೇಳಹತ್ತಿದನು. ॥ ೧೦೮ ॥ ಅವನ ಗುರುವರ್ಯರು, ಗುರುಪತ್ನಿ, ಗುರುಪುತ್ರ, ಗುರುಕನ್ಯಾ ಇವರು ಏನೇನು ಬೇಡಿದ್ದರೋ ಆ ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಶ್ರೀಶಂಕರನಿಗೆ ಹೇಳಿದನು. ॥ ೧೦೯ ॥ ಆದನ್ನು ಕೇಳಿ ಶ್ರೀಶಂಕರನು ಸಂತೋಷಹೊಂದಿ ಅವನು ಕೇಳಿದ ಎಲ್ಲ ವರಗಳನ್ನು ಕೊಟ್ಟು— ಎಲೈ ಬಾಲಕಾ, ನೀನು ನನ್ನ ಮಗನು! ನೀನು ಸಕಲ ವಿದ್ಯಾ ಕುಶಲನಾಗುತ್ತೀ, ॥ ೧೧೦ ॥ ನೀನು ಒಳ್ಳೇ ಗುರುಭಕ್ತಿಯನ್ನು ಮಾಡಿದ್ದರಿಂದ ನಾನು ತೃಪ್ತನಾದೆನು. ನಿನಗೆ ಎಲ್ಲ ವಿದ್ಯೆಗಳು ಬಂದು ನೀನು ವಿಶ್ವಕರ್ಮನಾಗುತ್ತೀ, ॥೧೧೧॥ ನಿನಗೆ ಪರಮಾರ್ಥವು ಸಾಧಿಸಿ ಚತುರ್ವಿಧ ಪುರುಷಾರ್ಥಗಳು ಒದಗುವವು. ಎಲೈ ತ್ವಷ್ಟೃಪುತ್ರನೇ, ನೀನು ಸೃಷ್ಟಿಯನ್ನು ರಚಿಸಲಿಕ್ಕೆ ಸಮರ್ಥನಾಗುತ್ತೀ ಎಂದು ವರವನ್ನು ಕೊಟ್ಟನು. ॥ ೧೧೨ ॥ ಈ ಪ್ರಕಾರ ತ್ವಷ್ಟಾಬ್ರಹ್ಮನ ಮಗನು ಶ್ರೀಶಂಕರನಿಂದ ವರವನ್ನು ಹೊಂದಿ ತನ್ನ ಹೆಸರಿನಿಂದ ಲಿಂಗವನ್ನು ಸ್ಥಾಪಿಸಿದನು. ॥ ೧೧೩ ॥ ಆಮೇಲೆ ಆ ಬಾಲಕನು ಅಲ್ಲಿಂದ ಹೊರಟು ಕೂಡಲೆ ಎಲ್ಲವನ್ನೂ ಸಿದ್ಧಮಾಡಿದನು. ಎಲೈ ನಾಮಧಾರಕನೇ, ಶೂಲಪಾಣಿಯು ಪ್ರಸನ್ನನಾದಮೇಲೆ ಅವನಿಗೆ ಏನಾದೀತು, ಏನಾಗಲಿಕ್ಕಿಲ್ಲ? ॥ ೧೧೪ ॥ ಶ್ರೀಗುರು ಮುಂತಾದವರು ಕೇಳಿದಂಥ ಸಕಲ ವಸ್ತುಗಳನ್ನು ಉತ್ತಮರೀತಿಯಾಗಿ ಮಾಡಿ

ಅವುಗಳನ್ನು ತೀವ್ರವಾಗಿ ತೆಗೆದುಕೊಂಡು ಶ್ರೀಗುರುಗಳ ಹತ್ತಿರ ಬಂದನು ॥ ೧೧೫ ॥ ಆಮೇಲೆ ಆವರಿಗೆ ಆ ಎಲ್ಲ ವಸ್ತುಗಳನ್ನು ಒಪ್ಪಿಸಿ ಗುರುವಿನ ಚರಣಗಳಿಗೆ ನಮಸ್ಕರಿಸಿ ಬಳಿಕ ಕ್ರಮದಿಂದ ಗುರುಪತ್ನಿ, ಪುತ್ರ-ಪುತ್ರಿಯರಿಗೆ ವಂದಿಸಿದನು ॥ ೧೧೬ ॥ ಆಗ ಶ್ರೀ ಗುರುಗಳು ಉಲ್ಲಾಸಪಟ್ಟು ಮಹಾ ಹರ್ಷದಿಂದ ಅವನನ್ನು ಅಪ್ಪಿಕೊಂಡು— ಅಪ್ಪಾ! ಶಿಷ್ಯನೇ ಜ್ಞಾನರಾಶಿಯೇ ನಿನ್ನ ಭಕ್ತಿಗೆ ನಾನು ಮೆಚ್ಚಿದೆನು ॥ ೧೧೭ ॥ ಎಲೈ ಶಿಷ್ಯೋತ್ತಮಾ, ನೀನು ಸರ್ವ ವಿದ್ಯಾಕುಶಲನಾಗಿ ಅಷ್ಟೈಶ್ವರ್ಯದಿಂದ ಕೂಡಿ ಆನಂದವನ್ನು ಹೊಂದು. ನಿನ್ನ ವಂಶದಲ್ಲಿ ತ್ರೈಮೂರ್ತಿಗಳು ಹುಟ್ಟುವರು ಮತ್ತು ಕೇಳು ॥ ೧೧೮ ॥ ನೀನು ನಮಗೆ ಮನೋಹರ ಹಾಗು ಗಟ್ಟಿಮುಟ್ಟ ಯಾದ ಮನೆಯನ್ನು ಕಟ್ಟಿಕೊಟ್ಟದ್ದಲ್ಲದೆ ವಿಚಿತ್ರವಾದ ಬೇರೆ ವಸ್ತುಗಳನ್ನು ಕೊಟ್ಟೆ, ನೀನು ಚಿರಂಜೀವಿಯಾಗು. ನಿನ್ನ ಕೀರ್ತಿಯು ಆಚಂದ್ರಾರ್ಕವಾಗಿರಲಿ ॥ ೧೧೯ ॥ ನೀನು ಸೃಷ್ಟಿಯನ್ನು ರಚಿಸುವಂಥವನಾಗು, ಮತ್ತು ನೀನು ೬೪ ಕಲೆಗಳಲ್ಲಿ ಜ್ಞಾನವನ್ನು ಹೊಂದು ಸ್ವರ್ಗ ಮೃತ್ಯು ಪಾತಾಳಗಳಲ್ಲಿ ನಿನ್ನ ಚಾತುರ್ಯವು ಪಸರಿ-ಸಲಿ. ॥ ೧೨೦ ॥ ಅಷ್ಟಸಿದ್ಧಿಗಳೂ ನವನಿಧಿಗಳೂ ನಿನ್ನ ವಶವಾಗಲಿ, ನಿನಗೆ ಎಂದೂ ಕಷ್ಟ ಹಾಗು ಚಿಂತೆಗಳು ಬಾರದಿರಲಿ ಎಂದು ವರವನ್ನು ಕೊಟ್ಟರು. ॥ ೧೨೧ ॥ ಎಲೈ ಪಾರ್ವತಿಯೇ ಕೇಳು ಈ ಪ್ರಕಾರ ಮಹಾ ಜ್ಞಾನಿ ಯಾದ ಆ ಬ್ರಹ್ಮಚಾರಿಯು ತನ್ನ ಗುರುವಿನಿಂದ ವರವನ್ನು ಪಡೆಕೊಂಡು ತನ್ನ ಮನೆಗೆ ಹೋದನು ಎಂದು ಈಶ್ವರನು ವಿಸ್ತಾರವಾಗಿ ಹೇಳಿ ॥ ೧೨೨ ॥ ಮತ್ತೆ— ಎಲೈ ಗಿರಿಜೇ, ಗುರುಭಕ್ತಿಯು ಈ ಪ್ರಕಾರವಾಗಿರುತ್ತದೆ. ಒಂದೇ ಮನಸ್ಸಿನಿಂದ ಗುರುಭಕ್ತಿಯನ್ನು ಮಾಡಿದವರು ಸಕಲಾಭೀಷ್ಟಗಳನ್ನು ಹೊಂದುತ್ತಾರೆ. ॥ ೧೨೩ ॥ ಭವ-ವೆಂಬುವ ಸಾಗರವನ್ನು ದಾಟಸಲಿಕ್ಕೆ ಒಬ್ಬ ಸದ್ಗುರು ಒಬ್ಬನೇ ಸಮರ್ಥನಿರುತ್ತಾನೆ. ಆ ಸದ್ಗುರುವೇ ತ್ರೈಮೂರ್ತಿ ಅವತಾರವು. ॥ ೧೨೪ ॥ ಆದಕಾರಣ ತ್ರೈಮೂರ್ತಿಗಳು ಸಮರ್ಥನಾದ ಸದ್ಗುರುವಿನ ಅಧೀನವಾಗಿರುತ್ತಾರೆ. ಆದ್ದರಿಂದ ನಿಶ್ಚಯವಾಗಿ ಸದ್ಗುರುವೇ ತ್ರೈಮೂರ್ತಿ ಅವತಾರವೆಂದು ತಿಳಿಯಬೇಕು. ಗುರುವಿನ ಹೊರತು ಯಾವದೂ ಸಿದ್ಧಿಯಾಗುವದಿಲ್ಲವೆಂದು ವೇದ-ಶಾಸ್ತ್ರಗಳು ಹೇಳುತ್ತವೆ. ॥ ೧೨೫ ॥

ಶ್ಲೋಕ ॥ ಯಸ್ಯದೇವೇಪರಾ ಭಕ್ತಿರ್ಯಥಾ ದೇವೇತಥಾಗುರೌ ॥
ತಸ್ಯೈತೇಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ ॥ ೧೨೬ ॥

ಈ ಪ್ರಕಾರ ಈಶ್ವರನು ಪಾರ್ವತಿಗೆ ಗುರುಸೇವೆಯ ಮಹಿಮೆಯನ್ನು ವಿಸ್ತಾರವಾಗಿ ಹೇಳಿದನೆಂದು ಶ್ರೀ ನರಸಿಂಹ ಸರಸ್ವತಿ ಗುರುಗಳು ಪ್ರೀತಿಯಿಂದ ಸಾಯಂದೇವನಿಗೆ ಹೇಳಿದರು. ॥ ೧೨೭ ॥ ಅಷ್ಟರಲ್ಲಿ ಪೂರ್ಣ ಬೆಳಗಾಗಿ ಸೂರ್ಯೋದಯವಾಯಿತು. ಆಗ ಶ್ರೀ ಗುರುಗಳು— ಎಲೈ ಸಾಯಂದೇವನೇ ಚಿಂತಾ ಎಂಬ ಕತ್ತಲೆಗೆ ಗುರು ಕೃಪೆಯೇ ಜ್ಯೋತಿ ಸ್ವರೂಪವೆಂದು ತಿಳಿ ಎಂದು ಹೇಳಿದರು. ॥ ೧೨೮ ॥ ಅವರ ಮಾತು ಕೇಳಿ ಸಾಯಂದೇವನು ಸಂತೋಷಬಟ್ಟು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ— ಸ್ವಾಮೀ, ಕೃಪಾನಿಧಿಗಳೇ, ಈ ಪ್ರಕಾರದ ಬುದ್ಧಿಯನ್ನು ಕೊಡುವವರು ತಾವೇ ಅಲ್ಲವೇ ? ॥ ೧೨೯ ॥ ಎಂದು ನಮಸ್ಕರಿಸಿ, ಭಕ್ತಿಯಿಂದಲೂ ವಿನಯದಿಂದಲೂ— ಸ್ವಾಮೀ, ನನಗೆ ಪ್ರೀತಿಯಿಂದ ಅಪೂರ್ವವಾದ ಕಥೆಯನ್ನು ಹೇಳಿದಿರಿ. ॥ ೧೩೦ ॥ ಸ್ವಾಮೀ, ನೀವು ನನಗೆ ಕಾಶೀಯಾತ್ರೆಯ ವಿಧಾನವನ್ನು ವಿಸ್ತಾರವಾಗಿ ನಿರೂಪಿಸಿದಿರಿ. ಆಗ ನಾನೂ ತಮ್ಮೊಡನೆ ಆ ಕಾಶಿಯಲ್ಲಿಯೇ ಇದ್ದಂತಾಗಿತ್ತು ॥ ೧೩೧ ॥ ಸ್ವಾಮೀ, ನಾನು ಕಾಶೀಪಟ್ಟಣದಲ್ಲಿದ್ದಂತೆಯೇ ದೃಷ್ಟಾಂತ ವನ್ನು ಕಂಡೆನು. ಆದರೆ ಆಗ ನಾನು ಎಚ್ಚರವಾಗಿದ್ದೆನೋ ಅಥವಾ ನಿದ್ರೆಯೊಳಗಿದ್ದೆನೋ ಎಂಬದು ಮಾತ್ರ ನನಗೆ ತಿಳಿಯಲಿಲ್ಲ ॥ ೧೩೨ ॥ ಎಂದು ಆ ಸಾಯಂದೇವ ಬ್ರಾಹ್ಮಣನು ಶ್ರೀ ಗುರು ಚರಣಗಳಿಗೆ ವಂದಿಸಿ ಒಳ್ಳೇ ಭಕ್ತಿಯಿಂದಲೂ ಕರುಣಾ ವಚನದಿಂದಲೂ ವಿನಂತೀ ಮಾಡಿಕೊಂಡನು ಹ್ಯಾಗಂದರೆ ॥ ೧೩೩ ॥ ಜಯ ಜಯ ಪರಮಪುರುಷಾ, ಪರಾತ್ಪರಾ, ಪರಮಹಂಸಾ, ಭಕ್ತಜನ ಮಾನಸಹಂಸಾ, ಶ್ರೀ ನರಸಿಂಹ ಸರಸ್ವತಿ ಸ್ವಾಮಿಯೇ ॥ ೧೩೪ । ಎಂದು ಅಂದು ಎಲೈ ನಾಮಧಾರಕನೇ ನಿಮ್ಮ ಪೂರ್ವಜನಾದ ಸಾಯಂದೇವನು ಮತ್ತೆ ಶ್ರೀ ಗುರುಗಳ ಸ್ತುತಿ ಮಾಡಿದನು ಆದನ್ನು ನಿನಗೆ ಹೇಳುವೆನು ಏಕಚಿತ್ತದಿಂದ ಕೇಳು. ॥ ೧೩೫ ॥

## ಸ್ತೋತ್ರಾಷ್ಟಕ

ಆದೌ ಬ್ರಹ್ಮತ್ವಮೇಕ ಸರ್ವ ಜಗತಾಂ, ವೇದಾತ್ಮಮೂರ್ತಿಂ ವಿಭುಂ ।
ಪಶ್ಚಾತ್‌ಕ್ಷೋಣಿ ಜಡಾ ವಿನಾಶ ದಿತಿಜಾಂ ಕೃತ್ವಾऽ ವ ತಾರಂ ಪ್ರಭೋ ॥
ಹತ್ವಾದೈತ್ಯಮನೇಕ ಧರ್ಮ ಚರಿತಂ, ಭೂತ್ವಾऽ ತ್ಮಜೋऽ ತ್ರೇರ್ಗೃಹೇ ।
ವಂದೇಹಂ ನರಕೇಸರೀ ಸರಸ್ವತೀ ಶ್ರೀಪಾದಯುಗ್ಮಾಂಭುಜಂ ॥ ॥ ೧೩೬ ॥

ಭೂದೇವಾಖಿಲಮಾನುಷಂ ವಿದುರ್ಜನಾ, ಬಾಧಾಯ ಮಾನಃ ಕಲಿಂ ।
ವೇದಾದುಷ್ಯಮನೇಕ ವರ್ಣ ಮನುಜಾ ಭೇದಾದಿ ಭೂತೋನ್ನತಂ ॥
ಛೇದಃ ಕರ್ಮ ತಯಾಂಧಕಾರ ಹರಣಂ ಶ್ರೀಪಾದ ಸೂರ್ಯೋದಯೆಂ ।
ವಂದೇಹಂ ನರಕೇಸರೀ ಸರಸ್ವತೀ ಶ್ರೀಪಾದ ಯುಗ್ಮಾಂಬುಜಂ ॥ ॥ ೧೩೭ ॥

ಧಾತಸ್ತ್ವಂಹರಿ ಶಂಕರ ಪ್ರತಿ ಗುರೋಜಾತಾಗ್ರ ಜನ್ಮಂ ವಿಭೋ ।
ಹೇತುಃ ಸರ್ವವಿದೋ ಜನಾಯತರಣಂ ಜ್ಯೋತಿಃ ಸ್ವರೂಪಂ ಜಗತ್ ॥
ಚಾತುರ್ಧಾಶ್ರಮ ಸ್ಥಾಪಿತಂ ಕ್ಷಿತಿತಲೇಪಾತುಃ ಸದಾ ಸೇವ್ಯಯಂ ।
ವಂದೇऽಹಂ ನರಕೇಸರೀ ಸರಸ್ವತೀ ಶ್ರೀಪಾದ ಯುಗ್ಮಾಂಬುಜಂ ॥ ॥ ೧೩೮ ॥

ಚರಿತಂ ಚಿತ್ರಮನೇಕ ಕೀರ್ತಿಮತುಲಂ ಪರಿಭೂತ ಭೂಮಂಡಲೇ ।
ಮೂಕಂ ವಾಕ್ಯದಿವಾಂಧಕಸ್ಯನಯನಂ, ವಂಧ್ಯಾಚ ಪುತ್ರಂದದತ್ ॥

ಸೌಭಾಗ್ಯಂ ವಿಧವಾಚದಾಯಕ, ಶ್ರೀಯಂದತ್ವಾಚ ಭಕ್ತಂಜನಂ ।
ವಂದೇಽಹಂ ನರಕೇಸರೀ ಸರಸ್ವತೀ ಶ್ರೀಪಾದ ಯುಗ್ಮಾಂಬುಜಂ ॥ ॥ ೧೩೯ ॥

ದುರಿತಂ ಘೋರ ದರಿದ್ರದಾವತಿಮಿರಂ ಹರಣಂ ಜಗಜ್ಯೋತಿಷಂ ।
ಸ್ವರ್ಧೇನುಂ ಸುರಪಾದ ಪೂಜಿತ ಜನಾ, ಕರುಣಾಬ್ಧಿ ಭಕ್ತಾರ್ತಿತಃ ॥
ನರಸಿಂಹೇಂದ್ರ–ಸರಸ್ವತೇಶ್ವರ ವಿಭೋ, ಶರಣಾಗತಂ ರಕ್ಷಕಂ ।
ವಂದೇಽಹಂ ನರಕೇಸರೀ ಸರಸ್ವತೀ–ಶ್ರೀಪಾದ ಯುಗ್ಮಾಂಬುಜಂ ॥ ॥ ೧೪೦ ॥

ಗುರುಮೂರ್ತಿ ಶರಣಾರದಿಂದ ಯುಗಲಂ ಸ್ಮರಣಂಕೃತಂ ನಿತ್ಯಸೌ ।
ಚರಿತಂ ಕ್ಷೇತ್ರಮನೇಕ ತೀರ್ಥ ಸಫಲಂ ಸರಿತಾದಿ ಭಾಗೀರಥೀ ॥
ತುರಗಾಮೇಧ ಸಹಸ್ರ ಗೋವಿದುಜನಾಃ ಸಮ್ಯಕ್‌ದದನ್ ತತ್ಫಲರಿಂ ।
ವಂದೇಽಹಂ ನರಕೇಸರೀ ಸರಸ್ವತೀ ಶ್ರೀವಾದ ಯುಗ್ಮಾಂಬುಜಂ ॥ ॥ ೧೪೧ ॥

ನೋಶಕ್ಯಂತವನಾಮ ಮಂಗಲಸ್ತುವಂ, ವೇದಾಗಮಾಗೋಚರಂ ।
ಪಾದದ್ವಂ ಹೃದಯಾಬ್ರಮಂ ತರದಲಂ ನಿರ್ಧಾಮಿಮಾಂಸತಂ ॥
ಭೂಯೇಭೂಯಃ ಸ್ಮರನ್ನಮಾಮಿ ಮಾನಸಾ ಶ್ರೀ ಸದ್ಗುರುಂ ಪಾಹಿಮಾಂ ।
ವಂದೇಽ ಹಂ ನರಕೇಸರೀ ಸರಸ್ವತೀ ಶ್ರೀಪಾದ ಯುಗ್ಮಾಂಬುಜಂ ॥ ॥ ೧೪೨ ॥

ಭಕ್ತಾನಾಂ ತರಣಾರ್ಥ ಸರ್ವ ಜಗತಾಂ ದೀಕ್ಷಾದದ ನ್ಯೋಗಿನಾಂ ।
ಸುಕ್ಷೇತ್ರಂಪುರ ಗಾಣಗ ಸ್ಥಿತ ಪ್ರಭೋ, ದತ್ತಾತ್ರೇಯ ಚತುಷ್ಕಾಮದಂ ॥

ವರ್ಣಿಸಲಿಕ್ಕೆ ಹ್ಯಾಗೆ ಶಕ್ಯವಾದೇನು ? ಆದಿಪುರುಷರಾದ ನೀವು ನನಗೆ ದರ್ಶನ ಕೊಟ್ಟಿರಿ. ॥ ೧೬೨ ॥ ಸ್ವಾಮೀ, ತಮ್ಮ ಚರಣಗಳನ್ನು ಕಂಡು, ಚಂದ್ರೋದಯದಿಂದ ಚಕೋರಕ್ಕೆ ಆನಂದವಾದಷ್ಟೇ ಆನಂದವು ನನಗಾಗಿದೆ. ॥ ೧೬೩ ॥ ಸ್ವಾಮೀ, ಪೂರ್ವಜನ್ಮದಲ್ಲಿ ನಾನು ಬಹಳ ಪಾಪ ಮಾಡಿದ್ದೆನು. ಚಿಂತಾಮಣಿಯ ಸ್ಪರ್ಶದಿಂದ ಲೋಹವು ಸುವರ್ಣವಾಗುವಂತೆಯೂ, ಜಾಂಬುನದಿಯಲ್ಲಿ ಬಿದ್ದ ಮಣ್ಣು ಕೂಡಲೆ ಬಂಗಾರವಾಗುವಂತೆಯೂ, ಮಾನಸಸರೋವರಕ್ಕೆ ಸಹಜವಾಗಿ ಹೋದ ಕಾಗೆ ಕೂಡಲೆ ರಾಜಹಂಸವಾಗುವಂತೆಯೂ ಈಗ ತಮ್ಮ ದರ್ಶನದಿಂದ ನನ್ನ ಪಾಪಗಳೆಲ್ಲ ನಾಶವಾಗಿ ನಾನು ಪುನೀತನಾದೆನು. ॥ ೧೬೪-೧೬೫-೧೬೬ ॥

ಶ್ಲೋಕ ॥ ಗಂಗಾ ಪಾಪಂ, ಶಶೀತಾಪಂ, ದೈನ್ಯಂ ಕಲ್ಪತರುಸ್ತಥಾ ॥
ಪಾಪಂ ತಾಪಂ ಚ ದೈನ್ಯಂ ಚ ಹರಂತಿ ಗುರುದರ್ಶನಂ ॥ ೧೬೭ ॥

**ಅರ್ಥ—** ಗಂಗಾಸ್ನಾನದಿಂದ ಪಾಪವೂ, ಚಂದ್ರನಿಂದ ತಾಪವೂ, ಕಲ್ಪವೃಕ್ಷದಿಂದ ಬಡತನವೂ ಹೀಗೆ ಒಂದೊಂದರ ಗುಣದಿಂದ ಒಂದೊಂದು ಹೋಗುತ್ತವೆ. ಆದರೆ ಗುರುಗಳ ದರ್ಶನ ಮಾತ್ರದಿಂದಲೇ ಪಾಪ-ತಾಪ-ದೈನ್ಯ ಈ ಮೂರೂ ಒಮ್ಮೆಲೇ ಪರಿಹಾರವಾಗುವವು. ॥ ೧೬೮ ॥ ಗುರುಚರಣದರ್ಶನದಿಂದ ಕೂಡಲೆ ಪಾಪವು ನಾಶವಾಗುತ್ತದೆ. ತಾಪ ಮತ್ತು ಚಿಂತಾಗಳೆಲ್ಲ ಹೋಗುತ್ತವೆ. ಬಡತನವೆಂಬ ಅರಣ್ಯವೇ ಸುಟ್ಟು ಹೋಗುತ್ತದೆ. ॥ ೧೬೯ ॥ ಎಂದೂ ಮತ್ತು ಶ್ರೀಗುರುನಾಥನು ಚತುರ್ವಿಧ ಪುರುಷಾರ್ಥಗಳನ್ನು ಕೊಡುವನೆಂದೂ ವೇದಗಳು ಹೇಳುವವು. ಸ್ವಾಮೀ, ಈಗ ತಮ್ಮನ್ನು ಕಂಡು ಆ ಮಾತು ನನ್ನ ಅನುಭವಕ್ಕೆ ಬಂತು. ॥ ೧೭೦ ॥ ಎಂದು ಆನಂದದಿಂದ ಅಂದು ಸಂತೋಷದಿಂದ ಕನ್ನಡ ಭಾಷೆಯಿಂದ ಅನೇಕ ರಾಗಗಳಲ್ಲಿ ಗಾಯನ ಮಾಡಲಾರಂಭಿಸಿದನು. ಅದು ಹ್ಯಾಗಂದರೆ ಹೇಳುವೆನು ಕೇಳು ॥ ೧೭೧ ॥

+ ದಿಗಂಬರಾ ದಿಗಂಬರಾ +

+ ಶ್ರೀ ಪಾದವಲ್ಲಭ ದಿಗಂಬರಾ +

## ೧ನೇ ಪದ

ರಾಗ— ಶ್ರೀರಾಗ ಪೂರ್ವಿ ಅಥವಾ ಜೋಗಿ

ಕಂಡೆನಿಂದ ಭಕ್ತಜನರ ಭಾಗ್ಯನಿಧಿಯಾ ಭೂ ।
ಮಂಡಲದೊಳಗೆ ನಾರಸಿಂಹ ಸರಸ್ವತೀಯಾ ॥ ಪಲ್ಲ ॥

ಕಂಡೆನಿಂದು ದೃಷ್ಟಿಯಿಂದ ವಾರಿಜಾದಳ ಪಾದವನ್ನು ।
ಹೃದಯಕಮಲದಲ್ಲಿ ಭಜಿಸೆ ಸುಖವನೀವ ಜಗತ್ಪತೀಯಾ ॥ ಅನು ಪಲ್ಲ ॥ ॥ ೧೬೨ ॥

ಭಕ್ತಜನರೀಗೆಲ್ಲ ಕಾಮ್ಯಫಲಗಳಿತ್ತು ಸಲಹುತಿರುವ ।
ಯೋಗಿನಿಯರೊಡೆಯ ನಾರಸಿಂಹ ಸರಸ್ವತಿಯ ಪಾದ ॥ ಕಂಡೆನಿಂದು ॥ ೧೬೩ ॥

ವಾಕ್ಯ ಕಾರಣನಾಗಿ ಜಗದೊಳು ದಂಡ ಕಮಂಡಲವನು ಧರಿಸಿ ।
ಸಗುಣನೆನಿಸಿ ಸುಜನರಿಂಗೆ ಒಲಿದ ಶ್ರೀಗುರುಯತಿವರನ್ನಾ ॥ ಕಂಡೆನಿಂದು ॥ ೧೬೪ ॥

ಧರೆಗೆ ಗಾಣಗಾಪುರ ಕೈಲಾಸ ಹರಿದಾಸರೊಡೆಯನೆನಿಸಿ ।
ಕರುಣದಿ ವರವಿತ್ತು ಪೊರೆವ ಅನುದಿನ ಗುರುಚರಣವನ್ನು ॥ ಕಂಡೆನಿಂದು ॥ ೧೬೫ ॥

## ೨ನೇಯ ಪದ

ಕಂಡೆನವ್ಮಾ ಇಂದು ಕಂಡೆನವ್ಮಾ ।
ಭೂಮಂಡಲದೊಳಗೆ ಯತಿವರ ರಾಮಚಂದ್ರಯನ್ನಾ || ಪಲ್ಲ ||

ತತ್ವಬೋಧೆಯ ಉಪನಿಷತ್ ತತ್ವಚರಿತನಾ ।
ವ್ಯಕ್ತವಾದ ಪರಬ್ರಹ್ಮಮೂರ್ತಿ ಎನಿಸುವನಾ || ಕಂಡೆನವ್ಮಾ || ೧೭೬ ||

ಶೇಷಶಯನ ಪರವೇಷಕಾಯಕನಾ ।
ಲೇಸುಕೃಪೆಯ ನಿರ್ಮೋಷನೆಂಬ ಭಾಷಾಪಾಲಕನಾ || ಕಂಡೆನವ್ಮಾ || ೧೭೭ ||

ಗಂಧ ಪರಿಮಳದಿಂದ ಶೋಭಿತಾನಂದ ಸಾಗರನಾ ।
ಛಂದವುಳ್ಳ ಯೋಗೀಂದ್ರ ಗೋಪೀವೃಂದ ವಲ್ಲಭನಾ || ಕಂಡೆನವ್ಮಾ || ೧೭೮ ||

ಮಂತ್ರಕೂಟದಿ ಮೆರೆದು ಸ್ವಾತಂತ್ರಸಾದವನಾ ।
ಇಂತು ನಿಗಮಾಗಮದ ಸಕಳ ಕಾಂತಿಯುಳ್ಳನಾ || ಕಂಡೆನವ್ಮಾ || ೧೭೯ ||

ಕರಿ ರಾಯನೆನಿಪಂಗೆ ವರದ ಗುರುರಾಯನಾ ।
ನರಸಿಂಹ ಸರಸ್ವತ್ಯಂಬ ನಾರಿಪುರುಷ ನಾಮಕನಾ || ಕಂಡೆನವ್ಮಾ || ೧೮೦ ||

## ೩ನೇ ಪದ

ಕಂಡೆ ನಾನಿಂದು ಶ್ರೀ ಗುರುವರನಂ ।
ನಾರಸಿಂಹ ಸರಸ್ವತಿ ಯತಿಯಂ ॥ ಪಲ್ಲ ॥

ಕಂಡೆನೀಗ ಭೂಮಂಡಲದೊಡೆಯನ ।
ದಂಡ–ಕಮಂಡಲು ಚಂದದಿ ಪಿಡಿದಿಹ ಕಂಡೆ ನಾನಿಂದು ॥ ಅನುಪಲ್ಲ ॥

ದುಷ್ಟಜನರ ಶಿಕ್ಷಿಸುವ ಶಿಷ್ಟಜನರ ರಕ್ಷಿಸುವ ।
ಕಷ್ಟ–ನಷ್ಟಗಳ ಪರಿಹರಿಸುವ ಇಷ್ಟಗಳನ್ನೀವ ॥
ಸೃಷ್ಟಿಯೊಳ್ ಭಕ್ತರ ತಟ್ಟನೆ ಪೊರೆಯುವ ।
ಧಿಟ್ಟ ಶ್ರೀ ನರಹರಿ–ಸರಸ್ವತಿ–ಗುರುವನ್ನು ಕಂಡೆ ನಾನಿಂದು ॥ ೧॥೧ ॥

ರಜಕನಾದವಗೆ ರಾಜ್ಯವನ್ನಿತ್ತು, ನಿಜ ಸುಖವನೆ ಕೊಟ್ಟು ।
ಭಜಕರಾದವರೊಳು ನೀ ಮನವಿಟ್ಟು ॥
ಅಜಪದವಿಯ ಕೊಟ್ಟು ಈ ಜಗದೊಳಗವರ ।
ಗಾಣಗಾಪುರದಿ ನೋಜಿಗದಿಂದಲೆ ತೇಜದಿ ತೋರುವ ॥ ೧॥೨ ॥

ದತ್ತಾತ್ರೇಯನೆಂಬ ಗುರುವರನೆ ನುತಿಸುವೆ ನಿನ್ನನ್ನೇ ।
ಸುತ್ತ ತೀರ್ಥಗಳ ಚರಿಸುತ್ತಿರುವ ॥

ಎತ್ತಲು ವಾಸಿಸುವ ಕೃತ್ತಿವಾಸವರ ಉತ್ತಮರೂಪನೆ ।
ಅತ್ತಿಯಕಟ್ಟೆಗೆ ಚಿಗುರಿಸಿ ತೋರಿಸಿದ ॥ ೧೮೩ ॥

ಲಕ್ಷ ಭಜಕರಿಗೆ ಜ್ಞಾನವನ್ನಿತ್ತು ಆಕ್ಷಣ ಸುಖವಿತ್ತು ।
ಭಿಕ್ಷಾವೃತ್ತಿಗೆ ಪೋಗುತ್ತಲಾಗ ಈಕ್ಷಿಸಿವರಸತಿಯ ॥
ಆಕ್ಷಣದೊಳು ಗೊಡ್ಡೆಮ್ಮೆಯು ನೀಕ್ಷಿಸಿ ।
ಹಾಲನು ಕರೆಸುತ ಮಹಿಮೆಯು ತೋರಿದ ॥ ಕಂಡೆ ನಾನಿಂದು ॥ ೧೮೪ ॥

ಅಂದು ಬಡಬ್ರಾಹ್ಮಣ ಬರಲು ಅಂದದೊಳವನಿಂದ ।
ಚಂದದಿ ನಾಲ್ಕ್ಯಾಸಿರ ಜನರಂ ಆನಂದದಿ ಭುಂಜಿಸಿದ ॥
ಅಂದಾವಿಪ್ರರು ವಾದಕೆ ಬರಲು ।
ಚಂದದಿ ಪತಿತ ನಿಂ ವೇದವನೆ ನಿಸಿರ್ದ ಗುರುವರನಂ ॥ ಕಂಡೆ ನಾನಿಂದು ॥ ೧೮೫ ॥

ಎಲೈ ನಾಮಧಾರಕನೇ ನಿಮ್ಮ ಸಾಯಂದೇವನು ಈಪ್ರಕಾರ ಸ್ತುತಿಸಿದ್ದನ್ನು ಕೇಳಿ ಶ್ರೀಗುರುಗಳು ಸಂತೋಷಬಟ್ಟು ಮಹಾಹರ್ಷದಿಂದ ಅವನಿಗೆ ಆಶ್ವಾಸನ ಕೊಡುತ್ತ ॥ ೧೮೬ ॥ ಪ್ರೇಮದಿಂದ ಅವನ ಸಮಸ್ತ ಪತ್ನೀಪುತ್ರರಿಗೆ ತಮ್ಮ ಸಮೀಪದಲ್ಲಿ ಕೂಡ್ರಲಿಕ್ಕೆ ಹೇಳಿ ತಾಯಿಯು ಮಕ್ಕಳಮೇಲೆ ಪ್ರೇಮಮಾಡುವಂತೆ ನಿಮ್ಮ ಸಾಯಂದೇವನ ಬಾಲಕರಮೇಲೆ ಶ್ರೀಗುರುಗಳು ಪ್ರೇಮಮಾಡುತ್ತಿದ್ದರು. ॥ ೧೮೭ ॥ ಎಲೈ ನಾಮಧಾರಕನೇ ಆ ದಿವಸ ಯತಿಗಳಾದ ಶ್ರೀಗುರುಗಳು ಅವರ ಮೇಲೆ ಕೃಪೆಯಿಂದ ಎಷ್ಟು ಅಂತಃಕರಣಮಾಡಿದರೆಂಬದನ್ನು ಏನು ಹೇಳಲಿ! ॥ ೧೮೮ ॥ ತಮ್ಮ ಹೆಂಡರು–ಮಕ್ಕಳ ಮೇಲೆ ಎಷ್ಟು ಪ್ರೇಮ ಮಾಡಬೇಕೋ ಅಷ್ಟು ಪ್ರೇಮದಿಂದ

ನಿಮ್ಮ ಪೂರ್ವಜನಾದ ಸಾಯಂದೇವನನ್ನು ಕುರಿತು– ॥ ೧೮೯ ॥ ಅವನ ಗೃಹವಾರ್ತೆಯನ್ನೂ ಹೆಂಡರು ಮಕ್ಕಳ ಕ್ಷೇಮಸಮಾಚಾರವನ್ನೂ ಕೇಳಿದರು. ಆಗ ಸಾಯಂದೇವನು ಮಹಾ ಹರ್ಷದಿಂದ ॥ ೧೯೦ ॥ ಹೆಂಡರು ಮಕ್ಕಳ ಸಹಿತವಾಗಿ ಶ್ರೀಗುರುಗಳಿಗೆ ನಮಿಸಿ ವಿಸ್ತಾರವಾಗಿ ಎಲ್ಲ ಕ್ಷೇಮಸಮಾಚಾರ ಸಂಗತಿಯನ್ನೂ ಹೇಳಿದನು. ಆಮೇಲೆ ತನ್ನ ನಾಲ್ವರು ಗಂಡುಮಕ್ಕಳನ್ನು ಗುರುಗಳ ಪಾದದಮೇಲೆ ಹಾಕಿದನು. ॥ ೧೯೧ ॥ ಆಗ ಕೃಪಾನಿಧಿಗಳಾದ ಶ್ರೀಗುರುಗಳು ಆವನ ಹಿರಿಯ ಮಗನಾದ ನಾಗನಾಥನ ಮೇಲೆ ಅತ್ಯಂತ ದಯೆ ತೋರಿಸುತ್ತ ಅವನ ತಲೆಯಮೇಲೆ ವರದ ಹಸ್ತವನ್ನಿಟ್ಟು— ॥ ೧೯೨ ॥ ಎಲೈ ಸಾಯಂದೇವನೇ, ನಿನ್ನ ಈ ಹಿರಿಯ ಮಗ ರಾಮ-ನಾಥನು ಪೂರ್ಣಾಯುಷಿಯಾಗುವನು. ಇವನ ಸಂತತಿಯು ಬಹಳ ಬೆಳೆಯುವದು ॥ ೧೯೩ ॥ ಇವನು ನಮ್ಮ ಭಕ್ತನು. ಐಶ್ವರ್ಯವಂತನಾಗುವನು ಇನ್ನುಮೇಲೆ ನೀನು ಆ ಮ್ಲೇಂಛನ ಸೇವಾ ಮಾಡಬೇಡ. ॥ ೧೯೪ ॥ ಮತ್ತೇನಂದರೆ ನಿನ್ನ ಹೆಂಡತಿಯೂ ನಾಲ್ಕು ಮಂದಿ ಮಕ್ಕಳೂ ಆನಂದದಿಂದಿರುವರು. ಇನ್ನು ನೀನು ನಮ್ಮ ಸೇವಾ ಮಾಡುತ್ತ ಸುಖದಿಂದ ಇಲ್ಲಿಯೇ ಇರು. ॥ ೧೯೫ ॥ ನೀನು ಇನ್ನೊಬ್ಬರ ನೌಕರಿ ಮಾಡಬೇಡ ನೀನು ಯಾವ ದಿವಸ ಆ ಮ್ಲೇಂಛನ ಹತ್ತರ ಹೋಗಿ ವಂದಿಸುವಿಯೋ ಅದೇ ದಿವಸ ನಿನಗೆ ಮರಣ ಬರುವದು. ॥ ೧೯೬ ॥ ಈ ನಾಗನಾಥನು ನಮ್ಮ ನಿಜಭಕ್ತನಿದ್ದು ಇವನು ಬಹು ಕೀರ್ತಿವಂತನಾಗುವನು ಎಂದು ಹೇಳಿ ॥ ೧೯೭ ॥ ಮತ್ತೆ— ಎಲೈ ಸಾಯಂದೇವಾ, ಈಗ ನೀವೆಲ್ಲರೂ ತೀವ್ರವಾಗಿ ಸಂಗಮಕ್ಕೆ ಹೋಗಿ ಸ್ನಾನ ಮಾಡಿಕೊಂಡು ತೀವ್ರವಾಗಿ ಬರ್ರಿ ಎಂದು ಆಜ್ಞಾಪಿಸಿದರು ॥ ೧೯೮ ॥ ಆ ಕೂಡಲೆ ಸಾಯಂದೇವನು ತನ್ನ ಪರಿವಾರದೊಡನೆ ತೀವ್ರವಾಗಿ ಸಂಗಮಕ್ಕೆ ಹೋಗಿ ಸ್ನಾನ ಮಾಡಿ ವಿಧಿಪೂರ್ವಕ ಅಶ್ವತ್ಥವನ್ನು ಪೂಜಿಸಿ ಮಠಕ್ಕೆ ಬಂದನು. ॥ ೧೯೯ ॥ ಆ ದಿವಸ ಅನಂತಚತುರ್ದಶಿ ಇದ್ದು ಬ್ರಾಹ್ಮಣರೆಲ್ಲರು ಅನಂತನ ಪೂಜಾ ಮಾಡಬೇಕೆಂದು ಮಠಕ್ಕೆ ಬಂದು ಮೊದಲು ಶ್ರೀಗುರುಗಳನ್ನು ಪೂಜಿಸುತ್ತಿದ್ದರು. ॥ ೨೦೦ ॥ ಆಗ ಶ್ರೀಗುರುಗಳು ಸಾಯಂದೇವನನ್ನು ಕುರಿತು— ಎಲೈ ಸಾಯಂದೇವನೇ, ಈ ದಿವಸ ಅನಂತಚತುರ್ದಶಿ ಇದ್ದು, ಈ

ಯಾವತ್ತು ಬ್ರಾಹ್ಮಣರನ್ನು ಕೂಡಿಕೊಂಡು ನೀನು ಅನಂತನ ಪೂಜೆಯನ್ನು ಮಾಡು. ಎಂದರು. || ೨೦೧ || ಅವರ ಮಾತು ಕೇಳಿ ಸಾಯಂದೇವನು ನಮಸ್ಕಾರ ಮಾಡಿ— ಸ್ವಾಮೀ, ನಮಗೆ ಗುರುಗಳಾದ ತಾವೇ ಅನಂತರೂಪರು. ತಮ್ಮ ಚರಣಸೇವೆಯೇ ನಮಗೆ ವ್ರತವು. ಎಂದನು. || ೨೦೨ || ಆಗ ಶ್ರೀ ಗುರುಗಳು ಪೂರ್ವದಲ್ಲಿ ಕೌಂಡಿಲ್ಯ ಮಹಾಮುನಿಯು ಪ್ರಖ್ಯಾತವಾದ ಆ ಅನಂತ ವ್ರತವನ್ನು ಮಾಡಿ ಸರ್ವ ರಾಜ್ಯಸುಖ ವನ್ನು ಹೊಂದಿದನು ಎಂದು ವಿಸ್ತಾರವಾಗಿ ಹೇಳಿದರು. || ೨೦೩ || ಆಗ ದ್ವಿಜಶ್ರೇಷ್ಠನಾದ ಸಾಯಂದೇವನು ಮತ್ತೆ ನಮಸ್ಕಾರ ಮಾಡಿ— ಸ್ವಾಮೀ, ಈ ಅನಂತನವ್ರತವನ್ನು ಉತ್ತಮರೀತಿಯಾಗಿ ಹ್ಯಾಗೆ ಮಾಡಬೇಕು ? ಮತ್ತು ಪೂರ್ವದಲ್ಲಿ ಈ ವ್ರತವನ್ನು ಯಾರು ಮಾಡಿದರು ? ಎಂಬದನ್ನು ಹೇಳಬೇಕು. || ೨೦೪ || ಯಾತರಿಂದ ನನ್ನ ಹಿತವಾಗಬೇಕೋ ಅಂಥ ಪ್ರಖ್ಯಾತವಾದ ಅನಂತವ್ರತದ ಕಥಾಮೃತವನ್ನು ಹೇಳಿದಿರಿ. || ೨೦೫ || ಆದರೆ ಅದನ್ನು ಮಾಡುವದರಿಂದ ಸತ್ಯವಾಗಿ ಏನು ಪುಣ್ಯ ಬರುವದು ? ಯಾವ ಲಾಭವಾಗುವದು ? ಎಂಬದಾಗಿ ಇರುವ ನನ್ನ ಮನಸ್ಸಿನ ಅಪೇಕ್ಷೆಯನ್ನು ಸ್ವಾಮಿಗಳಾದ ತಾವು ಪೂರ್ಣ ಮಾಡಬೇಕು ಎಂದು ಬೇಡಿಕೊಂಡನು. || ೨೦೬ || ಆಗ ಸಿದ್ಧರು— ಎಲೈ ನಾಮಧಾರಕನೇ, ಈ ಪ್ರಕಾರದ ಸಾಯಂದೇವನ ವಿನಂತಿಯನ್ನು ಕೇಳಿ ದಯಾನಿಧಿ ಗಳಾದ ಶ್ರೀಗುರುಗಳು ಸಂತೋಷಬಟ್ಟು ಆ ವ್ರತದ ವಿಧಾನ ಹಾಗು ಮಹಿಮೆಯನ್ನು ವಿಸ್ತಾರವಾಗಿ ಹೇಳ ಹತ್ತಿದರು ಎಂದರು. || ೨೦೭ || ಎಂದು ಇತ್ತ ಸರಸ್ವತೀ ಗಂಗಾಧರನು— ಈ ಗುರುಚರಿತ್ರೆಯನ್ನು ಕೇಳಿದವ ರನ್ನು ಶ್ರೀಗುರುಗಳು ಈ ಭವಸಾಗರದಿಂದ ದಾಟಿಸುವರೆಂದು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿ ದನು. || ೨೦೮ || ಹೀಗೆ ಶ್ರೀಗುರುಚರಿತ್ರಾಮೃತದಲ್ಲಿ ಸಮಸ್ತ ಕಾಶೀಯಾತ್ರಾ ಮಾಡಿದ್ದನ್ನು ಆನಂದದಿಂದ ಕೇಳಿದರೆ ಆದರಿಂದ ಜನ್ಮ ಸಫಲವಾಗುವದು. || ೨೦೯ || ಹೀಗೆ ಮೋಕ್ಷಪ್ರಾಪ್ತಿಯಾಗುವಂಥ ಗುರುಚರಿತ್ರವನ್ನು ನಾಮಧಾರಕನು ಪ್ರಖ್ಯಾತವಾಗಿ ಹೇಳಿರುತ್ತಾನೆ. || ೨೧೦ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಕಾಶೀಪಂಚಕ್ರೋಶ ಯಾತ್ರಾ ಮಹಿಮಾ ವರ್ಣನಂ, ತ್ವಷ್ಟ್ರಾಪುತ್ರಾಖ್ಯಾನಂ, ಸಾಯಂದೇವ ವರ ಲಾಭೋನಾಮ ದ್ವಿಚತ್ವಾರಿಂಶೋಽಧ್ಯಾಯಃ ॥ ೪೨ ॥ ಶ್ರೀ ಗುರುದೇವದತ್ತ ॥

— ೪೨ನೇ ಅಧ್ಯಾಯ ಸಮಾಪ್ತ —

---

# ೪೩ನೇಯ ಅಧ್ಯಾಯ

## — ಶ್ರೀ ಗುರುಗಳು ಸಾಯಂದೇವನಿಗೆ ಅನಂತ ವ್ರತೋಪಾಖ್ಯಾನವನ್ನು ಹೇಳಿದ್ದು —

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಸಿದ್ಧರು— ಎಲೈ ನಾಮಧಾರಕನೇ, ಆಮೇಲೆ ಶ್ರೀ ಗುರುಗಳು, ಸಾಯಂದೇವನನ್ನು ಕುರಿತು— ಎಲೈ ಸಾಯಂದೇವನೇ ನೀನು ಅನಂತ ವ್ರತದ ಬಗ್ಗೆ ನನ್ನನ್ನು ಕೇಳಿದಿ, ಹಿಂದಕ್ಕೆ ಬಹುಮಂದಿ ಒಳ್ಳೇ ನಿಶ್ಚಲವಾದ ಮನಸ್ಸಿನ ಭಕ್ತಿಯಿಂದ ಅನಂತನನ್ನು ಆರಾಧಿಸಿ ಸಿದ್ಧಿಯನ್ನು ಪಡೆದರು ಕಾರಣ ಆ ಅನಂತ ವ್ರತದ ಮಹಿಮೆಯನ್ನು ಹೇಳುವೆನು ಕೇಳು. ‖ ೧ ‖

ಹಿಂದಕ್ಕೆ ಪಂಡುರಾಯನ ಮಗನಾದ ಧರ್ಮರಾಜನು, ಅನಂತ ವ್ರತವನ್ನು ಮಾಡಿ, ತೀವ್ರವಾಗಿ ರಾಜ್ಯವನ್ನು ಪಡೆದನು ಅದು ಇಂಥ ಉತ್ತಮ ವ್ರತವದೆ ಎಂದು ಹೇಳಿದರು ‖ ೨ ‖ ಆಗ ಸಾಯಂದೇವನು ಕೈ ಮುಗಿದು— ಸ್ವಾಮೀ, ಗುರುಗಳೇ ಪೂರ್ವದಲ್ಲಿ ರಾಜನಾಗಿದ್ದ ಯುಧಿಷ್ಠಿರನು ಮತ್ತೊಮ್ಮೆ ರಾಜ್ಯವನ್ನೇಕೆ ಪಡೆದನು ? ಎಂದು ಕೇಳಿದನು. ‖ ೩ ‖ ಆಗ ಶ್ರೀ ಗುರುಗಳು, ಎಲೈ ಭಕ್ತನೇ, ಪೂರ್ವದಲ್ಲಿ ಪಾಂಡವರಿಗೆ ರಾಜ್ಯವಿತ್ತು. ಆದರೆ ಅವರ ದಾಯಾದಿಗಳಾದ ದುಷ್ಟ ಕೌರವರು ಕಪಟ ಮಾಡಿ ಜೂಜಿನಲ್ಲಿ ಅವರನ್ನು ಸೋಲಿಸಿ, ಅವರ ರಾಜ್ಯವನ್ನು ಹರಣಮಾಡಿದರು. ‖ ೪ ‖ ಆದರಿಂದ ಅವರು ರಾಜ್ಯವನ್ನು ಬಿಟ್ಟು, ೧೨ ವರುಷಗಳವರೆಗೆ ವನವಾಸಕ್ಕೆ ಹೋಗಿ ಬಹಳ ಕಷ್ಟಬಡುತ್ತಿದ್ದರು. ಆದರಿಂದ ಅವರಿಗೆ ರಾಜ್ಯವಿಲ್ಲದಂತಾಗಿತ್ತು. ‖ ೫ ‖ ಆ ಘೋರವಾದ ಆರಣ್ಯದಲ್ಲಿ ಧರ್ಮರಾಯನು ತನ್ನ ಬಂಧುಗಳು ಹಾಗು ದ್ರೌಪದಿಯ ಸಹಿತವಾಗಿ ಬಹಳ ಚಿಂತೆಯಿಂದ ಕಷ್ಟಬಡುತ್ತ ಶ್ರೀ ಹರಿಯನ್ನು ಧ್ಯಾನಿಸುತ್ತಿರುತ್ತಿದ್ದನು. ‖ ೬ ‖ ಈ ಪ್ರಕಾರ ಪಾಂಡವರು ಸಮಸ್ತ ರಾಜ್ಯವನ್ನು ಬಿಟ್ಟು ಅರಣ್ಯದಲ್ಲಿದ್ದರೂಸಹ ದುಷ್ಟರಾದ ಕೌರವರು ಕಪಟದಿಂದ ಅವರಿಗೆ ಮೇಲಿಂದ ಮೇಲೆ

ನಾನಾರೀತಿಯಿಂದ ವಿಘ್ನಮಾಡಿ ಕಷ್ಟಬಡಿಸುತ್ತಿದ್ದರು. ‖ ೭ ‖ ಒಮ್ಮೆ ಅವರ ಸತ್ವವನ್ನು ಹರಣಮಾಡ ಬೇಕೆಂದು ಮಧ್ಯರಾತ್ರಿಯಲ್ಲಿ ೬೦ ಸಾವಿರ ಶಿಷ್ಯರು ಸಹಿತರಾದ ದೂರ್ವಾಸರನ್ನು ಅನ್ನವನ್ನು ಬೇಡಿರೆಂದು ಹೇಳಿ ಕಳಿಸಿದರು. ಪಾಂಡವರು ಶ್ರೀ ಹರಿಯ ಭಕ್ತರಾದ್ದರಿಂದ ಅವನು ಅವರನ್ನು ಸದಾ ರಕ್ಷಿಸುತ್ತಿದ್ದನು. ‖ ೮ ‖ ಆ ಪಾಂಡವರು ವಿರಕ್ತರಾಗಿ ಆ ವನದಲ್ಲಿಯೇ ಇದ್ದು, ನಾನಾ ವ್ರತಗಳನ್ನೂ ನಾನಾ ತೀರ್ಥಯಾತ್ರೆಗಳನ್ನೂ ಮಾಡಿ ಬಹಳ ಕಷ್ಟಪಡುತ್ತಿದ್ದರು. ‖ ೯ ‖ ಭಕ್ತವತ್ಸಲನಾದ ಶ್ರೀ ಕೃಷ್ಣನು ಅವರ ಕಷ್ಟವನ್ನು ತಿಳಿದು ಕೂಡಲೆ ಒಂದುದಿವಸ ಅವರಬಳಿಗೆ ಬಂದನು. ‖ ೧೦ ‖ ಅವನು ಬರುವದನ್ನು ನೋಡಿ ಧರ್ಮರಾಯನು ಲೋಟಾಂಗಣ ಹಾಕುತ್ತ ಅವನ ಎದುರಿಗೆ ಹೋಗಿ ಸಾಷ್ಟಾಂಗ ನಮಸ್ಕಾರ ಮಾಡಿ ‖ ೧೧ ‖ ತನ್ನ ಚಂಡಿಕೆಯಿಂದ ಆ ಶ್ರೀ ಕೃಷ್ಣನ ಪಾದಧೂಳಿಯನ್ನು ಜಾಡಿಸಿ, ಅವನ ಕೈ ಹಿಡಿದು ತಮ್ಮ ಪರ್ಣಕುಟೀರದಲ್ಲಿ ಕರಕೊಂಡು ಹೋಗಿ, ಯೋಗ್ಯವಾದ ಆಸನದಲ್ಲಿ ಕೂಡ್ರಿಸಿ, ‖ ೧೨ ‖ ಅರ್ಘ್ಯ ಪಾದ್ಯಾದಿಗಳನ್ನು ಕೊಟ್ಟು ವಿನಯದಿಂದಲೂ ಷೋಡಶೋಪಚಾರ ಪೂಜಾ ಮಾಡಿ, ಗಂಧಾಕ್ಷತೆಗಳನ್ನು ಹಚ್ಚಿ, ಆ ಅಡವಿಯಲ್ಲಿ ಬೆಳೆಯುವ ನಾನಾತರದ ಹೂವಿನ ಮಾಲೆಗಳನ್ನು ಹಾಕಿ, ಭಕ್ತಿಯಿಂದ ಪೂಜಿಸಿದನು. ‖ ೧೩ ‖ ಆಮೇಲೆ ವಿನಯದಿಂದ ಕೈ ಮುಗಿದು ನಿಂತು—ಜಯ ಜಯ ಹೃಷೀಕೇಶನೇ, ಜಯ ಭಕ್ತವತ್ಸಲನೇ, ಜಯ ಕೃಷ್ಣನಾಥನೇ ‖ ೧೪ ‖ ಜಯ ಜಯ ಅನಂತನೇ, ನಾರಾಯಣನೇ, ಭವತಾರಕನೇ, ಕೃಪಾಳುವೇ, ಲಕ್ಷ್ಮೀರಮಣನೇ, ಕ್ಷೀರಸಾಗರ ವಾಸಿಯೇ, ವಾಸುದೇವನೇ, ‖ ೧೫ ‖ ಪರಮಾತ್ಮನೇ, ಪರಂಜ್ಯೋತಿಯೇ, ಸೃಷ್ಟಿ-ಸ್ಥಿತಿ-ಲಯಕರ್ತನೇ, ತ್ರಿಮೂರ್ತಿ ಅವತಾರನೇ, ‖ ೧೬ ‖ ವಿಶ್ವರಕ್ಷನೇ, ವಿಶ್ವಾಧಾರನೇ, ಅಣು-ರೇಣು-ತೃಣ-ಕಾಷ್ಠಗಳಲ್ಲಿ ಪರಿಪೂರ್ಣನಾದವನೇ. ‖ ೧೭ ‖ ತ್ರಿಗುಣಾತ್ಮಕ ಹರ್ಷಿಕೇಶನೇ, ರಜೋಗುಣದಿಂದ ಕೂಡಿಕೊಂಡು ಸೃಷ್ಟಿಯನ್ನು ರಚಿಸುವಂಥವನೇ, ನಿನಗೆ ನಮಸ್ಕಾರವು. ‖ ೧೮ ‖ ದುಷ್ಟನಿಗ್ರಹ, ಶಿಷ್ಟರಕ್ಷಣ ಮಾಡುವದಕ್ಕೆ ನೀನೇ ಸಮರ್ಥನೆಂದು ವೇದಗಳು-ಪುರಾಣಗಳು ನಿನ್ನನ್ನು ನಾನಾರೀತಿಯಿಂದ ಪ್ರಸಿದ್ಧವಾಗಿ ಹೊಗಳುತ್ತವೆ. ‖ ೧೯ ‖ ದೇವಾ ನೀನು

ಭೂಭಾರವನ್ನು ಹರಣಮಾಡಲಿಕ್ಕೆ ಅವತರಿಸಿರುತ್ತೀ. ನಾನು ನಿನಗೆ ಭಾರವಾಗಿದ್ದರೆ ನನ್ನನ್ನೇಕೆ ಜೀವದಿಂದಿಟ್ಟು ರುವಿ. ॥ ೨೦ ॥ ನೀನು ಪಾಂಡವರೇ ನನ್ನ ಪಂಚಪ್ರಾಣವೆಂದು ಜಗತ್ತಿನಲ್ಲಿ ಹೇಳಿಕೊಳ್ಳುತ್ತ, ನಮ್ಮನ್ನು ಅರಣ್ಯಕ್ಕೆ ಕಳಿಸಿ, ನಾನಾರೀತಿಯಾಗಿ ಯಾಕೆ ಕಷ್ಟಬಡಿಸುತ್ತೀ? ॥ ೨೧ ॥ ದೇವಾ, ನಿನ್ನ ಕೃಪಾ ಸಂಪಾದಿಸಿದವರನ್ನು ನೀನು ರಕ್ಷಿಸುತ್ತೀ, ಹೀಗಿದ್ದು ನಮ್ಮನ್ನು ಉಪೇಕ್ಷಿಸಿ ಅರಣ್ಯದಲ್ಲೇಕೆ ಇಟ್ಟೆ? ॥ ೨೨ ॥ ಎಲೈ ಹೃಷೀಕೇಶನೇ, ನಾವು ನಿನ್ನ ಹೊರತು ಮತ್ತ್ಯಾರಮುಂದೆ ನಮ್ಮ ದುಃಖವನ್ನು ಹೇಳಬೇಕು? ಒಂದುವೇಳೆ ನೀನು ನಮ್ಮನ್ನು ಉಪೇಕ್ಷಿಸಿದರೆ, ನಾವು ಜೀವದಿಂದ್ಯಾಕೆ ಇರಬೇಕು? ಎಂದು ಅಂದನು. ॥ ೨೩ ॥ ಅಷ್ಟರಲ್ಲಿ ಭೀಮಸೇನನು ಬಂದು ಕೃಷ್ಣನ ಚರಣಗಳನ್ನು ಹಿಡಿದು ವಂದಿಸಿ— ದೇವಾ, ನೀನು ನಮ್ಮನ್ನು ಉಪೇಕ್ಷಿಸುವ ಕಾರಣವೇನೆಂಬದನ್ನು ಕೃಪಾ ಮಾಡಿ ನನಗೆ ಹೇಳು ನಾವು ನಿನ್ನ ಹೊರತಾಗಿರುವೆವೇ? ನೀನು ನಮ್ಮ ರಕ್ಷಕನಿರಲು ನಮಗೆ ಇಷ್ಟು ಕಷ್ಟವೇಕೆ? ಹೇಳು ಎಂದನು. ॥ ೨೪ ॥ ಆಮೇಲೆ ಅರ್ಜುನನು ಬಂದು ಶ್ರೀಕೃಷ್ಣನ ಚರಣಗಳಿಗೆ ವಂದಿಸಿ, ಕರುಣಾ ವಚನದಿಂದ ಹೇ ಕೃಪಾಳುವೇ, ಹೇ ಮುರಾರಿಯೇ ಎಂದು ವಿನಯದಿಂದ ॥ ೨೫ ॥ ದೇವಾ, ನಾವು ನಿನ್ನ ಕೃಪಾದೃಷ್ಟಿಯೊಳಗಿದ್ದರೂ ನಮಗೆ ಅರಣ್ಯವಾಸವಾಗಿ ನಮಗೆ ಅತಿಶಯ ಕಷ್ಟಗಳೊದಗಿ ಬಹಳ ತ್ರಾಸವಾಗಿದೆ ॥ ೨೬ ॥ ಎಲೈ ನಾರಾಯಣನೇ, ಈಗ ನೀನು ನಮ್ಮ ಕಷ್ಟವನ್ನು ಪರಿಹರಿಸಿ, ಪಂಚಪಾಂಡವರು ನಿನ್ನ ಪಂಚಪ್ರಾಣವೆಂಬ ಬಿರುದನ್ನು ನೀನು ಕಾಯ್ದುಕೊಂಡು ನಮ್ಮನ್ನು ತೀವ್ರವಾಗಿ ರಕ್ಷಿಸು ಎಂದನು. ॥ ೨೭ ॥ ಆಮೇಲೆ ಮಾದ್ರೀದೇವೀ ಮಕ್ಕಳಾದ ನಕುಲ-ಸಹದೇವರು ಬಂದು ಕೃಷ್ಣನಿಗೆ ನಮಸ್ಕಾರ ಮಾಡಿದರು. ಆಕೂಡಲೆ ದ್ರೌಪದಿಯು ಬಂದು ಕೃಷ್ಣನ ಪಾದಗಳಿಗೆ ನಮಸ್ಕರಿಸಿ ॥ ೨೮ ॥— ದೇವಾ, ನೀನು ನಮ್ಮ ರಕ್ಷಕನು! ಹೀಗಿದ್ದು ನಾವು ಘೋರಾರಣ್ಯದಲ್ಲಿದ್ದು ಕಷ್ಟಬಡುತ್ತೇವೆ! ನಮ್ಮ ದಾಯಾದಿಗಳು ಮಾತ್ರ ನಮ್ಮಮೇಲೆ ವೈರತ್ವ ಮಾಡುತ್ತ ಸುಖದಿಂದ ರಾಜ್ಯವಾಳುವರು, ಆದರಿಂದ ನಮಗೇನು ಉಪಯೋಗವದೆ ಹೇಳು? ॥ ೨೯ ॥ ನಿನ್ನಂಥ ಛತ್ರವು ನಮ್ಮಮೇಲಿರಲಿಕ್ಕೆ ನಮಗೆ ಇಷ್ಟು ಅಪರಿಮಿತ ಕಷ್ಟಗಳಾಗಬೇಕೇ?

ದೇವಾ ಈಗ ಇಷ್ಟು ಕಷ್ಟಪಟ್ಟದ್ದೇ ಸಾಕು! ಹೃಷೀಕೇಶನೇ, ಇನ್ನು ನಮಗೆ ಯಾವ ರೀತಿಯಿಂದ ಸ್ವಸ್ಥಚಿತ್ತವಾಗುತ್ತದೋ ಹಾಗು ತೀವ್ರವಾಗಿ ರಾಜ್ಯ ಪ್ರಾಪ್ತಿಯಾಗುತ್ತದೋ ॥ ೨೦ ॥ ಅಂಥ ಉಪಾಯವನ್ನು ನಮಗೆ ಹೇಳು ಎಂದಳು. ದ್ರೌಪದಿಯು ಈ ಪ್ರಕಾರವಾಗಿ ದೀನವಾಣಿಯಿಂದ ಪ್ರಾರ್ಥಿಸಿದ ಕೂಡಲೆ ಕೃಷ್ಣನ ಮನಸ್ಸಿನಲ್ಲಿ ಕೃಪಾ ಉತ್ಪನ್ನವಾಯಿತು ॥ ೨೧ ॥ ಆಮೇಲೆ ಆ ಕೃಷ್ಣನು ಧರ್ಮರಾಜನನ್ನು ಕುರಿತು— ಎಲೈ ಪಂಡುಸುತನಾದ ಧರ್ಮರಾಯನೇ ಕೇಳು. ಯಾವ ದೇವರು ನಿಮಗೆ ಕೂಡಲೆ ಪ್ರಸನ್ನನಾಗಿ ರಾಜ್ಯ ಪ್ರಾಪ್ತಿಯನ್ನು ಮಾಡಿಕೊಡುವನೋ ಅಂಥ ಒಂದು ವ್ರತವನ್ನು ನಿಮಗೆ ಹೇಳುತ್ತೇನೆ ॥ ೨೨ ॥ ವ್ರತಗಳಲ್ಲಿ ಅತ್ಯುತ್ತಮವಾದ **ಅನಂತ ವ್ರತ** ಎಂಬುವದು ಪ್ರಖ್ಯಾತವಾಗಿರುತ್ತದೆ. ಅದನ್ನು ನೀನು ತ್ರಿವ್ರವಾಗಿ ಮಾಡು ಅದರಿಂದ ನಿಮಗೆ ತೀವ್ರ ರಾಜ್ಯ ಪ್ರಾಪ್ತಿಯಾಗುವದು. ॥ ೨೩ ॥ ಈಗ ನಿಮಗೆ ಅನಂತ ವ್ರತವೆಂದರೇನೆಂಬದನ್ನು ಹೇಳುವೆನು ಕೇಳು ಅನಂತನೆಂಬ ಹೆಸರು ನನಗೇ ಅದೆ. ನಾನೇ ಅನಂತನು ನಾನು ಸರ್ವ ಸ್ಥಳಗಳಲ್ಲಿಯೂ ವಾಸವಾಗಿರುವೆನು. ॥ ೨೪ ॥ ಅಂದರೆ ಕಲಾ, ಕಾಷ್ಠ, ಮುಹೂರ್ತ, ದಿನ, ರಾತ್ರಿ, ಶರೀರ, ಪಕ್ಷ, ಮಾಸ, ವರುಷ, ಯುಗ ಕಲ್ಪ ಮೊದಲಾದವುಗಳೆಲ್ಲವೂ ನಾನೇ ಆಗಿದ್ದೇನೆ ॥ ೨೫ ॥ ಎಲೈ ಧರ್ಮರಾಜನೇ, ನಾರಾಯಣನಾದ ನಾನು ದುಷ್ಟ ದಾನವರನ್ನು ಕೊಂದು ಭೂಭಾರವನ್ನು ಹರಣ ಮಾಡುವದರಪೇಕ್ಷೆಯಿಂದ ವಸುದೇವನ ಕುಲದಲ್ಲಿ ಅವತರಿಸಿರುವೆನು. ॥ ೨೬ ॥ ನಾನೇ ಅನಂತನೆಂದು ತಿಳಿ, ಮನಸ್ಸಿನಲ್ಲಿ ಏನೂ ಸಂಶಯ ಹಿಡಿಯಬೇಡ. ನಾನೇ ಎಲ್ಲಕಡೆಗೆ ಬ್ರಹ್ಮ-ವಿಷ್ಣು-ಮಹೇಶ್ವರರೆಂದು ತ್ರೈಮೂರ್ತಿಗಳಾಗಿ ಅವತರಿಸಿರುವೆನು ॥ ೨೭ ॥ ಸೂರ್ಯ-ಚಂದ್ರರೂ, ಚತುರ್ದಶ ಭುವನಗಳೂ, ಅಷ್ಟವಸುಗಳೂ, ದ್ವಾದಿಶಾದಿತ್ಯರೂ ॥ ೨೮ ॥ ಏಕಾದಶ ರುದ್ರರೂ, ಸಪ್ತಸಮುದ್ರ, ಸಪ್ತಋಷಿ, ಸಪ್ತಪರ್ವತಗಳೂ. ॥ ೨೯ ॥ ಎಲ್ಲ ವೃಕ್ಷಗಳೂ, ಆಕಾಶವೂ, ನಕ್ಷತ್ರಗಳೂ, ದಶ ದಿಕ್ಕುಗಳೂ, ಈ ಭೂಮಿಯು ॥ ೩೦ ॥ ಸಪ್ತ ಪಾತಾಳಗಳೂ, ಭೂರ್ಭುವಾದಿ ಸಕಲ ಲೋಕಗಳೂ, ಅಣು-ರೇಣು-ತೃಣ-ಕಾಷ್ಠಗಳೆಲ್ಲವೂ ವಿಶ್ವಾತ್ಮನಾದ ನಾನೇ ಆಗಿದ್ದೇನೆ. ॥ ೩೧ ॥ ಎಲೈ ಧರ್ಮರಾಜನೇ,

ನೀನು ಮನಸಿನಲ್ಲಿ ಸ್ವಲ್ಪಾದರೂ ಸಂಶಯ ಮಾಡದೆ ನಿಶ್ಚಯವಾಗಿ ನಾನೇ ಅನಂತನೆಂದು ತಿಳಿದು, ವಿಧಿಪೂರ್ವಕ ಪೂಜಾ ಮಾಡು, ನಿನಗೆ ಈ ವ್ರತವು ಉತ್ತಮವಾಗಿರುತ್ತದೆ ಎಂದು ಹೇಳಿದನು. || ೪೨ ||

ಶ್ರೀಕೃಷ್ಣನ ಮಾತು ಕೇಳಿ ಧರ್ಮರಾಯನು ವಿನಯದಿಂದ ಕೈಮುಗಿದು— ಸ್ವಾಮೀ, ನಾರಾಯಣನಾದ ಕೃಷ್ಣನೇ, ಆ ವೃತವನ್ನು ಮಾಡುವ ವಿಧಾನವು ಹೇಗೆ? ಅದಕ್ಕೆ ಯಾವ ದಾನ ಕೊಡಬೇಕು? ಪೂಜಾ ಹ್ಯಾಗೆ ಮಾಡಬೇಕು? || ೪೩ || ಆ ವ್ರತವನ್ನು ಯಾವ ದಿವಸ ಮಾಡಬೇಕು? ಪೂರ್ವದಲ್ಲಿ ಆ ವ್ರತವನ್ನು ಯಾರು ಯಾರು ಮಾಡಿದರು? ಅವರಿಗೆ ಏನು ಫಲವಾಯಿತು? ಎಂಬದನ್ನು ಶೀವ್ರವಾದಿ ನನಗೆ ವಿಸ್ತಾರವಾಗಿ ಹೇಳಬೇಕು ಎಂದು ಪ್ರಾರ್ಥಿಸಿದನು. || ೪೪ || ಆಗ ಶ್ರೀಕೃಷ್ಣನು— ಎಲೈ ಧರ್ಮರಾಯಾ, ನೀನು ನನಗೆ ಆ ವೃತದ ಸಂಬಂಧವಾಗಿ ಕೇಳುತ್ತೀ, ಹೇಳುವೆನು ಕೇಳು. ಭಾದ್ರಪದ ಮಾಸ ಶುಕ್ಲಪಕ್ಷದಲ್ಲಿ ಚತುರ್ದಶಿ ಬರುತ್ತದಷ್ಟೇ, || ೪೫ || ಆ ದಿವಸ ಅನಂತನನ್ನು ಆರಾಧಿಸಿದರೆ ನೀನು ಶೀವ್ರವಾಗಿ ರಾಜ್ಯವನ್ನು ಸಂಪಾದಿಸುತ್ತೀ. ಮತ್ತು ನೀನು ನನಗೆ ಪೂರ್ವದಲ್ಲಿ ಈ ವ್ರತವನ್ನು ಯಾರು ಮಾಡಿದರೆಂದು ಕೇಳುತ್ತೀ ಅದನ್ನು ಹೇಳುತ್ತೇನೆ. ಏಕಚಿತ್ತದಿಂದ ಕೇಳು. || ೪೬ ||

ಪೂರ್ವದ ಕೃತಯುಗದಲ್ಲಿ ವಸಿಷ್ಠಗೋತ್ರದಲ್ಲಿ ಉತ್ಪನ್ನನಾದ **ಸುಮಂತು** ಎಂಬ ಒಬ್ಬ ಬ್ರಾಹ್ಮಣನಿದ್ದನು. ಭೃಗುವಿನ ಮಗಳಾದ **ದೀಕ್ಷಾ** ಎಂಬವಳು || ೪೭ || ಅವನ ಪತ್ನಿಯಾಗಿದ್ದು, ಅವಳು ಪತಿವ್ರತೆಯೂ ಔದಾರ್ಯವಂತಳೂ ಆಗಿದ್ದಳು. ಆಕೆಗೆ **ಸುಶೀಲಾ** ಎಂಬ ಒಬ್ಬ ಸುಂದರ ಕನ್ಯೆಯು ಹುಟ್ಟಿದಳು. || ೪೮ || ಆ ಸುಶೀಲೆಯು ಬೆಳೆಯುತ್ತ ಬೆಳೆಯುತ್ತ ದೊಡ್ಡವಳಾಗಿ ತಂದೆಯ ಮನೆಯಲ್ಲಿದ್ದು ನಿತ್ಯ ಸದಾಚಾರದಿಂದ ನಡೆಯುತ್ತ, ದೇವ-ಬ್ರಾಹ್ಮಣರಲ್ಲಿ ಭಕ್ತಿಯನ್ನಿಟ್ಟು ತಾನು ವಿಚಿತ್ರತರವಾದ ಸರ್ವ ಮಂಗಳದ್ರವ್ಯಗಳಿಂದ ಅಲಂಕೃತಳಾಗಿರುತ್ತಿದಳು. || ೪೯ || ಇದಲ್ಲದೆ ನಿತ್ಯ ಮನೆಯನ್ನು ಸಾರಿಸಿ, ಬಾಗಿಲುಗಳಿಗೆ ನಾನಾತರದ ಪತ್ರಗಳಿಂದ ತೋರಣವನ್ನು ಕಟ್ಟಿ ಐದು ತರದ ಬಣ್ಣದ ಪುಡಿಗಳಿಂದ ಸ್ವಸ್ತಿಕಾದಿ ಶಂಖ, ಚಕ್ರ, ಗದಾ ಪದ್ಮ ಮೊದಲಾದ ನಾನಾತರದ

ರಂಗೋಲಿಗಳನ್ನು ಹಾಕಿ ಮನೆಯನ್ನು ಬಹು ರೀತಿಯಿಂದ ಶೋಭಿಸುವಂತೆ ಮಾಡಿ, ತಂದೆಯ ದೇವಪೂಜೆಗೆ ಎಲ್ಲ ಉಪಕರಣಗಳನ್ನು ಒದಗಿಸಿಕೊಟ್ಟು ನಿತ್ಯ ತ್ರಿಕರಣಪೂರ್ವಕವಾಗಿ ದೇವರಿಗೆ ಸಮಸ್ಕರಿಸುತ್ತ ಮನದಲ್ಲಿ ಆನಂದ ಪಡುತ್ತ ಇರುತ್ತಿದ್ದಳು. ॥ ೫೦-೫೧ ॥ ಹೀಗೆ ನಡೆದಿರಲು ಒಂದು ದಿವಸ ದೈವವಶಾತ್ ಒಂದು ವಿಚಿತ್ರ ಸಂಗತಿ ನಡೆಯಿತು ಅಂದರೆ ಆ ಸುಮಂತನ ಪತ್ನಿಯಾದ ದೀಕ್ಷಾ ಎಂಬ ಸುಶೀಲಾನ ತಾಯಿಯು ಮರಣ ಹೊಂದಿದಳು. ॥ ೫೨ ॥ ಹೆಂಡತಿಯು ಸತ್ತುಹೋದ್ದರಿಂದ ಆ ಸುಮಂತನ ಎಲ್ಲ ಕರ್ಮಗಳು ನಿಂತುಹೋದವು. ಆದ್ದರಿಂದ ಅವನು ಮತ್ತೊಂದು ಲಗ್ನ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ ಬೇರೆ ಒಬ್ಬ ಸ್ತ್ರೀಯನ್ನು ಲಗ್ನ ಮಾಡಿ ಕೊಂಡನು. ॥ ೫೩ ॥ ಆಕೆಯ ಹೆಸರು ಕರ್ಕಶೀ ಎಂಬುದಾಗಿತ್ತು ಮತ್ತು ಅವಳು ಆಚರಣೆಯಲ್ಲಿ ಬಹಳ ದುಃಶೀಲ (ಬಹಳ ಕೆಟ್ಟ ಸ್ವಭಾವದವ) ಳಾಗಿದ್ದು ತನ್ನ ಗಂಡನ ಮತ್ತು ಮಲಮಗಳಾದ ಸುಶೀಲೆಯ ಸಂಗಡ ಜಗಳಾಗುತ್ತಿದ್ದಳು. ॥ ೫೪ ॥ ಮುಂದೆ ಸ್ವಲ್ಪ ದಿವಸಗಳಲ್ಲಿ ಆ ಕನ್ಯೆಯಾದ ಸುಶೀಲೆಯು ಲಗ್ನಕ್ಕೆ ಯೋಗ್ಯ ಳಾದಳು. ಆಗ ಸುಮಂತ ಬ್ರಾಹ್ಮಣನು— ಈಕೆಗೆ ಒಬ್ಬ ಉತ್ತಮ ವರನು ಸಿಕ್ಕರೆ ಕನ್ಯಾದಾನ ಮಾಡಿಕೊಡ ಬೇಕು ಎಂದು ಮೇಲಿಂದಮೇಲೆ ಚಿಂತಿಸುತ್ತಿದ್ದನು ॥ ೫೫ ॥ ಹೀಗೆ ಚಿಂತಿಸುತ್ತಿರಲು ಒಂದು ದಿವಸ ಕೌಂಡಿಣ್ಯ ನೆಂಬ ಋಷಿಯು ಅಲ್ಲಿಯೇ ಬರಲು, ಮಗಳ ಲಗ್ನದಬಗ್ಗೆ ವಿಚಾರಿಸಿದನು ಅದಕ್ಕೆ ಸುಮಂತು ಬ್ರಾಹ್ಮಣನು ಒಪ್ಪಿಕೊಂಡನು. ॥ ೫೬ ॥ ಆಮೇಲೆ ಆ ಕೌಂಡಿಣ್ಯನಿಗೆ ಆ ಸುಶೀಲೆಯನ್ನು ಕನ್ಯಾದಾನ ಮಾಡಿ, ಕೊಟ್ಟು ವಿಧಿ ಪ್ರಕಾರ ಲಗ್ನ ಮಾಡಿದನು. ಕೌಂಡಿಣ್ಯನು ಹೆಂಡತಿಯೊಡನೆ ಆಷಾಢ-ಶ್ರಾವಣ ಈ ಎರಡು ಮಾಸಗಳಾಗುವ ತನಕ ಮಾವನ ಮನೆಯಲ್ಲಿಯೇ ಇದ್ದನು ॥ ೫೭ ॥ ಆ ಸುಮಂತನ ೨ನೇ ಹೆಂಡತಿಯಾದ ಆ ಕರ್ಕಶಿಯು ಮಲಮಗಳಾದ ಸುಶೀಲೆಯಮೇಲೆ ನಿತ್ಯ ವೈರತ್ವ ಮಾಡುತ್ತಿದ್ದಳು. ಇದನ್ನು ಕಂಡು ಕೌಂಡಿಣ್ಯನು ಮಾವನಾದ ಸುಮಂತನಿಗೆ ಎಲ್ಲ ಸಂಗತಿಯನ್ನು ಹೇಳಿ— ನಾನು ನನ್ನ ಹೆಂಡತಿಯೊಡನೆ ೨ನೇ ಸ್ಥಳದಲ್ಲಿರುವ ಯಾವದಾದ ರೊಂದು ಆಶ್ರಮಕ್ಕೆ ಹೋಗುವೆನು. ಎಂದು ಕೇಳಿದನು. ॥ ೫೮ ॥ ಆ ಮಾತು ಕೇಳಿ ಸುಮಂತು ಬ್ರಾಹ್ಮಣನು

ಬಹಳ ದುಃಖ ಮಾಡಿ— ಈ ಕರ್ಕಶಿಯು ನನ್ನ ಹೆಂಡತಿಯಲ್ಲ! ವೈರಿಯು! ಈಕೆಯ ಕೈಯಲ್ಲಿ ಉರಿಯಲಾರದೆ ನನ್ನ ಮುದ್ದುಮಗಳು ಇನ್ನು ದೂರ ಹೋಗುತ್ತಾಳಲ್ಲಾ? ಏನು ಮಾಡಲಿ? ನಾನು ಎಂಥಾ ಪಾಪಿಣಿಯನ್ನು ಲಗ್ನ ಮಾಡಿಕೊಂಡೆನಲ್ಲಾ! ಎಂದು ಅನ್ನುತ್ತ ॥ ೫೯ ॥ ಮತ್ತೂ— ಶಾಂತಳಾದ ಹಾಗು ಸದಾಚಾರಿಯಾದ ಹೆಂಡತಿಯು ಇಲ್ಲದಂಥವರ ಮನೆಯು ಅರಣ್ಯದಂತೆಯೇ ಸರಿ. ಸ್ವಾಮೀ, ತ್ರಿಪುರಾರಿಯಾದ ಶ್ರೀಶಂಕರನೇ, ನಾನು ಸಂಸಾರಸಾಗರದಲ್ಲಿ ಮುಳುಗಿರುವೆನು. ॥ ೬೦ ॥ ಆದರಿಂದ ನನ್ನ ನಿತ್ಯಕರ್ಮ ಹಾಗು ತಪಸ್ಸುಗಳು ನಡೆಯುದಂತಾದವು. ಈ ಕರ್ಕಶಿಗೆ ಹಿತವನ್ನು ಹೇಳಿದರೆ ಕೇಳುವದಿಲ್ಲ. ಮಗಳೂ ಅಳಿಯನೂ ಮನೆಯಲ್ಲಿದ್ದರೆ ನನಗೆ ಬಹಳ ಸಂತೋಷವು. ನಿತ್ಯ ಅಳಿಯನ ದರ್ಶನವಾಗುತ್ತದೆ. ಈಗ ಏನು ಮಾಡಲಿ? ॥ ೬೧ ॥ ಎಂದು ಸುಮಂತು ಬ್ರಾಹ್ಮಣನು ಚಿಂತಿಸುತ್ತಿದ್ದನು ಅದನ್ನು ಕಂಡು ಕೌಂಡಿಣ್ಯನು ಅವನಿಗೆ ಸಮರ್ಪಕವಾಗು ವಂತೆ ಹೇಳುತ್ತಾನೆ ಏನಂದರೆ-- ಮಾವನವರೇ, ಕೇಳಿರಿ ನೀವು ಏನೂ ಚಿಂತೆ ಮಾಡಬೇಡಿರಿ. ಒಂದೇ ಮನೆಯಲ್ಲಿ ಇಬ್ಬರು ತಪಸ್ವಿಗಳಿರಬಾರದು ಆದರಿಂದ ಧರ್ಮ ಕೆಡುವದು ॥ ೬೨ ॥ ನಾವು ಬೇರೆ ಸ್ಥಳಕ್ಕೆ ಹೋಗಿ ನಿಮ್ಮ ಆಶ್ರಮಕ್ಕೆ ಸಮೀಪವಾಗೆಯೇ ಒಂದು ಆಶ್ರಮವನ್ನು ಮಾಡಿಕೊಂಡು ಅನುಷ್ಠಾನ ಸಹಿತ ತಪಸ್ಸು ಮಾಡುತ್ತಿದ್ದು ಮೇಲಿಂದಮೇಲೆ ನಿಮ್ಮ ದರ್ಶನಕ್ಕ ಬರುವೆನು ಎಂದು ಹೇಳಿದನು. ॥ ೬೩ ॥ ಆಗ ಆ ಸುಮಂತು ಬ್ರಾಹ್ಮಣನು— ಕೌಂಡಿಣ್ಯ ಮುನಿಯೇ ಕೇಳು ನೀವು ಇನ್ನೂ ೧೨ ದಿವಸ ನಮ್ಮಲ್ಲಿ ಇದ್ದು ಸರ್ವಸಿದ್ಧಿ ತ್ರಯೋದಶಿ ದಿವಸ ಅಂದರೆ ಭಾದ್ರಪದ ಶುಕ್ಲ ತ್ರಯೋದಶಿ ದಿವಸ ಹೊರಡಿರಿ ಎಂದು ಹೇಳಿದನು. ॥ ೬೪ ॥ ಮಾವನ ವಿನಂತಿಯಂತೆ ಕೌಂಡಿಣ್ಯನು ಮತ್ತೆ ೧೩ ದಿವಸಗಳ ವರೆಗೆ ಇದ್ದು ಮರುದಿನ ಉತ್ತಮ ಮುಹೂರ್ತವಿರುವದನ್ನು ನೋಡಿ ಅಂದರೆ ಅನಂತ ಚತುರ್ದಶಿ ದಿವಸ ಹೆಂಡತಿಯೊಡನೆ ಹೊರಟನು. ॥ ೬೫ ॥ ಆಗ ಸುಮಂತು ಬ್ರಾಹ್ಮಣನು ಹೆಂಡತಿಯಾದ ಕರ್ಕಶಿಯನ್ನು ಕರೆದು— ಎಲೈ ಸ್ತ್ರೀಯೇ, ನಮ್ಮ ಮಗಳು ಗಂಡನ ಸಂಗಡ ಬೇರೆ ಕಡೆಗೆ ಹೋಗುವಳು. ಅಳಿಯನಿಗೆ ಭೋಜನ ಮಾಡಿಸಬೇಕು. ಕಾರಣ

ಬೇಗನೆ ಉತ್ತಮ ಅಡಿಗೆಯನ್ನು ಸಿದ್ಧಮಾಡು. ಎಂದು ಹೇಳಿದನು. ‖ ೧೬ ‖ ಈ ಪ್ರಕಾರ ಗಂಡನ ಮಾತು ಕೇಳಿದಕೂಡಲೆ ಆಕೆಗೆ ಏನಾಯಿತೋ ಏನೋ ಅವಳು ಓಡುತ್ತ ಓಡುತ್ತ ಮನೆಯೊಳಗೆ ಹೋಗಿ ಬಾಗಿಲವನ್ನು ಗಟ್ಟಿಯಾಗಿ ಇಕ್ಕಿಕೊಂಡು ಅದಕ್ಕೆ ಕಲ್ಲು ಆನಿಸಿ, ಚಿಲಕವನ್ನೂ ಅಗಳಿಯನ್ನೂ ಹಾಕಿಕೊಂಡು ಕೂತಳು. ‖ ೧೭ ‖ ಆಗ ಸುಮಂತು ಬ್ರಾಹ್ಮಣನು ವಿನಯದಿಂದ ಎಷ್ಟು ಹೇಳಿದರೂ ಆಕೆಯು ಬಾಗಿಲ ತೆಗೆಯಲಿಲ್ಲ. ಆಗ ಅವನು ಆ ಬಾಗಿಲಿಗೆ ತಲೆಯನ್ನು ಅಪ್ಪಳಿಸಿದನು ಅದನ್ನು ಕಂಡು ಸುಶೀಲೆಯು ತಂದೆಯ ಕೈ ಹಿಡಿದು– ಅಪ್ಪಾ, ಇರಲಿಬಿಡು ! ನಾವು ಹಾಗೇ ಹೋಗುವೆವು ಎಂದಳು. ‖ ೧೮ ‖ ಆಗ ಸುಮಂತ ಬ್ರಾಹ್ಮಣನು ಅಡಿಗೆಯಮನೆಯೊಳಗೆ ಹೋಗಲು ಬಾರದ್ದರಿಂದ ಒಂದು ಬರೇ ಕೈಯಿಂದ ಕಳಿಸಲಾರದೆ ಚೌಸೊಪ್ಪಿಯಲ್ಲಿ ಬಿದ್ದ ಸ್ವಲ್ಪ ತೌಡನ್ನು ಕೊಟ್ಟು ಅಳಿಯ ಮತ್ತು ಮಗಳಿಗೆ ಅಪ್ಪಣೆ ಕೊಟ್ಟನು ‖ ೧೯ ‖ ಆಗ ಕೌಂಡಿಣ್ಯನು ಸಂತೋಷದಿಂದ ಸತಿಯೊಡನೆ ರಥದಲ್ಲಿ ಕೂತುಕೊಂಡು ಹೊರಟನು ಹೋಗಹೋಗುತ್ತ ಮಧ್ಯಾಹ್ನವಾಗಲು ಅಲ್ಲಿರುವ ನದಿಯಲ್ಲಿ ಅನುಷ್ಠಾನ ಮಾಡುವದರದೆಶೆಯಿಂದ ಕೌಂಡಿಣ್ಯನು ರಥದಿಂದಿಳಿದ ‖ ೨೦ ‖ ಆ ನದೀತೀರಕ್ಕೆ ಹೋಗಿ ಸ್ನಾನ ಮಾಡಿ ಅನುಷ್ಠಾನ ಮಾಡುತ್ತ ಕೂತನು ಸುಶೀಲೆಯು ರಥದ ಹತ್ತರ ನಿಂತುಕೊಂಡು ಅತ್ತಿತ್ತ ನೋಡುತ್ತಿರಲು ಆ ನದಿಯ ದಂಡೆಯಲ್ಲಿರುವ ರಮ್ಯವಾದ ವನದಲ್ಲಿ ಅನೇಕ ಸ್ತ್ರೀಯರು ಇದ್ದದ್ದನ್ನು ನೋಡಿದಳು ‖ ೨೧ ‖ ಆ ಸ್ತ್ರೀಯರು ಕೆಂಪು ರೇಶ್ಮಿಯ ಪೀತಾಂಬರವನ್ನುಟ್ಟುಕೊಂಡು ಪ್ರತಿಯೊಬ್ಬರು ಬೇರೆ ಬೇರೆಯಾಗಿ ತಮ್ಮ ತಮ್ಮ ಕಲಶಗಳನ್ನಿಟ್ಟುಕೊಂಡು ಪೂಜೆ ಮಾಡುತ್ತಿದ್ದರು. ‖ ೨೨ ‖ ಸುಶೀಲೆಯು ಅದನ್ನು ನೋಡಿ ಮೆಲ್ಲ ಮೆಲ್ಲನೆ ಅವರ ಹತ್ತರ ಹೋಗಿ ವಿನಯದಿಂದ— ಅಪ್ಪಗಳಿರಾ, ಈಗ ನೀವು ಯಾವ ವ್ರತವನ್ನು ಮಾಡುವಿರಿ ? ಎಂದು ಕೇಳಿದಳು. ‖ ೨೩ ‖ ಆಗ ಆ ಸ್ತ್ರೀಯರು ಸುಶೀಲೆಯನ್ನು ಕುರಿತು— ಅಮ್ಮಾ, ಅನಂತ ವ್ರತವೆಂಬ ಒಂದು ವ್ರತವದೆ ಅದನ್ನು ನಾವು ಮಾಡುವೆವು. ವಿಧಿಪ್ರಕಾರ ಆ ಅನಂತನನ್ನು ಪೂಜಿಸಿದ ಕೂಡಲೆ ಸಕಲಾಭೀಷ್ಟಗಳು ಸಾಧಿಸುವವು ಎಂದು ಹೇಳಿದರು. ‖ ೨೪ ‖ ಆಗ ಸುಶೀಲೆಯು ಆ ಸ್ತ್ರೀಯರಿಗೆ— ಅಮ್ಮಗಳಿರಾ, ನೀವು ನನ್ನ

ಮೇಲೆ ಕೃಪಾಮಾಡಿ, ಈ ವ್ರತದ ವಿಧಾನವನ್ನು ನನಗೆ ವಿಸ್ತಾರವಾಗಿ ಹೇಳಬೇಕು ಎಂದು ಬೇಡಿಕೊಂಡಳು. ‖ ೭೫ ‖ ಆಗ ಆ ಎಲ್ಲ ಸ್ತ್ರೀಯರು— ಅವ್ವಾ, ಸುಶೀಲಾ, ಕೂಡ್ರು, ನಿನಗೆ ಈ ಅನಂತ ವ್ರತದ ಎಲ್ಲ ವಿಧಾನವನ್ನು ಆದ್ಯಂತವಾಗಿಯೂ ವಿಸ್ತಾರವಾಗಿಯೂ ಹೇಳುವೆವು ಕೇಳು. ‖ ೭೬ ‖ ಭಾದ್ರಪದ ಶುಕ್ಲ ಪಕ್ಷ ಚತುರ್ದಶೀದಿವಸ ಪ್ರಖ್ಯಾತವಾದ ಈ ಅನಂತ ವ್ರತವನ್ನು ಮಾಡಬೇಕು. ಪೂಜಾ ಮಾಡುವ ಸ್ಥಳವನ್ನು ಸಾರಿಸಿ, ರಂಗವಲ್ಲಿ ತಳಿರು-ತೋರಣಗಳಿಂದ ಅಲಂಕರಿಸಿ, ದೇವರನ್ನು ಕೂಡ್ರಿಸಲಿಕ್ಕೆ ಒಂದು ಉತ್ತಮ ಪೀಠವನ್ನಿಡಬೇಕು. ‖ ೭೭ ‖ ಆಮೇಲೆ ಕೆಂಪುಪಟ್ಟೆಯ ದಾರದಿಂದಾಗಲಿ ಅಥವಾ ಕೆಂಪು ರೇಸ್ಮೆಯಿಂದಾಗಲಿ ೧೪ ಗಂಟುಗಳುಳ್ಳ ಅನಂತನ ದಾರವನ್ನು ಸಿದ್ಧ ಮಾಡಿಕೊಳ್ಳಬೇಕು. ಮನೆಯಲ್ಲಿ ಪೂಜಾ ಮಾಡುವದಿದ್ದು ನದಿಯು ಸಮೀಪವಾಗಿರದಿದ್ದರೆ ಮನೆಯಲ್ಲಿಯೇ ಮಂಗಳ ಸ್ನಾನವನ್ನುಮಾಡಿ ವಿಧಿಪ್ರಕಾರ ಪೂಜಾಮಾಡಬೇಕು. ನದಿಯ ದಂಡೆಯಮೇಲೆ ಪೂಜಾ ಮಾಡುವದಿದ್ದರೆ ಆ ದಾರವನ್ನೂ ಗಂಗಾ-ಯಮುನಾ ಎಂಬ ಎರಡು ಹೊಸ ಕಲಶಗಳನ್ನೂ ನದಿಗೆ ತಕ್ಕೊಂಡು ಹೋಗಿ, ಆ ನದಿಯಲ್ಲಿ ವಿಧಿಪ್ರಕಾರ ಮಂಗಳಸ್ನಾನ ಮಾಡಬೇಕು ‖ ೭೮ ‖ ಆಮೇಲೆ ದಿವ್ಯವಾದ ವಸ್ತ್ರವನ್ನುಟ್ಟು ಅರಿಷಿಣ-ಕುಂಕುಮಾದಿಗಳನ್ನು ಹಚ್ಚಿಕೊಂಡು ಅನೇಕ ಅಲಂಕಾರ ಮಾಡಿಕೊಂಡು ಗಂಗಾ-ಯಮುನಾ ಎಂಬ ಆ ಎರಡು ಕಲಶಗಳನ್ನು ತಕ್ಕೊಳ್ಳಬೇಕು. ‖ ೭೯ ‖ ಅವುಗಳಲ್ಲಿ ನೀರು ತುಂಬಿ ತಂದು, ಅವುಗಳಲ್ಲಿ ಪಂಚ ಪಲ್ಲವಾದಿಗಳನ್ನೂ ರತ್ನಗಳನ್ನೂ ಹಾಕಿ ಅವುಗಳನ್ನು ಮೊದಲು ಸಿದ್ಧಮಾಡಿದ ಪೀಠದಲ್ಲಿಟ್ಟು, ತೀವ್ರವಾಗಿ ಷೋಡಶೋಪಚಾರ ವಿಧಿಯಿಂದ ಪೂಜಾ ಮಾಡಬೇಕು. ‖ ೮೦ ‖ ಆಮೇಲೆ ಗಂಗಾ-ಯಮುನಾ ಕಲಶಗಳಿಗೆ ನಾನಾಪ್ರಕಾರದ ಆರತಿಗಳನ್ನು ಮಾಡಬೇಕು. ಆಮೇಲೆ ದರ್ಭೆಯಿಂದ ಮಾಡಿದ ಏಳು ಹೆಡೆಯ ಶೇಷರೂಪನಾದ ಅನಂತನನ್ನು ಪೂಜಿಸಬೇಕು ಅದರ ವಿಧಾನವನ್ನು ಹೇಳುವೆವು ಕೇಳು. ‖ ೮೧ ‖ ಆ ಎರಡೂ ಕಲಶಗಳಮೇಲೆ ಹೊಸ ವಸ್ತ್ರವನ್ನು ಹೊಚ್ಚಿ, ಅದರಮೇಲೆ ಅಷ್ಟದಳದ ಪದ್ಮವನ್ನು ಬರೆದು, ಅದರಮೇಲೆ ಆ ದರ್ಭೆಯ ಶೇಷವನ್ನು ಇಡಬೇಕು. ‖ ೮೨ ‖ ಆ ಕಲಶಗಳ ಮುಂದೆ ಪಂಚ

ವರ್ಣದ ಪುಡಿಗಳಿಂದ ಶಂಖ, ಚಕ್ರ, ಗದಾ, ಪದ್ಮಾದಿ ಅನೇಕ ರಂಗೋಲಿಗಳನ್ನು ಹಾಕಬೇಕು. ॥ ೮೩ ॥ ಆಮೇಲೆ ಮನಸಿನಲ್ಲಿ ಆ ದರ್ಭೆಯ ಶೇಷವನ್ನು ಶೇಷಶಾಯಿಯಾದ ವಿಷ್ಣುವೆಂದು ಧ್ಯಾನಿಸಿ ಷೋಡಶೋಪಚಾರ ವಿಧಿಯಿಂದ ಉತ್ತಮವಾಗಿ ಪೂಜಿಸಬೇಕು ॥ ೮೪ ॥ ಯಾಕಂದರೆ ಸಪ್ತಹೆಡೆಯ ಶೇಷನಮೇಲೆ ಶ್ರೀವಿಷ್ಣುವು ಸದಾ ಮಲಗಿರುವದರಿಂದ ಅವನಿಗೆ ಅನಂತನೆಂಬ ಹೆಸರು ಬಂದಿದೆ. ಕಾರಣ ಈ ಪ್ರಕಾರ ಧ್ಯಾನ ಮಾಡಬೇಕು ॥ ೮೫ ॥ ಹ್ಯಾಗಂದರೆ ಪಿಂಗಲಾಕ್ಷನಾದಂಥ, ಬಲದ ಎರಡು ಕೈಗಳಲ್ಲಿ ಶಂಖ ಮತ್ತು ಪದ್ಮಗಳನ್ನೂ ಎಡದ ಎರಡು ಕೈಗಳಲ್ಲಿ ಚಕ್ರ ಮತ್ತು ಗದಾಗಳನ್ನೂ ಧರಿಸಿದ ನಾಲ್ಕು ಕೈಗಳುಳ್ಳಂಥ ಮೂರ್ತಿಯನ್ನು ನೀನು ಧ್ಯಾನಿಸಬೇಕು. ॥ ೮೬ ॥ ಆಮೇಲೆ **ಓಂ ನಮೋ ಭಗವತೇ** ಎಂಬ ಮಂತ್ರದಿಂದ ಆ ದರ್ಭೆಯ ಶೇಷನನ್ನು ಷೋಡಶೋಪಚಾರ ವಿಧಿಯಿಂದ ಪೂಜಿಸಬೇಕು. ಆಮೇಲೆ ಆ ಹೊಸ ದಾರವನ್ನು ತಂದು ಹಿಡಕೊಂಡು ಅಲ್ಲಿ ಮತ್ತೆ ವಿಷ್ಣುವನ್ನು ಧ್ಯಾನಿಸಬೇಕು. ॥ ೮೭ ॥ ಆಮೇಲೆ **ಅನಂತ ಗುಣರತ್ನಯ** ಎಂಬ ಮಂತ್ರದಿಂದ ಆ ಹೊಸ ದಾರವನ್ನು ಆ ಕಲಶದ ಮೇಲೆ ಇಟ್ಟು, **ಪುರುಷಸೂಕ್ತ**ದಿಂದಲೂ **ಅತೋ ದೇವಾ** ಎಂಬ ಮಂತ್ರದಿಂದಲೂ ॥ ೮೮ ॥ ಷೋಡಶೋಪಚಾರ ವಿಧಿಯಿಂದಲೂ ಪೂಜಾ ಮಾಡಿ **ಸಂಸಾರಗವ್ಹರ** ಎಂಬ ಮಂತ್ರದಿಂದ ಆ ಹೊಸ ದಾರವನ್ನು ಬಲಗೈಯಲ್ಲಿ ಕಟ್ಟಿಕೊಳ್ಳಬೇಕು. **ನಮಸ್ತ ವಾಸುದೇವ** ಎಂಬ ಮಂತ್ರದಿಂದ ಹಳೇ ದಾರವನ್ನು ಬಿಚ್ಚಿಬಿಡಬೇಕು. ॥ ೮೯ ॥ **ದಾತಾ ಚ ವಿಷ್ಣು ಭಗವಾನ್** ಎಂದು ಅನ್ನುತ್ತ ಒಂದು ಶೇರು ಗೋದಿ, ಒಂದು ಶೇರು ತುಪ್ಪ, ಬೆಲ್ಲ, ಫಲ ಸಹಿತ ವಾಯನದಾನ ಕೊಡಬೇಕು. ॥ ೯೦ ॥ ಆಮೇಲೆ ಕರ್ಜೀಕಾಯಿ, ಚಕ್ಕಲಿ, ಕರಿಗಡಬು ಮೊದಲಾದ ಅಪೂಪಗಳಲ್ಲಿ ಹಾಗು ಪಾಯಸಗಳಲ್ಲಿ ಅರ್ಧವನ್ನು ತಾಂಬೂಲ ದಕ್ಷಿಣೆ ಸಹಿತವಾಗಿ ಬ್ರಾಹ್ಮಣನಿಗೆ ದಾನ ಕೊಟ್ಟು ಉಳಿದ ಅರ್ಧವನ್ನು ತಾನು ಉಣ್ಣಬೇಕು ॥ ೯೧ ॥ ಈ ಪ್ರಕಾರ ೧೪ ವರುಷ ಒಳ್ಳೇ ಭಕ್ತಿಯಿಂದ ವಿಶೇಷವಾಗಿ ಆಚರಿಸಿ ಆಮೇಲೆ ಉದ್ಯಾಪನೆ ಮಾಡುವಾಗ ೧೪ ಕಲಶಗಳನ್ನು ಇಡಬೇಕು. ॥ ೯೨ ॥ ಆಮೇಲೆ ವಿಧಿಪೂರ್ವಕ ಪೂಜಾ ಮಾಡಿ ಭಕ್ತಿಯಿಂದ ೧೪ ದಂಪತ್ತುಗಳಿಗೂ

ಇನ್ನು ಅನೇಕ ಬ್ರಾಹ್ಮಣರಿಗೂ ಭೋಜನ ಮಾಡಿಸಿ, ವಸ್ತ್ರ ಸಹಿತವಾದ ೧೪ ಕಲಶಗಳನ್ನು ಆ ೧೪ ಮಂದಿ ಬ್ರಾಹ್ಮಣರಿಗೆ ದಾನ ಮಾಡಬೇಕು. ಈ ಪ್ರಕಾರ ಭಕ್ತಿಯಿಂದ ಮಾಡಿದ ಕೂಡಲೆ ಮನಸ್ಸಿನ ಕಾಮನಾಗಳು ಸಂಪೂರ್ಣವಾಗಿ ಸಿದ್ಧಿಸುವವಲ್ಲದೆ ಚತುರ್ವಿಧ ಪುರುಷಾರ್ಥಗಳು ಸಾಧಿಸುವವು. ಆದರಿಂದ ಐಶ್ವರ್ಯವಂತ ರಾಗುವರು. || ೯೩ || ಆದಕಾರಣ ಎಲೌ ಸುಶೀಲೇ ಈ ದಿವಸ ಅನಂತಚತುರ್ದಶಿ ಇದ್ದದರಿಂದ ನೀನೂ ತೀವ್ರವಾಗಿ ನಮ್ಮ ಸಂಗಡ ಈ ವ್ರತವನ್ನು ಮಾಡು ಎಂದು ಆ ಸ್ತ್ರೀಯರು ಆಕೆಗೆ ವಿಸ್ತಾರವಾಗಿ ಎಲ್ಲ ಸಂಗತಿ ಯನ್ನು ಹೇಳಿ || ೯೪ || ಯಾವತ್ತೂ ಸ್ತ್ರೀಯರೂ ಕೂಡಿ ೧೪ ಗಂಟುಗಳುಳ್ಳ ಒಂದು ಅನಂತನ ದಾರವನ್ನು ಕೊಟ್ಟು, ತಮ್ಮೊಡನೆ ಆಕೆಯ ಕಡೆಯಿಂದ ವಿಧಿಪ್ರಕಾರ ಪೂಜಾ ಮಾಡಿಸಿ ಆ ದಾರವನ್ನು ಆಕೆಯ ಬಲಗೈಯಲ್ಲಿ ಕಟ್ಟಿದರು. || ೯೫ || ಆಮೇಲೆ ಆ ಸುಶೀಲೆಯು ತಾನು ತಂದ ಗೋದಿಯ ಹಿಟ್ಟಿನಲ್ಲಿ ಅರ್ಧವನ್ನು ವಾಯನ ದಾನವಾಗಿ ಬ್ರಾಹ್ಮಣನಿಗೆ ಕೊಟ್ಟು ಆ ಎಲ್ಲ ಸ್ತ್ರೀಯರ ಅಪ್ಪಣೆಯನ್ನು ತಕ್ಕೊಂಡು || ೯೬ || ಅವರೆಲ್ಲರಿಗೂ ವಿನಯದಿಂದ ಬಹುರೀತಿಯಾಗಿ ನಮಸ್ಕಾರ ಮಾಡಿ ತನ್ನ ರಥದ ಹತ್ತರ ಬಂದಳು. ಅಷ್ಟರಲ್ಲಿ ಕೌಂಡಿಣ್ಯ ಋಷಿಯು ತನ್ನ ಅನುಷ್ಠಾನವನ್ನು ತೀರಿಸಿಕೊಂಡು ಕೂಡಲೆ ರಥದ ಹತ್ತರ ಬಂದನು || ೯೭ || ಆಮೇಲೆ ಆವನು ತನ್ನ ಹೆಂಡತಿಯನ್ನು ಕುರಿತು— ನಡೆ, ಇನ್ನು ಹೋಗೋಣ ಎಂದು ಹೇಳಿ ಇಬ್ಬರೂ ರಥವನ್ನು ಹತ್ತಿ ಹೋಗುತ್ತಿದ್ದರು ಸುಶೀಲೆಯು ಮಾಡಿದ ಅನಂತವ್ರತದ ಮಹಿಮೆಯಿಂದ ದಾರಿಯಲ್ಲಿ ಐಶ್ವರ್ಯಯುಕ್ತವಾದ "**ಅಮರಾವತಿ**" ಎಂಬ ಪಟ್ಟಣವು ನಿರ್ಮಾಣವಾಗಿತ್ತು. ಅವರು ಆ ಪಟ್ಟಣವನ್ನು ಕಂಡರು. || ೯೮ || ಆದಕ್ಕೆ ಒಡೆಯರು ಯಾರೂ ಇದ್ದಿಲ್ಲ. ಕೌಂಡಿಣ್ಯನು ಆ ಪಟ್ಟಣದ ಸಮೀಪಕ್ಕೆ ಬರಲು ಆ ನಗರದ ಜನರು ಎದುರಾಗಿ ಬಂದು— ಸ್ವಾಮೀ, ತಪೋನಿಧಿ ಮಹಾರಾಜರೇ, ಇತ್ತ ಬರ್ರಿ. ನೀವು ಈ ನಗರದ ಅಧಿಪತಿಗಳು ಎಂದು ಹೇಳಿದರು. || ೯೯ || ಆಗ ಆ ದಂಪತಿಗಳು ನಾನಾಪ್ರಕಾರದ ಸಮಾರಂಭದಿಂದ ಆ ನಗರವನ್ನು ಪ್ರವೇಶ ಮಾಡಿ, ಶ್ರೀ ಅನಂತನ ಪ್ರಸಾದದಿಂದ ರಾಜ್ಯವನ್ನು ಹೊಂದಿ ಬಹು ರೀತಿಯಿಂದ

ಐಶ್ವರ್ಯವನ್ನು ಭೋಗಿಸುತ್ತಿದ್ದರು. ॥ ೧೦೦ ॥ ಈ ಪ್ರಕಾರವಾದ ಎಷ್ಟೋ ದಿವಸಗಳಮೇಲೆ ಒಂದು ದಿವಸ ಕೌಂಡಿಣ್ಯನು ಹೆಂಡತಿಯೊಡನೆ ಸಂತೋಷದಿಂದ ಮಾತಾಡುತ್ತ ಕೂತಾಗ ಆಕೆಯ ಕೈಯೊಳಗಿನ ಅನಂತನ ದಾರವನ್ನು ನೋಡಿ, ॥ ೧೦೧ ॥ ಆಗ ಆಕೆಯನ್ನು ಕುರಿತು— ಎಲೈ ಸ್ತ್ರೀಯೇ, ಇದೇನು ? ಕೈಯೊಳಗೆ ಕೆಂಪು ದಾರವನ್ನೇಕೆ ಕಟ್ಟಿರುವಿ ? ನನ್ನ ವಶೀಕರಣಕ್ಕಾಗಿ ಕಟ್ಟಿರುವಿಯೋ ಏನು ಎಂದು ಕೇಳಿದನು. ॥ ೧೦೨ ॥ ಆಗ ಆ ಸುಶೀಲೆಯು ತನ್ನ ಪತಿಯನ್ನು ಕುರಿತು— ಸ್ವಾಮೀ, ಇದು ಅನಂತನ ದಾರವು. ಇದರ ಪ್ರಸಾದದಿಂದಲೇ ನಿಮಗೆ ಈ ಅಷ್ಟೈಶ್ವರ್ಯವು ಪ್ರಾಪ್ತವಾಗಿದೆ. ॥ ೧೦೩ ॥ ನಾನು ಯಾವದಿವಸ ಅನಂತ ವ್ರತವನ್ನು ಮಾಡಿದೆನೋ ಆಗ ಆತನ ಅನುಗ್ರಹದಿಂದ ನಿಮ್ಮ ದೈವವು ಒದಗಿ ಬಂದು, ನೀವು ಇಷ್ಟು ವೈಭವಶಾಲಿಗಳಾಗಿರುವಿರಿ ನೋಡಿರಿ ಎಂದು ಹೇಳಿದಳು. ॥ ೧೦೪ ॥ ಆಕೆಯ ಮಾತು ಕೇಳಿದಕೂಡಲೆ ಆ ಕೌಂಡಿಣ್ಯನು ಅತ್ಯಂತ ಸಿಟ್ಟಾಗಿ ಆಕೆಯ ಕೈಯೊಳಗಿನ ದಾರವನ್ನು ಕಸುವಿನಿಂದ ಕಿತ್ತಿಕೊಂಡು ॥ ೧೦೫ ॥ ಎಲ್ಲಿಯ ಅನಂತನು ! ನಾನು ಅತ್ಯಂತ ತಪಸ್ಸು ಮಾಡಿರುವೆನು ಅದರಿಂದ ನನಗೆ ಈ ಅದ್ಭುತ ಐಶ್ವರ್ಯವು ಬಂದಿದೆ. ॥ ೧೦೬ ॥ ನನ್ನ ವಶೀಕರಣಕ್ಕಾಗಿ ನೀನು ಕೈಯಲ್ಲಿ ಈ ದಾರವನ್ನು ಕಟ್ಟಿಕೊಂಡು ಅನಂತನ ದಾರವೆಂದು ಹೇಳುತ್ತಿ, ಎಂದು ಆಕೆಯ ಮೇಲೆ ಸಿಟ್ಟಾಗಿ ಆ ದಾರವನ್ನು ಅಗ್ನಿಯಲ್ಲಿ ಒಗೆದನು. ॥ ೧೦೭ ॥ ಆಗ ಸುಶೀಲೆಯು ಅಯ್ಯೋ ! ಅಯ್ಯೋ ! ಎಂದೆನ್ನುತ್ತ ಓಡುತ್ತ ಆ ಅಗ್ನಿಹತ್ತರ ಹೋಗಿ ಆ ದಾರವನ್ನು ತೆಗೆದು ಹಾಲಿನಲ್ಲಿ ಹಾಕಿದಳು ಆ ದಾರವು ಸ್ವಲ್ಪ ಸುಟ್ಟು ಕಪ್ಪಾಗಿತ್ತು. ॥ ೧೦೮ ॥ ಕೌಂಡಿಣ್ಯಮುನಿಯು ಈ ಪ್ರಕಾರ ಅನಂತ ದಾರವನ್ನು ಬೆಂಕಿಯಲ್ಲಿ ಒಗೆದ ಕೂಡಲೆ ಅವನ ಐಶ್ವರ್ಯವೆಲ್ಲ ನಾಶವಾಗಿ ಅವನು ದರಿದ್ರನಾದನು. ॥ ೧೦೯ ॥ ಆ ನಗರದೊಳಗಿನ ಯಾವತ್ತು ಜನರು ಅವನ ವೈರಿಗಳಾದರು. ಅವನ ಯಾವತ್ತು ವಸ್ತು-ಒಡವೆಗಳನ್ನೂ ಗೋಧನವನ್ನೂ ಕಳ್ಳರು ಕದ್ದೊಯ್ದರು. ಅದರಿಂದ ಅವನು ಮತ್ತಿಷ್ಟು ದರಿದ್ರನಾದನು. ॥ ೧೧೦ ॥ ಅವನ ಮನೆಯು ಕೂಡಲೆ ಸುಟ್ಟು ಹೋಯಿತು. ಒಂದು ವಸ್ತ್ರ ಸಹ ಉಳಿಯಲಿಲ್ಲ. ರಮಾಕಾಂತನಾದ ಅನಂತನ ಅವಕೃಪೆಯಾದಕೂಡಲೆ ಅವನ

ಸರ್ವಸ್ವವೂ ನಾಶವಾಯಿತು. ‖ ೧೧೧ ‖ ಆಗ ಕೌಂಡಿಣ್ಯನು ಮನಸಿನಲ್ಲಿ ಆಲೋಚಿಸುತ್ತ— ನಾನು ಮದಾಂಧನಾಗಿ ಸುಮ್ಮನೆ ಆ ದಾರವನ್ನು ಅಗ್ನಿಯಲ್ಲಿ ಹಾಕಿದ್ದರಿಂದ ಆ ಅನಂತನು ನಮ್ಮಮೇಲೆ ಸಿಟ್ಟಾಗಿರುವನು. ‖೧೧೨‖ ಆದಕಾರಣ ಈಗ ನಾನೊಂದು ನೇಮವನ್ನು ಮಾಡುವೆನು. ಏನಂದರೆ— ಶ್ರೀ ಲಕ್ಷ್ಮೀಪತಿಯಾದ ಅನಂತನು ನನಗೆ ಭೆಟ್ಟಿಯಾಗುವವರೆಗೆ ನಾನು ಅನ್ನ-ನೀರುಗಳನ್ನು ತಕ್ಕೊಳ್ಳುವದಿಲ್ಲ. ‖ ೧೧೩ ‖ ಎಂದು ಒಳ್ಳೇ ಕಠಿಣರೀತಿ ನಿಶ್ಚಯ ಮಾಡಿ, ಆ ಕೌಂಡಿಣ್ಯನು ತನ್ನ ಹೆಂಡತಿಯೊಡನೆ ಘೋರವಾದ ಅರಣ್ಯದಲ್ಲಿ ಹೊಕ್ಕು ‖ ೧೧೪ ‖ ಹೇ ಅನಂತಾ ! ಹೇ ಅನಂತಾ ! ಎಂದೆನ್ನುತ್ತ, ಅಡವಿಯಲ್ಲಿ ತೀವ್ರ ತೀವ್ರವಾಗಿ ಹೋಗುತ್ತ ಮುಂದೆ ಹೂವು-ಹಣ್ಣು-ಕಾಯಿಗಳಿಂದ ತುಂಬಿದಂಥ ಒಂದು ಮಾವಿನ ಮರವನ್ನು ಕಂಡನು. ‖ ೧೧೫ ‖ ಆದನ್ನು ಒಂದಾದರೂ ಹುಳ, ಪಕ್ಷಿ ಮುಂತಾದವು ಮುಟ್ಟಿದ್ದಿಲ್ಲ. ಆದನ್ನು ಕಂಡು ಕೌಂಡಿಣ್ಯನು— ಎಲೈ ಮರವೇ, ನೀನು ಅನಂತನನ್ನು ನೋಡಿರುವಿಯಾ ? ಎಂದು ಕೇಳಿದನು. ‖ ೧೧೬ ‖ ಆಗ ಆ ವೃಕ್ಷವು— ಎಲೈ ಬ್ರಾಹ್ಮಣನೇ, ನಾನಂತೂ ಅನಂತನನ್ನು ನೋಡಿಲ್ಲ. ನೀನು ನೋಡಿದ್ದರೆ ಮಾತ್ರ ನನ್ನದೆಶೆಯಿಂದ ಆ ಅನಂತನಿಗೆ ಹೇಳು ಎಂದಿತು ‖೧೧೭‖ ಈ ಪ್ರಕಾರ ಆ ವೃಕ್ಷದ ಮಾತು ಕೇಳಿ ಕೌಂಡಿಣ್ಯನು ಮುಂದೆ ನಡೆದನು. ಅಲ್ಲಿ ಬೇಕಾದಷ್ಟು ಹುಲ್ಲು ಬೆಳೆದಿತ್ತು. ಸವತ್ಸವಾದ ಒಂದು ಆಕಳು ಆ ಹುಲ್ಲಿನಲ್ಲಿ ಅಡ್ಡಾಡುತ್ತಿದ್ದರೂ ಸಹ ಅದಕ್ಕೆ ಬಾಯಿಂದ ತಿನ್ನಲಿಕ್ಕೆ ಬರುತ್ತಿದ್ದಿಲ್ಲ. ‖ ೧೧೮ ‖ ಆಗ ಆ ಕೌಂಡಿಣ್ಯಮುನಿಯು ಆ ಹಸುವನ್ನು ಕುರಿತು— ಎಲೈ ಹಸುವೇ, ನೀನು ಒಂದುವೇಳೆ ಶ್ರೀ ಅನಂತನನ್ನು ನೋಡಿದ್ದರೆ ಕೃಪಾಮಾಡಿ ನನಗೆ ಹೇಳು ಎಂದನು ‖ ೧೧೯ ‖ ಆಗ ಆ ಧೇನುವು— ಸ್ವಾಮೀ, ನಾನು ಅನಂತನನ್ನು ನೋಡಿಲ್ಲ. ಒಂದುವೇಳೆ ನೀನು ಅವನಿಗೆ ಭೆಟ್ಟಿಯಾದರೆ ಈ ಪ್ರಕಾರವಾಗಿರುವ ನನ್ನ ಅವಸ್ಥೆಯನ್ನು ಹೇಳು ಎಂದಿತು. ‖ ೧೨೦ ‖ ಈ ಪ್ರಕಾರ ಆ ಧೇನುವಿನ ಮಾತು ಕೇಳಿ ಕೌಂಡಿಣ್ಯನು ಮುಂದೆ ಹೋಗುತ್ತ ಅಲ್ಲಿ ಹುಲ್ಲು ತಿನ್ನದೆ ನಿಂತಂಥ ಒಂದು ದೊಡ್ಡ ಎತ್ತನ್ನು ಕಂಡು ಅದನ್ನು ಕುರಿತು— ಎಲೈ ವೃಷಭನೇ, ನೀನು ಅನಂತನನ್ನು ನೋಡಿದೆಯಾ ? ಎಂದು ಕೇಳಿದನು. ‖ ೧೨೧ ‖ ಆಗ ಆ ವೃಷಭವು—

ಅಯ್ಯಾ, ನಾನು ಅನಂತನನ್ನು ನೋಡಿಲ್ಲ. ನೀನು ಒಂದು ವೇಳೆ ನೋಡಿದ್ದರೆ ದಯಮಾಡಿ ನನ್ನ ವಿಷಯವಾಗಿ ಆತನಿಗೆ ವಿನಂತೀ ಮಾಡಿಕೋ ಎಂದು ಹೇಳಿತು. ॥ ೧೨೨ ॥ ಮತ್ತೆ ಕೌಂಡಿಣ್ಯನು ಮುಂದೆ ಹೋಗುತ್ತ ಎರಡು ರಮ್ಯವಾದ ಸರೋವರಗಳನ್ನು ನೋಡಿದನು ಅವುಗಳಲ್ಲಿ ಒಂದರ ನೀರು ಮತ್ತೊಂದಕ್ಕೆ ಮತ್ತೊಂದರ ನೀರು ಒಂದನೇದಕ್ಕೆ ಬರುತ್ತಿತ್ತು. ಆದರೆ ಅವುಗಳಲ್ಲಿ ಹಂಸ ಮೊದಲಾದ ಪಕ್ಷಿಗಳು ಇದ್ದಿಲ್ಲ. ॥ ೧೨೩ ॥ ಕಮಲ-ಕುಮುದ ಮೊದಲಾದ ಪುಷ್ಪಗಳಿಂದ ಶೋಭಿಸುತ್ತಿತ್ತು. ಆ ಸರೋವರಗಳನ್ನು ಕುರಿತು ಕೌಂಡಿಣ್ಯನು— ಅನಂತನನ್ನು ನೋಡಿದಿರಾ? ಎಂದು ಕೇಳಿದನು. ॥ ೧೨೪ ॥ ಆಗ ಆ ಸರೋವರಗಳು— ನಾವೂ ಎಂದೂ ಅನಂತನನ್ನು ನೋಡಿಲ್ಲ. ನಿನಗೆ ಭೆಟ್ಟಿಯಾದರೆ ನಮ್ಮ ಬಗ್ಗೆ ಆ ಅನಂತನಿಗೆ ಹೇಳಬೇಕು ಎಂದು ಅಂದವು. ॥ ೧೨೫ ॥ ಮತ್ತೆ ಆ ಬ್ರಾಹ್ಮಣನು ಮುಂದೆ ಹೋಗುತ್ತಿರುವಾಗ ಒಂದು ಕತ್ತೆಯನ್ನೂ ಒಂದು ಆನೆಯನ್ನೂ ಕಂಡು— ನೀವು ಅನಂತನನ್ನು ನೋಡಿದಿರಾ? ಎಂದು ಕೇಳಿದನು ಅವು ಏನೂ ಹೇಳಲಿಲ್ಲ. ॥ ೧೨೬ ॥ ಆಗ ಅವನು ಅತ್ಯಂತ ನಿರ್ವಿಣ್ಣನಾಗಿ ಅನಂತ, ಅನಂತ ಎಂದೆನ್ನುತ್ತ ಭೂಮಿಯಮೇಲೆ ಬಿದ್ದು ತನ್ನ ಪ್ರಾಣವನ್ನು ಬಿಡಲು ಉದ್ಯುಕ್ತನಾದನು. ॥ ೧೨೭ ॥ ಆಕೂಡಲೆ ಶ್ರೀಮದನಂತನು ವೃದ್ಧ ಬ್ರಾಹ್ಮಣನ ವೇಷವನ್ನು ತಕ್ಕೊಂಡು ಅವನ ಹತ್ತರ ಬಂದು ಎಲೈ ಕೌಂಡಿಣ್ಯನೇ, ಏಳು ಏಳು ಎಂದು ಒದರಿ ॥ ೧೨೮ ॥ ಎಲೈ ಬ್ರಾಹ್ಮಣಾ, ನೀನು ಏನು ಕೇಳುತ್ತೀ? ಶ್ರೀಮದನಂತನು ಎಲ್ಲಿದ್ದಾನೆಂದು ಕೇಳುತ್ತೀಯಷ್ಟೇ? ನನ್ನಸಂಗಡ ಬಾ ನಿನಗೆ ಅನಂತನನ್ನು ತೋರಿಸುತ್ತೇನೆ ಎಂದು ಅವನ ಬಲಗೈಯನ್ನು ಹಿಡಿದು ॥ ೧೨೯ ॥ ಎಬ್ಬಿಸಿ ಅವನನ್ನು ತನ್ನ ಸಂಗಡ ಕರಕೊಂಡು ಒಂದು ಗವಿಯೊಳಗೆ ಹೊಕ್ಕನು. ಆಗ ಕೌಂಡಿಣ್ಯನು ಅಲ್ಲಿ ಒಂದು ನಗರವನ್ನು ಕಂಡು ಮಹದಾಶ್ಚರ್ಯವನ್ನು ಹೊಂದಿ ನೋಡುತ್ತಿದ್ದನು. ॥ ೧೩೦ ॥ ಆ ಮುದುಕನು ಅವನನ್ನು ಆ ನಗರದೊಳಗೆ ಕರಕೊಂಡು ಹೋಗಿ ರತ್ನಖಚಿತ ಸಿಂಹಾಸನದಲ್ಲಿ ಅವನನ್ನು ಕೂಡ್ರಿಸಿ, ತಾನು ಅವನಿಗೆ ತನ್ನ ನಿಜರೂಪವನ್ನು ತೋರಿಸಿದನು. ॥ ೧೩೧ ॥ ಅನಂತನ ನಿಜರೂಪವನ್ನು ಕಂಡು ಕೌಂಡಿಣ್ಯನು ಅವನ ಚರಣದಲ್ಲಿ ಮಸ್ತಕವನ್ನಿಟ್ಟು,

ವಿನಯದಿಂದ ಕೈ ಮುಗಿದುಕೊಂಡು ನಿಂತು ಅತಿ ಗಹನವಾಗಿ ಸ್ತೋತ್ರ ಮಾಡಹತ್ತಿದನು. ॥ ೧೩೨ ॥ ನಮಸ್ಕಾರ ಗೋವಿಂದಾ ನಿನಗೆ ನಮಸ್ಕಾರ. ಜಯ ಜಯ ಶ್ರೀ ವತ್ಸಲಾ, ಸಚ್ಚಿದಾನಂದಾ, ನಿನ್ನ ಸ್ಮರಣ ಮಾತ್ರದಿಂದ ಸರ್ವ ದುಃಖಗಳೂ ಮದವೂ ಪಾಪಗಳೂ ನಾಶವಾಗಿ ಹೋಗುವವು. ॥ ೧೩೩ ॥ ನೀನು ವರೇಣ್ಯ ಯಜ್ಞಪುರುಷನಾಗಿ ತ್ರೈಮೂರ್ತಿ ಸ್ವರೂಪನಾಗಿರುತ್ತೀ, ನಿನ್ನ ದರ್ಶನ ಮಾತ್ರದಿಂದ ಕೂಡಲೆ ಯಾವತ್ತು ದೋಷಗಳು ನಾಶವಾಗಿ ಹೋಗುವವು. ॥ ೧೩೪ ॥ ವೈಕುಂಠವಾಸಿಯೇ, ನಾರಾಯಣನೇ, ಲಕ್ಷ್ಮೀನಿವಾಸನೇ, ಜಗದ್ವ್ಯಾಪಿಯೇ, ಅನಂತಕೋಟಿ ಬ್ರಹ್ಮಾಂಡಗಳನ್ನು ಪ್ರತಿಪಾಲಿಸುವವನೇ ನಿನಗೆ ನಮಸ್ಕಾರ. ॥ ೧೩೫ ॥ ದೇವಾ, ನಾನು ಪಾಪಿಯೂ, ಪಾಪಕರ್ಮಿಯೂ, ಪಾಪಾತ್ಮನೂ, ಪಾಪಸಂಭವನೂ ಅಧರ್ಮಿಯೂ ಆಗಿದ್ದೇನೆ. ನಿನ್ನಲ್ಲಿ ಭಕ್ತಿಯನ್ನು ಮಾಡಲಿಕ್ಕೆ ನನಗೆ ತಿಳಿಯುವದಿಲ್ಲ. ದೇವರಾಯಾ, ಕ್ಷಮಾ ಮಾಡು. ॥ ೧೩೬ ॥ ನಿನ್ನ ಹೊರತು ನನಗೆ ಯಾರೂ ಗತಿಯಿಲ್ಲ ನಾನು ಅನಾಥನೂ, ದೀನನೂ, ಆಗಿರುವೆನು ಆದ್ದರಿಂದ ತಮ್ಮ ಚರಣವನ್ನು ಹಿಡಿದಿರುವೆನು ಮತ್ತು ತಮ್ಮ ಚರಣಕ್ಕೆ ಶರಣು ಬಂದಿದ್ದೇನೆ. ॥ ೧೩೭ ॥ ಈ ಹೊತ್ತು ನನ್ನ ಜನ್ಮವು ಸಫಲವಾಯಿತು. ನನ್ನ ಎಲ್ಲ ಸಂಸಾರವು ಧನ್ಯವಾಯಿತು ನಿನ್ನ ಚರಣಕಮಲಗಳನ್ನು ಕಂಡೆನು. ಭ್ರಮರನಾಗಿ ಆ ಪಾದಪದ್ಮದ ವಾಸನೆಯನ್ನು ಗ್ರಹಿಸುವೆನು. ॥ ೧೩೮ ॥ ಎಲೈ ಧರ್ಮರಾಜನೇ ಕೇಳು. ಎಂದು ಕೌಂಡಿಣ್ಯನು ಸ್ತುತಿಸಲು ಭಕ್ತಜನ ಚಿಂತಾಮಣಿ ರತ್ನನೂ ಲಕ್ಷ್ಮೀರಮಣನೂ ಆದ ಅನಂತನು ಅವನಿಗೆ ಪ್ರಸನ್ನನಾಗಿ ಮೂರು ವರಗಳನ್ನು ಕೊಟ್ಟನು. ॥ ೧೩೯ ॥ ಎಲೈ ಕೌಂಡಿಣ್ಯನೇ, ನಿನ್ನಲ್ಲಿ ಒಳ್ಳೇ ಧರ್ಮಬುದ್ಧಿಯುಂಟಾಗಲಿ ನಿನ್ನ ದರಿದ್ರತನವು ಹೋಗಿ ಐಶ್ವರ್ಯವಂತನಾಗು, ಮತ್ತು ನಿನಗೆ ಶಾಶ್ವತವಾದ ವೈಕುಂಠವಾಸವಾಗಲಿ ಎಂದು ಮೂರು ವರಗಳನ್ನು ಕೊಟ್ಟನು. ॥ ೧೪೦ ॥ ಆಗ ಕೌಂಡಿಣ್ಯನು ಮತ್ತೆ ನಮಸ್ಕರಿಸಿ— ಸ್ವಾಮೀ, ಅನಂತನೇ, ನಾನು ಬರುವಾಗ ಅರಣ್ಯದಲ್ಲಿ ಕೆಲವು ಆಶ್ಚರ್ಯಗಳನ್ನು ಕಂಡೆನು. ಒಂದು ಮಾವಿನ ಮರವು ಫಲ-ಪುಷ್ಪಗಳಿಂದ ತುಂಬಿದ್ದರೂ ಅದರ ಹತ್ತರ ಪಕ್ಷಿಗಳೂ ಬೇರೆ ಯಾವ ಪ್ರಾಣಿಗಳೂ ಬಂದು ಮುಟ್ಟುತ್ತಿದ್ದಿಲ್ಲ. ಆಮೇಲೆ ಮುಂದೆ ಬರಲು

ಒಂದು ಸವತ್ಸವಾದ ಆಕಳನ್ನು ಕಂಡೆನು. ॥ ೧೪೧-೧೪೨ ॥ ಅಲ್ಲಿ ಅತಿಶಯವಾಗಿ ಹುಲ್ಲು ಬೆಳೆದಿದ್ದರೂ ಅದರ ಬಾಯಿಗೆ ಒಂದು ತುತ್ತಾದರೂ ಬರುತ್ತಿದ್ದಿಲ್ಲ. ಮತ್ತು ಅಲ್ಲಿ ನಿರ್ಮಲ ನೀರುಳ್ಳ ಎರಡು ಸರೋವರಗಳನ್ನು ಕಂಡೆನು. ॥ ೧೪೩ ॥ ಅವುಗಳ ಒಂದರ ನೀರು ಮತ್ತೊಂದಕ್ಕೆ ಹೋಗುತ್ತಿದ್ದವು ಮುಂದೆ ಅಪೂರ್ವವಾದ ಒಂದು ದೊಡ್ಡ ಎತ್ತನ್ನು ಕಂಡೆನು. ॥ ೧೪೪ ॥ ಆದರ ಬಾಯಿ ಹುಲ್ಲು ತಿನ್ನಲಿಕ್ಕೆ ಬರುತ್ತಿದ್ದಿಲ್ಲ. ಅದು ಸದಾ ಉಪವಾಸವಾಗಿತ್ತು. ಮುಂದೆ ಸುಂದರ ಹಾಗು ಮದೋನ್ಮತ್ತ ಒಂದು ಆನೆಯನ್ನು ಕಂಡೆನು. ॥ ೧೪೫ ॥ ಆ ಕೂಡಲೆ ಅಲ್ಲಿ ಒಂದು ಕತ್ತೆಯನ್ನು ನೋಡಿದೆನು. ಸ್ವಾಮೀ, ಮತ್ತೆ ಕೇಳಿರಿ. ನಾನು ಈ ಪ್ರಕಾರ ಅರಣ್ಯ ದಲ್ಲಿ ತಿರುಗುತ್ತಿರುವಾಗ ಒಬ್ಬ ವೃದ್ಧ ಬ್ರಾಹ್ಮಣನನ್ನು ಕಂಡೆನು. ॥ ೧೪೬ ॥ ಜಗನ್ನಾಥಾ, ಕೇಶವಾ, ಅವುಗಳ ಅಭಿಪ್ರಾಯವು ನನಗೆ ತಿಳಿಯಲಿಲ್ಲ. ಆದಕಾರಣ ದಯಮಾಡಿ, ಅವುಗಳ ಭಾವವನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದು ಅನಂತನ ಚರಣಕ್ಕೆ ನಮಸ್ಕರಿಸಿದನು. ॥ ೪೭ ॥ ಆಗ ಕೃಪಾನಿಧಿಯಾದ ನಾರಾಯಣನು ವಿಸ್ತಾರವಾಗಿ ಹೇಳುವದನ್ನು ಭಕ್ತನಾದ ಕೌಂಡಿಣ್ಯನು ಅದನ್ನು ಕೇಳುತ್ತಾನೆ ಆಗ ನಾರಾಯಣನು— ಎಲೈ ಕೌಂಡಿಣ್ಯನೇ, ನೀನು ಮಾವಿನ ಗಿಡವನ್ನು ನೋಡಿದಿಯಷ್ಟೇ ? ॥ ೧೪೮ ॥ ಅದು ಪೂರ್ವದಲ್ಲಿ ವೇದಶಾಸ್ತ್ರ ಬಲ್ಲಂಥ ಒಬ್ಬ ಬ್ರಾಹ್ಮಣನಿದ್ದನು. ಅವನು ಗರ್ವದಿಂದ ಉನ್ಮತ್ತನಾಗಿ ಶಿಷ್ಯರಿಗೆ ಪಾಠವನ್ನು ಹೇಳುತ್ತಿದ್ದಿಲ್ಲ. ॥ ೧೪೯ ॥ ಆ ಪಾಪದಿಂದ ಅವನು ಈಗ ಗಿಡವಾಗಿರುವನು. ನೀನು ನೋಡಿದ ಆಕಳು ಪೂರ್ವದಲ್ಲಿ ಬ್ರಾಹ್ಮಣನಾಗಿದ್ದು, ಏನೂ ಬೆಳೆ ಬಾರದಂಥ ಭೂಮಿಯನ್ನು ದಾನ ಮಾಡಿದ್ದರಿಂದ ಅದಕ್ಕೆ ಹುಲ್ಲು ಸಿಗಲಾರದು. ॥ ೧೫೦ ॥ ನೀನು ನೋಡಿದ ಎತ್ತು ಪೂರ್ವದಲ್ಲಿ ಒಬ್ಬ ಧನಿಕ ಬ್ರಾಹ್ಮಣನಾಗಿದ್ದು, ಆಗ ಏನೂ ದಾನ ಮಾಡಲಿಲ್ಲ. ಆ ಪಾಪದಿಂದ ಅವಕ್ಕೆ ಈ ಗತಿಯಾಗಿ ಆದರ ಬಾಯಿ ಹುಲ್ಲು ತಿನ್ನಲಿಕ್ಕೆ ಬರುವದಿಲ್ಲ. ॥ ೧೫೧ ॥ ನೀನು ನೋಡಿದ ಸರೋವರಗಳು ಪೂರ್ವದಲ್ಲಿ ಅಕ್ಕ-ತಂಗಿಯರಾಗಿದ್ದು, ಅವರು ತಮ್ಮತಮ್ಮೊಳಗೆ ದಾನವನ್ನು ಕೊಟ್ಟು ತಕ್ಕೊಳ್ಳುತ್ತಿದ್ದರು. ಅದರಿಂದ ಅವರು ಈಗ ಸರೋವರಗಳಾಗಿದ್ದಾರೆ. ॥ ೧೫೨ ॥ ನೀನು ನೋಡಿದ

ಕತ್ತಿಯು ನಿನ್ನ ಕ್ರೋಧವು. ಆ ಆನೆಯು ನಿನ್ನ ಮದವು. ಆಮೇಲೆ ನೀನು ಶುದ್ಧ ಮನದಿಂದ ವೃದ್ಧ ಬ್ರಾಹ್ಮಣನಾದ ನನ್ನನ್ನು ನೋಡಿದಿ. ॥ ೧೫೩ ॥ ಎಲೈ ಕೌಂಡಿಣ್ಯನೇ, ನೀನು ನೋಡಿದವುಗಳೆಲ್ಲವನ್ನು ಪಾಪದಿಂದ ಬಿಡುಗಡೆ ಮಾಡಿದ್ದೇನೆ. ಇನ್ನು ನೀನು ಅಖಿಲ ಸುಖವನ್ನು ಅನುಭವಿಸಿ ಅಂತ್ಯದಲ್ಲಿ ಸ್ವರ್ಗಕ್ಕೆ ಹೋಗು. ॥ ೧೫೪ ॥ ನೀನು ಮುಂದೆ ಪುನರ್ವಸು ನಕ್ಷತ್ರವಾಗಿ ಅಲ್ಲಿ ವಾಸ ಮಾಡು ಎಂದು ಅನಂತನು ಕೌಂಡಿಣ್ಯನಿಗೆ ವರವನ್ನು ಕೊಟ್ಟು ಅಲ್ಲಿಯೇ ಅದೃಶ್ಯನಾದನು. ಆಗ ಕೌಂಡಿಣ್ಯನು ಅತ್ಯಂತ ಹರ್ಷಪಟ್ಟನು. ॥ ೧೫೫ ॥ ಎಲೈ ಧರ್ಮರಾಜನೇ, ಕೇಳು. ಈ ಪ್ರಕಾರ ಕೌಂಡಿಣ್ಯನು ಹೆಂಡತಿಯೊಡನೆ ಅಲ್ಲಿಂದ ತನ್ನ ನಗರಕ್ಕೆ ಬಂದನು ಬಹು ದಿವಸ ರಾಜ್ಯವಾಳಿ ಅಂತ್ಯದಲ್ಲಿ ಸ್ವರ್ಗಕ್ಕೆ ಹೋದನು ಎಂದು ಕೃಷ್ಣನು ಹೇಳಿದನು ॥ ೧೫೬ ॥ ಎಂದು ಶ್ರೀಗುರುಗಳು— ಎಲೈ ಸಾಯಂದೇವನೇ, ಹೃಷಿಕೇಶನಾದ ಶ್ರೀಕೃಷ್ಣನು ಧರ್ಮರಾಯನಿಗೆ ಈ ಪ್ರಕಾರ ಕಥೆಯನ್ನು ಹೇಳಿದನು. ಅವರಂತೆ ಧರ್ಮರಾಯನು ತನ್ನ ಪತ್ನೀಸಹಿತವಾಗಿ ಭಕ್ತಿಯಿಂದ ಆ ಅನಂತನ ಪ್ರಸಾದದಿಂದ ತೀವ್ರವಾಗಿ ರಾಜ್ಯವನ್ನು ಪಡೆದರು. ॥ ೧೫೭–೧೫೮ ॥ ಧರ್ಮರಾಜನಲ್ಲದೆ ಈ ಭೂಮಿಯಲ್ಲಿರುವ ಅನೇಕ ಋಷೀಶ್ವರರೂ ಈ ಅನಂತ ವ್ರತವನ್ನು ಮಾಡಿದರು ಆದ್ದರಿಂದ ಸ್ತ್ರೀ–ಪುರುಷರೆಲ್ಲರೂ ಈ ವ್ರತವನ್ನು ಮಾಡಿ ಚತುರ್ವಿಧ ಪುರುಷಾರ್ಥಗಳನ್ನು ಪಡೆಯಬೇಕು ॥ ೧೫೯ ॥ ಇದು ವ್ರತಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದೂ, ಪ್ರಖ್ಯಾತವಾದದ್ದೂ ಇರುತ್ತದೆ. ಎಲೈ ಸಾಯಂದೇವನೇ, ಇದನ್ನು ನೀನು ಸತತವಾಗಿ ಮಾಡಿ ಆಮೇಲೆ ಮುಂದೆ ನಿನ್ನ ಜ್ಯೇಷ್ಠ ಪುತ್ರನಾದ ನಾಗನಾಥನಿಗೆ ಮಾಡಲಿಕ್ಕೆ ಹೇಳು. ॥ ೧೬೦ ॥ ಕೌಂಡಿಣ್ಯನು ಈ ವ್ರತವನ್ನು ಮಾಡಿ ಅಖಿಲ ಸೌಖ್ಯಗಳನ್ನು ಹೊಂದಿದನು. ಅದರಿಂದ ಎಲ್ಲರೂ ಈ ವ್ರತವನ್ನು ಆಚರಿಸಬೇಕು. ಇದರಿಂದ ಅನಂತ ಪುಣ್ಯ ಫಲವುಂಟು. ॥ ೧೬೧ ॥ ಆದಕಾರಣ ಎಲೈ ಸಾಯಂದೇವನೇ, ಅನಂತ ಮಹಾಪುಣ್ಯ ಬರುವ ಈ ವ್ರತವನ್ನು ನನ್ನ ಅಪ್ಪಣೆಯಂತೆ ತ್ರಿಕರಣಪೂರ್ವಕ ಭಕ್ತಿಯಿಂದ ಮಾಡು. ಎಂದು ಹೇಳಿದರು. ॥ ೧೬೨ ॥ ಎಲೈ

ನಾಮಧಾರಕಾ ಕೇಳು. ಶ್ರೀಗುರುಗಳ ಅಪ್ಪಣೆಯಂತೆ ಸಾಯಂದೇವನು ಬಹು ಭಕ್ತಿಯಿಂದಲೂ ಸಂತೋಷದಿಂದಲೂ ಆ ದಿವಸ ಅನಂತ ವ್ರತವನ್ನು ಮಾಡಿ, ಆಮೇಲೆ ನಾನಾರೀತಿಯಿಂದ ಶ್ರೀಗುರುಗಳನ್ನು ಪೂಜಿಸಿದನು. ಅದನ್ನು ಹೇಳುವೆನು ಕೇಳು ॥ ೧೬೩ ॥ ಗುರುಪೂಜಾ ಮಾಡಿದ ನಂತರ ಅನೇಕ ಆರತಿಗಳನ್ನು ಮಾಡಿ ಅನೇಕ ಸ್ತೋತ್ರಗಳನ್ನು ಅಂದು, ನಾನಾತರದ ಮಂಗಳವಾದ್ಯಗಳಿಂದಲೂ ಗೀತ-ನೃತ್ಯಗಳಿಂದಲೂ ಶ್ರೀ ಗುರುಗಳನ್ನು ಸಂತೋಷಬಡಿಸಿದನು. ॥ ೧೬೪ ॥ ಆಮೇಲೆ ಸಮಾರಾಧನೆ ಮಾಡಿಸಿ ಶ್ರೀ ಗುರುಗಳನ್ನೂ ಬ್ರಾಹ್ಮಣರನ್ನೂ ತೃಪ್ತಿಪಡಿಸಿದನು ಆಗ ಶ್ರೀ ಗುರುಗಳು ಆನಂದಭರಿತರಾಗಿ ಬಹು ಸಂತೋಷಬಟ್ಟರು ॥ ೧೬೫ ॥ ಎಲೈ ನಾಮಧಾರಕನೇ, ನಿಮ್ಮ ಪೂರ್ವಜನಾದ ಸಾಯಂದೇವನು ಶ್ರೀಗುರುಗಳನ್ನು ಸಂತೋಷದಿಂದ ಆರಾಧಿಸಿ, ತನ್ನ ಹೆಂಡರು ಮಕ್ಕಳನ್ನು ಕರಕೊಂಡು ತನ್ನ ಊರಿಗೆ ಹೋಗಿ ಅವರನ್ನು ತನ್ನ ಮೊದಲಿನ ಸ್ಥಳದಲ್ಲಿಟ್ಟು, ತಿರುಗಿ ತಾನು ಗುರುಸೇವೆಗಾಗಿ ಭಕ್ತಿಯಿಂದ ಗಾಣಗಾಪುರಕ್ಕೆ ಬಂದನು. ॥ ೧೬೬-೧೬೭ ॥ ಆಮೇಲೆ ಅವನು ಅಹೋರಾತ್ರಿ ಶ್ರೀಗುರುಗಳ ಹತ್ತರಿದ್ದು ಬಹುರೀತಿಯಿಂದ ಅವರ ಸೇವೆ ಮಾಡಿದನು. ಈ ಪ್ರಕಾರ ಅವನು ಸೇವೆ ಮಾಡಿದ್ದರಿಂದ ಶ್ರೀಗುರುಗಳು ಅವನಿಗೆ ಪ್ರಸನ್ನರಾದರು. ॥ ೧೬೮ ॥ ಎಲೈ ನಾಮಧಾರಕಾ, ಈ ಪ್ರಕಾರ ನಿಮ್ಮ ಮನೆತನಕ್ಕೆ ಶ್ರೀ ಗುರು ನರಸಿಂಹ ಸರಸ್ವತಿಗಳೆಂಬ ಐಶ್ವರ್ಯವು ಪ್ರಾಪ್ತವಾಯಿತು ಎಂದು ಸಿದ್ದರು ಹೇಳಿದರು ॥ ೧೬೯ ॥ ಎಂದು ಸರಸ್ವತೀ ಗಂಗಾಧರನು— ಈ ಮನೋಹರವಾದ ಗುರುಚರಿತ್ರೆಯನ್ನು ಕೇಳಿದರೆ ಸಕಲ ಪುರುಷಾರ್ಥಗಳು ಸಾಧಿಸುವವು ಎಂದು ಗುರುಚರಿತ್ರೆಯನ್ನು ವಿಸ್ತಾರವಾಗಿ ಹೇಳಿದನು. ॥ ೧೭೦ ॥ ಹೀಗೆ ಈ ಗುರುಚರಿತ್ರಾಮೃತದಲ್ಲಿ ಶ್ರೀಗುರುಗಳು ಸಾಯಂದೇವನಿಗೆ ಹೇಳಿದಂತೆ ಸಿದ್ಧರು ನಾಮಧಾರಕನಿಗೆ ಅನಂತವ್ರತ ಕಥೆಯನ್ನು ಹೇಳಿದ್ದು ಹೇಳಿದೆ. ॥ ೧೭೧ ॥

ದಿಗಂಬರಾ ದಿಗಂಬರಾ

ಇತಿ ಶ್ರೀಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮ-ಧಾರಕ ಸಂವಾದೇ ಶ್ರೀಮದನಂತ ಕಥಾ ನಿರೂಪಣಂ ನಾಮ ತ್ರಿಚತ್ವಾರಿಂಶೋಽಧ್ಯಾಯಃ ॥ ೪೩ ॥ ಶ್ರೀ ಗುರುದೇವದತ್ತ ॥

— ೪೩ನೇ ಅಧ್ಯಾಯ ಸಮಾಪ್ತ —

॥ ಇಲ್ಲಿಗೆ ೬ನೇ ದಿವಸದ ಸಪ್ತಾಹವು ಮುಗಿದುದು ॥

---

# ೪೪ನೇಯ ಅಧ್ಯಾಯ



## —: ಶ್ರೀ ಶೈಲ ಶಿವರಾತ್ರಿ ಮಹಿಮಾ ವರ್ಣನಂ :—

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ಸಾಮಧಾರಕನು— ಸ್ವಾಮೀ, ಸಿದ್ಧಮುನಿಗಳೇ, ನನ್ನಮೇಲೆ ಕೃಪೆಮಾಡಿ, ದಯಾನಿಧಿಗಳಾದ ತಾವು ಮುಂದೆ ಚರಿತ್ರೆಯು ಯಾವ ಪ್ರಕಾರವಾಗಿ ನಡೆಯಿತೆಂಬದನ್ನು ವಿಸ್ತಾರವಾಗಿ ಹೇಳಿರಿ ಎಂದು ವಿನಂತೀ ಮಾಡಿಕೊಂಡನು. ॥ ೧ ॥ ಆಗ ಸಿದ್ಧರು— ವತ್ಸಾ ಕೇಳು ಶ್ರೀ ಗುರುಗಳನ್ನು ಅನೇಕ ಭಕ್ತರು ಸೇವಿಸುತ್ತಿದ್ದರು. ಅವರಲ್ಲಿ ಒಬ್ಬ ನೇಕಾರನೂ ಶ್ರೀ ಗುರುಗಳಲ್ಲಿ ಅತ್ಯಂತ ಭಕ್ತಿಯನ್ನು ಮಾಡುತ್ತ, ನಿತ್ಯವೂ ಬಂದು ಅವರಿಗೆ ನಮಸ್ಕರಿಸುತ್ತಿದ್ದನು. ॥ ೨ ॥ ಅವನು ಮೂರು ಪ್ರಹರದವರೆಗೂ ತನ್ನ ಮನೆಯ ಉದ್ಯೋಗ ವ್ಯವಹಾರಗಳನ್ನು ಮಾಡಿ, ಪವಿತ್ರನಾಗಿ ಬಂದು, ಶ್ರೀ ಗುರುಗಳ ಮಠದ ಮುಂದಿನ ಅಂಗಳವನ್ನು ಸ್ವಚ್ಛವಾಗಿ ಉಡುಗಿ, ದೂರ ನಿಂತು ನಮಸ್ಕರಿಸುತ್ತಿದ್ದನು. ॥೩॥ ಹೀಗೆ ಎಷ್ಟೋ ದಿವಸಗಳಾದಮೇಲೆ ಮಹಾ ಶಿವರಾತ್ರಿಯು ಸಮೀಪಿಸಿತು. ಆಗ ಆ ನೇಕಾರನ ತಾಯಿ-ತಂದೆ-ಬಂಧು-ಬಳಗದವರೂ ಆ ಊರ ಬೇರೆ ಜನರೂ ಶ್ರೀಶೈಲ ಯಾತ್ರೆಗೆ ಹೊರಟು ॥ ೪ ॥ ಆ ತಂತುಕನನ್ನು ಕರೆದರು. ಆಗ ಅವನು— ನಾನು ಬರುವದಿಲ್ಲ ನೀವು ಮೂರ್ಖರೂ ಹುಚ್ಚರೂ ಇರುತ್ತೀರಿ. ನನಗೆ ಶ್ರೀ ಶೈಲ ಪರ್ವತವು ಇಲ್ಲಿಯೇ ಇರುತ್ತದೆ. ॥ ೫ ॥ ನಮ್ಮ ಶ್ರೀ ಗುರುಗಳೇ ಮಲ್ಲಿಕಾರ್ಜುನರು. ಗುರುಗಳ ಮಠವೇ ನನಗೆ ಶ್ರೀ ಶೈಲ ಪರ್ವತವು. ನಾನು ಶ್ರೀ ಗುರುಗಳ ಚರಣವನ್ನು ಬಿಟ್ಟು, ಇಲ್ಲಿಂದ ಬರುವದಿಲ್ಲ ಎಂದನು. ॥೬॥ ಆಗ ಆ ಯಾವತ್ತೂ ಜನರು ಹಾಸ್ಯಮಾಡಿ— ಇವನಿಗೆ ಹುಚ್ಚು ಹಿಡಿದದೆ. ನಾವು ಹೋಗೋಣ ನಡೆಯಿರಿ. ಎಂದು ಅವನ ಅಣ್ಣ-ತಾಯಿ-ತಂದೆ ಮತ್ತು ಊರ ಜನರು ಎಲ್ಲರೂ ಹೊರಟುಹೋದರು. ॥ ೭ ॥ ಆಮೇಲೆ

ಆವನು ಒಬ್ಬನೇ ಉಳಿದು, ಶ್ರೀ ಗುರುಗಳ ದರ್ಶನಕ್ಕಾಗಿ ಮಠಕ್ಕೆ ಬಂದನು. ॥ ೮ ॥ ಆಗ ಶ್ರೀ ಗುರುಗಳು— ಎಲೈ ತಂತುಕನೇ, ನೀನು ಯಾಕೆ ಯಾತ್ರೆಗೆ ಹೋಗಲಿಲ್ಲ? ಎಂದು ಕೇಳಿದರು. ಆಗ ಆವನು— ಸ್ವಾಮೀ, ತಮ್ಮ ಚರಣ ದರ್ಶನಕ್ಕೆ ಬರುವದೇ ನನಗೆ ಯಾತ್ರೆಯು. ॥ ೯ ॥ ಸ್ವಾಮೀ, ಕೇಳಿರಿ ಸರ್ವ ತೀರ್ಥಯಾತ್ರೆಗಳು ತಮ್ಮ ಚರಣಗಳಲ್ಲಿರುವವು. ಮೂರ್ಖರಾದವರು ಕಲ್ಲಿನ ಲಿಂಗವನ್ನು ನೋಡಲಿಕ್ಕೆ ಸುಮ್ಮನೇ ಹೋಗುತ್ತಾರೆ. ॥ ೧೦ ॥ ಎಂದು ಹೇಳಿ ನಿತ್ಯ ಬಂದು ನಮಸ್ಕರಿಸುತ್ತಿದ್ದನು, ಮುಂದೆ ಸ್ವಲ್ಪ ದಿವಸಗಳಲ್ಲಿ ಮಾಘ ವದ್ಯ ಚತುರ್ದಶಿ ಮಹಾಶಿವರಾತ್ರಿಯು ಬಂತು ॥ ೧೧ ॥ ಆ ದಿನ ಶ್ರೀ ಗುರುಗಳು, ಸಂಗಮದಲ್ಲಿದ್ದರು. ಭಕ್ತನಾದ ಆ ತಂತುಕನು ಶಿವರಾತ್ರಿಯದೆಶೆಯಿಂದ ಉಪವಾಸ ಮಾಡಿ ಆದಿನ ಆರು ತಾಸಿನಮೇಲೆ ಸ್ನಾನಕ್ಕೆ ಹೋದನು. ॥ ೧೨ ॥ ಅಲ್ಲಿ ಸಂಗಮದಲ್ಲಿ ಸ್ನಾನ ಮಾಡಿ ಭಕ್ತಿಪೂರ್ವಕ ಶ್ರೀ ಗುರುಗಳಿಗೆ ನಮಸ್ಕರಿಸಿ, ಒಂದೇ ಮನಸ್ಸಿನಿಂದ ಕೈಮುಗಿದು ನಿಂತುಕೊಂಡನು. ॥ ೧೩ ॥ ಆಗ ಶ್ರೀ ಗುರುಗಳು— ಎಲೈ ತಂತುಕನೇ, ನಿಮ್ಮವರೆಲ್ಲರೂ ಯಾತ್ರೆಗೆ ಹೋದರು. ನೀನೊಬ್ಬನೇ ಉಳಿದಿ. ನೀನೂ ಹೋಗಿದ್ದರೆ ಶ್ರೀ ಪರ್ವತದ ವಿನೋದವನ್ನು ನೋಡುತ್ತಿದ್ದಿ. ॥ ೧೪ ॥ ನೀನು ಶ್ರೀ ಪರ್ವತವನ್ನು ಎಂದೂ ನೋಡಿಲ್ಲವೇನು? ಎಂದು ಕೇಳಿದರು. ಆಗ ಆವನು— ಸ್ವಾಮೀ, ನಾನು ಎಂದೂ ನೋಡಿಲ್ಲ. ನನಗೆ ತಮ್ಮ ಚರಣಗಳೇ ಸರ್ವ ಪರ್ವತ ಯಾತ್ರಾ ಆಗಿರುತ್ತವೆ. ಎಂದೆನಲು ॥ ೧೫ ॥ ಶ್ರೀ ಗುರುಗಳು ಅವನ ಮನೋಭಾವವನ್ನು ತಿಳಿದು, ಆವನನ್ನು ಹತ್ತರ ಕರೆದು, ಅಂತಃಕರುಣದಿಂದ ಆವನಿಗೆ ಕೂಡ್ರಲು ಹೇಳಿ— ಎಲೈ ನಿನಗೆ ಶ್ರೀ ಪರ್ವತವನ್ನು ತೋರಿಸುವೆನು. ॥ ೧೬ ॥ ಕಣ್ಣು ಮುಚ್ಚಿಕೊಂಡು, ತೀವ್ರವಾಗಿ ನಮ್ಮ ಪಾದುಕೆಗಳನ್ನು ಗಟ್ಟಿಯಾಗಿ ಹಿಡಿದುಕೋ, ಎಂದು ಹೇಳಿ, ಆವನನ್ನು ಮನೋವೇಗದಿಂದ ಕರಕೊಂಡು ಹೋದರು. ॥ ೧೭ ॥ ಒಂದು ಅರ್ಧ ಕ್ಷಣದಲ್ಲಿಯೇ ಆ ಭಕ್ತನನ್ನು ಶ್ರೀ ಶೈಲ ಪರ್ವತಕ್ಕೆ ಕರೆದುಕೊಂಡು ಹೋಗಿ ಆ ಪಾತಾಳಗಂಗೆಯಲ್ಲಿ ಕೂಡ್ರಿಸಿ— ಎಲೈ ತಂತುಕನೇ ಕಣ್ಣು ತೆರೆ ಎಂದು ಹೇಳಿದರು. ॥ ೧೮ ॥ ಒಂದು ಕ್ಷಣಹೊತ್ತು ಆವನಿಗೆ ನಿದ್ದೆ ಹತ್ತಿದಂತೆ ಆಗಿ ಕೂಡಲೇ ಎಚ್ಚರ ಹೊಂದಿ

ಕಣ್ಣುತೆಗೆದು ನೋಡಲು ಶ್ರೀ ಪರ್ವತವು ಕಾಣಿಸಿತು. ಆಗ ಅವನು ಮನಸ್ಸಿನಲ್ಲಿ— ಇದೇನು ಸ್ವಪ್ನವೋ? ಸತ್ಯವೋ? ಎಂದು ಅತ್ತಿತ್ತ ನೋಡಹತ್ತಿದನು. ॥ ೧೯ ॥ ಆಗ ಗುರುಗಳು— ಎಲೈ ತಂತುಕನೇ, ಭ್ರಾಂತನಾದವನಂತೆ ಏನು ನೋಡುತ್ತೀ? ತೀವ್ರ ಕ್ಷೌರ ಸ್ನಾನಾದಿಗಳನ್ನು ಮಾಡಿಕೊಂಡು ದೇವರ ದರ್ಶನಕ್ಕೆ ಹೋಗು ಎಂದರು. ॥ ೨೦ ॥ ಗುರುಗಳ ಅಪ್ಪಣೆಯಂತೆ ಅವನು ಪಾತಾಳಗಂಗೆಯಲ್ಲಿ ಸ್ನಾನಕ್ಕೆ ಹೋಗಲು, ಅಲ್ಲಿ ತನ್ನ ತಾಯಿ–ತಂದೆ–ಬಂಧುಗಳನ್ನೂ ತನ್ನ ನಗರದ ಯಾವತ್ತೂ ಜನರನ್ನೂ ಕಂಡನು. ॥ ೨೧ ॥ ಆಗ ಅವರು ಆ ತಂತುಕನನ್ನು ಕಂಡು— ಎಲೈ ನೀನು ಯಾವ ದಾರಿಯಿಂದ ಬಂದೆ? ನಮಗೆ ಯಾಕೆ ಭೆಟ್ಟಿಯಾಗಲಿಲ್ಲ? ನಮ್ಮನ್ನು ತಪ್ಪಿಸಿ ಬರುವದು ಯಾವ ಧರ್ಮವು? ಎಂದು ಅಂದರು. ॥ ೨೨ ॥ ಆಗ ಅವನು ಆ ಎಲ್ಲರನ್ನು ಕುರಿತು ವಿನಯದಿಂದ— ನಾನು ಈ ದಿನ ಮಧ್ಯಾಹ್ನ ಆರು ತಾಸಿನಮೇಲೆ ಶ್ರೀ ಗುರುಗಳ ಸಂಗಡ ಹೊರಟು, ಒಂದು ಕ್ಷಣಕೂಡ ಹತ್ತದೆ ಇಲ್ಲಿಗೆ ಬಂದೆನು ಎಂದನು. ॥ ೨೩ ॥ ಆಗ ಆ ಜನರಲ್ಲಿ ಒಬ್ಬನು ನಕ್ಕು— ಇವನು ನಮ್ಮನ್ನು ತಪ್ಪಿಸಿ ನಮ್ಮ ಹಿಂದಿಂದೇ ಬಂದು ಬಡಿವಾರದಿಂದ ಸುಳ್ಳು ಹೇಳುತ್ತಾನೆ ಎಂದನು. ॥ ೨೪ ॥ ಆ ಮೇಲೆ ಆ ತಂತುಕನು ಯಾರಸಂಗಡಲೂ ಮಾತಾಡದೆ ಕ್ಷೌರ ಮಾಡಿಸಿಕೊಂಡು ಸ್ನಾನಮಾಡಿ, ಹೂವು, ಅಕ್ಷತ-ಬಿಲ್ವಗಳನ್ನು ತಕ್ಕೊಂಡು ಶ್ರೀ ಮಲ್ಲಿಕಾರ್ಜುನ ಲಿಂಗವನ್ನು ಪೂಜಿಸಲು ಹೋದನು. ॥ ೨೫ ॥ ಆ ಲಿಂಗದ ಪೂಜಾ ಪ್ರಾರಂಭ ಮಾಡಲು ಆ ಲಿಂಗದ ಸ್ಥಳದಲ್ಲಿ ಶ್ರೀ ಗುರುಗಳು ಕೂತದ್ದನ್ನು ನೋಡಿ, ಮನಸ್ಸಿನಲ್ಲಿ ಆಶ್ಚರ್ಯ ಹೊಂದಿ, ಭಕ್ತಿಯಿಂದ ಶ್ರೀ ಗುರುಗಳನ್ನೇ ಪೂಜಿಸಿದನು. ॥ ೨೬ ॥ ಉಳಿದ ಯಾವತ್ತು ಜನರು ಸಹ ಲಿಂಗವೆಂದು ಶ್ರೀ ಗುರುಗಳನ್ನೇ ಪೂಜಿಸುತ್ತಿದ್ದು, ಶ್ರೀ ಗುರುಗಳು ಆ ಎಲ್ಲ ಜನರ ಪೂಜೆಯನ್ನು ಸ್ವೀಕರಿಸುತ್ತಿದ್ದದ್ದನ್ನು ನೋಡಿ ಆ ತಂತುಕನು ಮನಸ್ಸಿನಲ್ಲಿ— ನಮ್ಮ ಶ್ರೀ ಗುರುಗಳು ಸಾಕ್ಷಾತ್ ಶ್ರೀ ಶಂಕರರು ಎಂದು ನಿಶ್ಚಯ ಮಾಡಿಕೊಂಡು ಗುರ್ತಿಗಾಗಿ ಪ್ರಸಾದವನ್ನು ತಕ್ಕೊಂಡು ಆಮೇಲೆ ಗುರುಗಳ ಸನ್ನಿಧಿಗೆ ಬಂದನು. ಎಲೈ ನಾಮಧಾರಕಾ ಏಕಚಿತ್ತದಿಂದ ಕೇಳು. ॥ ೨೮ ॥ ಆಗ ಅವರು— ಎಲೈ ತಂತುಕನೇ, ನೀನು ಇಲ್ಲಿಯೇ ಇರುವಿಯೋ? ಅಥವಾ

ಊರಿಗೆ ಬರುವಿಯೋ ? ಎಂದು ಕೇಳಲು, ಅವನು ವಿನಯದಿಂದ— ಸ್ವಾಮೀ, ಈ ದಿನ ಒಂದು ಆಶ್ಚರ್ಯವನ್ನು ಕಂಡೆನು ॥ ೨೯ ॥ ಎಲ್ಲ ಜನರು ಹೋಗಿ ಮಲ್ಲಿಕಾರ್ಜುನನ ದೇವಾಲಯದಲ್ಲಿ ಕುಳಿತು, ತಮ್ಮ ಚರಣಗಳನ್ನೇ ಪೂಜಿಸುವರು. ನಾನೂ ಸಹ ಲಿಂಗವನ್ನು ಕಾಣದೇ ಆ ಲಿಂಗದ ಸ್ಥಳದಲ್ಲಿರುವ ತಮ್ಮನ್ನೇ ಪೂಜೆಮಾಡಿ ಬಂದೆನು. ॥ ೩೦ ॥ ಸ್ವಾಮೀ, ಶ್ರೀ ಗುರುಗಳಾದ ತಾವು ಹತ್ತಿರದಲ್ಲಿರಲು ಇಷ್ಟುದೂರ ಕಷ್ಟಬಟ್ಟು ಬಹು ಜನರು ಯಾಕೆ ಬರುವರು ? ಈ ಸ್ಥಾನದ ಮಹತ್ವವೇನು ? ॥ ೩೧ ॥ ನೀವು ಕೇವಲ ಪರಮೇಶ್ವರರಿದ್ದು ನಮಗೆ ಮನುಷ್ಯರಾಗಿ ಕಾಣುತ್ತೀರಿ ಗುರುನಾಥನೇ, ನೀವು ಗುಪ್ತರೂಪದಿಂದಿರುವಿರಿ. ನಿಮ್ಮ ಅಪಾರ ಮಹಿಮೆಯು ಮನುಷ್ಯರಾದ ನಮಗೆ ತಿಳಿಯುವದಿಲ್ಲ. ॥ ೩೨ ॥ ಯಾವತ್ತು ಜನರು ಮೂಢರಾಗಿ ಯಾರೂ ನಿಮ್ಮ ಮಹಿಮೆಯನ್ನು ತಿಳಿಯದೆ, ಈ ಸ್ಥಾನಕ್ಕೆ ಯಾಕೆ ಬರುವರೆಂಬದನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದನು. ॥ ೩೩ ॥ ಆಗ ಗುರುಗಳು— ಎಲೈ ಭಕ್ತನೇ ಕೇಳು ಈಶ್ವರನು ಎಲ್ಲಕಡೆಯಲ್ಲಿ ಪೂರ್ಣವಾಗಿ ವ್ಯಾಪಿಸಿರುವನು. ಆದರೂ ತ್ರಿಭುವನದಲ್ಲಿ ಈ ಸ್ಥಾನ ಮಹಿಮೆಯು ಅಪಾರವಾಗಿದೆ ಎಂದರು. ॥ ೩೪ ॥ ಆಗ ತಂತುಕನು— ಸ್ವಾಮೀ, ನೀವೇ ಪೂರ್ಣ ಬ್ರಹ್ಮರಿದ್ದು, ಈ ಸ್ಥಾನ ಮಹಿಮೆಯನ್ನು ಸ್ತುತಿಸುತ್ತೀರೆಂದಮೇಲೆ ಇದರ ಮಹಿಮೆಯನ್ನು ನನಗೆ ವಿಸ್ತಾರವಾಗಿ ಹೇಳಿರಿ ಎಂದನು. ॥ ೩೫ ॥ ಆಗ ಶ್ರೀ ಗುರುಗಳು— ಎಲೈ ತಂತುಕನೇ, ಇಲ್ಲಿಯ ಮಹಿಮೆಯನ್ನು ಕೇಳುತ್ತೀ ಆಬಗ್ಗೆ ಸ್ಕಂದ ಪುರಾಣದಲ್ಲಿರುವ ಒಂದು ಕಥೆಯನ್ನು ವಿಸ್ತಾರವಾಗಿ ಹೇಳುವೆನು ಕೇಳು. ॥ ೩೬ ॥ ಈ ಪರ್ವತದಲ್ಲಿ ಮಾಘ ವದ್ಯ ಚತುರ್ದಶೀ ಮಹಾ ಶಿವರಾತ್ರಿ ದಿವಸ ಅಪಾರ ಮಹಿಮೆಯು ನಡೆಯುವದು ಆದನ್ನು ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು. ॥ ೩೭ ॥

ಪೂರ್ವದಲ್ಲಿ ವಿಖ್ಯಾತವಾದ ಕಿರಾತ ದೇಶದಲ್ಲಿ ವಿಮರ್ಶಣನೆಂಬ ಒಬ್ಬ ರಾಜನಿದ್ದನು. ಅವನು ಶೂರತನದಿಂದಲೂ ಪರಾಕ್ರಮದಿಂದಲೂ ಯಾವತ್ತು ಶತ್ರುಗಳನ್ನು ಗೆದ್ದನು. ॥ ೩೮ ॥ ಮತ್ತು ಅವನು ವಿಶೇಷ ಬಲಾಢ್ಯ

ನಾದ್ದರಿಂದ ಬಹುವಾಗಿ ಬೇಟೆಯಾಡಬೇಕೆಂಬ ಬುದ್ಧಿಯುಳ್ಳವನಾಗಿದ್ದನು. ಅವನು ಸದಾ ಚಂಚಲಚಿತ್ತನಾಗಿ ಸಕಲ ಜಾತಿಯ ಸ್ತ್ರೀಯರಲ್ಲಿ ಆಸಕ್ತನಾಗಿದ್ದನು. ॥ ೩೯ ॥ ಮತ್ತು ಗ್ರಾಹ್ಯಾಗ್ರಾಹ್ಯವೆಂದು ವಿಚಾರ ಮಾಡದೆ ಸರ್ವ ಮಾಂಸವನ್ನು ಭಕ್ಷಣ ಮಾಡುತ್ತ ದುರಾಚಾರಿಯಾಗಿದ್ದರೂ ಸಹ ಅವನು ತಪ್ಪದೆ ನಿತ್ಯದಲ್ಲಿ ಈಶ್ವರನ ಪೂಜೆಯನ್ನು ಮಾತ್ರ ಒಳ್ಳೇ ಭಕ್ತಿಯಿಂದಲೂ ವಿಧಿಯಿಂದಲೂ ಮಾಡುತ್ತಿದ್ದನು. ॥ ೪೦ ॥ ಶಿವರಾತ್ರಿಯಲ್ಲಂತೂ ಕೇಳುವದೇನು ? ಅನೇಕ ಗೀತ–ನೃತ್ಯ–ವಾದ್ಯ ವೈಭವಗಳಿಂದ ಭಕ್ತಿಪೂರ್ವಕವಾಗಿ ಶ್ರೀಶಂಕರನನ್ನು ಪೂಜಿಸುತ್ತಿದ್ದನು. ॥ ೪೧ ॥ ಅವನ ಆಚಾರವು ಒಳ್ಳೇದಾಗಿರದಿದ್ದರೂ ಈಶ್ವರನ ಪೂಜಯನ್ನು ಮಾತ್ರ ಬಹುರೀತಿಯಿಂದ ಮಾಡುತ್ತಿದ್ದನು. ಅವನಿಗೆ ಸುಲಕ್ಷಣೆಯಾದ ಕುಮದ್ವತಿಯೆಂಬ ಹೆಂಡತಿ ಇದ್ದಳು. ॥ ೪೨ ॥ ಮತ್ತು ಆಕೆಯು ಸುಗುಣೆಯೂ ಸುಶೀಲೆಯೂ ಪತಿವ್ರತೆಯೂ ಆಗಿದ್ದು ತನ್ನ ಪತಿಯು ಪರದಾರಾರತನಾಗಿದ್ದಾನೆಂದು ಮನಸಿನಲ್ಲಿ ಬಹು ಚಿಂತೆ ಮಾಡುತ್ತ ಭಕ್ತಿಯಿಂದ ತಾನೂ ಈಶ್ವರನನ್ನು ಪೂಜಿಸುತ್ತಿದ್ದಳು. ॥ ೪೩ ॥ ಹೀಗೆ ಕೆಲವು ದಿವಸಗಳಾದಮೇಲೆ ಒಂದು ದಿವಸ ಆಕೆಯು ಪತಿಯನ್ನು ಕುರಿತು— ಸ್ವಾಮೀ, ಪ್ರಾಣೇಶ್ವರನೇ, ತಮಗೆ ನನ್ನದೊಂದು ವಿನಂತಿ ಅದೆ. ॥ ೪೪ ॥ ದಯವಿಟ್ಟು ಕ್ಷಮಿಸಬೇಕು. ಅದೇಂದರೆ ನೀವು ದುರಾಚಾರಿಗಳಾಗಿ ಸರ್ವ ಮಾಂಸವನ್ನು ಭಕ್ಷಿಸುತ್ತ ನಿರಂತರ ಪರಸ್ತ್ರೀಯರಲ್ಲಿ ಆಸಕ್ತರಾಗಿದ್ದರೂ ಸಹ ॥ ೪೫ ॥ ನಿಮಗೆ ಈಶ್ವರನಲ್ಲಿ ಅತಿಶಯ ಭಕ್ತಿ ಹುಟ್ಟಲಿಕ್ಕೆ ಕಾರಣವೇನು ? ಎಂಬುದನ್ನು, ನನ್ನಮೇಲೆ ಶಿಟ್ಟಾಗದೆ ವಿಸ್ತಾರವಾಗಿ ಹೇಳಿರಿ ಎಂದಳು. ॥೪೬॥ ಆಗ ಆ ರಾಜನು— ಎಲೌ ಸ್ತ್ರೀಯಳೇ, ನೀನು ನನಗೆ ಒಳ್ಳೇ ಉತ್ತಮ ಪ್ರಶ್ನೆ ಮಾಡಿದಿ. ಈಗ ನನಗೆ ಜ್ಞಾನೋದಯವಾಯಿತು. ನನ್ನ ಪೂರ್ವಜನ್ಮದ ಕಥೆಯನ್ನು ಹೇಳುವೆನು ಕೇಳು ॥ ೪೭ ॥ ಪೂರ್ವದಲ್ಲಿ ನಾನು ಪಂಪಾನಗರದಲ್ಲಿ ಒಬ್ಬ ಕುರುಬನ ಮನೆಯಲ್ಲಿ ನಾಯಿಯಾಗಿ ಹುಟ್ಟಿದ್ದೆನು. ಹೀಗೆ ನಾನು ಅಲ್ಲಿ ಕೆಲವು ದಿವಸ ಇದ್ದಮೇಲೆ ಒಂದು ದಿವಸ ಮಹಾಶಿವರಾತ್ರಿಯು ಬಂದಿತು. ॥ ೪೮ ॥ ಆ ನಗರದಲ್ಲಿ ಒಂದು ಶಿವಾಲಯವಿತ್ತು. ಆ ದಿನ ಆ ಊರ ಯಾವತ್ತು ಜನರು ಪೂಜೆಯ ದೆಸೆಯಿಂದ ಅಲ್ಲಿಗೆ ಹೋದರು. ಅಲ್ಲಿ ನನಗೆ ಏನಾ

ದರೂ ತಿನ್ನಲಿಕ್ಕೆ ಸಿಕ್ಕೀತೆಂದು ನಾನೂ ತಿರಗಾಡುತ್ತ ಆ ಸ್ಥಳಕ್ಕೆ ಹೋದೆನು. || ೪೯ || ಅಲ್ಲಿ ಬಂದ ಎಲ್ಲ ಜನರು ಒಳ್ಳೇ ಉತ್ಸವದಿಂದ ಈಶ್ವರನ ಪೂಜೆ ಮಾಡುತ್ತ, ನಾನಾತರದ ವಾದ್ಯಗಳನ್ನು ಬಾರಿಸುತ್ತ ಆರತಿಗಳನ್ನು ಮಾಡುತ್ತ ಗರ್ಭಗುಡಿಯಲ್ಲಿ ಪ್ರದಕ್ಷಿಣೆ ಮಾಡುತ್ತಿದ್ದರು. || ೫೦ || ಆ ವಿನೋದವನ್ನು ನೋಡಬೇಕೆಂದು ನಾನು ಆ ಗುಡಿಯ ಬಾಗಿಲಿಗೆ ಹೋದೆನು ಆಗ ಅಲ್ಲಿಯ ಜನರು ನನ್ನನ್ನು ನೋಡಿ ಕೋಲು ಹಾಗು ಕಲ್ಲುಗಳನ್ನು ತಕ್ಕೊಂಡು ಓಡುತ್ತ ನನ್ನನ್ನು ಹೊಡೆಯಲಿಕ್ಕೆ ಬಂದರು. || ೫೧ || ಆಗ ನಾನು ಓಡುತ್ತ ಪೌಳಿಯೊಳಗೇ ಸುಳಿದಾಡಹತ್ತಿದೆನು. ಆ ಜನರು ಆ ಗುಡಿಯ ಬಾಗಿಲು ಹಾಕಿ, ಹೊಡೆಯಿರಿ, ಹಿಡಿಯಿರಿ ಹಿಡಿಯಿರಿ ತೀವ್ರವಾಗಿ ಹೊಡೆಯಿರಿ ಎಂದೆನ್ನುತ್ತ ಕಲ್ಲುಗಳಿಂದ ನನ್ನನ್ನು ಹೊಡೆಯಹತ್ತಿದರು || ೫೨ || ಹೊರಗೆ ಹೋಗಲಿಕ್ಕೆ ನನಗೆ ಹಾದಿ ಇದ್ದಿಲ್ಲ. ಜೀವವನ್ನು ಉಳಿಸಿಕೊಳ್ಳಬೇಕೆಂದು ನಾನು ಮತ್ತೆ ದೇವಾಲಯದೊಳಗೆ ಓಡಿದೆನು. ಎಲ್ಲಿ ನೋಡಿದರೂ ಹೊರಗೆ ಹೋಗಲಿಕ್ಕೆ ಮಾರ್ಗವಿದ್ದಿಲ್ಲ. || ೫೩ || ಹೊರಗೆ ಹೋಗಬೇಕೆಂದು ಮತ್ತೆ ನಾನು ಬಾಗಿಲ ಕಡೆಗೆ ಬಂದೆನು. ಆಗ ಎಲ್ಲ ಜನರು ನನ್ನ ಬೆನ್ನುಹತ್ತಿ ಬರಲು ನಾನು ಆ ದೇವಾಲಯದಲ್ಲಿಯೇ ಹೊಕ್ಕು ಸವ್ಯ ಪ್ರದಕ್ಷಿಣೆ ಹಾಕಿದೆನು. || ೫೪ || ಅಲ್ಲಿ ಅಡಗಲು ಸ್ಥಳವು ಕೂಡ ಇರಲಿಲ್ಲ. ಅಲ್ಲಿ ಏನೂ ಕಾಣದ್ದರಿಂದ ನಾನು ಮತ್ತೆ ಪೌಳಿಯನ್ನು ಸುತ್ತಹತ್ತಿದೆನು. ಎಲ್ಲರೂ ನನ್ನ ಬೆನ್ನುಹತ್ತಿ ಬರಲು ಹಾಗೆಯೇ ಓಡಿದೆನು. || ೫೫ || ಎಲೌ ಸ್ತ್ರೀಯಳೇ, ಏನಾದರೂ ಎಂಜಲ ಸಿಗುವದೆಂದು ಗುಡಿಯೊಳಗೆ ಹೊಕ್ಕೆನು. ಆದರೆ ಈ ಗದ್ದಲನಿಂದ ಮನಸ್ಸಿನಲ್ಲಿ ಬಹಳ ಕಷ್ಟವಾಗಿ, ಹಸಿವೆಗಿಂತಲೂ ಪ್ರಾಣ ಉಳಿಸಿಕೊಳ್ಳುವ ಭಯವೇ ಹೆಚ್ಚಾಗಿ || ೫೬ || ಆ ಗುಡಿಯನ್ನು ಮೂರು ಸಾರೆ ಪ್ರದಕ್ಷಿಣೆ ಮಾಡಿ ಜನರು ಹೊಡೆಯುತ್ತಾರೆಂದು ಅಂಜಿ ಹಾಗೇ ಗರ್ಭಗುಡಿಯೊಳಗೆ ಹೊಕ್ಕು ಅಲ್ಲಿ ನಡೆಯುತ್ತಿದ್ದ ಶಿವಪೂಜೆಯನ್ನು ನೋಡಹತ್ತಿದೆನು. || ೫೭ || ಆಗ ಎಲ್ಲ ಜನರು ಬಾಗಿಲಿಗೆ ನಿಂತುಕೊಂಡು ಅನೇಕ ಶಸ್ತ್ರಗಳಿಂದ ನನ್ನನ್ನು ಹೊಡೆದು ಎಳೆದು ಆ ಶಿವಾಲಯದ ಹೊರಗೆ ಹಾಕಿದರು. || ೫೮ || ಪ್ರಾಣೇಶ್ವರಿಯೇ ಮುಂದೆ ಕೇಳು. ಆ ದಿವಸ ಶಿವರಾತ್ರಿ ಇದ್ದು ನನಗೆ ತಿನ್ನಲಿಕ್ಕೆ

ಏನೂ ಸಿಗದೆ ಉಪವಾಸವಾದ ಪುಣ್ಯದಿಂದಲೂ, ಆ ದಿವಸ ಶಿವಾಲಯವನ್ನು ಮೂರು ಸಾರೆ ಪ್ರದಕ್ಷಿಣೆ ಮಾಡಿ ಶಿವಪೂಜೆಯನ್ನು ನೋಡಿದ ಪುಣ್ಯದಿಂಗಲೂ, ಮತ್ತು ಆ ದೇವಾಲಯದಲ್ಲಿ ಹಚ್ಚಿದ ಅನೇಕ ದೀಪಗಳನ್ನು ನೋಡುತ್ತ ನಾನು ಶಿವಾಲಯದ ದ್ವಾರದಲ್ಲಿ ಪ್ರಾಣ ಬಿಟ್ಟ ಪುಣ್ಯದಿಂದಲೂ, ಈ ಜನ್ಮದಲ್ಲಿ ನಾನು ರಾಜನಾಗಿ ಹುಟ್ಟಿದೆನು. ‖ ೬೧ ‖ ಪ್ರೀಯೇ, ನೀನು ಕೇಳಿದ ಕೂಡಲೇ ಆ ಹಿಂದಿನ ಜನ್ಮದ ಪುಣ್ಯದಿಂದಲೇ ಈಗ ನನಗೆ ಜ್ಞಾನವಾಯಿತು. ಪ್ರಿಯೇ, ಈ ಪ್ರಕಾರ ಮಹಾಶಿವರಾತ್ರಿಯ ಮಹಿಮೆ ಇರುವದು. ನೀನು ನನಗೆ ದುರಾಚಾರಿ ಅನ್ನುತ್ತಿಯಷ್ಟೇ ? ಆದರ ಕಾರಣವನ್ನು ನಿನಗೆ ಹೇಳುವೆನು ಕೇಳು. ‖ ೬೨ ‖ ನಾನು ಪೂರ್ವಜನ್ಮದಲ್ಲಿ ನಾಯಿಯಾಗಿದ್ದೆನಷ್ಟೇ ? ನಾಯಿಯ ಸ್ವಭಾವವು ಸರ್ವಭಕ್ಷಣ ಮಾಡುವದು ಮತ್ತು ಎಲ್ಲ ಕಡೆಗೆ ಹೋಗುವದು ಆಗಿದೆಯಲ್ಲವೇ ? ಆದರಂತೆ ಈಗ ನನ್ನ ಗುಣವಾಗಿದೆ ಎಂದು ಹೇಳಿದನು. ‖ ೬೩ ‖ ಆಗ ಆಕೆಯು ಸ್ವಾಮೀ, ನೀವು ನಿಮ್ಮ ಪೂರ್ವ ಜನ್ಮದ ಕಥೆಯನ್ನು ಹೇಳಿದಿರಿ. ‖ ೬೪ ‖ ಪ್ರಾಣೇಶ್ವರನೇ, ಈಗ ನೀವು ಜ್ಞಾನಿಗಳಾದ್ದರಿಂದ ನನ್ನಮೇಲೆ ಕ್ರಪೆಮಾಡಿ ನನ್ನ ಪೂರ್ಪಜನ್ಮದ ವೃತ್ತಾಂತವನ್ನೂ ವಿಸ್ತಾರವಾಗಿ ಹೇಳಿರಿ. ಎಂದು ಪತಿಯ ಚರಣಕ್ಕೆ ನಮಸ್ಕರಿಸಿದಳು. ‖ ೬೫ ‖ ಆಗ ಅವನು— ಎಲ್ಯೆ ಸುಂದರ ಜ್ಞಾನವಂತ ಸತಿಯೇ ಕೇಳು. ನೀನು ಪೂರ್ವದಲ್ಲಿ ಹೆಣ್ಣು ಪಾರಿವಾಳವಾಗಿದ್ದಿ ಒಂದು ದಿವಸ ನೀನು ಆಹಾರದ್ದೆಶೆಯಿಂದ ಅಡ್ಡಾಡುತ್ತಿದ್ದಿ. ‖ ೬೬ ‖ ಆಗ ಭೂಮಿಯಲ್ಲಿ ಒಂದು ಮಾಂಸದ ಗುಳಿಗೆಯು ಬಿದ್ದಿತ್ತು. ನೀನು ಆದನ್ನು ಚುಂಚುವಿನಲ್ಲಿ ಹಿಡಿದುಕೊಂಡು ಆಕಾಶದಲ್ಲಿ ಹಾರಾಡುತ್ತಿದ್ದಿ. ಅದನ್ನು ಒಂದು ಗಿಡಗವು ನೋಡಿತು. ‖ ೬೭ ‖ ಅದು ನಿನ್ನ ಬಾಯೊಳಗಿನ ಮಾಂಸವನ್ನು ತಕ್ಕೊಳ್ಳಬೇಕೆಂದು ನಿನ್ನ ಸಮೀಪಕ್ಕೆ ಓಡಿ ಬಂದಿತು ಆಗ ನೀನು ವೇಗದಿಂದ ಓಡುತ್ತ, ಒಂದು ದೊಡ್ಡ ಅರಣ್ಯದಲ್ಲಿ ಹೋಗುತ್ತಿರಲು ‖ ೬೮ ‖ ಆಗ ಆ ಗಿಡಗವೂ ನಿನ್ನ ಬೆನ್ನುಹತ್ತಿ ಬಂದದ್ದರಿಂದ ನೀನು ಏನೂ ವಿಚಾರ ಮಾಡದೆ ಮತ್ತೆ ಮುಂದೆ ಮುಂದೆ ವನಾಂತರಗಳನ್ನು ತಿರಗುತ್ತ ಕಡೆಗೆ ಶ್ರೀಶೈಲ ಪರ್ವತಕ್ಕೆ ಹೋದೆ. ‖ ೬೯ ‖ ಕೂಡಲೆ ಅಲ್ಲಿಯೂ ಆ ಗಿಡಗವು ನಿನ್ನ ಹಿಂದಿನಿಂದಲೇ ಬಂದಿತು. ಆಗ ನೀನು ಆ ಶಿವಾ-

ಲಯದ ಮೇಲೆ ಹೋಗಿ ಹೆದರಿಕೆಯಿಂದ ಶಿಖರದ ಸುತ್ತ ಪ್ರದಕ್ಷಿಣಾಕಾರವಾಗಿ ತಿರಗುತ್ತ ಬಹಳ ಬಳಲಿದಿ. ॥ ೭೦ ॥ ಸ್ವಲ್ಪ ವೇಳೆಯಾದಮೇಲೆ, ನೀನು ಬಹಳ ದೂರದಿಂದ ಹಾರಿ ಬಂದ ಕಷ್ಟದಿಂದ ಕಂಠಗತಪ್ರಾಣಳಾಗಿ ಆ ಶಿಖರದಲ್ಲಿ ಕುಳಿತುಕೊಂಡಿ. ಆಗ ಆ ಗಿಡಗವು ಬಂದು ನಿನ್ನನ್ನು ತನ್ನ ಕೊಕ್ಕಿನಿಂದ ಹೊಡೆಯಿತು, ನಿನ್ನ ಪ್ರಾಣವು ಹಾರಿ ಹೋಯಿತು. ಆಮೇಲೆ ಆದು ನಿನ್ನ ಬಾಯೊಳಗಿನ ಮಾಂಸದ ತುಂಡನ್ನು ತಕ್ಕೊಂಡು ಹೋಯಿತು. ಆಗ ನೀನು ಶ್ರೀಶೈಲ ಶಿಖರದ ಪ್ರದಕ್ಷಿಣೆ ಮಾಡಿದ ಪುಣ್ಯದ ಫಲದಿಂದ ಈಗ ನೀನು ರಾಜಪತ್ನಿಯಾಗಿರುವೆ ಎಂದು ಹೇಳಿದನು. ॥ ೭೨ ॥ ಆಗ ಆಕೆಯು ಪುನಃ ಪತಿಯನ್ನು ಕುರಿತು— ಪ್ರಾಣನಾಥಾ, ಪ್ರಾಣಪ್ರಿಯ, ರಾಜೇಂದ್ರ ಈಗ ನಿಮ್ಮ ಅಪ್ಪಣೆಯಂತೆ ನಾನೂ ಈಶ್ವರನ ಪೂಜೆಯನ್ನು ಮಾಡುತ್ತೇನಷ್ಟೆ? ॥ ೭೩ ॥ ಆದ್ದರಿಂದ ಮುಂದೆ ನೀವು ಎಲ್ಲಿ ಹುಟ್ಟುವಿರಿ? ನಾನು ಎಲ್ಲಿ ಹುಟ್ಟುವೆನು? ಎಂಬ ವಿಷಯವಾಗಿ ಭವಿಷ್ಯವನ್ನು ವಿಸ್ತಾರವಾಗಿ ಹೇಳಿರಿ ಎಂದು ಬೇಡಿಕೊಂಡಳು. ॥ ೭೪ ॥ ಆಗ ಆ ರಾಜನು— ಎಲೈ ಪ್ರಿಯೇ, ನನ್ನ ಮತ್ತು ನಿನ್ನ ಮುಂದಿನ ಜನ್ಮಗಳನ್ನು ಹೇಳುತ್ತೇನೆ ಕೇಳು.

ನಾನು ಮುಂದಿನ ಜನ್ಮದಲ್ಲಿ ಸಿಂಧು ದೇಶದ ರಾಜನಾಗಿ ಹುಟ್ಟುವೆನು. ॥ ೭೫ ॥ ನೀನು ಸೃಂಜಯ ದೇಶದ ಪವಿತ್ರನಾದ ರಾಜನ ಪುತ್ರಿಯಾಗಿ ಹುಟ್ಟಿ ನನ್ನ ಪತ್ನಿಯಾಗುವಿ. ॥ ೭೬ ॥ ಮೂರನೇ ಜನ್ಮದಲ್ಲಿ ನಾನು ಸೌರಾಷ್ಟ್ರ ದೇಶದ ರಾಜನಾಗುವೆನು. ನೀನು ಕಲಿಂಗ ದೇಶದ ರಾಜಪುತ್ರಿಯಾಗಿ ನನ್ನ ಪತ್ನಿಯಾಗುವಿ. ॥ ೭೭ ॥ ನಾಲ್ಕನೇ ಜನ್ಮದಲ್ಲಿ ನಾನು ಗಾಂಧಾರ ದೇಶದ ರಾಜನಾಗುವೆನು. ಆಗ ನೀನು ಮಗಧ ದೇಶದ ರಾಜಪುತ್ರಿಯಾಗಿ ನನ್ನ ಪ್ರಾಣೇಶ್ವರಿಯಾಗುವಿ. ॥ ೭೮ ॥ ಐದನೇ ಜನ್ಮದಲ್ಲಿ ನಾನು ಅವಂತಿಯ ರಾಜನಾಗುವೆನು. ನೀನು ದಶಾರ್ಣವ ದೇಶದ ರಾಜಪುತ್ರಿಯಾಗಿ ನನ್ನ ಹೆಂಡತಿಯಾಗುವಿ. ॥ ೭೯ ॥ ನಾನು ಆರನೇ ಜನ್ಮದಲ್ಲಿ ಶರ್ಯಾತಿ ರಾಜಪುತ್ರನಾಗಿ ಆನರ್ತ (ಆನಂತ) ಎಂಬ ಹೆಸರಿನ ರಾಜನಾಗುವೆನು. ನೀನು ಯಯಾತಿ ರಾಜ ಪುತ್ರಿಯಾಗಿ ನನ್ನ ಮಡದಿಯಾಗುವಿ. ॥ ೮೦ ॥ ಏಳನೇ ಜನ್ಮದಲ್ಲಿ ನಾನು ಪಾಂಡ್ಯದೇಶದ ರಾಜನಾಗುವೆನು.

ಆಗ ನನ್ನ ಸಮಾನ ರೂಪ-ಲಾವಣ್ಯವಂತರು ಈ ಜಗತ್ತಿನಲ್ಲಿ ಯಾರೂ ಇರುವದಿಲ್ಲ. ‖ ೪೧ ‖ ಮತ್ತು ನಾನು ಜ್ಞಾನಿಯೂ, ಸರ್ವ ಗುಣವುಳ್ಳವನೂ, ಸೂರ್ಯನಂತೆ ಕಾಂತಿಯುಳ್ಳವನೂ, ಚಂದ್ರನಂತೆ ಮುಖವುಳ್ಳವನೂ, ಮದನನಂತೆ ರೂಪವುಳ್ಳವನೂ, "ಪದ್ಮವರ್ಣ" ಎಂಬ ಹೆಸರುಳ್ಳವನೂ ಆಗುವೆನು. ‖ ೪೨ ‖ ಪ್ರಿಯೇ, ಆಗ ನೀನು ವೈದರ್ಭ ದೇಶದ ರಾಜಪುತ್ರಿಯಾಗಿ ಹುಟ್ಟಿ, ಸುವರ್ಣದ ಪುತ್ಥಳಿಯಂತೆ ಮತ್ತು ಚಂದ್ರಕಾಂತಿಯಂತೆ ಸುಂದರ ಲಾವಣ್ಯ ಮುಖವುಳ್ಳವಳಾಗುವಿ. ‖ ೪೩ ‖ ಮತ್ತು ನೀನು "ಸುಮತಿ" ಎಂಬ ಹೆಸರುಳ್ಳವಳಾಗುವಿ. ಆಗ ನನಗೂ ನಿನಗೂ ಸ್ವಯಂವರವಾಗುವದು ನಳನು ದಮಯಂತಿಯನ್ನು ವರಿಸಿದಂತೆ ಆ ಸ್ವಯಂವರದಲ್ಲಿ ನಾನು ನಿನ್ನನ್ನು ವರಿಸುವೆನು. ‖ ೪೪ ‖ ಆಮೇಲೆ ನಾನು ಬಹುದಿವಸ ರಾಜ್ಯವಾಳಿ, ಸಾವಿರ ಯಾಗಗಳನ್ನು ಮಾಡಿ, ಸರ್ವ ದೇಶದ ರಾಜರನ್ನು ಗೆದ್ದು, ಅನೇಕ ಮಂತ್ರ ಶಾಸ್ತ್ರಗಳನ್ನು ಕಲಿಯುವೆನು. ‖ ೪೫ ‖ ಮತ್ತು ದೇವ-ಬ್ರಾಹ್ಮಣರ ಪೂಜೆ ಮಾಡಿ, ಆ ಬ್ರಾಹ್ಮಣರಿಗೆ ನಾನಾ ಅಗ್ರಹಾರಗಳನ್ನು ದಾನವಾಗಿ ಕೊಡುವೆನು. ಈ ಪ್ರಕಾರ ಮಾಡಿ ವೃದ್ಧಾಪ್ಯ ಕಾಲಕ್ಕೆ ರಾಜ್ಯದಲ್ಲಿ ಮಗನನ್ನು ಸ್ಥಾಪಿಸುವೆನು. ‖ ೪೬ ‖ ಬಳಿಕ ನಾನು ಸಂನ್ಯಾಸವನ್ನು ತಕ್ಕೊಂಡು, ಅಗಸ್ತ್ಯರ ಹತ್ತರ ಹೋಗಿ ಅವರಿಂದ ಬ್ರಹ್ಮಜ್ಞಾನವನ್ನು ಹೊಂದಿ ಕಡೆಗೆ ಮೋಕ್ಷವನ್ನು ಹೊಂದುವೆನು. ‖ ೪೭ ‖ ದೇಹಾವಸಾನ ಸಮಯ ಬಂದಾಗ ನಿನ್ನನ್ನು ಸಂಗಡ ಕರಕೊಂಡು, ದಿವ್ಯವಾದ ವಿಮಾನದಲ್ಲಿ ಕುಳಿತು ಆಮೇಲೆ ಸ್ವರ್ಗಕ್ಕೆ ಹೋಗುವೆನು. ‖ ೪೮ ‖ ಪ್ರಿಯಳೇ, ಈಶ್ವರ ಪೂಜೆಯ ಮಹಿಮೆಯು ಹೆಚ್ಚಿನದು. ಅದರಲ್ಲಿ ಮಹಾಶಿವರಾತ್ರಿ ವ್ರತದ ಮಹಿಮೆಯನ್ನೂ ಮತ್ತು ಉತ್ತಮವಾದ ಶ್ರೀಶೈಲ ಯಾತ್ರಾ ಮಹಿಮೆಯಿಂದ ಬರುವ ವಿಶೇಷ ಪುಣ್ಯವನ್ನೂ ವರ್ಣಿಸುವದು ಯಾರಿಗೆ ಶಕ್ಯವಾದೀತು ? ‖ ೪೯ ‖ ಎಂದು ಆ ವಿಮರ್ಷಣ ರಾಜನು ತನ್ನ ಹೆಂಡತಿಗೆ ಹೇಳಿ, ಈಗ ಹೋಗೋಣ ಎಂದು ಆಕೆಯನ್ನು ಕರಕೊಂಡು ಶಿವರಾತ್ರಿಗೆ ಶ್ರೀಶೈಲ ಯಾತ್ರೆಗೆ ಹೋಗಿ ಬಂದನು. ‖ ೫೦ ‖ ಎಲೈ ತಂತುಕನೇ ಶಿವರಾತ್ರಿಯ ಮಹಿಮೆಯು ಈ ಪ್ರಕಾರವಾಗಿರುತ್ತದೆ. ಆ ರಾಜಾ-ರಾಣಿಯರು ನಿತ್ಯ ಮನೆಯಲ್ಲಿ ಶಿವಪೂಜೆ ಮಾಡುತ್ತ ಪ್ರತಿವರ್ಷ ಶ್ರೀಶೈಲಕ್ಕೆ ಹೋಗಿ

ಶಿವರಾತ್ರಿಯಲ್ಲಿ ಶ್ರೀ ಮಲ್ಲಿಕಾರ್ಜುನನ ಪೂಜಾ ಮಾಡಿ ಯಾತ್ರಾ ಮಾಡುತ್ತಿದ್ದದರಿಂದ ಈ ಪ್ರಕಾರ ಏಳು ಜನ್ಮಗಳಲ್ಲಿ ರಾಜಪದವಿಯನ್ನು ಹೊಂದಿದರು. ॥ ೯೧ ॥ ಅಂತ್ಯದಲ್ಲಿ ಸ್ವರ್ಗವನ್ನು ಪಡೆದರು. ಶ್ರೀಶೈಲ ಯಾತ್ರೆಯ ಮಹಿಮೆಯು ಈ ಪ್ರಕಾರವಾಗಿರುವದು. ನಿನಗಂತೂ ಗುರುಮುಖದಿಂದ ಶ್ರೀಶೈಲ ಯಾತ್ರೆಯಾಯಿತು. ಇನ್ನು ನೀನು ಉತ್ತಮ ರೀತಿಯಿಂದ ಶಿವಪೂಜೆ ಮಾಡು. ॥ ೯೨ ॥ ಗಾಣಗಾಪುರದಲ್ಲಿ ಭೀಮಾತೀರದಲ್ಲಿರುವ ಕಲ್ಲೇಶ್ವರನು ಮಲ್ಲಿಕಾರ್ಜುನನಿಗೆ ಸಮಾನನಾಗಿರುವನು. ನೀನು ಅವನನ್ನು ನಿರಂತರ ಪೂಜೆ ಮಾಡು. ॥ ೯೩ ॥ ಮತ್ತು ಸಂಗಮದಲ್ಲಿರುವ ಸಂಗಮೇಶ್ವರನೂ ಮಲ್ಲಿಕಾರ್ಜುನನಿಗೆ ಸಮಾನವೆಂದು ತಿಳಿದು ಅವನನ್ನು ಅಹೋರಾತ್ರಿ ಪೂಜಿಸು. ಮನಸಿನಲ್ಲಿ ಏನೂ ಸಂಶಯ ಮಾಡಬೇಡ, ಎಂದು ಹೇಳಿದರು. ॥ ೯೪ ॥ ಆಗ ಆ ತಂತುಕನು— ಸ್ವಾಮೀ, ಗುರುಗಳೇ, ಅವನನ್ನು ಇವನನ್ನು ಪೂಜಿಸೆಂದು ಹೇಳಿ ವ್ಯರ್ಥವಾಗಿ ನನ್ನನ್ನೇಕೆ ಕಷ್ಟಪಡಿಸುವಿರಿ? ನಾನು ಈಗ ಮಲ್ಲಿಕಾರ್ಜುನನ ಪೂಜೆಗೆ ಹೋದಾಗ ಆ ಲಿಂಗ ಸ್ಥಾನದಲ್ಲಿ ತಮ್ಮನ್ನೇ ನೋಡಿರುವೆನು. ॥ ೯೫ ॥ ಎಲ್ಲಾ ಕಡೆಯಲ್ಲಿ ನೀವೊಬ್ಬರೇ ವ್ಯಾಪಿಸಿರಲಿಕ್ಕೆ ಸಂಗಮೇಶ್ವರ ಕಲ್ಲೇಶ್ವರರನ್ನು ಪೂಜಿಸಲಿಕ್ಕೆ ಯಾಕೆ ಹೇಳುವಿರಿ? ಎಂದನು. ॥ ೯೬ ॥ ಅವನ ಮಾತಿಗೆ ಶ್ರೀಗುರುಗಳು ನಕ್ಕು— ಎಲೈ ತಂತುಕನೇ, ಹಾಗೇ ಆಗಲಿ. ಈಗ ಮತ್ತೆ ನನ್ನ ಪಾದುಕಾ ಹಿಡಿದು ಕಣ್ಣು ಮುಚ್ಚು ಎಂದು ಹೇಳಿ ಅವನೊಡನೆ ವಾಯುವೇಗದಿಂದ ಸಂಗಮಕ್ಕೆ ಬಂದರು. ॥ ೯೭ ॥ ಆ ಪೂರ್ವದಲ್ಲಿ ಗಾಣಗಾಪುರದಲ್ಲಿದ್ದ ಭಕ್ತ ಜನರು ಬಹಳ ಹೊತ್ತಿನ ತನಕ ಗುರುಗಳನ್ನು ಕಾಣದೆ ಮನಸ್ಸಿನಲ್ಲಿ—ಸಂಗಮಕ್ಕೆ ಹೋದ ಗುರುಗಳು ಇನ್ನೂ ಮಠಕ್ಕೆ ಬರಲಿಲ್ಲ ಎಲ್ಲಿಗೆ ಹೋಗಿರಬಹುದು? ಎಂದೆನ್ನುತ್ತ ನದೀತೀರದಲ್ಲಿ ಹುಡುಕುತ್ತಿದ್ದರು. ॥ ೯೮ ॥ ಅವರಲ್ಲಿ ಕೆಲವರು— ಈ ದಿನ ಆರು ತಾಸಿನ ಸುಮಾರಕ್ಕೆ ಶ್ರೀಗುರುಗಳು ಸಂಗಮದಲ್ಲಿದ್ದರು ಎಂದು ಹೇಳಿದರು. ಮತ್ತೆ ಕೆಲವರು— ನಾವು ಈಗ ಸಂಗಮದಿಂದ ಬಂದೆವು. ಅಲ್ಲಿ ಗುರುಗಳಿದ್ದಿಲ್ಲ, ಎಲ್ಲಿಗೋ ಹೋದರು ನೋಡಿರಿ ಎಂದರು. ಆಗ ಆ ಎಲ್ಲ ಜನರು— ಹಾಗಾದರೆ ಶ್ರೀಗುರುಗಳು ಎಲ್ಲಿಗೆ ಹೋಗಿದ್ದಾರು? ಎಂದು ಚಿಂತಿಸುತ್ತಿದ್ದರು. ॥ ೯೯ ॥ ಶ್ರೀಗುರುಗಳು ತಾವು ಸಂಗಮಕ್ಕೆ ಬಂದ

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

ಕೂಡಲೆ ಊರೊಳಗಿನ ಶಿಷ್ಯರನ್ನು ಕರೆಯಲಿಕ್ಕೆ ತಂತುಕನನ್ನು ಕಳಿಸಿದ್ದರು. ॥ ೧೦೦ ॥ ಆ ಜನರು ಚಿಂತಿಸು ವಷ್ಟರಲ್ಲಿ ಆ ತಂತುಕನು ಊರೊಳಗೆ ಬಂದನು. ಅವನನ್ನು ಕಂಡು ಆ ಎಲ್ಲ ಜನರು ಅತಿ ತ್ವರೆಯಿಂದ ಅವನ ಹತ್ತರ ಬಂದು— ಏನೋ! ತಂತುಕಾ, ಈ ದಿವಸ ಶಿವರಾತ್ರಿ ಇದ್ದು ಕ್ಷೌರವನ್ನೇಕೆ ಮಾಡಿಸಿದಿ? ಎಂದು ಕೇಳಿದರು. ಆಗ ಅವನು ಆವರಿಗೆ ಕೈಮುಗಿದು— ಸ್ವಾಮೀ, ಶ್ರೀಗುರುಗಳು ನನ್ನನ್ನು ಶ್ರೀಶೈಲಕ್ಕೆ ಕರಕೊಂಡು ಹೋಗಿದ್ದರು. ॥ ೧೦೧ ॥ ಇದೇ ಈಗ ಬಂದೆವು. ಎಂದು ಅಲ್ಲಿಂದ ತಂದ ದವನ-ಪ್ರಸಾದ-ವಿಭೂತಿ-ನಾನಾ ಪ್ರಕಾರದ ಹೂವಿನ ಹಾರಗಳನ್ನು ತೋರಿಸಿದನು. ಆಗ ಆ ಎಲ್ಲ ಜನರು ಆಶ್ಚರ್ಯಬಟ್ಟರು. ಅವರಲ್ಲಿ ಕೆಲವರು— ಇವನು ಈ ದಿನ ಆರು ತಾಸಿನ ತನಕ ತನ್ನ ಮನೆಯಲ್ಲಿದ್ದನು. ಶ್ರೀಶೈಲಕ್ಕೆ ಹ್ಯಾಗೆ ಹೋಗಿದ್ದಾನು ಎಂದರು. ॥ ೧೦೨ ॥ ಮತ್ತೆ ಕೆಲವರು— ಇದು ಸತ್ಯವೋ, ಮಿಥ್ಯವೋ ಎಂಬುದಕ್ಕೆ ಅವನನ್ನೇ ಕೇಳೋಣ ಎಂದು ಎಲೈ ತಂತುಕನೇ, ಈ ದಿವಸ ನೀನು ಶ್ರೀಶೈಲಕ್ಕೆ ಹೋದದ್ದು ಸತ್ಯವೋ, ಮಿಥ್ಯವೋ ನೀನೇ ಸತ್ಯವಾಗಿ ಹೇಳಿಬಿಡು ಎಂದರು. ಆಗ ಅವನು— ಅಯ್ಯಾ, ಸತ್ಯವಾಗಿ ಶ್ರೀಗುರುಗಳು ನನ್ನನ್ನು ವಾಯುವೇಗ ದಿಂದ ಶ್ರೀಶೈಲಕ್ಕೆ ಕರಕೊಂಡು ಹೋಗಿದ್ದರು. ॥ ೧೦೩ ॥ ಈಗ ಮತ್ತೆ ವಾಯುವೇಗದಿಂದ ಕರಕೊಂಡು ಸಂಗಮಕ್ಕೆ ಬಂದರು. ಈ ದಿವಸ ಅವರು ಸಂಗಮದಲ್ಲಿಯೇ ಇರುತ್ತಾರಂತೆ, ಕಾರಣ ಮಠದೊಳಗಿನ ಶಿಷ್ಯರನ್ನು ಕರೆಯಲಿಕ್ಕೆ ನನ್ನನ್ನು ಕಳಿಸಿದರು. ಆದಕ್ಕೆ ಬಂದೆನು ಎಂದು ಹೇಳಿದನು ॥ ೧೦೪ ॥ ಅವನ ಮಾತು ಕೇಳಿ ಭಾವಿಕ ಜನರು ಇದು ಸತ್ಯವೆಂದೂ, ಮೂಢ ಜನರು— ಇದು ಸತ್ಯವಲ್ಲ ಮಿಥ್ಯವು ಎಂದು ಅಂದರು. ಆಮೇಲೆ ಆ ತಂತುಕನು ಆ ಶಿಷ್ಯರನ್ನು ಕರೆಯಲಿಕ್ಕೆ ತೀವ್ರವಾಗಿ ಮಠಕ್ಕೆ ಹೋಗಿ ॥ ೧೦೫ ॥ ಆ ಶಿಷ್ಯರಿಗೆ ಸರ್ವ ಸಂಗತಿಯನ್ನು ಹೇಳಿ ಗುರುಗಳಾಜ್ಞೆಯನ್ನು ತಿಳಿಸಿದನು. ಕೂಡಲೆ ಅವರೆಲ್ಲರು ಸಂಗಮಕ್ಕೆ ಹೋದರು. ಎಲೈ ನಾಮಧಾರಕನೇ, ಅಲ್ಲಿ ಶ್ರೀಗುರುಗಳ ಪೂಜೆಯು ಬಹು ಒಳ್ಳೇ ರೀತಿಯಿಂದ ಆಯಿತು. ॥ ೧೦೬ ॥ ಈ ಸಂಗತಿಯು ಸುಳ್ಳೆಂದು ಯಾರು ಅನ್ನುತ್ತಾರೋ, ಅವರು ಮಹಾ ಪಾತಕವನ್ನು ಹೊಂದುತ್ತಾರೆ. ಮುಂದೆ

ಹದಿನೈದು ದಿವಸಗಳ ಮೇಲೆ ಶ್ರೀಶೈಲಕ್ಕೆ ಹೋದ ಆ ತಂತುಕನ ತಾಯಿ–ತಂದೆ ಮೊದಲಾದವರೆಲ್ಲರೂ ಊರಿಗೆ ಬಂದರು. ॥ ೧೦೭ ॥ ಆಗ ಆ ಊರ ಜನರು ಆ ತಂತುಕನ ವಿಷಯವಾಗಿ ವಿಚಾರಿಸಿದರು. ಆಗ ಅವರು— ಶ್ರೀಗುರುಗಳೂ ತಂತುಕನೂ ಶ್ರೀಶೈಲ ಪರ್ವತಕ್ಕೆ ಬಂದದ್ದು ಸತ್ಯವೆಂದು ಹೇಳಿದರು ಆಗ ಆ ಎಲ್ಲ ಭಕ್ತರಿಗೆ ಆನಂದವಾಯಿತು. ಎಂದು ಸರಸ್ವತೀ ಗಂಗಾಧರನು ಹೇಳಿದನು. ॥ ೧೦೮ ॥ ಮತ್ತೆ ಸಿದ್ಧರು— ಎಲೈ ನಾಮ ಧಾರಕನೇ, ಗುರುಮಹಿಮಾ ಅಪಾರವಾಗಿರುತ್ತದೆ. ಅದನ್ನು ನಿರಂತರ ಭಕ್ತಿಯಿಂದ ಕೇಳಿದರೆ ಅಮೃತ ಪಾನ ಮಾಡಿದಂತೆಯೇ ಸರಿ ಎಂದು ಹೇಳಿದರು ॥ ೧೦೯ ॥ ಎಂದು ಈ ರೀತಿಯಾಗಿ ಸರಸ್ವತೀ ಗಂಗಾಧರನು ಗುರು ಚರಿತ್ರೆಯನ್ನು ಶ್ರೋತೃಗಳಿಗೆ ವಿಸ್ತಾರವಾಗಿ ಹೇಳಿ ಇದನ್ನು ಭಕ್ತಿಯಿಂದ ಕೇಳಿದರೆ ಸಿದ್ಧರು ಹೇಳಿದಂತೆ ಅಮೃತ ಸೇವಿಸಿದಂತೆಯೇ ಆಗುವದು ಎಂದು ಅಂದನು. ॥ ೧೧೦ ॥ ಹೀಗೆ ಶ್ರೀ ಗುರುಚರಿತ್ರಾಮೃತದಲ್ಲಿ ಶ್ರೀಶೈಲ ಯಾತ್ರಾ ಮಹಿಮೆಯ ಅಧ್ಯಾಯವನ್ನು ಸಿದ್ಧರು ನಾಮಧಾರಕನಿಗೆ ಅದ್ಭುತವಾಗಿ ವರ್ಣಿಸಿದ್ದನ್ನು ಹೇಳಿದೆ. ॥ ೧೧೧ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಶ್ರೀಶೈಲ ಶಿವರಾತ್ರಿ ಮಹಿಮಾ ವರ್ಣನಂ ನಾಮ ಚತುಶ್ಚತ್ವಾರಿಂಶೋಧ್ಯಾಯಃ ॥ ೪೪ ॥ ಶ್ರೀ ಗುರು ದೇವದತ್ತ ॥

— ೪೪ನೇ ಅಧ್ಯಾಯ ಸಮಾಪ್ತ —

# ೪೫ನೇಯ ಅಧ್ಯಾಯ

## —: ಬ್ರಾಹ್ಮಣನ ಕುಷ್ಠ ಪರಿಹಾರ :—

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಗ ನಾಮಧಾರಕನು— ಸ್ವಾಮೀ, ಸಿದ್ಧಮುನಿಗಳೇ, ನೀವು ಶ್ರೀ ಗುರುಚರಿತ್ರೆಯನ್ನು ಪ್ರತ್ಯಕ್ಷ ನೋಡಿರುವಿರಿ ನಿಮ್ಮ ಭಾಗ್ಯ ದೊಡ್ಡದು. ನೀವು ಪರಬ್ರಹ್ಮನನ್ನು ನೋಡಿದಂತೆಯೇ ಸರಿ ॥೧॥ ಭಕ್ತವತ್ಸಲರೂ ಭವಸಾಗರ ತಾರಕರೂ ಆದ ತಮ್ಮ ದರ್ಶನದಿಂದಲೂ ಅನುಗ್ರಹದಿಂದಲೂ ಶ್ರೀ ಗುರುಚರಿತ್ರೆಯನ್ನು ಕೇಳಿ ನನಗೆ ಅಮೃತಪಾನ ಮಾಡಿದಂತಾಗಿ ನನ್ನ ದೈನ್ಯ ಹಾಗೂ ಕಷ್ಟಗಳೆಲ್ಲ ಹೋಗಿ, ನಾನು ಸರ್ವ ಸುಖಗಳನ್ನೂ ಸಕಲಾಭೀಷ್ಟಗಳನ್ನೂ ಹೊಂದಿದೆನು ॥೨-೩॥ ದಯಾನಿಧಿಗಳೇ, ಈ ಮೊದಲು ತಾವು ಶ್ರೀ ಗುರುಗಳು ಸಂಗಮದಲ್ಲಿ ಉಳಿದರೆಂದು ಹೇಳಿದಿರಿ. ಆದರೆ ಮುಂದೆ ಏನಾಯಿತೆಂಬದನ್ನು ಹೇಳಬೇಕೆಂದು ಬೇಡಿಕೊಂಡನು ॥೪॥ ಆಗ ಸಿದ್ಧರು— ವತ್ಸಾ ನಾಮಧಾರಕಾ, ಮರುದಿವಸ ಒಂದು ವಿಚಿತ್ರ ಸಂಗತಿಯಾಯಿತು. ಅದನ್ನು ವಿಸ್ತಾರವಾಗಿ ಹೇಳುವೆನು ಏಕಚಿತ್ತದಿಂದ ಕೇಳು ॥೫॥

ಸರ್ವಾಂಗದಲ್ಲಿ ಬಿಳೀ ಕುಷ್ಠವುಳ್ಳಂಥ ನಂದಿ ಎಂಬ ಒಬ್ಬ ಬ್ರಾಹ್ಮಣನು ತನ್ನ ರೋಗ ಪರಿಹಾರಾರ್ಥವಾಗಿ ತುಳಜಾಪುರದ ತುಳಜಾಭವಾನಿ ಕಡೆಗೆ ಹೋಗಿ, ಮೂರು ವರ್ಷಗಳವರೆಗೆ ಉಪವಾಸದಿಂದ ಆಕೆಯನ್ನು ಆರಾಧಿಸಿ ಬಹಳ ಕಷ್ಟಪಟ್ಟನು. ಆಮೇಲೆ ಒಂದು ದಿವಸ ಅವನ ಸ್ವಪ್ನದಲ್ಲಿ ಆ ತುಳಜಾಭವಾನಿಯು ಬಂದು— ಎಲೈ, ಬ್ರಾಹ್ಮಣನೇ, ನೀನು ಇಲ್ಲಿಂದ ಚಂದಲಾ ಪರಮೇಶ್ವರಿ ಹತ್ತರ ಹೋಗು, ಎಂದು ಅಪ್ಪಣೆ ಮಾಡಿದಳು. ॥೬-೭॥ ಆ ಜಗದಂಬೆಯ ಅಪ್ಪಣೆಯಂತೆ ಅವನು ಚಂದಲಾ ಪರಮೇಶ್ವರೀ ಸ್ಥಾನಕ್ಕೆ ಬಂದು, ಅಲ್ಲಿ ಮತ್ತೆ ಉಪವಾಸದಿಂದ

ಏಳು ತಿಂಗಳು ಪುನಶ್ಚರಣೆ ಮಾಡಿ, ನಾನಾರೀತಿಯಿಂದ ಕಷ್ಟಪಡುತ್ತಿರಲು ಒಂದು ದಿವಸ ಅವಚಿತವಾದ ಸ್ವಪ್ನ ಬಿದ್ದು ಆ ಸ್ವಪ್ನದಲ್ಲಿ ಚಂದಲಾ ಪರಮೇಶರಿಯು ಬಂದು— ಎಲೈ, ಬ್ರಾಹ್ಮಣನೇ, ನೀನು ತೀವ್ರವಾಗಿ ಗಾಣಗಾಪುರಕ್ಕೆ ಹೋಗು. ||೯|| ಅಲ್ಲಿ ತ್ರೈಮೂರ್ತಿ ಅವತಾರಿಗಳಾದ ಶ್ರೀ ಸದ್ಗುರುಗಳು ಇರುವರು. ಅವರು ನರರೂಪ ಧಾರಣ ಮಾಡಿರುವರು. ಅಲ್ಲಿ ನಿನ್ನ ರೋಗವು ಹೋಗಿ ನೀನು ಉತ್ತಮ ಶರೀರವುಳ್ಳವನಾಗುವಿ, ಎಂದು ಹೇಳಿದಳು. ||೧೦|| ದೇವಿಯ ಮಾತು ಕೇಳಿ ಆ ಬ್ರಾಹ್ಮಣನು— ದೇವೀ, ಬಹಳ ನೆಟ್ಟಗಾಯಿತು! ನಿನ್ನ ಕೈಯಿಂದ ನೆಟ್ಟಗೆ ಮಾಡುವದಾಗದೆ ಆರು ತಿಂಗಳವರೆಗೆ ನನ್ನನ್ನೇಕೆ ಕಷ್ಟಪಡಿಸಿದೆ? ||೧೧|| ಜಗನ್ಮಾತೆಯಾದ ತುಳಜಾಭವಾನಿಯು ಅಪ್ಪಣೆಯಂತೆ, ನೀನೂ ದೇವಿಯೆಂದು ತಿಳಿದು (ಮುದ್ದಾಮ) ಕೂಡಲೇ ನಿನ್ನ ಹತ್ತಿರ ಬಂದೆನು. ||೧೨|| ನನಗೆ ನಿನ್ನ ದೇವತ್ವವು ಈಗ ಗೊತ್ತಾಯಿತು. ಮನುಷ್ಯರ ಹತ್ತರ ಹೋಗೆಂದು ನನಗೆ ನಿರೋಪ ಕೊಟ್ಟೆ ನಿನ್ನಿಂದ ಏನೂ ಆಗಲಿಲ್ಲ ||೧೩|| ದೇವೀ, ನಿನ್ನಲ್ಲಿ ನನ್ನ ರೋಗವು ಹೋದಿತೆಂಬ ವಿಶ್ವಾಸದಿಂದ ಬಂದೆನು. ಈಗ ನನ್ನನ್ನು ಮನುಷ್ಯರ ಹತ್ತರ ಕಳಿಸುತ್ತೀ ಅಂದಮೇಲೆ ನಿನ್ನ ದೇವತ್ವಕ್ಕೆ ಬೆಲೆ ಇಲ್ಲದಂತಾಯಿತು. ಇದು ನನ್ನ ಒಳ್ಳೇ ಭಾಗ್ಯವು! (ದುರ್ದೈವವು) ||೧೪|| ಮನುಷ್ಯರ ಹತ್ತರ ಹೋಗೆನ್ನಲಿಕ್ಕೆ ನಿನಗೆ ನಾಚಿಕೆಯಾದರೂ ಹ್ಯಾಗೆ ಬರಲಿಲ್ಲ! ಏಳು ತಿಂಗಳ ಉಪವಾಸ ಮಾಡಿ ನಿನ್ನ ದೇವತ್ವವನ್ನು ತಿಳಿದೆನು. ||೧೫|| ನೀನು ಮೊದಲೇ ಇಷ್ಟು ಹೇಳಿದ್ದರೆ, ನನಗೆ ಇಷ್ಟು ಕಷ್ಟವಾಗುತ್ತಿದ್ದಿಲ್ಲ. ನೀನೂ ಪರಮೇಶ್ವರಿಯು ನಿನ್ನಿಂದ ನೆಟ್ಟಗಾದೀತೆಂದು ನಾನು ಮನಸ್ಸಿನಲ್ಲಿ ದುರಾಸೆ ಮಾಡಿದ್ದೆನು. ||೧೬|| ಎಂದು ಆ ಬ್ರಾಹ್ಮಹ್ಮಣನು ಅನೇಕ ರೀತಿ ಕಷ್ಟಹೊಂದಿ ದುಃಖಿಸುತ್ತ— ದೇವೀ, ನಾನು ಮತ್ತೆ ಪುನಶ್ಚರಣೆ ಮಾಡುವೆನು. ||೧೭|| ಇದರಿಂದ ನನಗೆ ನೆಟ್ಟಗಾಗಬೇಕು. ಒಂದುವೇಳೆ ನೆಟ್ಟಗಾಗದಿದ್ದರೆ ಇಲ್ಲಿಯೇ ನನ್ನ ಪ್ರಾಣವನ್ನು ಕೊಡುವೆನು. ಎಂದು ಅಂದು ನಿಶ್ಚಯಮಾಡಿ ಗಟ್ಟಿಯಾಗಿ ಕುಳಿತುಬಿಟ್ಟನು. ||೧೮|| ಆಗ್ಗೆ ಸ್ವಪ್ನದಲ್ಲಿ ಮತ್ತೆ ಆ ದೇವಿಯು ಬಂದು, ಅವನಿಗೆ ಮೊದಲಿನಂತೆ ಹೇಳಿ, ಆಮೇಲೆ ತನ್ನ ಎಲ್ಲ ಪೂಜಾರಿಗಳ ಸ್ವಪ್ನದಲ್ಲಿಯೂ ಹೋಗಿ ಅದರಂತೆ

ಹೇಳಿದ್ದಲ್ಲದೆ ಅವನನ್ನು ಗುಡಿಯಿಂದ ಹೊರಗೆ ಹಾಕುವಂತೆಯೂ ಹೇಳಿದಳು. ॥ ೧೯ ॥ ಬೆಳಗಾದಮೇಲೆ ಯಾವತ್ತೂ ಪೂಜಾರಿಗಳು ಅವನ ಹತ್ತಿರ ಬಂದು— ಎಲೈ ಬ್ರಾಹ್ಮಣನೇ, ನಿನ್ನೆ ರಾತ್ರಿ ನಮಗೂ ಸ್ವಪ್ನವಾಗಿದೆ. ನೀನು ದೇವಿಯನ್ನು ಛಲಿಸಬೇಡ. ಆಕೆಯ ಅಪ್ಪಣೆಯಂತೆ ನೀನು ತೀವ್ರವಾಗಿ ಗಾಣಗಾಪುರಕ್ಕೆ ಹೋಗು. ॥೨೦॥ ಈಗ ಒಂದುವೇಳೆ ನೀನು ಹೋಗದಿದ್ದರೆ ನಿನ್ನನ್ನು ಗುಡಿಯಿಂದ ಹೊರಗೆ ಹಾಕಿ ಗುಡಿಯೊಳಗೆ ಬರಗೊಡದಂತೆ ಮಾಡಿರಿ ಎಂದು ನಮಗೆ ದೇವಿಯ ಆಜ್ಞೆಯಾಗಿದೆ ಎಂದರು. ॥ ೨೧ ॥ ಇಷ್ಟಾದಬಳಿಕ ಆ ಬ್ರಾಹ್ಮಣನು ನಾನಾರೀತಿಯಿಂದ ದೇವಿಯನ್ನು ಆರಾಧಿಸಿ ಪಾರಣೆಮಾಡಿ ಆಕೆಯ ಅಪ್ಪಣೆಯನ್ನು ತಕ್ಕೊಂಡು ಕೂಡಲೇ ಹೊರಟನು. ॥ ೨೨ ॥ ಹಾಗೇ ಗಾಣಗಾಪುರಕ್ಕೆ ಬಂದು ಅಲ್ಲಿರುವ ಜನರನ್ನು ಕುರಿತು— ಶ್ರೀ ಗುರುಗಳು ಎಲ್ಲಿರುವರು ? ಎಂದು ಕೇಳಿದನು. ಆಗ ಅಲ್ಲಿಯ ಭಕ್ತಜನರು— ಎಲೈ ಬ್ರಾಹ್ಮಣನೇ, ಶ್ರೀ ಗುರುಗಳು ಸಂಗಮದಲ್ಲಿರುವರು. ॥ ೨೩ ॥ ನಿನ್ನೆ ಶಿವರಾತ್ರಿ ಉಪವಾಸವು ಪಾರಣೆಯುದ್ದೇಶೆಯಿಂದ ಈಗ ಇಲ್ಲಿಗೆ ಬರುವರು, ಎಂದು ಹೇಳಿದರು. ಅಷ್ಟರಲ್ಲಿ ಶ್ರೀ ಸಾಕ್ಷಾತ್ ಗುರುಗಳು ಮಠಕ್ಕೆ ಬಂದೇಬಿಟ್ಟರು, ಆಗ ಆ ಊರ ಜನರು ಆ ನಂದಿ ಬ್ರಾಹ್ಮಣನನ್ನು ಕುರಿತು— ನೀನು ಶ್ರೀ ಗುರುಗಳಿಗೆ ಕಾಣದಂತೆ ದೂರ ಸರಿದು ನಿಂತುಕೋ ಎಂದು ಹೇಳಿದರು. ॥ ೨೪ ॥ ಆದರಂತೆ ಅವನು ನಿಂತನು. ಆಗ ಭಕ್ತರು ಗುರುಗಳಿಗೆ— ಸ್ವಾಮೀ, ಗುರುಮಹಾರಾಜರೇ, ಸರ್ವಾಂಗದಲ್ಲಿ ಬಿಳೀ ಕುಷ್ಠರೋಗವುಳ್ಳ ಒಬ್ಬ ಬ್ರಾಹ್ಮಣನು ತಮ್ಮ ದರ್ಶನಕ್ಕೆ ಬಂದಿರುವನು. ಎಂದು ಬಿನ್ನವಿಸಿದರು.

ಆಗ ಶ್ರೀ ಗುರುಗಳು ಈ ಬ್ರಾಹ್ಮಣನು ಸಂಶಯ ಮನಸ್ಸಿನಿಂದ ಬಂದಿರುವನು ಆದರೂ ॥ ೨೬-೨೭ ॥ ಎಲೈ ಶಿಷ್ಯರೇ— ಮಠದೊಳಗೆ ಅವನನ್ನು ಕರೆಯಿರಿ ಎಂದು ಹೇಳಿದರು, ಆಗ ಭಕ್ತಜನರು ಓಡಿಹೋಗಿ ಅವನನ್ನು ಕರೆದರು. ಆಗ ಆ ಬ್ರಾಹ್ಮಣನು ಬಂದು ಅಂಗಳದಲ್ಲಿ ನಿಂತು ॥ ೨೮ ॥ ದೂರದಿಂದಲೇ ಶ್ರೀ ಗುರುಗಳನ್ನು ನೋಡಿ ಸಾಷ್ಟಾಂಗ ನಮಸ್ಕಾರ ಮಾಡುತ್ತ ಭೂಮಿಯಮೇಲೆ ಉರುಳಾಡಿದನು. ಆಗ ಶ್ರೀ ಗುರುಗಳು— ಎಲೈ

ಬ್ರಾಹ್ಮಣನೇ, ಸಂಶಯದಿಂದ ನಮ್ಮಹತ್ತರ ಯಾಕೆ ಬಂದೆ. ‖ ೨೯ ‖ ದೇವಿಯಹತ್ತರ ಯಾಕೆ ಹೋಗಲಿಲ್ಲ? ಸಂಶಯುವ ಮನಸ್ಸಿನಿಂದ ಮನುಷ್ಯರಾದ ನಮ್ಮಹತ್ತರ ಬಂದರೆ ಏನಾಗುವದು ? ಆದರಿಂದ ಕಾರ್ಯ ಸಿದ್ಧಿಯು ಹೇಗಾದೀತು ? ಎಂದು ಅಂದರು ‖ ೩೦ ‖ ಅವರ ಮಾತು ಕೇಳಿ ಆ ಬ್ರಾಹ್ಮಣನು— ಮಹಾಸ್ವಾಮೀ, ಈಗ ನನ್ನ ಮನಸ್ಸಿಗೆ ದೇವಿಯು ಹೇಳಿದ ಮಾತು ದರ್ಶನಕ್ಕೆ ಬಂತು ನನ್ನನ್ನು ಕ್ಷಮಿಸಿರಿ, ಎಂದು ಲೋಟಾಂಗಣ ಹಾಕುತ್ತ ಬಂದು ನಮಸ್ಕರಿಸಿ ‖ ೩೧ ‖ ಸ್ವಾಮೀ, ನಾನು ತಮೋಗುಣದಿಂದ ಅಂಧನಾಗಿ, ಅಜ್ಞಾನದಿಂದ ತುಂಬಿ ಮೂರ್ಖನಾಗಿ ತಾವೂ ಪರಬ್ರಹ್ಮ ಮೂರ್ತಿಯೂ ‖ ೩೨ ‖ ಸಾಕ್ಷಾತ್ ದೇವರೂ ಎಂಬುದನ್ನು ತಿಳಿಯದೆ ಹೋದೆನು. ಈ ದಿವಸವು ಸುದಿವಸವು ಈಗ ತಮ್ಮ ದರ್ಶನದಿಂದ ನಾನು ಶುದ್ಧನಾಗಿ ಧನ್ಯನಾದೆನು ‖ ೩೩ ‖ ನಾನು ಪಾಪಕರ್ಮದಿಂದ ಪಾಪಿಯೂ ಪಾಪಾತ್ಮನೂ ನಿಶ್ಚಯವಾಗಿ ಪಾಪಸಂಭವನೂ ಆದ್ದರಿಂದ ನನಗೆ ತಮ್ಮ ಗುರುತು ತಿಳಿಯಲಿಲ್ಲ. ಈಗ ತಮಗೆ ಶರಣುಬಂದಿರುವೆನು ‖ ೩೪ ‖ ನರಸಿಂಹ ಸರಸ್ವತಿ ಸ್ವಾಮಿಗಳೇ, ತಾವು ಭಕ್ತ ಜನಾಧಾರರು, ಶರಣಾಗತ ವಜ್ರಪಂಜರರು ಎಂಬ ಬಿರುದುಳ್ಳವರು ‖ ೩೫ ‖ ಈ ದಿನ ನಾನು ಪರಬ್ರಹ್ಮರಾದ ತಮ್ಮನ್ನು ಪ್ರತ್ಯಕ್ಷ ನೋಡಿದ್ದರಿಂದ ಇನ್ನು ನನ್ನ ದುಷ್ಕರ್ಮವು ಹೋಯಿತು ಕೃಪಾಸಾಗರಾ, ಯತಿರಾಯಾ, ಇನ್ನು ನನ್ನ ಮನೋರಥವು ಪೂರ್ಣವಾಯಿತು ‖ ೩೬ ‖ ಸ್ವಾಮೀ, ತಾವು ಭಕ್ತಜನರ ಕಾಮಧೇನುವಾಗಿ ಮನುಷ್ಯ ಜನ್ಮದಲ್ಲಿ ಅವತರಿಸಿರುವಿರಿ ನಿಮ್ಮ ಅಂತವನ್ನು ಯಾರೂ ತಿಳಿಯರು. ನೀವೇ ತ್ರೈಮೂರ್ತಿ ಸ್ವರೂಪರು. ‖ ೩೭ ‖ ಸಗರನ ಮಕ್ಕಳನ್ನು ಪಾವನ ಮಾಡಲಿಕ್ಕೆ ಗಂಗೆಯು ಭೂಮಿಗೆ ಬಂದಂತೆ, ತಾವು ಭಕ್ತರನ್ನು ಈ ಭವಸಾಗರದಿಂದ ಮುಕ್ತ ಮಾಡಲಿಕ್ಕೆ ಈ ಭೂಮಿಯಮೇಲೆ ಅವತರಿಸಿ ಬಂದಿರುವಿರಿ ‖ ೩೮ ‖ ಪೂರ್ವದಲ್ಲಿ ಕಲ್ಲಾಗಿದ್ದ ಅಹಲ್ಯೆಗೆ ರಾಮಾವತಾರಿಯಾದ ತಮ್ಮ ಚರಣ ತಾಕಿದ ಕೂಡಲೇ ಅವಳು ದಿವ್ಯ ದೇಹವನ್ನು ಹೊಂದಿದಳು. ಆದರಂತೆ ಶ್ರೀಗುರುನಾಥಾ, ಈ ದಿನ ನೀವು ದೀನನಾದ ನನ್ನನ್ನು ಕೃಪಾದೃಷ್ಟಿಯಿಂದ ನೋಡಿ ಧನ್ಯನನ್ನಾಗಿ ಮಾಡಿದಿರಿ. ‖ ೩೯ ‖ ಸ್ವಾಮೀ, ನನ್ನ ಮುಂಜಿ ಮತ್ತು ಲಗ್ನವಾದಮೇಲೆ ನನ್ನ ಶರೀರದಲ್ಲಿ

ಈ ಬೇನೆಯು ಉತ್ಪನ್ನವಾಯಿತು. ನನ್ನ ಹೆಂಡತಿಯು ತನ್ನ ಶರೀರವನ್ನು ಮುಟ್ಟಬೇಡೆಂದು ಹೇಳಿ ತವರುಮನೆಯಲ್ಲಿರುವಳು. || ೪೦ || ನನ್ನ ತಾಯಿ-ತಂದೆ ಮುಂತಾದವರು ಸಹ, ಮನೆಗೆ ಬರಬೇಡವೆಂದು ಹೇಳಿ, ನನ್ನನ್ನು ಮನೆಯಿಂದ ಹೊರಗೆ ಹಾಕಿದರು. ಆಗ ನನಗೆ ಅಪರಿಮಿತ ದುಃಖವಾಗಿ ನಾನು ಈ ಸಂಸಾರವನ್ನು ಬಿಟ್ಟು ಹೊರಟೆನು. || ೪೧ || ಆಮೇಲೆ ತುಳಜಾಪುರಕ್ಕೆ ಹೋಗಿ ಮೂರು ವರ್ಷ ಉಪವಾಸದಿಂದ ಬಹಳ ಕಷ್ಟಬಟ್ಟು ಆರಾಧನೆ ಮಾಡಿದೆನು. ಆಗ ಆ ತುಳಜಾಭವಾನಿಯು ಪ್ರೀತಿಯಿಂದ ಸ್ವಪ್ನದಲ್ಲಿ ಬಂದು— ಎಲೈ ಬ್ರಾಹ್ಮಣನೇ, ನೀನು ಬಹಳ ಪಾಪಿ ಇರುತ್ತೀ ಇಲ್ಲಿ ನಿನ್ನ ರೋಗವು ಕಡಿಮೆಯಾಗುವದಿಲ್ಲ. || ೪೨ || ಕಾರಣ ನೀನು ಚಂದಲಾ ಪರಮೇಶ್ವರಿ ಕಡೆಗೆ ಹೋಗು. ಅಲ್ಲಿ ನಿನ್ನ ಪಾಪವು ನಾಶಹೊಂದಿ ನಿನ್ನ ರೋಗವು ಹೋಗುವದು ಎಂದು ಹೇಳಿದಳು. || ೪೩ || ಆಗ ನಾನು ಆ ಚಂದಲಾ ಪರಮೇಶ್ವರಿಯ ಹತ್ತರ ಬಂದು ಸೇವೆ ಮಾಡಿ ಬಹಳ ಕಷ್ಟಬಟ್ಟೆನು. ಆದರಿಂದ ಏನೂ ಉಪಯೋಗವಾಗಲಿಲ್ಲ. ಆಗ ಆಕೆಯು ಕೃಪಾಮೂರ್ತಿಗಳಾದ ತಮ್ಮ ಹತ್ತರ ಹೋಗೆಂದು ಅಪ್ಪಣೆ ಕೊಟ್ಟಳು. ಆದರೂ ನಾನು ಅಲ್ಲಿಯೇ ಗಟ್ಟಿಯಾಗಿ ಕುಳಿತೆನು. || ೪೪ || ಆಗ ಆ ದೇವಿಯು ನನ್ನ ನಿಶ್ಚಯವನ್ನು ನೋಡಿ ನನ್ನ ಮೇಲೆ ನಿರ್ದಯಳಾಗಿ— ಇವನು ಗುಡಿಯೊಳಗೆ ಬಂದ ಕೂಡಲೆ ಹೊರಗೆ ಹಾಕಿರೆಂದು ಅಲ್ಲಿಯ ಪೂಜಾರಿಗಳಿಗೆ ಆಜ್ಞೆ ಮಾಡಿದಳು. ಸ್ವಾಮೀ, ಈ ಪ್ರಕಾರ ನನ್ನ ದೈವವು ಹೀನವಾದದ್ದಾಗಿದೆ. || ೪೫ || ದೇವತೆಗಳೇ ನನ್ನ ದೆಶೆಯಿಂದ ನಿರ್ದಯ ಹೊಂದಿದಮೇಲೆ ಮನುಷ್ಯರು ಹ್ಯಾಗೆ ನನ್ನನ್ನು ಉದ್ಧರಿಸುವರು ? ಎಂಬ ಸಂಶಯದಿಂದ ಕಟ್ಟಕಡೆಗೆ ತಮ್ಮ ಕಡೆಗೆ ಬಂದದ್ದು ಸತ್ಯವು. ನಾನು ಸಾಯಲಿಕ್ಕೂ ಸಿದ್ಧನಾಗಿರುವೆನು. || ೪೬ || ನಾನು ಇಂಥ ಪಾಪಿಯೂ ಕುಷ್ಠಿಯೂ ಆದ್ದರಿಂದ ಇವನು ಕುಷ್ಠಿಯೆಂದು ಜನರು ನನ್ನ ಮುಖವನ್ನು ಕೂಡಾ ನೋಡುವದಿಲ್ಲ ಅಂಗಹೀನನಾದ ನಾನು ಈಗ ಏನು ಮಾಡಲಿ ? ಇದರ ದೆಶೆಯಿಂದ ಇನ್ನು ನನಗೆ ಮರಣವೇ ಉತ್ತಮವೆಂದು ನಿಶ್ಚಯ ಮಾಡಿರುವೆನು. || ೪೭ || ಯತಿವರ್ಯರೇ, ಈಗ ತಮಗೆ ನನ್ನದೊಂದು ವಿನಂತಿ ಆದೆ. ಏನಂದರೆ— ಆಶಾಪಾಶಗಳು ನನ್ನನ್ನು ಬಿಡುವದಿಲ್ಲ. ಕಾರಣ ಈ ನನ್ನ ಕಷ್ಟವು

ಹೋಗುತ್ತದೆ ಅಥವಾ ಹೋಗುವದಿಲ್ಲವೆಂಬುದನ್ನು ತಾವು ನಿಶ್ಚಯವಾಗಿ ಹೇಳಿಬಿಡಿರಿ. ॥ ೪೮ ॥ ಇನ್ನು ಈ ದೇಹದ ಮೇಲೆ ನನ್ನ ಪ್ರೀತಿ ಇಲ್ಲ ನಿಮ್ಮ ಎದುರಿಗೆ ನಾನು ಪ್ರಾಣ ಬಿಡುವೆನು. ನೀವು ಶರಣಾಗತ ರಕ್ಷಕರೆಂದು ಪ್ರಸಿದ್ಧಿ ಆದೆ. ಕಾರಣ ದಯಾನಿಧಿಗಳೇ, ಈಗ ನೀವು ನನಗೆ ಏನು ಅಪ್ಪಣೆ ಕೊಡುತ್ತೀರಿ ಕೊಡಿರಿ. ॥ ೪೯ ॥ ದೇವಿಯರು ಆಶಾಬದ್ಧವಾದ ನನ್ನನ್ನು ವ್ಯರ್ಥವಾಗಿ ಕಷ್ಟಬಡಿಸಿದಂತೆ ದಯಾನಿಧಿಗಳಾದ ತಾವೂ ಮಾತ್ರ ಹಾಗೆ ಮಾಡಬಾರದು ಎಂದು ಕೈಮುಗಿದನು. ॥ ೫೦ ॥ ಆಗ ಶ್ರೀ ಗುರುಗಳು ಈ ಪ್ರಕಾರವಾದ ಅವನ ಕರುಣಾ ವಚನವನ್ನು ಕೇಳಿ ನಕ್ಕು ಸೋಮನಾಥನೆಂಬ ಬ್ರಾಹ್ಮಣನನ್ನು ಕರೆದು— ಎಲೈ ಸೋಮನಾಥನೇ, ಈ ನಂದಿ ಬ್ರಾಹ್ಮಣನನ್ನು ತೀವ್ರವಾಗಿ ಸಂಗಮಕ್ಕೆ ಕರಕೊಂಡು ಹೋಗು ॥ ೫೧ ॥ ಅಲ್ಲಿ ಸಂಕಲ್ಪವನ್ನು ಹೇಳಿ ಪುಷ್ಕರ ತೀರ್ಥದಲ್ಲಿ ಸ್ನಾನ ಮಾಡಿಸಿ, ಅಶ್ವತ್ಥ ಪ್ರದಕ್ಷಿಣೆ ಹಾಕಿಸಿ, ಇವನು ಉಟ್ಟ ವಸ್ತ್ರವನ್ನು ದೂರ ಒಗೆಯಿಸಿ ॥ ೫೨ ॥ ಹೊಸ ವಸ್ತ್ರವನ್ನುಡಿಸಿಕೊಂಡು ಪಾರಣಿಗೆ ತೀವ್ರವಾಗಿ ಮಠಕ್ಕೆ ಕರಕೊಂಡು ಬರಲು ಹೇಳಿದರು. ॥ ೫೩ ॥ ಆಗ ಆ ನಂದಿ ಬ್ರಾಹ್ಮಣನು ವಿಧಿಪ್ರಕಾರ ಆ ಷಟ್ಕುಲ ತೀರ್ಥದಲ್ಲಿ ಸ್ನಾನ ಮಾಡಿ ಹೊರಗೆ ಬಂದಕೂಡಲೇ, ಅವನ ಶರೀರದ ವರ್ಣವು ಬದಲಾಯಿತು. ಅಶ್ವತ್ಥ ಪ್ರದಕ್ಷಿಣೆ ಮಾಡಿದ ಕೂಡಲೇ ಅವನ ದೇಹವೆಲ್ಲ ಸುವರ್ಣ ವರ್ಣವಾಯಿತು. ॥ ೫೪ ॥ ಆಮೇಲೆ ಆ ಸೋಮನಾಥನು ಅವನಿಗೆ ಆ ಹೊಸ ವಸ್ತ್ರವನ್ನು ಕೊಟ್ಟು, ಹಳೇ ವಸ್ತ್ರವನ್ನು ದೂರ ಒಗೆಯಲಿಕ್ಕೆ ಹೇಳಿದ ಕೂಡಲೇ ಅವನು ಅದರಂತೆ ಮಾಡಿದನು. ಆ ಹಳೇ ವಸ್ತ್ರವು ಬಿದ್ದ ಸ್ಥಳವು ಕೂಡಲೇ ಸೌಳು ಭೂಮಿಯಾಯಿತು. ॥ ೫೫ ॥ ಆಮೇಲೆ ಸೋಮನಾಥನು ತೀವ್ರವಾಗಿ ಅವನನ್ನು ಮಠಕ್ಕೆ ಕರಕೊಂಡು ಬಂದು, ಗುರುಗಳ ಚರಣದ ಮೇಲೆ ಹಾಕಿದನು. ಆಗ ಸರ್ವ ಜನರು ಆಶ್ಚರ್ಯಬಟ್ಟರು. ॥ ೫೬ ॥ ಆಗ ಆ ಆನಂದಿಯು ಸಂತೋಷದಿಂದ ಶ್ರೀಗುರುಗಳಿಗೆ ನಮಸ್ಕಾರ ಮಾಡಿ, ಅಪಾರವಾದ ಸ್ತೋತ್ರ ಮಾಡುತ್ತ ಒಳ್ಳೇ ಹರ್ಷದಿಂದ ಅವರ ಪಾದಗಳ ಮೇಲೆ ಉರುಳಾಡಹತ್ತಿದನು. ॥ ೫೭ ॥ ಆಗ ಶ್ರೀ ಗುರುಗಳು— ಎಲೈ ಬ್ರಾಹ್ಮಣನೇ, ನಿನ್ನ ಅಪೇಕ್ಷೆಯು ಪೂರ್ಣವಾಯಿತೇ ? ನಿನ್ನ ಸರ್ವಾಂಗವು ಹ್ಯಾಗೆ ಆದೆ ನೋಡಿಕೋ ಎಂದು

ಅಂದರು. || ೫೮ || ಆದರಂತೆ ಆವನು ತನ್ನ ದೇಹವನ್ನು ನೋಡಿಕೊಳ್ಳಲಾಗಿ ಎಲ್ಲವೂ ಚೆನ್ನಾಗಿ ಆಗಿತ್ತು. ಆದರೆ ಮೊಣಕಾಲ ಮೇಲೆ ಮಾತ್ರ ತೀರ ಸ್ವಲ್ಪ ಉಳಿದಿತ್ತು. ಅವನ್ನು ಕಂಡು ಆವನು ಗಾಬರಿಯಾಗಿ— ಸ್ವಾಮೀ, ಎಲ್ಲವೂ ಹೋಗಿ, ಮೊಣಕಾಲಮೇಲೆ ಮಾತ್ರ ಸ್ವಲ್ಪ ಉಳಿದಿದೆ. || ೫೯ || ಸ್ವಾಮೀ, ತಮ್ಮ ಕೃಪೆಯುಂಟಾದ ಮೇಲೆ, ಈ ರೀತಿ ಸ್ವಲ್ಪಾದರೂ ಉಳಿಯಲಿಕ್ಕೆ ಕಾರಣವೇನು? ಮಹಾತ್ಮರೇ, ತಾವು ನನ್ನ ಮೇಲೆ, ಪೂರ್ಣ ಕೃಪೆ ಮಾಡಿರಿ. ಎಂದು ದಂಡವತ್ ನಮಸ್ಕಾರ ಮಾಡಿದನು. || ೬೦ || ಆಗ ಗುರುಗಳು— ಎಲೈ ವಿಪ್ರನೇ, ಮನುಷ್ಯರಿಂದ ಏನಾದೀತೆಂಬ ಸಂಶಯದಿಂದ ನೀನು ನಮ್ಮ ಹತ್ತರ ಬಂದಕಾರಣ ಅದು ಸ್ವಲ್ಪ ಉಳಿಯಿತು. ||೬೧|| ಅದೂ ಹೋಗಲಿಕ್ಕೆ ಒಂದು ಉಪಾಯವಿದೆ ಹೇಳುವೆನು ಕೇಳು. ನೀನು ನಿರಂತರ ನಮ್ಮ ಸ್ತುತಿರೂಪವಾಗಿ ಅಪಾರವಾದ ಕವಿತ್ವವನ್ನು ಮಾಡು. ಆದರಿಂದ ನಿನ್ನ ರೋಗವು ನಿಶ್ಚಯದಿಂದ ಶೀಘ್ರವಾಗಿ ಹೋಗುವದು ಎಂದು ಹೇಳಿದರು. || ೬೨ || ಆಗ ಅವನು— ಸ್ವಾಮೀ, ನನಗೆ ಓದಲಿಕ್ಕೂ ಬರೆಯಲಿಕ್ಕೂ ಬರುವದಿಲ್ಲ. ಮಂದಮತಿಯಾದ ನಾನು ಕವಿತ್ವವನ್ನು ಏನು ಮಾಡಲಿ ? || ೬೩ || ನೀವು ಹೇಳುತ್ತೀರಿ ನಿಜ. ಆದರೆ ನನಗೆ ಕಾವ್ಯ ಉತ್ಪತ್ತಿ ಜ್ಞಾನವಿಲ್ಲ ಕವಿತ್ವದ ರೀತಿಯೂ ಗೊತ್ತಿಲ್ಲ. ಎಂದು ಗುರುಚರಣದಲ್ಲಿ ತನ್ನ ಮಸ್ತಕವನ್ನಿಟ್ಟು ನಮಸ್ಕಾರ ಮಾಡಿದನು. || ೬೪ || ಆಗ ಶ್ರೀ ಗುರುಗಳು— ಎಲೈ ಬ್ರಾಹ್ಮಣನೇ ಬಾಯಿಯನ್ನು ತೆಗೆದು ನಾಲಿಗೆಯನ್ನು ಮುಂದೆ ಮಾಡು ಎಂದು ಹೇಳಿ, ಅವನ ನಾಲಿಗೆಯಮೇಲೆ ವಿಭೂತಿಯನ್ನು ಹಾಕಿದ ಕೂಡಲೇ ಅವನಿಗೆ ಜ್ಞಾನೋದಯವಾಯಿತು. ||೬೫|| ಆಗ ಅವನು ಗುರುಚರಣಗಳಲ್ಲಿ ಮಸ್ತಕವನ್ನಿಟ್ಟು ಸ್ತೋತ್ರ ಮಾಡಬೇಕೆಂದು ಎದ್ದುನಿಂತು— ಸ್ವಾಮೀ, ನನಗೆ ಏನೂ ತಿಳಿಯುವದಿಲ್ಲ. ಇವೊತ್ತಿನವರೆಗೆ ತಮ್ಮ ಸೇವೆಗೆ ಸವಡು ಸಿಗಲಿಲ್ಲ ಮಾಯಾಪಾಶದಿಂದ ಸುತ್ತುಗಟ್ಟಲ್ಪಟ್ಟ ನಾನು, ಈ ಗಹನವಾದ ಸಂಸಾರ ಸಾಗರದಲ್ಲಿ ಮುಳುಗಿರುತ್ತಿದ್ದದರಿಂದ ತಮ್ಮ ಚರಣವನ್ನು ಎಂದೂ ನೆನೆಸಲಿಲ್ಲ ಮರೆತುಬಿಟ್ಟೆನು. || ೬೬–೬೭ || ಸಂಸಾರ ಅಂದರೆ ಮಾಯಾ ಜಾಲವು. ನಾನು ೮೪ ಲಕ್ಷ ಜಾತಿಯ ಜನ್ಮಗಳಲ್ಲಿ ಹುಟ್ಟಿದರೂ ಮಂದಮತಿಯಾದ್ದರಿಂದ ತಮ್ಮ ನಾಮವು ನನ್ನ ನೆನಪಿಗೆ ಬರಲಿಲ್ಲ. || ೬೮ ||

ಸ್ವಾಮೀ, ನಾನು ಸ್ವೇದಜ, ಅಂಡಜ, ಉದ್ಭಿಜ್ಜ ಪಶು ಮೊದಲಾದ ಯೋನಿಗಳಲ್ಲಿಯೂ ಸ್ಥಾವರ ಜಂಗಮಗಳಾಗಿಯೂ ಹುಟ್ಟಿದೆನು. ಅಂದಮೇಲೆ ನನಗೆ ಜ್ಞಾನವು ಹೇಗೆ ಬರಬೇಕು ? || ೧೯ || ಈ ಪ್ರಕಾರವಾದ ನಾನಾ ಜನ್ಮಗಳಲ್ಲಿ ಮನುಷ್ಯ ಜನ್ಮವು ವಿಶೇಷವು. ಆದರೆ ಶೂದ್ರ ಜಾತಿಗಳೇ ಬಹಳ, ಆ ಜಾತಿಗಳಲ್ಲಿ ಜನ್ಮ ತಾಳಿದರೆ ತಮ್ಮಮೇಲೆ ಭಕ್ತಿ ಮಾಡಲು ಹ್ಯಾಗೆ ತಿಳಿಯಬೇಕು. || ೨೦ || ಸಮಸ್ತ ಮನುಷ್ಯ ಜನ್ಮಗಳಲ್ಲಿ ಬ್ರಾಹ್ಮಣ ಜನ್ಮವು ಶ್ರೇಷ್ಠವು ! ಆದರೆ ಗುರುಭಕ್ತಿಯನ್ನು ತಿಳಿಯದೆ ಮನುಷ್ಯನು ಮೂರ್ಖನಾದರೆ ಏನು ಮಾಡಬೇಕು ? ಅವನ ಜನ್ಮವು ವ್ಯರ್ಥವು. || ೨೧ || ಮನುಷ್ಯ ಜನ್ಮದ ನನ್ನ ಉತ್ಪತ್ತಿ ಮೊದಲಾದವು ಹ್ಯಾಗಂದರೆ—ಮೊದಲು ತಾಯಿಯ ಶೋಣಿತವೂ ತಂದೆಯ ವೀರ್ಯವೂ ತಾಯಿಯ ಗರ್ಭದಲ್ಲಿ ಕೂಡಿ ಆಗ ಮೂಶಿಯಲ್ಲಿಯ್ಯ ಕಾದ ಭಂಗಾರದಂತಾಯಿತು. ಆಮೇಲೆ ಅದು ಐದು ದಿವಸಗಳಲ್ಲಿ ಬುದ್ಬುದಾಕಾರವಾಗುವದು. || ೨೨ || ೧೫ ದಿವಸಗಳಲ್ಲಿ ಅದು ಏಕರಸವಾಯಿತು. ಅದರಲ್ಲಿ ಇನ್ನೂ ಪಂಚತ್ವ ಕೂಡಿದ್ದಿಲ್ಲ. ಆಗ ಪಾಮರನಾದ ನಾನು ನಿಮ್ಮನ್ನು ಹ್ಯಾಗೆ ತಿಳಿಯಲಿ ? || ೨೩ || ಮೊದಲನೇ ತಿಂಗಳಲ್ಲಿ ಅದು ಒಂದು ಪಿಂಡವಾಯಿತು. ಎರಡನೇ ತಿಂಗಳಲ್ಲಿ ಅದಕ್ಕೆ ತಲೆಯೂ ಕಾಲುಗಳೂ ಹುಟ್ಟಿದವು. ೩ನೇ ತಿಂಗಳಲ್ಲಿ ಸರ್ವಾವಯಗಳೂ, ೪ನೇ ತಿಂಗಳಲ್ಲಿ ನವದ್ವಾರಗಳು ಉಂಟಾದವು. || ೨೪ || ಆಮೇಲೆ ಪೃಥ್ವಿ, ಆಪ, ತೇಜ, ವಾಯು, ಆಕಾಶಗಳೆಂಬ ಪಂಚ ತತ್ವಗಳು ಕೂಡಿದಕೂಡಲೇ ಪ್ರಾಣವು ಬಂತು. ಆಗ ನನಗೆ ತಮ್ಮ ಸ್ಮರಣವು ಹ್ಯಾಗೆ ಬರಬೇಕು || ೨೫ || ೫ನೇ ತಿಂಗಳಲ್ಲಿ ಚರ್ಮ ಮತ್ತು ಕೂದಲುಗಳೂ, ೬ನೇ ತಿಂಗಳಲ್ಲಿ ಶ್ವಾಸೋಚ್ಛ್ವಾಸಗಳೂ, ೭ನೇ ತಿಂಗಳಲ್ಲಿ ನಾಲಿಗೆ, ಮೂಗು, ಕಿವಿ, ಮೇಧ, ಮಜ್ಜಾಗಳು ದೃಢವಾದವು || ೨೬ || ಸ್ವಾಮೀ, ಈ ಪ್ರಕಾರ ನಾನು ೯ ತಿಂಗಳು ತಾಯಿಯ ಗರ್ಭದಲ್ಲಿದ್ದು ರಕ್ತ, ವಿಷ್ಟಾ, ಮೂತ್ರಗಳಲ್ಲಿ ಹೊರಳಾಡುತ್ತ ಬಹಳ ಕಷ್ಟಬಟ್ಟೆನು. ||೨೭|| ತಾಯಿಯು ತನ್ನ ಮನಸ್ಸಿಗೆ ಬಂದಂತೆ ತಿಂದ ಬಿಸಿ, ಉಪ್ಪು, ಹುಳಿ, ಕಾರ ಮೊದಲಾದ ಪದಾರ್ಥಗಳಲ್ಲಿ ಬಿದ್ದು ಹೊರಳಾಡಿ ಬಹಳ ದುಃಖಬಟ್ಟೆನು. ಆ ದುಃಖವನ್ನು ಯಾರಿಗೆ ಹೇಳಲಿ ? ಸ್ವಾಮೀ, ಆಗ ನನಗೆ ನಿಮ್ಮ ಸ್ಮರ-

ಣೆಯು ಹ್ಯಾಗೆ ಬರಬೇಕು. || ೭೮ || ಹೀಗೆ ೯ ತಿಂಗಳಗಳವರೆಗೆ ತಾಯಿಯ ಗರ್ಭದಲ್ಲಿದ್ದು ಬಹಳ ಕಷ್ಟ ಬಟ್ಟೆನು. || ೭೯ || ಮಾಯೆಯಿಂದ ಕೂಡಿದವನಾಗಿ ತಮ್ಮ ಚರಣಗಳನ್ನು ಕಾಣಲಿಲ್ಲ ಆಮೇಲೆ ಯೋನಿ ದ್ವಾರದಿಂದ ಭೂಮಿಯಮೇಲೆ ಹುಟ್ಟಿಬಂದೆನು || ೮೦ || ಆಗ ನನ್ನ ಹಣೆಯಲ್ಲಿ ಬ್ರಹ್ಮನಿಂದ ಆಯುಸ್ಸು ಬರೆಯಲ್ಪಟ್ಟಿತ್ತು. ಮನುಷ್ಯರಿಗೆ ರಾತ್ರಿಯಲ್ಲಿ ನಿದ್ದೆ ಬರುವದಾದ್ದರಿಂದ ಆ ಆಯುಷ್ಯದಲ್ಲಿ ಅರ್ಧ ನಿದ್ರೆಯಲ್ಲಿ ಹೋಯಿತು. || ೮೧ || ಉಳಿದ ಆಯುಷ್ಯದಲ್ಲಿ ಬಾಲ್ಯ, ಯೌವನ, ವಾರ್ಧಿಕ್ಯಗಳೆಂಬ ಮೂರು ಅವಸ್ಥೆಗಳು ಬಂದವು. ಆ ಮೂರು ಅವಸ್ಥೆಗಳಲ್ಲಿ ಒಂದೊಂದು ತರದ ಕಷ್ಟವಾಯಿತು ಏನು ಹೇಳಲಿ || ೮೨ || ಬಾಲ್ಯ ದಲ್ಲಿ ನನಗೆ ಬಹಳ ಕಷ್ಟವಾಯಿತು. ಹುಟ್ಟಿದ ೧೦ನೇ ದಿವಸ ನನ್ನನ್ನು ತೊಟ್ಟಿಲದಲ್ಲಿ ಹಾಕಿದರು. ಅಲ್ಲಿ ನಾನು ನನ್ನ ಮಲ-ಮೂತ್ರದಲ್ಲಿ ಹೊರಳಾಡಿದೆನು || ೮೩ || ಸ್ವಾಮೀ, ಆ ಬಾಲ್ಯದ ದುಃಖವನ್ನು ನೆನೆಸಿಕೊಂಡರೆ ಈಗ ಹೃದಯವು ಒಡೆದುಹೋಗುವದು. ಶ್ರೀ ಗುರುನಾಥನೇ ಏನು ಹೇಳಲಿ ? ಅಲ್ಲಿ ನಾನಾಕಷ್ಟಗಳನ್ನು ಭೋಗಿಸಿದೆನು. || ೮೪ || ನಾನು ನಿರಂತರ ಹಾಸಿಗೆಯಲ್ಲಿ ಮಲಗಿ ಮಲ-ಮೂತ್ರಗಳಲ್ಲಿ ಹೊರಳಾಡುತ್ತ, ನನ್ನ ಮಲವನ್ನು ನಾನೇ ತಿನ್ನುತ್ತ ಅಜ್ಞಾನಾಂಧಕಾರದಲ್ಲಿ ಮುಚ್ಚಲ್ಪಟ್ಟೆನು. || ೮೫ || ಒಮ್ಮೆ ಹೊಟ್ಟೆನೋವಿನಿಂದ ನಾನು ಅಳುತ್ತಿರಲು ನನ್ನ ತಾಯಿಯು ಕೂಸು ಹಸಿದಿರುವದೆಂದು ಮೊಲೆ ಕೊಡುತ್ತಿದ್ದಳು || ೮೬ || ಹಸಿವೆಯಿಂದ ಅಳಹತ್ತಿದರೆ ಕೂಸಿನ ಹೊಟ್ಟೆ ನೋಯಬಹುದೆಂದು ಬಾಯೊಳಗೆ ಬಟ್ಟಿಟ್ಟು ಔಷಧ ಕುಡಿಸುವಳು ||೮೭|| ಹೀಗೆ ಹಸಿವೆಯಿಂದ ನಾನು ಅಳಹತ್ತಲು ತೊಟ್ಟಿಲಲ್ಲಿ ಹಾಕಿ ಹಾಡುತ್ತ ತೂಗುವಳು. || ೮೮ || ಹಸಿವೆಯಿಂದ ನಾನು ಮತ್ತೂ ಅಳಹತ್ತಿದರೆ ಯಾಕೋ ಕೂಸು ಬಹಳ ಅಳುತ್ತದೆಂದು ಮುಖಕ್ಕೆ ಕಾಂಜಿ ಎಂಣೆಯನ್ನು ಸಿಂಪಡಿಸಿ, ಮಂತ್ರಿಸಿ ರಕ್ಷೆಯನ್ನು ಕಟ್ಟುವಳು. ಆದರೆ ನನಗೆ ಹಸಿವೆಯಾದದ್ದು ತಿಳಿಯದೆ ತಾಯಿಯು ನನ್ನನ್ನು ಮತ್ತೆ ತೊಟ್ಟಿಲಲ್ಲಿ ಹಾಕುತ್ತಿದ್ದಳು. ಆ ಕೌತುಕವನ್ನೇನು ಹೇಳಲಿ. ಅಲ್ಲಿಯ ಹಾಸಿಗೆಯಲ್ಲಿ ಇದ್ದ ಚೇಳು ನನ್ನ ಬೆನ್ನಿಗೆ ಕಡಿಯಲು ನಾನು ಬಹಳವಾಗಿ ಅಳುತ್ತಿದ್ದೆನು. || ೮೯-೯೦ || ಚೇಳು ಕಡಿದದ್ದು ತಾಯಿಗೆ ತಿಳಿ

ಯದೆ, ನನ್ನನ್ನು ಮತ್ತೆ ತೊಟ್ಟಿಲದಲ್ಲಿಯೇ ಮಲಗಿಸಿ— ಜೋಜೋ ಸುಮ್ಮನಿರು, ಸುಮ್ಮನಿರು ಎಂದು ಹೇಳಿ ಕೈಯಲ್ಲಿ ಕರಕೊಂಡು ಮೊಲೆ ಕೊಡುತ್ತಿದ್ದಳು. ॥ ೯೧ ॥ ಆ ಚೇಳು ಕಡಿದ ದುಃಖದಿಂದ ನಾನು ಸ್ತನಪಾನ ಮಾಡದಿರಲು ಮತ್ತೆ ಆ ಭಯಂಕರವಾದ ತೊಟ್ಟಿಲದಲ್ಲಿ ಮಲಗಿಸುತ್ತಿದ್ದಳು. ಆಗ ನನಗೆ ಪುನಃ ಆ ಚೇಳು ಕಡಿಯುತ್ತಿತ್ತು. ಆದರಿಂದ ನನಗೆ ಪ್ರಾಣಾಂತ್ಯ ದುಃಖವಾಗುತ್ತಿತ್ತು. ॥ ೯೨ ॥ ತಾಯಿಯು ಹುಳಿ-ಉಪ್ಪು-ಖಾರಗಳನ್ನು ತಿನ್ನಲು ಆವಳ ಮೊಲೆ ಹಾಲು ಹುಳಿ ಮಧುರವಾಗಿರುತ್ತಿದ್ದದರಿಂದ ನಾನು ಸದಾ ಕೆಮ್ಮುತ್ತಿದ್ದೆನು. ॥ ೯೩ ॥ ಆಗ ತಾಯಿಯು ನನಗೆ ನಾನಾತರದ ಔಷಧಗಳನ್ನು ಹಾಕುತ್ತಿದ್ದಳು. ಆದರಿಂದ ನನಗೆ ಕಣ್ಣು ನೋವಾಗುತ್ತಿದ್ದವು. ಆಗ ಕಣ್ಣು ಬಂದವೆಂದು ತಿಳಿದು ನನ್ನ ಕಣ್ಣೊಳಗೆ ಕುಂಕುಮ ಮತ್ತು ಲವಣಾಕ್ಷರಗಳನ್ನು ಹಾಕುತ್ತಿದ್ದಳು. ॥ ೯೪ ॥ ಈ ರೀತಿ ಬಾಲ್ಯದಲ್ಲಿಯ ಧುರಂಧರವಾದ ಕಷ್ಟ ಸಹಿಸುತ್ತ ಬೆಳೆದು ೧೨ ವರ್ಷದವನಾದೆನು. ॥ ೯೫ ॥ ಗುರುರಾಯಾ, ಆಗಾದರೂ ನನಗೆ ನಿಮ್ಮ ಚರಣ ಸ್ಮರಣೆಯು ಹ್ಯಾಗೆ ಬರಬೇಕು ? ಬರಲಿಲ್ಲ. ಆದರಿಂದ ನಾನು ಬಹಳ ಕಷ್ಟಬಟ್ಟೆನು. ಆಗ ನನಗೆ ಪೂರ್ವಜನ್ಮದ ಸ್ಮರಣೆಯೂ ಆಗಲಿಲ್ಲ. ॥ ೯೬ ॥ ಈ ಪ್ರಕಾರ ಆಯುಷ್ಯದಲ್ಲಿ ಬಾಲ್ಯದ ಭಾಗವು ಕಳೆದು ಯೌವನ ವಾರ್ಧಿಕ್ಯಗಳೆಂಬ ಎರಡು ಭಾಗಗಳುಳಿದವು ಯೌವನದಲ್ಲಿ ಶರೀರದಲ್ಲಿ ಮನ್ಮಥಬಾಧೆಯು ವ್ಯಾಪಿಸಿ, ಪತಂಗವು ಭ್ರಮೆಯಿಂದ ಹೋಗಿ ದೀಪದಮೇಲೆ ಬೀಳುವಂತೆ ನಾನೂ ಉನ್ಮತ್ತನಾಗಿ ॥ ೯೭ ॥ ವಿಚಾರ ಮಾಡದೆ, ತಾಯಿ-ತಂದೆ-ಗುರು ಮೊದಲಾದವರನ್ನೂ ನಿಂದಿಸುತ್ತ ಕುಲಾಕುಲವನ್ನು ವಿಚಾರ ಮಾಡದೆ, ಪರಸ್ತ್ರೀಯರಲ್ಲಿ ಮನಸ್ಸು ಮಾಡಿ ರಮಿಸುತ್ತ ॥ ೯೮ ॥ ಬ್ರಾಹ್ಮಣರನ್ನು ಪರೋಪಹಾಸಿಯಿಂದ ಹಳಿಯುತ್ತ ಮುದುಕರನ್ನು ಕಂಡು ಚೇಷ್ಟೆ ಮಾಡುತ್ತ ಬಹಳ ಮದವೇರಿದವನಾಗಿ ನಿಮ್ಮ ಚರಣಗಳನ್ನು ನೆನೆಯದೆ ಪಾಪಕ್ಕೆ ಎರವಾದೆನು. ॥ ೯೯ ॥ ಒಂದು ಚೂರು ಮಾಂಸದ ಆಸೆಗಾಗಿ ಮೀನವು ಪ್ರಾಣ ಬಿಡುವಂತೆ, ನಾನು ಮದನಬಾಣ ಪೀಡಿತನಾಗಿ ಇಂದ್ರಿಯವಶನಾಗಿ ॥ ೧೦೦ ॥ ನಾನಾ ಜಾತಿಯ ಸ್ತ್ರೀಯರನ್ನಿಟ್ಟುಕೊಂಡೆನು. ಪರದ್ರವ್ಯವನ್ನಪಹರಿಸಿದೆನು. ಸಿದ್ಧ ಮಹಂತರನ್ನು ನಿಂದಿಸಿದೆನು.

ಸ್ವಾಮೀ, ಆಗ ನನ್ನ ದೃಷ್ಟಿಗೆ ಏನೂ ತೋರಲಿಲ್ಲ. ॥ ೧೦೧ ॥ ಈ ಪ್ರಕಾರ ನಾನು ಕಾಮದಿಂದ ವ್ಯಾಪಿಸಿ, ಹಿಂದು ಮುಂದಿನ ವಿಚಾರ ಮಾಡದೆ, ಪತಂಗವು ಹೋಗಿ ದೀಪದ ಮೇಲೆ ಬೀಳುವಂತೆ ॥ ೧೦೨ ॥ ಮದದಿಂದ ಕೂಡಿ ಒಳ್ಳೇ ಬುದ್ಧಿವಾದವನ್ನು ಕೇಳದೆ, ನಿಮ್ಮ ಚರಣ ಸ್ಮರಣೆಯನ್ನು ಮಾಡದೆ, ಯೌವನ ಕಾಲವನ್ನು ಕಳೆದೆನು. ॥ ೧೦೩ ॥ ಸ್ವಾಮೀ, ಆಮೇಲೆ ನನಗೆ ವೃದ್ಧಾಪ್ಯವು ಬರಲು, ನಾನು ಸ್ತ್ರೀ-ಪುತ್ರರಿಗೆ ಬೇಸರಾಗಿ ಅವರಿಂದ ನಿಂದಿಸಿಕೊಳ್ಳುತ್ತಿದ್ದೆನು. ಶ್ವಾಸೋಚ್ಛ್ವಾಸದಲ್ಲಿ ಕಫ ಬೀಳುತ್ತಿರುವದರಿಂದ ಸದಾ ನನಗೆ ಕೆಮ್ಮು ಬರುತ್ತಿತ್ತು. ॥ ೧೦೪ ॥ ಅವಯುವಗಳು ನಡಗುತ್ತಿದ್ದವು. ಕರೇಕೂದಲು ಹೋಗಿ ಬಿಳೀ ಕೂದಲು ಬಂದವು. ಹಲ್ಲುಗಳು ಬಿದ್ದು ಏನೂ ತಿನ್ನಲಿಕ್ಕೆ ಬರುತ್ತಿದ್ದಿಲ್ಲ ಬರಬರುತ್ತ ಕಿವಿಗಳು ಕೇಳದಾದವು ಕಣ್ಣುಗಳೂ ಕಾಣದಂತಾದವು. ॥ ೧೦೫ ॥ ಈ ಪ್ರಕಾರ ನಾನು ಕಷ್ಟಬಟ್ಟಾಗ್ಯೂ ಇವೊತ್ತಿನ ಒರೆಗೆ ನನಗೆ ತಮ್ಮ ಸೇವೆಯು ಘಟಿಸಲಿಲ್ಲ. ಸ್ವಾಮೀ, ಗುರುನಾಥಾ, ಉದ್ಧಾರಕನೇ, ಈಗಾದರೂ ನನ್ನನ್ನು ಈ ಭವಸಾಗರದಿಂದ ಪಾರು ಮಾಡು. ॥ ೧೦೬ ॥ ನಾನು ಈ ಪ್ರಕಾರದ ಮಂದಮತಿಯಾದ್ದರಿಂದ ತಮ್ಮ ಚರಣಗಳ ಗುರುತು ಅರಿಯೆನು. ಸ್ವಾಮೀ, ನೀವು ಕೇವಲ ನಾರಾಯಣರಾಗಿ ತ್ರೈಮೂರ್ತಿಗಳ ಅವತಾರವಾಗಿರುತ್ತೀರಿ ॥ ೧೦೭ ॥ ಗುರುನಾಥಾ, ನೀನೇ ವಿಶ್ವತಾರಕನು, ನೀನೇ ಮನುಷ್ಯದೇಹ ಧರಿಸಿದ ಪರಬ್ರಹ್ಮ ಮೂರ್ತಿಯು. ॥ ೧೦೮ ॥ ದಿವಾಂಧರಾದ ಜನರು ನಿಮ್ಮ ಮಹಿಮೆಯನ್ನರಿಯರು. ನೀನು ವಿಶ್ವಪಾಲಕನು. ನಾನು ನಿಮ್ಮ ದಾಸ ಹಾಗೂ ಸೇವಕನು. ಸ್ವಾಮೀ, ದಯಮಾಡಿ ಈ ಸಂಸಾರ ಸಾಗರದಿಂದ ನನ್ನನ್ನು ತೀವ್ರವಾಗಿ ದಾಟಿಸಿರಿ. ॥ ೧೦೯ ॥ ಎಂದು ಆ ಪವಿತ್ರನಾದ ನಂದಿಯು ಆನಂದದಿಂದ ಶ್ರೀಗುರುಗಳ ಸ್ತೋತ್ರ ಮಾಡುತ್ತಿರಲು ಜನರು ಆ ವಿಚಿತ್ರವನ್ನು ನೋಡುತ್ತಿದ್ದರು ಆಗ ಆ ನಂದಿ ಬ್ರಾಹ್ಮಣರು ಅಲ್ಲಿ ನೆರೆದ ಯಾವತ್ತು ಜನರನ್ನು ಕುರಿತು ॥ ೧೧೦ ॥ ಇಲ್ಲಿ ಕೂತ ಯಾವತ್ತು ಜನರು ನಾನು ಹೇಳುವದನ್ನು ಕೇಳಿರಿ, ಶ್ರೀಗುರುಗಳು ನಿಶ್ಚಯವಾಗಿ ಪರಬ್ರಹ್ಮ ಸ್ವರೂಪರು. ನಾನು ಬಹಳ ಪಾಪ ಮಾಡಿದ್ದೆನು. ಇವರ ದರ್ಶನದಿಂದ ನನ್ನ ಪಾಪವೆಲ್ಲ ದೂರವಾಯಿತು. ॥ ೧೧೧ ॥ ಯಾವನು ಗುರುಕೃಪೆ

ಯನ್ನು ಸಂಪಾದಿಸುವನೋ ಅವನ ಪಾಪಗಳೆಲ್ಲ, ಹುಲ್ಲು ಬಣವಿಗೆ ಬೆಂಕಿ ಹತ್ತಿದಕೂಡಲೇ ಹ್ಯಾಗೆ ಸುಟ್ಟು ಹೋಗುವದೋ, ಹಾಗೆ ಸುಟ್ಟು ಹೋಗುವವು. ಅದರಂತೆ ಈಗ ನನ್ನ ಪಾಪಗಳೆಲ್ಲ ಸುಟ್ಟು ಹೋದವು. ॥ ೧೧೨ ॥ "ಚರಣಂ ಪವಿತ್ರಂ ವಿತತಂ ಪುರಾಣಂ" ಎಂದು ವೇದಶಾಸ್ತ್ರಗಳು ಹೇಳುವವು ಗುರುಗಳ ಹೊರತು ಬೇರೆ ದೇವರಿಲ್ಲ. ಅದರಿಂದ ಗುರುಗಳನ್ನು ಭಜಿಸಿರಿ, ಸೇವಿಸಿರಿ. ॥ ೧೧೩ ॥ ಗುರುಚರಣಗಳಿಗೆ ನಮಸ್ಕಾರ ಮಾಡಿದರೆ ಬ್ರಹ್ಮನು ಒಂದು ವೇಳೆ ನಮ್ಮ ಹಣೆಯಲ್ಲಿ ದುಷ್ಟಾಕ್ಷರ ಬರೆದಿದ್ದರೆ, ಅವು ಉತ್ತಮಾಕ್ಷರಗಳಾಗಿ ನಮಗೆ ಸ್ಥಿರವಾದ ಇಷ್ಟಾರ್ಥಗಳಾಗುವವು. ॥ ೧೧೪ ॥ ಕಾಮಧೇನುಸ್ವರೂಪರಾದ ಈ ನರಸಿಂಹ ಸರಸ್ವತಿ ಗುರುವರ್ಯರು ಪ್ರತ್ಯಕ್ಷವಾಗಿ ನಿಮ್ಮ ಹತ್ತಿರದಲ್ಲಿರಲು ನೀವು ಯಾಕೆ ಗುರ್ತಿಸಲಿಲ್ಲ? ಇನ್ನಾದರೂ ಶ್ರೀ ಗುರುಗಳನ್ನು ಏಕೋಭಾವದಿಂದ ಭಜಿಸಿರಿ. ॥ ೧೧೫ ॥ ಇವರನ್ನು ಭಜಿಸಿದರೆ ಇವರು ನಿಮಗೆ ಅನೇಕ ಇಹಸೌಖ್ಯಗಳನ್ನು ಕೊಟ್ಟು ಅಂತ್ಯದಲ್ಲಿ ವೈಕುಂಠ ಪದವಿಗೆ ಹೊಂದಿಸುವರು. ಸಂದೇಹವಿಲ್ಲದೆ ನಿಮಗೆ ಸುಖವಾಗುವದು. ನನ್ನ ಈ ಮಾತು ತ್ರಿವಾರ ಸತ್ಯ ಸತ್ಯ ಸತ್ಯವೆಂದು ತಿಳಿಯಿರಿ. ॥ ೧೧೬ ॥ ಎಂದು ಸ್ತೋತ್ರ ಮಾಡಿದನು. ಅದನ್ನು ಕೇಳಿ ಗುರುಗಳು ಅತ್ಯಂತ ಹರ್ಷಿತರಾಗಿ— ಎಲೈ ನಂದಿಯೇ ಇವೊತ್ತಿನಿಂದ ನಿನಗೆ ನಿಶ್ಚಯವಾಗಿ ಕವೀಶ್ವರನೆಂಬ ಹೆಸರನ್ನಿಟ್ಟಿರುವೆನು ಎಂದು ಹೇಳಿದರು ॥ ೧೧೭ ॥ ಈ ಪ್ರಕಾರ ಕೃಪೆಯಿಂದ ಹೇಳಿದ್ದನ್ನು ಕೇಳಿ ನಂದಿಯು ಶ್ರೀ ಗುರುಚರಣಗಳಿಗೆ ವಂದಿಸಿದನು. ॥ ೧೧೮ ॥ ಆ ಕೂಡಲೇ ಅವನ ಮೊಳಕಾಲ ಮೇಲಿದ್ದ ಕುಷ್ಠವು ಹೋಯಿತು. ಮುಂದೆ ಅವನು ಆನಂದದಿಂದ ಕವಿಯೆಂಬ ಹೆಸರಿನಿಂದಲೇ ಗುರುಗಳ ಸೇವೆ ಮಾಡುತ್ತ ಅಲ್ಲಿಯೇ ಇದ್ದನು. ॥ ೧೧೯ ॥ ಎಲೈ ನಾಮಧಾರಕನೇ, ಈ ನಂದೀ ಕವಿಯಂತೆ, ಗುರುಗಳ ಕೃಪೆಯಿಂದ ನರಸಿಂಹ ಅಥವಾ ನರಹರಿ ಎಂಬ ಮತ್ತೊಬ್ಬ ಕವಿಯೂ ಆಗಿ ಅವನೂ ಗುರುಗಳ ಸೇವಕನಾದನು. ಎಂದು ಸಿದ್ಧರು ಹೇಳಲು ॥ ೧೨೦ ॥ ಆಗ ನಾಮಧಾರಕನು ಕೈ ಮುಗಿದು— ಸ್ವಾಮೀ, ಕೃಪಾನಿಧಿಗಳೇ, ಶ್ರೀ ಗುರುಗಳ ಮಂದಿರದಲ್ಲಿ ನರಸಿಂಹನೆಂಬ ಮತ್ತೊಬ್ಬ ಕವಿಯು ಹ್ಯಾಗಾದನೆಂಬದನ್ನು ವಿಸ್ತಾರವಾಗಿ ನನಗೆ ಹೇಳಿರಿ. ॥ ೧೨೧ ॥

ಗುರುಚರಿತ್ರೆಯನ್ನು ಕೇಳಬೇಕೆಂಬ ಅಭಿಲಾಷೆಯು ನನಗೆ ಬಹಳ ಆದೆ ಎಂದನು. ‖ ೧೨೨ ‖ ಎಂದು ಸರಸ್ವತಿ ಗಂಗಾಧರನು ಹೇಳಿ— ಎಲೈ ಶ್ರೋತ್ರುಗಳಿರಾ ಮುಂದಿನ ಮನೋಹರ ಹಾಗೂ ವಿಸ್ತಾರವಾದ ಕಥೆಯನ್ನು ಕೇಳಿದರೆ ಶ್ರೀ ಗುರುಗಳ ನಾಮಸ್ಮರಣೆಯು ಕಾಮಧೇನು ಸ್ವರೂಪವಾಗುವದು ಎಂದನು. ‖ ೧೨೩ ‖

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ, ದ್ವಿಜ ಕುಷ್ಠ ಪರಿಹಾರೋ ನಾಮ ಪಂಚ ಚತ್ವಾರಿಂಶೋಧ್ಯಾಯಃ ‖ ೪೫ ‖ ಶ್ರೀ ಗುರುದತ್ತಾತ್ರೇಯಾರ್ಪಣಮಸ್ತು ‖

— ಶ್ರೀ ಗುರುದೇವದತ್ತ —

— ೪೫ನೇ ಅಧ್ಯಾಯ ಸಮಾಪ್ತ —

---

# ೪೬ನೇಯ ಅಧ್ಯಾಯ

## ಶ್ರೀ ಗುರುಗಳು ಹಿಪ್ಪರಗಿ ಕಲ್ಲೇಶ್ವರನಲ್ಲಿ ಪ್ರಗಟರಾಗಿ ನರಕೇಸರಿಯನ್ನು ಉದ್ಧರಿಸಿದ್ದು

ಶ್ರೀ ಗಣೇಶಾಯನಮಃ । ಶ್ರೀ ಸರಸ್ವತ್ಯೈನಮಃ । ಶ್ರೀ ಗುರುಭ್ಯೋನಮಃ । ಆಮೇಲೆ ನಾಮಧಾರಕನು ವಿನಯದಿಂದ— ಸ್ವಾಮೀ, ಸಿದ್ಧಮುನಿಗಳೇ, ನಂದೀ ಕವಿಯಂತೆ ಮತ್ತೊಬ್ಬ ಕವಿಯಾದನೆಂದು ಹೇಳಿದಿರಿ. ॥ ೧ ॥ ಅವನು ಹ್ಯಾಗೆ ಶಿಷ್ಯನಾದನೆಂಬದನ್ನು ದಯಾನಿಧಿಗಳಾದ ತಾವು ನನ್ನಮೇಲೆ ಕೃಪೆಮಾಡಿ ವಿಸ್ತಾರವಾಗಿ ಹೇಳಬೇಕೆಂದು ಕೈಮುಗಿದನು. ॥ ೨ ॥ ಆಗ ಸಿದ್ಧರು— ನಾಮಧಾರಕನೇ, ಗುರುಚರಿತ್ರೆಯು ಅಲೌಕಿಕವಾದ್ದು. ಮುಂದೆ ಒಂದು ಆಶ್ಚರ್ಯದ ವಿಚಿತ್ರ ಸಂಗತಿಯಾಯಿತು ಹೇಳುವೆನು ಕೇಳು. ॥ ೩ ॥ ಗಾಣಗಾಪುರದಲ್ಲಿದ್ದಾಗ ಶ್ರೀ ಗುರುಗಳ ಮಹಿಮೆಯು ಅಪರಂಪಾರವಾಗಿ ಬೆಳೆದದ್ದರಿಂದ ದೊಡ್ಡ ದೊಡ್ಡ ಜನರು ಒಂದು ಒಹು ಮಂದಿ ಅವರ ಭಕ್ತರಾದರು. ॥ ೪ ॥ ನಂದಿ ಕವಿಯು ಮಾಡಿದ ಅಪರಿಮಿತ ಕವಿತೆಗಳು ಯಾವತ್ತೂ ಜನರಿಂದ ಕಲಿಯಲ್ಪಟ್ಟು ನಾಲ್ಕೂ ರಾಷ್ಟ್ರಗಳಲ್ಲಿ ಪ್ರಸಿದ್ಧವಾದವು. ॥ ೫ ॥ ಈ ಪ್ರಕಾರ ಇರುತ್ತಿರಲು ಒಂದು ದಿವಸ ಹಿಪ್ಪರಿಗೆಯಿಂದ ಒಬ್ಬ ಭಕ್ತನು ಬಂದು, ತನ್ನ ಮನೆಯಲ್ಲಿ ಮಂಗಳಕಾರ್ಯವಿದೆ ಎಂದು ಹೇಳಿ ಶ್ರೀ ಗುರುಗಳನ್ನು ಕರಕೊಂಡು ತನ್ನ ಊರಿಗೆ ಹೋಗಿ ॥ ೬ ॥ ಬಹು ರೀತಿಯಾಗಿ ಪೂಜಿಸಿ ದೊಡ್ಡ ಸಮಾರಂಭವನ್ನು ಮಾಡಿದನು. ॥ ೭ ॥ ಆ ಊರಲ್ಲಿ ಕಲ್ಲೇಶ್ವರ ಎಂಬ ಒಂದು ಶಿವಾಲಯವಿತ್ತು ಮತ್ತು ಆ ಊರಲ್ಲಿ ಅನೇಕ ಮಂದಿ ಗ್ರಹಸ್ಥರು ಪ್ರಖ್ಯಾತವಾಗಿದ್ದರು. ಅವರಲ್ಲಿ ನರಕೇಸರಿ ಎಂಬ ಒಬ್ಬ ಬ್ರಾಹ್ಮಣನು ನಿತ್ಯ ಆ ಕಲ್ಲೇಶ್ವರನ ಪೂಜೆ ಮಾಡುತ್ತ ಐದು ಹೊಸ ಕವಿತೆಗಳನ್ನು ಮಾಡುತ್ತಿದ್ದನು. ॥ ೯ ॥ ಅವನು ಕಲ್ಲೇಶ್ವರನೆಂಬ ಶಬ್ದದ ಹೊರತು ಇನ್ನಾವ ಶಬ್ದವನ್ನೂ ಆಡದೆ ಏಕಚಿತ್ತದಿಂದ ಆ ಈಶ್ವರನ ಪೂಜೆ ಮಾಡುತ್ತಿದ್ದನು. ॥ ೧೦ ॥ ಒಂದು ದಿವಸ ಆ ಊರ ಜನರೆಲ್ಲರೂ

ಅವನನ್ನು ಕುರಿತು— ಎಲೈ ಬ್ರಾಹ್ಮಣನೇ, ಈ ಊರಲ್ಲಿ ಶ್ರೀ ನರಸಿಂಹ ಸರಸ್ವತಿ ಗುರುಗಳು ಬಂದಿದ್ದಾರೆ. ನಿನ್ನ ಕವಿತ್ವವು ಪ್ರಸಿದ್ಧವಾಗಿದೆ. ಶ್ರೀ ಗುರುಗಳಿಗೆ ಕವಿತ್ವದಲ್ಲಿ ಬಹು ಪ್ರೀತಿಯುಂಟು ಆದ್ದರಿಂದ ನೀನು ಗುರುಸ್ತುತಿಯನ್ನು ಮಾಡು ಎಂದು ಹೇಳಿದರು. ॥ ೧೧ ॥ ಆಗ ಅವನು— ಎಲೈ ಜನರುಗಳಿರಾ, ನಾನು ಕಲ್ಲೇಶ್ವರನಿಗೆ ನನ್ನ ನಾಲಿಗೆಯನ್ನು ಮಾರಿದ್ದೇನೆ. ಮತ್ತು ಎರಡನೇದು ನನ್ನ ದೇವ ಪೂಜೆಯೂ ಅಪಾರವಾಗಿದೆ. ನಾನು ನರಸ್ತುತಿಯನ್ನು ಮಾಡುವದಿಲ್ಲ ಎಂದು ಹೇಳಿದನು. ॥ ೧೨ ॥ ಆಮೇಲೆ ಆವನು ನಿತ್ಯದಂತೆ ಕಲ್ಲೇಶ್ವರನ ಪೂಜೆಗೆ ಹೋದನು. ನಿತ್ಯ ಪೂಜೆ ಮಾಡಿ ಶಿವಸ್ತುತಿ ಪರವಾದ ಕವಿತೆಗಳನ್ನು ಮಾಡುವದು ಅವನ ರೂಢಿಯಾಗಿದ್ದಿತು. ಆದರೆ ಆ ದಿನ ಪೂಜೆ ಪ್ರಾರಂಭ ಮಾಡಿದಕೂಡಲೇ ಅವನಿಗೆ ಕವಿತೆ ಮಾಡುವದು ಮರೆತು ನಿದ್ರೆಯು ಬಂತು. ॥ ೧೩-೧೪ ॥ ಆ ನಿದ್ರೆಯಲ್ಲಿ ಅವನಿಗೆ ಒಂದು ಸ್ವಪ್ನವು ಬಿತ್ತು ಮತ್ತು ಆ ಸ್ವಪ್ನದಲ್ಲಿ ಅವನು ಒಂದು ವಿಚಿತ್ರವನ್ನು ಕಂಡನು. ಅದೇನೆಂದರೆ— ಆ ಕಲ್ಲೇಶ್ವರನ ಲಿಂಗದಮೇಲೆ ಶ್ರೀ ಗುರುಗಳು ಕೂತಿದ್ದರು ಮತ್ತು ತಾನು ಸಂತೋಷದಿಂದ ಆ ಶ್ರೀ ಗುರುಗಳನ್ನೇ ಪೂಜಿಸುತ್ತಿದ್ದನು, ಅಲ್ಲಿ ಲಿಂಗವು ಕಾಣದೆ ಆ ಲಿಂಗದ ಸ್ಥಳದಲ್ಲಿಯೇ ಶ್ರೀ ಗುರುಗಳೇ ಕಾಣಿಸಿದರು. ಮತ್ತು ಆಗ ಗುರುಗಳು ಹರ್ಷಿತರಾಗಿ— ಎಲೈ ಬ್ರಾಹ್ಮಣನೇ, ಮನುಷ್ಯರಮೇಲೆ ಭಕ್ತಿಯಿಲ್ಲದ ನೀನು ನಮ್ಮನ್ನೇಕೆ ಪೂಜಿಸುತ್ತೀ ? ಎಂದು ಕೇಳಿದಂತಾಯಿತು. ಆದರೆ ತಾನು ಸ್ಥಿರ ಮನಸ್ಸಿನಿಂದ ಪೂಜೆಯನ್ನು ಮಾಡಿದನು. ಈ ಪ್ರಕಾರ ವಿಚಿತ್ರವಾದ ಸ್ವಪ್ನವನ್ನು ಕಂಡುಕೂಡಲೇ ಅವನು ಎಚ್ಚರವನ್ನು ಹೊಂದಿದನು. ॥ ೧೫-೧೬-೧೭ ॥ ಆಮೇಲೆ ಆಶ್ಚರ್ಯ ಹೊಂದಿ ಮನಸ್ಸಿನಲ್ಲಿ— ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳು ತ್ರಿಮೂರ್ತಿಗಳ ಅವತಾರವಾಗಿದ್ದಾರೆ. ಇದರಲ್ಲಿ ಸಂಶಯವಿಲ್ಲ. ನಾನು ಅವರ ಪೂಜೆಯನ್ನೇ ಮಾಡಿದೆನು. ॥ ೧೮ ॥ ಇವರೇ ಜಗದ್ಗುರುಗಳು. ಇವರ ದರ್ಶನವನ್ನು ತಕ್ಕೊಳ್ಳಬೇಕೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಅವನು ಕೂಡಲೇ, ಶ್ರೀ ಗುರುಗಳ ಹತ್ತಿರ ಬಂದು ॥ ೧೯ ॥ ಸಾಷ್ಟಾಂಗ ನಮಸ್ಕಾರ ಹಾಕುತ್ತ ಅವರ ಪಾದಗಳನ್ನು ಹಿಡಿದು ವಿನಯದಿಂದ— ಸ್ವಾಮೀ, ನಾನು ಅಜ್ಞಾನಿಯು. ನಿಮ್ಮ ಸ್ವರೂಪ

ವನ್ನು ಅರಿಯೆನು. ನನ್ನಮೇಲೆ ಕೃಪಾ ಮಾಡಿರಿ. ॥ ೨೦ ॥ ಈ ಪ್ರಪಂಚದ ಮಾಯೆಯಿಂದ ಮೋಹಿತನಾಗಿ ನಾನು ಅಜ್ಞಾನದಿಂದ ನಿಮ್ಮನ್ನು ತಿಳಿಯಲಿಲ್ಲ. ಈಗ ತಾವು ನಿರ್ಗುಣರಾದ ಈಶ್ವರರೆಂದು ಮನಸ್ಸಿನಲ್ಲಿ ನಿಶ್ಚಯ ಮಾಡಿದ್ದೇನೆ. ॥ ೨೧ ॥ ನೀವೇ ಕರ್ಪೂರ ಗೌರವರಾದ ಕಲ್ಲೇಶ್ವರರಾಗಿದ್ದೀರಿ. ನೀವೇ ಜಗದ್ಗುರುಗಳು. ನನ್ನ ಮನಸ್ಸು ಸ್ಥಿರವಾಗಿ ಈಗ ನಾನು ನಿಮ್ಮ ಚರಣಕ್ಕೆ ಶರಣು ಬಂದಿದ್ದೇನೆ. ॥ ೨೨ ॥ ನೀವು ವಿಶ್ವದ ಆಧಾರರು. ಶರಣಾಗತರ ವಜ್ರ ಪಂಜರರು ಸ್ವಾಮೀ, ನಾನು ನಿಮ್ಮ ಚರಣಕಮಲಗಳಲ್ಲಿ ಭ್ರಮರನಾಗಿ ಓಡಿ ಬಂದಿರುವೆನು. ॥ ೨೩ ॥ ಪ್ರತ್ಯಕ್ಷವಾಗಿ ತಾವು ಹತ್ತಿರದಲ್ಲಿರಲು, ಅಡವಿ ಅಡವಿ ಯಾಕೆ ತಿರಗಬೇಕು? ಮನೆಗೆ ಕಾಮಧೇನುವು ಬರಲು ನಮಗೆ ದೈನ್ಯವೆಲ್ಲಿಂದ ಬಂದೀತು? ॥ ೨೪ ॥ ಪೂರ್ವದಲ್ಲಿ ಸಮಸ್ತ ಋಷಿಗಳು ಅನೇಕ ರೀತಿಯಾಗಿ ಕಷ್ಟಬಡುತ್ತ ಲೆಕ್ಕವಿಲ್ಲದಷ್ಟು ತಪಸ್ಸು ಮಾಡಿದರೂ ಅವರಿಗೆ ತಾವು ದರ್ಶನ ಕೊಡಲಿಲ್ಲ. ॥ ೨೫ ॥ ನಾನು ಏನೂ ಕಷ್ಟಪಡದಿದ್ದರೂ, ತಪಸ್ಸು ಮಾಡದಿದ್ದರೂ ನನಗೆ ತಾವು ಪ್ರತ್ಯಕ್ಷವಾಗಿ ದರ್ಶನ ಕೊಟ್ಟಿರಿ. ಅಂದಮೇಲೆ ಇನ್ನು ನನ್ನ ಇಚ್ಛೆಯು ಪೂರ್ಣವಾಯಿತು. ನನಗೆ ಕಲ್ಲೇಶ್ವರನು ಪ್ರಸನ್ನನಾದನು. ॥ ೨೬ ॥ ಸತ್ಯವಾಗಿ ನೀವೇ ಕಲ್ಲೇಶ್ವರರಾಗಿದ್ದೀರಿ. ಎಂದು ಮನಸ್ಸಿನಲ್ಲಿ ನಿರ್ಧರಿಸಿದ್ದೇನೆ. ಜಗದ್ಗುರುಗಳೇ, ನನ್ನಮೇಲೆ ಕೃಪೆ ಮಾಡಿರಿ ಎಂದು ಅವರ ಚರಣಗಳಿಗೆ ನಮಸ್ಕಾರ ಮಾಡಿದನು. ॥ ೨೭ ॥ ಆಗ ಶ್ರೀ ಗುರುಗಳು— ಎಲೈ ಬ್ರಾಹ್ಮಣನೇ, ನೀನು ನಿತ್ಯವೂ ನಮ್ಮನ್ನು ನಿಂದಿಸುತ್ತೀ, ಆದರೆ ಈ ದಿನ ನಿನ್ನ ಮನಸ್ಸಿನಲ್ಲಿ ಯಾವ ಭಕ್ತಿಯು ಹುಟ್ಟಿ ಇಲ್ಲಿಗೆ ಬಂದೆ! ಎಂದು ಕೇಳಿದರು. ॥ ೨೮ ॥ ಆಗ ಅವನು— ಸ್ವಾಮೀ, ಅಜ್ಞಾನಾಂಧಕಾರಿಯಾದ ನನಗೆ ಜ್ಯೋತಿರ್ಮಯರೂ ಆನಂದ ಮೂರ್ತಿಗಳೂ ಆದ ತಾವು ನನಗೆ ಸುಮ್ಮಸುಮ್ಮನೆ ಹ್ಯಾಗೆ ಭೆಟ್ಟಿಯಾಗಬೇಕು? ॥ ೨೯ ॥ ನಾನು ಇಷ್ಟುದಿವಸ ಕಲ್ಲೇಶ್ವರನನ್ನು ಪೂಜಿಸಿದ ಪುಣ್ಯದಿಂದಲೇ ಈಗ ನನಗೆ ತಮ್ಮ ದರ್ಶನವಾಯಿತು. ಈ ದಿನ ಕಲ್ಲೇಶ್ವರನ ಲಿಂಗಸ್ಥಾನದಲ್ಲಿ ತಮ್ಮನ್ನೇ ಕಂಡು ಪೂಜೆ ಮಾಡಿದೆನು. ॥ ೩೦ ॥ ಸ್ವಪ್ನದಲ್ಲಿ ಲಿಂಗಸ್ಥಾನದಲ್ಲಿಯೂ ಮತ್ತು ಈಗ ಪ್ರತ್ಯಕ್ಷವಾಗಿಯೂ ತಮ್ಮ ಚರಣಗಳು ಕಂಡ

ದ್ದರಿಂದ ನನ್ನ ಅಂತಃಕರಣವು ಸ್ಥಿರವಾಯಿತು. ಆದ್ದರಿಂದ ನನ್ನನ್ನು ತಮ್ಮ ಶಿಷ್ಯ ವರ್ಗದಲ್ಲಿ ಸೇರಿಸಿಕೊಳ್ಳಬೇಕು. ‖ ೩೧ ‖ ಎಂದು ವಿನಯದಿಂದ ಹೇಳಿ ಷೋಡಶೋಪಚಾರದಿಂದ ಅವರ ಪೂಜೆಯನ್ನು ಮಾಡಿ ಅಪಾರವಾಗಿ ಸ್ತೋತ್ರರೂಪವಾಗಿ ಕವಿತ್ವವನ್ನು ಮಾಡಿದನು. ‖ ೩೨ ‖ ಆಗ ಶ್ರೀ ಗುರುಗಳು ಭಕ್ತರನ್ನು ಕುರಿತು— ಎಲೈ ಭಕ್ತರೇ ಮಾನಸ ಪೂಜೆಯ ವಿಧಾನವು ಪ್ರತ್ಯಕ್ಷ ಪೂಜೆ ಮಾಡಿದಂತೆಯೇ ಎಂದು ತಿಳಿಯಬೇಕು. ‖ ೩೩ ‖ ನಾವು ಪ್ರತ್ಯಕ್ಷವಾಗಿ ಇಲ್ಲದಿದ್ದರೂ ಇವನು ಸ್ವಪ್ನದಲ್ಲಿ ನಮ್ಮನ್ನು ನೋಡಿ ಉತ್ತಮವಾದ ಕವಿತ್ವ ಮಾಡಿದನು. ‖ ೩೪ ‖ ಎಂದು ಹೇಳಿ ಆ ಕವಿಗೆ ಅನೇಕ ವಸ್ತ್ರಗಳನ್ನು ಕೊಡಿಸಿದರು ಆಗ ಅವನು ಗುರುಚರಣಗಳಿಗೆ ವಂದಿಸಿ, ನಾನು ತಮ್ಮ ಶಿಷ್ಯನಾಗುವೆನೆಂದು ಬಿನ್ನೈಸಿದನು. ‖ ೩೫ ‖ ಆಗ ಶ್ರೀ ಗುರುಗಳು— ಎಲೈ ಬ್ರಾಹ್ಮಣನೇ, ನಮಗಿಂತಲೂ ಕಲ್ಲೇಶ್ವರನೇ ಶ್ರೇಷ್ಠನು ನಾವು ಸದಾ ಆ ಕಲ್ಲೇಶ್ವರನಲ್ಲಿಯೇ ಇರುವೆವು. ಆದ್ದರಿಂದ ನಿತ್ಯ ನೀನು ಆ ಕಲ್ಲೇಶ್ವರನನ್ನೇ ಪೂಜಿಸು ಎಂದು ಹೇಳಿದರು ‖ ೩೬ ‖ ಆಗ ಅವನು— ಸ್ವಾಮೀ, ಪ್ರತ್ಯಕ್ಷವಾದ ತಮ್ಮನ್ನು ಬಿಟ್ಟು, ಕಷ್ಟಬಟ್ಟು ಆ ಕಲ್ಲೇಶ್ವರನನ್ನು ಯಾಕೆ ಪೂಜಿಸಬೇಕು ? ಆ ಕಲ್ಲೇಶ್ವರನಲ್ಲಿಯೇ ನಾನು ನಿಮ್ಮನ್ನು ನೋಡಿದ್ದೇನೆ. ‖ ೩೭ ‖ ತ್ರೈಮೂರ್ತಿ ಅವತಾರವಾದ ನೀವೇ ಕಲ್ಲೇಶ್ವರರು. ಹೀಗೆ ನನ್ನ ಮನಸ್ಸಿನಲ್ಲಿ ಸತ್ಯವಾದ ನಿರ್ಧಾರವಿದೆ ಆದ್ದರಿಂದ ಈಗ ತಮ್ಮ ಚರಣಗಳನ್ನು ನಾನು ಬಿಡುವದಿಲ್ಲ ಎಂದು ವಿನಂತಿಯನ್ನು ಮಾಡಿಕೊಂಡು ಅವನು ಶ್ರೀ ಗುರುಗಳೊಡನೆ ಗಾಣಗಾಪುರಕ್ಕೆ ಬಂದು ಬಹು ರೀತಿಯಿಂದ ಕವಿತ್ವವನ್ನು ಮಾಡುತ್ತ, ಅವರನ್ನು ಸೇವಿಸುತ್ತಿದ್ದನು ‖ ೩೯ ‖ ಎಲೈ ನಾಮಧಾರಕನೇ, ಈ ಪ್ರಕಾರ ಇಬ್ಬರು ಕವೀಶ್ವರರು ಆಗಿ ಭಕ್ತಿಯಿಂದ ಗುರುಗಳ ಸೇವೆ ಮಾಡುತ್ತ ಇದ್ದರು. ಎಂದು ಸಿದ್ಧರು ಹೇಳಿದರೆಂದು ಸರಸ್ವತಿ ಗಂಗಾಧರನು ಜನರನ್ನು ಕುರಿತು— ಯಾರಮೇಲೆ ಶ್ರೀ ಗುರುಗಳು ಅಂತಃಕರಣ ಮಾಡುವರೋ ಅವರ ಮನೆಯಲ್ಲಿ ಕಲ್ಪತರುವಿದ್ದಂತೆ ಆಗಿ ಅವರು ಇಚ್ಛಿಸಿದ ಫಲವನ್ನು ಹೊಂದುವರು. ‖ ೪೦-೪೧ ‖ ಸಿದ್ಧರು ಹೇಳುವ ಮುಂದಿನ ಕಥೆಯನ್ನು ಕೇಳಿರಿ ಎಂದನು.

ಇತಿ ಶ್ರೀ ಗುರುಚರಿತ್ರ ಪರಮ ಕಥಾ ಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮ ಧಾರಕ ಸಂವಾದೇ ಕಲ್ಲೇಶ್ವರ ಮಹಿಮಾ ವರ್ಣನಂ ನಾಮ ಷಟ್ ಚತ್ವಾರಿಂಶೋಽಧ್ಯಾಯಃ ‖ ೪೬ ‖ ಶ್ರೀ ಗುರುದೇವದತ್ತ ‖

—: ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು :—

— ೪೬ನೇ ಅಧ್ಯಾಯ ಸಮಾಪ್ತ —

---

# ೪೭ನೇಯ ಅಧ್ಯಾಯ

## ಶ್ರೀ ಗುರುಗಳು ದೀಪಾವಳಿಯಲ್ಲಿ ಬೇರೆ ಏಳು ರೂಪಗಳನ್ನು ಧರಿಸಿ ಏಳು ಜನ ಭಕ್ತರ ಮನೆಗೆ ಹೋದದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆ ಮೇಲೆ ನಾಮಧಾರಕನು ಸಿದ್ಧರನ್ನು ಕುರಿತು— ಸ್ವಾಮೀ, ಸಿದ್ಧಮುನಿಗಳೇ, ನನ್ನ ಮೇಲೆ ಕೃಪಾ ಮಾಡಿ ಮುಂದೆ ಕಥೆಯು ಯಾವ ಪ್ರಕಾರವಾಗಿ ನಡೆಯಿತೆಂಬದನ್ನು ವಿಸ್ತಾರವಾಗಿ ಹೇಳಬೇಕು ಎಂದನು. ॥ ೧ ॥ ಆಗ ಸಿದ್ಧರು— ಎಲೈ ನಾಮಧಾರಕಾ, ಶ್ರೀಮಂತಾ, ನಿನಗೆ ಗುರುಚರಿತ್ರೆಯನ್ನು ಕೇಳಬೇಕೆಂಬ ಅಪೇಕ್ಷೆಯು ಬಹಳವಾಗಿರುತ್ತದೆ. ಆದರಿಂದ ನೀನು ಪುತ್ರ-ಪೌತ್ರರನ್ನು ಪಡೆದು ಐಶ್ವರ್ಯವಂತನಾಗುವಿ ॥ ೨ ॥ ನಿನಗೆ ಒಂದು ವಿಚಿತ್ರವಾದ ಕಥೆಯನ್ನು ಹೇಳುವೆನು. ಪಾಪಿಯು ಸಹ ಪವಿತ್ರನಾಗುವಂಥ ಗುರುಚರಿತ್ರೆಯನ್ನು ಮನಸುಗೊಟ್ಟು ಕೇಳು. ॥ ೩ ॥

ಶ್ರೀಗುರುಗಳು ಗಾಣಗಾಪುರದಲ್ಲಿದ್ದಾಗ ಪ್ರತಿವರ್ಷದಂತೆ ದೀಪಾವಳಿಯ ದೊಡ್ಡ ಹಬ್ಬವು ಬಂದಿತು. ಆಗ ಅನೇಕ ಕಡೆಯಿಂದ ಅನೇಕ ಜನ ಶಿಷ್ಯರು ಬಂದರು ಅವರಲ್ಲಿ ಏಳು ಜನ ಶಿಷ್ಯರು ಈ ಹಬ್ಬದಲ್ಲಿ ಶ್ರೀಗುರುಗಳನ್ನು ತಮ್ಮ ತಮ್ಮ ಮನೆಗೆ ಕರಕೊಂಡು ಹೋಗಬೇಕೆಂದು ಅವರನ್ನು ಕರೆಯಲಿಕ್ಕೆ ಬಂದಿದ್ದರು. ॥ ೪ ॥ ಆ ಏಳೂ ಜನ ಶಿಷ್ಯರು ಶ್ರೀ ಗುರುಗಳಿಗೆ ಒಬ್ಬರಿಗಿಂತ ಒಬ್ಬರು ಹೆಚ್ಚಿನ ಪ್ರೀತಿಯವರಾಗಿದ್ದರು. ಆ ಏಳೂ ಜನರ ಮನೆಗಳು ಬೇರೆ ಬೇರೆ ಏಳು ಊರುಗಳಲ್ಲಿದ್ದವು. ಆಗ ಅವರು ಶ್ರೀ ಗುರುಗಳ ಹತ್ತರ ಬಂದು ನಮಸ್ಕಾರ

ಮಾಡಿ— ಸ್ವಾಮೀ, ಈ ಹಬ್ಬದಲ್ಲಿ ತಾವು ನಮ್ಮ ಮನೆಗೆ ಭಿಕ್ಷೆಗೆ ಬರಬೇಕು ಎಂದು ಪ್ರತಿಯೊಬ್ಬರು ಅಂದು ಶ್ರೀ ಗುರುಚರಣಕ್ಕೆ ನಮಸ್ಕಾರ ಮಾಡಿದರು. ‖ ೫ ‖ ಆಗ ಶ್ರೀ ಗುರುಗಳು— ಎಲೈ ಶಿಷ್ಯರೇ, ನೀವು ಏಳು ಮಂದಿ, ಮತ್ತು ನಿಮ್ಮ ಮನೆಗಳು ಬೇರೆ ಬೇರೆ ಏಳು ಊರುಗಳಲ್ಲಿ ಅವೆ ನಾನು ಒಬ್ಬನು ಅಂದಮೇಲೆ ನಿಮ್ಮೆಲ್ಲರ ಮನೆಗೂ ಒಂದೇ ದಿವಸ ಹ್ಯಾಗೆ ಬರಬೇಕು ? ಇವನ್ನು ನೀವೇ ಮನಸ್ಸಿನಲ್ಲಿ ವಿಚಾರ ಮಾಡಿ ‖ ೬ ‖ ನಾವು ಮೊದಲು ಯಾರ ಮನೆಗೆ ಬರಬೇಕೆಂಬುದನ್ನು ನೀವೇ ಹೇಳಿರಿ. ಅಂದರೆ ಅವರ ಮನೆಗೆ ನಾನು ನಿಶ್ಚಯ ವಾಗಿ ಹೋಗುವೆನು. ನಾವು ಶಿಷ್ಯಾಧೀನರು ಎಂದರು. ‖ ೭ ‖ ಆಗ ಆ ಶಿಷ್ಯರು ತಮ್ಮ ತಮ್ಮೊಳಗೆ ಕೇಳಹತ್ತಿ ಪ್ರತಿಯೊಬ್ಬರು— ಈ ಸಾರೆ ಶ್ರೀ ಗುರುಗಳನ್ನು ನಮ್ಮ ಮನೆಗೆ ಕರಕೊಂಡು ಹೋಗುತ್ತೇನೆ ನಮ್ಮ ಮನೆಗೆ ಕರಕೊಂಡು ಹೋಗುತ್ತೇನೆ. ಇವರು ನಮ್ಮ ಸ್ವಾಮಿಗಳು. ಎಂದೆನ್ನುತ್ತ ಒಬ್ಬರಿಗೊಬ್ಬರು ಜಗಳಾಡಲಿಕ್ಕೆ ಹತ್ತಿದರು. ‖ ೮ ‖ ಆಗ ಶ್ರೀ ಗುರುಗಳು— ಎಲೈ ಶಿಷ್ಯರೇ, ನೀವು ಸುಮ್ಮ ಸುಮ್ಮನೆ ಯಾಕೆ ಜಗಳಾಡುತ್ತೀರಿ ? ನಾನು ಒಬ್ಬನೇ ಇದ್ದು ಈ ಸಾರೆ ಯಾರದಾದರೂ ಒಬ್ಬರ ಮನೆಗೆ ಬರುವೆನು. ಎಂದು ಅವರನ್ನು ಸಮಾಧಾನ ಮಾಡಿದರು ‖ ೯ ‖ ಅವರ ಮಾತು ಕೇಳಿ ಆ ಶಿಷ್ಯರೆಲ್ಲರೂ ವಿನಯದಿಂದ ಕೈ ಮುಗಿದು— ಸ್ವಾಮೀ, ತಾವು ನಮ್ಮನ್ನು ಭೇದಾಭೇದ ದೃಷ್ಟಿಯಿಂದ ನೋಡಿ ಇವರು ಶ್ರೀಮಂತರು, ಇವರು ಬಡವರು ಎಂದು ಪಕ್ಷಪಾತ ಮಾಡದೆ ಎಲ್ಲರನ್ನೂ ಸಮದೃಷ್ಟಿಯಿಂದ ನೋಡಿರಿ. ಪೂರ್ಣತ್ವವನ್ನೂ ನ್ಯೂನತ್ವವನ್ನೂ ವಿಚಾರ ಮಾಡಬಾರದು. ನಾವು ದುರ್ಬಲರೆಂದು ನೀವು ನಮ್ಮನ್ನು ಉಪೇಕ್ಷಿಸಿದರೆ ನಾವು ಕೂಡಲೆ ಗಂಗಾಪ್ರವೇಶ ಮಾಡುವೆವು. ‖೧೦-೧೧‖ ಭಕ್ತವತ್ಸಲನಾದ ಶ್ರೀಕೃಷ್ಣನು ರಾಜನಾದ ಕೌರವನ ಮನೆಗೆ ಹೋಗದೆ ಬಡವನೂ ಭಕ್ತನೂ ಆದ ವಿದುರನ ಮನೆಗೆ ಪ್ರೀತಿಯಿಂದ ಹೋದನು. ‖ ೧೨ ‖ ನಾವೆಲ್ಲರೂ ನಿಮ್ಮ ದಾಸರು. ಯಾರನ್ನೂ ಉದಾಶೀನ ಮಾಡ ಬೇಡಿರಿ. ನಾವು ನಿಮ್ಮ ಅಪ್ಪಣೆಯಂತೆ ನಡೆಯುವೆವು. ‖ ೧೩ ‖ ಎಂದು ಹೇಳಿ ಎಲ್ಲರೂ ದಂಡವತ್ ನಮ ಸ್ಕಾರ ಮಾಡಿ— ಸ್ವಾಮೀ ಗುರುವರ್ಯರೇ, ನಮ್ಮನ್ನು ನೋಡಿ ನಮ್ಮ ಇಷ್ಟವನ್ನು ಪೂರ್ಣ ಮಾಡಿರಿ ಎಂದು

ಬಿನ್ನವಿಸಿದರು. ‖ ೧೪ ‖ ಆಗ ಶ್ರೀ ಗುರುಗಳು— ಎಲೈ ಶಿಷ್ಯರಿರಾ, ನಾವು ನಿಮ್ಮೆಲ್ಲರ ಮನೆಗೂ ಬರುವೆವು. ನೀವು ಮನಸ್ಸಿನಲ್ಲಿ ಮಾತ್ರ ಏನೂ ಚಿಂತೆ ಮಾಡಬೇಡಿರಿ. ಇಕೋ ನನ್ನ ವಚನವನ್ನು ತಕ್ಕೊಳ್ಳಿರಿ ಎಂದರು. ‖ ೧೫ ‖ ಶ್ರೀ ಗುರುಗಳ ಮಾತು ಕೇಳಿ ಆ ಶಿಷ್ಯರು— ಸ್ವಾಮೀ, ನೀವು ಒಬ್ಬರಿದ್ದು, ಎಲ್ಲರ ಮನೆಗೂ ಬರುವೆವೆಂದು ಹೇಳುವಿರಿ. ಇದನ್ನು ಹ್ಯಾಗೆ ನಂಬಬೇಕು? ಎಂದರು. ‖ ೧೬ ‖ ಆಗ ಗುರುಗಳು ಮನಸ್ಸಿನಲ್ಲಿ ಆಲೋಚಿಸಿ— ಈ ಜನರು ಅಜ್ಞಾನಿಗಳಾಗಿದ್ದಾರೆ. ನಾನು ಹೇಳಿದ್ದು ಇವರಿಗೆ ತಿಳಿಯುವದಿಲ್ಲ. ಒಬ್ಬೊಬ್ಬರನ್ನೇ ಏಕಾಂತದಲ್ಲಿ ಕರೆದು ಹೇಳಬೇಕು ‖ ೧೭ ‖ ಎಂದು ಮೊದಲು ಒಬ್ಬನನ್ನು ಹತ್ತರ ಕರೆದು ಅವನ ಕಿವಿಯಲ್ಲಿ— ಎಲೈ ಶಿಷ್ಯನೇ ನಾವು ನಿನ್ನ ಮನೆಗೇ ಬರುವೆವು. ಈ ಮಾತು ಮಾತ್ರ ಯಾರಿಗೂ ಹೇಳ ಬೇಡ. ‖ ೧೮ ‖ ಈ ಪ್ರಕಾರ ಅವನಿಗೆ ವಚನವನ್ನು ಕೊಟ್ಟು— ಏಳು ಸುಮ್ಮನೆ ನಿಮ್ಮ ಊರಿಗೆ ಹೋಗು. ನಾನು ನಿಮ್ಮ ಊರಿಗೇ ಬರುವೆನು ಮನಸ್ಸಿನಲ್ಲಿ ಏನೂ ಸಂಶಯ ಹಿಡಿಯಬೇಡ ‖ ೧೯ ‖ ಎಂದು ಹೇಳಿ ಅವನನ್ನು ಊರಿಗೆ ಕಳಿಸಿ, ಎರಡನೇಯವನನ್ನು ಕರೆದು ಇದೇ ರೀತಿ ಹೇಳಿದರು ‖ ೨೦ ‖ ಈ ಪ್ರಕಾರ ಶ್ರೀ ಗುರುಗಳು ಆ ಏಳೂ ಜನರಿಗೆ ಹೇಳಿ ಕಳಿಸಿದರು ಮುಂದೆ ಮಹದಾಶ್ಚರ್ಯ ಸಂಗತಿಯಾಯಿತು ಕೇಳು. ‖ ೨೧ ‖ ಈ ಪ್ರಕಾರ ಗುರುಗಳ ಮಾತು ಕೇಳಿ ಆ ಏಳೂ ಭಕ್ತರು ಸಮಾಧಾನಹೊಂದಿ ಒಬ್ಬರಿಗೊಬ್ಬರು ಹೇಳದೆ ತಮ್ಮ ತಮ್ಮ ಊರಿಗೆ ಹೊರಟುಹೋದರು. ಗುರುಗಳು ಮಠದೊಳಗೆ ಬಂದರು ಆಗ ಅತಿ ವಿನೋದ ಸಂಗತಿಯು ನಡೆಯಿತು. ‖ ೨೨ ‖ ಆಗ ಆ ಗ್ರಾಮದಲ್ಲಿಯ ಭಕ್ತಜನರು ಈ ಪ್ರಕಾರದ ಕೌತುಕದ ಸಂಗತಿಯನ್ನು ಕೇಳಿ, ಮಠಕ್ಕೆ ಬಂದು ಶ್ರೀ ಗುರುಗಳಿಗೆ ನಮಸ್ಕಾರ ಮಾಡಿ— ಸ್ವಾಮೀ, ಈ ದೀಪಾವಳಿ ಹಬ್ಬದಲ್ಲಿ ತಾವು ನಮ್ಮನ್ನು ಇಲ್ಲಿಯೇ ಬಿಟ್ಟು, ಬೇರೆ ಊರಿಗೆ ಹೋಗುವಿರಾ? ಎಂದು ಕೇಳಿದರು. ‖ ೨೩ ‖ ಆಗ ಶ್ರೀ ಗುರುಗಳು— ಎಲೈ ಭಕ್ತರೇ, ನಾನು ಇಲ್ಲಿಯೇ ಇರುವೆನು. ಎಲ್ಲಿಯೂ ಹೋಗುವದಿಲ್ಲ. ನೀವು ಏನೂ ಚಿಂತೆ ಮಾಡಬೇಡಿರಿ, ನಾವು ಇಲ್ಲಿಯೇ ನಿಶ್ಚಯವಾಗಿ ಇರುವೆವು ನೋಡಿರಿ ಎಂದು ಹೇಳಿದರು. ‖ ೨೪ ‖ ಮುಂದೆ ಸ್ವಲ್ಪೇ ದಿವಸಗಳಲ್ಲಿ

ದೀಪಾವಳಿ ತ್ರಯೋದಸಿ ಬಂದು ಸಂಜೆಯಾಯಿತು. ನರಕಚತುರ್ದಶಿ ಬೆಳಗುಮುಂಜಾನೆ ಆರತಿ ಹೊತ್ತಿಗೆ ಶ್ರೀ ಗುರುಗಳು ಆ ಏಳೂ ಗ್ರಾಮಗಳಿಗೆ ಹೋಗುವ ಸಮಯ ಬಂತು. ॥ ೨೫ ॥ ಆಗ ನಾರಾಯಣ ಸ್ವರೂಪರೂ ಅಪಾರ ಮಹಿಮರೂ ಆದ ಶ್ರೀ ಗುರುಗಳು ಎಂಟು ರೂಪಗಳನ್ನು ತಕ್ಕೊಂಡು, ಮೂಲ ರೂಪದಿಂದ ಗಾಣಗಾಪುರ ದಲ್ಲಿಯೇ ಇದ್ದು, ಉಳಿದ ಏಳು ರೂಪಗಳಿಂದ ಹೊರಟು ಆ ಭಕ್ತರು ಶ್ರೀ ಗುರುಗಳು ಯಾವಾಗ ಬರುವರೋ ಎಂದು ದಾರೀ ನೋಡುತ್ತಿರುವಷ್ಟರಲ್ಲಿ ಬೆಳಗುಮುಂಜಾನೆಯ ಆರತೀ ಹೊತ್ತಿಗೆ ಆ ಏಳೂ ಜನ ಭಕ್ತರ ಮನೆಗೆ ಹೋದರು. ॥ ೨೬ ॥ ಗುರುಗಳು ಬಂದದ್ದನ್ನು ನೋಡಿ ಆ ಭಕ್ತರು ಆನಂದಸಾಗರದಲ್ಲಿ ಮುಳುಗಿ— ಆಹಾ ! ಗುರುಗಳು ಬಂದರು ! ಗುರುಗಳು ಬಂದರು ! ಎಂದು ಆ ಮನೆಯುವರೆಲ್ಲರೂ ಗಡಿಬಿಡಿಯಿಂದ ಬಂದು ಶ್ರೀ ಗುರುಚರಣಗಳಿಗೆ ನಮಸ್ಕರಿಸಿ ಉಚಿತಾಸನದಲ್ಲಿ ಕೂಡ್ರಿಸಿ, ಗುರುಗಳ ಸಹಿತವಾಗಿ ಎಲ್ಲರೂ ಆರತಿಯನ್ನ ಮಾಡಿಸಿ ಕೊಂಡರು. ಆಮೇಲೆ ಆ ಮನೆಯ ಯಜಮಾನನು ಶ್ರೀ ಗುರುಗಳಿಗೆ ಸುಗಂಧ ತೈಲವನ್ನು ಹಚ್ಚಿ ಉತ್ತಮ ರೀತಿ ಯಿಂದ ಎರೆದರು. ಆಮೇಲೆ ಎಲ್ಲರೂ ಎರಕೊಂಡು ಮಧ್ಯಾಹ್ನದಲ್ಲಿ ಸಂತೋಷದಿಂದ ಶ್ರೀ ಗುರುಗಳನ್ನು ಷೋಡ ಶೋಪಚಾರ ವಿಧಿಯಿಂದಲೂ ಅನೇಕ ವಾದ್ಯ ವೈಭವಗಳಿಂದಲೂ ಪೂಜಿಸಿ, ಷಡ್ರಸೋಪೇತವಾದ ಪಕ್ವಾನ್ನಗಳಿಂದ ಭಿಕ್ಷೆ ಮಾಡಿಸಿದರು. ಆಗ ಗುರುಗಳು ಸಂತೋಷಪಟ್ಟು ಅವರಿಗೆ ಅನೇಕ ರೀತಿ ಆಶೀರ್ವಾದ ಮಾಡಿದರು. ಎಲೈ ನಾಮಧಾರಕನೇ, ಶ್ರೀ ಗುರುಗಳು ಈ ಪ್ರಕಾರ ಎಂಟು ರೂಪಗಳಿಂದ ಆ ದೀಪಾವಳಿಯಲ್ಲಿ ಎಲ್ಲಾ ಸ್ಥಳ ಗಳಲ್ಲಿಯೂ ಪೂಜೆಯನ್ನು ಸ್ವೀಕರಿಸಿ ಅವರವರ ಮನೆಯಿಂದ ಹೊರಗೆ ಬಂದು ಅಲ್ಲಿ ಗುಪ್ತರಾಗಿ ಮಠದಲ್ಲಿರುವ ಮೂಲ ರೂಪದಲ್ಲಿ ಐಕ್ಯರಾಗಿ ಒಂದೇ ಮೂರ್ತಿಯಾದರು. ಈ ಗುಟ್ಟನ್ನು ಆಗ ಯಾರೂ ತಿಳಿಯಲಿಲ್ಲ ॥ ೨೭ ॥ ಮುಂದೆ ಕಾರ್ತೀಕ ಶುದ್ಧ ಪೌರ್ಣಿಮೆಯ ದಿವಸ ದೀಪಾರಾಧನೆ ಮಾಡುವದಕ್ಕಾಗಿ ನೇಮದಂತೆ ಅನೇಕ ಭಕ್ತರು ಬಂದಂತೆ ಆ ಏಳೂ ಜನ ಭಕ್ತರೂ ಬಂದು ಶ್ರೀಗುರುಗಳ ದರ್ಶನ ತಕ್ಕೊಂಡರು. ॥ ೨೮ ॥ ಆಮೇಲೆ ಅವರು ಒಬ್ಬರಿಗೊಬ್ಬರು ತಮ್ಮತಮ್ಮೊಳಗೆ ನಮಸ್ಕಾರ ಮಾಡುತ್ತ— ೧೦ ದಿವಸಗಳ ಮೇಲೆ ನಮ್ಮ ನಿಮ್ಮ ಭೆಟ್ಟಿಯಾ

ಯಿತು. ಶ್ರೀಗುರುಗಳು ದೀಪಾವಳಿಯಲ್ಲಿ ನಮ್ಮ ಮನೆಗೆ ಬಂದಿದ್ದರು. ನಿಮ್ಮ ಮನೆಗೆ ಬಂದಿದ್ದರೇನು ? ಎಂದು ಕೇಳುತ್ತ— ನಮ್ಮ ಮನೆಗೆ ಬಂದಿದ್ದರು ನಿಮ್ಮ ಮನೆಗೆ ಬಂದಿದ್ದಿಲ್ಲ ಎಂದು ಒಬ್ಬರಿಗೊಬ್ಬರು ವಾದಿಸುತ್ತಿದ್ದರು. ॥ ೨೯ ॥ ಆಗ ಅವರಲ್ಲಿ ಕೆಲವರು ಇದು ಸತ್ಯವೋ, ಮಿಥ್ಯವೋ ನೋಡಿರಿ. ನಾವು ಕೊಟ್ಟ ವಸ್ತುಗಳು ಗುರುಗಳ ಹತ್ತರ ಅವೆ ನೋಡಿರಿ. ಎಂದು ಎಲ್ಲರೂ ತಾವು ಕೊಟ್ಟ ವಸ್ತ್ರಗಳನ್ನು ತೋರಿಸುತ್ತ ॥ ೩೦ ॥ ಆ ಏಳೂ ಜನರು ಏನೂ ಮಾತಾಡದಂತಾದರು. ಆ ಮೇಲೆ ಆ ಊರ ಜನರು ಬಂದು— ಎಲೈ ಭಕ್ತರೇ, ನೀವು ಹೇಳುವದೆಲ್ಲವೂ ಸುಳ್ಳು. ನಮ್ಮ ಗುರುಗಳು ಎಲ್ಲಿಯೂ ಹೋಗದೆ ನಮ್ಮ ಹತ್ತರ ಇಲ್ಲಿಯೇ ಇದ್ದು ಇಲ್ಲಿಯೇ ದೀಪಾವಳಿ ಹಬ್ಬವನ್ನು ಮಾಡಿದರು ಎಂದು ಹೇಳಿದರು ॥ ೩೧ ॥ ಅದನ್ನು ಕೇಳಿ ಯಾವತ್ತು ಜನರು ಆಶ್ಚರ್ಯಹೊಂದಿ— ನಮ್ಮ ಗುರುಗಳು ತ್ರೈಮೂರ್ತಿಗಳ ಹಾಗು ಹರಿ-ನಾರಾಯಣರ ಅವತಾರವು. ಇವರ ಮಹಿಮೆಯು ಅಪಾರವಾದದ್ದು. ಎಂದು ಅಂದು, ॥ ೩೨ ॥ ಆಮೇಲೆ ನಾನಾರೀತಿಯಾಗಿ ಸ್ತೋತ್ರ ಮಾಡುತ್ತ ಗುರುಗಳ ಹತ್ತರ ಬಂದು— ಸ್ವಾಮೀ, ವೇದಮೂರ್ತಿಗಳಾದ ಗುರುನಾಥನೇ, ನಮಗೆ ನಿಮ್ಮ ಮಹಿಮೆಯು ತಿಳಿಯುವದಿಲ್ಲಿ. ॥೩೩॥ ನೀವು ವಿಶ್ವವ್ಯಾಪಕರು, ಸತ್ಯವಾಗಿ ತ್ರೈಮೂರ್ತಿಗಳ ಅವತಾರವು ! ನಿಮ್ಮ ಚರಣಗಳ ಮಹಿಮೆಯನ್ನು ವರ್ಣಿಸಲು ನಾವು ಶಕ್ತರಲ್ಲ ॥ ೩೪ ॥ ಎಂದು ಮತ್ತೆ ನಾನಾ ರೀತಿಯಿಂದ ಸ್ತುತಿಸಿ, ಆ ಭಕ್ತ ಜನರು ಅತಿ ಪ್ರೀತಿಯಿಂದ ದೀಪಾರಾಧನೆ ಮಾಡಿ, ಭಕ್ತಿ ಹಾಗು ಆನಂದಗಳಿಂದ ಬ್ರಾಹ್ಮಣ ಭೋಜನ ಮಾಡಿಸಿದರು. ॥ ೩೫ ॥ ಎಲೈ ನಾಮಧಾರಕನೇ, ಶ್ರೀಗುರು ನರಸಿಂಹಸರಸ್ವತಿಗಳ ಮಹಿಮೆಯು ಈ ಪ್ರಕಾರವಾಗಿ ಭೂಮಂಡಲದ ತುಂಬ ಪ್ರಸಿದ್ಧವಾಯಿತು. ॥ ೩೬ ॥ ಎಂದು ಸಿದ್ಧರು ಹೇಳಿದರೆಂದು ಸರಸ್ವತೀಗಂಗಾಧರನು— ಎಲೈ ಶ್ರೋತೃಗಳೇ, ಕಲ್ಪವೃಕ್ಷವು ಹತ್ತರ ಇರಲು ಕುರುಡರು, ಕಿವುಡರು, ದರಿದ್ರರು ಅದನ್ನು ತಿಳಿಯದೆ ವ್ಯರ್ಥವಾಗಿ ಕಷ್ಟಬಡುವರು. ॥ ೩೭ ॥ ನೀವು ಶ್ರೀ ಗುರುಗಳನ್ನು ಭಜಿಸಿರಿ, ಭಜಿಸಿರಿ. ನಿಮ್ಮ ಇಚ್ಛೆಗಳೆಲ್ಲವೂ ತೀವ್ರವಾಗಿ ಪೂರ್ಣವಾಗುವವು. ಹೀಗೆ ನನಗೆ ಪ್ರಚೀತಿ ಬಂದಿದೆ. ॥ ೩೮ ॥ ಕುಡಿಯಲಿಕ್ಕೆ ಅಮೃತ ಕೊಟ್ಟರೆ ಮೂರ್ಖರು

ಅನುಮಾನದಿಂದ ಕುಡಿಯದೆ ಹುಳಿ-ಉಪ್ಪು-ಖಾರಗಳನ್ನು ಬೇಡುವರು. ಅಂದರೆ ಅವರಿಗೆ ಗುರುಗಳನ್ನು ಭಜಿಸುವದು ರುಚಿಸುವದಿಲ್ಲ. ಜ್ಞಾನಿಗಳಾದ ಭಕ್ತರಿಗೆ ಶ್ರೀ ಗುರುಗಳ ನಾಮಾಮೃತವು ರುಚಿಸುವದು. ಅವರಿಗೆ ಬೇರೆ ಏನೂ ಬೇಡ. ॥ ೩೯ ॥ ಆದ್ದರಿಂದ ನೀವೆಲ್ಲರೂ ಸೇವಿಸಿರಿ. ಶ್ರೀ ಗುರುಗಳು ತ್ರೈಮೂರ್ತಿ ಸ್ವರೂಪವೆಂದು ವೇದಗಳು ಅಪಾರವಾಗಿ ಹೇಳುವವೆಂದು ನಾನು ಡಂಗುರವನ್ನು ಹೊಡಿಸುವೆನು. ॥ ೪೦ ॥ ಸದ್ಗುರುಗಳ ಕೃಪೆಯು ಹೊರತು ಸದ್ಗತಿಯಾಗುವದಿಲ್ಲ. ಶ್ರೀ ಗುರುಗಳು ಮನುಷ್ಯರೆಂದು ಯಾರು ನಿಂದಿಸುವರೋ, ಅವರು ಮುಂದೆ ಹಂದಿಯಾಗಿ ಹುಟ್ಟುವರು. ॥ ೪೧ ॥ ಹೀಗೆ ನಾನೇ ಹೇಳುತ್ತೇನೆಂದು ಮಾತ್ರ ಯಾರೂ ತಿಳಿಯಬಾರದು. ವೇದ ಶಾಸ್ತ್ರಗಳು ಹೀಗೆ ಹೇಳುತ್ತವೆ ಅದನ್ನು ನಂಬಿರಿ ॥ ೪೨ ॥ ದುರಂಧರವಾದ ಈ ಸಂಸಾರ ಸಾಗರವನ್ನು ದಾಟಲಿಕ್ಕೆ ಈ ಮೂರು ಲೋಕಗಳಲ್ಲಿ ಶ್ರೀ ಗುರುಗಳ ಸಹಾಯವೇ ಹೊರತು ಬೇರೆ ಗತಿಯಿಲ್ಲ. ॥ ೪೩ ॥ ಸಂಸಾರವೆಂಬ ನಿರ್ಜಲವಾದ ಅರಣ್ಯದಲ್ಲಿ ಗುರುಸೇವೆ ಎಂಬ ಅಮೃತಕುಂಡವನ್ನು ಮಾಡಿಟ್ಟಿದೆ. ಅದನ್ನು ಎಲ್ಲರೂ ಕುಡಿಯಿರಿ, ಕುಡಿಯಿರಿ. ಅದರಿಂದ ನಿಮಗೆ ಅಮರತ್ವ ಉಂಟಾಗುವದು. ॥ ೪೪ ॥ ಅಂದರೆ ಈ ಸಂಸಾರಸಾಗರದಿಂದ ಪಾರಾಗಬೇಕಾದರೆ ಭಕ್ತಿಯಿಂದ ಗುರುಸೇವಾ ಮಾಡಿ ಅವರ ಕೃಪೆಯನ್ನು ಸಂಪಾದಿಸಿರಿ. ಶ್ರೀ ನರಸಿಂಹ ಸರಸ್ವತಿ ಗುರುಗಳು ತ್ರೈಮೂರ್ತಿಗಳ ಅವತಾರವಾಗಿ ಖ್ಯಾತಿವಂತರಾಗಿ ಗಾಣಗಾಪುರದಲ್ಲಿ ಪ್ರತ್ಯಕ್ಷವಾಗಿರುವರು. ॥ ೪೫ ॥ ಆ ಸ್ಥಾನಕ್ಕೆ ಹೋಗಿ ಭಕ್ತಿಯಿಂದ ಸೇವಾ ಮಾಡಿದವರ ಮನಸ್ಸಿನ ಇಚ್ಛೆಗಳು ಪೂರ್ಣವಾಗುವವು. ಏನೂ ಅನುಮಾನ ಮಾಡಬೇಡಿರಿ. ಅಲ್ಲಿ ಪ್ರತ್ಯಕ್ಷ ದೇವರು ಇರುವರು. ॥ ೪೬ ॥ ಎಲೈ ಶ್ರೋತೃಗಳೇ ನಾನು ನಿಮಗೆ ಹಿತವನ್ನು ಹೇಳುವೆನು. ನಿಮ್ಮ ಮನಸ್ಸು ಪ್ರಶಸ್ತವಾಗಿದ್ದರೆ ನೀವು ತೀವ್ರವಾಗಿ ಗಾಣಗಾಪುರಕ್ಕೆ ಹೋಗಿರಿ ಎಂದು ಹೇಳಿದನು ॥ ೪೭ ॥ ಈ ಅಧ್ಯಾಯದಲ್ಲಿ ಭಕ್ತರ ಸಲುವಾಗಿ ಶ್ರೀಗುರುಗಳು ಎಂಟು ರೂಪಗಳನ್ನು ತಕ್ಕೊಂಡು ಭಕ್ತರ ಇಚ್ಛೆಯನ್ನು ಪೂರ್ಣ ಮಾಡಿದರೆಂದು ಹೇಳಿದೆ ॥ ೪೮ ॥

ದಿಗಂಬರಾ ದಿಗಂಬರಾ

ಶ್ರೀಪಾದವಲ್ಲಭ ದಿಗಂಬರಾ

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಗುರುಃ ಅಷ್ಟಸ್ವರೂಪಧಾರಣಂನಾಮ ಸಪ್ತಚತ್ವಾರಿಂಶೋಽಧ್ಯಾಯಃ ॥ ೪೭ ॥ ಶ್ರೀ ಗುರುದೇವದತ್ತ ॥

— ೪೭ನೇ ಅಧ್ಯಾಯ ಸಮಾಪ್ತ —

# ೪೮ನೇಯ ಅಧ್ಯಾಯ

## — ಶ್ರೀ ಗುರುಗಳು ಶೂದ್ರನ ಹೊಲದಲ್ಲಿ ಅತಿಶಯ ಬೆಳೆ ಬರುವಂತೆ ಮಾಡಿದ್ದು —

ಶ್ರೀ ಗಣೇಶಾಯ ನಮಃ | ಶ್ರೀ ಸರಸ್ವತ್ಯೈ ನಮಃ | ಶ್ರೀ ಗುರುಭ್ಯೋ ನಮಃ | ಆಮೇಲೆ ಸಿದ್ಧರು— ಎಲೈ ನಾಮಧಾರಕನೇ ಕೇಳು ವಿಸ್ತಾರವಾದ ಗುರುಚರಿತ್ರೆಯಲ್ಲಿ ಮುಂದೆ ಒಂದು ಅಪೂರ್ವವಾದ ಸಂಗತಿಯು ವರ್ತಿಸಿತು. ಹೇಳಲಿಕ್ಕೆ ನನಗೆ ಬಹಳ ಸಂತೋಷವಾಗುತ್ತದೆ. ॥ ೧ ॥ ಶ್ರೀ ಗುರುಗಳು ಗಾಣಗಾಪುರದಲ್ಲಿದ್ದಾಗ ಅವರ ಖ್ಯಾತಿಯು ಅಪರಂಪಾರವಾಯಿತಷ್ಟೇ ಆ ಊರಲ್ಲಿ ಪರ್ವತೇಶ್ವರನೆಂಬ ಒಬ್ಬ ಶೂದ್ರ ಭಕ್ತನಿದ್ದನು. ಅವನು ತ್ರಿಕರಣಪೂರ್ವಕ ಶ್ರೀ ಗುರುಗಳ ಭಕ್ತಿಯನ್ನು ಮಾಡಿದನು. ಅವನ ಕಥೆಯನ್ನು ಹೇಳುವೆನು ಕೇಳು. ॥ ೨ ॥

ಶ್ರೀ ಗುರುಗಳು ನಿತ್ಯ ಸ್ನಾನ ಹಾಗು ಅನುಷ್ಠಾನಗಳ ಸಲುವಾಗಿ ಮಠದಿಂದ ಸಂಗಮಕ್ಕೆ ಹೋಗುವಾಗ ಆ ಶೂದ್ರನು ದಾರಿಯಲ್ಲಿರುವ ತನ್ನ ಹೊಲದಲ್ಲಿ ನಿಂತಿರುತ್ತಿದ್ದನು ॥ ೩ ॥ ಅವರು ಸಮೀಪಕ್ಕೆ ಬಂದದ್ದನ್ನು ನೋಡಿದಕೂಡಲೇ ಅವನು ತನ್ನ ಹೊಲದೊಳಗಿಂದ ಓಡಿ ಬಂದು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿ ಪುನಃ ತನ್ನ ಹೊಲಕ್ಕೆ ಹೋಗುತ್ತಿದ್ದನು. ॥ ೪ ॥ ಮಧ್ಯಾಹ್ನ ಕಾಲದಲ್ಲಿ ಶ್ರೀ ಗುರುಗಳು ಸಂಗಮದಿಂದ ಮಠಕ್ಕೆ ಹೋಗುವ ಮುಂದೆ ಅವನು ಮತ್ತೆ ಬಂದು ಸಾಷ್ಟಾಂಗ ನಮಸ್ಕಾರ ಮಾಡುತ್ತಿದ್ದನು ಈ ಪ್ರಕಾರ ಎಷ್ಟೋ ದಿವಸಗಳಾಗುತ್ತಿರಲು ಆ ಶೂದ್ರನ ಭಕ್ತಿಯು ಹೆಚ್ಚಾಯಿತು. ॥ ೫ ॥ ಅವನು ನಮಸ್ಕಾರ ಮಾಡಲಿಕ್ಕೆ ಒಂದಾಗ ಶ್ರೀ ಗುರುಗಳು ಏನೂ ಮಾತಾಡುತ್ತಿದ್ದಿಲ್ಲ. ಸುಮ್ಮನೆ ನಿಂತುಬಿಡುತ್ತಿದ್ದರು ಅವನೂ ಅವರೆದುರಿಗೆ ಸುಮ್ಮನೆ ನಿಲ್ಲುತ್ತಿದ್ದನು. ಹೀಗೆ ಎಷ್ಟೋ ದಿವಸಗಳಾದಮೇಲೆ ಒಂದು ದಿವಸ ಆ ಶೂದ್ರನು ನಿತ್ಯದಂತೆ ಬಂದು ಶ್ರೀ ಗುರು

ಗಳಿಗೆ ನಮಸ್ಕಾರ ಮಾಡಿದನು ॥ ೬ ॥ ಆಗ ಅವರು ಸಂತೋಷದಿಂದ— ಎಲೈ ಶೂದ್ರನೇ, ನೀನು ನಿತ್ಯವೂ ಬಂದು ನಮಗೆ ನಮಸ್ಕಾರ ಮಾಡಿ ಯಾಕೆ ಕಷ್ಟಬಡುತ್ತೀ ? ॥ ೭ ॥ ನಿನ್ನ ಮನಸ್ಸಿನಲ್ಲಿ ಏನು ಇಚ್ಛೆ ಇದೆ ಎಂಬದನ್ನು ನಮಗೆ ತೀವ್ರವಾಗಿ ಹೇಳು, ಎಂದರು. ಆಗ ಅವನು ಕೈ ಮುಗಿದು— ಸ್ವಾಮಿ, ನನ್ನ ಹೊಲವು ಅತಿಶಯವಾಗಿ ಬೆಳೆಯಬೇಕೆಂಬ ಇಚ್ಛೆ ಇದೆ ಎಂದನು. ॥ ೮ ॥ ಅವನ ಮಾತು ಕೇಳಿ ಗುರುಗಳು— ಎಲೈ ಶೂದ್ರನೇ, ಈಗ ನಿನ್ನ ಹೊಲದಲ್ಲಿ ಏನು ಬಿತ್ತಿರುವಿ ? ಎಂದು ಕೇಳಲು ಆ ಶೂದ್ರನು— ಸ್ವಾಮೀ, ನಾನು ಬಹಳವಾಗಿ ಜೋಳವನ್ನು ಬಿತ್ತಿರುವೆನು ನಾನು ದಿನಾಲು ತಮ್ಮನ್ನು ನಮಸ್ಕರಿಸುವ ಪುಣ್ಯದಿಂದ ಬೆಳೆಯು ಬಹಳ ಚೆನ್ನಾಗಿ ಬಂದದೆ ತೀವ್ರವಾಗಿ ಕೊಯ್ಯಲಿಕ್ಕೆ ಬರುವದು. ಈಗ ನಾನು ತಮ್ಮ ಪುಣ್ಯದಿಂದಲೇ ಊಟ ಮಾಡುವೆನು. ॥ ೯–೧೦ ॥ ಸ್ವಾಮೀ, ತಾವು ಹೊಲದ ವರೆಗೆ ಬಂದು ಅಮೃತ ದೃಷ್ಟಿಯಿಂದ ಆ ಪೀಕನ್ನು ನೋಡಬೇಕು. ನೀವು ಯಾವತ್ತರನ್ನು ಪ್ರತಿಪಾಲಿಸತಕ್ಕವರು. ನಾನು ಶೂದ್ರನೆಂದು ಮಾತ್ರ ಉಪೇಕ್ಷಾ ಮಾಡಬಾರದು, ಎಂದು ಬೇಡಿಕೊಂಡನು ॥ ೧೧ ॥ ಆಗ ಶ್ರೀ ಗುರುಗಳು ಹೊಲಕ್ಕೆ ಹೋಗಿ ನೋಡಿ— ಎಲೈ ಭಕ್ತನೇ, ನಿನಗೆ ನಾನು ಈಗ ಒಂದು ಮಾತು ಹೇಳುತ್ತೇನೆ. ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವುಂಟೋ ? ॥ ೧೨ ॥ ಈಗ ನಾನು ನಿನಗೆ ಹೇಳುವದನ್ನು ನೀನು ಭಕ್ತಿಯಿಂದ ಕೇಳುತ್ತೀನಂದರೆ ಹೇಳುವೆನು. ಆದರಂತೆ ನೀನು ಒಂದೇ ಮನಸಿನಿಂದ ಮಾತ್ರ ಮಾಡಬೇಕು. ಅಂದರೆ ನಿನ್ನ ಕಲ್ಯಾಣವಾಗುವದು ಎಂದರು. ॥ ೧೩ ॥ ಆಗ ಅವನು ವಿನಯದಿಂದ— ಸ್ವಾಮೀ, ನನಗೆ ಗುರುವಾಕ್ಯವೇ ಕಾರಣವು ಹೊರತು ನನಗೆ ಬೇರೆ ಅಭಿಪ್ರಾಯವೇ ಇಲ್ಲ. ಎಂದು ಬಿನ್ನೈಸಿದನು. ॥ ೧೪ ॥ ಆಗ ಗುರುಗಳು— ಎಲೈ ಭಕ್ತನೇ ಕೇಳು. ಈಗ ನಾವು ಸಂಗಮಕ್ಕೆ ಹೋಗುತ್ತೇವೆ. ಮಧ್ಯಾಹ್ನಕ್ಕೆ ತಿರುಗಿ ಬರುವಷ್ಟರಲ್ಲಿ ನೀನು ಈ ಬೆಳೆಯನ್ನೆಲ್ಲ ಕೊಯ್ದು ಹಾಕಬೇಕು. ॥ ೧೫ ॥ ಎಂದು ಹೇಳಿ ಸಂಗಮಕ್ಕೆ ಹೋದರು. ಆಗ ಆ ಶೂದ್ರನು ಮನಸಿನಲ್ಲಿ ವಿಚಾರಿಸಿ— ನನಗೆ ಗುರುವಾಕ್ಯವೇ ಕಾರಣವು. ॥ ೧೬ ॥ ಎಂದು ತೀವ್ರವಾಗಿ ಆ ಗ್ರಾಮದ ಅಧಿಕಾರಿಯ ಹತ್ತರ ಬಂದು ವಿನಯದಿಂದ— ಸ್ವಾಮೀ,

ನನಗೆ ತಮ್ಮ ಹೊಲವನ್ನು ಗುತ್ತಿಗೆಯ ಧಾನ್ಯಕ್ಕಾಗಿ ಕೊಡಿರಿ. ಕಳೆದ ವರ್ಷದಷ್ಟೇ ಗುತ್ತಿಗೆಯ ಧಾನ್ಯವನ್ನು ಕೊಡುವೆನು, ಎಂದನು. || ೧೪ || ಆಗ ಆ ಅಧಿಕಾರಿಯು— ಎಲೈ ಈ ವರ್ಷ ಹೊಲದಲ್ಲಿ ಬಹಳ ಪೀಕು ಬಂದಿರುವದರಿಂದ ನೀನು ಈಗ ಗುತ್ತಿಗೆಯಿಂದ ಬೇಡುತ್ತೀ. ಆದ್ದರಿಂದ ನಾನು ಹೋದವರ್ಷದಷ್ಟು ಧಾನ್ಯಕ್ಕೆ ಒಪ್ಪುವದಿಲ್ಲವೆಂದನು. || ೧೮ || ಆಗ ಆ ಶೂದ್ರನು ನಾನಾಪ್ರಕಾರದಿಂದ ವಿನಂತಿ ಮಾಡಿಕೊಂಡು— ಸ್ವಾಮೀ, ಹೋದವರ್ಷದ ದುಪ್ಪಟ್ಟು ಧಾನ್ಯವನ್ನು ಕೊಡುವೆನು ಎಂದನು. ಆಗ ಆ ಅಧಿಕಾರಿಯು ಅದಕ್ಕೆ ಸಂತೋಷದಿಂದ ಒಡಂಬಟ್ಟು, ಅದರಂತೆ ಅವನ ಕಡೆಯಿಂದ ವಚನಪತ್ರವನ್ನು ಬರೆಯಿಸಿಕೊಂಡನು. || ೧೯ || ಅದರಂತೆ ಆ ಶೂದ್ರನೂ ಸಹ ಆ ಅಧಿಕಾರಿಯ ಕಡೆಯಿಂದಲೂ ಒಂದು ಕಾಗದವನ್ನು ಬರೆಯಿಸಿಕೊಂಡು ಕೂಡಲೇ ಅನೇಕ ಆಳುಗಳನ್ನು ಕರಕೊಂಡು ಸಂತೋಷದಿಂದ ಹೊಲಕ್ಕೆ ಬಂದು— ಎಲೈ ಆಳುಗಳಿರಾ, ನೀವು ತೀವ್ರವಾಗಿ ಈ ಬೆಳೆಯನ್ನೆಲ್ಲ ಕೊಯ್ದು ಹಾಕಿರಿ ಎಂದು ಹೇಳಿದನು. || ೨೦ || ಆಗ ಆ ಆಳುಗಳು ಆ ಬೆಳೆಯನ್ನು ಕೊಯ್ಯಲು ಪ್ರಾರಂಭಿಸಿದರು. ಆಗ ಆ ಶೂದ್ರನ ಹೆಂಡತಿ ಮತ್ತು ಮಕ್ಕಳು ಬಂದು ಅವರಿಗೆ ಕೊಯ್ಯಬೇಡಿರೆಂದು ಹೇಳಿ ಅಡ್ಡಿ ಮಾಡಿದರು. ಅದನ್ನು ಕಂಡು ಆ ಶೂದ್ರನು ತನ್ನ ಹೆಂಡತಿ ಮಕ್ಕಳಿಗೆ ಕಲ್ಲಿನಿಂದ ಹೊಡೆದನು. || ೨೧ || ಆಗ ಅವರು ಓಡುತ್ತ ಊರೊಳಗೆ ಬಂದು ರಾಜಸ್ಥಾನದಲ್ಲಿ ಅಡ್ಡ ಬಂದು— ಸ್ವಾಮೀ, ನನ್ನ ಗಂಡನಿಗೆ ಹುಚ್ಚು ಹಿಡಿದದೆ. || ೨೨ || ಹೊಲದಲ್ಲಿ ಪೀಕು ಬಹಳ ಚಲೋ ಅದೆ. ಅದನ್ನು ಮೂರ್ಖತನದಿಂದ ಕೊಯ್ದು ಹಾಕುವನು. ಕೊಯ್ಯಬಾರದೆಂದು ಹೇಳಿವರೆ ನಮ್ಮನ್ನು ಕಲ್ಲಿನಿಂದ ಹೊಡೆದನು. || ೨೩ || ಸನ್ಯಾಸಿಗಳಾದವರ ಮಾತು ಕೇಳಿ, ಕೋಮಲವಾದ ಎಲ್ಲ ಪೀಕನ್ನು ಕೊಯ್ದು ಹಾಕುವನು. ನಮ್ಮ ಉಪಜೀವನದ ಸಾಮಗ್ರಿಯು ಹೋಯಿತು. ಅದನ್ನು ನಾವು ಒಂದು ತಿಂಗಳ ವರೆಗೆ ಊಟ ಮಾಡುತ್ತಿದ್ದೆವು ಎಂದು ಹೇಳಿದರು. || ೨೪ || ಆಗ ಆ ಅಧಿಕಾರಿಯು— ತನ್ನ ಹೊಲವನ್ನೆಲ್ಲ ತಾನು ಕೊಯ್ಕೊಳ್ಳಲಿ. ಹೋದ ವರ್ಷದ ದುಪ್ಪಟ್ಟು ಧಾನ್ಯ ಕೊಡುತ್ತೇನೆಂದು ನಮಗೆ ಪತ್ರವನ್ನು ಬರೆದುಕೊಟ್ಟಿರುವನು. || ೨೫ || ಎಂದು ಅಂದು ಪೀಕನ್ನು ಕೊಯ್ಯಬಾರವೆಂದು

ಅವನಿಗೆ ಹೇಳಲಿಕ್ಕೆ ಜನರನ್ನು ಕಳಿಸಿದನು. ಆ ಜನರು ಬಂದು ಎಷ್ಟು ಹೇಳಿದರೂ ಆ ಶೂದ್ರನು ಕೇಳದೆ ಆ ಆಳಿನ ಮುಂದೆ— ಅಧಿಕಾರಿಯು ಹೆದರಿದರೆ ನಮ್ಮ ಹಗೇವಿನೊಳಗಿನ ಧಾನ್ಯವನ್ನಾದರೂ ಕೊಡುವೆನೆಂದು ಹೇಳು ಎಂದು ಅವನನ್ನು ಕಳಿಸಿದನು. || ೨೬ || ಆ ಆಳನ್ನೂ ತಿರುಗಿ ಬಂದು ಅಧಿಕಾರಿಯನ್ನು ಕುರಿತು— ಸ್ವಾಮೀ, ನಾವು ಆ ಶೂದ್ರನಿಗೆ ಎಷ್ಟು ಬಿರಿಯಿಂದ ಹೇಳಿದರೂ ಕೇಳದೆ ಅವನು ತಮಗೆ ವಿನೋದವಾದ ಮಾತು ಹೇಳಿದನು. || ೨೭ || ಏನೆಂದರೆ— ಅಧಿಕಾರಿಯು ಹೆದರಿದರೆ ನಮ್ಮ ಮನೆಯೊಳಗಿನ ಧಾನ್ಯವನ್ನು ಕೊಡುವೆನು ಇಲ್ಲದಿದ್ದರೆ ನಮ್ಮ ದನಗಳನ್ನು ತಂದು ಅವರ ಬಾಗಿಲಮುಂದೆ ಕಟ್ಟುವೆನೆಂದು ಹೇಳು ನಾನು ಪತ್ರವನ್ನು ಬರೆದು ಕೊಟ್ಟಿಲ್ಲವೇ? ಎಂದು ಅಂದನು. || ೨೮ || ಎಂದು ಆ ಆಳು ಹೇಳಿದನು, ಎಲೈ ನಾಮಧಾರಕನೇ, ಮುಂದೆ ಅಧಿಕಾರಿಯು ಆ ಆಳು ಏನು ಹೇಳಿದನು ಮುಂದೆ ಏನು ಸ್ಥಿತಿಯಾಯಿತೆಂಬದನ್ನು ಹೇಳುತ್ತೇನೆ ಕೇಳು. || ೨೯ || ಆಗ ಅಧಿಕಾರಿಯು— ಎಲೈ ದೂತನೇ, ನಮಗೆ ಅವನ ಹಗೇವು ಗೊತ್ತಿದೆ. ಮತ್ತು ಅದರಲ್ಲಿ ಅಪಾರ ಧಾನ್ಯವದೆ ಅಂದಮೇಲೆ ನಮಗೆ ಚಿಂತೆಯಾಕೆ? ಎಂದನು. || ೩೦ || ಇಷ್ಟಾಗುವವರಲ್ಲಿ ಆ ಶೂದ್ರನು ಮನಃಪೂರ್ವಕವಾಗಿ ಎಲ್ಲ ಪೀಕನ್ನು ಕೊಯ್ದು ಹಾಕಿ ಗುರುಗಳು ಬರುವದನ್ನು ಕಾಯುತ್ತ ಮಾರ್ಗದಲ್ಲಿ ನಿಂತನು. ಅಷ್ಟರಲ್ಲಿ ಶ್ರೀ ಗುರುಗಳು ತಿರುಗಿ ಬಂದರು || ೩೧ || ಆಗ ಅವನು ಅವರಿಗೆ ವಂದಿಸಿ— ಸ್ವಾಮೀ, ತಮ್ಮ ಹೇಳಿಕೆಯಂತೆ ಈ ಪ್ರಕಾರ ಹೊಲವನ್ನು ಕೊಯ್ದಿರುವೆನು ನೋಡಿರಿ ಎಂದು ತೋರಿಸಿದನು. ಆಗ ಗುರುಗಳು ಅವನ ಮನಸ್ಸನ್ನು ಪರೀಕ್ಷಿಸುವದಕ್ಕಾಗಿ— ವ್ಯರ್ಥವಾಗಿ ಕೊಯ್ದಿ ಎಲೈ ಭಕ್ತನೇ, ನಾವು ವಿನೋದಕ್ಕಾಗಿ ಹೇಳಿದರೆ, ನೀನು ಅದೇ ಮಾತು ನಿಜವೆಂದು ತಿಳಿದು ಬೆಳೆಯನ್ನು ಕೊಯ್ದುಯಲ್ಲ? ಎಂದು ಅಂದರು. ಆಗ ಅವನು— ಸ್ವಾಮೀ, ತಮ್ಮ ವಾಕ್ಯದಮೇಲೆ ನನಗೆ ವಿಶ್ವಾಸವಿದೆ. ಅದೇ ನನಗೆ ಕಾಮಧೇನುವು ಎಂದನು ಈ ಪ್ರಕಾರ ಅವನ ಮಾತು ಕೇಳಿ ಶ್ರೀ ಗುರುಗಳು— ಎಲೈ ಶೂದ್ರನೇ, ನಿನ್ನ ಮನಸ್ಸಿನಲ್ಲಿ ಇಷ್ಟು ನಿಶ್ಚಯವಿದ್ದರೆ, ಇನ್ನುಮೇಲೆ ನಿನಗೆ ಅತಿಶಯ ಬೆಳೆ ಬರುವದು ಮನಸ್ಸಿನಲ್ಲಿ ಏನೂ ಚಿಂತೆ ಮಾಡಬೇಡ || ೩೨–೩೩–೩೪ || ಎಂದು ಹೇಳಿ ಶ್ರೀ ಗುರುಗಳು

ಮಠಕ್ಕೆ ಬಂದರು. ಆ ಶೂದ್ರನೂ ಅವರ ಸಂಗಡಲೇ ಬಂದು ತನ್ನ ಮನೆಗೆ ಹೋದನು. || ೩೫ || ಮನೆಯಲ್ಲಿ ಅವನ ಹೆಂಡತಿ, ಮಕ್ಕಳು ನಮ್ಮ ಗ್ರಾಸವು ಹೋಯಿತೆಂದು ಭಯಂಕರವಾಗಿ ಅಳುತ್ತಿದ್ದರು. ಅದನ್ನು ಕೇಳಿ ಆ ಊರೊಳಗಿನ ಯಾವತ್ತೂ ಜನರು ಅವನ ಮನೆಗೆ ಬಂದು ಹೀಗ್ಯಾಕೆ ಮಾಡಿದಿ ? ಎಂದು ಅವನನ್ನು ಕೇಳಲಿಕ್ಕೆ ಬಂದರು. || ೩೬ || ಆಗ ಆ ಶೂದ್ರನು— ಎಲ್ಲೈ ಜನರುಗಳಿರಾ, ನಾನು ಹೇಳುವ ಮಾತು ಕೇಳಿರಿ ನೀವು ಏನೂ ಚಿಂತೆ ಮಾಡದೆ ಸುಖವಾಗಿ ಇರ್ರಿ ಗುರುಗಳ ಅಭಿಪ್ರಾಯವು ಮೂರ್ಖರಿಗೆ ತಿಳಿಯುವದಿಲ್ಲ. ಅವರ ವಾಕ್ಯವು ಕಾಮಧೇನು ಸಮಾನವು. || ೩೭ || ಮುಂದೆ ಒಂದೊಂದು ದಂಟಿಗೆ ಸಾವಿರಗಟ್ಲೆ ತೆನೆಗಳಾಗಿ ಅತಿಶಯ ಲಾಭವಾಗುವದು. ಅಲ್ಲಿಯವರೆಗೆ ನೀವು ನಿಮ್ಮ ಮನಸ್ಸು ಸ್ಥಿರಮಾಡಿಕೊಂಡು ಇರ್ರಿ ನನಗೆ ನಿಶ್ಚಯವಾಗಿ ಹಾನಿಯಾಗುವದಿಲ್ಲ. || ೩೮ || ಶ್ರೀ ಗುರುಗಳು ಮನುಷ್ಯರಲ್ಲ ಅವರು ನಿಶ್ಚಯವಾಗಿ ಶಿವಸ್ವರೂಪರು ಗುರು ಕೃಪೆಯಾದವರಿಗೆ ಬಡತನವು ಹ್ಯಾಗ ಬರುವದು ? ನವನಿಧಿಗಳೂ ನಮಗೆ ಸಿದ್ಧಿಸುವವು. ಈ ಬೆಳೆಯನ್ನು ಕೊಯ್ಸಿದ ಕಾರಣವು ಮುಂದೆ ಗೊತ್ತಾಗುವದೆಂದು ಶ್ರೀ ಗುರುಗಳು ಹೇಳಿರುವರು || ೩೯–೪೦ || ಎಂದು ಅತಿ ಹರ್ಷದಿಂದ ಹೇಳಿ ಅವನು ತನ್ನ ಹೆಂಡತಿ ಮಕ್ಕಳನ್ನೂ, ಬಂಧು ವರ್ಗದವರನ್ನೂ, ಇಷ್ಟಮಿತ್ರರನ್ನೂ ಸಮಾಧಾನ ಮಾಡುತ್ತಿದ್ದನು. || ೪೧ || ಅದನ್ನು ಕೇಳಿ ಅವರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋಗಿ ಸುಖವಾಗಿದ್ದರು. ಮುಂದೆ ಎಳೆಂಟು ದಿವಸಗಳಾದಮೇಲೆ ಭಯಂಕರ ಸೀತ ಘಾಳಿಯು ಬಿಟ್ಟು ಆ ಗ್ರಾಮದ ಎಲ್ಲ ಪೀಕುಗಳು ನಾಶವಾದವು. || ೪೨ || ಮತ್ತು ಆ ಗ್ರಾಮದ ಮುಂದೆ ಮೂಲಾ ನಕ್ಷತ್ರದ ಅಕಾಲಿಕ ಮಳೆಯು ಅತಿಶಯ ವಾಯಿತು ಆದ್ದರಿಂದ ಬೆಳೆಯೊಳಗಿನ ಕಾಳು ಕೆಟ್ಟವು. || ೪೩ || ಆಗ ಆ ಊರೊಳಗಿನ ಜನರ ಹೊಲಗಳು ಬೆಳೆಯಿಲ್ಲದವುಗಳಾದವು ಆದರೆ ಈ ಶೂದ್ರನ ಹೊಲದಲ್ಲಿ ಒಂದೊಂದು ಕೋಲಿಗೆ ಹನ್ನೊಂದು ಹನ್ನೊಂದು ಕುಳೆ ಗಳು ಎದ್ದು ದೊಡ್ಡ ದೊಡ್ಡ ತೆನೆಗಳಾಗಿ ಮೊದಲಿನ ನೂರುಪಟ್ಟು ಬೆಳೆಯು ಬಂತು. || ೪೪ || ಆ ಶೂದ್ರನ ಹೆಂಡತಿಯು ಹರ್ಷಿತಳಾಗಿ ಪೂಜೆ ಮಾಡಬೇಕೆಂದು ಎಲ್ಲ ಸಾಮುಗ್ರಿ ತಕ್ಕೊಂಡು ಬಂದು ಹೊಲದ ಬೆಳೆಯನ್ನು

ನೋಡಿ ಆನಂದಪಡುತ್ತಿದ್ದಳು. ॥ ೪೫ ॥ ಆ ಶೂದ್ರನ ಹೊಲಗಲ್ಲಿ ಅತಿಶಯ ಬೆಳೆ ಬಂದದ್ದನ್ನು ಕೇಳಿ ಆ ಊರ ಯಾವತ್ತೂ ಜನರು ಬಂದು ಯಾವತ್ತೂ ಬೆಳೆಯನ್ನು ನೋಡಿ ಬಹು ಆಶ್ಚರ್ಯಪಡುತ್ತಿದ್ದರು. ॥ ೪೬ ॥ ಆಗ ಆ ಶೂದ್ರನ ಸ್ತ್ರೀಯು ಪತಿಯ ಚರಣಕ್ಕೆ ನಮಸ್ಕಾರ ಮಾಡಿ ಕೈ ಮುಗಿದು ನಿಂತು ವಿನಯದಿಂದಲೂ ಮೃದು ನುಡಿಗಳಿಂದಲೂ— ಪ್ರಾಣನಾಥನೇ ನನ್ನನ್ನು ಕ್ಷಮಿಸಿರಿ ॥ ೪೭ ॥ ಅಜ್ಞಾನದಿಂದ ಕೂಡಿದವಳಾಗಿ ಏನೂ ತಿಳಿಯದೆ— ಎಲ್ಲಿಯ ಗುರುಗಳು ? ಅವರ ಮಾತುಕೇಳಿ ಬೆಳೆಯನ್ನು ಯಾಕ ಕೊಯ್ದಿರಿ ? ಎಂದು ನಿಮ್ಮನ್ನು ನಿಂದಿಸಿದೆನು. ನಾನು ಏನಂದದ್ದಕ್ಕೂ ನನ್ನನ್ನು ಕ್ಷಮಿಸಿರಿ. ॥ ೪೮ ॥ ಎಂದು ವಿಜ್ಞಾಪಿಸಿ ಪತಿಯನ್ನು ಸಮಾಧಾನಪಡಿಸಿ ಆಮೇಲೆ ಹೊಲದ ದೇವರನ್ನೂ ಬೆಳೆಯನ್ನೂ ಪೂಜಿಸಿದಳು. ಆಮೇಲೆ ಅವರಿಬ್ಬರೂ ಮನಸ್ಸಿನಲ್ಲಿ ವಿಚಾರಿಸಿ ಈಗ ಶ್ರೀ ಗುರುಗಳ ದರ್ಶನಕ್ಕೆ ಹೋಗೋಣ ॥ ೪೯ ॥ ಎಂದು ಅಂದು ಶ್ರೀ ಗುರುಗಳ ಪೂಜಾ ಮಾಡಲಿಕ್ಕೆ ಮಠಕ್ಕೆ ಬಂದರು. ಆಗ ಶ್ರೀ ಗುರುಗಳು— ಎಲೈ ಭಕ್ತನೇ, ಏನು ಸಂಗತಿಯು? ಎಂದು ಅನಲು ॥ ೫೦ ॥ ಆಗ ಆ ದಂಪತಿಗಳು ಅವರ ಪಾದಕ್ಕೆ ನಮಸ್ಕಾರ ಮಾಡಿ, ಕೈ ಮುಗಿದು ಉಲ್ಲಾಸದಿಂದ ಶ್ರೀ ಗುರುಗಳ ದರ್ಶನವನ್ನು ಹೊಂದಿ ಅವರಿಗೆ ಕಾಣುವಂತೆ ಎದುರಿಗೆ ನಿಂತು— ॥ ೫೧ ॥ ಜಯ ಜಯ ಗುರುಮೂರ್ತಿಯೇ, ನೀವು ಕಾಮಧೇನು ಸ್ವರೂಪರಾಗಿ ನಮ್ಮ ಕುಲದೇವರಾಗಿದ್ದೀರಿ, ನೀವೇ ನಮ್ಮ ಗುರುಗಳು ॥ ೫೨ ॥ ತಮ್ಮ ವಚನಾಮೃತದಿಂದ ಚಿಂತಾಮಣಿಯಂತೆ ಮಹಿಮೆಯನ್ನು ಮಾಡಿ ನಮ್ಮ ಇಷ್ಟಾರ್ಥವನ್ನು ಪೂರ್ಣ ಮಾಡಿದಿರಿ ನಾವು ನಿಮಗೆ ಶರಣು ಬಂದಿದ್ದೇವೆ. ॥ ೫೩ ॥ ಈ ಜಗತ್ತಿನಲ್ಲಿ ನಿಮಗೆ ಭಕ್ತವತ್ಸಲರೆಂಬ ಬಿರುದು ಪ್ರಸಿದ್ಧವಾಗಿರುವದು ಅದರಂತೆ ನಾವೂ ದೃಷ್ಟಾಂತವನ್ನು ಕಂಡೆವು ಎಂದು ಬಹಳವಾಗಿ ಸ್ತುತಿಸಿ ಅವರ ಚರಣಕ್ಕೆ ನಮಸ್ಕರಿಸಿದರು. ॥ ೫೪ ॥ ಆಮೇಲೆ ಆ ಶೂದ್ರಿಣಿಯು ಒಳ್ಳೇ ಭಕ್ತಿಯಿಂದ ನಾನಾ ರೀತಿಯಿಂದ ಶ್ರೀ ಗುರು ಪೂಜೆಯನ್ನು ಮಾಡಿ ಆರತಿಯನ್ನು ಮಾಡಿದಳು. ಆಗ ಶ್ರೀ ಗುರುಗಳು ಸಂತೋಷ-

ಬಟ್ಟು ಪ್ರೀತಿಯಿಂದ— ಎಲೌ ಸ್ತ್ರೀಯಳೇ, ನಿನ್ನ ಮನೆಯಲ್ಲಿ ಅಖಂಡ ಐಶ್ವರ್ಯ ಉಂಟಾಗಲಿ ಎಂದು ಅನುಗ್ರಹಿಸಿದರು. ‖ ೫೫ ‖ ಆಮೇಲೆ ಆ ದಂಪತಿಗಳು ಗುರುಗಳ ಅಪ್ಪಣೆಯನ್ನು ತಕ್ಕೊಂಡು ತಮ್ಮ ಮನೆಗೆ ಹೋದರು. ಮುಂದೆ ಒಂದು ತಿಂಗಳಾದಮೇಲೆ ಅಪಾರವಾದ ಪೀಕು ಬಂದಿತು. ‖ ೫೬ ‖ ಅವರಿಗೆ ಹಿಂದಿನ ವರ್ಷಕ್ಕಿಂತ ನೂರುಪಟ್ಟು ಹೆಚ್ಚಾಗಿ ಧಾನ್ಯವು ಬಂತು. ಆಗ ಆ ಶೂದ್ರನು ಅಧಿಕಾರಿಯನ್ನು ಕರೆದು ‖ ೫೭ ‖— ಸ್ವಾಮೀ, ಊರೊಳಗಿನ ಎಲ್ಲ ಪೀಕು ನಾಶವಾಗಿವೆ. ನಾನು ತಮಗೆ ಹೋದ ವರುಷದ ಗುತ್ತಿಗೆಯ ಎರಡಷ್ಟು ಧಾನ್ಯವನ್ನು ಕೊಡುವೆನೆಂದು ಹೇಳಿದ್ದೆನಷ್ಟೇ ಆದರೆ ನನಗೆ ಅತಿಶಯ ಬೆಳೆಯು ಬಂದು ಹೋದ ವರುಷದ ನೂರು ಪಟ್ಟು ಹೆಚ್ಚಾಗಿ ಧಾನ್ಯವು ಬಂದು ನನ್ನ ಹಗೇವುಗಳೆಲ್ಲ ತುಂಬಿಹೋಗುತ್ತವೆ. ಆದ್ದರಿಂದ ಈ ನನ್ನ ಬೆಳೆಯಲ್ಲಿ ಅರ್ಧ ಬೆಳೆಯನ್ನು ನಿಮಗೆ ಸಂತೋಷದಿಂದ ಕೊಡುತ್ತೇನೆ. ‖ ೫೮–೫೯ ‖ ನಿಮಗೆ ಸಂದೇಹಬೇಡ ಎಂದು ಹೇಳಿದನು. ಆಗ ಆ ಅಧಿಕಾರಿಯು— ಅಯ್ಯಾ, ನಾನು ಧರ್ಮಕ್ಕೆ ಹಾನಿಯನ್ನು ಹೇಗೆ ಮಾಡಲಿ? ನೀನು ಗುರುಭಕ್ತನು ‖ ೬೦ ‖ ನಿನ್ನಮೇಲೆ ಗುರುಕೃಪೆಯುಂಟಾದ ಕಾರಣ ನಿನಗೆ ಅತಿಶಯವಾಗಿ ಬೆಳೆಯು ಬಂದಿದೆ. ಆದ್ದರಿಂದ ನಮಗೆ ಕೊಡುವಷ್ಟೇ ಕೊಟ್ಟು ಉಳಿದದ್ದನ್ನು ನಿನ್ನ ಮನೆಗೆ ಒಯ್ದು ಸುಖವಾಗಿರು ಎಂದು ಹೇಳಿದನು. ‖ ೬೧ ‖ ಅವನ ಮಾತಿಗೆ ಆ ಶೂದ್ರನು ಸಂತೋಷಬಟ್ಟು ಕೆಲವು ಧಾನ್ಯವನ್ನು ಬ್ರಾಹ್ಮಣರಿಗೆ ದಾನ ಮಾಡಿ ಅಧಿಕಾರಿಗೆ ಕೊಡುವಷ್ಟು ಕೊಟ್ಟು ಉಳಿದದ್ದೆಲ್ಲ ಧಾನ್ಯವನ್ನು ತನ್ನ ಮನೆಗೆ ಒಯ್ದನು. ‖ ೬೨ ‖ ಎಲೈ ನಾಮಧಾರಕನೇ, ಶ್ರೀ ಗುರುಚರಿತ್ರೆಯ ಮಹಿಮೆಯು ಈ ಪ್ರಕಾರವಾಗಿರುವದು ಶ್ರೀ ಗುರುಗಳಲ್ಲಿ ದೃಢಭಕ್ತಿ ಇದ್ದವರಿಗೆ ಬಡತನವು ಹ್ಯಾಗೆ ಬಂದೀತು? ಎಂದೂ ಬರುವದಿಲ್ಲ ‖ ೬೩ ‖ ಅವರಿಗೆ ಸಕಲಾಭೀಷ್ಟಗಳೂ ಸಿದ್ಧಿಸುವದಲ್ಲದೆ, ಅವರ ಮನೆಯಲ್ಲಿ ಅಖಂಡ ಲಕ್ಷ್ಮಿಯು ವಾಸವಾಗಿರುವಳು. ಆದ್ದರಿಂದ ಎಲ್ಲರೂ ನಿಶ್ಚಯವಾಗಿ ಗುರುಸೇವೆಯನ್ನು ಮಾಡಬೇಕು. ಎಂದು ಸಿದ್ಧರು ಹೇಳಿದರೆಂದು ಸರಸ್ವತೀ ಗಂಗಾಧರನು ಹೇಳಿದನು.

ಇತಿ ಶ್ರೀ ಗುರುಚರಿತ್ರ ಪರಮ ಕಥಾ ಕಲ್ಪತರೌ, ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ, ಸಿದ್ಧನಾಮ ಧಾರಕ ಸಂವಾದೇ ಭಕ್ತ ಶೂದ್ರವರ ಪ್ರದಾನಂ ನಾಮ ಅಷ್ಟಚತ್ವಾರಿಂಶೋಽಧ್ಯಾಯಃ ‖ ೪೮ ‖ ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು.

— ಶ್ರೀ ಗುರುದೇವದತ್ತ —

— ೪೮ನೇ ಅಧ್ಯಾಯ ಸಮಾಪ್ತ —

---

# ೪೯ನೇಯ ಅಧ್ಯಾಯ

## ಅಮರಜಾ ಸಂಗಮ ಹಾಗು ಗಾಣಗಾಪುರ ಕ್ಷೇತ್ರ ಮಹಿಮಾ ವರ್ಣನಂ

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಯೋಗ್ಯ ಶಿಷ್ಯನಾದ ನಾಮಧಾರಕನು ಭಕ್ತಿಯಿಂದ ಸಿದ್ಧರ ಪಾದಕ್ಕೆ ನಮಸ್ಕಾರ ಮಾಡಿ, ಕೈ ಮುಗಿದು ವಿನಯದಿಂದ ॥ ೧ ॥ —ಸ್ವಾಮೀ, ತ್ರಿಮೂರ್ತಿ ಅವತಾರವಾದ ಶ್ರೀ ಗುರುಗಳು ನರರೂಪ ಧರಿಸಿ, ಭೂಮಿಯಲ್ಲಿರುವ ಅನೇಕ ಪ್ರಸಿದ್ಧವಾದ ತೀರ್ಥಗಳನ್ನು ಬಿಟ್ಟು ಪ್ರೀತಿಯಿಂದ ಗಾಣಗಾಪುರವು ಯಾವ ದೊಡ್ಡ ಕ್ಷೇತ್ರವೆಂದು ಯಾವ ಕಾರಣದಿಂದ ಅಲ್ಲಿ ವಾಸಮಾಡಿದರು ? ॥ ೨-೩ ॥ ಎಂದು ಆ ಸ್ಥಾನದ ಮಹಿಮೆಯನ್ನು ನನಗೆ ವಿಸ್ತಾರವಾಗಿ ಹೇಳಬೇಕೆಂದು ನಾಮಧಾರಕನು ಸಿದ್ಧರ ಚರಣಕ್ಕೆ ನಮಸ್ಕರಿಸಿದನು. ॥ ೪ ॥ ಇತ್ತ ಸರಸ್ವತೀ ಗಂಗಾಧರನು— ಎಲೈ ಶ್ರೋತೃಗಳೇ, ನಾಮಧಾರಕನ ಮಾತು ಕೇಳಿ ಸಿದ್ಧರು ಸಂತೋಷದಿಂದ ಗಾಣಗಾಪುರದ ಮಹಿಮೆಯನ್ನು ಹೇಳುವರು ಕೇಳಿರಿ ॥ ೫ ॥

ದೀಪಾವಳಿಯ ಹಬ್ಬವು ಆಶ್ವಿನ ವದ್ಯ ಚತುರ್ದಶಿಯಿಂದ ಆರಂಭವೆಂಬುವದು ಎಲ್ಲರಿಗೂ ಗೊತ್ತದೆ ಆ ದಿವಸ ಶ್ರೀ ಗುರುಗಳು ತಮ್ಮ ಎಲ್ಲ ಭಕ್ತ ಶಿಷ್ಯರನ್ನು ಕುರಿತು— ಎಲೈ ಶಿಷ್ಯರೇ, ಈ ದಿವಸ ಕಾಶಿ, ಪ್ರಯಾಗ, ಗಯಾ ಈ ಮೂರೂ ಸ್ಥಳಗಳಲ್ಲಿ ಸ್ನಾನ ಮಾಡಬೇಕು. ॥ ೬ ॥ ಆದ್ದರಿಂದ ನೀವು ನಿಮ್ಮ ನಿಮ್ಮ ಹೆಂಡರು ಮಕ್ಕಳೊಡನೆ ಯಾತ್ರೆಗೆ ನಡೆಯಿರಿ ಎಂದರು. ಆಗ ಆ ಬ್ರಾಹ್ಮಣರು— ಸ್ವಾಮೀ, ಯಾತ್ರೆಯ ದೆಸೆಯಿಂದ ಹೊರಡಬೇಕಾದರೆ ಎಲ್ಲ ಸಿದ್ಧತೆಯನ್ನು ಮಾಡಬೇಕಾಗುತ್ತದೆ. ಈಗ ಹ್ಯಾಗೆ ಮಾಡಬೇಕು ? ಎಂದು ಅಂದರು. ॥ ೭ ॥ ಅವರ ಮಾತು ಕೇಳಿ ಶ್ರೀಗುರುಗಳು ನಕ್ಕು— ಎಲೈ ಬ್ರಾಹ್ಮಣರೇ, ನಿಮ್ಮ ಊರ ಹತ್ತರವೇ

ಆ ತೀರ್ಥಗಳಿರುತ್ತವೆ. ನೀವು ಆಯಾಸಪಟ್ಟು ಯಾತ್ರೆಯ ಸಿದ್ಧತೆಯನ್ನು ಮಾಡುವ ಕಾರಣವಿಲ್ಲ. ನಿಮ್ಮನ್ನು ಕರಕೊಂಡು ಹೋಗಿ ನಿಮಗೆ ಆ ತೀರ್ಥಗಳನ್ನು ತೋರಿಸುತ್ತೇನೆ ನಡೆಯಿರಿ ‖ ೮ ‖ ಎಂದು ಎಲ್ಲ ಭಕ್ತರನ್ನು ಕರಕೊಂಡು ಹರ್ಷದಿಂದ ಸ್ನಾನ ಮಾಡಿ ‖ ೯ ‖ ಎಲೈ ಶಿಷ್ಯರಿರಾ, ಈ ಸಂಗಮದಲ್ಲಿ ಅಪಾರ ಮಹಿಮೆಯದೆ. ಈ ಷಟ್ಕುಲ ತೀರ್ಥದಲ್ಲಿ ಸ್ನಾನ ಮಾಡಿದರೆ ಅದು ಪ್ರಯಾಗ ಸಮಾನವೆಂದು ತಿಳಿಯಿರಿ ‖ ೧೦ ‖ ಭೀಮಾ ನದಿಯು ವಿಶೇಷ ಮಹತ್ವದ್ದು. ಈ ಅಮರಜಾ–ಭೀಮಾ ಸಂಗಮ ಸ್ನಾನವು ಅದಕ್ಕೂ ವಿಶೇಷ ಮಹತ್ವಸ್ಸು ! ಈ ನದಿಗಳೇ ನಿಜವಾಗಿ ಗಂಗಾ–ಯಮುನಾ ನದಿಗಳು ಆದ್ದರಿಂದ ಈ ತೀರ್ಥವು ಶ್ರೇಷ್ಠವಾದದ್ದು. ‖ ೧೧ ‖ ಈ ನದಿಯ ಉತ್ತರ ವಾಹಿನಿಯಲ್ಲಿ ಸ್ನಾನ ಮಾಡಿದರೆ ಅದು ವಿಶೇಷ ಮಹತ್ವದ್ದಾಗಿ ಕಾಶಿಗಿಂತಲೂ ನೂರು ಪಟ್ಟು ಪುಣ್ಯ ಬರುವದು. ‖ ೧೨ ‖ ಈ ಎರಡೂ ನದಿಗಳು ಮುಂದೆ ಹೋಗುವಾಗ ಅಲ್ಲಿ ಜೋಡಿ ಎಂಟು ತೀರ್ಥಗಳುಂಟು ಅವುಗಳ ಮಹಿಮೆಯು ಜಗತ್ತಿನಲ್ಲಿ ಪ್ರಖ್ಯಾತವಾಗಿರುತ್ತದೆ ಹೇಳುತ್ತೇನೆ ಕೇಳಿರಿ ಎಂದರು. ‖ ೧೩ ‖ ಆಗ ಆ ಭಕ್ತರು ವಿನಯದಿಂದ–– ಸ್ವಾಮೀ, ಗುರುವರ್ಯರೇ, ಇದಕ್ಕೆ ‘ಅಮರಜಾ” ನದಿ ಎಂದು ಯಾಕೆ ಹೆಸರು ಬಂತು ? ಇದು ಎಲ್ಲಿ ಹುಟ್ಟುವದು ? ಎಂದು ಕೇಳಿದರು. ‖ ೧೪ ‖ ಆಗ ಶ್ರೀ ಗುರುಗಳು— ಎಲೈ ಭಕ್ತರೇ, ನೀವು ಒಳ್ಳೆ ಪ್ರಶ್ನೆ ಮಾಡಿದಿರಿ ಜಾಲಂದರ ಪುರಾಣದಲ್ಲಿ ಇದರ ಕಥೆಯು ಪ್ರಖ್ಯಾತವಾಗಿರುವದು ಹೇಳುವೆನು ಕೇಳಿರಿ. ‖ ೧೫ ‖

ಪೂರ್ವದಲ್ಲಿ ಜಾಲಂದರನೆಂಬ ರಾಕ್ಷಸನು ಯಾವತ್ತು ದೇವತೆಗಳನ್ನು ಗೆದ್ದು, ಇಂದ್ರನ ಅಮರಾವತಿ ಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು ಆಗ ಯಾವತ್ತು ದೇವತೆಗಳು ಸ್ವರ್ಗದಿಂದ ಓಡಿ ಹೋದರು. ‖ ೧೬ ‖ ಆಮೇಲೆ ದೇವ-ದೈತ್ಯರಿಗೆ ಯುದ್ಧವಾಗಿ, ಅನೇಕ ದೇವತೆಗಳು ಮಡಿದರು. ಆಗ ಇಂದ್ರನು ಕೈಲಾಸಕ್ಕೆ ಹೋಗಿ ಈಶ್ವರನನ್ನು ಮರೆಹೊಕ್ಕು— ‖ ೧೭ ‖ ಸ್ವಾಮೀ, ನನ್ನ ವಿನಂತಿಯನ್ನು ಕೇಳಿರಿ. ಜಾಲಂದರ ದೈತ್ಯನು ನಮ್ಮ ದೇವತೆಗಳನ್ನು ಕೊಂದು, ನಮ್ಮನ್ನು ಸ್ವರ್ಗದಿಂದ ಓಡಿಸಿದನು. ಇದಕ್ಕೆ ತೀವ್ರವಾಗಿ

ಏನಾದರೂ ಪ್ರತೀಕಾರ ಮಾಡಬೇಕು ಎಂದು ಆತನ ಚರಣಕ್ಕೆ ನಮಸ್ಕಾರ ಮಾಡಿದನು. ॥ ೧೮ ॥ ಆಮೇಲೆ— ಸ್ವಾಮೀ, ನಾವು ಆ ದೈತ್ಯನನ್ನು ಹೊಡೆಯಲು ಅವನ ರಕ್ತಬಿಂದುಗಳು ಭೂಮಿಯಮೇಲೆ ಬಿದ್ದಕೂಡಲೆ, ಒಂದೊಂದು ಬಿಂದುವಿಗೆ ಒಬ್ಬೊಬ್ಬನಂತೆ ಭೂಮಿಯಲ್ಲಿ ಅನೇಕ ರಾಕ್ಷಸರು ಹುಟ್ಟಿ ॥ ೧೯ ॥ ಅವರು ಮೂರು ಲೋಕಗಳಲ್ಲಿ ವ್ಯಾಪಿಸಿ ನಮ್ಮ ಎಲ್ಲ ದೇವತೆಗಳನ್ನು ಕೊಂಪರೆಂದು ತಮ್ಮ ಹತ್ತಿರ ಬಂದಿರುವೆನು ಎಂದು ಹೇಳಿದನು. ॥ ೨೦ ॥ ಆಗ ಶ್ರೀಶಂಕರನು ಪ್ರಳಯಕಾಲದ ರುದ್ರನಂತೆ ಸಿಟ್ಟಿಗೆದ್ದು ಆ ದೈತ್ಯನನ್ನು ಕೊಲ್ಲಬೇಕೆಂದು ಹೊರಟನು ॥ ೨೧ ॥ ಆಗ ಇಂದ್ರನು ಕೈಮುಗಿದು— ಸ್ವಾಮೀ, ಶಂಕರಾ, ದೈತ್ಯರು ಸಾಯುವಂಥ ಮತ್ತು ದೇವತೆಗಳು ಬದುಕುವಂಥ ಏನಾದರೂ ಒಂದು ಉಪಾಯವನ್ನು ಮಾಡಿರಿ. ಎಂದು ವಿನಯದಿಂದ ಹೇಳಿದನು. ॥ ೨೨ ॥ ಆ ಮಾತು ಕೇಳಿ ಶ್ರೀಶಂಕರನು ಸಂತೋಷಹೊಂದಿ, ಕೂಡಲೆ ಒಂದು ಕುಂಭದಲ್ಲಿ ನೀರು ತುಂಬಿ, ಅದಕ್ಕೆ ಅಮೃತ ಸಂಜೀವನೀ ಮಂತ್ರದಿಂದ ಅಭಿಮಂತ್ರಿಸಿ ಆ ಕುಂಭವನ್ನು ಇಂದ್ರನ ಕೈಯಲ್ಲಿ ಕೊಟ್ಟನು. ॥ ೨೩ ॥ ಅವನು ಆ ಅಮೃತಸಂಜೀವನಿ ನೀರನ್ನು ದೇವತೆಗಳ ಮೇಲೆ ಪ್ರೋಕ್ಷಿಸಲು, ಆ ದೇವತೆಗಳೆಲ್ಲರೂ ಎದ್ದು ಸ್ವರ್ಗಕ್ಕೆ ಹೋದರು. ॥ ೨೪ ॥ ಆಮೇಲೆ ಆ ಇಂದ್ರನು ಉಳಿದ ಆ ಅಮೃತವನ್ನು ಒಯ್ಯುತ್ತಿರಲು ಅವನ ಕೈಯಿಂದ ಆ ಕುಂಭವು ಜಾರಿ ಭೂಮಿಯಮೇಲೆ ಬಿತ್ತು ಆಗ ಆ ಅಮೃತಸಂಜೀವನೀ ನೀರು ನದಿಯಾಗಿ ಹರಿಯಹತ್ತಿತು ॥ ೨೫ ॥ ಅದೇ ಸಂಜೀವನೀ ನದಿಯೇ ಮುಂದೆ ದೊಡ್ಡದಾಗಿ ಹರಿದು ಬಂದು "ಅಮರಜಾ" ಎಂಬ ಹೆಸರಿನಿಂದ ಪ್ರಖ್ಯಾತವಾಯಿತು ॥ ೨೬ ॥ ಆದಕಾರಣ ಈ ನದಿಯಲ್ಲಿ ಭಕ್ತಿಯಿಂದ ನಿತ್ಯ ಸ್ನಾನ ಮಾಡಿದವರಿಗೆ ಕಾಲಮೃತ್ಯುವಿನ ಭಯವಿಲ್ಲ. ಅಪಮೃತ್ಯುವಂತೂ ಎಂದೂ ಬರುವದಿಲ್ಲ ॥ ೨೭ ॥ ಅವರು ನಿರೋಗಿಯಾಗಿ ಶತಾಯುಷಿಗಳಾಗುವರು ಮತ್ತು ಅವರ ಅಪಸ್ಮಾರಾದಿ ರೋಗಗಳೂ ಬ್ರಹ್ಮಹತ್ಯಾದಿ ಪಾತಕಗಳೂ ನಾಶವಾಗುವವು. ॥ ೨೮ ॥ ಆದ್ದರಿಂದ ಇದಕ್ಕೆ ಅಮೃತನದಿ ಎಂಬ ಹೆಸರು. ಇದು ಭೀಮರತಿಗೆ ಕೂಡಿದ್ದರಿಂದ ಪ್ರಯಾಗದಲ್ಲಿ ತ್ರಿವೇಣೀ ಸಂಗಮವು ಪ್ರಸಿದ್ಧವಾದಂತೆ ಈ ತೀರ್ಥವೂ ಪ್ರಯಾಗಕ್ಕೆ ಸಮಾನವಾಗಿ

ಪ್ರಸಿದ್ಧವಾಗಿದೆ. ॥ ೨೯ ॥ ಈ ತೀರ್ಥದಲ್ಲಿ ಕಾರ್ತೀಕ-ಮಾಘ ಮಾಸಗಳಲ್ಲಿ ಭಕ್ತಿಯಿಂದ ಸ್ನಾನ ಮಾಡಿದರೆ ಇಹದಲ್ಲಿ ಸೌಖ್ಯವೂ ಪರದಲ್ಲಿ ಮೋಕ್ಷವೂ ಆಗುವದು. ॥ ೩೦ ॥ ಮತ್ತು ಸೂರ್ಯ–ಚಂದ್ರ ಗ್ರಹಣ ಸಂಕ್ರಮಣ ಕಾಲಗಳಲ್ಲಿಯೂ ಸೋಮವಾರ ಅಮಾವಾಸ್ಯೆಯಲ್ಲಿಯೂ ಏಕಾದಶಿ ಮುಂತಾದ ಪುಣ್ಯ ತಿಥಿಗಳಲ್ಲಿಯೂ ಭಕ್ತಿಯಿಂದ ಸ್ನಾನ ಮಾಡಿದರೆ ಅನಂತ ಫಲವುಂಟು. ॥ ೩೧ ॥ ನಿತ್ಯ ನಾಧಿಸಿ ಮನೋಹರವಾದ ಈ ತೀರ್ಥದಲ್ಲಿ ಸ್ನಾನ ಮಾಡಿದ ಮನುಷ್ಯನು ಸಮಸ್ತ ದೋಷಗಳಿಂದ ಮುಕ್ತನಾಗಿ ಶತಾಯುಷಿಯೂ ಧನಿಕನೂ ಆಗುವನು. ॥ ೩೨ ॥ ಈ ಪ್ರಕಾರ ಈ ಸಂಗಮದ ಮಹಿಮೆ ಇರುವದು ಎಲೈ ಶಿಷ್ಯರೇ ಇನ್ನುಮುಂದೆ ವಿಶೇಷ ಮಹತ್ವವಾದ ತೀರ್ಥಗಳನ್ನು ಹೇಳುವೆನು ಕೇಳಿರಿ— ಇಲ್ಲಿ ಕಾಣುವ ಅಶ್ವತ್ಥದ ಎದುರಿಗೆ (೧) **ಮನೋಹರ** ತೀರ್ಥವದೆ. ॥ ೩೩ ॥ ಈ ತೀರ್ಥದಲ್ಲಿ ಸ್ನಾನ ಮಾಡಿದರೆ ದೇಹವು ಮನೋಹರವಾಗುವದು ಈ ಅಶ್ವತ್ಥವು ಸಾಧಾರಣವಲ್ಲ! ಅದು ಅನುಪಮವಾದ ಕಲ್ಪವೃಕ್ಷಕ್ಕೆ ಸಮಾನವಾಗಿದೆ ಇದನ್ನು ಸೇವಿಸಿದವರು ಇಚ್ಛಿತ ಫಲಗಳನ್ನು ಹೊಂದುತ್ತಾರೆ. ॥ ೩೪ ॥ ಇದು ಅಶ್ವತ್ಥ ಗಿಡವಲ್ಲ. ನೀವು ಇದು ಕೇವಲ ಕಲ್ಪತರುವೆಂದು ನಿಶ್ಚಯವಾಗಿ ತಿಳಿಯಿರಿ. ಅದು ಇಚ್ಛಿಸಿದ ಫಲವನ್ನು ಕೊಡುತ್ತದೆ ಕೇಳಿರಿ. ॥ ೩೫ ॥ ಈ ಪ್ರಕಾರ ಪ್ರಖ್ಯಾತವಾದ ಮನೋಹರ ತೀರ್ಥಸ್ಥಾನವೂ ಆದರ ಎದುರಿಗಿರುವ ಅಶ್ವತ್ಥವೂ ಸದಾ ಇದೇ ರೀತಿ ಕಲ್ಪವೃಕ್ಷದಂತೆ ಹೆಸರಾಗಿರುವವೆಂದು ತಿಳಿಯಿರಿ. ॥ ೩೬ ॥ ಯಾರು ಬಂದು ಈ ಅಶ್ವತ್ಥವನ್ನು ಭಕ್ತಿಯಿಂದ ಸೇವಿಸುತ್ತಾರೋ ಅವರ ಮನಸ್ಸಿನ ಬಯಕೆಗಳು ಪೂರ್ಣವಾಗುತ್ತವೆ. ಇದಕ್ಕೆ ಮನಸಿನಲ್ಲಿ ಯಾರೂ ಸಂಶಯ ತಕ್ಕೊಳ್ಳಬಾರದು. ॥ ೩೭ ॥ ಮತ್ತು ನಾನೂ ಸದಾ ಇಲ್ಲಿಯೇ ವಾಸಿಸುತ್ತೇನೆಂದು ನಿಶ್ಚಯವಾಗಿ ತಿಳಿಯಿರಿ ಈ ಅಶ್ವತ್ಥವು ದೃಷ್ಟಿಗೆ ಬಿದ್ದಕೂಡಲೇ ಮುಕ್ತಿಯುಂಟಾಗವದು. ನಿಮಗೆ ಇದರ ಗುರುತು ಹೇಳುವೆನು. ॥ ೩೮ ॥ ಈ ಸ್ಥಾನಕ್ಕೆ ಬಂದವರು ಮೊದಲು ಕಲ್ಪವೃಕ್ಷವಾದ ಈ ಅಶ್ವತ್ಥವನ್ನು ಪೂಜಿಸಿ ಆಮೇಲೆ ಸಂಗಮೇಶ್ವರ ಎಂಬ ಹೆಸರುಳ್ಳ ತ್ರಿನೇತ್ರನಾದ ಶ್ರೀಶಂಕರನ ಗುಡಿಗೆ ಹೋಗಿ ಒಳ್ಳೇ ಭಕ್ತಿಯಿಂದ ಅವನ ಪೂಜಾ ಮಾಡಬೇಕು. ॥ ೩೯ ॥ ಯಾಕಂದರೆ ಶ್ರೀಶೈಲದಲ್ಲಿ

ಮಲ್ಲಿಕಾರ್ಜುನನಿದ್ದಂತೆ ಈ ಸಂಗಮದಲ್ಲಿ ಶ್ರೀ ಸಂಗಮೇಶ್ವರನಿರುವನು. ಆತನನ್ನು ಭಕ್ತಿಯಿಂದ ಪೂಜಿಸಿ ಪ್ರದಕ್ಷಿಣಾ ಮಾಡಬೇಕು. ಅದರ ಕ್ರಮವನ್ನು ಹೇಳುವೆನು ಕೇಳಿರಿ ॥ ೪೦ ॥ ಮೊದಲು ಆ ಸಂಗಮೇಶ್ವರನ ಮುಂದಿರುವ ನಂದಿಕೇಶ್ವರನನ್ನು ವಂದಿಸಿ ಆಮೇಲೆ ಚಂಡಸ್ಥಾನಕ್ಕೆ ವಂದಿಸಿ ನದಿಯುವನ್ನು ಪೂರ್ಣವಾಗಿ ಬಲಗಡೆ ಮಾಡಿಕೊಂಡು ಆಮೇಲೆ ಸೋಮಸೂತ್ರಕ್ಕೆ ಹೋಗಬೇಕು. ॥ ೪೧ ॥ ಆಮೇಲೆ ಹಾಗೇ ಹಿಂದಿರುಗಿ ಬಂದು ವೃಷಭನನ್ನು ವಂದಿಸಿ ಚಂಡಾದ ಹತ್ತರ ಹೋಗಿ ಪುನಃ ಸೋಮಸೂತ್ರಕ್ಕೆ ಹೋಗಬೇಕು. ಪ್ರದಕ್ಷಿಣೆಯ ವಿಧಿಯು ಈ ಪ್ರಕಾರವಾಗಿರುತ್ತದೆ ॥ ೪೨ ॥ ಈ ಪ್ರಕಾರ ಮೂರು ಸಾರೆ ಪ್ರದಕ್ಷಿಣಾ ಮಾಡಿ ನಂದಿಯ ಹತ್ತರ ಬಂದು ಆಮೇಲೆ ಆ ಪೂಜಿತವಾದ ಸಂಗಮೇಶ್ವರನನ್ನು ನೋಡಬೇಕು. ಅದರ ಕ್ರಮವು ಹ್ಯಾಗಂದರೆ— ॥ ೪೩ ॥ ಎಡಗೈಯಿಂದ ಆ ನಂದಿಯ ವೃಷಣವನ್ನು ಹಿಡಿದು, ಬಲಗೈಯ ತರ್ಜನೀ ಮತ್ತು ಅಂಗುಷ್ಠ ಬೆರಳುಗಳನ್ನು ಆ ನಂದಿಯ ಎರಡೂ ಕೋಡುಗಳ ಮೇಲಿಟ್ಟು, ಆ ಎರಡೂ ಬೆರಳುಗಳ ಸಂದಿಯಲ್ಲಿ ಈಶ್ವರನನ್ನು ನೋಡಬೇಕು. ಅಂದರೆ ಆ ಮನುಷ್ಯನು ಇಂದ್ರಸಮಾನನಾಗುವನು । ೪೪ ॥ ಈ ಪ್ರಕಾರ ಸಂಗಮೇಶ್ವರನ ಪೂಜಾ ಮತ್ತು ಪ್ರದಕ್ಷಿಣಾಗಳನ್ನು ಮಾಡಿದವನು ಪುತ್ರ-ಪೌತ್ರರನ್ನು ಹೊಂದಿ ಧನ-ಧಾನ್ಯಾದಿ ಸಂಪತ್ತಿಯಿಂದಲೂ ಅಖಂಡೈಶ್ವರ್ಯದಿಂದಲೂ ಕೂಡಿದವನಾಗುವನು ॥ ೪೫ ॥ ಮತ್ತೆ ಕೇಳಿರಿ, ಮುಂದೆ “ವಾರಾಣಸಿ” ಎಂಬವದೆ. ಅದು ಇಲ್ಲಿಂದ ಅರ್ಧ ಹರದಾರಿ ದೂರವಾದ ನಾಗೇಶಿ ಎಂಬ ಗ್ರಾಮದಿಂದ ಉದ್ಭವವಾಗಿ ಬಂದಿರುವದು. ॥ ೪೬ ॥ ಇದರದೊಂದು ಆಖ್ಯಾನವದೆ ಆದರೆ ಅದು ಹಳೆ ಕಥೆಯಲ್ಲ ಪ್ರತ್ಯಕ್ಷವಾಗಿ ಮೊನ್ನೆ ಮೊನ್ನೆ ಆದದ್ದು ಎಂದು ತಿಳಿಯಿರಿ, ಇಲ್ಲಿ ಭಾರದ್ವಾಜಗೋತ್ರದ ಒಬ್ಬ ಬ್ರಾಹ್ಮಣನಿದ್ದನು. ॥ ೪೭ ॥ ಅವನು ಸರ್ವಸಂಗ ವರ್ಜಿತನೂ, ವಿರಕ್ತನೂ ಈಶ್ವರ ಭಕ್ತನೂ ಆಗಿದ್ದು ಅನುಷ್ಠಾನ ಮಾಡುತ್ತ ಸದಾ ಶ್ರೀ ಶಿವನನ್ನು ಧ್ಯಾನಿಸುತ್ತಿದ್ದನು. ॥ ೪೮ ॥ ಇದರಿಂದ ಚಂದ್ರಮೌಳಿಯಾದ ಸದಾಶಿವನು ಅವನ ಭಕ್ತಿಗೆ ಮೆಚ್ಚಿ ಪ್ರಸನ್ನನಾಗಿ ದಿನಾಲು ಪ್ರತ್ಯಕ್ಷವಾಗಿ ಅವನಹತ್ತರ ಬಂದು ದರ್ಶನ ಕೊಡುತ್ತಿದ್ದನು. ಆದರಿಂದ ಸರ್ವಕಾಲ

ದಲ್ಲಿಯೂ ಅವನು ಹರ್ಷಿತನಾಗಿ ಸದಾ ತನ್ನ ದೇಹಭಾವವನ್ನು ಮರೆತು ತಿರುಗುತ್ತಿದ್ದನು ॥ ೪೯ ॥ ಆದರಿಂದ ಜನರು ಅವನಿಗೆ ಹುಚ್ಚನೆಂದು ಬಹು ನಿಂದೆಯನ್ನು ಮಾಡುತ್ತಿದ್ದರು. ಅವನಿಗೆ ಈಶ್ವರ, ಮತ್ತು ಪಾಂಡು-ರಂಗೇಶ್ವರ ಎಂಬ ಇಬ್ಬರು ತಪಸ್ವಿ ಬಂಧುಗಳಿದ್ದರು. ಅವರಿಬ್ಬರು ಒಂದಾಗಿ ಕಾಶಿಗೆ ಹೋಗುವ ಆಲೋಚನೆ ಮಾಡಿದರು. ॥ ೫೦-೫೧ ॥ ಆಮೇಲೆ ಅವರು ಎಲ್ಲ ಸಿದ್ಧತೆಯನ್ನು ಮಾಡಿಕೊಂಡು ತೀವ್ರವಾಗಿ ಹೊರಟು ಹುಚ್ಚನಂತೆ ತಿರುಗಾಡುವ ತಮ್ಮ ಅಣ್ಣನಹತ್ತರ ಬಂದು— ನಾವು ಕಾಶಿಗೆ ಹೋಗುತ್ತೇವೆ ಅಣ್ಣಾ ನೀನೂ ಬಾ ಎಂದು ಕರೆದರು. ॥ ೫೨ ॥ ಅವನು ನಿಶ್ಚಯವಾಗಿ ಬ್ರಹ್ಮಜ್ಞಾನಿಯಾಗಿದ್ದನು ಮೂರ್ಖರು ಅವನಿಗೆ ಹುಚ್ಚನೆಂದೆನ್ನುತ್ತಿದ್ದರು. ಆಗ ಅವನು ತನ್ನ ತಮ್ಮಂದಿರಿಗೆ— ಎಲೈ ಸಹೋದರರೇ, ಈಗ ನೀವು ಕಾಶಿಗೆ ಹೋಗಬೇಡಿರಿ. ॥ ೫೩ ॥ ಆ ಕಾಶೀ ವಿಶ್ವೇಶ್ವರನು ಇಲ್ಲಿಯೇ ನನ್ನಹತ್ತರವೇ ಇರುವನು. ಬೇಕಾದರೆ ಈ ಕ್ಷಣವೇ ಆತನನ್ನು ತೋರಿಸುವೆನು ಎಂದನು ಎಂದು ಗುರುಗಳು ಹೇಳಲು ಆ ಎಲ್ಲ ಭಕ್ತಜನರು ಆಶ್ಚರ್ಯಪಟ್ಟರು. ಗುರುಗಳು ಮತ್ತೆ ಹೇಳಹತ್ತಿದರು— ಆಗ ಆ ಬಂಧುಗಳು ತಮ್ಮ ಅಣ್ಣನನ್ನು ಕುರಿತು— ಅಣ್ಣಾ ಹಾಗಾದರೆ ನಮಗೆ ಆ ಈಶ್ವರನನ್ನು ತೋರಿಸು ಎಂದರು. ॥ ೫೪ ॥ ಆಗ ಅವನು— ಎಲೈ ತಮ್ಮಗಳಿರಾ, ಕಾಶಿಗೆ ಹೋಗುವದು ಬಲು ಕಷ್ಟವು. ನಿಮಗೆ ಇಲ್ಲಿಯೇ ಕಾಶೀ ವಿಶ್ವೇಶ್ವರ ದರ್ಶನವಾದಮೇಲೆ ಕಷ್ಟವ್ಯಾಕೆ ? ಎಂದು ಹರ್ಷದಿಂದ ಹೇಳಿ, ॥ ೫೫ ॥ ಅವನು ಈ ತೀರ್ಥದಲ್ಲಿ ಸ್ನಾನ ಮಾಡಿ ಧ್ಯಾನಸ್ಥನಾಗಿ ಕೂತನು ಆಗ ಶ್ರೀ ಶಂಕರನು ಪ್ರತ್ಯಕ್ಷನಾಗಿ ಅವನ ಹತ್ತರ ಬಂದು ನಿಂತನು. ॥ ೫೬ ॥ ಆಗ ಅವನು ವಿನಯದಿಂದ ಶ್ರೀ ಶಂಕರನ ಪಾದಗಳಿಗೆ ವಂದಿಸಿ— ಸ್ವಾಮೀ, ನಮಗೆ ನಿತ್ಯವೂ ಇಲ್ಲಿಯೇ ಶ್ರೀ ಕಾಶೀ ಕ್ಷೇತ್ರವೂ ವಿಶ್ವೇಶ್ವರನಾದ ನಿನ್ನ ದರ್ಶನವೂ ಆಗಬೇಕು ಎಂದು ನಮಸ್ಕರಿಸಿ ಪ್ರಾರ್ಥಿಸಿದನು. ॥ ೫೭ ॥ ಆಗ ಭೋಳಾ ಚಕ್ರವರ್ತಿಯಾದ ಈಶ್ವರನು ಅತಿ ಪ್ರೀತಿಯಿಂದ ಅವನಿಗೆ ಪ್ರಸನ್ನನಾದನು. ಕೂಡಲೆ ಇದೇ ಕಾಶಿಯಾಗಿ ಕಂಡಿತು. ಮಣಿಕರ್ಣಿಕಾ ಕುಂಡವೂ ಆಯಿತು. ॥ ೫೮ ॥ ಆಗ ಆ ಕುಂಡದೊಳಗಿಂದ ಶ್ರೀ ಶಂಕರನು ಕಾಶೀ ವಿಶ್ವೇಶ್ವರನ ಮೂರ್ತಿ

ಯಾಗಿ ಹೊರಟು ಮೇಲೆಬಂದು ಎಲ್ಲರಿಗೂ ಕಾಣಿಸಿದನು. ಆ ಕುಂಡವು ಈ ನದಿಯ ಉತ್ತರಕ್ಕೆ ಬಂದು ಬಾಣದ ಆಳತೆಯಲ್ಲಿರುವದು. ॥ ೫೯ ॥ ಕಾಶಿಯಲ್ಲಿ ಭಾಗೀರಥಿಯು ಹರಿಯುವಂತೆ ಈ ಕುಂಡದಿಂದ ಗಂಗೆಯು ಹರಿದು ಬಂದಳು. ಮತ್ತು ಕಾಶಿಯಲ್ಲಿ ಏನೇನು ಗುರ್ತುಗಳಿವೆಯೋ ಅವೆಲ್ಲ ಗುರ್ತುಗಳು ಆದರಲ್ಲಿವೆ. ॥ ೬೦ ॥ ಈ ಸಂಗಮಸ್ಥಾನವು ಕಾಶಿಗಿಂತ ಉತ್ತಮ ತೀರ್ಥವಾಗಿದೆ ಆದ್ದರಿಂದ ಇಲ್ಲಿ ಎಲ್ಲರೂ ಭಕ್ತಿ-ಪ್ರೇಮಗಳಿಂದ ಸ್ನಾನ-ದಾನ ವೊದಲಾದ ಆಚರಣೆಗಳನ್ನು ಮಾಡಬೇಕು ಆದಿರಲಿ ಮುಂದೆ ಕೇಳಿರಿ. ॥ ೬೧ ॥ ಆಗ ಆ ಹುಚ್ಚ ಬ್ರಾಹ್ಮಣನು ತನ್ನ ಬಂಧುಗಳನ್ನು ಕುರಿತು— ಎಲೈ ಸಹೋದರರೇ, ನಮ್ಮ ವಂಶದಲ್ಲಿ ಯಾರೂ ಕಾಶಿಗೆ ಹೋಗಬೇಡಿರಿ. ಇದೇ ಕಾಶಿಯು ಇಲ್ಲಿಯೇ ಎಲ್ಲ ಆಚರಣೆಗಳನ್ನು ಮಾಡಿರಿ ಎಂದು ಶ್ರೀ ಶಂಕರನು ನನಗೆ ಹೇಳಿರುವನು. ॥ ೬೨ ॥ ಎಲೈ ಬಂಧುಗಳೇ, ಇನ್ನು ನನ್ನ ಹೆಸರು ಗೋಸಾವಿಯೆಂದು ನಿಶ್ಚಯವಾಗಿ ತಿಳಿಯಿರಿ. ಇನ್ನುಮೇಲೆ ನೀವಿಬ್ಬರೂ ಈಗ ನಾನು ಹೇಳಿದಂತೆ ಇಲ್ಲಿಯೇ ಎಲ್ಲ ಆಚರಣೆ ಮಾಡಬೇಕು. ॥ ೬೩ ॥ ಈಗ ನೀವು ಪಂಢರಪುರಕ್ಕೆ ಹೋಗಿ, ಆರಾಧ್ಯರೆಂಬ ವಿಖ್ಯಾತವಾದ ಹೆಸರಿನಿಂದ ಇದ್ದು ಪುಂಡಲೀಕವರಧನಾದ ಶ್ರೀ ಪಾಂಡುರಂಗನನ್ನು ಸದಾ ಪೂಜಿಸುತ್ತ ಇದ್ದು, ॥ ೬೪ ॥ ಪ್ರತಿವರುಷ ಕಾರ್ತೀಕ ಮಾಸದಲ್ಲಿ ನೀವು ವಿಶೇಷವಾಗಿ ಈ ತೀರ್ಥಕ್ಕೆ ಬರಬೇಕು ಎಂದು ಹೇಳಿದನು. ॥ ೬೫ ॥ ಎಲೈ ಭಕ್ತರೇ ಈ ಪ್ರಕಾರ ಇಲ್ಲಿ ಕಾಶೀತೀರ್ಥವು ಪ್ರಗಟವಾಯಿತು, ನೀವು ಮನಸ್ಸಿನಲ್ಲಿ ಏನೂ ಸಂಶಯ ಹಿಡಿಯಬೇಡಿರಿ. ಇದೇ ಪ್ರತ್ಯಕ್ಷ ಕಾಶಿಯು ಎಂದು ಗುರುಗಳು ಹೇಳಿದರು. ॥ ೬೬ ॥ ಈ ಪ್ರಕಾರ ಗುರುಗಳ ಮಾತು ಕೇಳಿ, ಆ ಎಲ್ಲ ಭಕ್ತರು ಅಲ್ಲಿ ಸ್ನಾನಮಾಡಿ, ತಮ್ಮ ಆಚರಣೆ ಮಾಡಿದರು. ಆಮೇಲೆ ಗುರುಗಳು ಮುಂದೆ ಬಂದು, ॥ ೬೭ ॥ ಆ ಎಲ್ಲ ಜನರಿಗೆ "ಪಾಪವಿನಾಶಿ" ತೀರ್ಥವನ್ನು ತೋರಿಸಿ— ಎಲೈ ಭಕ್ತರೇ, ಇಲ್ಲಿ ಸ್ನಾನಮಾಡಿದ ಮಾತ್ರಕ್ಕೆ ಬೆಂಕಿಯಿಂದ ಒಣಗಿದ ಹುಲ್ಲು ಸುಡುವಂತೆ ಕೂಡಲೆ ಪಾಪವು ನಾಶವಾಗುವದು. ಎಂದು ಹೇಳಿ ॥ ೬೮ ॥ ಮನಸ್ಸಿನಲ್ಲಿ— ನಮ್ಮ ತಂಗಿಯಾದ ರತ್ನಾಯಿಯ ಪಾಪವು ಬಹಳವಾಗಿರುವದು. ಆಕೆಯ ದೋಷ ಪರಿಹಾರಾರ್ಥವಾಗಿ ಈ ಪಾಪವಿನಾಶಿ ತೀರ್ಥದಲ್ಲಿ

ಸ್ನಾನ ಮೊದಲಾದ ಆಚರಣೆ ಮಾಡಲಿಕ್ಕೆ ಹೇಳಬೇಕು ಎಂದು ಆಗ ಆಕೆಯನ್ನು ಅಲ್ಲಿಗೆ ಕರೆದು ಕೇಳುತ್ತಾರೆ. ‖ ೬೯ ‖ ಎಲೌ ತಂಗಿಯೇ, ನೀನು ನಮ್ಮ ದರ್ಶನಕ್ಕೆ ಬಂದಿರುವಿ. ನಿನ್ನ ಪೂರ್ವಜನ್ಮದ ಪಾಪವು ಅತಿಶಯವಾಗಿದೆ. ನೀನು ಪಾಪಗಳನ್ನು ಮನಸ್ಸಿನಲ್ಲಿ ನೆನಸಿಕೋ ಎಂದು ಹೇಳಿದರು. ‖ ೭೦ ‖ ಶ್ರೀಗುರುಗಳ ಮಾತು ಕೇಳಿ ರತ್ನಾಯಿಯು ಮೇಲಿಂದಮೇಲೆ ಗುರುಗಳ ಪಾದಕ್ಕೆ ವಂದಿಸುತ್ತ— ಸ್ವಾಮೀ, ನಾನು ಕೇವಲ ಮೂಢಳೂ ಅಜ್ಞಾನಿಯೂ ಆಗಿರುವೆನು ನನಗೆ ಇಷ್ಟು ಜ್ಞಾನವೆಲ್ಲಿಂದ ಬರಬೇಕು ? ‖ ೭೧ ‖ ಜಗದಾತ್ಮನೇ, ವಿಶ್ವವ್ಯಾಪಕನೇ, ಜಗಜ್ಜ್ಯೋತಿ ಪ್ರಕಾಶನೇ, ನೀವೊಬ್ಬರೇ ಸರ್ವವನ್ನು ಬಲ್ಲವರು. ನೀನೇ ನನ್ನ ಪಾಪಗಳನ್ನು ವಿಸ್ತಾರವಾಗಿ ನಿರೂಪಿಸಿರಿ ಎಂದು ಬೇಡಿಕೊಂಡಳು. ‖ ೭೨ ‖ ಆಗ ಗುರುಗಳು— ತಂಗೀ, ನಿನ್ನ ಪಾಪವನ್ನು ನನಗೆ ಕೇಳುತ್ತೀಯಾ ? ನೀನು ಪೂರ್ವದಲ್ಲಿ ನಿಮ್ಮ ಮನೆಯಲ್ಲಿ ೫ ಬೆಕ್ಕುಗಳನ್ನು ಕೊಂದು ಅದು ನಿನಗೆ ಗೊತ್ತಿಲ್ಲ ‖ ೭೩ ‖ ಹೇಳುತ್ತೇನೆ ಕೇಳು, ಒಂದು ಗರ್ಭಿಣಿಯಾದ ಬೆಕ್ಕು ನಿಮ್ಮ ಮನೆಯೊಳಗಿನ ಒಂದು ಭಾಂಡೆಯಲ್ಲಿ ಐದು ಮರಿಗಳನ್ನು ಈಯಿತು ಅದನ್ನು ನೀನು ನೋಡದೆ, ಅದರಲ್ಲಿ ನೀರು ಹಾಕಿ, ಮೇಲೆ ಮುಚ್ಚಿ, ಬೆಂಕಿಯಮೇಲೆ ಇಟ್ಟೆ. ‖ ೭೪ ‖ ಅದರಿಂದ ಆ ಐದೂ ಬೆಕ್ಕುಗಳು ಸತ್ತವು ಅದರಿಂದ ನಿನಗೆ ಅತಿಶಯ ದೋಷ ಬಂದದ್ದರಿಂದ ಈಗ ನಿನಗೆ ಬಿಳಿಯ ಕುಷ್ಠವಾಗಿದೆ ಎಂದು ಅಂದರು ‖ ೭೫ ‖ ಅದನ್ನು ಕೇಳಿ ಆಕೆಯು ಕೂಡಲೆ ತನ್ನ ಮೈಯನ್ನು ನೋಡಿಕೊಳ್ಳಲು, ಮೈಯೆಲ್ಲ ಶ್ವೇತಕುಷ್ಠವಾಗಿತ್ತು. ಅದನ್ನು ಕಂಡು ಆಕೆಯು ಭಯಭೀತಳಾಗಿ ಗುರುಗಳ ಚರಣಕ್ಕೆ ನಮಸ್ಕಾರ ಮಾಡಿ-- ಶ್ರೀ ಗುರುಮೂರ್ತಿಯೇ, ನನ್ನ ಮೇಲೆ ದಯಮಾಡಿರಿ. ಎಂದು ದೀನವಾಣಿಯಿಂದ ಬೇಡಿಕೊಂಡು ‖ ೭೬ ‖— ಸ್ವಾಮೀ, ನಾನು ಬಹಳ ಪಾಪಗಳನ್ನು ಮಾಡಿ, ಇಲ್ಲಿಯ “ವಾರಾಣಶೀ” ತೀರ್ಥದಲ್ಲಿ ಸ್ನಾನ ಮಾಡಿದರೆ, ನನ್ನ ಪಾಪಗಳೆಲ್ಲ ನಾಶವಾಗುವವೆಂದು ತಿಳಿದು ನಾನು ತಮ್ಮ ದರ್ಶನಕ್ಕೆ ಬಂದೆನು ಎಂದಳು. ‖ ೭೭ ‖ ಆಕೆಯ ಮಾತು ಕೇಳಿ ಶ್ರೀ ಗುರುಗಳು— ತಂಗೀ, ನಿನ್ನ ಪಾಪರಾಶಿಯು ಇರಲಿ. ನೀನು ಆ ಪಾಪಗಳ ಫಲವನ್ನು ಮುಂದಿನ ಜನ್ಮದಲ್ಲಿ

ಅನುಭವಿಸುತ್ತೇನೆಂದರೆ, ಈಗ ನಿನ್ನ ಕುಷ್ಠವು ಹೋಗುವದು ಎಂದರು. ॥ ೭೮ ॥ ಆಗ ಆಕೆಯು ವಿನಯದಿಂದ— ಸ್ವಾಮೀ, ನಾನು ಅನೇಕ ಜನ್ಮಗಳನ್ನು ಹೊಂದಿ ಬಹಳ ಕಷ್ಟಪಟ್ಟಿರುವೆನು. ಆದ್ದರಿಂದ ಈಗ ತಮ್ಮ ದರ್ಶನಕ್ಕೆ ಬಂದಿರುವೆನು. ನನ್ನ ಪಾಪಗಳು ದೂರವಾಗಲಿ. ॥ ೭೯ ॥ ಇನ್ನು ನನಗೆ ಜನ್ಮ ಸಾಕು ಎಂದು ತಮ್ಮ ಚರಣಗಳನ್ನು ಹಿಡಿದಿರುವೆನು. ನನ್ನ ಪಾಪದ ಫಲವನ್ನು ಇದೇ ಜನ್ಮದಲ್ಲಿಯೇ ಅನುಭವಿಸುವೆನು ಎಂದಳು. ॥ ೮೦ ॥ ಅದನ್ನು ಕೇಳಿ ಶ್ರೀಗುರುಗಳು— ತಂಗೀ ರತ್ನಾಯಿಯೇ, ಈಗ ನೀನು ತೀವ್ರವಾಗಿ ಪಾಪವಿನಾಶೀ ತೀರ್ಥಕ್ಕೆ ಹೋಗಿ ಅಲ್ಲಿ ಸ್ನಾನಮಾಡು. ಸ್ನಾನ ಮಾತ್ರದಿಂದ ನಿನ್ನ ಕುಷ್ಠವು ಹೋಗುವದು. ॥ ೮೧ ॥ ಇಲ್ಲಿ ನಿತ್ಯ ಸ್ನಾನ ಮಾಡಬೇಕು ಅಂದರೆ ಸಪ್ತಜನ್ಮಗಳ ದೋಷಗಳು ನಾಶವಾಗುವವು ಇದರಲ್ಲಿ ಏನೂ ಸಂಶಯವಿಲ್ಲ. ಅನುಮಾನ ಮಾಡಬೇಡ ಎಂದು ಗುರುಗಳು ಹೇಳಿದರು. ॥ ೮೨ ॥ ಎಂದು ಸಿದ್ಧರು ನಾಮಧಾರಕನನ್ನು ಕುರಿತು— ಎಲೈ ಶಿಷ್ಯನೇ, ನಾನು ಪ್ರತ್ಯಕ್ಷವಾಗಿ ನೋಡಿದೆನು ಆ ರತ್ನಾಯಿಯು ಮೂರು ದಿವಸ ಆ ಪಾಪವಿನಾಶಿ ತೀರ್ಥದಲ್ಲಿ ಸ್ನಾನ ಮಾಡಿದಕೂಡಲೇ ಆಕೆಯ ಕುಷ್ಠವೆಲ್ಲ ಹೋಯಿತು. ॥ ೮೩ ॥ ಈ ಪ್ರಕಾರ ಅದು ಪ್ರಖ್ಯಾತ ತೀರ್ಥವದೆ. ಆದ್ದರಿಂದಲೇ ಅದಕ್ಕೆ "ಪಾಪವಿನಾಶಿ' ಎಂಬ ಹೆಸರು ಬಂದದೆ. ಅದರಲ್ಲಿ ಭಕ್ತಿಪೂರ್ವಕ ಯಾರು ಸ್ನಾನ ಮಾಡುತ್ತಾರೋ, ನಿಶ್ಚಯವಾಗಿ ಅವರ ಏಳು ಜನ್ಮಗಳ ಪಾಪಗಳು ಹೋಗುತ್ತವೆ. ॥ ೮೪ ॥ ಆ ತೀರ್ಥಮಹಿಮೆಯನ್ನು ನೋಡಿ ರತ್ನಾಯಿಯು ಸಂತೋಷದಿಂದ ಆ ತೀರ್ಥದ ಹತ್ತರ ಒಂದು ಮರವನ್ನು ಕಟ್ಟಿಕೊಂಡು ಇರುತ್ತಿದ್ದಳು. ॥ ೮೫ ॥ ಆಮೇಲೆ ಶ್ರೀ ಗುರುಗಳು ಆ ಶಿಷ್ಯರಿಗೆ ಮುಂದಿರುವ "ಕೋಟಿ" ತೀರ್ಥವನ್ನು ತೋರಿಸಿ— ಎಲೈ ಭಕ್ತರೇ, ಇದರ ಸ್ನಾನ ಮಾತ್ರದಿಂದ ಜನರು ಶುದ್ಧರಾಗುವರು ಇದರ ಆಖ್ಯಾನವು ಬಹಳ ಅದೆ. ॥ ೮೬ ॥ ಈ ಜಂಬೂ ದ್ವೀಪದಲ್ಲಿ ಮಹಿಮೆಯುಳ್ಳ ಎಷ್ಟು ತೀರ್ಥಗಳವೆಯೋ, ಆ ಎಲ್ಲ ತೀರ್ಥಗಳ ಮಹಿಮೆಗಳು ಈ ತೀರ್ಥದಲ್ಲಿ ಅವೆ. ಹೇಳಹತ್ತಿದರೆ ವಿಸ್ತಾರವಾಗುವದು. ॥ ೮೭ ॥ ಗ್ರಹಣ-ಸಂಕ್ರಾಂತಿ, ಪರ್ವಣಿ, ಅಮಾವಾಸ್ಯಾ, ಪೌರ್ಣಿಮಾ,

ಪ್ರತಿಪದೆಗಳಲ್ಲಿ ಇದರಲ್ಲಿ ಸ್ನಾನ ಮಾಡಬೇಕು. || ೮೮ || ಸ್ನಾನ ಮಾಡಿ ಬ್ರಾಹ್ಮಣರಿಗೆ ಸವತ್ಸ, ಸಾಲಂಕೃತ ಗೋದಾನ ಮಾಡಬೇಕು. ಒಂದೊಂದು ದಾನದಿಂದ ಕೋಟಿ ಫಲವುಂಟು. || ೮೯ || ಈ ತೀರ್ಥದ ಮಹಿಮೆಯು ಹ್ಯಾಗೆ ಅದೆ ಅಂದರೆ ಸ್ನಾನ ಮಾಡುವದರಿಂದ ಅನಂತ ಫಲ ಬರುವದು ಒಂದೊಂದು ದಾನವು ಕೋಟಿ ಫಲ ವನ್ನು ಕೊಡುವದು. ಈ ಪ್ರಕಾರ ಪಾಪವಿನಾಶಿ, ಹಾಗು ಕೋಟಿ ತೀರ್ಥಗಳಲ್ಲಿ ಶಕ್ತ್ಯಾನುಸಾರ ದಾನ ಮಾಡ ಬೇಕು. || ೯೦ || ಮುಂದೆ "ರುದ್ರಪಾದ" ತೀರ್ಥವದೆ ಅದರ ಕಥೆಯು ಅತಿ ಆಶ್ಚರ್ಯಕರವಾಗಿದೆ ಅದು ಗಯೆಗೆ ಸಮಾನ ತೀರ್ಥವದೆ. || ೯೧ || ಗಯೆಯಲ್ಲಿ ಯಾವ ರೀತಿ ಅರ್ಚಣೆ ಮಾಡುತ್ತಾರೋ ಅದೇ ರೀತಿ ಆ ತೀರ್ಥದಲ್ಲಿ ಆಚರಿಸಬೇಕು. ಅಲ್ಲಿರುವ ರುದ್ರ ಪದವನ್ನು ಪೂಜಿಸಬೇಕು. ಅದರಿಂದ ಕೋಟಿ ಜನ್ಮದ ಪಾಪವು ಹೋಗುವದು. || ೯೨ || ಅದರ ಮುಂದೆ ಚಕ್ರತೀರ್ಥವದೆ ಅದು ವಿಶೇಷ ಪವಿತ್ರವಾದದ್ದು. ಅಲ್ಲಿ ಕೇಶವ ದೇವನಿರುವನು ಅಲ್ಲಿ ಸ್ನಾನ ಮಾಡಿದರೆ ಬಹು ಪುಣ್ಯವುಂಟು || ೯೩ || ಅಲ್ಲಿ ಸ್ನಾನ ಮಾಡಿದ ಪತಿತನೂ ಸಹ ಜ್ಞಾನಿಯಾಗುವನು. ಅಲ್ಲಿ ಹಾಕಿದ ಅಸ್ಥಿಗಳು ಚಕ್ರಾಂಕಿತವಾಗುವವು. ಆ ತೀರ್ಥವು ದ್ವಾರಾವತಿಗೆ ಸಮಾನವಾದದ್ದಿರುತ್ತದೆ. || ೯೪ || ಅಲ್ಲಿ ಸ್ನಾನ ಮಾಡಿ ಕೇಶವ ದೇವನನ್ನು ಪೂಜಿಸಿದರೆ ದ್ವಾರಾವತಿಯ ಸಾಲ್ಪುಸಟ್ಟು ಪುಣ್ಯ ಬರುವದು ಎಂದರು || ೯೫ || ಆಗ ಎಲ್ಲರೂ ಅಲ್ಲಿ ಸ್ನಾನಾದಿಗಳನ್ನು ಮಾಡಿದರು. ಆಗ ಶ್ರೀ ಗುರುಗಳು ಮುಂದೆ "ಮನ್ಮಥದಹನ" ತೀರ್ಥವದೆ ಎಂದು ಹೇಳಿದರು ಆಮೇಲೆ— ಗಾಣಗಾಪುರದ ಪೂರ್ವ ಭಾಗದಲ್ಲಿ ಕಲ್ಲೇಶ್ವರ ದೇವಸ್ಥಾನವಿರುವದು. ಅದು ಗೋಕರ್ಣ ಮಹಾಬಳೇಶ್ವರ ಕ್ಷೇತ್ರಕ್ಕೆ ಸಮಾನವಾದದ್ದು. || ೯೬ || ಮನ್ಮಥ ತೀರ್ಥದಲ್ಲಿ ಸ್ನಾನ ಮಾಡಿ ಆ ಕಲ್ಲೇಶ್ವರನನ್ನು ಪೂಜಿಸಬೇಕು. ಅಂದರೆ ವಂಶವೃದ್ಧಿಯಾಗಿ ಅಷ್ಟೈಶ್ವರ್ಯವುಂಟಾಗುವದು || ೯೮ || ಆಷಾಢ-ಶ್ರಾವಣ ಮಾಸಗಳಲ್ಲಿ ಆ ಕಲ್ಲೇಶ್ವರನಿಗೆ ಅಭಿಷೇಕ ಮಾಡಿ, ಕಾರ್ತೀಕ ಮಾಸದಲ್ಲಿ ದೀಪಾರಾಧನೆ ಮಾಡಬೇಕು. ಅದರಿಂದ ಅನಂತ ಪುಣ್ಯವುಂಟು. || ೯೯ || ಎಂದು ಶ್ರೀಗುರು ಪುರುಷೋತ್ತಮರು ಅಷ್ಟ ತೀರ್ಥಗಳ ಮಹಿಮೆಯನ್ನು ಹೇಳಲಾಗಿ

ಆದನ್ನು ಕೇಳಿ ಭಕ್ತರು ಸಂತೋಷಬಟ್ಟು ಅತಿ ಉಲ್ಹಾಸಪಡುತ್ತ— ‖ ೧೦೦ ‖ ನಮಗೆ ಈ ತೀರ್ಥಗಳ ಮಹಿಮೆಯು ತಿಳಿದಿದ್ದಿಲ್ಲ. ಶ್ರೀ ಗುರುಗಳು ಕೃಪೆಯಿಂದ ನಮಗೆ ಹೇಳಿ ನಮ್ಮನ್ನು ಪವಿತ್ರ ಮಾಡಿದರು. ‖ ೧೦೧ ‖ ಯಾವತ್ತು ತೀರ್ಥಗಳು ನಮ್ಮ ಹತ್ತರದಲ್ಲಿರಲು ನಾವು ಯಾತ್ರೆಗೆ ಯಾಕೆ ದೂರ ಹೋಗಬೇಕು ? ಈ ಸ್ಥಾನವು ಪವಿತ್ರವಾಗಿರುತ್ತದೆ ಎಂದು ಎಲ್ಲಗೂ ಅದರಂತೆ ಆಚರಣೆ ಮಾಡಿದರು. ‖ ೧೦೨ ‖ ಈ ಪ್ರಕಾರ ಶ್ರೀಗುರುಗಳು ಅಷ್ಟತೀರ್ಥಗಳ ಮಹಿಮೆಯನ್ನು ಹೇಳಿ ಮಠದೊಳಗೆ ಹೋದರು. ಆಮೇಲೆ ಭಕ್ತರು ಸಮಾರಾಧನೆ ಮಾಡಿದರು. ಆಗ ಮಹಾ ಆನಂದವು ನಡೆಯಿತು. ‖ ೧೦೩ ‖ ಎಲೈ ನಾಮಧಾರಕಾ, ಅಷ್ಟತೀರ್ಥಗಳ ಮಹಿಮೆಯು ಈ ಪ್ರಕಾರವಾಗಿರುತ್ತದೆ. ಶ್ರೀ ಗುರುಗಳು ನನಗೆ ಹೇಳಿದಂತೆ ನಾನು ನಿನಗೆ ಹೇಳಿದೆನು ಎಂದು ಸಿದ್ಧರು ಅಂದರು. ‖ ೧೦೪ ‖ ಇತ್ತ ಆದರಂತೆ ಸರಸ್ವತಿ ಗಂಗಾಧರನು ಹೇಳಿ— ಎಲೈ ಶ್ರೋತೃಗಳೇ, ಗಾಣಗಾಪುರ ಕ್ಷೇತ್ರವು ದೊಡ್ಡದು. ಅಲ್ಲಿ ಅಪರಂಪಾರ ತೀರ್ಥಗಳು ಅವೆ. ನೀವು ಅಲ್ಲಿಗೆ ಹೋಗಿ ವಿಧಿಪ್ರಕಾರ ಆಚರಣೆ ಮಾಡಿರಿ ಎಂದು ಹೇಳಿದನು. ‖ ೧೦೫ ‖

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಅಮರಜಾ ಸಂಗಮ ಗಾಣಗಾಪುರ ತೀರ್ಥ ಮಹಿಮಾ ವರ್ಣನಂ ನಾಮ ನವಚತ್ವಾರಿಂಶೋಧ್ಯಾಯಃ ‖ ೪೯ ‖ ಶ್ರೀ ಗುರುದೇವದತ್ತ ‖

— ೪೯ನೇ ಅಧ್ಯಾಯ ಸಮಾಪ್ತ —

---

# ೫೦ನೇಯ ಅಧ್ಯಾಯ





## ಶ್ರೀಗುರುಗಳು ರಾಜನಾದ ಅಗಸನ ಹುಣ್ಣು ಕಳೆದು ಅವನ ನಗರಕ್ಕೆ ಹೋಗಿ ಪೂಜೆ ಹೊಂದಿದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ಸಿದ್ಧರು— ಎಲೈ ನಾಮಧಾರಕನೇ ಮುಂದೆ ಕಥೆಯು ಅಪೂರ್ವ ಆಯಿತು ಕೇಳು. ಈ ಮೊದಲು ನಿನಗೆ ಅಗಸನ ಕಥೆಯನ್ನು ಹೇಳಿದ್ದೇನೆ. ॥ ೧ ॥ ಆ ಅಗಸನು ವರವನ್ನು ಬೇಡಲು ಶ್ರೀಗುರುಗಳು ಅವನಿಗೆ ಪ್ರಸನ್ನರಾಗಿ— ನೀನು ಮುಂದಿನ ಜನ್ಮದಲ್ಲಿ ಧುರಂಧರವಾದ ರಾಜ್ಯಪದವನ್ನು ಅನುಭವಿಸು ಎಂದು ವರವನ್ನು ಕೊಟ್ಟರು. ॥ ೨ ॥ ಆಗ ಕೂಡಲೆ ಅವನು ಮೃತಪಟ್ಟು ವೈದರೀ (ಬೀದರ) ನಗರದಲ್ಲಿ ಮ್ಲೇಂಛಜಾತಿಯ ರಾಜವಂಶದಲ್ಲಿ ಹುಟ್ಟಿ ರಾಜ್ಯವಾಳುತ್ತ, ಪುತ್ರ-ಪೌತ್ರರಿಂದ ಕೂಡಿ ಸಂತೋಷಬಡುತ್ತ ಮಹಾ ಆನಂದದಿಂದಿರುತ್ತಿದ್ದನು. ॥ ೩ ॥ ಈ ಪ್ರಕಾರ ಆ ಯುವರಾಜನು ಅಶ್ವ-ಗಜ-ರಥ-ಕಾಲಾಳು ಮೊದಲಾದ ಅಮಿತ ಚತುರಂಗ ಸೇನೆಯಿಂದಲೂ ಅಪಾರ ಧನ ಸಂಪತ್ತಿಯಿಂದಲೂ ಕೂಡಿಕೊಂಡು ಸಂತೋಷದಿಂದಿರುತ್ತಿದ್ದನು. ॥ ೪ ॥ ಅವನು ಹೀನ ಜಾತಿಯವನಾದರೂ ಒಂದೇ ಮನಸಿನಿಂದ ದಾನ-ಧರ್ಮ ಮಾಡುತ್ತಿದ್ದನು. ॥ ೫ ॥ ಪೂರ್ವ ಜನ್ಮದ ಸಂಸ್ಕಾರದಿಂದ ಅವನು ಬ್ರಾಹ್ಮಣರ ಮೇಲೆ ವಿಶೇಷ ಭಕ್ತಿಯುಳ್ಳವನಿದ್ದು, ತನ್ನ ರಾಜ್ಯದಲ್ಲಿಯ ಹಿಂದೂ ದೇವಾಲಯಗಳಿಗೆ ಏನೂ ಉಪದ್ರ ಮಾಡುತ್ತಿದ್ದಿಲ್ಲ. ॥ ೬ ॥ ಆದರೆ ಅವನ ಮನೆಯ ಮ್ಲೇಂಛ ಜಾತಿಯ ಪುರೋಹಿತನು (ಫಕೀರನು) ಆ ರಾಜನನ್ನು ಕುರಿತು— ಎಲೈ ರಾಜನೇ, ನೀನು ಮುಸಲ್ಮಾನನಿದ್ದು ಹಿಂದೂ ದೇವತೆಗಳನ್ನೂ ಬ್ರಾಹ್ಮಣರನ್ನೂ ನಿಂದಿಸಬೇಕು. ಅವನ್ನು ಬಿಟ್ಟು ನೀನು ಅವರನ್ನು ಸೇವಿಸಿದರೆ ಅದರಿಂದ ನಿನಗೆ ಅನೇಕ ಪಾಪಗಳು ಸಂಭವಿಸು

ವವು. ನೀನು ನಿನ್ನ ಜಾತಿ ಧರ್ಮಪ್ರಕಾರ ನಡೆದರೆ ಅದರಿಂದ ಸುಖವಾಗಿ ನಿನಗೆ ಅನಂತ ಪುಣ್ಯವು ಬರುವದು. ॥ ೭-೮ ॥ ಮಂದಮತಿಗಳಾದ ಬ್ರಾಹ್ಮಣರು ಕಲ್ಲು-ಕಟ್ಟಿಗೆ, ಗಿಡ-ಮರಗಳನ್ನೂ ಆಕಳು, ಭೂಮಿ, ಚಂದ್ರ-ಸೂರ್ಯ-ಅಗ್ನಿ-ನದಿ-ತೀರ್ಥ ಮುಂತಾದವುಗಳೆಲ್ಲವನ್ನೂ ದೇವರೆಂದು ಪೂಜಿಸುವರು. ॥ ೯-೧೦ ॥ ಈ ಪ್ರಕಾರ ಮಂದಮತಿಗಳಾದ ಬ್ರಾಹ್ಮಣರು ನಿರಾಕಾರನಾದ ಪರಮಾತ್ಮನನ್ನು ಸಾಕಾರವಾಗಿ ತಿಳಿಯುವರು ಅಂಥವರನ್ನು ಮ್ಲೇಂಛರು ಸೇವಿಸಿದರೆ ಅಧೋಗತಿಯಾಗುವದು. ಎಂದು ಹೇಳಿ ಅವನಿಗೆ ಕಲಿಸುತ್ತಿದ್ದನು. ॥ ೧೧ ॥ ಈ ಪ್ರಕಾರ ಆ ಯವನ ಪುರೋಹಿತನು ತನಗೆ ಹಿತವನ್ನು ಹೇಳುವದನ್ನು ಕೇಳಿ ಆ ರಾಜನು ಸಿಟ್ಟಾಗಿ ಅವನಿಗೆ ಉತ್ತರವನ್ನು ಹೇಳುತ್ತಾನೆ. ॥ ೧೨ ॥ ಎಲೈ ಪುರೋಹಿತನೇ, ನೀನು ಅಂದದ್ದು ನನಗೆ ತಿಳಿಯಿತು. ಸರ್ವೇಶ್ವರನು ಅಣು-ರೇಣು-ತೃಣ-ಕಾಷ್ಠಗಳಲ್ಲಿ ಸಹ ಪೂರ್ಣ ತುಂಬಿಕೊಂಡಿರುತ್ತಾನೆ ॥ ೧೩ ॥ ಈ ಸಮಸ್ತ ಸೃಷ್ಟಿಯೂ ಈ ಸ್ಥಾವರ ಜಂಗಮ ವಸ್ತುಗಳೂ ಆ ಈಶ್ವರನಿಂದಲೇ ಉಂಟಾಗಿರುವವು ದೇವರು ಎಲ್ಲ ಕಡೆಯಲ್ಲಿಯೂ ಸತ್ಯವಾಗಿ ವ್ಯಾಪ್ತವಾಗಿದ್ದಾನೆಂದು ಅಸಂಖ್ಯ ತರ್ಕಭೇದಗಳಿರುತ್ತವೆ ॥ ೧೪ ॥ ನೀನು ಯಾವತ್ತು ಜಾತಿಗಳ ಉತ್ಪತ್ತಿಯನ್ನು ತಿಳಿದು ನೋಡು, ಎಲ್ಲ ಶರೀರಗಳು ಪೃಥ್ವಿ, ಆಪ್, ತೇಜ, ವಾಯು, ಆಕಾಶಗಳೆಂಬ ಪಂಚ ತತ್ವಗಳು ಕೂಡಿ ಆಗಿರುತ್ತವೆ. ॥ ೧೫ ॥ ಎಲ್ಲರ ಬೆಳವಣಿಗೆ ಒಂದೇ ಪ್ರಕಾರವಾಗಿರುವದು. ಕುಂಬಾರನು ಒಂದೇ ಮಣ್ಣಿನಿಂದ ಅನೇಕ ತರದ ಪಾತ್ರೆಗಳನ್ನು ಮಾಡುವನು. ಆ ಪಾತ್ರೆಗಳು ಬೇರೆಬೇರೆಯಾಗಿ ಕಂಡರೂ ಅವೆಲ್ಲವೂ ಒಂದೇ ಮಣ್ಣಿನಿಂದಾಗಿಲ್ಲವೇ ? ॥ ೧೬ ॥ ನಾನಾಬಣ್ಣದ ಆಕಳಿದ್ದರೂ ಅವುಗಳ ಹಾಲು ಒಂದೇಯಾಗಿರುತ್ತದೆ. ಅಲಂಕಾರಗಳು ಬೇರೆಬೇರೆಯಾಗಿ ಕಂಡರೂ ಅವುಗಳಲ್ಲಿರುವ ಬಂಗಾರವು ಒಂದೇಯಾಗಿರುತ್ತದೆ. ॥ ೧೭ ॥ ಅದರಂತೆ ದೇಹಗಳು ಭಿನ್ನವಾಗಿ ಕಂಡರೂ ಆಕಾಶದಲ್ಲಿರುವ ಚಂದ್ರನು ಎಲ್ಲ ಘಟಗಳಲ್ಲಿಯೂ ಪೂರ್ಣವಾಗಿ ಕಾಣುವಂತೆ ಪ್ರತಿಯೊಂದು ದೇಹದಲ್ಲಿ ಪರಮಾತ್ಮನು ಪೂರ್ಣನಾಗಿರುತ್ತಾನೆ ॥ ೧೮ ॥ ಮನೆಯಲ್ಲಿರುವ ಒಂದು ದೀಪದಿಂದ ಸಹಸ್ರ ದೀಪಗಳನ್ನು ಹಚ್ಚಬಹುದಲ್ಲವೇ ? ಆ ದೀಪಗಳಂತೆ ಎಲ್ಲರೂ ಇರುವರು.

ಭಿನ್ನಭಾವ ಎಲ್ಲಿ ಅದೆ ? ॥ ೧೯ ॥ ಒಂದು ದಾರದಲ್ಲಿ ನಾನಾ ಬಣ್ಣದ ಮಣಿಗಳನ್ನು ಪೋಣಿಸಿದರೂ ಎಲ್ಲಕ್ಕೂ ಒಂದೇ ಸೂತ್ರವೆಂದು ತಿಳಿಯಬೇಕಲ್ಲದೆ ಭಿನ್ನಭಾವ ಹೊಂದಬಾರದು. ॥ ೨೦ ॥ ಆದರಂತೆ ಈ ಭೂಮಿಯಲ್ಲಿ ನಾನಾತರದ ಜಾತಿಗಳು ಅವೆ. ಎಲ್ಲರಲ್ಲಿಯೂ ಪರಮಾತ್ಮನಾದ ಶ್ರೀಹರಿಯು ಒಬ್ಬನೇ ಇರುವನು. ನೀವಾದರೂ ಪರಮಾತ್ಮನೊಬ್ಬನು ಇದ್ದಾನೆಂದು ಅನ್ನುತ್ತೀರಷ್ಟೇ? ಪರಮಾತ್ಮನ ಹೆಸರಿನಲ್ಲಿ ಮಾತ್ರ ಭಿನ್ನವಾಗಿರುವದು. ಕಾರಣ ಪರಮಾತ್ಮನಲ್ಲಿ ಭಿನ್ನಭಾವ ಮಾಡಬಾರದು. ॥ ೨೧ ॥ ಇನ್ನು ಬ್ರಾಹ್ಮಣರು (ಹಿಂದುಗಳು) ಕಲ್ಲು ಮೊದಲಾದವುಗಳನ್ನು ದೇವರಂತೆ ಪೂಜಿಸುವರೆಂದು ನೀವು ಆಕ್ಷೇಪಿಸುವಿರಿ. ಆದರೆ ವಿಶ್ವಾತ್ಮನು ಎಲ್ಲ ಪದಾರ್ಥಗಳಲ್ಲಿ ಪೂರ್ಣನಾಗಿದ್ದಾನೆಂದು ತಿಳಿಯುತ್ತದೆ. ॥ ೨೨ ॥ ಪರಮಾತ್ಮನಲ್ಲಿ ಭಕ್ತಿ ಹುಟ್ಟುವದಕ್ಕಾಗಿ ಅಲ್ಪಬುದ್ಧಿಯವರಿಗೆ ಪ್ರತಿಮಾ ಪೂಜೆಯು ಪ್ರಸಿದ್ಧವಾಗಿ ಹೇಳಿದೆ ಆತ್ಮಾರಾಮನನ್ನು ಯಾರು ವಿಧಿಪ್ರಕಾರ ಪೂಜಿಸುತ್ತಾರೋ ಅವರ ಮತಿಯು ಈ ಪ್ರಕಾರವಾಗಿರುತ್ತದೆ ॥ ೨೩ ॥ ಸ್ಥಿರ ಮನಸ್ಸಿಲ್ಲದವರು ಗುರ್ತಿಗಾಗಿ ಪ್ರತಿಮೆಗಳನ್ನು ಮಾಡಿ ಅವುಗಳಿಗೆ ನಾರಾಯಣ ಮೊದಲಾದ ಹೆಸರುಗಳನ್ನಿಟ್ಟು ಪೂಜಿಸುವರು. ॥ ೨೪ ॥ ಆದಕ್ಕಾಗಿ ನೀವು ನಿಂದಿಸುವಿರಿ. ಆದರೆ ನೀವು ಎಲ್ಲ ಕಡೆಯಲ್ಲಿಯೂ ಪರಮಾತ್ಮನು ಪೂರ್ಣನಾಗಿದ್ದಾನೆಂದು ಅನ್ನುತ್ತ ನಿಮ್ಮ ಮತವನ್ನು ಯಾಕೆ ಪ್ರತಿಷ್ಠಿಸುವಿರಿ ? ನಾವು ಯಾವ ಮತಕ್ಕೂ ದ್ವೇಷ ಮಾಡಬಾರದು. ॥ ೨೫ ॥ ಆದಕಾರಣ ಜ್ಞಾನವಂತರು ಯಾವ ಮತದ್ದೂ ನಿಂದಾ-ಸ್ತುತಿ ಮಾಡಬಾರದು ಭೂಮಿಯಲ್ಲಿ ನಾನಾಪ್ರಕಾರದ ಜಾತಿಯವರು ಇರುತ್ತಾರೆ. ಅವರು ತಮ್ಮ ತಮ್ಮ ಕರ್ಮಾನುಸಾರ ಚಕ್ರದಲ್ಲಿ ತಿರುಗುವರು. ॥ ೨೬ ॥ ಪುಣ್ಯ ಮಾಡುವದರ ಮೇಲಿಂದ ಜಾತಿಗಳು ಆಗಿವೆ ಎಲ್ಲಕ್ಕೂ ಹೆಚ್ಚು ಪುಣ್ಯ ಮಾಡಿದವನು ೧ನೇ ನಂಬರ ಜಾತಿಯಲ್ಲಿ ಹುಟ್ಟುವನು ಅದಕ್ಕಿಂತ ಸ್ವಲ್ಪ ಕಡಿಮೆ, ಅದಕ್ಕೂ ಕಡಿಮೆ, ಅದಕ್ಕೂ ಬಹಳ ಕಡಿಮೆ ಹೀಗೆ ಪುಣ್ಯ ಕಡಿಮೆ ಕಡಿಮೆಯಾಗುತ್ತ ಕಡಿಮೆ ಕಡಿಮೆ ಜಾತಿಯಲ್ಲಿ ಹುಟ್ಟುವರು. ೧ನೇ ನಂಬರ ಜಾತಿಯಲ್ಲಿ ಹುಟ್ಟಿದವನು ಪಾಪ ಮಾಡಿದರೆ ಆ ಪಾಪದಂತೆ ಅವನು ಮುಂದೆ ಕಡಿಮೆ ತರದ ಜಾತಿಯಲ್ಲಿ ಹುಟ್ಟುವನು. ಕಡಿಮೆ ಜಾತಿಯಲ್ಲಿ ಹುಟ್ಟಿದವನು ಎಲ್ಲಕ್ಕೂ

ಹೆಚ್ಚು ಪುಣ್ಯ ಮಾಡಿದರೆ ಮುಂದೆ ಆವನು ೧ನೇ ನಂಬರ ಜಾತಿಯಲ್ಲಿ ಹುಟ್ಟುವನು. ಎಂದು ರಾಜನು ತನ್ನ ಪುರೋಹಿತನಿಗೆ ಹೇಳಿದನು. ಆ ರಾಜನು ಬಹು ಪುಣ್ಯವಂತನಾದ್ದರಿಂದ ದೇವ-ದ್ವಿಜರಲ್ಲಿ ಅವನ ವಿಶ್ವಾಸವು ಬಹಳವಾಗಿತ್ತು. || ೨೭ || ಹೀಗೆ ಆ ರಾಜನು ವೈದುರಿ ನಗರದಲ್ಲಿರುತ್ತಿರಲು ಮುಂದೆ ಒಂದು ದಿನ ಅವನ ತೊಡೆಯಮೇಲೆ ಒಂದು ಹುಣ್ಣು ಹುಟ್ಟಿತು. || ೨೮ || ಆಗ ನಾನಾಪ್ರಕಾರದ ವೈದ್ಯರು ಬಂದು ಆ ಹುಣ್ಣಿಗೆ ಅನೇಕ ತರದ ಔಷಧ (ಮಲಾಮು) ಗಳನ್ನು ಹಚ್ಚಿದರು. ಏನು ಮಾಡಿದರೂ ಅದು ಕಡಿಮೆಯಾಗಲಿಲ್ಲ. ಅದರಿಂದ ರಾಜನು ಬಹಳ ಕಷ್ಟಪಡುತ್ತಿದ್ದನು. || ೨೯ || ಹೀಗೆ ನಡೆದಿರಲು ಇತ್ತ ಗಾಣಗಾಪುರದಲ್ಲಿದ್ದ ಶ್ರೀ ಗುರುಗಳು ಜ್ಞಾನದೃಷ್ಟಿಯಿಂದ ಮುಂದೆ ರಾಜನು ಬರುತ್ತಾನೆಂದು ತಿಳಿದು ಮನಸಿನಲ್ಲಿ ವಿಚಾರ ಮಾಡುತ್ತ— ಇಲ್ಲಿ ನಮ್ಮ ಮಹಿಮೆಯು ಪ್ರಗಟವಾಗಿ ಎಲ್ಲ ಕಡೆಗೂ ಪ್ರಸಿದ್ಧವಾಯಿತು. ಅದರಿಂದ ಮ್ಲೇಂಛ ರಾಜನು ನಮ್ಮ ದರ್ಶನಕ್ಕೆ ಬರುವನು. ಅವನ ಸಂಗಡ ಅನೇಕ ಯವನರು ನಮ್ಮನ್ನು ನೋಡಲಿಕ್ಕೆ ಬರುವರು. ಅವರು ಇಲ್ಲಿಗೆ ಬಂದರೆ ಇಲ್ಲಿಯ ಬ್ರಾಹ್ಮಣರನ್ನು ಬಾಧಿಸಬಹುದು. ಆದಕಾರಣ ನಾವು ಇಲ್ಲಿ ಪ್ರತ್ಯಕ್ಷವಾಗಿರಬಾರದು. ಈಗ ನಾವು ಲೌಕಿಕಾರ್ಥವಾಗಿ ಗುಪ್ತವಾಗಿರಬೇಕು ಎಂದು ಅಂದು || ೩೦-೩೧-೩೨ || ಆಮೇಲೆ ತಮ್ಮ ಶಿಷ್ಯರನ್ನು ಕುರಿತು— ಎಲೈ ಶಿಷ್ಯರೇ, ಒಬ್ಬ ಯವನ ರಾಜನು ನಮ್ಮನ್ನು ಕರೆಯಲಿಕ್ಕೆ ಬರುವವನಿದ್ದಾನೆ. ಅವನ ಸಂಗಡ ಅನೇಕ ಯವನರೂ ಬರಬಹುದು. ಆಗ ನಿಮಗೆ ಉಪದ್ರವಾದೀತು. ಆದಕಾರಣ ಇನ್ನು ನಾವು ಇಲ್ಲಿ ಇರಬಾರದು. ಈಗ ಈಶ್ವರನಾಮ ಸಂವತ್ಸರವು ಬಂದದೆ. ಈಗ ಸಿಂಹ ರಾಸಿಗೆ ಗುರುವು ಬಂದಿರುತ್ತಾನೆ. ಈ ಕಾಲಕ್ಕೆ ಗೋದಾವರಿ ತೀರ್ಥದಲ್ಲಿ ಸ್ನಾನ ಮಾಡುವದು ಶ್ರೇಷ್ಠವು ಆದಕಾರಣ ಎಲೈ ಶಿಷ್ಯರೇ, ನಾವು ಯಾತ್ರಾ ನಿಮಿತ್ತವಾಗಿ ತೀವ್ರವಾಗಿ ಗೋದಾತೀರಕ್ಕೆ ಹೋಗಬೇಕಾಗಿದೆ ಕಾರಣ ನೀವು ತೀವ್ರವಾಗಿ ಎಲ್ಲ ಸಿದ್ಧತೆಯನ್ನು ಮಾಡಿರಿ ಎಂದು ಹೇಳಿದರು. || ೩೩-೩೪ || ಈ ಪ್ರಕಾರ ಗುರುಗಳ ಮಾತು ಕೇಳಿ ಆ ಶಿಷ್ಯರು ತಮ್ಮ ತಮ್ಮೊಳಗೆ ವಿಚಾರ ಮಾಡುತ್ತ— ಯವನ ರಾಜನು ಬಂದರೆ ಏನಾಗುತ್ತದೆ? ಎಂದು ವಿಚಾರ ಮಾಡಿ ಮತ್ತೆ— ಬಂದರೆ

ಏನಾಗುತ್ತದೆ ನೋಡೋಣ ! ಬಂದರೆ ಶ್ರೀಗುರು ನರಸಿಂಹ ಸರಸ್ವತಿಗಳು ನಮ್ಮನ್ನು ಹ್ಯಾಗಾದರೂ ರಕ್ಷಿಸಿಯೇ ರಕ್ಷಿಸುವರು ಎಂದೆನ್ನುತ್ತಿದ್ದರು. ॥ ೩೫–೩೬ ॥ ಈ ಪ್ರಕಾರ ಶ್ರೀ ಗುರುಗಳು ಗಾಣಗಾಪುರದಲ್ಲಿದ್ದಾಗ ಅದ ಖ್ಯಾತಿಯನ್ನು ಕೇಳಿ, ಪೂರ್ವಜನ್ಮದ ಸಂಸ್ಕಾರದಿಂದ ಆ ಯವನ ರಾಜನಿಗೆ ಗಾಣಗಾಪುರಕ್ಕೆ ಹೋಗುವ ಇಚ್ಛೆಯಾಯಿತು. ॥ ೩೭ ॥ ಆ ಹುಣ್ಣಿನ ದುಃಖದಿಂದ ಆ ರಾಜನು ಬಹಳ ಕಷ್ಟಪಡುತ್ತಿದ್ದನು. ಎಷ್ಟು ತರದ ಔಷಧ ಹಚ್ಚಿದರೂ ಅದು ಕಡಿಮೆಯಾಗಲಿಲ್ಲ. ॥ ೩೮ ॥ ಆಗ ಅವನು ಮನಸಿನಲ್ಲಿ ವಿಚಾರ ಮಾಡಿ— ಈ ಹುಣ್ಣಂತೂ ಬಹಳವಾಗಿ ಬೆಳೆಯಿತು ಯಾವ ವೈದ್ಯರಿಂದಲೂ ಹೋಗಲಿಲ್ಲ ಈಗ ಏನು ಮಾಡಲಿ? ಎಂದನು. ॥ ೩೯ ॥ ಆಮೇಲೆ ಬ್ರಾಹ್ಮಣರನ್ನು ಕರೆಯಿಸಿ— ಸ್ವಾಮೀ, ಈ ಹುಣ್ಣಿಗೆ ಏನು ಉಪಾಯ ಮಾಡಬೇಕು? ಎಂದು ಕೇಳಿದನು ಆಗ ಅವರು— ಎಲೈ ರಾಜಾ, ಹೇಳುತ್ತೇವೆ ಏಕಚಿತ್ತದಿಂದ ಕೇಳು ॥ ೪೦ ॥ ಎಲೈ ರಾಜನೇ ಪೂರ್ವ ಜನ್ಮದಲ್ಲಿ ಮಾಡಿದ ಪಾಪವು ಈ ಜನ್ಮದಲ್ಲಿ ವ್ಯಾಧಿರೂಪವಾಗಿ ಪೀಡಿಸುವದು. ಆ ಪಾಪ ಹೋಗುವದಕ್ಕೆ ತೀರ್ಥಯಾತ್ರಾ, ದೇವಪೂಜಾ, ದಾನ-ಧರ್ಮಗಳನ್ನು ಮಾಡಬೇಕು. ಅಂದರೆ ನಿನ್ನ ವ್ಯಾಧಿಯು ಹೋಗುವದು. ॥ ೪೧ ॥ ಅಥವಾ ಭಕ್ತಿಯಿಂದ ಯೋಗ್ಯ ಸತ್ಪುರುಷರನ್ನು ಸೇವಿಸಬೇಕು. ಆ ಸತ್ಪುರುಷರ ಕೃಪಾ ದೃಷ್ಟಿಯೆಂಬ ಅಮೃತದಿಂದ ಈ ನಿನ್ನ ವ್ಯಾಧಿಯು ಗುಣವಾಗುವದು ॥ ೪೨ ॥ ಸತ್ಪುರುಷರ ಕೃಪಾ ದೃಷ್ಟಿಯಿಂದ ೭೦ ಜನ್ಮಗಳ ಪಾಪಗಳು ಹೋಗುವವು. ಅಂದಮೇಲೆ ಹೊಟ್ಟೆಯೊಳಗಿನ ಬೇನೆಗಳು ಹ್ಯಾಗೆ ಉಳಿಯುವವು? ಇಂಥ ಹುಣ್ಣು ಮೊದಲಾದವುಗಳಂತೂ ತೀವ್ರವಾಗಿ ಹೋಗುವವು. ಎಂದರು. ॥ ೪೩ ॥ ಈ ಪ್ರಕಾರ ಆ ಬ್ರಾಹ್ಮಣರ ಮಾತು ಕೇಳಿ, ರಾಜನು ಅವರಿಗೆ ನಮಸ್ಕಾರ ಮಾಡಿ— ಸ್ವಾಮೀ, ನನಗೆ ಯವನನೆಂದು ಮಾತ್ರ ಅನ್ನಬೇಡಿರಿ ನಾನು ಬ್ರಾಹ್ಮಣರ ಸೇವಕನು. ॥ ೪೪ ॥ ಪೂರ್ವದಲ್ಲಿ ನಾನು ಶ್ರೀಗುರು ಚರಣ ಸೇವೆಯನ್ನು ಮಾಡಿರುವೆನು. ಆದರೆ ಯಾವದೋ ಒಂದು ಪಾಪದಿಂದ ಈಗ ನಾನು ಯವನ ಕುಲದಲ್ಲಿ ಹುಟ್ಟಿರುವೆನು. ॥ ೪೫ ॥ ಸ್ವಾಮೀ, ಬ್ರಾಹ್ಮಣರೇ ಪೂರ್ವದಲ್ಲಿ ಯಾವ ಸತ್ಪುರುಷರ ದರ್ಶನದಿಂದ ಯಾರ

ರೋಗವು ಪರಿಹಾರವಾಯಿತೆಂಬದಕ್ಕೆ ಒಂದು ಕಥೆಯನ್ನು ಹೇಳಿರಿ ಅಂದನು. ॥ ೪೬ ॥ ಆಗ ಅವರಲ್ಲಿ ಒಬ್ಬ ಬ್ರಾಹ್ಮಣನು ಮನಸಿನಲ್ಲಿ ವಿಚಾರ ಮಾಡಿ— ರಾಜನೇ, ಆ ಕಥೆಯನ್ನು ಬಹಿರಂಗವಾದ ಈ ಸ್ಥಳದಲ್ಲಿ ಹೇಳಬಾರದು ಅದಕ್ಕೆ ಏಕಾಂತ ಸ್ಥಳವು ಬೇಕು ॥ ೪೭ ॥ ಯಾಕಂದರೆ ನೀನು ಯವನ ರಾಜನು ನಾನು ಬ್ರಾಹ್ಮಣನು. ಇಲ್ಲಿ ನಾನು ನಿಮಗೆ ಏನಾದರೂ ಹೇಳಿದರೆ ನಿಮ್ಮ ಜಾತಿಯಲ್ಲಿ ಅನೇಕರು ನಿಮ್ಮನ್ನು ನಿಂದಿಸುವರು. ಆದ್ದರಿಂದ ಇಲ್ಲಿ ಹ್ಯಾಗೆ ಹೇಳಲಿ? ಎಂದನು ॥ ೪೮ ॥ ಆಗ ರಾಜನು ವಿನಯದಿಂದ— ಸ್ವಾಮೀ, ನಮ್ಮ ಜಾತಿಯಮೇಲೆ ನನ್ನ ಪ್ರೀತಿಯಿಲ್ಲ. ನನ್ನನ್ನು ನೀವೇ ಉದ್ಧಾರ ಮಾಡಬೇಕು ಎಂದು ಹೇಳಿದನು. ॥ ೪೯ ॥ ಈ ಪ್ರಕಾರ ರಾಜನ ಮನಸ್ಸು ಅನುತಪ್ತವಾಗಿರುವದನ್ನು ತಿಳಿದು ಆ ಬ್ರಾಹ್ಮಣನು— ॥ ೫೦ ॥ ಮಹಾರಾಜ, ನಿಮ್ಮ ಊರ ಹತ್ತರ ಇರುವ "ಪಾಪವಿನಾಶಿ' ತೀರ್ಥವು ಉತ್ತಮವಾದದ್ದಿರುತ್ತದೆ ನೀವು ಅಲ್ಲಿಗೆ ವಿನೋದಾರ್ಥವಾಗಿ ಸಹಜ ಹೋಗಬೇಕು. ॥ ೫೧ ॥ ಅಲ್ಲಿ ಉತ್ತಮವಾದ ಏಕಾಂತ ಸ್ಥಳವಿರುವದು ಆ ತೀರ್ಥದಲ್ಲಿ ನೀವು ಭಕ್ತಿಯಿಂದಲೂ ಏಕಚಿತ್ತದಿಂದಲೂ ಸ್ನಾನ ಮಾಡಬೇಕು. ಆಗ ಅಲ್ಲಿ ಒಬ್ಬ ಯತಿಗಳು ಬರುವರು ನೀವು ಅವರ ಭೆಟ್ಟಿಯಾಗಿ ಕೇಳಬೇಕು. ಅವರು ಮುಂದಿನ ಸಂಗತಿಯನ್ನು ಹೇಳುವರು ಎಂದನು. ॥ ೫೨ ॥ ಆ ಬ್ರಾಹ್ಮಣನ ಮಾತು ಕೇಳಿ ಆ ರಾಜನು ಸಂತೋಷಬಟ್ಟು ಸಕಲ ಪರಿವಾರದೊಡನೆ ತೀವ್ರವಾಗಿ ಆ ಪಾಪವಿನಾಶೀ ತೀರ್ಥಕ್ಕೆ ಹೋಗಿ, ॥ ೫೩ ॥ ಎಲ್ಲ ಪರಿವಾರದವರನ್ನು ದೂರ ಬಿಟ್ಟು, ತಾನೊಬ್ಬನೇ ಆ ತೀರ್ಥದ ಏಕಾಂತ ಸ್ಥಳಕ್ಕೆ ಹೋಗಿ ಸ್ನಾನ ಮಾಡಿದನು. ಕೂಡಲೆ ಅಲ್ಲಿಗೆ ಒಬ್ಬ ಯತಿಗಳು ಬಂದರು ॥ ೫೪ ॥ ರಾಜನು ಅವರಿಗೆ ಭಕ್ತಿಯಿಂದ ನಮಸ್ಕರಿಸಿ, ಅವರಿಗೆ ತನ್ನ ಹುಣ್ಣನ್ನು ತೋರಿಸಿ— ಸ್ವಾಮೀ, ಈ ಹುಣ್ಣು ಹ್ಯಾಗೆ ನೆಟ್ಟಗಾಗುವದು? ಎಂದು ಕೇಳಿದನು. ॥ ೫೫ ॥ ಆಗ ಆ ಯತಿಗಳು— ಎಲೈ ರಾಜನೇ, ನೀನು ಮಹಾನುಭಾವರ ದರ್ಶನ ಮಾಡಿದ ಕೂಡಲೇ ನಿನ್ನ ಹುಣ್ಣು ಹೋಗುವದು. ಈ ಬಗ್ಗೆ ಪೂರ್ವದಲ್ಲಿ ಆದ ಒಂದು ಸಂಗತಿಯನ್ನು ವಿಸ್ತಾರವಾಗಿ ಹೇಳುವೆನು ಕೇಳು. ॥ ೫೬-೫೭ ॥

ಪೂರ್ವದಲ್ಲಿ ಅವಂತೀ ಎಂಬ ದೊಡ್ಡ ನಗರದಲ್ಲಿ ಒಬ್ಬ ಬ್ರಾಹ್ಮಣನಿಗೆ ದುರಾಚಾರಿಯಾದ ಒಬ್ಬ ಮಗ ನಿದ್ದನು. ಅವನು ಮದೋನ್ಮತ್ತನಾಗಿ ಸ್ನಾನ-ಸಂಧ್ಯಾದಿಗಳನ್ನು ಬಿಟ್ಟು, ಅನ್ಯ ಮಾರ್ಗದಿಂದ ನಡೆಯುತ್ತ, ಸರ್ವ ಜಾತಿಯ ಸ್ತ್ರೀಯರಲ್ಲಿ ರಮಿಸುತ್ತಿದ್ದನು. ॥ ೫೮-೫೯ ॥ ಕಡೆಗೆ ಅವನು ಪಿಂಗಳಾ ಎಂಬ ಒಬ್ಬ ವೇಶ್ಯೆಯಲ್ಲಿ ಆಸಕ್ತನಾಗಿ, ಬ್ರಾಹ್ಮಣರ ಆಚಾರಗಳನ್ನೆಲ್ಲ ಬಿಟ್ಟು ಅಹೋರಾತ್ರಿ ಆಕೆಯನ್ನು ರಮಿಸುತ್ತ ಆಕೆಯ ಮನೆಯಲ್ಲಿಯೇ ಇದ್ದು, ಅಲ್ಲಿಯೇ ಊಟ ಮಾಡುತ್ತ, ಅವನು ಈ ಪ್ರಕಾರ ಪಾಪ ಮಾಡಿದನು ॥ ೬೦-೬೧ ॥ ಹೀಗಿರುವಾಗ ಒಂದು ದಿವಸ ಸಂಜೆಯಮುಂದೆ ಆ ವೇಶ್ಯೆಯ ಮನೆಗೆ "ಋಷಭ" ಎಂಬ ಮಹಾ ಯೋಗಿಯು ಬಂದನು. ॥ ೬೨ ॥ ಆ ಮುನಿಯನ್ನು ನೋಡಿ ಅವರಿಬ್ಬರೂ ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡಿ ಮನೆಯೊಳಗೆ ಕರಕೊಂಡು ಬಂದನು ॥ ೬೩ ॥ ಆಮೇಲೆ ಅವರನ್ನು ಉತ್ತಮಾಸನದಲ್ಲಿ ಕೂಡ್ರಿಸಿ, ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು, ಷೋಡಶೋಪಚಾರದಿಂದ ಪೂಜೆ ಮಾಡಿ, ಗಂಧಾಕ್ಷತೆಗಳನ್ನು ಹಚ್ಚಿದರು. ॥ ೬೪ ॥ ಆಮೇಲೆ ಕೊರಳಲ್ಲಿ ನಾನಾಜಾತಿಯ ಸುಗಂಧ ಪುಷ್ಪಗಳ ಹಾರಗಳನ್ನು ಹಾಕಿ, ಅನೇಕ ಪರಿಮಳ ದ್ರವ್ಯಗಳನ್ನು ಹಚ್ಚಿ ಪೂಜಿಸಿದರು ॥ ೬೫ ॥ ಬಳಿಕ ಅವರಿಬ್ಬರು ಅವರ ಚರಣತೀರ್ಥವನ್ನು ಪ್ರಾಶನಮಾಡಿ ನಾನಾತರದ ವಕ್ವಾನ್ನಗಳಿಂದ ಅವರಿಗೆ ಭೋಜನ ಮಾಡಿಸಿ, ॥ ೬೬ ॥ ಅವರ ಕೈ ಬಾಯಿ ಕಾಲುಗಳನ್ನು ತೊಳೆದು, ಅವರನ್ನು ಒಳ್ಳೇ ಉತ್ತಮವಾದ ಪಲ್ಲಂಗದ ಮೇಲೆ ಉತ್ತಮವಾದ ಹಾಸಿಗೆಯ ಮೇಲೆ ಕೂಡ್ರಿಸಿ, ॥ ೬೭ ॥ ತ್ರಯೋದಶ ಗುಣಯುಕ್ತ ತಾಂಬೂಲವನ್ನು ಕೊಟ್ಟು ಅವರನ್ನು ಆ ಮಂಚದ ಮೇಲೆ ಮಲಗಿಸಿ ಒಳ್ಳೇ ಭಕ್ತಿಯಿಂದ ಅವರ ಪಾದಸೇವೆ ಮಾಡುತ್ತಿದ್ದರು. ॥ ೬೮ ॥ ಅಷ್ಟರಲ್ಲಿ ಅವರಿಗೆ ನಿದ್ದೆ ಹತ್ತಿತು ಆಗ ಅವರಿಬ್ಬರೂ ಎದ್ದುನಿಂತು ಭಕ್ತಿಯಿಂದ ಸೇವೆ ಮಾಡಿದರು. ॥ ೬೯ ॥ ಸೂರ್ಯೋದಯವಾದಕೂಡಲೆ ಆ ಯೋಗಿವರ್ಯರು ಎದ್ದು, ಅವರ ಅಪ್ಪಣೆಯನ್ನು ಪಡೆದುಕೊಂಡು ಸಂತೋಷದಿಂದ ತಮ್ಮ ಸ್ಥಳಕ್ಕೆ ಹೊರಟುಹೋದರು. ॥ ೭೦ ॥ ಮುಂದೆ ಅವರಿಬ್ಬರು ಕೆಲವು ದಿವಸ ಕಾಲ ಕಳೆಯುತ್ತಿರಲು ಅವರ ತಾರುಣ್ಯವು ಹೋಗಿ ಮುದುಕರಾದರು ॥ ೭೧ ॥ ಮುಂದೆ ಕೆಲವು

ದಿವಸಗಳ ಮೇಲೆ ಆ ಬ್ರಾಹ್ಮಣ ಮತ್ತು ಪಿಂಗಳೆಯರು ಮರಣಹೊಂದಿದರು. ॥ ೭೨ ॥ ಆ ದುರಾಚಾರಿ ಬ್ರಾಹ್ಮಣನಾದರೂ ಆ ಯೋಗಿಯನ್ನು ಪೂಜಿಸಿದ ಪುಣ್ಯದಿಂದ ದಶಾರ್ಣವ ದೇಶದ ರಾಜಾ ವಜ್ರಬಾಹುವಿನ ಪತ್ನಿಯ ಹೊಟ್ಟೆಯಿಂದ ರಾಜಪುತ್ರನಾಗಿ ಹುಟ್ಟಿದನು. ರಾಜಾ, ಆ ಮುಂದಿನ ಕಥೆಯನ್ನು ಹೇಳುವೆನು ಕೇಳು. ವಜ್ರಬಾಹುವಿನ ಹಿರೇ ಹೆಂಡತಿಯಾದ ಸುಮತಿಯು ಬಸುರು ಆದಾಗ ಆ ವಜ್ರಬಾಹು ರಾಜನು ಅನೇಕ ಸಮಾರಂಭಗಳನ್ನು ಮಾಡಿದನು. ॥ ೭೩-೭೪-೭೫ ॥ ಇದನ್ನು ಕಂಡು ಆ ರಾಜನ ಚಿಕ್ಕ ಹೆಂಡತಿಯು ತಾನು ಬಸುರಾಗಲಿಲ್ಲವೆಂದು ಹಿರೇ ಹೆಂಡತಿಯ ಮೇಲೆ ದ್ವೇಷ ಮಾಡಿ, ॥ ೭೬ ॥ ನಾನಾತರದ ಯತ್ನದಿಂದ ಆಕೆಗೆ ಹಾವಿನ ವಿಷವನ್ನು ಕುಡಿಸಿದಳು. ದಾರುಣವಾದ ಆ ವಿಷವು ಆಕೆಯ ಮೈಯಲ್ಲಿಯೂ ಆ ಗರ್ಭಕ್ಕೂ ಭೇದಿಸಿತು. ॥ ೭೭ ॥ ದೈವಯೋಗದಿಂದ ಆಕೆಗೆ ಮರಣ ಮಾತ್ರ ಬರಲಿಲ್ಲ ಆದರೆ ಆಕೆಯ ಸರ್ವ ಶರೀರದಲ್ಲಿ ಹುಣ್ಣುಗಳು ಮಾತ್ರ ಒಡೆದವು. ಆದರಿಂದ ಆಕೆಯು ಚಿಂತೆ ಮಾಡುತ್ತ ಬಹಳ ಕಷ್ಟವನ್ನು ಅನುಭವಿಸುತ್ತಿದ್ದಳು ॥ ೭೮ ॥ ಆ ಕಷ್ಟದಲ್ಲಿಯೂ ಆಕೆಯು ಗಂಡು ಕೂಸನ್ನು ಪ್ರಸೂತಳಾದಳು. ಆದರೆ ತಾಯಿಯಂತೆ ಆ ಕೂಸಿನ ಮೈತುಂಬಾ ಹುಣ್ಣುಗಳಾಗಿದ್ದವು. ॥ ೭೯ ॥ ಸರ್ವಾಂಗದಲ್ಲಿ ವಿಷವು ವ್ಯಾಪಿಸಿದ್ದರಿಂದ ಆ ಕೂಸು ಅಹೋರಾತ್ರಿ ಒಂದೇಸವನೆ ಅಳುತ್ತಿತ್ತು. ಅದನ್ನು ಕಂಡು ಆ ರಾಜನು ಈಗ ಏನು ಮಾಡಲಿ ? ಎಂದು ಬಹು ಚಿಂತೆಯಿಂದ ದುಃಖಿಸುತ್ತಿದ್ದನು. ॥ ೮೦ ॥ ಆ ತಾಯಿ-ಮಗನ ಬೇನೆಯ ಚಿಕಿತ್ಸೆಗಾಗಿ ದೇಶೋದೇಶಗಳ ವೈದ್ಯರನ್ನು ಕರೆಯಿಸಿ, ಅಪಾರ ದುಡ್ಡು ಖರ್ಚು ಮಾಡಿ ಔಷಧ ಕೊಡಿಸಿದನು. ಏನು ಮಾಡಿದರೂ ನೆಟ್ಟಗಾಗಲಿಲ್ಲ ॥ ೮೧ ॥ ಆ ತಾಯಿ ಮತ್ತು ಮಗನು ವ್ರಣಗಳ ಬಾಧೆಯಿಂದ ನಿದ್ರೆಯಿಲ್ಲದೆ ಕಷ್ಟಪಡುತ್ತಿರಲು ಸರ್ವಾಂಗದಲ್ಲಿ ಹುಳಗಳು ಬಿದ್ದವು. ॥೮೨॥ ಅವರು ಈ ರೀತಿ ಕಷ್ಟಪಡುತ್ತಿರುವದನ್ನು ಕಂಡು ರಾಜನು ತಾನೂ ದುಃಖಿಸುತ್ತ ಅಹೋರಾತ್ರಿ ನಿದ್ರೆಯಿಲ್ಲದೆ ಇರುತ್ತಿದ್ದನು. ॥ ೮೩ ॥ ಬರಬರುತ್ತ ಆ ತಾಯಿ-ಮಗನು ಶರೀರ ವ್ಯಥೆಯಿಂದ ಸ್ವಲ್ಪಾದರೂ ಅನ್ನ-ನೀರಗಳಿಲ್ಲದೆ ಕ್ಷೀಣರಾದರು. ॥ ೮೪ ॥ ಒಂದು ದಿವಸ ರಾಜನು ತನ್ನ ಸ್ತ್ರೀ-ಪುತ್ರರು ಕಷ್ಟಬಡುತ್ತಿರುವದನ್ನು ನೋಡಿ ತಾನೂ

ಅತಿ ಕಷ್ಟಬಡುತ್ತ ದುಃಖಿಸುತ್ತ || ೮೫ || ಮನಸಿನಲ್ಲಿ— ಇವರ ಬೇನೆಯ ಪ್ರತೀಕಾರಕ್ಕಾಗಿ ನಾನಾತರದ ಔಷಧ ಕೊಡಿಸಿದರೂ ಗುಣವಾಗಲಿಲ್ಲ ಇನ್ನು ಯಾವ ರೀತಿಯಿಂದ ಪ್ರತೀಕಾರ ಮಾಡಲಿ? ಏನು ಮಾಡಲಿ? || ೮೬ || ಸ್ತ್ರೀ-ಪುತ್ರರ ಸ್ಥಿತಿಯನ್ನು ನೋಡಿದರೆ ಅವರು ಜೀವಂತ ಶವವಾಗಿರುತ್ತಾರೆ! ಏನು ಗತಿ ಮಾಡಲಿ? ನಿಶ್ಚಯವಾಗಿ ಇವರ ಬೇನೆಯು ಕಡಿಮೆಯಾಗುವದಿಲ್ಲ ಇವರು ಕಷ್ಟಬಡುವದನ್ನು ನಾನು ಹ್ಯಾಗೆ ನೋಡಲಿ? || ೮೭ || ಇವರನ್ನು ನೋಡಿದರೆ ಮನಸ್ಸಿಗೆ ಬಹಳ ವ್ಯಥೆಯಾಗುತ್ತದೆ. ಸತ್ಯವಾಗಿ ಇವರು ನೆಟ್ಟಗಿಲ್ಲ, ಏನು ಮಾಡಲಿ? || ೮೮ || ಇವರನ್ನು ನೋಡಿದರೆ ನನ್ನ ದೇಹಕ್ಕೆ ಬಹಳ ಶ್ರಮವಾಗುವದು. ಕಾರಣ ಇವರನ್ನು ಅರಣ್ಯದಲ್ಲಿ ಒಯ್ದು ಬಿಟ್ಟುಬಿಡಬೇಕು. || ೮೯ || ಪಾಪಿಗಳಾದವರು ತಮ್ಮ ಪಾಪದ ಫಲವನ್ನು ತಾವೇ ಅನುಭವಿಸಿ ಬದುಕಬೇಕು ಅಥವಾ ಸಾಯಬೇಕು. ಅನುಭವಿಸಿದ ಹೊರತು ಪಾಪವು ಬಿಡುವದಿಲ್ಲ. || ೯೦ || ಎಂದು ವಿಚಾರಿಸಿ ತನ್ನ ಸಾರಥಿಯನ್ನು ಕರೆದು— ಎಲೈ ಸೂತನೇ, ಈ ನನ್ನ ಸ್ತ್ರೀ-ಪುತ್ರರನ್ನು ಒಯ್ದು ನಿರ್ಜನವಾದ ಅರಣ್ಯದಲ್ಲಿ ತೀವ್ರವಾಗಿ ಬಿಟ್ಟು ಬಾ. || ೯೧-೯೨-೯೩ || ಎಂದು ವಿಸ್ತಾರವಾಗಿ ಹೇಳಿ ಅವನಿಗೆ ರಥವನ್ನು ಸಿದ್ಧಮಾಡಿ ಕೊಟ್ಟನು. ಆಗ ಆ ಸಾರಥಿಯು ಅವರನ್ನು ಕರಕೊಂಡು ತೀವ್ರವಾಗಿ ಹೊರಟುಹೋದನು. || ೯೪ || ಆಗ ಆ ರಾಣಿಯ ದಾಸ-ದಾಸಿಯರೂ, ತಾಯಿ-ತಂದೆಗಳೂ, ಬಂಧುಗಳೂ, ಆ ಊರ ಸಮಸ್ತ ಸ್ತ್ರೀ-ಪುರುಷರೂ— ಆಹಾ! ದುರಾಚಾರಿಯೂ ಮಹಾ ಪಾಪಿಯೂ ಆದ ಈ ರಾಜನು ತನ್ನ ಸ್ತ್ರೀ-ಪುತ್ರರನ್ನು ಸಾಯಲಿಕ್ಕೆ ಅರಣ್ಯಕ್ಕೆ ಕಳಿಸುತ್ತಾನೆ ನೋಡಿರಿ! ಎಂದು ಪ್ರಳಾಪಿಸುತ್ತಿದ್ದರು. || ೯೫-೯೬ || ಅತ್ತ ಆ ಸಾರಥಿಯು ಆ ರಥವನ್ನು ನರಸಂಚಾರವಿಲ್ಲದಂಥ ಮಹಾ ಭಯಂಕರವಾದ ಅರಣ್ಯಕ್ಕೆ ಒಯ್ದು ಅವರನ್ನು ಅಲ್ಲಿ ಬಿಟ್ಟು ತಿರುಗಿ ಬಂದು— ಮಹಾ ದುರ್ಗಮವಾದ ಅರಣ್ಯದಲ್ಲಿ ಬಿಟ್ಟುಬಂದೆನೆಂದು ಆ ರಾಜನಿಗೆ ಹೇಳಿದನು. || ೯೭-೯೮ || ಅದನ್ನು ಕೇಳಿ ರಾಜನು ಸಂತೋಷಬಟ್ಟು, ತನ್ನ ಚಿಕ್ಕ ಹೆಂಡತಿಗೆ ಎಲ್ಲ ಸಂಗತಿಯನ್ನು ಹೇಳಿದನು. ಇಬ್ಬರೂ ಸಂತೋಷಬಟ್ಟರು. ಆ ತಾಯಿ-ಮಗನು ಮಾತ್ರ ಅರಣ್ಯದಲ್ಲಿ ಉಳಿದರು. || ೯೯ || ಈ ಪ್ರಕಾರ ಆ ಮಾತಾ-

ಪುತ್ರರು ಮಹಾ ದುಃಖದಿಂದ ಪೀಡಿತರಾಗಿ ಅನ್ನ-ನೀರುಗಳಿಲ್ಲದೆ ಆ ಅರಣ್ಯದಲ್ಲಿ ಬಹಳ ಕಷ್ಟಬಡುತ್ತಿದ್ದರು. ॥ ೧೦೦ ॥ ಅವರ ದೇಹದಲ್ಲಿ ಹುಣ್ಣುಗಳು ದೊಡ್ಡವಾದ್ದರಿಂದ ಆಕೆಯು ಆ ಕೂಸನ್ನೆತ್ತಿಕೊಂಡು ದೊಡ್ಡ ದೊಡ್ಡ ಮುಳ್ಳು-ಕಲ್ಲುಗಳುಳ್ಳಂಥ ಆರಣ್ಯದಲ್ಲಿ ನಡೆಯಲಿಕ್ಕೆ ಶಕ್ತಳಿದ್ದಿಲ್ಲ ॥ ೧೦೧ ॥ ಆದರೂ ಆಕೆಯು ಆ ಕೂಸನ್ನು ಬಗಲಲ್ಲಿ ಕರಕೊಂಡು ಮಂದಗಮನದಿಂದ ನಡೆಯುತ್ತ ತನ್ನ ಕರ್ಮವನ್ನು ನೆನಪಿಗೆ ತಂದುಕೊಂಡು— ಈಗ ಏನು ಮಾಡಲಿ ? ಎಂದು ಅಂದಳು. ॥ ೧೦೨ ॥ ಆ ವನದಲ್ಲಿ ಹುಲಿ-ಸಿಂಹ ಮೊದಲಾದ ಮೃಗಗಳೂ ಅಪರಿಮಿತ ದೊಡ್ಡ ದೊಡ್ಡ ಸರ್ಪಗಳೂ ಸಂಚರಿಸುತ್ತಿದ್ದವು. ॥ ೧೦೩ ॥ ಆಗ ಆಕೆಯು ಮನಸಿನಲ್ಲಿ— ನನ್ನನ್ನು ಹುಲಿಯಾದರೂ ಬಂದು ತಿಂದುಬಿಟ್ಟರೆ ನಾನು ಪಾಪದಿಂದ ಮುಕ್ತಳಾಗುವೆನು ! ಇನ್ನು ನನ್ನ ಜನ್ಮ ಸಾಕು ! ಈ ರೀತಿ ನಾನು ವ್ಯರ್ಥವಾಗಿ ಬದುಕಿದ್ದು ಫಲವೇನು ? ॥ ೧೦೪ ॥ ಎಂದು ಅನ್ನುತ್ತ ಅಳುತ್ತ ಮುಂದೆ ಹೋಗುತ್ತ ಕ್ಷಣಕ್ಷಣಕ್ಕೆ ಪುತ್ರನ ಸಹಿತವಾಗಿ ಬೀಳುತ್ತ ಏಳುತ್ತ ಚಿಂತಿಸುತ್ತ ವನದಲ್ಲಿ ಹೋಗುತ್ತಿದ್ದಳು. ॥ ೧೦೫ ॥ ಆಕೆಯು ನೀರಿಲ್ಲದೆ ತೃಷಾಕ್ರಾಂತಳಾಗಿ ಹುಣ್ಣುಗಳಿಂದ ಪೀಡಿತಳಾಗಿ ಹುಲಿ, ಸರ್ಪ, ವೇತಾಳ, ಬ್ರಹ್ಮರಾಕ್ಷಸ, ವನಗಜ, ಕರಡಿಗಳನ್ನು ನೋಡಿ ಹೆದರುತ್ತಿದ್ದಳು. ಆಕೆಯ ಕೇಶಗಳು ಬಿಚ್ಚಿ ಪಾದಗಳ ವರೆಗೆ ಇಳಿಬಿದ್ದಿದ್ದವು. ಹೋಗ ಹೋಗುತ್ತ ಆಕೆಯ ಕಾಲಿಗೆ ಮುಳ್ಳು-ಕಲ್ಲುಗಳು ಬಡೆಯುತ್ತಿದ್ದವು. ॥ ೧೦೬-೧೦೭ ॥ ಈ ಪ್ರಕಾರ ಆಕೆಯು ಆ ಕಾಡಿನಲ್ಲಿ ಅಡ್ಡಾಡುತ್ತ ಮುಂದೆ ಹೋಗುತ್ತಿರಲು ಅಲ್ಲಿ ದನಗಳೂ ಗೋಪಾಲಕರೂ ಅಡ್ಡಾಡುತ್ತಿರುವದನ್ನು ನೋಡಿ, ಅವರ ಹತ್ತರ ಹೋಗಿ ಒಳ್ಳೇ ವಿನಯದಿಂದಲೂ ದೀನ ಸ್ವರದಿಂದಲೂ— ಅಯ್ಯಾ, ಗೋಪಾಲಕರೇ, ನನ್ನ ಕೂಸಿಗೆ ಸ್ವಲ್ಪ ನೀರನ್ನು ಕೊಡಿರಿ ಎಂದು ಕೇಳಿದಳು. ॥ ೧೦೮-೧೦೯ ॥ ಆಗ ಅವರು— ಅವ್ವಾ, ನೀವು ಅಲ್ಲಿ ಕಾಣುವ ಮನೆಗೆ ಹೋಗಿರಿ. ಅಲ್ಲಿ ನಿಮಗೆ ಬೇಕಾದಷ್ಟು ಅನ್ನ-ನೀರುಗಳು ಸಿಗುವವು. ॥ ೧೧೦ ॥ ಎಂದು ಹೇಳಿ ಅಲ್ಲಿಗೆ ಹೋಗಲಿಕ್ಕೆ ಆಕೆಗೆ ಮಾರ್ಗವನ್ನು ತೋರಿಸಿ, ಮೆಲ್ಲಮೆಲ್ಲಗೆ ಹೋಗಿರಿ ಎಂದು ಹೇಳಿದರು. ಆಗ ಆ ರಾಜಪತ್ನಿಯು ಮಾರ್ಗವನ್ನು ಕ್ರಮಿಸುತ್ತ ಆ ಊರೊಳಗೆ ಹೊಕ್ಕಳು. ॥ ೧೧೧ ॥ ಆ ಗ್ರಾಮದಲ್ಲಿ

ಅಪರಂಪಾರ ಸ್ತ್ರೀ-ಪುರುಷರು ಕಂಡರು. ಆ ರಾಜಪತ್ನಿಯು ಸಮಾಧಾನಬಟ್ಟು, ಆ ಸ್ತ್ರೀಯರ ಹತ್ತರ ಬಂದು ಅವರನ್ನು ಕುರಿತು— ಎಲೌ ಸ್ತ್ರೀಯರೇ, ಇಲ್ಲಿಯ ಯಾವತ್ತು ಜನರು ಸಂತೋಷವುಳ್ಳವರಾಗಿ ಕಾಣುತ್ತೀರಿ. ಇಲ್ಲಿಯ ರಾಜನ್ಯಾರು ? ಎಂದು ಕೇಳಿದಳು. || ೧೧೨ || ಆಗ ಅವರು— ಅವ್ವಾ, ಇಲ್ಲಿ ಮಹಾ ಧನಿಕನೂ ಪುಣ್ಯಾತ್ಮನೂ ಆದ ವೈಶ್ಯ ರಾಜನಿರುವನು. || ೧೧೩ || ಅವನ ಹೆಸರು ಪದ್ಮಾಕರನೆಂಬುವದು. ಅವನು ಒಳ್ಳೇ ಹೆಚ್ಚಿನ ಪುಣ್ಯವಂತನಿರುವನು. ಅವನು ನಿನ್ನನ್ನು ಉತ್ತಮ ರೀತಿಯಾಗಿ ರಕ್ಷಿಸುವನು ಎಂದು ಆಕೆಗೆ ಹೇಳಿದರು || ೧೧೪ || ಅಷ್ಟರಲ್ಲಿ ಆ ರಾಜನ ಮನೆಯ ಮನೋಹರ ದಾಸಿಯರು ಆಕೆಯ ಹತ್ತರ ಬಂದು || ೧೧೫ || ಆ ರಾಜಪತ್ನಿಯ ಎಲ್ಲ ವೃತ್ತಾಂತವನ್ನು ಕೇಳಿ, ಆಕೆಯನ್ನು ಆ ರಾಜನ ಮನೆಯೊಳಗೆ ಕರಕೊಂಡು ಹೋಗಿ ತಮ್ಮ ಒಡೆಯನಿಗೆ ಆದ್ಯಂತವಾಗಿ ಸರ್ವ ಸಂಗತಿಯನ್ನು ಹೇಳಿದರು || ೧೧೬ || ಆಗ ಆ ರಾಜನು ಆಕೆಯ ಸ್ಥಿತಿಯನ್ನು ಕಂಡು ಅತ್ಯಂತ ಅಂತಃಕರಣದಿಂದ ತನ್ನ ಅರಮನೆಯೊಳಗೆ ಕರಕೊಂಡು ಹೋಗಿ, ಆಕೆಯನ್ನು ಒಂದು ಸ್ವತಂತ್ರ ಸ್ಥಾನದಲ್ಲಿಟ್ಟು || ೧೧೭ || ಮತ್ತೆ ಆಕೆಯ ಸಕಲ ವೃತ್ತಾಂತವನ್ನು ಕೇಳಿ, ಆ ರಾಜನು ಕೃಪಾವಂತನಾಗಿ ಆಕೆಗೆ ನಿತ್ಯ ಬೇಕಾದಷ್ಟು ಅನ್ನ-ವಸ್ತ್ರಗಳನ್ನು ಕೊಟ್ಟು ರಕ್ಷಿಸುತ್ತಿದ್ದನು. || ೧೧೮ || ಈ ಪ್ರಕಾರ ಆ ತಾಯಿ-ಮಕ್ಕಳು ಆ ರಾಜನ ಮನೆಯಲ್ಲಿರುವಾಗ ಅವರ ವ್ರಣಗಳ ಬಾಧೆಯು ಬರಬರುತ್ತ ಮತ್ತಿಷ್ಟು ಹೆಚ್ಚಾಯಿತು. ಸ್ವಲ್ಪಾದರೂ ಕಡಿಮೆಯಾಗಲಿಲ್ಲ. || ೧೧೯ || ಆದರಿಂದ ಅವಳಿಗೆ ಪ್ರಾಣಾಂತವಾಗುತ್ತಿತ್ತು. || ೧೨೦ || ಹೀಗೆ ನಡೆದಿರುವಾಗ ಒಂದು ದಿವಸ ಆ ಕೂಸು ಮರಣ ಹೊಂದಿತು ಆಗ ಆ ರಾಣಿಯು ಬಹು ರೀತಿಯಿಂದ ಪ್ರಲಾಪ ಮಾಡಿದಳು || ೧೨೧ || ಆದರಿಂದ ಆ ಕೂಡಲೇ ಅವಳು ಮೂರ್ಛೆ ಹೊಂದಿ ಭೂಮಿಮೇಲೆ ಬಿದ್ದು ಕೆಲವು ಹೊತ್ತಿನ ಮೇಲೆ ಎದ್ದು ತನ್ನ ಪೂರ್ವ ಕರ್ಮವನ್ನು ನೆನೆದು ಮಹಾ ಶೋಕ ಮಾಡಹತ್ತಿದಳು. || ೧೨೨ || ಆಗ ಆ ವೈಶ್ಯ ರಾಜಪತ್ನಿಯು ಬಂದು ಅನೇಕ ರೀತಿಯಿಂದ ಆಕೆಯನ್ನು ಸಮಾಧಾನಪಡಿಸುತ್ತಿದ್ದಳು. ಏನು ಮಾಡಿದರೂ ಆಕೆಯ ದುಃಖವು ಕಡಿಮೆಯಾಗಲಿಲ್ಲ. || ೧೨೩ || ಬಳಿಕ ಆಕೆಯು ತನ್ನ ಪೂರ್ವದ ಸ್ಥಿತಿಯನ್ನು

ನೆನಿಸಿ ನಾನಾ ರೀತಿಯಿಂದ ದುಃಖಿಸುತ್ತ— ಹಾ! ಅಪ್ಪಾ! ಸೂರ್ಯನಂತಿರುವ ಮಗನೇ! ಅಯ್ಯೋ! ನನ್ನ ಕೂಸೇ! ಈಗ ನೀನು ನನ್ನನ್ನು ಬಿಟ್ಟು ಎಲ್ಲಿಗೆ ಹೋದಿ? ||೧೨೪|| ರಾಜಕುಮಾರಾ, ಪೂರ್ಣ ಚಂದ್ರಾ, ನನ್ನ ಆನಂದ ಸಾಗರಾ, ತಾತಾ, ನೀನು ಏನೂ ಮಾತಾಡುವದಿಲ್ಲವಲ್ಲಾ? ಇದು ನಿನಗೆ ಯೋಗ್ಯವಾಗುತ್ತದೇನು? ||೧೨೫|| ಅಪ್ಪಾ, ನಾನು ನಿನ್ನ ಸಲುವಾಗಿ ನನ್ನ ತಾಯಿ-ತಂದೆ-ಬಂಧು-ಬಳಗ ಮೊದಲಾದ ಯಾವತ್ತರನ್ನು ಬಿಟ್ಟು ಬಂದು, ನೀನು ನನ್ನನ್ನು ರಕ್ಷಿಸುವಿಯೆಂದು ಪೂರ್ಣ ಭರವಸೆ ಮಾಡಿದ್ದೆನು. ||೧೨೬|| ಅಪ್ಪಾ, ಮಗನೆ, ಈಗ ನೀನು ನನ್ನನ್ನು ಅನಾಥಳನ್ನಾಗಿ ಮಾಡಿ ಬಿಟ್ಟು ಹೋಗುತ್ತೀಯಲ್ಲಾ? ಅಂದಮೇಲೆ ಇನ್ನು ನನ್ನನ್ನು ರಕ್ಷಿಸುವವರ್ಯಾರು? ಇನ್ನುಮೇಲೆ ನಾನು ಪ್ರಾಣವನ್ನು ಬಿಡುವೆನು ಎಂದು ಅಂದು, ||೧೨೭|| ಆ ರಾಜಪತ್ನಿಯು ದೀರ್ಘ ಸ್ವರದಿಂದ ಅಳುತ್ತಿದ್ದಳು. ಆಕೆಯ ದುಃಖವನ್ನು ಕಂಡು ಆ ಊರ ಯಾವತ್ತು ಜನರು ಬಹಳವಾಗಿ ದುಃಖಿಸುತ್ತಿದ್ದರು. ||೧೨೮|| ಎಲೈ ನಾಮಧಾರಕನೇ, ಯಾವತ್ತು ದುಃಖಗಳಿಗಿಂತ ಪುತ್ರಶೋಕವು ಮಹಾ ಅಗ್ನಿಯಂತಾಗಿ ತಾಯಿ-ತಂದೆಗಳನ್ನು ಸುಟ್ಟು ಭಸ್ಮ ಮಾಡಿಬಿಡುವದು. ||೧೨೯|| ಆ ರಾಜಪತ್ನಿಯು ಈ ಪ್ರಕಾರ ದುಃಖಿಸುತ್ತಿರಲು ಪೂರ್ವಜನ್ಮದಲ್ಲಿಯ ಉಪಕಾರ ಸ್ಮರಿಸಿ ಆ ಮಹಾಜ್ಞಾನಿಯಾದಂಥ ಋಷಭ ಯೋಗೀಶ್ವರರು ಜ್ಞಾನ ದೃಷ್ಟಿಯಿಂದ ಎಲ್ಲ ಸ್ಥಿತಿಯನ್ನು ತಿಳಿದು, ಉಪಕಾರ ಮಾಡುವದಕ್ಕಾಗಿ ಕೂಡಲೆ ಅಲ್ಲಿಗೆ ಬಂದರು. ||೧೩೦|| ಆ ಯೋಗೀಶ್ವರರನ್ನು ಕಂಡು ಆ ರಾಜನು ಎದ್ದು ಬಂದು, ಅವರಿಗೆ ವಂದಿಸಿ, ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು, ಉತ್ತಮಾಸನದಲ್ಲಿ ಕೂಡ್ರಿಸಿ ಷೋಡಶೋಪಚಾರಗಳಿಂದ ಅವರನ್ನು ಪೂಜಿಸಿದನು. ||೧೩೧|| ಆಗ ಆ ಯೋಗೀಶ್ವರರು ಸಂತೋಷಹೊಂದಿ ಆ ಪದ್ಮಾಕರ ರಾಜನನ್ನು ಕುರಿತು— ರಾಜಾ, ನಿಮ್ಮ ಮನೆಯಲ್ಲಿ ಒಳ್ಳೇ ದೀರ್ಘ ಸ್ವರದಿಂದ ಶೋಕ ಮಾಡುವವರು ಯಾರು? ಯಾಕೆ ಶೋಕ ಮಾಡುತ್ತಾರೆ? ಎಂದು ಕೇಳಿದರು. ||೧೩೨|| ಆಗ ಆ ರಾಜನು ಆ ಯೋಗಿಗಳಿಗೆ ಆ ರಾಣಿಯ ಎಲ್ಲ ಸಂಗತಿಯನ್ನು ವಿಸ್ತಾರವಾಗಿ ಹೇಳಿದನು. ಆಗ ಆ ಕೃಪಾವಂತರಾದ ಆ ಯೋಗಿಗಳು

ಆ ವಸುಮತಿಯ ಹತ್ತಿರ ಬಂದು— ॥ ೧೩೩ ॥ ಅಮ್ಮಾ, ನೀನು ಮೂಢತನದಿಂದ ಇಷ್ಟ್ಯಾಕೆ ದುಃಖಿಸುತ್ತೀ? ಈ ಭೂಮಿಯಲ್ಲಿ ಹುಟ್ಟಿದವರ್ಯಾರು ? ಸತ್ತವರ್ಯಾರು ? ಹೇಳು. ॥ ೧೩೪ ॥ ಈ ದೇಹವು ಸ್ಥಿರವಲ್ಲ, ನಾಶವಾಗತಕ್ಕದ್ದೇ! ನದಿಯ ಮೇಲಿರುವ ನೀರಗುಳ್ಳಿ ಹಾಗು ನೊರೆಗಳು ಕಂಡುಕೂಡಲೇ ಅವು ನಾಶವಾಗುವಂತೆ ಈ ದೇಹವುಸಹ ಕೆಲವುಕಾಲ ಕಂಡು ಆಮೇಲೆ ಕಾಣದಂತಾಗುತ್ತದೆಂದು ತಿಳಿ. ॥ ೧೩೫ ॥ ಈ ದೇಹವು ಪಂಚಭೂತಗಳಿಂದಾಗಿ ಒಂದು ಆಕಾರವಾಗಿ ತೋರುತ್ತದೆ. ॥ ೧೩೬ ॥ ಆ ಪಂಚಭೂತಗಳು ತಮ್ಮ ತಮ್ಮ ಸ್ಥಾನಗಳಲ್ಲಿ ಹೋಗಿ ಕೂಡಿಕೊಂಡಮೇಲೆ ಅಲ್ಲಿ ಏನೂ ಉಳಿಯುವದಿಲ್ಲ. ಶೂನ್ಯವಾಗುವದು. ಆದ್ದರಿಂದ ನೀನು ಈಗ ದುಃಖಮಾಡುವ ಕಾರಣವಿಲ್ಲ. ವ್ಯರ್ಥವಾಗಿ ಯಾಕೆ ದುಃಖಿಸುತ್ತೀ? ॥ ೧೩೭ ॥ ಪೂರ್ವಕರ್ಮದ ಗುಣಾನುಸಾರವಾಗಿ ಪ್ರಾಣಿಗಳ ಉತ್ಪತ್ತಿಯದೆ. ಯೋಗ್ಯ ಕರ್ಮದಿಂದ ಸದ್ಗತಿಯಾಗಿ ಸುಖವಾಗುವದು. ಅವರಿಗೆ ಯಮನ ಬಾಧೆಯಾಗುವದಿಲ್ಲ. ಅನ್ಯಮಾರ್ಗದಿಂದ ನಡೆದರೆ ಅವರ ಕರ್ಮದ ವಾಸನಾಪ್ರಕಾರ ಅವರಿಗೆ ಫಲವಾಗುವದು. ॥ ೧೩೮ ॥ ಮಾಯಾಗುಣದಿಂದ ಮತ್ತೆ ಮಾಯೆಯು ಹುಟ್ಟಿ, ಅದರಿಂದ ಸತ್ವ-ರಜ-ತಮಗಳೆಂಬ ಮೂರು ಗುಣಗಳು ಹುಟ್ಟುತ್ತವೆ ಆ ಗುಣಗಳಿಂದಲೇ ಮನುಷ್ಯ ದೇಹದ ಲಕ್ಷಣಗಳೂ ಬೇರೆ ಬೇರೆಯಾಗಿರುವವು. ॥ ೧೩೯ ॥ ಸತ್ವಗುಣದಿಂದ ದೇವತೆಗಳು, ರಜೋಗುಣದಿಂದ ಮನುಷ್ಯರು. ॥ ೧೪೦ ॥ ತಮೋ-ಗುಣದಿಂದ ರಾಕ್ಷಸರೂ ಹುಟ್ಟುವರು. ಅವರವರ ಗುಣದಂತೆ ಜನ್ಮಗಳಾಗುವವು ಈ ದೇಹವು ಯಾರಿಗೂ ಸ್ಥಿರವಲ್ಲ. ॥ ೧೪೧ ॥ ಈ ಸಂಸಾರದಲ್ಲಿ ಮನುಷ್ಯನು ತನ್ನ ಕರ್ಮಾನುಸಾರಗುಣದಿಂದ ಹುಟ್ಟಿ, ಪೂರ್ವದ ಪಾಪ-ಪುಣ್ಯಗಳಂತೆ ಈ ಜನ್ಮದಲ್ಲಿ ಸುಖ-ದುಃಖಗಳನ್ನು ಅನುಭವಿಸುವನು. ॥ ೧೪೨ ॥ ದೇವತೆಗಳ ಶರೀರವು ಕಲ್ಪಕೋಟಿ ವರ್ಷಗಳವರೆಗೆ ಇದ್ದರೂ ಕಡೆಗೆ ಅದೂ ನಾಶವಾಗುವದೇ ಸರಿ, ಅಂದಮೇಲೆ ಮನುಷ್ಯರ ಪಾಡೇನು? ॥ ೧೪೩ ॥ ಆದಕಾರಣ ಜ್ಞಾನವಂತರು ಹುಟ್ಟಿದರೆ ಸಂತೋಷಬಡುವದಿಲ್ಲ. ಮರಣವಾದರೆ ದುಃಖಿಸುವದಿಲ್ಲ. ಆದ್ದರಿಂದ ಈ ದೇಹವು ಸ್ಥಿರವಲ್ಲವೆಂದು ತಿಳಿ. ॥ ೧೪೪ ॥ ಗರ್ಭದ ಉತ್ಪತ್ತಿಯಾದಕೂಡಲೆ

ಆದಕ್ಕೆ ನಾಶವುಂಟೆಂದು ಎಲ್ಲರೂ ತಿಳಿಯುವರು, ಕೆಲವರು ಬಾಲ್ಯದಲ್ಲಿ, ಕೆಲವರು ಯೌವನದಲ್ಲಿ, ಕೆಲವರು ವಾರ್ಧಿಕ್ಯದಲ್ಲಿ ಸಾಯುವರು. ॥ ೧೪೫ ॥ ಪೂರ್ವಜನ್ಮ ಕರ್ಮದ ಗುಣಾನುಸಾರವಾಗಿ ಈಗ ಕರ್ಮಗಳು ಘಟಿಸುತ್ತವೆ. ಮಾಯಾಮೋಹದಿಂದ ಈ ನರದೇಹಕ್ಕೆ ಮಗನೆಂದು ಅನ್ನುವಿ, ॥ ೧೪೬ ॥ ಬ್ರಹ್ಮನ ಬರಹದಂತೆ ಎಲ್ಲವೂ ಆಗುವದು. ಕಾಲಕರ್ಮವನ್ನು ಮೀರಲಿಕ್ಕೆ ಯಾರಿಗೂ ಶಕ್ಯವಿಲ್ಲವೆಂದು ತಿಳಿ. ॥ ೧೪೭ ॥ ಅಮ್ಮಾ. ಈ ಪ್ರಕಾರವಾದ ಅನಿತ್ಯ ಶರೀರಕ್ಕೆ ನೀನು ಯಾಕೆ ದುಃಖಿಸುತ್ತೀ ? ನಿನ್ನ ಪೂರ್ವ ಪರಂಪರೆಯು ಹ್ಯಾಗೆ ಅದೆ ಹೇಳು. ॥ ೧೪೮ ॥ ನೀನು ಜನ್ಮಾಂತರದಲ್ಲಿ ಯಾರ ಹೆಂಡತಿಯಾಗಿದ್ದಿ ? ಯಾರ ತಾಯಿಯಾಗಿದ್ದಿ? ಯಾರ ಅಕ್ಕ-ತಂಗಿಯಾಗಿದ್ದಿ ? ಎಂಬದನ್ನು ನನಗೆ ಹೇಳು. ॥ ೧೪೯ ॥ ನೀನು ಇದೆಲ್ಲವನ್ನು ತಿಳಿದು ವ್ಯರ್ಥವಾಗಿ ಯಾಕೆ ದುಃಖಿಸುತ್ತೀ ? ಒಂದುವೇಳೆ ನಿನಗೆ ಹಿತವಾಗಬೇಕೆಂಬ ಇಚ್ಛೆಯಿದ್ದರೆ ಈಗ ನೀನು ಶ್ರೀ ಶಂಕರನಿಗೆ ಶರಣುಹೋಗು, ಎಂದು ಬೋಧಿಸಿದರು. ॥ ೧೫೦ ॥ ಆಗ ಆ ರಾಜಪತ್ನಿಯು ಆ ಯೋಗಿಗಳಿಗೆ ವಂದಿಸಿ ವಿನಯದಿಂದ— ಸ್ವಾಮೀ, ನಾನು ತಾಯಿ-ತಂದೆ ಮೊದಲಾದ ಸರ್ವ ಒಳಗವನ್ನು ಬಿಟ್ಟು ರಾಜ್ಯಭ್ರಷ್ಟಳಾಗಿ ಈ ಮಗನೇ ನನ್ನ ಪ್ರಾಣವೆಂದು ತಿಳಿದು ಭರವಸದಿಂದ ಅಡವಿಗೆ ಬಂದು ಬಹಳ ಕಷ್ಟಬಟ್ಟೆನು ॥ ೧೫೧-೧೫೨ ॥ ಆದರೆ ನಮ್ಮಿಬ್ಬರ ಗತಿಯು ಹೀಗಾಯಿತು ! ಅಂದಮೇಲೆ ನಾನು ಈ ಮಗನನ್ನು ಬಿಟ್ಟು ಪ್ರೀತಿಯಿಂದ ಬದುಕಿರುವದರಿಂದ ಪ್ರಯೋಜನವೇನು ? ಈಗ ನನಗೆ ನಿಶ್ಚಯವಾಗಿ ಮರಣ ಬರಲಿ ಎಂದು ಆ ಯೋಗಿಯ ಪಾದಕ್ಕೆ ನಮಿಸಿದಳು. ॥ ೧೫೩ ॥ ಈ ಪ್ರಕಾರ ಆಕೆಯ ನಿಶ್ಚಯವನ್ನು ನೋಡಿ, ಆ ಯೋಗಿಗಳಿಗೆ ಅಂತಃಕರಣ ಬಂದು ಆ ಪೂರ್ವಜನ್ಮದ ಹೀನ ಬ್ರಾಹ್ಮಣರ ಉಪಕಾರವನ್ನು ನೆನಿಸಿ ಪ್ರಸನ್ನರಾಗಿ ॥ ೧೫೪ ॥ ತಮ್ಮ ಹತ್ತರಿದ್ದ ಭಸ್ಮವನ್ನು ತೆಗೆದು ಆ ಬಾಲಕನ ಸರ್ವಾಂಗಗಳಿಗೂ ಹಚ್ಚಿ, ಬಾಯೊಳಗೆ ಹಾಕಿದಕೂಡಲೆ ಪ್ರಾಣವು ಬಂದು ॥ ೧೫೫ ॥ ಆ ಬಾಲಕನು ಎದ್ದು ಕುಳಿತನು. ಆಗ ಅವನ ಮೈಮೇಲಿನ ವ್ರಣಗಳೆಲ್ಲ ಹೋಗಿ, ಸರ್ವಾಂಗವು ಸುವರ್ಣದಂತಾಯಿತು. ಆಮೇಲೆ ಆ ಯೋಗಿವರ್ಯರು ಆಕೆಗೂ ಭಸ್ಮವನ್ನು ಹಚ್ಚಲು ಕೂಡಲೆ ಆಕೆಯ ವ್ರಣಗಳು

ಹೋಗಿ ಆಕೆಯ ದೇಹವೂ ಸುವರ್ಣದಂತಾಯಿತು. ‖ ೧೫೬ ‖ ಆಗ ಆ ರಾಜಪತ್ನಿಯು ಮಗನ ಸಹಿತವಾಗಿ ಆ ಯೋಗಿಗಳ ಪಾದಕ್ಕೆ ನಮಸ್ಕರಿಸಲು ಅವರು ಮತ್ತೆ ಭಸ್ಮವನ್ನು ತೆಗೆದು ಆ ಇಬ್ಬರ ದೇಹಗಳಿಗೂ ಹಚ್ಚಿದರು. ಆಗ ಅವರ ದೇಹಗಳು ಚಿನ್ನದಂತೆ ಶೋಭಾಯಮಾನವಾಗಿ ಹೊಳೆಯಹತ್ತಿದವು. ‖ ೧೫೭–೧೫೮ ‖ ಆಗ ಆ ಯೋಗಿಗಳು ಪ್ರಸನ್ನರಾಗಿ— ಎಲೈ ರಾಜಪತ್ನಿಯೇ, ನಿಮಗೆ ಮುಪ್ಪು ಮುಂತಾದವುಗಳು ಬರುವದಿಲ್ಲ. ಸದಾ ತಾರುಣ್ಯ ರೂಪದಿಂದ ಇದ್ದು ಚಿರಂಜೀವಿಯಾಗಿರುವಿರಿ. ‖ ೧೫೯ ‖ ನಿನ್ನ ಮಗನು ಭದ್ರಾಯುಷಿಯೂ ಕೀರ್ತಿವಂತನೂ ಆಗಿ ತಂದೆಯಕಿಂತ ಹೆಚ್ಚಾಗಿ ರಾಜ್ಯವಾಳುವನು. ‖ ೧೬೦ ‖ ಎಂದು ವರವನ್ನು ಕೊಟ್ಟು ಆ ಯೋಗಿವರ್ಯರು ಅಲ್ಲಿಂದ ಕೂಡಲೆ ಹೊರಟುಹೋದರು. ಎಂದು ಆ ಯತಿಗಳು ಹೇಳಿ— ಎಲೈ ಯವನರಾಜನೇ ಸತ್ಪುರುಷರ ಮಹಿಮೆಯನ್ನು ಏಕಚಿತ್ತದಿಂದ ಕೇಳು ‖ ೧೬೧ ‖ ನೀನು ಸತ್ಪುರುಷರ ಸೇವೆ ಮಾಡಿದರೆ, ನಿನ್ನ ಹುಣ್ಣು ತೀವ್ರವಾಗಿ ಹೋಗುವದು. ಇನ್ನು ನೀನು ಏನೂ ಚಿಂತಾ ಮಾಡಬಾರದು ಏಕೋಭಾವದಿಂದ ಮನಸ್ಸನ್ನು ದೃಢಮಾಡಿಕೊಂಡಿರು ಎಂದು ಹೇಳಿದರು. ‖ ೧೬೨ ‖ ಈ ಪ್ರಕಾರ ಆ ಯತಿಗಳ ಮಾತು ಕೇಳಿ ಆ ಯವನರಾಜನು ಕೂಡಲೆ ಅವರಿಗೆ ನಮಸ್ಕಾರ ಮಾಡಿ ವಿನಯದಿಂದ ಕೈ ಮುಗಿದು- ಸ್ವಾಮೀ, ಯತಿವರ್ಯರೇ ಅಂಥ ಸತ್ಪುರುಷರು ಎಲ್ಲಿ ಇರುವರು ? ‖ ೧೬೩ ‖ ಎಂಬದನ್ನು ಸ್ವಾಮೀ ಈಗ ತೀವ್ರವಾಗಿ ನನಗೆ ಹೇಳಿರಿ, ನಾನು ಕೂಡಲೆ ಅಲ್ಲಿಗೆ ಹೋಗುವೆನು ಅಲ್ಲಿ ಅವರ ದರ್ಶನವಾದ ಕೂಡಲೆ ನನ್ನ ಹುಣ್ಣು ಹೋಗಿ ನನಗೆ ಸುಖವಾಗುವದು ಎಂದನು. ‖ ೧೬೪ ‖ ಈ ಪ್ರಕಾರವಾದ ರಾಜನ ಮಾತನ್ನು ಕೇಳಿ ಆ ಯತಿಗಳು— ಎಲೈ ರಾಜನೇ, ಭೀಮಾತೀರದಲ್ಲಿ ಗಾಣಗಾಪುರವೆಂಬ ಮಹಾ ಸ್ಥಾನವದೆ. ಅಲ್ಲಿ ಪರಮಾತ್ಮ ಸ್ವರೂಪರೂ ಮಹಾತ್ಮರೂ ಆದ ಒಬ್ಬ ಯತಿಗಳಿರುವರು. ‖ ೧೬೫ ‖ ನೀನು ಅವರಕಡೆಗೆ ಹೋಗು. ಅವರ ದರ್ಶನ ಮಾತ್ರದಿಂದಲೇ ನಿನಗೆ ಸುಖವಾಗುವದು ಎಂದು ಹೇಳಿದರು. ಆ ಮಾತು ಕೇಳಿ ಅವನು ಏಕೋಭಾವದಿಂದ ಅಲ್ಲಿಗೆ ಹೋಗಬೇಕೆಂದು ಆಗ ಸಿದ್ಧನಾಗಿ ನಿಂತನು. ‖ ೧೬೬ ‖ ಈ ಪ್ರಕಾರ ಅವನು ಏಕೋಭಾವದಿಂದ ಗುರುದರ್ಶನ

ವನ್ನು ತಕ್ಕೊಳ್ಳುವದಕ್ಕೋಸ್ಕರ ಪಯಣದಮೇಲೆ ಪಯಣ ಮಾಡುತ್ತ ಗಾಣಗಾಪುರಕ್ಕೆ ಬಂದನು. ॥ ೧೬೭ ॥ ಆಮೇಲೆ ಅಲ್ಲಿಯ ಜನರನ್ನು ಕುರಿತು— ಎಲೈ ಜನರುಗಳಿರಾ, ಇಲ್ಲಿ ಸನ್ಯಾಸಿಗಳಾದ ಒಬ್ಬ ತಪಸ್ವಿಗಳಿರುತ್ತಾರಂತೆ ಆವರು ಎಲ್ಲಿ ಇರುತ್ತಾರೆ? ಎಂದು ಕೇಳಿದನು. ॥ ೧೬೮ ॥ ಆಗ ಆ ಯಾವತ್ತು ಜನರು ಅಂಜಿ— ಇವನಂತೂ ಯವನನು! ಕೇಳುವನು ಗುರುಗಳನ್ನು ವಿಚಾರಿಸುತ್ತಾನೆ. ಇವನು ಏನು ಮಾಡುತ್ತಾನೆಂಬದು ತಿಳಿಯುವದಿಲ್ಲ. ಈಗ ಇದು ನೆಟ್ಟಗಾಗುವದಿಲ್ಲ ಎಂದೆನ್ನುತ್ತ ಸುಮ್ಮಬಿಟ್ಟರು. ॥ ೧೬೯ ॥ ಅವನಿಗೆ ಒಬ್ಬರೂ ಉತ್ತರ ಕೊಡಲಿಲ್ಲ. ಆಗ ರಾಜನು ಅತ್ಯಂತ ಸಿಟ್ಟಾಗಿ— ಎಲೈ ಜನರುಗಳಿರಾ, ನಾನು ಕೇವಲ ಗುರುದರ್ಶನಕ್ಕಾಗಿ ಬಂದಿರುವೆನು. ನೀವು ಗಾಬರಿಯಾಗಬೇಡಿರಿ, ಅವರನ್ನು ತೋರಿಸಿರಿ ಎಂದನು. ॥ ೧೭೦ ॥ ಆಗ ಅವರು— ಎಲೈ ಮಹಾರಾಜನೇ ಕೇಳು. ಗುರುಗಳು ಅನುಷ್ಠಾನ ಮಾಡುತ್ತ ಇರುವಂಥ ಸ್ಥಾನವು ಇದೇ, ಮಧ್ಯಾಹ್ನ ಸ್ನಾನಕ್ಕಾಗಿ ಅಮರಜಾಸಂಗಮಕ್ಕೆ ಹೋಗಿರುವರು. ಅಲ್ಲಿ ಆಹ್ನಿಕವನ್ನು ತೀರಿಸಿಕೊಂಡು ಈಗ ಇಲ್ಲಿಗೆ ಬರುವರು ಎಂದು ಹೇಳಿದರು. ॥ ೧೭೧ ॥ ಈ ಪ್ರಕಾರವಾದ ಆ ಜನರ ಮಾತು ಕೇಳಿ ಆ ಯುವನ ರಾಜನು ತನ್ನ ಪರಿವಾರವನ್ನೆಲ್ಲ ಅಲ್ಲಿಯೇ ಬಿಟ್ಟು, ತಾನೊಬ್ಬನೇ ಪಾಲಿಕೆಯಲ್ಲಿ ಕೂತು ಸಂಗಮಕ್ಕೆ ಹೋದನು. ॥ ೧೭೨ ॥ ದೂರದಿಂದ ಅಲ್ಲಿಯ ಅಶ್ವತ್ಥದ ಬುಡದಲ್ಲಿ ಕುಳಿತ ಶ್ರೀಗುರುಗಳನ್ನು ನೋಡಿ, ಪಾಲಿಕೆಯನ್ನಿಳಿದು ಕಾಲಿನಿಂದ ನಡೆಯುತ್ತ ಅವರನ್ನು ನೋಡಬೇಕೆಂದು ಹತ್ತರ ಹೋಗಿ ನಮಸ್ಕಾರ ಮಾಡಿ ಕೈ ಮುಗಿದು ನಿಂತುಕೊಂಡನು. ॥ ೧೭೩ ॥ ಆಗ ಶ್ರೀಗುರುಗಳು ಅವನನ್ನು ನೋಡಿ— ಏನೋ ಅಗಸಾ, ಎಲ್ಲಿ ಇರುತ್ತೀ? ನೀನು ನಮ್ಮ ದಾಸನಾಗಿದ್ದು ಬಹಳ ದಿವಸಗಳ ಮೇಲೆ ನಮ್ಮ ಭೆಟ್ಟಿಗೆ ಬಂದೆಯಲ್ಲಾ? ಎಂದು ಕೇಳಿದರು. ॥ ೧೭೪ ॥ ಈ ಪ್ರಕಾರವಾದ ಗುರುಗಳ ಮಾತು ಕೇಳಿ ಆ ಯುವನ ರಾಜನು ಮಹಾ ಜ್ಞಾನವಂತನಾಗಿ ತನ್ನ ಪೂರ್ವಜನ್ಮವನ್ನು ಮನಸಿನಲ್ಲಿ ಸ್ಮರಿಸಿ ದಂಡವತ ಸಾಷ್ಟಾಂಗ ನಮಸ್ಕಾರ ಮಾಡಿದನು. ॥ ೧೭೫ ॥ ಆಮೇಲೆ ಅವರ ಪಾದಗಳ ಮೇಲೆ ಉರುಳಾಡುತ್ತ ಸದ್ಗದಿತಕಂಠನೂ ಮೈಮೇಲೆ ರೋಮಾಂಚವುಳ್ಳವನೂ ಆಗಿ

ಆನಂದಭಾಷ್ಪಗಳನ್ನು ಸುರಿಸುತ್ತ ॥ ೧೭೬ ॥ ಪೂರ್ವಜನ್ಮದ ಸಂಗತಿಯನ್ನು ಸ್ಮರಣೆಗೆ ತಂದುಕೊಂಡು ಅತಿ ದುಃಖದಿಂದ ಅಳುತ್ತ, ವಿನಯದಿಂದ ಕೈಮುಗಿದು ನಾನಾರೀತಿಯಿಂದ ಸ್ತೋತ್ರ ಮಾಡಿದನು. ॥ ೧೭೭ ॥ ಆಮೇಲೆ ಅವನು— ಸ್ವಾಮೀ, ಗುರುವರ್ಯರೇ, ನನ್ನನ್ನೇಕೆ ಉಪೇಕ್ಷಿಸಿದಿರಿ? ತಾವು ನನ್ನನ್ನು ತಮ್ಮ ಚರಣಕಮಲಗಳಿಂದ ದೂರ ಮಾಡಿದ್ದರಿಂದ ನಾನು ಪರದೇಶಿಯಾದೆನು. ॥ ೧೭೮ ॥ ಅಂಧಕಾರವಾದ ಈ ಸಂಸಾರ ಸಾಗರದಲ್ಲಿ ನನ್ನನ್ನು ಏಕೆ ಮುಳುಗಿಸಿದಿರಿ? ನಾನು ಮದೋನ್ಮತ್ತನಾಗಿ ತಮ್ಮ ಚರಣಗಳನ್ನು ಮರೆತೆನು. ॥ ೧೭೯ ॥ ಸ್ವಾಮೀ, ನಾನು ಈ ಸಂಸಾರಸಾಗರವೆಂಬ ಮಾಯಾಜಾಲದಲ್ಲಿ ಮುಳುಗಿ ದುರ್ಮತಿಯಾಗಿ ತಮ್ಮ ಚರಣಗಳ ಸೇವೆ ಮಾಡದೆ ದಿವಾಂಧನಾದೆನು. ॥ ೧೮೦ ॥ ತಾವು ಪ್ರತ್ಯಕ್ಷವಾಗಿ ಹತ್ತರಿದ್ದರೂ ನಾನು ಮತಿಹೀನನೂ ತಮೋ-ಗುಣದಿಂದ ಕೂಡಿದವನೂ ಆಗಿ ತಮ್ಮ ಗುರ್ತು ತಿಳಿಯದೆ ತಮ್ಮ ಚರಣಗಳನ್ನು ಮರೆತೆನು. ॥ ೧೮೧ ॥ ನೀವು ನಿಮ್ಮ ನಿಜಭಕ್ತರನ್ನು ಉಪೇಕ್ಷಿಸುವಿರೆಂದು ನನ್ನ ಮನಸ್ಸಿನಲ್ಲಿ ನಿಶ್ಚಯವಾಯಿತು. ಹಾಗಿಲ್ಲದಿದ್ದರೆ ಸ್ವಾಮೀ, ನನ್ನನ್ನು ಈ ಅಜ್ಞಾನಸಾಗರದಲ್ಲೇಕೆ ಹಾಕಿದಿರಿ? ॥ ೧೮೨ ॥ ಈಗ ನನ್ನನ್ನು ಉದ್ಧರಿಸಿರಿ. ಈಗ ನಾನು ಅದರ ಸಲುವಾಗಿಯೇ ಇಲ್ಲಿಗೆ ಬಂದಿರುವೆನು. ಇನ್ನು ನಾನು ತಮ್ಮ ಚರಣಧೂಳಿಯನ್ನು ಸೇವಿಸುತ್ತ ಇಲ್ಲಿಯೇ ಇರುವೆನು. ಇನ್ನು ನನಗೆ ರಾಜ್ಯವು ಸಾಕು ಎಂದು ಅಂದನು. ॥ ೧೮೩ ॥ ಈ ಪ್ರಕಾರ ಆ ರಾಜನು ಸ್ತುತಿ ಮಾಡಲು ಆಗ ಶ್ರೀ ಗುರುಗಳು— ಎಲೈ ಭಕ್ತನೇ, ಇನ್ನು ನಿಶ್ಚಯವಾಗಿ ನಿನ್ನ ಇಚ್ಛೆಯು ಪೂರ್ಣವಾಗುವದು. ಎಂದರು. ॥ ೧೮೪ ॥ ಆಗ ಆ ರಾಜನು— ಸ್ವಾಮೀ, ನನಗೊಂದು ಹುಣ್ಣು ಆಗಿರುವದು. ಆದರಿಂದ ನನಗೆ ಬಹಳ ವ್ಯಥೆಯಾಗುತ್ತದೆ. ತಾವು ಕೃಪಾ ದೃಷ್ಟಿಯಿಂದ ಅದನ್ನು ನೋಡಬೇಕು ಎಂದು ವಿನ್ನೈಸಿದನು. ॥ ೧೮೫ ॥ ಆಗ ಶ್ರೀ ಗುರುಗಳು ನಕ್ಕು— ರಾಜಾ, ನಿನಗೆ ಹುಣ್ಣೇ ಆಗಿಲ್ಲ. ನಿನ್ನ ಹುಣ್ಣು ಎಲ್ಲಿ ಆದೆ ತೋರಿಸು ಎಂದರು. ॥ ೧೮೬ ॥ ಆಗ ಅವನು ತನ್ನ ತೊಡೆಯಮೇಲಿನ ಹುಣ್ಣನ್ನು ನೋಡಿಕೊಂಡನು. ಅದು ಕಾಣಲಿಲ್ಲ. ಆಗ ಅವನು ಕೂಡಲೆ ಮನಸಿನಲ್ಲಿ ಆಶ್ಚರ್ಯ ಹೊಂದಿ ಪುನಃ ಶ್ರೀ ಗುರುಚರಣಕ್ಕೆ ನಮಸ್ಕಾರ ಮಾಡಿ ॥ ೧೮೭ ॥

ಸ್ವಾಮೀ, ತಾವು ನನಗೆ ಪ್ರಸನ್ನರಾಗಿ ನನ್ನಮೇಲೆ ಕೃಪಾ ಮಾಡಿದ್ದರಿಂದ ನಾನು ರಾಜ್ಯವನ್ನು ಹೊಂದಿ ಸಂತೋಷದಿಂದ ಅಷ್ಟೈಶ್ವರ್ಯನ್ನು ಭೋಗಿಸಿದೆನು. || ೧೮೮ || ಪುತ್ರ-ಪೌತ್ರರನ್ನು ಕಂಡೆನು. ನನ್ನಮೇಲೆ ತಮ್ಮ ಪೂರ್ಣ ಅಂತಃಕರಣವಾಯಿತು. ಈಗ ತಾವು ನನ್ನ ಊರಿಗೆ ಬಂದು ನನ್ನ ಐಶ್ವರ್ಯವನ್ನು ನೋಡಬೇಕೆಂದು ನನ್ನ ಮನಸ್ಸಿನ ಇಚ್ಛೆಯದೆ. || ೧೮೯ || ತಮಗೆ ಭಕ್ತವತ್ಸಲರೆಂಬ ಬಿರುದು ಇದೆ ಕಾರಣ ತಾವು ನನ್ನ ಇಚ್ಛೆಯನ್ನು ಪೂರ್ಣ ಮಾಡಬೇಕು. ಆಮೇಲೆ ನಾನು ಈ ಇಂದ್ರಿಯ ಸಂಸಾರ ಭಾರವನ್ನು ಬಿಟ್ಟು ಬಂದು ತಮ್ಮ ಪಾದಗಳಲ್ಲಿ ಲೀನವಾಗುವೆನು. ಎಂದು ಬೇಡಿಕೊಂಡನು. || ೧೯೦ || ಆಗ ಶ್ರೀ ಗುರುಗಳು:— ಎಲೈ ರಾಜನೇ, ನಿನ್ನ ನಗರದಲ್ಲಿ ಬಹಳ ಮಂದಿ ಯವನರಿದ್ದಾರೆ ಅಲ್ಲಿ ನಿತ್ಯ ಗೋಹತ್ಯಾ ಮೊದಲಾದ ಮಹಾ ಪಾತಕಗಳಾಗುತ್ತವೆ. ನೀವು ಅನೇಕ ಜೀವಹಿಂಸಾ ಮಾಡಿ ಪಾಪ ಕೆಲಸ ಮಾಡುವಿರಿ. ಮದ್ಯಪಾನ ಮಾಡುವಿರಿ ಆದ್ದರಿಂದ ಯತಿಗಳೂ ತಪಸ್ವಿಗಳೂ ಆದ ನಾವು ನಿನ್ನ ನಗರಕ್ಕೆ ಬರಬಾರದು. ನೀನು ಇನ್ನು ನಿಶ್ಚಯವಾಗಿ ಬಿಡಬೇಕು. ಅಂದರೆ ಬರುತ್ತೇವೆಂದು ಅಂದರು. || ೧೯೧-೧೯೨ || ಆಗ ರಾಜನು ಅವೆಲ್ಲವುಗಳಿಗೂ ಒಪ್ಪಿ, ಶ್ರೀ ಗುರು ಚರಣಗಳಿಗೆ ನಮಸ್ಕರಿಸಿ— ಸ್ವಾಮೀ, ನಾನು ತಮ್ಮ ಪುರಾತನ ಭಕ್ತನು. ನನಗೆ ಪೂರ್ವಜನ್ಮದ ಸ್ಮರಣೆಯನ್ನು ಕೊಟ್ಟಿರಿ. || ೧೯೩ || ಹಿಂದಕ್ಕೆ ನಾನು ರಜಕನಾಗಿದ್ದೆನು. ತಮ್ಮ ವಚನದಂತೆ ಈಗ ನಾನು ರಾಜ್ಯವನ್ನು ಹೊಂದಿ ಅನೇಕ ಸುಖಗಳನ್ನು ಕಂಡೆನು. ನಾನು ಮ್ಲೇಂಛನಾಗಿ ಹುಟ್ಟಿದ್ದೊಂದೇ ಕೊರತೆಯಾಗಿದೆ. || ೧೯೪ || ಈಗ ನನಗೆ ತಮ್ಮ ಚರಣದರ್ಶನವಾದ್ದರಿಂದ ನನ್ನ ಮನಸ್ಸು ಸಂತುಷ್ಟವಾಯಿತು. ಇನ್ನು ತಮಗೆ ನನ್ನ ಪುತ್ರ ಪೌತ್ರರನ್ನು ತೋರಿಸಿ, ಆಮೇಲೆ ನಾನು ತಮ್ಮ ಸೇವೆಗೆ ಬರುವೆನು. || ೧೯೫ || ಎಂದು ನಾನಾರೀತಿಯಾಗಿ ವಿನಯದಿಂದ ಬೇಡಿಕೊಂಡು, ಕ್ಷಣಕ್ಷಣಕ್ಕೆ ಅವರ ಚರಣಗಳ ಮೇಲೆ ಬೀಳುತ್ತ ಅತಿ ದೈನ್ಯದಿಂದ ಬೇಡಿಕೊಂಡನು. || ೧೯೬ || ಆಗ ಗುರುಗಳು ಮನಸಿನಲ್ಲಿ ವಿಚಾರಿಸುತ್ತ— ಈ ಕಲಿಯುಗದಲ್ಲಿ ದುಷ್ಟ ಜಾತಿಯ ಜನರೇ ಬಹಳ. ಈ ಯವನರಾಜನು ನಮ್ಮ ದರ್ಶನಕ್ಕೆ ಬಂದು ಆರೋಗ್ಯ ಹೊಂದಿದ್ದನ್ನು ಕಂಡು ಉಳಿದ

ಜನರೂ ಬರುವರು. ಮುಂದೆಯಾದರೂ ಇದೇ ರೀತಿಯಾಗುವದು. ಈಗ ನಾವು ಇಲ್ಲಿ ಗೌಪ್ಯವಾಗಿದ್ದರೆ ಮುಂದೆ ಒಳ್ಳೇದಾಗುವದು. ‖ ೧೯೭ ‖ ಸಿಂಹರಾಸಿಗೆ ಗುರುವು ಬಂದಾಗ ಮಹಾ ತೀರ್ಥವಾದ ಗೋದಾವರಿಗೆ ಹೋಗುವ ನೆವ ಮಾಡಿ ಇಲ್ಲಿ ತಿರುಗಿ ಬರುವ ಭರವಸ ಹೇಳಿ ಸಹಜವಾಗಿ ಹೋಗುವಂತೆ ಹೋಗಬೇಕು. ಈಗಂತೂ ಇಲ್ಲಿಯೇ ಗುಪ್ತವಾಗಿರಬೇಕು. ‖ ೧೯೮ ‖ ಎಂದು ಮನಸಿನಲ್ಲಿ ವಿಚಾರ ಮಾಡಿ ಶ್ರೀಗುರುಗಳು ಸಂಗಮದಿಂದ ಹೊರಟರು. ಆಗ ಆ ರಾಜನು ಪ್ರೀತಿಯಿಂದ ತನ್ನ ಪಾಲಿಕೆಯಲ್ಲಿ ಅವರನ್ನು ಕೂಡ್ರಿಸಿ ‖ ೧೯೯ ‖ ತಾನು ಅವರ ಪಾದುಕಾಗಳನ್ನು ಕೈಯಲ್ಲಿ ಹಿಡಕೊಂಡು ಆ ಪಾಲಿಕೆಯ ಸಂಗಡ ನಡೆಯುತ್ತ ಬರುತ್ತಿದ್ದನು. ಆಗ ಶ್ರೀ ಗುರುಗಳು— ಎಲೈ ರಾಜನೇ, ನೀನೂ ಯಾವದಾದರೊಂದು ವಾಹನದಲ್ಲಿ ಕೂಡ್ರು. ಹೀಗೆ ನಡೆಯುತ್ತ ಬಂದರೆ ಜನರು ನಿನ್ನನ್ನು ನಿಂದಿಸುವರು. ‖ ೨೦೦ ‖ ಈಗ ನೀನು ಮ್ಲೇಂಛ ಜಾತಿಯಲ್ಲಿ ಹುಟ್ಟಿ ರಾಜನಾಗಿರುವಿ. ನೀನು ಹೀಗೆ ಬ್ರಾಹ್ಮಣರ ಸೇವೆಯನ್ನು ಮಾಡಿದರೆ ನಿನ್ನ ಜಾತಿಯ ಜನರು ನಕ್ಕು ನಿನ್ನನ್ನು ದೂಷಿಸುವರು ಎಂದು ಹೇಳಿದರು. ‖ ೨೦೧ ‖ ಆಗ ರಾಜನು— ಸ್ವಾಮೀ, ಕೇಳಿರಿ, ನಾನೆಲ್ಲಿಯ ರಾಜನು? ನಾನು ರಜಕನಲ್ಲವೇ? ತಮ್ಮ ದೃಷ್ಟಿಯು ಬೀಳಲು ಲೋಹವು ಸುವರ್ಣವಾಗುವದು. ‖ ೨೦೨ ‖ ನಾನು ನನ್ನ ದೇಶದ ಯಾವತ್ತು ಜನರಿಗೆ ರಾಜನಾದದ್ದು ಸತ್ಯವು. ಆದರೆ ನಾನು ತಮ್ಮ ಭಕ್ತನಾದ ಅಗಸನಲ್ಲವೇ? ತಮ್ಮ ದರ್ಶನವಾದ್ದರಿಂದ ನನ್ನ ಮನೋರಥವು ಪೂರ್ಣವಾಯಿತು ಎಂದು ಅಂದನು. ‖ ೨೦೩ ‖ ಅಷ್ಟರಲ್ಲಿ ಅವನ ಎಲ್ಲ ಸೈನ್ಯವು ಅಲ್ಲಿ ಬಂದು ಕೂಡಿತು. ಆ ಸೈನ್ಯದಲ್ಲಿ ಮದೋನ್ಮತ್ತ ಆನೆಗಳೂ ನಾನಾಬಣ್ಣದ ಕುದುರೆಗಳೂ ಇದ್ದವು. ‖ ೨೦೪ ‖ ಆಗ ರಾಜನು ತಾನು ಅಲ್ಲಿಯೇ ನಿಂತು ಒಳ್ಳೇ ಸಂತೋಷದಿಂದ ಶ್ರೀಗುರುಗಳಿಗೆ ತನ್ನ ಎಲ್ಲ ಸೈನ್ಯವನ್ನೂ ಐಶ್ವರ್ಯವನ್ನೂ ತೋರಿಸಿದನು. ‖ ೨೦೫ ‖ ಈಗ ಶ್ರೀಗುರುಗಳು— ಎಲೈ ರಾಜನೇ, ನೀನೂ ಕುದುರೆಯನ್ನು ಹತ್ತು. ನಿನ್ನ ನಗರವು ಬಹಳ ದೂರ ಇರುವದು. ನಮ್ಮ ಅಪ್ಪಣೆಯನ್ನು ಮೀರಬೇಡ. ಎಂದರು. ‖ ೨೦೬ ‖ ಗುರುವಚನವನ್ನು ಕೇಳಿ ಅವನು ಆ ಗುರುಗಳ ಶಿಷ್ಯರೆಲ್ಲರಿಗೂ ಒಂದೊಂದು ಕುದುರೆಯನ್ನು ಕೊಟ್ಟು ತಾನೂ ಒಂದು

ಕುದುರೆಯನ್ನು ಹತ್ತಿದನು. ‖ ೨೦೭ ‖ ಆಗ ಆ ಯವನ ರಾಜನು ಮನಸಿನಲ್ಲಿ ಅತ್ಯಂತ ಹರ್ಷಬಟ್ಟು ಆನಂದ ದಿಂದ— ಶ್ರೀ ಗುರುಗಳು ಭೆಟ್ಟಿಯಾದರು ಎಂದು ಅತಿ ಉಲ್ಹಾಸಪಡುತ್ತಿದ್ದನು. ‖ ೨೦೮ ‖ ಆಗ ಶ್ರೀಗುರುಗಳು ಅವನನ್ನು ಕರೆದು— ಎಲೈ ರಾಜನೇ, ನೀನು ನಮಗೆ ಅತ್ಯಂತ ಸದ್ಗುಣವುಳ್ಳ ಕೇವಲ ಭಕ್ತನಾಗಿರುವಿ. ಆದರಿಂದ ಇವತ್ತಿನ ದಿವಸ ನಾವು ಬಹು ಸಂತೋಷಹೊಂದಿದೆವು. ‖ ೨೦೯ ‖ ನಾವು ಸಂನ್ಯಾಸಿಗಳೂ ತಪಸ್ವಿಗಳೂ ಆದ್ದರಿಂದ ನಿತ್ಯ ವೇಳೆವೇಳೆಗೆ ಸ್ನಾನ ಸಂಧ್ಯಾದಿ ಕರ್ಮಗಳನ್ನು ಮಾಡಬೇಕಾಗುತ್ತದೆ. ನಾವು ನಿನ್ನ ಸಂಗಡ ಮೆಲ್ಲಗೆ ಬಂದರೆ ಮಾರ್ಗದಲ್ಲಿ ನಮ್ಮ ನಿತ್ಯ ಅನುಷ್ಠಾನಕ್ಕೆ ವೇಳೆಯು ಸಿಗುವದಿಲ್ಲ ‖ ೨೧೦ ‖ ಕರ್ಮ ಲೋಪವಾಗುವ ಸಂಭವವುಂಟು. ಕಾರಣ ನಾವು ನಿನಗೆ ಇದಕ್ಕೊಂದು ಉಪಾಯವನ್ನು ಹೇಳುವೆವು ನೀನು ಜ್ಞಾನವಂತನಿದ್ದು ಅದಕ್ಕೆ ಒಪ್ಪಬೇಕು. ಏನಂದರೆ ನಾವು ತೀವ್ರವಾಗಿ ಮುಂದೆ ಹೋಗುವೆವು. ನೀವು ಹಿಂದಿನಿಂದ ಸಾವಕಾಶವಾಗಿ ಬರ್ರಿ. ‖ ೨೧೧ ‖ ನಿಮ್ಮ ಊರ ಹತ್ತರಿರುವ ಪಾಪವಿನಾಶಿ ತೀರ್ಥದಲ್ಲಿ ನಿಮಗೆ ನಮ್ಮ ದರ್ಶನವಾಗುವದು ಎಂದು ಆ ರಾಯನಿಗೆ ಹೇಳಿ ‖ ೨೧೨ ‖ ಶ್ರೀ ಗುರುಗಳು ತಮ್ಮ ಯಾವತ್ತು ಶಿಷ್ಯರು ಸಹಿತವಾಗಿ ಕೂಡಲೆ ಅಲ್ಲಿ ಗುಪ್ತರಾಗಿ ಮನೋವೇಗದಿಂಡ ಮಾರ್ಗವನ್ನು ಕ್ರಮಿಸುತ್ತ ಆ ವೈದೂರಪುರಕ್ಕೆ ಹೋಗಿ ‖ ೨೧೩ ‖ ಅಲ್ಲಿಂದ ತೀವ್ರವಾಗಿ ಆ ಪಾಪವಿನಾಶಿ ತೀರ್ಥಕ್ಕೆ ಬಂದು ಅನುಷ್ಠಾನ ಮಾಡುವದಕ್ಕಾಗಿ ಶ್ರೀಗುರುಗಳು ಅಲ್ಲಿಯೇ ಉಳಿದರು. ಆಗ ಆ ಊರ ಯಾವತ್ತು ಜನರು ಅವರ ದರ್ಶನಕ್ಕೆ ಬಂದರು. ‖ ೨೧೪ ‖ ಎಲೈ ನಾಮಧಾರಕನೇ, ಆ ಜನರ ಸಂಗಡ ನಿಮ್ಮ ಪೂರ್ವಜನಾದ ಸಾಖರೆ ಸಾಯಂದೇವನ ಹಿರೇ ಮಗನಾದ ನಾಗನಾಥನೂ ಬಂದು ಶ್ರೀಗುರುಗಳ ದರ್ಶನವನ್ನು ತಕ್ಕೊಂಡು ಮನಸಿನಲ್ಲಿ— ಶ್ರೀಗುರುಗಳನ್ನು ಮನೆಗೆ ಕರಕೊಂಡು ಹೋಗಿ ನಾನಾ ರೀತಿ ಪೂಜಾ ಆರತಿಗಳನ್ನು ಮಾಡಿ ಸಮಾರಂಭ ಮಾಡಬೇಕೆಂದು ಶ್ರೀ ಗುರುಗಳಿಗೆ ವಿನಂತೀ ಮಾಡಿಕೊಂಡು ‖ ೨೧೫ ‖ ಶ್ರೀ ಗುರುಗಳನ್ನು ಮನೆಗೆ ಕರಕೊಂಡು ಹೋಗಿ, ವಿಧಿಪ್ರಕಾರ ಅವರ ಪೂಜೆಯನ್ನು ಮಾಡಿ, ಒಂದು ಸಾವಿರ ಆರತಿಗಳನ್ನು ಮಾಡಿ ಬಹಳವಾಗಿ ಸಮಾರಾಧನೆ ಮಾಡಿದನು. ‖ ೨೧೬ ‖ ಇಷ್ಟೆಲ್ಲ ಆಗುವದರೊಳಗೆ ಸಂಜೆ

ಯಾಯಿತು. ಆಗ ಶ್ರೀ ಗುರುಗಳು ನಾಗನಾಥನನ್ನು ಕರೆದು— ಎಲೈ ನಾಗನಾಥನೇ, ಇಲ್ಲಿಯ ಯವನರಾಜನಿಗೆ ಈ ದಿನ ಆ ಪಾಪವಿನಾಶೀ ತೀರ್ಥದಲ್ಲಿ ದರ್ಶನ ಕೊಡುವೆನೆಂದು ಹೇಳಿ ಬಂದಿರುವೆನು. || ೨೧೭ || ಆದ್ದರಿಂದ ಈಗ ನಾನು ಆ ಸ್ಥಾನಕ್ಕೆ ಹೋಗುವೆನು. ಒಂದುವೇಳೆ ನಾನು ಹೋಗದಿದ್ದರೆ ಆ ರಾಜನ ಸಂಗಡ ಯವನರೂ ಇಲ್ಲಿಗೆ ಬಂದಾರು, ಅವರು ಬ್ರಾಹ್ಮಣರ ಮನೆಗಳಿಗೆ ಬಂದು ಅವರಿಗೆ ಉಪದ್ರವ ಕೊಟ್ಟಾರು ||೨೧೮|| ಎಂದು ನಾಗನಾಥನಿಗೆ ಹೇಳಿ ಶ್ರೀ ಗುರುಗಳು ಆ ಪಾಪವಿನಾಶೀ ತೀರ್ಥಕ್ಕೆ ಹೋಗಿ ಶುಭಾಸನದಲ್ಲಿ ಕೂತುಕೊಂಡು ಅನುಷ್ಠಾನವನ್ನು ಮಾಡುತ್ತಿದ್ದರು || ೨೧೯ || ಇತ್ತ ಆ ಯುವನರಾಜನು ಅತ್ತಿತ್ತ ಹುಡುಕುತ್ತ ಮನಸಿನಲ್ಲಿ— ಈ ಅಪಾರ ಸೈನ್ಯ ಗದ್ದಲದಲ್ಲಿ ಶ್ರೀ ಗುರುಗಳು ಕಾಣುವದಿಲ್ಲಾ? ಏನು ಮಾಡಲಿ? ಎಂದು ಚಿಂತೆ ಮಾಡುತ್ತ. || ೨೨೦ || ಹಾ! ಅಕಟಕಟಾ! ಏನಾಯಿತಲ್ಲಾ! ಶ್ರೀ ಗುರುನಾಥನು ನನ್ನನ್ನು ನಿಶ್ಚಯವಾಗಿ ಉಪೇಕ್ಷಿಸಿದನು ನನ್ನ ಸೇವೆಯಲ್ಲಿ ಏನು ಅಂತರವಾಯಿತೋ? ಏನೋ? ನನಗೆ ತಿಳಿಯದ್ದರಿಂದ ಅವರು ಇಲ್ಲಿಂದ ಹೊರಟುಹೋದರು || ೨೨೧ || ಎಂದು ಅಂದು ಮತ್ತೆ ಮನಸ್ಸಿನಲ್ಲಿ ವಿಚಾರ ಮಾಡಿ— ಶ್ರೀ ಗುರುಗಳು ತಾವು ಮುಂದೆ ಹೋಗಿ ನಮ್ಮ ಊರ ಹತ್ತರಿರುವ ಪಾಪವಿನಾಶಿ ತೀರ್ಥದಲ್ಲಿ ನಮಗೆ ದರ್ಶನ ಕೊಡುವೆಪೆಂದು ಹೇಳಿರುವರು. || ೨೨೨ || ಶ್ರೀ ಗುರುಗಳ ಮಹಿಮೆಯು ತಿಳಿಯುವದಿಲ್ಲ ಅವರ ಮನೋಗತವನ್ನು ಯಾರು ಬಲ್ಲರು? ನನಗೆ ಅರಸು ಹುಣ್ಣಾದ್ದರಿಂದ ನಾನು ಅವರ ಭೆಟ್ಟಿಗೆ ಬಂದೆನು ನನ್ನ ದೈವವು ಚಲೋ ಇತ್ತೆಂದು ನನಗೆ ಕೃಪಾನಿಧಿಗಳಾದ ಶ್ರೀ ಗುರುಗಳ ಚರಣ ದರ್ಶನವಾಯಿತು, ಅದು ನನ್ನ ಪುಣ್ಯವೇ ಸರಿ || ೨೨೩-೨೨೪ || ಈಗ ಶ್ರೀ ಗುರುಗಳು ಮುಂದೆ ಹೋಗಿರುವದೇ ನಿಶ್ಚಯ, ಎಂದು ವಿಚಾರ ಮಾಡುತ್ತ, ಆ ರಾಜನು ತಾನೊಂದು ದಿವ್ಯವಾದ ಕುದುರೆಯನ್ನು ಹತ್ತಿ ತೀವ್ರದಿಂದ ನಡೆಯುತ್ತ || ೨೨೫ || ಅವನು ಒಂದೇದಿವಸದಲ್ಲಿ ಆಳ ಹರದಾರಿ ದೂರ ಪಯಣ ಮಾಡಿ ಆ ಪಾಪವಿನಾಶಿ ತೀರ್ಥಕ್ಕೆ ಹೋಗಿ ಅಲ್ಲಿ ಶ್ರೀ ಗುರುಗಳನ್ನು ನೋಡಿದನು || ೨೨೬ || ಆಗ ಅವನು ಮನಸ್ಸಿನಲ್ಲಿ ಅತಿ ಆಶ್ಚರ್ಯವನ್ನು ಹೊಂದಿ, ಅವರ ಚರಣಕ್ಕೆ ನಮಸ್ಕರಿಸಿ, ಭಕ್ತಿ ಹಾಗು ವಿನಯ

ಗಳಿಂದ— ಸ್ವಾಮೀ, ನನ್ನ ಮನೆಗೆ ದಯಮಾಡಿಸಬೇಕು ಎಂದು ಬೇಡಿಕೊಂಡು, || ೨೭ || ಕೂಡಲೆ ಆವನು ತನ್ನ ನಗರವನ್ನು ಅಲಂಕರಿಸಿ ಅಲ್ಲಲ್ಲಿಗೆ ಹವಳ-ಮುತ್ತುಗಳ ಹಾಗು ಮುಕರ ತೋರಣಗಳನ್ನು ಕಟ್ಟಿಸಿ, ಕಲಶ ಯುಕ್ತವಾದ ನಿಶಾನೆಗಳನ್ನು ನಿಲ್ಲಿಸಿ, ನಗರದಲ್ಲಿ ದೊಡ್ಡ ಸಮಾರಂಭವನ್ನು ನಡಿಸಿದನು || ೨೮ || ಆಮೇಲೆ ಶ್ರೀ ಗುರುಗಳನ್ನು ಪಾಲಿಕೆಯಲ್ಲಿ ಕೂಡ್ರಿಸಿ, ತಾನು ಕಾಲಿನಿಂದ ನಡೆಯುತ್ತ ಒಳ್ಳೇ ಉತ್ಸವದಿಂದ ನಡುನಡವೆ ಶ್ರೀ ಗುರುಗಳಮೇಲೆ ನವರತ್ನಗಳನ್ನು ತೂರುತ್ತ ಬರುತ್ತಿದ್ದನು. ಆಗ ಆ ಊರ ಜನರು ಅಲ್ಲಲ್ಲಿಗೆ ಆರತಿಯನ್ನು ಮಾಡುತ್ತಿದ್ದರು. || ೨೯ || ಈ ಪ್ರಕಾರ ರಾಜನು ಒಳ್ಳೇ ಸಮಾರಂಭದಿಂದ ಶ್ರೀ ಗುರುಗಳನ್ನು ಕರಕೊಂಡು ನಡೆದಿರಲು ಆಗ ಎಲ್ಲ ಜನರು ವಿಸ್ಮಿತರಾಗಿ— ಇದು ಮಹದಾಶ್ಚರ್ಯವೆಂದೆನ್ನುತ್ತಿದ್ದರು. || ೩೦ || ಇತ್ತ ಮ್ಲೇಂಛಜಾತಿಯ ಜನರು— ಈ ರಾಜನು ತಾನು ಮುಸಲ್ಮಾನನಿದ್ದು, ಅನಾಚಾರಿಯಾಗಿ ಈ ದಿನ ತನ್ನ ಜಾತಿಯ ಧರ್ಮವನ್ನು ಬಿಟ್ಟು ಬ್ರಾಹ್ಮಣರ ಪೂಜಾ ಮಾಡುತ್ತಾನೆ ನೋಡಿರಿ || ೩೧ || ಮ್ಲೇಂಛ ಜಾತಿಯವರು ಯಾರ ಮುಖವನ್ನು ನೋಡಬಾರದೋ 'ಅಂಥ ಬ್ರಾಹ್ಮಣರನ್ನು ಸೇವಿಸಿ ಪೂಜಿಸುತ್ತಿರುವನು. ಈ ರಾಜನು ನಷ್ಟನಿರುವನು ! ಎಂದು ನಿಂದಿಸುತ್ತಿದ್ದರು || ೩೨ || ಇತ್ತ ಯಾವತ್ತು ಬ್ರಾಹ್ಮಣರು ಸಂತೋಷದಿಂದ ಕೌತುಕಪಡುತ್ತ— ರಾಜನು ಬ್ರಾಹ್ಮಣರ ಸೇವಕನಾದ್ದರಿಂದ ಇನ್ನು ರಾಜ್ಯಕ್ಕೆ ಕಲ್ಯಾಣವಾಗುವದು || ೩೩ || ಇಂಥ ಧರ್ಮವಂತ ರಾಜನಿದ್ದು ತಾನು ಮಹಾ ರಾಜ್ಯ ಧರ್ಮದಂತೆ ನಡೆಯುವನು. ಇವನು ಎಂದೂ ನಮ್ಮ ದ್ವೇಷ ಮಾಡುವದಿಲ್ಲೆಂದು ತಿಳಿಯಿರಿ. || ೩೪ || ಈ ಪ್ರಕಾರದ ರಾಜನಿದ್ದರೆ ದೇಶಕ್ಕೆ ಕಲ್ಯಾಣವಾಗುವದು ಇವನು ಸ್ವಾಭಾವಿಕವಾಗಿ ಜ್ಞಾನವಂತನಿದ್ದು ನೋಡಿದರೆ ಬ್ರಹ್ಮದ್ವೇಷಿಯಲ್ಲ ! ಇವನು ಪುಣ್ಯ ಶ್ಲೋಕನಿರುವನು ಎಂದೆನ್ನುತ್ತಿದ್ದರು. || ೩೫ || ಈ ಪ್ರಕಾರ ಆ ರಾಜನು ಶ್ರೀ ಗುರುಗಳನ್ನು ಉತ್ಸವದಿಂದ ತನ್ನ ಮನೆಗೆ ಕರ ಕೊಂಡು ಹೋಗುವಾಗ ಆ ಊರ ಜನರು ನೋಡಲಿಕ್ಕೆ ಬಂದು ಪ್ರೀತಿಯಿಂದ ಶ್ರೀ ಗುರುಗಳಿಗೆ ನಮಸ್ಕರಿಸುತ್ತಿದ್ದರು. ರಾಜನು ನಡೆಯುತ್ತ ಬರುವದನ್ನು ನೋಡಿ ಎಲ್ಲರು ಆಶ್ಚರ್ಯಪಡುತ್ತಿದ್ದರು. || ೩೬ || ಮತ್ತು ಈ

ಯತಿಗಳು ದೇವರೆಂದು ತಿಳಿದು, ಈ ಯವನರಾಜನು ಸೇವಿಸುವನು ಕಲಿಯುಗದಲ್ಲಿ ಇದೊಂದು ಹೊಸ ಸಂಗತಿಯನ್ನು ನೋಡಿದೆವೆಂದು ಎಲ್ಲರೂ ಅನ್ನುತ್ತಿದ್ದರು. || ೨೩೭ || ಆ ಮೆರವಣಿಗೆಯಲ್ಲಿ ಅನೇಕ ವಾದ್ಯಗಳು ಘೋರ್ಗರೆಯುತ್ತಿದ್ದವು. ವಂದಿ-ಮಾಘದವರು ಅನೇಕ ರೀತಿಯಾಗಿ ಹೊಗಳುತ್ತಿದ್ದರು. ಇಂಥ ಸಮಾರಂಭದಲ್ಲಿ ಒಳ್ಳೇ ಹರ್ಷಿತನಾಗಿ ಶ್ರೀ ಗುರುಗಳನ್ನು ಕರಕೊಂಡು ಹೋಗಹೋಗುತ್ತ || ೨೩೮ || ನಾನಾಪ್ರಕಾರದ ದಿವ್ಯ ವಸ್ತ್ರಗಳನ್ನೂ ಶ್ರೀ ಗುರುಗಳಿಗೆ ನಿವಾಳಿಸಿ ಅಲ್ಲಿ ನಿಂತವರಿಗೆ ಕೊಡುತ್ತಿದ್ದನು ಮತ್ತು ದ್ರವ್ಯವನ್ನು ನಿವಾಳಿಸಿ ಅಲ್ಲಿ ಕುಳಿತ ಭಿಕ್ಷುಕರ ಪಾತ್ರೆಯಲ್ಲಿ ಹಾಕುತ್ತಿದ್ದನು. ಆದರಿಂದ ಭಿಕ್ಷುಕರು ಬಹು ಸಂತೋಷಪಡುತ್ತಿದ್ದರು. || ೨೩೯ || ಆ ರಾಜನು ಈ ಪ್ರಕಾರ ಸಮಾರಂಭದಿಂದ ಶ್ರೀ ಗುರುಗಳನ್ನು ಕರಕೊಂಡು ಸುಖರೂಪವಾಗಿ ಅರಮನೆಯ ಮಹಾದ್ವಾರಕ್ಕೆ ಬಂದನು. || ೨೪೦ || ಅಲ್ಲಿಯ ಹಾದಿಗಳಲ್ಲಿ ಅನೇಕ ದಿವ್ಯವಾದ ವಸ್ತ್ರಗಳನ್ನು ಹಾಸಿದ್ದರು. ಭೇರಿನಗಾರಿ ಮೊದಲಾದ ವಾದ್ಯಗಳು ಬಾರಿಸುತ್ತಿರಲು ರಾಜನು ಶ್ರೀ ಗುರುಗಳನ್ನು ಅರಮನೆಯ ಸಭಾಗೃಹಕ್ಕೆ ಕರಕೊಂಡು ಬಂದನು || ೨೪೧ || ಆಮೇಲೆ ಅಲ್ಲಿ ಅತಿಶಯವಾಗಿ ಶೃಂಗರಿಸಿದ ಸಿಂಹಾಸನದಲ್ಲಿ ಶ್ರೀ ಜಗದ್ಗುರುಗಳನ್ನು ಕೂಡ್ರಿಸಿದನು || ೨೪೨ || ಆಮೇಲೆ ಆ ರಾಜಮಂದಿರದ ಸ್ತ್ರೀಯರು ಅನನ್ಯ ಭಕ್ತಿಯಿಂದಲೂ ಒಳ್ಳೇ ಹರ್ಷದಿಂದಲೂ ಕೂಡಿ ಶ್ರೀ ಗುರುಗಳಿಗೆ ಆರತಿಯನ್ನು ಮಾಡಿ, ಮುತ್ತು-ರತ್ನಗಳನ್ನು ನಿವಾಳಿಸಿದರು. || ೨೪೩ || ಆಮೇಲೆ ಶ್ರೀ ಗುರುಗಳು ಯಾವತ್ತು ಜನರನ್ನು ಸಭಾಗೃಹದೊಳಗೆ ಬಿಟ್ಟು ನಾಲ್ಕು ಮಂದಿ ಮುಖ್ಯ ಶಿಷ್ಯರೊಡನೆ ಆ ರಾಜನ ಅಂತಃಪುರದೊಳಗೆ ಹೋದರು. || ೨೪೪ || ಆಗ ರಾಜನು ಶ್ರೀ ಗುರುಗಳಿಗೆ ತನ್ನ ಧರ್ಮಪತ್ನಿ-ಪುತ್ರ-ಪೌತ್ರ-ಸಹೋದರ ಮೊದಲಾದವರನ್ನು ತೋರಿಸಿದರು ಅವರು ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು || ೨೪೫ || ಆಗ ರಾಜನು ವಿನಯದಿಂದ— ಸ್ವಾಮೀ, ನಾನು ಪೂರ್ವದಲ್ಲಿ ತಮ್ಮ ಚರಣಸೇವೆಯನ್ನು ಮಾಡಿದ ಪುಣ್ಯದಿಂದ ಈ ಜನ್ಮದಲ್ಲಿ ನಾನು ತಮ್ಮ ದಿವ್ಯ ಚರಣಗಳನ್ನು ನೋಡಿ, ತಮ್ಮ ಕೃಪಾದೃಷ್ಟಿಯಿಂದ ಸರ್ವ ಸುಖಗಳನ್ನು ಹೊಂದಿದೆನು ಎಂದು ಅವರ ಪಾದಕ್ಕೆ ನಮಸ್ಕಾರ

ಮಾಡಿದನು ॥ ೨೪೬ ॥ ಆಗ ಶ್ರೀ ಗುರುಗಳು ಸಂತೋಷದಿಂದ ಅವನಿಗೆ ಆಶೀರ್ವಾದ ಮಾಡಿ ಅವನ ರಾಜ್ಯದ ಹಾಗು ಗೃಹಗಳ ವಾರ್ತೆಗಳನ್ನು ಕೇಳಿದರು. ॥ ೨೪೭ ॥ ಆಮೇಲೆ ಅವರು— ಎಲೈ ರಾಜನೇ, ಈಗ ನಿನ್ನ ಮನಸ್ಸಿಗೆ ಸಂತೋಷವಾಯಿತೇ ? ಇನ್ನೂ ನಿನ್ನ ಮನಸ್ಸಿನಲ್ಲಿ ಏನಾದರೂ ಆಗುವದಿದ್ದರೆ ವಿಸ್ತಾರವಾಗಿ ಹೇಳು ಎಂದು ಅಂದರು. ॥ ೨೪೮ ॥ ಆಗ ರಾಜನು ವಿನಯದಿಂದ— ಸ್ವಾಮೀ, ನಾನು ಬಹುದಿವಸ ಪರಿಯಂತರ ರಾಜ್ಯವಾಳಿದೆನು. ಇನ್ನು ಸಾಕು ಇನ್ನು ತಮ್ಮ ಚರಣಸೇವೆಗೆ ಅಂತರವಾಗಬಾರದೆಂದು ನನ್ನ ಅಪೇಕ್ಷೆಯಿದ್ದ ಕಾರಣ ಇನ್ನು ತಮ್ಮ ಚರಣಸೇವೆಯನ್ನು ದಯಪಾಲಿಸಿರಿ ಎಂದು ಬೇಡಿಕೊಂಡನು ॥ ೨೪೯ ॥ ಆಗ ಶ್ರೀ ಗುರುಗಳು— ಎಲೈ ರಾಜನೇ, ಇನ್ನು ಮೇಲೆ ನಿನ್ನ ಮಕ್ಕಳು ರಾಜ್ಯಭಾರ ಮಾಡುತ್ತಾರೆ ನಾವು ಇನ್ನು ಸ್ವಲ್ಪ ದಿವಸಗಳಲ್ಲಿ ಶ್ರೀ ಶೈಲಕ್ಕೆ ಹೋಗುವೆವು ಆಗ ನೀನು ಅಲ್ಲಿಗೆ ಬಾ ಅಂದರೆ ಅಲ್ಲಿ ನಿನಗೆ ನಮ್ಮ ದರ್ಶನವಾಗುವದು ॥ ೨೫೦ ॥ ಎಂದು ಶ್ರೀ ಗುರುಗಳು ಅವನಿಗೆ ನಿರೋಪಕೊಟ್ಟು ಅಲ್ಲಿಂದ ಹೊರಟರು ಆಗ ಆ ರಾಜನು ಅವರ ಚರಣಗಳನ್ನು ಹಿಡಿದು ವಿನಯದಿಂದ— ಸ್ವಾಮೀ, ನನಗೆ ಜ್ಞಾನೋದಯವಾಗಬೇಕು ಎಂದು ಬೇಡಿಕೊಂಡನು. ॥ ೨೫೧ ॥ ಆಗ ಕೃಪಾಸಾಗರರಾದ ಶ್ರೀ ಗುರುಗಳು— ಎಲೈ ರಾಜನೇ, ಇನ್ನು ನಿನಗೆ ಜ್ಞಾನ ವುಂಟಾಗುವದು, ಎಂದು ಹೇಳಿ ಅಲ್ಲಿಂದ ತೀವ್ರವಾಗಿ ಹೊರಟು ಗೋದಾವರಿ ತೀರಕ್ಕೆ ಹೋದರು ॥ ೨೫೨ ॥ ಅಲ್ಲಿ ಸ್ನಾನ ಮಾಡಿ ಮುಂದೆ ಗಾಣಗಾಪುರಕ್ಕೆ ಬಂದರು ಆಗ ಶ್ರೀ ಗುರುಗಳ ದರ್ಶನದಿಂದ ಅಲ್ಲಿಯ ಸರ್ವ ಜನರಿಗೂ ಆನಂದವಾಯಿತು ॥ ೨೫೩ ॥ ಆಮೇಲೆ ಸರ್ವ ಜನರು ಸಂತುಷ್ಟರಾಗಿ ಕೌತುಕವನ್ನು ನೋಡಲಿಕ್ಕೆ ಬಂದು, ಶ್ರೀ ಗುರುಗಳಿಗೆ ಎಲ್ಲರೂ ನಮಸ್ಕಾರ ಮಾಡಿ ಭಕ್ತಿಯಿಂದ ಆರತಿಯನ್ನು ಮಾಡಿದರು. ॥ ೨೫೪ ॥ ಆಮೇಲೆ ಶ್ರೀ ಗುರುಗಳು ಯಾವತ್ತು ಶಿಷ್ಯರನ್ನು ಕರೆದು— ಎಲೈ ಶಿಷ್ಯರೇ, ಇಲ್ಲಿ ನಾವು ಪ್ರತ್ಯಕ್ಷವಾಗಿದ್ದದರಿಂದ ನಮ್ಮ ಖ್ಯಾತಿಯು ಎಲ್ಲ ಕಡೆಗೂ ಪ್ರಕಟವಾಯಿತು. ಆದ್ದರಿಂದ ಇನ್ನು ನಾವು ಇಲ್ಲಿಯೇ ಗುಪ್ತವಾಗಿರುವೆವು. ॥ ೨೫೫ ॥ ಇದು ನಮ್ಮ ನಿಮ್ಮ ಅಂತರಂಗದ ಮಾತು, ಆದರೆ ಯಾತ್ರಾ ನಿಮಿತ್ತವಾಗಿ

ಈಗ ಶ್ರೀಶೈಲಕ್ಕೆ ಸಹಜವಾಗಿ ಹೋಗುವೆವೆಂಬುದು ಎಲ್ಲ ಜನರಿಗೂ ತಿಳಿಯುವ ಬಹಿರಂಗದ ಮಾತು. || ೨೫೬ || ಗಾಣಗಾಪುರವು ನಮ್ಮ ಮುಖ್ಯ ವಾಸಸ್ಥಾನವು ಇಲ್ಲಿಂದ ನಿಶ್ಚಯವಾಗಿ ಎಲ್ಲಿಯೂ ಹೋಗುವದಿಲ್ಲ. ಲೌಕಿಕಾರ್ಥವಾಗಿ ಮಾತ್ರ ಶ್ರೀಶೈಲ ಯಾತ್ರೆಗೆ ಹೋಗುವೆವೆಂದು ಹೇಳುವೆವು. || ೨೫೭ || ಯಾತ್ರೆಯ ನೆವ ಮಾಡುವೆವು. ಭಕ್ತರನ್ನು ಉದ್ಧರಿಸುವದಕ್ಕಾಗಿ ನಾವು ನಿರಂತರ ಈ ಗಾಣಗಾಪುರದಲ್ಲಿಯೇ ಗುಪ್ತ ರೂಪದಿಂದ ನಿಶ್ಚಯವಾಗಿರುವೆವು. || ೨೫೮ || ಯಾಕಂದರೆ ಈ ಕಲಿಯುಗದ ಧರ್ಮವು ಕಠಿಣವಾಗಿದೆ ಮ್ಲೇಂಛ ರಾಜರು ಕ್ರೂರ ಕರ್ಮಿಗಳು. ನಾವು ಪ್ರಗಟರೂಪದಿಂದ್ದರೆ ಲೋಕದಲ್ಲಿ ಅಧರ್ಮವು ಘಟಿಸುವದು ಯಾಕಂದರೆ ಮೊನ್ನೆ ಆ ಯವನ ರಾಜನು ಬಂದು ತನ್ನ ಇಷ್ಟವನ್ನು ಪೂರ್ಣ ಮಾಡಿಕೊಂಡದ್ದನ್ನು ಉಳಿದ ಯವನರು ಕೇಳಿ ತಾವೂ ನಿಶ್ಚಯವಾಗಿ ಇಲ್ಲಿಗೆ ಬರುವರು. ಆದಕಾರಣ ನಾವು ಇಲ್ಲಿಯೇ ಗುಪ್ತವಾಗಿರುತ್ತೇವೆ. || ೨೫೯-೨೬೦ || ಎಂದು ಶ್ರೀಗುರುಗಳು ಆ ಎಲ್ಲ ಶಿಷ್ಯರಿಗೆ ಹೇಳಿದರು. ಎಲೈ ನಾಮಧಾರಕನೇ, ಶ್ರೀ ಗುರುಗಳ ಚರಿತ್ರೆಯು ಈ ಪ್ರಕಾರವಾಗಿರುತ್ತದೆ. || ೨೬೧ || ಮುಂದೆ ದುರ್ದಿನವು ಬಂದು ಯವನ ರಾಜ್ಯವಾಗಿ, ಸಮಸ್ತ ಯವನರು ತಮ್ಮ ಸೇವೆಗೆ ಬರುವರೆಂದು ತಿಳಿದು ಶ್ರೀ ಗುರುಗಳು ಗಾಣಗಾಪುರದಲ್ಲಿಯೇ ಗುಪ್ತವಾಗಿದ್ದು ವ್ಯವಹಾರಕ್ಕಾಗಿ ಮಂದಿಗೆ ಕಾಣುವಂತೆ ಶ್ರೀಶೈಲಕ್ಕೆ ಹೊರಟರು. ಆ ಕಥೆಯು ವಿಶೇಷವಾದದ್ದಿರುತ್ತದೆ ಎಂದು ಸಿದ್ಧರು ಹೇಳಿದರೆಂದು || ೨೬೨-೨೬೩ || ಸರಸ್ವತೀ ಗಂಗಾಧರನು ಹೇಳಿ ಮತ್ತೆ— ಎಲೈ ಶ್ರೋತೃಗಳೇ, ಶ್ರೀ ಗುರುಗಳು ಈಗ್ಯೂ ಗಾಣಗಾಪುರದಲ್ಲಿ ಪ್ರತ್ಯಕ್ಷವಾಗಿರುವರು. ಅವರನ್ನು ನಾನು ನೋಡಿದೆನು. || ೨೬೪ || ಯಾರು ಸದ್ಭಕ್ತಿಯಿಂದ ಶ್ರೀ ಗುರುಗಳನ್ನು ಸೇವಿಸುವರೋ ಅವರು ತಮ್ಮ ಮನಸ್ಸಿನಲ್ಲಿಯ ಪೂರ್ಣ ಇಚ್ಛೆಯನ್ನು ಹೊಂದುವರು ಮನಸಿನಲ್ಲಿ ಅನುಮಾನ ಮತ್ತು ಸಂಶಯಗಳನ್ನು ಮಾಡಬೇಡಿರಿ, ಅಲ್ಲಿ ಏನೂ ಕಷ್ಟವಾಗದೆ ಮನಸ್ಸಿನ ಇಚ್ಛೆಯು ಕೂಡಲೆ ಸಿದ್ಧಿಯಾಗುವದೆಂದು ತಿಳಿಯಿರಿ. || ೨೬೫ || ಆದ್ದರಿಂದ ಮನಸ್ಸಿನ ಅಪೇಕ್ಷೆಗಳನ್ನು ಪಡೆಯುತಕ್ಕವರು ತೀವ್ರವಾಗಿ ಅಲ್ಲಿಗೆ ಹೋಗಿ ಕಲ್ಪವೃಕ್ಷವಾದಂಥ ಶ್ರೀ ಗುರುಗಳನ್ನು ಭಕ್ತಿಯಿಂದ ಸೇವಿಸಿ, ಆ ಆ ಫಲಗಳನ್ನು

ಹೊಂದಲಿಕ್ಕೆ ಯಾವ ಅಡ್ಡಿಯೂ ಇಲ್ಲ. ॥ ೩೬೬-೩೬೭ ॥ ಶ್ರೀ ಗುರುಗಳು ಧನ-ಧಾನ್ಯಾದಿ ಪುತ್ರ-ಪೌತ್ರಾದಿ ಅಷ್ಟೈಶ್ವರ್ಯಗಳಲ್ಲಿ ಬೇಕಾದದ್ದನ್ನು ತೀವ್ರವಾಗಿ ಕೊಡುವರು. ಈ ಗುರುಚರಿತ್ರೆಯನ್ನು ಅಹೋರಾತ್ರಿ ಭಕ್ತಿಯಿಂದ ಓದಿದರೆ ಮನಸ್ಸಿನ ಎಲ್ಲ ಇಚ್ಛೆಗಳು ಪೂರ್ಣವಾಗುವವು ಎಂದು ಹೇಳಿದನು. ॥ ೩೬೮ ॥ ಹೀಗೆ ಈ ಗುರುಚರಿತ್ರಾಮೃತದಲ್ಲಿ ಸಿದ್ಧರು ನಾಮಧಾರಕನಿಗೆ ಹೇಳಿದ ಯವನನ ಉದ್ಧಾರದ ಕಥೆಯನ್ನು ನಾನು ನಿಮ್ಮ ದೆಶೆಯಿಂದ ಹೇಳಿದೆನು ಎಂದನು. ॥ ೩೬೯ ॥

ಇತಿ ಶ್ರೀ ಗುರುಚರಿತ್ರ ಪರಮಕಥಾಕಲ್ಪತರೌ, ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ, ಸಿದ್ಧನಾಮಧಾರಕ ಸಂವಾದೇ ಸಾರ್ವಭೌಮ ಸ್ಫೋಟಕ ಶಮನೇ, ವೈದೂರಾನಗರ ಪ್ರವೇಶ ತಸ್ಯ ಐಶ್ವರ್ಯಾವಲೋಕನಂ ನಾಮ ಪಂಚಶತ್ತಮೋಽಧ್ಯಾಯಃ ॥ ೫೦ ॥ ಶ್ರೀಪಾದ ಶ್ರೀವಲ್ಲಭ ಶ್ರೀ ನರಸಿಂಹಸರಸ್ವತಿ ಗುರುಭ್ಯೋ ನಮಃ ॥

— ೫೦ನೇ ಅಧ್ಯಾಯ ಸಮಾಪ್ತ —

---

# ೫೧ನೇಯ ಅಧ್ಯಾಯ

## ಶ್ರೀ ಗುರುಗಳು ಕರ್ದಳೀ ವನಕ್ಕೆ ಹೋಗಿ ನಿಜಾನಂದದಲ್ಲಿ ಮಗ್ನರಾದದ್ದು

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ನಾಮಧಾರಕನು ವಿನಯದಿಂದ— ಸ್ವಾಮೀ, ಕೃಪಾವಂತ ಸಿದ್ಧಮುನಿಗಳೇ, ಆ ಮ್ಲೇಂಛ ರಾಜನು ಶ್ರೀ ಗುರುಗಳನ್ನು ತನ್ನ ಮನೆಗೆ ಕರಕೊಂಡು ಹೋಗಿದ್ದನು. ॥ ೧ ॥ ಅಲ್ಲಿಂದ ಅವರು ತಿರುಗಿ ಗಾಣಗಾಪುರಕ್ಕೆ ಬಂದರೆಂದು ಹಿಂದೆ ಹೇಳಿದಿರಿ. ಈಗ ಅಮೃತಮಯವಾದ ಗುರುಚರಿತ್ರೆಯು ಮುಂದೆ ಹ್ಯಾಗೆ ನಡೆಯಿತೆಂಬದನ್ನು ಹೇಳಿರಿ ಎಂದನು. ॥ ೨ ॥ ಆಗ ಸಿದ್ಧರು— ವತ್ಸಾ ನಾಮಧಾರಕಾ, ಕೇಳು. ಅತಿ ವಿಶೇಷವಾದ ಮುಂದಿನ ಕಥೆಯನ್ನು ಕೇಳುವದರಿಂದ ಸಕಲ ಪಾಪಗಳು ನಾಶವಾಗಿ ಚಿಂತಿಸಿದ ಫಲಗಳಾಗುವವು. ॥ ೩ ॥

ಶ್ರೀ ಗುರುಗಳು ಆ ಮ್ಲೇಂಛ ರಾಜನ ಭೆಟ್ಟಿಯನ್ನು ತಕ್ಕೊಂಡು ಗಾಣಗಾಪುರಕ್ಕೆ ಬಂದನಂತರ, ತಮ್ಮ ಮನಸ್ಸಿನಲ್ಲಿ, ಇನ್ನು ಗುಪ್ತವಾಗಿರಬೇಕೆಂದು ವಿಚಾರ ಮಾಡಿ ॥ ೪ ॥ ಶಿಷ್ಯರನ್ನು ಕುರಿತು— ಎಲೈ ಶಿಷ್ಯರಿರಾ, ನಮ್ಮ ಪ್ರಸಿದ್ಧಿಯು ಬಹಳವಾಗಿ ಆ ಯವನ ರಾಜನು ನಮ್ಮ ದರ್ಶನಕ್ಕೆ ಬಂದು ಸುಖವನ್ನು ಹೊಂದಿದನು. ಆದ್ದರಿಂದ ಮ್ಲೇಂಛ ಜನರಿಗೆ ನಮ್ಮ ಮೇಲೆ ಭಕ್ತಿಯು ಉಂಟಾಗಿದೆ ಇನ್ನು ನಮ್ಮ ದರ್ಶನಕ್ಕೆ ನಾನಾಜಾತಿಯ ಜನರು ಬರುವರು. ॥ ೫ ॥ ಆದ್ದರಿಂದ ಇಲ್ಲಿ ನಾವು ಇನ್ನು ಪ್ರಗಟವಾಗಿರುವದು ಸರಿಯಲ್ಲ. ಈಗ ಗುಪ್ತವಾಗಿರಬೇಕಾಗಿದೆ ಎಂದು ಹೇಳಿ ಶ್ರೀಶೈಲ ಯಾತ್ರೆಗೆ ಹೋಗುವೆವೆಂಬ ನೆವಮಾಡಿ ಯಾವತ್ತೂ ಜನರಿಗೆ ಕಾಣುವಂತೆ ಪ್ರಗಟರೂಪದಿಂದ ಶಿಷ್ಯರು ಸಹಿತ ಸಹಜವಾಗಿ ಶ್ರೀಶೈಲ ಯಾತ್ರೆಗೆ ಹೊರಟರು. ॥ ೬-೭ ॥ ಆಗ ಅಲ್ಲಿಯ ಎಲ್ಲ

ಭಕ್ತ ಜನರು ಆವರನ್ನು ಕಳಿಸಲಿಕ್ಕೆ ಬಂದು ಬಹಳ ಚಿಂತಿಸುತ್ತಿದ್ದರು. ಶ್ರೀ ಗುರುಗಳು ಅವರನ್ನು ಸಮಾಧಾನ ಮಾಡುವದಕ್ಕಾಗಿ ಅತಿ ಪ್ರೀತಿಯಿಂದ ಅಲ್ಲಿಯೇ ನಿಂತುಕೊಂಡರು. ॥ ೮ ॥ ಆಮೇಲೆ ಆ ಎಲ್ಲ ಭಕ್ತ ಜನರು ದುಃಖಿಸುತ್ತ ಬಂದು ಅವರ ಚರಣಗಳಿಗೆ ನಮಸ್ಕಾರ ಮಾಡಿ— ಸ್ವಾಮೀ, ಗುರುವರ್ಯರೇ, ಯತಿರಾಯರೇ, ನಮ್ಮನ್ನು ಬಿಟ್ಟು ಯಾಕೆ ಹೋಗುವಿರಿ ? ॥ ೯ ॥ ನೀವು ಭಕ್ತರ ಕಾಮಧೇನುವು. ನಾವು ಅಜ್ಞಾನಿಗಳಾದ ಬಾಲಕರು. ತಾವು ನಮ್ಮ ಕಲ್ಯಾಣಕರ್ತರಾಗಿದ್ದು ಈಗ ನಮ್ಮನ್ನು ಬಿಟ್ಟು ಯಾಕೆ ಹೋಗುವಿರಿ ? ॥ ೧೦ ॥ ನಿತ್ಯ ತಮ್ಮ ದರ್ಶನದಿಂದ ನಮ್ಮ ಪಾಪಗಳೆಲ್ಲವೂ ಹೋಗಿ ನಮ್ಮ ಮನಸ್ಸಿನ ಇಚ್ಛೆಗಳು ತೀವ್ರವಾಗಿ ಸಿದ್ಧಿಸುವವು. ॥ ೧೧ ॥ ತಾಯಿಯು ತನ್ನ ಕೂಸನ್ನು ತಿರಸ್ಕಾರ ಮಾಡಿ ಬಿಟ್ಟು ಹೋಗುವಳೇ ? ನೀವೇ ನಮ್ಮ ತಂದೆ ತಾಯಿಗಳಾದ್ದರಿಂದ ನಮ್ಮನ್ನು ತಿರಸ್ಕರಿಸಬಾರದು ಎಂದು ಬೇಡಿಕೊಂಡರು ॥ ೧೨ ॥ ಈ ಪ್ರಕಾರ ಭಕ್ತರ ನಾನಾತರದ ವಿನಂತಿಯನ್ನು ಕೇಳಿ ಶ್ರೀ ಗುರುಗಳು ನಕ್ಕು ಅತಿ ಪ್ರೀತಿಯಿಂದ— ಎಲೈ ಭಕ್ತರೇ, ನೀವು ಏನೂ ಚಿಂತೆ ಮಾಡಬೇಡಿರಿ. ನಾವು ಇದೇ ಗ್ರಾಮದಲ್ಲಿ ವಾಸಮಾಡಿ, ನಿತ್ಯ ಅಮರಜಾ ಸಂಗಮದಲ್ಲಿ ಸ್ನಾನ ಮಾಡುತ್ತ, ಮಧ್ಯಾಹ್ನದಲ್ಲಿ ಗುಪ್ತವಾಗಿ ಸದಾ ಈ ಮಠದಲ್ಲಿರುವೆವು. ॥ ೧೩-೧೪ ॥ ನಮ್ಮ ಒಳ್ಳೇ ಪ್ರೇಮದ ಭಕ್ತರಿಗೆ ಮಾತ್ರ ನಾವು ಪ್ರತ್ಯಕ್ಷ ಕಾಣಿಸುವೆವು ಅಜ್ಞಾನಿಗಳಾದ ಲೋಕದ ಜನರ ದೃಷ್ಟಿಗೆ ಮಾತ್ರ ಶ್ರೀಶೈಲ ಯಾತ್ರೆಗೆ ಹೋಗುವೆವೆಂದು ಹೇಳಿ ಹೋಗುವೆವು ॥ ೧೫ ॥ ನಿತ್ಯ ಔದುಂಬರ ವೃಕ್ಷವಿರುವ ಕೃಷ್ಣಾ ಪಂಚಗಂಗಾ ಸಂಗಮದಲ್ಲಿ (ನರಸೋಬವಾಡಿಯಲ್ಲಿ) ಪ್ರಾತಃಸ್ನಾನ ಮಾಡಿ, ಆಮೇಲೆ ಬಿಂದು ಕ್ಷೇತ್ರದಲ್ಲಿ (ಕಾಶಿಯಲ್ಲಿ) ಅನುಷ್ಠಾನ ಮಾಡುತ್ತ, ಮಧ್ಯಾಹ್ನದಲ್ಲಿ ಭೀಮಾ ತಟಾಕಕ್ಕೆ ಬರುವೆವು ॥ ೧೬ ॥ ಅಮರಜಾ ಸಂಗಮದಲ್ಲಿ ಮತ್ತೆ ಸ್ನಾನ ಮಾಡಿ, ಆಮೇಲೆ ಮಠಕ್ಕೆ ಬಂದು, ನಿರ್ಗುಣ ರೂಪದಿಂದಿದ್ದು ನಿಮ್ಮ ಪೂಜೆಯನ್ನು ಸ್ವೀಕರಿಸುವೆನು. ಈ ವಿಷಯಕ್ಕೆ ಯಾರೂ ಮನಸ್ಸಿನಲ್ಲಿ ಚಿಂತೆ ಮಾಡಬಾರದು. ॥ ೧೭ ॥ ನಾವು ಈಗ ಗಾಣಗಾಪುರದಲ್ಲಿಯೇ ಅಹೋರಾತ್ರಿ ವಾಸವಾಗಿರುವೆವು. ಈ ಮಾತು ತ್ರಿವಾರ ಸತ್ಯವು. ಇದಕ್ಕೆ ಯಾರೂ ಸಂಶಯ ಮಾಡ

ಬಾರದು. | ೧೮ || ಯಾರು ನಮ್ಮ ಮೇಲೆ ಭಕ್ತಿಯನ್ನು ಮಾಡುತ್ತಾರೋ ಅವರ ಮೇಲೆ ನಮ್ಮದೂ ಅತಿ ಪ್ರೀತಿಯಾಗುವದು. ಆದರಿಂದ ಅವರು ತಮ್ಮ ಇಚ್ಛೆಯ ಫಲವನ್ನು ಹೊಂದುವರು. ಇದು ನಮ್ಮ ಸಿದ್ಧ ವಾಕ್ಯವಿರುತ್ತದೆ. || ೧೯ || ಸಂಗಮದಲ್ಲಿರುವ ಅಶ್ವತ್ಥ ವೃಕ್ಷವು ಕಲ್ಪವೃಕ್ಷವಾಗಿದೆ. ಅದನ್ನು ಪೂಜಿಸಿದವರ ಸರ್ವ ಇಷ್ಟಾರ್ಥಗಳು ಬೇಗ ಸಿದ್ಧಿಸುವವು || ೨೦ || ಹೀಗೆ ಆ ಅಶ್ವತ್ಥವನ್ನು ಪೂಜಿಸಿ ಆಮೇಲೆ ಮಠಕ್ಕೆ ಬರಬೇಕು. ಆ ಮಠದಲ್ಲಿರುವ ಚಿಂತಾಮಣಿಯಂತಿರುವ ನಿರ್ಗುಣವಾದ ನಮ್ಮ ಪಾದುಕೆಗಳನ್ನೂ ಭಕ್ತಿಯಿಂದ ಪೂಜಿಸಬೇಕು. || ೨೧ || ಬಳಿಕ ಮಠದಲ್ಲಿರುವ ಸರ್ವ ವಿಘ್ನಗಳನ್ನು ನಾಶ ಮಾಡುವಂಥ, ವಿಘ್ನಹರ ಚಿಂತಾಮಣಿ ವಿನಾಯಕನನ್ನು ಒಂದೇ ಮನಸ್ಸಿನಿಂದ ಪೂಜಿಸಬೇಕು. ಕೂಡಲೆ ಚಿಂತಿಸಿದ ಫಲವಾಗಿ ಲಾಭವಾಗುವದು. || ೨೨ || ಗಾಣಗಾಪುರದಲ್ಲಿ ಭೀಮಾ ತೀರದಲ್ಲಿರುವ ವಿಶೇಷವಾದ ಅಷ್ಟ ತೀರ್ಥಗಳಲ್ಲಿ ಭಕ್ತಿಯಿಂದ ಸ್ನಾನ, ದಾನಾದಿಗಳನ್ನು ಆಚರಿಸಬೇಕು. || ೨೩ || ತ್ರಿಕಾಲದಲ್ಲಿಯೂ ನಮಗೆ ಆನಂದದಾಯಕವಾದ ಆರತಿಗಳನ್ನು ಮಾಡಬೇಕು. ಹೀಗೆ ಮಾಡಿದ ಭಕ್ತರ ಇಚ್ಛೆಗಳು ಬೇಗ ಪೂರ್ಣವಾಗುವವು. || ೨೪ || ಎಂದು ಹೇಳಿ ಶ್ರೀಗುರುಗಳು ಹೊರಟರು. ಆ ಭಕ್ತ ಜನರು ಶ್ರೀ ಗುರುಗಳನ್ನು ಮುಂದಕ್ಕೆ ಕಳಿಸಿ, ಕಣ್ಮರೆಯಾಗುವತನಕ ಅವರನ್ನು ನೋಡಿ, ಮನಸ್ಸಿನಲ್ಲಿ ಚಿಂತೆ ಮಾಡುತ್ತ ಹಿಂದಿರುಗಿ ಮಠಕ್ಕೆ ಬಂದು || ೨೫ || ನೋಡಲಾಗಿ ಅಲ್ಲಿಯೂ ಶ್ರೀಗುರುಗಳು ಕಾಣಿಸಿದರು. ಆಗ ಆ ಜನರು ಆಶ್ಚರ್ಯ ಹೊಂದಿ— ಶ್ರೀ ಗುರುಗಳು ಸತ್ಯವಾಗಿ ತ್ರೈಮೂರ್ತಿ ಅವತಾರವು. || ೨೬ || ಇವರಿಗೆ ನರರೆಂದು ಯಾರು ಅನ್ನುವರೋ, ಅವರು ನರಕವನ್ನು ಹೊಂದುವರು. ಇದು ಸತ್ಯವೆಂದು ತಿಳಿಯಿರಿ. ನಮಗೆ ಶ್ರೀ ಗುರುಗಳ ಮಹಿಮೆಯು ತಿಳಿಯುವದಿಲ್ಲ || ೨೭ || ಎಂದು ಆ ಕೂಡಲೇ ಮತ್ತೆ ನೋಡಲು ಅಲ್ಲಿ ಯಾರೂ ಕಾಣಲಿಲ್ಲ. ಶ್ರೀ ಗುರುಗಳು ನಿತ್ಯ ಎಲ್ಲರ ಕಣ್ಣಿಗೂ ಕಾಣಿಸದೆ, ಪ್ರೇಮವುಳ್ಳ ಭಕ್ತರ ಕಣ್ಣುಗಳಿಗೆ ಮಾತ್ರ ಕಾಣಿಸುತ್ತ, ಗುಪ್ತವಾಗಿ ಮಠದಲ್ಲಿಯೇ ಇರುವರು. || ೨೮ ||

ಅತ್ತ ಶ್ರೀ ಗುರುಗಳು ಭಕ್ತರಿಗೆ ದೃಷ್ಟಾಂತವನ್ನು ತೋರಿಸುವದಕ್ಕಾಗಿ ಶ್ರೀ ಪರ್ವತದಲ್ಲಿರುವ ಪಾತಾಳ ಗಂಗೆಯ ತೀರಕ್ಕೆ ಹೋಗಿ ಕುಳಿತು ॥ ೨೯ ॥ ಶಿಷ್ಯರನ್ನು ಕುರಿತು— ಎಲೈ ಶಿಷ್ಯರಿರಾ, ತೀವ್ರವಾಗಿ ಒಂದು ಪುಷ್ಪಾಸನವನ್ನು ಸಿದ್ಧ ಮಾಡಿರಿ. ನಾವು ಆದರಮೇಲೆ ಕೂತು ಈ ನದಿಯನ್ನು ದಾಟಿ ಹೋಗಿ ಶ್ರೀಮಲ್ಲಿಕಾರ್ಜುನ ನಲ್ಲಿ ಐಕ್ಯ ಆಗುವೆವು ಎಂದು ಆಜ್ಞೆ ಮಾಡಿದರು. ॥ ೩೦ ॥ ಅವರ ಅಪ್ಪಣೆಯಂತೆ ಆ ಶಿಷ್ಯರು ಕೂಡಲೇ ಸೇವಂತಿಗೆ, ಕಮಲ, ಕಲ್ಹಾರ, ಮಾಲತಿ ಮೊದಲಾದ ಪುಷ್ಪಗಳನ್ನು ಬಾಳೆಯ ಎಲೆಯಲ್ಲಿ ಸುತ್ತಿ ತಂದು ॥ ೩೧ ॥ ಅತಿ ವಿಚಿತ್ರವಾದ ಹಾಗು ಪವಿತ್ರವಾದ ಪುಷ್ಪಾಸನವನ್ನು ಸಿದ್ಧ ಮಾಡಿ ನದಿಯಲ್ಲಿ ಹಾಕಿದರು. ಆಗ ಗುರುಗಳು— ಎಲೈ ಶಿಷ್ಯರೇ, ನೀವು ಇನ್ನು ಊರಿಗೆ ಹೋಗಿರಿ. ಎಂದು ಹೇಳಿದರು. ॥ ೩೨ ॥ ಆ ಮಾತು ಕೇಳಿ ಅವರೆಲ್ಲರೂ ದುಃಖ ಮಾಡುತ್ತ ಬರುತ್ತಿದ್ದರು. ಅದನ್ನು ಚಂದ್ರಮೌಳಿ ಸ್ವರೂಪರಾದ ಶ್ರೀ ಗುರುಗಳು ನೋಡಿ— ಎಲೈ ಶಿಷ್ಯರೇ, ನಾವು ನಿಮ್ಮ ಸಮೀಪದಲ್ಲಿ ಗಾಣಗಾಪುರದಲ್ಲಿಯೇ ಇರುವೆವು. ನೀವು ವಿಪರೀತ ಭಾವನಾ ಮಾಡ ಬೇಡಿರಿ. ॥ ೩೩ ॥ ಈಗ ಬಹಿರಂಗವಾಗಿ ಇತರ ಜನರ ಕಣ್ಣಿಗೆ ಕಾಣುವಂತೆ ಹೋಗುವೆವು. ಆದರೆ ಗಾಣಗಾಪುರ ದಲ್ಲಿಯೇ ಗುಪ್ತವಾಗಿದ್ದು ಕೇವಲ ಭಕ್ತರ ಮನೆಯಲ್ಲಿ ಸದಾ ಇರುವೆವು. ಇದು ನಿಶ್ಚಯವೆಂದು ತಿಳಿಯಿರಿ. ನಿಮಗೆ ಈ ಪ್ರಕಾರ ದೃಷ್ಟಾಂತವೂ ಆಗುವದು. ॥ ೩೪ ॥ ಎಂದು ಹೇಳಿ ಆ ಶಿಷ್ಯರೆಲ್ಲರನ್ನು ಸಮಾಧಾನ ಮಾಡಿ ಅಲ್ಲಿಂದ ಎದ್ದು ಬಂದು ॥ ೩೫ ॥ ಶಕೆ ೧೩೮೦ ನೇ ಬಹುಧಾನ್ಯ ನಾಮ ಸಂವತ್ಸರ (ಕನ್ಯಾಗತ) ಉತ್ತರಾಯಣ ಕುಂಭ ಸಂಕ್ರಮಣ ಶಿಶಿರ ಋತು ಮಾಘ ಬಹುಳ ಪ್ರತಿಪದೆ ಶುಕ್ರವಾರ ಪುಣ್ಯ ದಿವಸ ಆ ಪುಷ್ಪಾಸನದಲ್ಲಿ ಕೂತು ನಿಜಾನಂದದಲ್ಲಿ ಮಗ್ನರಾಗಿ ॥ ೩೬-೩೭ ॥ ಶಿಷ್ಯರನ್ನು ಕುರಿತು— ಎಲೈ ಶಿಷ್ಯರೇ, ಇನ್ನು ನಾವು ನಮ್ಮ ನಿಜ ಸ್ಥಾನಕ್ಕೆ ಹೋಗುವೆವು. ನಾವು ಆಚೆಯ ದಂಡೆಗೆ ಮುಟ್ಟಿದೆವೆಂಬ ಬಗ್ಗೆ ಗುರ್ತಿಗಾಗಿ ನಿಮಗೆ ಪ್ರಸಾದರೂಪವಾಗಿ ಸೇವಂತಿಗೆ ಪುಷ್ಪಗಳನ್ನು ಕಳಿಸುವೆವು. ಅವುಗಳನ್ನು ನೀವು ಭಕ್ತಿಯಿಂದ ತೆಗೆದುಕೊಂಡು ಹೋಗಿ ಅಖಂಡವಾಗಿ ಪೂಜೆ ಮಾಡಿರಿ. ಅದರಿಂದ ನಿಮ್ಮ ಮನೆಯಲ್ಲಿ ಲಕ್ಷ್ಮಿಯು ನಿರಂತರವಾಗಿ ವಾಸ ಮಾಡುವಳು. ॥ ೩೮-೩೯ ॥

ನಿಮಗೆ ಇನ್ನೊಂದು ಗುರ್ತು ಹೇಳುವೆನು ಕೇಳಿರಿ. ನನಗೆ ಗಾಯನದ ಮೇಲೆ ಬಹಳ ಪ್ರೀತಿಯು ಅದೆ. ಆದ್ದರಿಂದ ಯಾರು ನಿತ್ಯ ಗಾಯನದ ರೂಪದಿಂದ ನಮ್ಮ ಸ್ಮರಣೆಯನ್ನು ಮಾಡುವರೋ ಅವರ ಮೇಲೆ ನಮ್ಮ ಅತ್ಯಂತ ಪ್ರೀತಿಯುಂಟಾಗಿ ಅವರ ಮನೆಯಲ್ಲಿ ನಾವು ಅಖಂಡವಾಗಿರುವೆವು. || ೪೦-೪೧ || ಅವರ ಮನೆಯಲ್ಲಿ ರೋಗದ ಉಪದ್ರವವು ಆಗುವದಿಲ್ಲ. ಅವರ ಬಡತನವು ತೀವ್ರವಾಗಿ ದೂರ ಹೋಗುವದು. ಅವರು ಪುತ್ರ-ಪೌತ್ರ ಐಶ್ವರ್ಯಾದಿಗಳಿಂದ ಕೂಡಿ ಶತಾಯುಷಿಗಳಾಗಿ ಆನಂದದಿಂದಿರುವರು. || ೪೨ || ಯಾರು ನಿರಂತರವಾಗಿ ನಮ್ಮ ಚರಿತ್ರೆಯನ್ನು ಕೇಳುವರೋ ಹಾಗು ಓದುವರೋ ಅವರ ಮನೆಯಲ್ಲಿ ಲಕ್ಷ್ಮಿಯು ಸ್ಥಿರವಾಗಿರುವಳು. ಈ ವಿಷಯ ದಲ್ಲಿ ಯಾರೂ ಮನಸ್ಸಿನಲ್ಲಿ ಸಂಶಯ ಹಿಡಿಯಬಾರದು. || ೪೩ || ಎಂದು ಭಕ್ತರಿಗೆ ಹೇಳಿ ಶ್ರೀ ಗುರುಗಳು ಅದೃಶ್ಯರಾದರು. ಆಗ ಆ ಶಿಷ್ಯರು ಬಹಳ ಚಿಂತೆ ಮಾಡುತ್ತ ನದಿಯಲ್ಲಿ ನೋಡುತ್ತಿದ್ದರು. || ೪೪ || ಅಷ್ಟರಲ್ಲಿ ದಂಡೆಯ ಮೇಲೆ ಕೆಲವು ನಾವಿಕರು ಬಂದು, ಎಲ್ಲ ಶಿಷ್ಯರನ್ನು ಕುರಿತು ಕೆಲವು ಸಮಾಚಾರವನ್ನು ಹೇಳಹತ್ತಿ ದರು— || ೪೫ || ಸ್ವಾಮೀ, ನಾವು ನದಿಯ ಆಚೆಯ ದಂಡೆಯಲ್ಲಿದ್ದೆವು. ಆಗ ಅಲ್ಲಿ ಹೋಗುವ ಒಬ್ಬ ಗುರು ಮುನೀಶ್ವರರನ್ನು ಪ್ರತ್ಯಕ್ಷವಾಗಿ ನೋಡಿದೆವು. || ೪೬ || ಅವರು ಯತಿ ವೇಷದಿಂದಿದ್ದು ಕೈಗಳಲ್ಲಿ ದಂಡ ಕಮಂಡಲು ಗಳನ್ನು ಹಿಡಿದಿದ್ದರು. ಕಾಲಲ್ಲಿ ಸುವರ್ಣ ಪಾದುಕೆಗಳನ್ನು ಮೆಟ್ಟಿದ್ದರು. ಅವರ ಹೆಸರು ನರಸಿಂಹ ಸರಸ್ವತಿಗಳು ಅವರು ನಿಮಗೆ ಕೆಲವು ಸಂಗತಿಗಳನ್ನು ಹೇಳೆಂದು ಹೇಳಿರುವರು ಕೇಳಿರಿ. || ೪೭ || ಈಗ ಕಲಿ ಪ್ರಾಬಲ್ಯವು ಬಹಳವಾದ್ದರಿಂದ ಎಲ್ಲ ಜನರಿಗೆ ತಿಳಿಯುವಂತೆ ಈಗ ನಾವು ಕರ್ದಳೀ ವನಕ್ಕೆ ಹೋಗುವೆವು. ಆದರೆ ಸತ್ಯವಾಗಿ ನಾವು ಸದಾ ಗಾಣಗಾಪುರದಲ್ಲಿಯೇ ಗುಪ್ತ ರೂಪದಿಂದ ವಾಸಿಸುವೆವು. || ೪೮ || ನೀವು ಭ್ರಾಂತಿಯಿಂದ ದುಃಖ ಮಾಡಬೇಡಿರಿ. ನೀವು ನಿಮ್ಮ ಸ್ಥಳಕ್ಕೆ ಹೋಗಿ ನಮ್ಮ ಭಕ್ತಿಯನ್ನು ಮಾಡುತ್ತ ವಂಶಪರಂಪರ ಸುಖದಿಂದ ಇರ್ರಿ. ಈಗ ನದಿಯಲ್ಲಿ ಪ್ರಸಾದ ಪುಷ್ಪಗಳು ತೇಲಿ ಬರುವವು. ಅವುಗಳನ್ನು ಒಯ್ದು ಪೂಜೆ ಮಾಡಿರಿ. || ೪೯-೫೦ || ಎಂದು ಹೇಳಿ ಶ್ರೀ ಗುರುಗಳು ಹೋದರು. || ೫೧ || ಎಂದು ನಾವಿಕರು ಹೇಳಲು ಆಗ ಆ ಭಕ್ತರು ಸುಮ್ಮನಾಗಿ

ಅತಿ ಹರ್ಷದಿಂದ ಪ್ರಸಾದ-ಪುಷ್ಪಗಳು ಬರುವದನ್ನು ನೋಡುತ್ತಿದ್ದರು. ॥ ೫೨ ॥ ಅಷ್ಟರಲ್ಲಿ ನಾಲ್ಕು ಪ್ರಸಾದಪುಷ್ಪಗಳು ಬಂದವು. ಮುಖ್ಯ ನಾಲ್ಕುಮಂದಿ ಶಿಷ್ಯರು ಅವುಗಳನ್ನು ತಕ್ಕೊಂಡು ಹಿಡಕೊಂಡರು. ಎಂದು ಸಿದ್ಧರು ಹೇಳಿದರು. ॥ ೫೩ ॥ ಆಗ ನಾಮಧಾರಕನು— ಸ್ವಾಮೀ, ಸಿದ್ಧಮುನಿಗಳೇ, ಶ್ರೀ ಗುರುಗಳಿಂದ ಉಪದೇಶ ಹೊಂದಿದ ಮುಖ್ಯ ಶಿಷ್ಯರು ಯಾರು ? ಯಾರ್ಯಾರಿಗೆ ಪ್ರಸಾದ ಪುಷ್ಪಗಳು ಸಿಕ್ಕವು ? ಎಂದು ಕೇಳಿದನು. ॥ ೫೪ ॥ ಅದನ್ನು ಕೇಳಿ ಸಿದ್ಧರು— ಎಲೈ ಶಿಷ್ಯನೇ, ಶ್ರೀ ಗುರುಗಳಿಗೆ ಅನೇಕ ಜನ ಶಿಷ್ಯರಿದ್ದು ಅವರೆಲ್ಲರು ಗಾಣಗಾಪುರದಲ್ಲಿ ತಮ್ಮ ತಮ್ಮ ಮನೆಗಳಲ್ಲಿರುವರು. ॥ ೫೫ ॥ ಸಂನ್ಯಾಸಿಗಳಾದ ಬಾಲಕೃಷ್ಣ ಸರಸ್ವತಿ, ಉಪೇಂದ್ರಮಾಧವ ಸರಸ್ವತಿ ಎಂಬ ಇಬ್ಬರು ಶಿಷ್ಯರನ್ನು ಶ್ರೀಗುರುಗಳು ಪ್ರೀತಿಯಿಂದ ಈ ಮೊದಲೇ ತೀರ್ಥಯಾತ್ರೆಗೆ ಕಳಿಸಿದ್ದರು ಆಗ ನಾನು ಸಂಗಮದಲ್ಲಿದ್ದೆನು. ॥ ೫೬-೫೭ ॥ ಇದರ ಹೊರತು ಗ್ರಹಸ್ಥಾಶ್ರಮದ ಶಿಷ್ಯರು ಅನೇಕರಿದ್ದರು ಅವರೆಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ಸುಖವಾಗಿದ್ದರು. ಆಗ ಗುರುಗಳ ಸಂಗಡ ಶ್ರೀ ಪರ್ವತಕ್ಕೆ ಸಾಖರೆ ಸಾಯಂದೇವ, ಸಂದೀಕವಿ, ನರಹರಿ ಕವಿ ಮತ್ತು ನಾನು ಹೀಗೆ ನಾಲ್ಕುಜನ ಮುಖ್ಯ ಶಿಷ್ಯರು ಹೋಗಿದ್ದೆವು. ಈ ನಮ್ಮ ನಾಲ್ವರಿಗೆ ಪ್ರಸಾದ ಪುಷ್ಪಗಳು ಶಿಕ್ಕವು. ॥ ೫೮-೫೯ ॥ ಅವುಗಳನ್ನು ತಕ್ಕೊಂಡು ಆಮೇಲೆ ಮಠಕ್ಕೆ ಬಂದೆವು ಆ ಪ್ರಸಾದ ಪುಷ್ಪವೇ ನನಗೆ ಪೂಜ್ಯ ವಸ್ತುವಾಗಿದೆ ಇಕೋ ನೋಡು ಎಂದು ಆ ಪ್ರಸಾದ ಪುಷ್ಪವನ್ನು ತೋರಿಸಿ-- ಎಲೈ ನಾಮಧಾರಕನೇ, ಗುರುಮಹಿಮೆಯು ಈ ಪ್ರಕಾರ ಇರುತ್ತದೆ. ಅದು ಹೇಳಲಿಕ್ಕೆ ಅನುಪಮವೂ ಅಪಾರವೂ ಆಗಿರುತ್ತದೆ ನಿನಗೆ ಸ್ವಲ್ಪ ಹೇಳಿದೆನು. ॥ ೬೦-೬೧ ॥ ಗುರುಚರಿತ್ರೆಯು ಕಾಮಧೇನುವಾಗಿರುವದು. ನಿನಗೆ ತಕ್ಕಮಟ್ಟಿಗೆ ವಿಸ್ತಾರವಾಗಿ ಹೇಳಿದೆನು. ಇದರಿಂದ ನಿನ್ನ ದುಃಖ ದಾರಿದ್ರ್ಯಗಳು ದೂರ ಹೋದವೆಂದು ನಿಶ್ಚಯವಾಗಿ ತಿಳಿ. ॥ ೬೨ ॥ ಈ ಪ್ರಕಾರ ಅತಿ ಪವಿತ್ರವಾದ ಗುರುಚರಿತ್ರೆಯನ್ನು ಓದುವವರು ಅಥವಾ ಕೇಳುವವರು ಮತ್ತು ಹೇಳುವವರು ಲಕ್ಷ್ಮೀವಂತರಾಗಿ ಪುತ್ರ-ಪೌತ್ರರಿಂದ ಕೂಡಿ ಆನಂದದಿಂದಿರುವರು. ॥ ೬೩ ॥ ಮತ್ತು ಅವರು ಚತುರ್ವಿಧ ಪುರುಷಾರ್ಥಗಳನ್ನು ಹೊಂದುವರು, ಹಾಗೂ ಅವರ ಮಾತಾ-ಪಿತೃ ಕುಲದವರು ಮಹಾ ಸುಖವನ್ನು

ಹೊಂದುವರು. ಗುರುಚರಿತ್ರೆಯನ್ನು ಬರೆದರೆ ಸರ್ವ ಸಿದ್ಧಿಯಾಗುವದು ಎಂದು ಸಿದ್ಧರು ಹೇಳಿದರು. ॥ ೧೪ ॥ ಈ ಪ್ರಕಾರ ಸಿದ್ಧರು ಹೇಳಿದ್ದನ್ನು ಕೇಳಿ ನಾಮಧಾರಕನು ಸಂತೋಷಬಟ್ಟು ಕೂಡಲೆ ಸಕಲಾಭೀಷ್ಟಗಳನ್ನು ಹೊಂದಿದನು. ॥ ೧೫ ॥ ಇತ್ತ ಸರಸ್ವತೀ ಗಂಗಾಧರನು— ಅತಿ ಮನೋಹರವಾದ ಈ ಗುರುಚರಿತ್ರೆಯನ್ನು ಕೇಳಿದವರು ಈ ಸಂಸಾರಸಾಗರವನ್ನು ದಾಟಿ ಮೋಕ್ಷವನ್ನು ಪಡೆಯುವರು ॥ ೧೬ ॥ ಮತ್ತು ಅವರು ಖರೋಖರವಾಗಿ ಸಕಲಾಭೀಷ್ಟಗಳನ್ನು ಹೊಂದುವರು. ಆದಕಾರಣ ಎಲ್ಲರೂ ಗುರುಚರಿತ್ರೆಯನ್ನು ಕೇಳಿರಿ ಎಂದು ನಾಮಧಾರಕನು ಹೇಳಿದನು ಎಂದು ಅಂದನು. ॥ ೧೭ ॥ ಗುರುಚರಿತ್ರೆ ಎಂಬುದು ಅಮೃತ ತುಂಬಿದ ಪಾತ್ರೆಯು. ಭಾವಿಕ ಜನರು ಅದರೊಳಗಿನ ಅಮೃತವನ್ನು ತೀವ್ರವಾಗಿ ಸ್ವೀಕಾರ ಮಾಡಬೇಕು. ಅಂದರೆ ಭಕ್ತಿಯಿಂದ ಚಿತ್ತಗೊಟ್ಟು ಗುರುಚರಿತ್ರೆಯನ್ನು ಸಂಪೂರ್ಣವಾಗಿ ಕೇಳಬೇಕು. ಇದರಿಂದ ಸಕಲಾಭೀಷ್ಟಗಳು ಸಾಧಿಸುವವು. ॥ ೧೮ ॥ ಪುತ್ರ-ಪೌತ್ರರನ್ನು ಪಡೆಯಬೇಕೆಂಬ ಅಪೇಕ್ಷೆ ಇದ್ದವರಿಗೆ ಈ ಗುರುಚರಿತ್ರೆಯು ಪ್ರೀತಿಸುತ್ತದೆ. ಗುರುಚರಿತ್ರೆಯನ್ನು ಭಕ್ತಿಯಿಂದ ಕೇಳಬೇಕು. ಶ್ರವಣ ಮಾತ್ರದಿಂದ ಅವರ ಮನೆಯಲ್ಲಿ ಅಖಂಡ ಲಕ್ಷ್ಮಿಯು ಆನಂದದಿಂದ ವಾಸಮಾಡುವಳು ॥ ೧೯ ॥ ಇದರ ಶ್ರವಣ ಮಾತ್ರದಿಂದ ಚತುರ್ವಿಧ ಪುರುಷಾರ್ಥಗಳೂ ಪಾರಮಾರ್ಥವೂ ಸಾಧಿಸುವವು. ಮತ್ತು ಶ್ರೀ ನರಸಿಂಹ ಸರಸ್ವತಿ ಗುರುಗಳು ಶ್ರೋತೃಗಳ ವಂಶಾನುವಂಶವನ್ನು ರಕ್ಷಿಸುವರು. ॥ ೨೦ ॥ ಎಲೈ ಶ್ರೋತೃಗಳೇ ನಿಮಗೆ ನಮಸ್ಕಾರಮಾಡಿ ಹೇಳುವೆನು. ಈ ಕಥಾಮೃತವನ್ನು ಎಲ್ಲರೂ ಕೇಳಿರಿ ಸಕಲಾಭೀಷ್ಟಗಳು ಸಾಧಿಸುವವು. ॥ ೨೧ ॥ ಮುಖ್ಯವಾಗಿ ಭಕ್ತಿಯು ಕಾರಣ. ಪ್ರೇಮದಿಂದ ಶ್ರವಣ-ಪಠಣ ಮಾಡಿದರೆ ಮನನ ನಿಜ ಧ್ಯಾಸಗಳು ಪ್ರೀತಿಯಿಂದ ತಾವಾಗಿಯೇ ಸಾಧಿಸುವವು. ॥ ೨೨ ॥ ಶ್ರೀ ನರಸಿಂಹ ಸರಸ್ವತಿ ಸ್ವಾಮಿಗಳು ಪ್ರತ್ಯಕ್ಷ ಶಂಕರರು. ಅವರ ಚರಣಗಳಲ್ಲಿ ಮನಸ್ಸನ್ನು ಪೂರ್ಣ ಅರ್ಪಣ ಮಾಡಬೇಕು, ಅವರ ಅನುಗ್ರಹದಿಂದ ಸಮಸ್ತ ಜನರು ಪೂರ್ಣ ಸುಖವನ್ನು ಹೊಂದುವರು. ॥ ೨೩ ॥ ಈ ಗ್ರಂಥಕ್ಕೆ ಶುದ್ಧ ವಸ್ತ್ರವನ್ನು ಕಟ್ಟಿ, ಶುದ್ಧ ಮನಸ್ಸಿನಿಂದ ಮನೆಯಲ್ಲಿ ಶುದ್ಧ ಸ್ಥಳದಲ್ಲಿಟ್ಟು ಪೂಜಿಸಬೇಕು. ॥ ೨೪ ॥

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಶ್ರೀ ಗುರು ಸಮಾಧಿಗ ಮನಂ ನಾಮ ಏಕ ಪಂಚಾಶತ್ತಮೋಽಧ್ಯಾಯಃ || ೫೧ ||

—: ಶ್ರೀ ಗುರು ದತ್ತಾತ್ರೇಯಾರ್ಪಣಮಸ್ತು :—

— ೫೧ನೇ ಅಧ್ಯಾಯ ಸಮಾಪ್ತ —

---

# ೫೨ನೇಯ ಅಧ್ಯಾಯ

## —: ಶ್ರೀ ಗುರುಗಳು ಕರ್ದಳೀ ವನಕ್ಕೆ ಹೋಗಲು ಶಿಷ್ಯರಿಗೆ ಪ್ರಸಾದ ಪ್ರಾಪ್ತಿಯಾದದ್ದು :—

ಶ್ರೀ ಗಣೇಶಾಯ ನಮಃ । ಶ್ರೀ ಸರಸ್ವತ್ಯೈ ನಮಃ । ಶ್ರೀ ಗುರುಭ್ಯೋ ನಮಃ । ಆಮೇಲೆ ನಾಮಧಾರಕನು ವಿನಯದಿಂದ— ಸ್ವಾಮೀ, ಸಿದ್ಧ ಮುನಿಗಳೇ, ಶ್ರೀ ಗುರುಗಳು ಶ್ರೀಶೈಲಕ್ಕೆ ಹೋಗಿ ಕರ್ದಳೀ ವನಕ್ಕೆ ಹೊರಟ ಮೇಲೆ ಮುಂದೇನಾಯಿತೆಂಬದನ್ನು ವಿಸ್ತಾರವಾಗಿ ನಿರೂಪಿಸಬೇಕೆಂದು ಪ್ರಾರ್ಥಿಸಿದರು. ॥ ೧ ॥ ಆಗ ಸಿದ್ಧರು— ಎಲೈ ಶಿಷ್ಯೋತ್ತಮನೇ, ಸದ್ಗುರುಗಳ ಮಹಿಮೆಯನ್ನು ಎಷ್ಟೆಂದು ಹೇಳಲಿ ? ಗುರುಭಕ್ತಿ ಪ್ರೇಮಗಳ ವರ್ಣನೆಯ ಅಂತವು ಈಗ ಆಯಿತು. ॥ ೨ ॥ ಶ್ರೀ ಗುರುಗಳು ಶ್ರೀಶೈಲ ಯಾತ್ರೋದ್ದೇಶವಾಗಿ ಹೊರಡಲಿಕ್ಕೆ ಸಿದ್ಧರಾದದ್ದು ಆ ಗಾಣಗಾಪುರದ ಯಾವತ್ತು ಸ್ತ್ರೀ-ಪುರುಷರಿಗೆ ಕೂಡಲೇ ತಿಳಿಯಿತು. ॥ ೩ ॥ ಆಗ ಎಲ್ಲ ಭಕ್ತರೂ ಓಡುತ್ತ ಶ್ರೀ ಗುರುಗಳ ಹತ್ತರ ಬಂದು ವಿನಯದಿಂದ ಪ್ರಾರ್ಥಿಸಿದರು. ಏನಂದರೆ— ಸ್ವಾಮೀ, ಗುರುವರ್ಯರೇ ತಾವು ಶ್ರೀಶೈಲಕ್ಕೆ ಯಾಕೆ ಹೋಗುವಿರಿ ? ॥ ೪ ॥ ಇನ್ನು ತಾವು ಅವತಾರ ಸಮಾಪ್ತಿ ಮಾಡುತ್ತೀರೆಂಬಂತೆ ನಮಗೆ ಕಾಣುವದು. ತಾವು ನಿರಂತರ ಅವ್ಯಕ್ತರಾಗಿದ್ದು, ಭಕ್ತ ಜನರಿಗೆ ವ್ಯಕ್ತವಾಗಿ ಕಾಣಿಸುತ್ತೀರಿ. ॥ ೫ ॥ ತಮ್ಮ ಚರಣದರ್ಶನದಿಂದ ನಮ್ಮ ಪಾಪಗಳು ಸುಟ್ಟು ಹೋಗುತ್ತವೆ. ಹೀಗಿದ್ದು ಈಗ ನೀವು ಹೋದರೆ ಇನ್ನು ಜನರು ಹ್ಯಾಗೆ ಮಾಡಬೇಕು ? ಎಂದು ಸಾಷ್ಟಾಂಗ ನಮಸ್ಕಾರ ಮಾಡಿ— ॥ ೬ ॥ ಸ್ವಾಮೀ, ಇನ್ನು ಮುಂದೆ ನಮ್ಮ ಗತಿ ಏನು ? ನಾವು ಈ ಭವಸಾಗರವನ್ನು ದಾಟುವ ಬಗೆ ಯಾವದು ? ನಮಗೆ ಸ್ವಾಮಿಗಳ ಚರಣವೆಂಬ ನಾವೆಯು ದೊರಕಿತ್ತು. ಆದರಿಂದ ನಾವು ಈ ಭವಸಾಗರವನ್ನು ದಾಟುತ್ತಿದ್ದೆವು. ॥ ೭ ॥ ತಾವು ಭಕ್ತರಿಗೆ ಕಾಮಧೇನುವಿನಂತೆ ಇದ್ದುದರಿಂದ ಅವರ ಸರ್ವ ಇಷ್ಟಾರ್ಥಗಳು ಉತ್ತಮವಾಗಿ ಪೂರ್ಣವಾಗು

ತ್ತಿದ್ದವು. ಆದರಿಂದ ನಾವು ಇವತ್ತಿನವರೆಗೆ ಬದುಕಿದ್ದೆವು ಇನ್ನು ಮುಂದೆ ನಾವು ಏನು ಮಾಡೋಣ ? ||೮|| ಸ್ವಾಮೀ, ತಾವು ಇರುವದರಿಂದ ಈ ಗಾಣಗಾಪುರವು ವೈಕುಂಠವಾಗಿತ್ತು. ಇನ್ನು ಇದು ದೀಪವಿಲ್ಲದ ಮನೆಯಂತೆ ಆಗುವದು. ||೯|| ತಾಯಿ ಇಲ್ಲದ ಮಗುವೂ, ದೇವರಿಲ್ಲದ ಗುಡಿಯೂ, ನೀರಿಲ್ಲದ ಕಮಲವೂ ಹ್ಯಾಗೆ ಶೋಭಿಸುವದಿಲ್ಲವೋ ಹಾಗೆ ತಾವು ಇಲ್ಲದಿದ್ದರೆ ಈ ನಗರವು ಪ್ರಕಾಶಿಸುವದಿಲ್ಲ. ||೧೦|| ಸ್ವಾಮೀ, ಗುರುಗಳೇ, ನಮಗೆ ತಾಯಿ-ತಂದೆ, ಬಂಧು-ಬಳಗ, ಇಷ್ಟಮಿತ್ರರು, ಕುಲದೇವರು ನೀವೇ ಎಂದು ತಿಳಿದು ನಾವು ಕಾಲ ಕಳೆಯುತ್ತಿದ್ದೆವು ||೧೧|| ಸ್ವಾಮೀ, ತಾವು ನಿಮ್ಮ ಬಾಲಕರಾದ ನಮ್ಮನ್ನು ಬಿಟ್ಟು ಈಗ ಇಲ್ಲಿಂದ ಹ್ಯಾಗೆ ಹೋಗುವಿರಿ ? ಎಂದು ಎಲ್ಲ ಜನರು ಕಣ್ಣೀರು ಸುರಿಸುತ್ತ ತಳಮಳಸಹತ್ತಿದರು ||೧೨|| ಆಗ ಶ್ರೀಗುರುಗಳು ನಕ್ಕು— ಎಲೈ ಜನರುಗಳಿರಾ, ನಾವು ಈಗ ಹೋಗುವದು ಸತ್ಯವೆಂದು ತಿಳಿಯಬೇಡಿರಿ ನಿಮಗೆ ಸತ್ಯವಾದ ಸಂಗತಿಯನ್ನು ಹೇಳುವೆನು ಕೇಳಿರಿ ||೧೩|| ನಾವು ನಿಶ್ಚಯವಾಗಿ ಅಹೋರಾತ್ರಿ ಇದೇ ಗ್ರಾಮದಲ್ಲಿಯೇ ಇರುವೆವು. ದಿನಾಲು ಅಮರಜಾ ಸಂಗಮದಲ್ಲಿ ಸ್ನಾನಪಾನ ಮಾಡಿ ನಿಯಮದಿಂದ ಗುಪ್ತವಾಗಿರುವೆವು. ನೀವು ಏನೂ ಚಿಂತೆ ಮಾಡಬೇಡಿರಿ ||೧೪|| ಈಗ ರಾಜ್ಯವೆಲ್ಲವೂ ಮ್ಲೇಂಛಾಕ್ರಾಂತವಾಗಿದೆ ಭೂಮಂಡಲದಲ್ಲಿ ನಮ್ಮ ಪ್ರಸಿದ್ಧಿಯು ಬಹಳವಾಗಿದೆ. ಆದ್ದರಿಂದ ಆ ಯವನರು ಸಹ ಸತತವಾಗಿ ನಮ್ಮ ದರ್ಶನಕ್ಕೆ ಬರುವರು. ||೧೫|| ಆದರಿಂದ ಪ್ರಜೆಗಳಿಗೆ ಉಪದ್ರವವಾದೀತೆಂದು ನಾವು ಅದೃಶ್ಯರಾಗಿರುವೆವು. ನಮ್ಮ ಮೇಲೆ ದೃಢಭಕ್ತಿ ಇದ್ದವರಿಗೆ ಮಾತ್ರ ನಮ್ಮ ದರ್ಶನವು ಸಹಜವಾಗಿ ಆಗುವದು ||೧೬|| ಲೋಕದ ಯಾವತ್ತೂ ಜನರಿಗೆ ತಿಳಿಯುವದಕ್ಕೆ ಬಹಿರಂಗವಾಗಿ ಈಗ ಶ್ರೀಶೈಲಕ್ಕೆ ಹೋಗುವೆವು ನೀವು ಏನೂ ಚಿಂತೆ ಮಾಡಬೇಡಿರಿ. ||೧೭|| ಮಠದಲ್ಲಿ ನಮ್ಮ ನಿರ್ಗುಣ ಪಾದುಕೆಗಳನ್ನಿಡುವೆವು. ಸಂಗಮದಲ್ಲಿ ಕಲ್ಪವೃಕ್ಷಕ್ಕೆ ಸಮಾನವಾದ ಅಶ್ವತ್ಥವದೆ. ನಮ್ಮ ಪಾದುಕೆಗಳನ್ನೂ ಮತ್ತೂ ಈ ಅಶ್ವತ್ಥವನ್ನೂ ಸೇವಿಸಿದರೆ ನಿಮ್ಮ ಸರ್ವ ಇಷ್ಟಾರ್ಥಗಳು ಸಿದ್ಧಿಸುವವು. ಮನಸ್ಸಿನಲ್ಲಿ ಯಾವ ಸಂಶಯವನ್ನೂ ಹಿಡಿಯಬೇಡಿರಿ. ಶೀಘ್ರವಾಗಿ ನಿಮ್ಮ ಮನೋರಥ

ಗಳು ಕೈಗೂಡುವವು. ಈ ನಮ್ಮ ಮಾತು ಸತ್ಯವು. ॥ ೧೮-೧೯ ॥ ಸಂಗಮದಲ್ಲಿ ಸ್ನಾನ ಮಾಡಿ ಆ ಅಶ್ವತ್ಥ ವನ್ನು ಪೂಜಿಸಿ ಬಂದು ಮಠದಲ್ಲಿರುವ ನಮ್ಮ ನಿರ್ಗುಣ ಪಾದುಕೆಗಳನ್ನೂ ಮತ್ತು ವರದಾಯಕನಾದ ವಿಘ್ನಹರ ಗಣಪತಿಯನ್ನೂ ಪೂಜಿಸಿದವರ ಮನೋಬಯಕೆಗಳು ಕೂಡಲೇ ಪೂರ್ಣವಾಗುವವು. ಭೀಮರಥಿಯಲ್ಲಿರುವ ಅಷ್ಟ ತೀರ್ಥಗಳಲ್ಲಿ ಸ್ನಾನ ಮಾಡಿ ಅಲ್ಲಲ್ಲಿ ಮಾಡತಕ್ಕ ಆಚರಣೆ ಮಾಡಿರಿ ಆದರಿಂದ ನಿಮಗೆ ಅಪಾರ ಸುಖ ವಾಗುವದು. ॥ ೨೦-೨೧ ॥ ಮಠದಲ್ಲಿರುವ ಪಾದುಕೆಗಳನ್ನು ಪೂಜಿಸಿ ತ್ರಿಕಾಲದಲ್ಲಿ ಒಳ್ಳೇ ರೀತಿಯಿಂದ ಆರತಿ ಯನ್ನು ಮಾಡಿರಿ ಮತ್ತು ಈ ನಮ್ಮ ಮಾತು ಯಥಾರ್ಥವೆಂದು ತಿಳಿಯಿರಿ ॥ ೨೨ ॥ ನಾವು ಈ ಮಠದಲ್ಲಿಯೇ ಸತ್ಯವಾಗಿರುವೆವು ನಮ್ಮ ವಚನವು ನಿಶ್ಚಯವಾದದ್ದೆಂದು ತಿಳಿಯಿರಿ ಎಂದು ಜನರಿಗೆ ಅದ್ಯಂತ ಹೇಳಿ ಶ್ರೀ ಗುರುಗಳು ತಮ್ಮ ಹಿಂದೆ ಬೆನ್ನುಹತ್ತಿ ಓಡಿ ಬರುವ ಜನರನ್ನು ಸಮಾಧಾನ ಮಾಡಿ, ನಾಲ್ಕು ಜನ ಶಿಷ್ಯರೊಡನೆ ತೀವ್ರಗತಿಯಿಂದ ಹೊರಟು ಹೋದರು ॥ ೨೩-೨೪ ॥ ಉಳಿದ ಯಾವತ್ತೂ ಜನರು ಹಿಂದಿರುಗಿ ಮಠಕ್ಕೆ ಬಂದು, ಅಲ್ಲಿ ತಮ್ಮ ನಿಜಾಸನದಲ್ಲಿ ಕುಳಿತಿರುವ ಶ್ರೀ ಗುರುಗಳನ್ನು ನೋಡಿದರು. ॥ ೨೫ ॥ ಮತ್ತೆ ಕೂಡಲೇ ನೋಡಲು ಗುರುಗಳು ಗುಪ್ತ ಆದರು. ಆಗ ಜನರು ಮನಸಿನಲ್ಲಿ ಪರಮ ವಿಸ್ಮಿತರಾಗಿ— ಇದೇ ಈಗ ನಾವು ಶ್ರೀ ಗುರು ಗಳನ್ನು ಮಾರ್ಗದಲ್ಲಿ ಬಿಟ್ಟು ಬಂದೆವು. ಆದರೂ ಈಗ ಅವರು ಇಲ್ಲಿ ಕಾಣಿಸಿದರು ॥ ೨೬ ॥ ಶ್ರೀ ಗುರುಗಳು ಸರ್ವವ್ಯಾಪಿ ನಾರಾಯಣನು ಪೂರ್ಣ ತ್ರೈಮೂರ್ತಿ ಅವತಾರವನ್ನು ಹೊಂದಿ ಚರಾಚರಗಳಲ್ಲಿ ವ್ಯಾಪಿಸಿ ಭಕ್ತರ ಉದ್ಧಾರಕ್ಕಾಗಿ ಮನುಷ್ಯ ರೂಪವನ್ನು ಧರಿಸಿರುವರು ಎಂದರು. ॥ ೨೭ ॥ ಶ್ರೀ ಗುರುಗಳು ಈ ರೀತಿಯಾಗಿ ಜನ ರಿಗೆ ದೃಷ್ಟಾಂತವನ್ನು ತೋರಿಸಿ ಶ್ರೀಶೈಲಕ್ಕೆ ಹೋಗಿ ಆ ದಿನ ಪಾತಾಳಗಂಗೆಯ ದಡದಲ್ಲಿ ಕುಳಿತು ॥ ೨೮ ॥ ಆ ಶಿಷ್ಯರನ್ನು ಕುರಿತು— ಎಲೈ ಶಿಷ್ಯರಿರಾ, ನಾವು ಮಲ್ಲಿಕಾರ್ಜುನನಲ್ಲಿ ಐಕ್ಯವಾಗಲಿಕ್ಕೆ ಬೇಗ ಹೋಗಬೇಕಾಗಿದೆ. ಆದ್ದರಿಂದ ಯಥಾಸ್ಥಿತವಾಗಿ ಒಂದು ಉತ್ತಮ ಪುಷ್ಪಾಸನವನ್ನು ಸಿದ್ಧ ಮಾಡಿಕೊಂಡು ಬರ್ರಿ ಎಂದು ಆಜ್ಞಾಪಿಸಿ ದರು. ॥ ೨೯ ॥ ಆಗ ಶಿಷ್ಯರು ತೀವ್ರವಾಗಿ ಓಡಿ ಹೋಗಿ ಕುಂದ, ಮಂದಾರ, ಪುನ್ನಾಗ, ಕಲ್ಹಾರ, ಕರವೀರ,

ಸೇವಂತಿಗೆ ಮುಂತಾದ ಅಪಾರ ಪುಷ್ಪಗಳನ್ನು ಬಾಳೆಯ ಎಲೆಯಲ್ಲಿ ಸುತ್ತಿಕೊಂಡು ತಂದರು. ‖ ೩೦ ‖ ಆಮೇಲೆ ಆ ಪುಷ್ಪಗಳಿಂದ ದಿವ್ಯ ಆಸನವನ್ನು ನಿರ್ಮಿಸಿ ಗಂಗೆಯ ನೀರಮೇಲೆ ಇಟ್ಟರು. ಆಗ ಶಕೆ ೧೩೮೦ನೇ ಬಹುಧಾನ್ಯ ಸಂವತ್ಸರ ಗುರು ಸಿಂಹ ರಾಸಿಯಲ್ಲಿರಲು ಕನ್ಯಾಗತ ಉತ್ತರಾಯಣ, ಕುಂಭ ಸಂಕ್ರಮಣ, ಶಶಿರ ಋತು, ಮಾಘ ಬಹುಳ ಪ್ರತಿಪದದ ಸುಲಗ್ನದ ಸುಮುಹೂರ್ತದಲ್ಲಿ ಶ್ರೀ ಗುರುಗಳು ಬಂದು ಪರಮಾನಂದದಿಂದ ಕೂಡಲೇ ಮಧ್ಯ ಪ್ರವಾಹದಲ್ಲಿರುವ ಆ ಪುಷ್ಪಾಸನದಲ್ಲಿ ಆನಂದದಿಂದೆ ಕುಳಿತು ಶಿಷ್ಯರನ್ನು ಸಮಾಧಾನಪಡಿಸುವದಕ್ಕಾಗಿ— ಎಲೈ ಶಿಷ್ಯರಿರಾ, ನಮ್ಮ ವಿಯೋಗವಾಯಿತೆಂದು ನೀವು ದುಃಖಿಸಬೇಡಿರಿ ‖ ೩೧—೩೪ ‖ ನಾವು ಪೂರ್ವದಂತೆ ಗುಪ್ತ ರೂಪದಿಂದ ನಿಶ್ಚಯವಾಗಿ ಗಾಣಗಾಪುರದಲ್ಲಿಯೇ ಇರುವೆವು ಇದನ್ನು ನೀವು ಭಕ್ತಿಯಿಂದ ದೃಢವಾಗಿ ನಂಬಿರಿ. ಅಲ್ಲಿಯೇ ನಿಮಗೆ ದೃಷ್ಟಾಂತವು ತೋರುವದು. ‖ ೩೫ ‖ ನಾವು ಈ ನದಿಯ ಆಚೆಯ ದಂಡೆಯಲ್ಲಿರುವ ನಮ್ಮ ನಿಜಾನಂದ ಸ್ಥಾನವಾದ ಕರ್ದಳೀ ವನಕ್ಕೆ ಹೋಗುವೆವು. ನಾವು ಆಚೆಯ ದಂಡೆಯನ್ನು ಮುಟ್ಟಿದ ಕೂಡಲೆ ಗುರುತಿಗಾಗಿ ಈ ನದಿಯಲ್ಲಿ ಸೇವಂತಿಗೆ ಮೊದಲಾದ ನಾನಾ ತರದ ಪುಷ್ಪಗಳು ತೇಲಿ ಬರುವವು. ನಿಮಗೆ ಅವೇ ಪ್ರಸಾದಗಳು. ‖ ೩೬ ‖ ನೀವು ಆ ಪ್ರಸಾದ ಪುಷ್ಪಗಳನ್ನು ತಕ್ಕೊಂಡು ಪೂಜಿಸಿದರೆ ದೇವರು ನಿಮಗೆ ಪ್ರಸನ್ನ ನಾಗುವನು. ಭಕ್ತಿಭಾವದಿಂದ ಆ ಹೂವುಗಳನ್ನು ಪ್ರಾಣ ಸಮಾನವೆಂದು ಜೋಕೆ ಮಾಡಬೇಕು. ‖ ೩೭ ‖ ನಿಮಗೆ ಮತ್ತೊಂದು ಮಾತು ಹೇಳುವದೇನಂದರೆ, ಯಾರು ನಮ್ಮ ಚರಿತ್ರೆಯನ್ನು ಪ್ರೀತಿಯಿಂದಲೂ ಭಕ್ತಿ ಯಿಂದಲೂ ಹಾಡುವರೋ ಮತ್ತು ನಾಮಸಂಕೀರ್ತನ ಮಾಡುವರೋ ಅವರು ನಮಗೆ ಅತ್ಯಂತ ಪ್ರಿಯರಾಗು ವರು. ‖ ೩೮ ‖ ಯಾರು ನಮ್ಮ ಮುಂದೆ ನಾನಾ ರಾಗ ಜ್ಞಾನಗಳಿಂದಲೂ ಒಳ್ಳೇ ಭಕ್ತಿಯಿಂದಲೂ ಆನಂದ ದಿಂದಲೂ ಗಾಯನ ಮತ್ತು ಕೀರ್ತನ ಮಾಡುವರೋ ಅವರು ನಮಗೆ ಪರಮ ಪ್ರೀತಿಯ ಭಕ್ತರಾಗುವರು. ‖ ೩೯ ‖ ಯಾವ ಭಕ್ತರು ನನ್ನನ್ನು ಪ್ರೀತಿಸುವರೋ ಯಾರು ನಮ್ಮ ಕಥಾಮೃತವನ್ನು ಪಾನ ಮಾಡುವರೋ ಅವರ ಮನೆ ಯಲ್ಲಿ ಶ್ರೀಪತಿಯಾದ ನಾನು ಪ್ರೀತಿಯಿಂದ ಅಖಂಡವಾಗಿ ವಾಸ ಮಾಡುವೆನು. ‖ ೪೦ ‖ ನಮ್ಮ ಚರಿತ್ರೆಯನ್ನು

ಪಠಿಸಿದವರಿಗೆ ಸಕಲ ಪುರುಷಾರ್ಥಗಳು ಲಭಿಸುವವು, ಮತ್ತು ಸರ್ವ ಸಿದ್ಧಿಗಳು ಅವರ ಮನೆಯ ಬಾಗಿಲಲ್ಲಿ ದಾಸಿಯರಂತೆ ಕಾದಿರುವರು. ‖ ೪೧ ‖ ಅವರಿಗೆ ಯಮನ ಭಯವಿಲ್ಲ. ಅವರಿಗೆ ಪ್ರತಿಯೊಂದರಲ್ಲಿ ಲಾಭವೇ ಲಾಭವಾಗುವದು. ಮತ್ತು ಅವರು ಪುತ್ರ-ಪೌತ್ರ ಸಂತತಿಯನ್ನೂ ಅಷ್ಟೈಶ್ವರ್ಯವನ್ನೂ ಅನುಭವಿಸಿ, ಕಡೆಗೆ ಮುಕ್ತಿಯನ್ನು ಹೊಂದುವರು. ‖ ೪೨ ‖ ಈ ಮಾತು ಸುಳ್ಳೆಂದು ತಿಳಿದವರು ದಾರುಣವಾದ ನರಕವನ್ನು ಹೊಂದುವರು. ಮತ್ತು ಅವರು ಗುರುದ್ರೋಹಿಗಳಾಗಿ ಜನ್ಮ-ಮರಣ ದುಃಖಗಳಿಂದ ಬಿಡುಗಡೆ ಹೊಂದ ಲಾರರು. ‖ ೪೩ ‖ ಆದಕಾರಣ ನಮ್ಮನ್ನು ನಂಬಿದವರಿಗೆ ಬಹು ಸುಖವಾಗುವದು ಎಂದು ಶ್ರೀ ಗುರುಗಳು ಆ ಶಿಷ್ಯರಿಗೆ ಹೇಳಿ ತಾವು ಅಲ್ಲಿಯೇ ಅದೃಶ್ಯರಾದರು ‖ ೪೪ ‖ ಆಗ ಆ ಶಿಷ್ಯರು ನದಿಯಲ್ಲಿ ನೋಡಿದರು. ಶ್ರೀ ಗುರುಗಳು ತಮ್ಮ ಕಣ್ಣಿಗೆ ಕಾಣಿಸಲಿಲ್ಲವೆಂದು ಬಹುಪರಿಯಾಗಿ ಚಿಂತಿಸುತ್ತ ಅಲ್ಲಿಯೇ ಸುಮ್ಮನೆ ನಿಂತಿದ್ದರು. ‖ ೪೫ ‖ ಅಷ್ಟರಲ್ಲಿ ಕೆಲವು ನಾವಿಕರು ಅಲ್ಲಿಗೆ ಬಂದು, ಆ ಶಿಷ್ಯರನ್ನು ಕುರಿತು— ಅಯ್ಯಾ, ನಾವು ಆಚೆಯ ದಂಡೆಯಲ್ಲಿ ಶ್ರೀ ಗುರುನಾಥರು ಹೋಗುವದನ್ನು ನೋಡಿದೆವು. ‖ ೪೬ ‖ ಅವರು ಯತಿ ವೇಷದಿಂದಿದ್ದು, ಕೈಗಳಲ್ಲಿ ದಂಡ ಕಮಂಡಲುಗಳನ್ನೂ ಮೈ ಮತ್ತು ತಲೆಗಳಲ್ಲಿ ಕಾಷಾಯ ವಸ್ತ್ರಗಳನ್ನು ಧರಿಸಿ, ಕಾಲುಗಳಲ್ಲಿ ಸುವರ್ಣ ಪಾದುಕೆಗಳನ್ನು ಮೆಟ್ಟಿದ್ದರು. ಅವುಗಳ ಕಾಂತಿಯು ಅವರ ಶರೀರದಲ್ಲಿ ಬೀಬಿಸುತ್ತಿತ್ತು. ‖ ೪೭ ‖ ನಿಮಗೆ ಕೆಲವು ಸಂಗತಿಗಳನ್ನು ಹೇಳಬೇಕೆಂದು ಅವರು ನಮಗೆ ಅಜ್ಞಾಪಿಸಿರುವರು. ಆ ಮಾತನ್ನು ಕಿವಿಯಿಂದ ಕೇಳಿರಿ. ‖ ೪೮ ‖ ಅವರು ತಮ್ಮ ಹೆಸರು ನರಸಿಂಹ ಸರಸ್ವತಿಗಳೆಂದು ಹೇಳಿದರು. ಮತ್ತು— ಈಗ ಕಲಿಯ ಪ್ರಾಬಲ್ಯವು ಬಹಳವಾಯಿತು. ಆದ್ದರಿಂದ ನಾವು ಗುಪ್ತವಾಗಿ ಗಾಣಗಾಪುರದಲ್ಲಿಯೇ ವಾಸವಾಗಿರುವೆವು. ಭಕ್ತರಾದ ನೀವು ನಮ್ಮ ಭಜನೆಯಲ್ಲಿ ತತ್ಪರರಾಗಿರ್ರಿ ‖ ೪೯ ‖ ದೃಢಭಕ್ತಿ ಇದ್ದವರಿಗೆ ನಾವು ಪ್ರತ್ಯಕ್ಷ ಕಾಣಿಸುವೆವು. ಈಗ ನದಿಯಲ್ಲಿ ಪ್ರಸಾದ ಪುಷ್ಪಗಳು ತೇಲಿ ಬರುವವು ಅವುಗಳನ್ನು ತಕ್ಕೊಂಡು ಮನೆಗೆ ಹೋಗಿ ಸ್ವಸ್ಥವಾಗಿರ್ರಿ. ‖ ೫೦ ‖ ಎಂದೀ ಪ್ರಕಾರ ನಿಮಗೆ ಹೇಳಿರೆಂದು ನಮಗೆ ಹೇಳಿ ಹೋದರು. ಮಾರ್ಗದಲ್ಲಿ

ನಾವು ಪ್ರತ್ಯಕ್ಷವಾಗಿ ಅವರನ್ನು ನೋಡಿದೆವು. ನೀವು ಇಷ್ಟೇಕೆ ಚಿಂತಾಕ್ರಾಂತರಾಗಿದ್ದೀರಿ ? ಚಿಂತೆಯನ್ನು ಬಿಡಿರಿ ಎಂದು ನಾವಿಕರು ಹೇಳಿದರು. ॥ ೫೨ ॥ ಆ ನಾವಿಕರ ಮಾತು ಕೇಳಿ ಆ ಶಿಷ್ಯರು ಸಂತೋಷಪಡುವಷ್ಟರಲ್ಲಿ ನದಿಯ ಪ್ರವಾಹದಗುಂಟ ಆ ಪ್ರಸಾದ ಪುಷ್ಪಗಳು ತೇಲಿ ಬಂದವು. ಆ ಶಿಷ್ಯರು ಅವುಗಳನ್ನು ತಕ್ಕೊಂಡು, ಆನಂದದಿಂದ ಗುರುಧ್ಯಾನ ಮಾಡುತ್ತ ತಿರುಗಿ ಮಠಕ್ಕೆ ಬಂದರು ॥ ೫೩ ॥ ಎಂದು ಸಿದ್ಧರು ಹೇಳಲು ಆಗ ನಾಮಧಾರಕನು— ಸ್ವಾಮೀ, ಆ ನದಿಯಲ್ಲಿ ಎಷ್ಟು ಹೂಗಳು ಬಂದವು ? ಶಿಷ್ಯರು ಎಷ್ಟು ಜನರಿದ್ದರು ? ಆ ಹೂಗಳನ್ನು ಯಾರ್ಯಾರು ತಕ್ಕೊಂಡರು ? ಎಂಬದನ್ನು ವಿಸ್ತಾರವಾಗಿ ಹೇಳಿರಿ ಅಂದನು. ॥ ೫೪ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ನೀನು ಒಳ್ಳೇ ಸಂದೇಹ ಹೊಂದಿದಿ ನಿನ್ನ ವಿವೇಕವು ಧನ್ಯವಾದದ್ದು ! ನೀನು ಸಾಧನ ಸಮರ್ಥನು ! ॥ ೫೫ ॥ ಈಗ ನಿನಗೆ ಸರ್ವ ಗುರುತು ಹೇಳುವೆನು ಕೇಳು ಶ್ರೀ ಗುರುಗಳು ಗಾಣಗಾಪುರದಲ್ಲಿದ್ದಾಗ ಅಸಂಖ್ಯ ಶಿಷ್ಯರಿದ್ದರು ಈಗ ಅವರೆಲ್ಲರ ಹೆಸರು ನೆನಪಿಗೆ ಬರುವದಿಲ್ಲ. ॥ ೫೬ ॥ ಆಶ್ರಮ ಪಡೆದವರಲ್ಲಿ ದೊಡ್ಡ ದೊಡ್ಡ ಸನ್ಯಾಸಿಗಳು ಬಹುಮಂದಿ ತೀರ್ಥಯಾತ್ರೆಗೆ ಹೋಗಿದ್ದರು. ಅವರಲ್ಲಿ ಬಾಲಕೃಷ್ಣ ಸರಸ್ವತಿ, ಉಪೇಂದ್ರಮಾಧವ ಸರಸ್ವತಿಗಳೆಂಬ ಇಬ್ಬರು ಮುಖ್ಯರು ॥ ೫೭ ॥ ಗೃಹಸ್ಥ ಶಿಷ್ಯರನೇಕರು ಗುರುಭಕ್ತರಾಗಿ ತಮ್ಮ ತಮ್ಮ ಮನೆಗಳಲ್ಲಿ ಆನಂದದಿಂದಿರುತ್ತ ಭವಸಾಗರ ತಾರಕರಾದ ಶ್ರೀ ಗುರು ಕೃಪೆಯಿಂದ ಅವರಲ್ಲಿ ಅನೇಕ ಭಕ್ತರು ಈ ಸಂಸಾರ ಸಾಗರವನ್ನು ದಾಟಿದರು. ॥ ೫೮ ॥ ಇನ್ನು ಶ್ರೀ ಜಗದ್ಗುರುಗಳೊಡನೆ ಶ್ರೀ ಪರ್ವತಕ್ಕೆ ನಾವು ನಾಲ್ಕು ಮಂದಿ ಶಿಷ್ಯರು ಹೋಗಿದ್ದೆವು. ಯಾರ್ಯಾರೆಂದರೆ— ಸಾಯಂದೇವ, ನಂದಿಕವಿ, ನರಹರಿ ಕವಿ, ನಾಲ್ಕನೇಯವನು ನಾನು. ಈ ಪ್ರಕಾರ ನಾಲ್ಕೂ ಮಂದಿ ಗುರುಸೇವೆ ಮಾಡುತ್ತಿದ್ದೆವು. ॥ ೫೯ ॥ ನಾವು ನಾಲ್ವರೂ ಪ್ರಸಾದ ಪುಷ್ಪಗಳನ್ನು ಸ್ವೀಕರಿಸಿ ಅವುಗಳನ್ನು ಶಿರಸಾವಂದಿಸಿದೆವು. ಇಕೋ ಈ ಪ್ರಸಾದ ಪುಷ್ಪಗಳನ್ನು ನೋಡು ಎಂದು ಅವುಗಳನ್ನು ಕೂಡಲೆ ಹೊರಗೆ ತೆಗೆದು ನಾಮಧಾರಕನ ಕೈಯಲ್ಲಿ

ಕೊಟ್ಟರು. || ೬೦ || ಆಗ ಆವನು ಅವುಗಳನ್ನು ಭಕ್ತಿಯಿಂದ ತಲೆಯಲ್ಲಿಟ್ಟುಕೊಂಡನು. ಅದರಿಂದ ಅವನಿಗೆ ಬಹಳ ಆನಂದವಾಯಿತು. ಹೀಗೆ ಆ ಗುರುಪ್ರಸಾದವು ನಾಮಧಾರಕನ ಕಣ್ಣಿಗೆ ಬಿತ್ತು. || ೬೧ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹ ಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ಪ್ರಸಾದ ಪ್ರಾಪ್ತಿರ್ನಾಮ ದ್ವಿಪಂಚಾಶತ್ತಮೋಽಧ್ಯಾಯಃ || ೫೨ ||

— ಶ್ರೀ ಗುರುದೇವದತ್ತ —

— ೫೨ನೇ ಅಧ್ಯಾಯ ಸಮಾಪ್ತ —

---

# ೫೩ನೇಯ ಅಧ್ಯಾಯ

## — ಅವತರಣಿಕಾ —

ಶ್ರೀ ಗಣೇಶಾಯ ನಮಃ। ಶ್ರೀ ಸರಸ್ವತ್ಯೈ ನಮಃ। ಶ್ರೀ ದತ್ತಾತ್ರಯ ಚರಣಾರವಿಂದಾಭ್ಯಾಂ ನಮಃ। ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ। ಗುರುದೇವ ಪರಬ್ರಹ್ಮ ತಸ್ಮೈ ಶ್ರೀ ಗುರುವೇ ನಮಃ॥ ಓಂ।

ಆಮೇಲೆ ಸರಸ್ವತೀ ಗಂಗಾಧರನು— ಎಲೈ ಶ್ರೋತೃಗಳೇ, ಸಾವಧಾನದಿಂದ ಕೇಳಿರಿ. ಈ ಪ್ರಕಾರ ಶ್ರೀ ಗುರುಚರಿತ್ರದ ೫೨ ಅಧ್ಯಾಯಗಳನ್ನು ಕೇಳಿ ನಾಮಧಾರಕನ ಮನಸ್ಸು ಬ್ರಹ್ಮಾನಂದದಲ್ಲಿ ಮಗ್ನವಾಯಿತು. ॥ ೧ ॥ ಮತ್ತು ಅವನು ಗುರುಚರಿತ್ರವೆಂಬ ಅಮೃತವನ್ನು ಕುಡಿದು ತಟಸ್ಥನಾಗಿ ಬೆವರಿನಿಂದ ಕೂಡಿದ ಶರೀರವುಳ್ಳವನೂ, ರೋಮಾಂಚವುಳ್ಳವನೂ ॥ ೨ ॥ ಸದ್ಗದಿತ ಕಂಠನೂ ಆದನು. ಆಗ ಅವನ ಮೈಯು ಕಂಪಿಸಿತು. ಅವನ ಕಣ್ಣಿಗೆ ಜಗತ್ತೆಲ್ಲವೂ ನಾನಾ ಬಣ್ಣದ್ದಾಗಿ ತೋರಿತು. ಮತ್ತು ಅವನ ಕಣ್ಣುಗಳಲ್ಲಿ ಪ್ರೇಮಾಶ್ರುಗಳು ಧಾರೆಯಾಗಿ ಸುರಿಯಹತ್ತಿದವು. ॥ ೩ ॥ ಆ ಸಮಾಧಿ ಸುಖದಲ್ಲಿ ಅವನು ಏನೂ ಮಾತಾಡಲಿಲ್ಲ. ಅವನ ದೇಹವು ಸ್ವಲ್ಪಾದರೂ ಅಗಳಾಡಲಿಲ್ಲ. ಶಿಷ್ಯನಾದ ನಾಮಧಾರಕನಿಗೆ ಈ ಪ್ರಕಾರ ಸಾತ್ವಿಕವಾದ ಅಷ್ಟ ಭಾವಗಳು ಉತ್ಪನ್ನವಾದವು. ॥ ೪ ॥ ಅವನ್ನು ಕಂಡು ಸಿದ್ಧರು ಆನಂದಪಟ್ಟು— ಈಗ ಇವನಿಗೆ ಸಮಾಧಿಯು ಹತ್ತಿತು. ಲೋಕೋಪಕಾರಕ್ಕಾಗಿ ಇವನನ್ನು ಎಚ್ಚರಿಸಬೇಕು. ॥ ೫ ॥ ಎಂದು ಅವನ ಮೈಮೇಲೆ ಕೈಯಾಡಿಸುತ್ತ, ಅವನನ್ನು ಪ್ರೇಮದಿಂದ ಅಪ್ಪಿಕೊಂಡು— ಎಲೈ ಬಾಲಕಾ, ಶಿಷ್ಯೋತ್ತಮಾ ಕೇಳು. ಈಗ ನೀನು ಎಚ್ಚರಾಗು, ಎಚ್ಚರಾಗು. ॥ ೬ ॥ ಈಗ ನೀನು ಈ ಭವಸಾಗರವನ್ನು ದಾಟಿದಿ. ನೀನು ಹೀಗೆಯೇ ಸಮಾಧಿಸ್ಥ

ನಾಗಿ ಉಳಿದರೆ ಜ್ಞಾನವು ನಿನ್ನ ಉದರದಲ್ಲಿಯೇ ನಿಂತೀತು! ಆಮೇಲೆ ಜನರು ಈ ಭವಸಾಗರವನ್ನು ದಾಟುವದು ಹ್ಯಾಗೆ? ‖ ೭ ‖ ಆದಕಾರಣ ನೀನು ಅಂತಃಕರಣಪೂರ್ವಕ ಶ್ರೀ ಗುರು ಚರಣಗಳಲ್ಲಿ ನಿನ್ನ ಮನಸ್ಸನ್ನು ದೃಢವಾಗಿರಿಸು. ಹೊರಗಿನ ದೇಹಯಾತ್ರೆಯನ್ನು ಶಾಸ್ತ್ರಾಧಾರದಂತೆ ನಡಿಸು. ‖ ೮ ‖ ಎಲೈ ನಾಮಧಾರಕಾ, ನೀನು ಕೇಳಿಕೇಳಿದಂತೆ ಅಮೃತದಂತಿರುವ ಗುರುಚರಿತ್ರೆಯು ನನ್ನ ನೆನಪಿಗೆ ಬಂದು ನಿನಗೆ ಹೇಳಿದೆನು. ತಾಪತ್ರಯವನ್ನು ನಾಶ ಮಾಡುವಂಥ, ಅನುಪಮವಾದಂಥ ಗುರುಚರಿತ್ರೆಯು ನಿನ್ನ ಸಲುವಾಗಿ ಭೂಮಿಯಲ್ಲಿ ಪ್ರಗಟವಾಯಿತು. ‖ ೯ ‖ ಗುರುಚರಿತ್ರೆಯು ನೆನವಾಗುವಂತೆ ಮಾಡಿ ನೀನು ನನಗೆ ಒಳ್ಳೇದು ಮಾಡಿದಿ. ನೀನೂ ಇಷ್ಟು ಹೊತ್ತಿನ ವರೆಗೆ ಏಕಾಗ್ರದಿಂದ ಕೇಳಿದಿ. ಈಗ ಅದನ್ನು ಭೂಮಿಯಲ್ಲಿ ವಿಸ್ತಾರ ಮಾಡು. ಎಂದು ಪರೋಪರಿಯಿಂದ ಹೇಳಿದರು. ‖ ೧೦ ‖ ಅವರು ಇಷ್ಟು ಹೇಳಿದಮೇಲೆ ನಾಮಧಾರಕನು ಕಣ್ಣು ತೆರೆದು ಕೈ ಜೋಡಿಸಿ ಎದ್ದು ನಿಂತು— ‖ ೧೧ ‖ ಸ್ವಾಮೀ, ಶ್ರೀ ಗುರು ಸಿದ್ಧಮುನಿಗಳೇ, ನೀವು ಕೃಪಾಸಾಗರರೂ, ವಿಶ್ವಕ್ಕೆ ಆಧಾರರೂ ನಮ್ಮನ್ನು ಈ ಭವಸಾಗರದಿಂದ ಪಾರು ಮಾಡುವಂಥವರೂ ಆಗಿರುತ್ತೀರಿ. ‖ ೧೨ ‖ ಎಂದು ಅವರ ಚರಣಗಳಿಗೆ ನಮಸ್ಕರಿಸಿ— ಸ್ವಾಮೀ, ನನಗೆ ಗುರುಚರಿತ್ರಾಮೃತದ ಅವತರಣಿಕೆಯನ್ನು ಹೇಳಿರಿ. ‖ ೧೩ ‖ ಈ ಗುರು ಚರಿತ್ರಾಮೃತದಲ್ಲಿ ಅಮೃತಕ್ಕಿಂತಲೂ ಪರಮಾಮೃತವಿದ್ದದರಿಂದ ಭಕ್ತ ಜನರ ಮನೋವೃತ್ತಿಯು ಆದರಲ್ಲಿ ಮುಳುಗಿ ಅವರು ಸ್ಥಿರಚಿತ್ತವುಳ್ಳವರಾದರು. ‖ ೧೪ ‖ ಇದರಲ್ಲಿ ನನಗೆ ಇನ್ನೂ ತೃಪ್ತಿಯಾಗಿಲ್ಲ. ಆದಕಾರಣ ಸ್ವಾಮೀ, ಈ ಕಥೆಯನ್ನು ಪುನಃ ನನಗೆ ಸೂಚಿಸಿ, ಅಕ್ಷಯಾಮೃತವನ್ನು ಕುಡಿಸಿ, ನನ್ನನ್ನು ಆನಂದಸಾಗರದಲ್ಲಿಡಿರಿ. ‖ ೧೫ ‖ ಬುದ್ಧಿವಂತರು ಅನೇಕ ಔಷಧಿಗಳ ಸಾರವನ್ನು ತೆಗೆದು ಕೂಡಿಸಿ "ತ್ರೈಲೋಕ್ಯ ಚಿಂತಾಮಣಿ" ಎಂಬ ರಸಾಯನವನ್ನು ಸಂಗ್ರಹ ಮಾಡುವಂತೆ ತಾವು ನನಗೆ ಈ ಗುರುಚರಿತ್ರೆಯ ಸಾರವನ್ನು ಸಂಗ್ರಹವಾಗಿ ನಿರೂಪಿಸಿರಿ ಎಂದು ಪ್ರಾರ್ಥಿಸಿದನು. ‖ ೧೬ ‖ ಶಿಷ್ಯನ ಪಾರ್ಥನೆಯನ್ನು ಕೇಳಿ ಸಿದ್ಧರು ಸಂತೋಷಬಟ್ಟು— ಎಲೈ ಬಾಲಕಾ ನಿನ್ನ ವಾಸನೆಯು ಗುರುಚರಿತ್ರೆಯಲ್ಲಿ ಅಖಂಡವಾಗಿರಲಿ. ‖ ೧೭ ‖ ಈಗ ನಿನಗೆ ಗುರುಚರಿತ್ರೆಯ

ಅವತರಣಿಕೆಯನ್ನು ೧ನೇ ಅಧ್ಯಾಯದಿಂದ ೫೨ ಅಧ್ಯಾಯ ಪೂರ್ಣ ಸಾರಾಂಶವಾಗಿ ಹೇಳುವೆನು ಏಕಚಿತ್ತದಿಂದ ಕೇಳು. || ೧೮ ||

೧ನೇ ಅಧ್ಯಾಯದಲ್ಲಿ— ಗ್ರಂಥಕರ್ತನ ಮಂಗಳಾಚರಣ, ಮುಖ್ಯ ದೇವತಾ ಸ್ಮರಣೆ, ಭಕ್ತನಾದ ನಾಮಧಾರಕನಿಗೆ ಗುರುಮೂರ್ತಿಯ ದರ್ಶನವಾದದ್ದು ಹೇಳಿದೆ. || ೧೯ ||

೨ನೇ ಅಧ್ಯಾಯದಲ್ಲಿ— ಬ್ರಹ್ಮೋತ್ಪತ್ತಿ, ನಾಲ್ಕು ಯುಗಗಳ ಲಕ್ಷಣ, ದೀಪಕನ ಗುರು ಸೇವೆ ಹೇಳಿದೆ. || ೨೦ ||

೩ನೇ ಅಧ್ಯಾಯದಲ್ಲಿ— ಶ್ರೀ ಗುರು ಸಿದ್ಧರು ನಾಮಧಾರಕನನ್ನು ಅಮರಜಾ ಸಂಗಮದಲ್ಲಿರುವ ತಮ್ಮ ಸ್ಥಾನಕ್ಕೆ ಕರಕೊಂಡು ಹೋಗಿ, ಅಂಬರೀಷ–ದೂರ್ವಾಸರ ಮಹಿಮೆಯನ್ನು ಹೇಳಿದ್ದು ಹೇಳಿದೆ. || ೨೧ ||

೪ನೇ ಅಧ್ಯಾಯದಲ್ಲಿ— ತ್ರೈಮೂರ್ತಿಗಳು ಅನಸೂಯೆಯನ್ನು ಛಲಿಸಲಿಕ್ಕೆ ಹೋಗಿ ಆಕೆಯ ಕೂಸುಗಳಾಗಿ ಆನಂದದಿಂದ ಆಕೆಯ ಸ್ತನಪಾನ ಮಾಡಿದ್ದು ಹೇಳಿದೆ. || ೨೨ ||

೫ನೇ ಅಧ್ಯಾಯದಲ್ಲಿ— ಶ್ರೀ ದತ್ತಾತ್ರೇಯರು ಸ್ವತಃ ಪೀಠಾಪುರದಲ್ಲಿ ಶ್ರೀಪಾದ ಶ್ರೀವಲ್ಲಭರಾಗಿ ಅವತರಿಸಿ ತೀರ್ಥಯಾತ್ರೆಗೆ ಹೊರಟದ್ದು ಹೇಳಿದೆ. || ೨೩ ||

೬ನೇ ಅಧ್ಯಾಯದಲ್ಲಿ— ರಾವಣನು ಈಶ್ವರನ ಪ್ರಾಣಲಿಂಗವನ್ನು ಒಯ್ಯುತ್ತ ಗೋಕರ್ಣಕ್ಕೆ ಹೋಗಲು ವಿಘ್ನೇಶ್ವರನು ಅವನಿಗೆ ವಿಘ್ನ ಮಾಡಿ ಆ ಲಿಂಗವನ್ನು ಗೋಕರ್ಣದಲ್ಲಿ ಸ್ಥಾಪಿಸಿದ್ದು ಹೇಳಿದೆ. || ೨೪ ||

೭ನೇ ಅಧ್ಯಾಯದಲ್ಲಿ— ಗೌತಮರು ಮಿತ್ರ ಸಹರಾಜನಿಗೆ ಗೋಕರ್ಣ ಮಹಿಮೆಯನ್ನು ಅಸಂಖ್ಯವಾಗಿ ಹೇಳಿ ಚಾಂಡಾಳಿಯು ಉದ್ಧಾರವಾದ ಕಥೆಯನ್ನು ಹೇಳಿದ್ದು ಹೇಳಿದೆ. || ೨೫ ||

ಶ್ರೀಪಾದವಲ್ಲಭ ದಿಗಂಬರಾ

ದಿಗಂಬರಾ ದಿಗಂಬರಾ

೮ನೇ ಅಧ್ಯಾಯದಲ್ಲಿ— ಒಬ್ಬ ವಿಧವೆಯು ತನ್ನ ಮಗನೊಡನೆ ನದಿಯೊಳಗೆ ಹಾರಿ ಪ್ರಾಣ ಕೊಡಲಿಕ್ಕೆ ಹೋದಾಗ ಆಕೆಗೆ ಶ್ರೀಪಾದ ಶ್ರೀವಲ್ಲಭ ಗುರುಗಳು ಶನಿಪ್ರದೋಷ ವ್ರತವನ್ನು ಹೇಳಿ, ಆಕೆಯ ಮಗನನ್ನು ಜ್ಞಾನಿಯನ್ನಾಗಿ ಮಾಡಿದ್ದು ಹೇಳಿದೆ. || ೨೬ ||

೯ನೇ ಅಧ್ಯಾಯದಲ್ಲಿ— ಶ್ರೀಪಾದ ಗುರುಗಳು ರಜಕನ ಭಕ್ತಿಗೆ ಮೆಚ್ಚಿ ರಾಜನಾಗಲು ವರವನ್ನು ಕೊಟ್ಟು ಮುಂದೆ ದರ್ಶನ ಕೊಡುವೆವೆಂದು ಹೇಳಿ ತಾವು ಅಲ್ಲಿಯೇ ಗುಪ್ತವಾದದ್ದು ಹೇಳಿದೆ. || ೨೭ ||

೧೦ನೇ ಅಧ್ಯಾಯದಲ್ಲಿ— ಕಳ್ಳರು ಒಬ್ಬ ಬ್ರಾಹ್ಮಣನನ್ನು ಕೊಲ್ಲಲು ಶ್ರೀಪಾದರು ಅಲ್ಲಿಯೇ ಪ್ರಗಟರಾಗಿ ಆ ಕಳ್ಳನನ್ನು ಕೊಂದು ಆ ಬ್ರಾಹ್ಮಣನ-ಪ್ರಾಣವನ್ನು ಉಳಿಸಿದ್ದು ಹೇಳಿದೆ || ೨೮ ||

೧೧ನೇ ಅಧ್ಯಾಯದಲ್ಲಿ— ಶ್ರೀಪಾದ ಗುರುಗಳು ಕರಂಜ ನಗರವಲ್ಲಿ ಮಾಧವ ಬ್ರಾಹ್ಮಣನ ಪತ್ನಿಯಾದ ಅಂಬಾ ಎಂಬವಳ ಉದರದಿಂದ ನರಸಿಂಹಸರಸ್ವತಿ ಎಂಬ ಹೆಸರಿನಿಂದ ಅವತರಿಸಿದ್ದು ಹೇಳಿದೆ. ಇದು ಶ್ರೀ ದತ್ತಾತ್ರೇಯರ ಮೂರನೇ ಅವತಾರವು. || ೨೯ ||

೧೨ನೇ ಅಧ್ಯಾಯದಲ್ಲಿ— ನರಸಿಂಹ ಸರಸ್ವತಿ ಗುರುಗಳು ತಾಯಿಗೆ ಜ್ಞಾನವನ್ನು ಹೇಳಿ ಆಕೆಗೆ ಮಕ್ಕಳನ್ನು ಕೊಟ್ಟು ತಾವು ಕಾಶಿಗೆ ಹೋಗಿ ಸಂನ್ಯಾಸವನ್ನು ತಕ್ಕೊಂಡು ಉತ್ತರ ಕಡೆಯ ಯಾತ್ರಾ ಮಾಡಿದ್ದು ಹೇಳಿದೆ. || ೩೦ ||

೧೩ನೇ ಅಧ್ಯಾಯದಲ್ಲಿ— ಆಮೇಲೆ ಶ್ರೀ ಗುರುಗಳು ಕರಂಜ ನಗರಕ್ಕೆ ಬಂದು ತಾಯಿ-ತಂದೆಗಳಿಗೆ ಭೆಟ್ಟಿ ಕೊಟ್ಟು ಅಲ್ಲಿಂದ ಗೋದಾ ತೀರಕ್ಕೆ ಬಂದು ಅಲ್ಲಿ ಉದರವ್ಯಥೆಯುಳ್ಳ ಬ್ರಾಹ್ಮಣನ ಮೇಲೆ ಕೃಪಾ ಮಾಡಿದ್ದು ಹೇಳಿದೆ. || ೩೧ ||

೧೪ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಕ್ರೂರ ಯವನನ ಶಾಸನ ಮಾಡಿ ಸಾಯಂದೇವನ ಮೇಲೆ ಕೃಪಾ ಮಾಡಿ ಅವನಿಗೆ ವರದಾನ ಮಾಡಿದ್ದು ಹೇಳಿದೆ. || ೩೨ ||

೧೫ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ತಮ್ಮ ಶಿಷ್ಯನಿಗೆ ತೀರ್ಥಯಾತ್ರೆಯ ಕ್ರಮವನ್ನು ಹೇಳಿ ಅವರನ್ನು ಯಾತ್ರೆಗೆ ಕಳಿಸಿ ತಾವು ವೈಜನಾಥದಲ್ಲಿ ಕೆಲವು ದಿವಸ ಗುಪ್ತವಾಗಿದ್ದದ್ದು ಹೇಳಿದೆ. || ೩೩ ||

೧೬ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಒಬ್ಬ ಬ್ರಾಹ್ಮಣನಿಗೆ ಗುರುಭಕ್ತಿಯ ಬಗ್ಗೆ ಧೌಮ್ಯ ಋಷಿಗಳ ಮೂವರು ಶಿಷ್ಯರ ಗುರುಭಕ್ತಿಯ ಕಥೆಯನ್ನು ಕೇಳಿ ಅವನಿಗೆ ಜ್ಞಾನಶಕ್ತಿಯನ್ನು ಕೊಟ್ಟು ತಾವು ಭಿಲ್ಲವಡಿಯಲ್ಲಿರುವ ಭುವನೇಶ್ವರಿಯ ಹತ್ತರ ಬಂದದ್ದು ಹೇಳಿದೆ. || ೩೪ ||

೧೭ನೇ ಅಧ್ಯಾಯದಲ್ಲಿ— ಭುವನೇಶ್ವರಿಯಲ್ಲಿದ್ದಾಗ ಒಬ್ಬ ಮೂರ್ಖ ಬ್ರಾಹ್ಮಣನು ನಾಲಿಗೆ ಕೊಯ್ದು ಕೊಂಡು ದೇವಿಗೆ ಅರ್ಪಣ ಮಾಡಲು ಶ್ರೀ ಗುರುಗಳು ಅವನ ಬಾಯಿಯಲ್ಲಿ ಭಸ್ಮವನ್ನು ಹಾಕಿ ಅವನಿಗೆ ನಾಲಿಗೆ ಯನ್ನು ಕೊಟ್ಟು ಅವನಿಗೆ ಸರ್ವ ವಿದ್ಯಾ ಬರುವಂತೆ ಮಾಡಿ ಅವನನ್ನು ಧನ್ಯನಾಗಿ ಮಾಡಿದ್ದು ಹೇಳಿದೆ. || ೩೫ ||

೧೮ನೇ ಅಧ್ಯಾಯದಲ್ಲಿ— ಆಮೇಲೆ ಶ್ರೀ ಗುರುಗಳು ನರಸೋಬವಾಡಿಯಲ್ಲಿ ಕೃಷ್ಣಾ ಪಂಚಗಂಗಾ ಸಂಗಮದಲ್ಲಿದ್ದು ಅವರ ವಾಡೆದಲ್ಲಿ ಒಬ್ಬ ದರಿದ್ರ ಬ್ರಾಹ್ಮಣನ ಮನೆಯಲ್ಲಿರುವ ಅವರೀಬಳ್ಳಿಯನ್ನು ಕಿತ್ತಿ ಅವನಿಗೆ ಬಂಗಾರ ತುಂಬಿದ ಕೊಡವನ್ನು ಕೊಟ್ಟದ್ದು ಹೇಳಿದೆ. ಮತ್ತು ಗುರುಪ್ರತಾಪ ವರ್ಣಿಸಿದ್ದು ಹೇಳಿದ. || ೩೬ ||

೧೯ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಅಲ್ಲಿಯ ಔದುಂಬರದ ವರ್ಣನೆ ಮಾಡಿ ಯೋಗಿನಿಯರಿಗೆ ವರವನ್ನು ಕೊಟ್ಟು ತಾವು ಗಾಣಗಾಪುರಕ್ಕೆ ಹೋದದ್ದು ಹೇಳಿದೆ. || ೩೭ ||

ದಿಗಂಬರಾ ದಿಗಂಬರಾ ಶ್ರೀಪಾದವಲ್ಲಭ ದಿಗಂಬರಾ

೩೦ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಒಬ್ಬ ವಿಪ್ರ ಸ್ತ್ರೀಯಳ ಪಿಶಾಚ ಬಾಧೆಯನ್ನು ಬಿಡಿಸಿ ಆಕೆಗೆ ೨ ಪುತ್ರರಾಗುವಂಥ ವರ ಕೊಟ್ಟು ಮೊದಲಿನ ಕೂಸು ಸಾಯಲು ಅವಳು ಅಳುವಾಗ್ಗೆ ಸಿದ್ಧರೂಪದಿಂದ ಆಕೆಗೆ ಜ್ಞಾನೋಪದೇಶ ಮಾಡಲಿಕ್ಕೆ ಬಂದದ್ದು ಹೇಳಿದೆ. ‖ ೩೮ ‖

೩೧ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಆಕೆಗೆ ಜ್ಞಾನೋಪದೇಶ ಮಾಡಲಾಗಿ ಅವಳ ಉತ್ತರವನ್ನು ಕೇಳಿ ಆ ಕೂಸನ್ನು ಔದುಂಬರದಹತ್ತರ ಒಯ್ಯಲಿಕ್ಕೆ ಹೇಳಿ ತಾವು ರಾತ್ರಿ ಅಲ್ಲಿ ಬಂದು ಕೃಪೆಯಿಂದ ಆ ಕೂಸನ್ನು ಬದುಕಿಸಿದ್ದು ಹೇಳಿದೆ. ‖ ೩೯ ‖

೩೨ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಸಂಗಮದಲ್ಲಿದ್ದು ಗಾಣಗಾಪುರದಲ್ಲಿ ಒಬ್ಬ ಬ್ರಾಹ್ಮಣನ ಮನೆಗೆ ಭಿಕ್ಷೆಗೆ ಹೋಗಿ ತಮ್ಮ ಭಿಕ್ಷೆಗೆ ಅವರ ಮನೆಯಲ್ಲಿರುವ ಬರಡೆಮ್ಮೆಯಿಂದ ಹಾಲನ್ನು ಹಿಂಡಿಸಿ ಕುಡಿದು ಅವರಿಗೆ ವರ ಕೊಟ್ಟದ್ದು ಹೇಳಿದೆ. ‖ ೪೦ ‖

೩೩ನೇ ಅಧ್ಯಾಯದಲ್ಲಿ— ಗಾಣಗಾಪುರದ ರಾಜನು ಶ್ರೀ ಗುರುಗಳನ್ನು ಸಂಗಮದಿಂದ ಗಾಣಗಾಪುರಕ್ಕೆ ಕರಕೊಂಡು ಬರುವಾಗ ಅವರು ಒಬ್ಬ ಬ್ರಹ್ಮರಾಕ್ಷಸನನ್ನು ಉದ್ಧರಿಸಲು ರಾಜನು ಅಲ್ಲಿ ಒಂದು ಮಠವನ್ನು ಕಟ್ಟಿಸಿ ಕೊಟ್ಟು ಶ್ರೀ ಗುರುಗಳನ್ನು ಇಟ್ಟುಕೊಂಡದ್ದು ಹೇಳಿದೆ. ‖ ೪೧ ‖

೩೪ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಕುಮಸಿಯಲ್ಲಿರುವ ತ್ರಿವಿಕ್ರಮ ಭಾರತಿಯ ಭೆಟ್ಟಿಗೆ ಹೋಗಿ ವಿಶ್ವರೂಪ ತೋರಿಸಿ ಮಹಿಮೆಯನ್ನುಂಟುಮಾಡಿ ಆಮೇಲೆ ನಿಜರೂಪ ತೋರಿಸಿ ವರವನ್ನು ಕೊಟ್ಟದ್ದು ಹೇಳಿದೆ. ‖ ೪೨ ‖

೨೫ನೇ ಅಧ್ಯಾಯದಲ್ಲಿ— ವಿದ್ಯಾಗರ್ವದಿಂದ ಇರುವ ಇಬ್ಬರು ಮ್ಲೇಂಛನ ಎದುರಿಗೆ ವೇದವನ್ನು ಅಂದು ತ್ರಿವಿಕ್ರಮಯತಿಗೆ ವಾದ ಮಾಡಿರಿ ಅಥವಾ ಜಯಪತ್ರ ಕೊಡಿರಿ ಎಂದು ಛಲಿಸಲು ಆವರು ಆ ಬ್ರಾಹ್ಮಣರನ್ನು ಶ್ರೀ ಗುರುಗಳ ಕಡೆಗೆ ಕರಕೊಂಡು ಬಂದದ್ದು ಹೇಳಿದೆ. ॥ ೪೩ ॥

೨೬ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಆ ವೇದವಿಪ್ರರಿಗೆ ವೇದರಚನೆಯನ್ನು ಹೇಳಿ ವಾದ ಕಲ್ಪನೆಯನ್ನು ಬಿಡೆಂದು ಹೇಳಿದರೂ ಅವರು ಕೇಳಲಿಲ್ಲವೆಂದು ಹೇಳಿದೆ. ॥ ೪೪ ॥

೨೭ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಪತಿತನಿಂದ ವೇದವನ್ನು ಅನ್ನಿಸಿ ಆ ವಿಪ್ರರ ಸಂಗಡ ವೇದ ವಾದ ಮಾಡಿಸಲು ಅವರು ಕುಂಠಿತರಾಗಲು ಗುರುಗಳು ಶಾಪಕೊಟ್ಟು ಅವರನ್ನು ಬ್ರಹ್ಮರಾಕ್ಷಸರನ್ನು ಮಾಡಿದ್ದು ಹೇಳಿದೆ. ॥ ೪೫ ॥

೨೮ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಆ ಪತಿತನಿಗೆ ಧರ್ಮಾಧರ್ಮದ ಸಂಗತಿಗಳನ್ನು ಹೇಳಿ ಪುನಃ ಅವನನ್ನು ಪತಿತನನ್ನು ಮಾಡಿ ಮನೆಗೆ ಕಳಿಸಿದ್ದು ಹೇಳಿದೆ. ॥ ೪೬ ॥

೨೯ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ತ್ರಿವಿಕ್ರಮನಿಗೆ ಭಸ್ಮಮಹಿಮೆ ಹೇಳುವಾಗ ವಾಮದೇವರಿಂದ ಬ್ರಹ್ಮರಾಕ್ಷಸನು ಉದ್ಧಾರವಾದದ್ದು ಹೇಳಿದೆ. ॥ ೪೭ ॥

೩೦ನೇ ಅಧ್ಯಾಯದಲ್ಲಿ— ಒಬ್ಬ ಸತಿಯ ಪತಿಯು ಸಾಯಲು ಅವಳು ಬಹು ಪ್ರಳಾಪ ಮಾಡುವಾಗ ಶ್ರೀ ಗುರುಗಳು ಸಾಧುಗಳ ರೂಪದಿಂದ ಬಂದು ಅವಳಿಗೆ ನಾನಾ ಕಥೆಗಳನ್ನು ಹೇಳಿ ಆಕೆಯನ್ನು ಸಮಾಧಾನ ಮಾಡಿದ್ದು ಹೇಳಿದೆ. ॥ ೪೮ ॥

**೩೧ನೇ ಅಧ್ಯಾಯದಲ್ಲಿ—** ಮುಂದೆ ಶ್ರೀ ಗುರುಗಳು ಆಕೆಗೆ ಪತಿವ್ರತೆಯ ಧರ್ಮಗಳನ್ನು ಹೇಳಿ ಸಹಗಮನ ಪ್ರಕಾರವನ್ನು ಹೇಳಿದ್ದು ಹೇಳಿದೆ. ‖ ೪೯ ‖

**೩೨ನೇ ಅಧ್ಯಾಯದಲ್ಲಿ—** ಆ ಸತಿಯು ಸಹಗಮನ ಮಾಡುವ ಮುಂದೆ ಶ್ರೀ ಗುರುಗಳ ದರ್ಶನಕ್ಕೆ ಬಂದು ನಮಸ್ಕಾರ ಮಾಡಲು ಅಷ್ಟಪುತ್ರ ಸೌಭಾಗ್ಯವತಿಯಾಗೆಂದು ಆಶೀರ್ವದಿಸಿ ಆಕೆಯ ಪತಿಯನ್ನು ಬದುಕಿಸಿದ್ದು ಹೇಳಿದೆ. ‖ ೫೦ ‖

**೩೩ನೇ ಅಧ್ಯಾಯದಲ್ಲಿ—** ರುದ್ರಾಕ್ಷಿಧಾರಣ ಮಹಿಮಾ, ಮತ್ತು ಮರ್ಕಟ-ಕುಕ್ಕುಗಳ ಕಥೆ ಹಾಗೂ ವೈಶ್ಯ-ವೇಶ್ಯೆಯರ ಕಥೆ ಹೇಳಿದೆ. ‖ ೫೧ ‖

**೩೪ನೇ ಅಧ್ಯಾಯದಲ್ಲಿ—** ಪರಾಶರರು ರಾಜನಿಗೆ ರುದ್ರಾಧ್ಯಾಯ ಮಹಿಮಾ ಹೇಳಿ ಅದರಂತೆ ಅಭಿಷೇಕ ಮಾಡಿಸಿ ಅವನ ಮಗನನ್ನು ಬದುಕಿಸಿ ಅವನ ಆಯುಷ್ಯ ಬೆಳೆದ ಬಗ್ಗೆ ನಾರದನು ಬಂದು ಹೇಳಿದ್ದು ಹೇಳಿದೆ ‖೫೨‖

**೩೫ನೇ ಅಧ್ಯಾಯದಲ್ಲಿ—** ಕಚ-ದೇವಯಾನಿ ಕಥಾ ಮತ್ತು ಸೋಮವಾರ ವ್ರತದ ಮಹತ್ವದ ಬಗ್ಗೆ ಸೀಮಂತಿನೀ ಆಖ್ಯಾನ ಹೇಳಿದ್ದು ಹೇಳಿದೆ ‖ ೫೩ ‖

**೩೬ನೇ ಅಧ್ಯಾಯದಲ್ಲಿ—** ಬ್ರಹ್ಮನಿಷ್ಠ ಬ್ರಾಹ್ಮಣನನ್ನು ಅವನ ಹೆಂಡತಿಯು ಪರಾನ್ನಕ್ಕೆ ಕರಕೊಂಡು ಹೋಗಲು ಅವನು ಗುರುಚರಣವನ್ನು ಹಿಡಿಯಲು ಗುರುಗಳು ಅವನಿಗೆ ಕರ್ಮ ಮಾರ್ಗವನ್ನು ಹೇಳಿದ್ದು ಹೇಳಿದೆ. ‖ ೫೪ ‖

**೩೭ನೇ ಅಧ್ಯಾಯದಲ್ಲಿ—** ಮತ್ತೆ ಶ್ರೀ ಗುರುಗಳು ನಾನಾ ಧರ್ಮಗಳನ್ನೂ ಬ್ರಹ್ಮಕರ್ಮವನ್ನೂ ಹೇಳಿ ಪ್ರಸನ್ನರಾಗಿ ಅವನಿಗೆ ವರ ಕೊಟ್ಟಿದ್ದು ಹೇಳಿದೆ. ‖ ೫೫ ‖

**೩೮ನೇ ಅಧ್ಯಾಯದಲ್ಲಿ**— ಭಾಸ್ಕರ ಬ್ರಾಹ್ಮಣನು ಮೂರು ಮಂದಿಗೆ ಸಾಲುವಷ್ಟು ಮಾಡಿದ ಅನ್ನದಲ್ಲಿ ಶ್ರೀ ಗುರುಗಳು ಅಕ್ಷಯ ಮಾಡಿ ೪ ಸಾವಿರ ಮಂದಿ ಬ್ರಾಹ್ಮಣರಿಗೂ ಅನೇಕ ಶೂದ್ರಾದಿಗಳಿಗೂ ಊಟ ಮಾಡಿಸಿದ್ದು ಹೇಳಿದೆ. ॥ ೫೬ ॥

**೩೯ನೇ ಅಧ್ಯಾಯದಲ್ಲಿ**— ಸೋಮನಾಥ ಬ್ರಾಹ್ಮಣನ ೬೦ ವರ್ಷದ ಬಂಜೆ ಹೆಂಡತಿಗೆ ಶ್ರೀ ಗುರುಗಳು ಪುತ್ರರನ್ನು ಕೊಟ್ಟದ್ದು ಹೇಳಿದೆ. ॥ ೫೭ ॥

**೪೦ನೇ ಅಧ್ಯಾಯದಲ್ಲಿ**— ನರಹರಿಯಿಂದ ಒಣ ಕಟ್ಟಿಗೆ ಸೇವಿಸಿಸಿ ಅವನ ಕುಷ್ಠವನ್ನು ಕಳೆದದ್ದು, ವರಿಷ್ಠ ಶಿಷ್ಯನಾದ ಜೇಡನ ಶಿವಪೂಜಾ ವಿಧಾನ ಹೇಳಿದ್ದು ಹೇಳಿದೆ. ॥ ೫೮ ॥

**೪೧ನೇ ಅಧ್ಯಾಯದಲ್ಲಿ**— ಶ್ರೀ ಗುರುಗಳು ಸಾಯಂದೇವನಿಂದ ಸೇವಾ ತಕ್ಕೊಂಡು ಈಶ್ವರ ಪಾರ್ವತಿ ಸಂವಾದ ರೂಪವಾದ ಕಾಶೀಯಾತ್ರಾ ನಿರೂಪಣ ಹೇಳಿದೆ. ॥ ೫೯ ॥

**೪೨ನೇ ಅಧ್ಯಾಯದಲ್ಲಿ**— ಸಾಯಂದೇವನು ತನ್ನ ಪುತ್ರ-ಕಲತ್ರರನ್ನು ಕರಕೊಂಡು ಬಂದು ಸ್ತುತಿಸಲು ಶ್ರೀ ಗುರುಗಳು ಅವನಿಗೆ ಯಾತ್ರಾವಿಧಿಯನ್ನು ಹೇಳಿ ವರವನ್ನು ಕೊಟ್ಟದ್ದು ಹೇಳಿದೆ. ॥ ೬೦ ॥

**೪೩ನೇ ಅಧ್ಯಾಯದಲ್ಲಿ**— ಶ್ರೀಕೃಷ್ಣನು ಧರ್ಮರಾಯನಿಗೆ ಅನಂತವ್ರತ ಕಥೆಯನ್ನು ಹೇಳಿ ಮಾಡಿಸಿದಂತೆ ಶ್ರೀ ಗುರುಗಳು ಸಾಯಂದೇವನಿಂದ ಮಾಡಿಸಿದ್ದು ಹೇಳಿದೆ. ॥ ೬೧ ॥

**೪೪ನೇ ಅಧ್ಯಾಯದಲ್ಲಿ**— ಶ್ರೀ ಗುರುಗಳು ತಂತುಕಾರ ಭಕ್ತನಿಗೆ ಶ್ರೀ ಪರ್ವತದ ಹಾಗು ಶಿವರಾತ್ರಿಯ ಮಹತ್ವದ ಬಗ್ಗೆ ವಿಮರ್ಷಣ ರಾಜನ ಕಥೆಯನ್ನು ಹೇಳಿ ಕ್ಷಣದಲ್ಲಿ ಶ್ರೀ ಪರ್ವತಕ್ಕೆ ಕರಕೊಂಡು ಹೋಗಿ ಶಿವರಾತ್ರಿ ಪುಣ್ಯ ಕಥಾ ಹೇಳಿ ಕರಕೊಂಡು ಬಂದದ್ದು ಹೇಳಿದೆ. ॥ ೬೨ ॥

೪೫ನೇ ಅಧ್ಯಾಯದಲ್ಲಿ— ತುಳಜಾಪುರದಿಂದ ಬಂದ ಕುಷ್ಠಿ ಬ್ರಾಹ್ಮಣನ ಕುಷ್ಠವನ್ನು ಸಂಗಮದಲ್ಲಿ ಸ್ನಾನ ಮಾಡಿಸಿ ಕಳೆದು ಅವನಿಗೆ ಜ್ಞಾನವನ್ನು ಕೊಟ್ಟದ್ದು ಹೇಳಿದೆ. ॥ ೬೩ ॥

೪೬ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಹಿಪ್ಪರಗಿ ಗ್ರಾಮದಲ್ಲಿ ಕಲ್ಲೇಶ್ವರ ಭಕ್ತನಾದ ನರಹರಿ ಕವಿಗೆ ದರ್ಶನ ಕೊಟ್ಟು ಅವನನ್ನು ತಮ್ಮ ಶಿಷ್ಯನನ್ನು ಮಾಡಿಕೊಂಡದ್ದು ಹೇಳಿದೆ. ॥ ೬೪ ॥

೪೭ನೇ ಅಧ್ಯಾಯದಲ್ಲಿ— ಏಳು ಗ್ರಾಮದ ಏಳು ಜನ ಶಿಷ್ಯರು ದೀಪಾವಳಿಯ ಹಬ್ಬದ ಬಗ್ಗೆ ತಮ್ಮಲ್ಲಿಗೆ ಬರಬೇಕೆಂದು ಕರಿಯಲಿಕ್ಕೆ ಬರಲು ಶ್ರೀ ಗುರುಗಳು ಮೂಲರೂಪದಿಂದ ಮಠದಲ್ಲಿಯೇ ಇದ್ದು ಬೇರೆ ರೂಪಗಳನ್ನು ಧರಿಸಿ ಆ ಆ ಊರಿಗೆ ಹೋದದ್ದು ಹೇಳಿದೆ ॥ ೬೫ ॥

೪೮ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಒಬ್ಬ ಶೂದ್ರ ಭಕ್ತನ ಹೊಲದ ಮೊದಲಿನ ಜೋಳದ ಬೆಳೆಯನ್ನು ಕೊಯ್ಸಿ ಮುಂದೆ ಅವನಿಗೆ ನೂರುಪಟ್ಟು ಬೆಳೆಯು ಬರುವಂತೆ ಮಾಡಿ ಅವನನ್ನು ಆನಂದಪಡಿಸಿದ್ದು ಹೇಳಿದೆ. ॥ ೬೬ ॥

೪೯ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಭೀಮಾ ಅಮರಜಾ ಸಂಗಮದ ಮಹತ್ವ ಮತ್ತು ಭೀಮಾ ದಲ್ಲಿರುವ ಅಷ್ಟತೀರ್ಥಗಳ ಮಹತ್ವವನ್ನು ಶಿಷ್ಯರಿಗೆ ಹೇಳಿ ಪೂರ್ವಾರ್ಜಿತದಿಂದ ಬಂದ ತಂಗಿಯ ಕುಷ್ಠವನ್ನು ಹೇಳಿ ಕಳೆಯುವ ಉಪಾಯ ಹೇಳಿದ್ದು ಹೇಳಿದೆ. ॥ ೬೭ ॥

೫೦ನೇ ಅಧ್ಯಾಯದಲ್ಲಿ— ಶ್ರೀ ಗುರುಗಳು ಮ್ಲೇಂಛರಾಜನ ಹುಣ್ಣನ್ನು ಕಳೆದು ಅವನ ಭಕ್ತಿಯ ಸಲುವಾಗಿ ಅವನ ನಗರಕ್ಕೆ ಹೋಗಿ ಮುಂದೆ ಶ್ರೀ ಪರ್ವತದಲ್ಲಿ ಭೆಟ್ಟಿಯಾಗು ಎಂದು ಹೇಳಿದ್ದು ಅದೆ. ॥ ೬೮ ॥

+ ದಿಗಂಬರಾ ದಿಗಂಬರಾ +

+ ಶ್ರೀಪಾದವಲ್ಲಭ ದಿಗಂಬರಾ +

೫೧-೫೩ನೇ ಅಧ್ಯಾಯಗಳಲ್ಲಿ— ಶ್ರೀ ಗುರುಮೂರ್ತಿಯು ಭೂಮಿಯಮೇಲಿನ ಪಾಪ ಪ್ರವೃತ್ತಿಯನ್ನು ನೋಡಿ ಇನ್ನು ಕೆಟ್ಟಜನರ ಉಪದ್ರವವಾದೀತು ಕಾರಣ ಗುಪ್ತವಾಗಿರಬೇಕೆಂದು ॥ ೯ ॥ ನಿಶ್ಚಯ ಮಾಡಿಕೊಂಡು ಶಿಷ್ಯರನ್ನು ಕುರಿತು— ಇವತ್ತಿನ ದಿವಸ ಮಲ್ಲಿಕಾರ್ಜುನನ ಯಾತ್ರೆಗಾಗಿ ಶ್ರೀ ಶೈಲಕ್ಕೆ ಹೋಗೋಣ ಎಂದು ಹೇಳಿದರು. ॥ ೧೦ ॥ ಈ ಮಾತು ಕೇಳಿ ಭಕ್ತ ಜನರು ಉದ್ವಿಗ್ನ ಮನಸ್ಸಿನವರಾಗಿ ದೀರ್ಘ ಸ್ವರದಿಂದ ಒದರಿ ಶೋಕಮಾಡಿ ಶ್ರೀ ಗುರುಚರಣಗಳಲ್ಲಿ ಉರುಳಾಡುತ್ತಿದ್ದರು ॥ ೧೧ ॥ ಇದನ್ನು ಕಂಡು ಶ್ರೀ ಗುರುಗಳು ವರದ ಹಸ್ತದಿಂದ ಅವರ ಮೈಮೇಲೆ ಆಡಿಸಿ— ನಮ್ಮ ಪುರದಲ್ಲಿದ್ದು ನಮ್ಮ ಭಜನಿಯಲ್ಲಿಯೇ ಆಸಕ್ತರಾಗಿರ್ರಿ ॥ ೧೨ ॥ ಎಂದು ಹೇಳಿ ಶ್ರೀ ಗುರುಗಳು ಕರ್ದಳೀ ವನಕ್ಕೆ ಹೋಗಿ ನಾವಿಕರಿಂದ ಕೆಲವು ಮಾತು ಹೇಳಿ ಕಳಿಸಿ ತಾವು ನಿಜಾನಂದದಲ್ಲಿ ಮಗ್ನರಾದರು ಎಂದು ಹೇಳಿದೆ ॥ ೧೩ ॥

ಎಲೈ ನಾಮಧಾರಕನೇ ಈ ಪ್ರಕಾರ ಅಪಾರವಾದ ಗುರುಚರಿತ್ರೆಯು ಅನಂತ ಕಥೆಗಳುಳ್ಳದ್ದೂ ಪರಮ ಪವಿತ್ರವಾದದ್ದೂ ಇರುತ್ತದೆ. ಅದರೊಳಗಿನ ೫೨ ಅಧ್ಯಾಯಗಳನ್ನು ಮಾತ್ರ ಈಗ ನಿನ್ನಸಲುವಾಗಿ ಹೇಳಿದೆನು. ॥ ೧೪ ॥ ಮತ್ತು ಈಗ ಅವತರಣಿಕೆಯನ್ನು ಹೇಳಿದೆನು ಶ್ರೀ ಗುರುಗಳು ಶ್ರೀ ಪರ್ವತಕ್ಕೆ ಹೋದರೆಂದು ಜನರಿಗೆ ತಿಳಿಯಿತು ಆದರೆ ಅವರು ಗುಪ್ತರಾಗಿರುವರು. ॥ ೧೫ ॥ ಈ ಕಲಿಯುಗದಲ್ಲಿ ಅಧರ್ಮದ ವೃದ್ಧಿಯಾಯಿತೆಂದು ತಿಳಿದು ಶ್ರೀ ಗುರುಗಳು ಗುಪ್ತರಾದರು. ಆದರೆ ಭಕ್ತ ಜನರಿಗೆ ಮೊದಲು ಹ್ಯಾಗೆ ಪ್ರತ್ಯಕ್ಷ ದರ್ಶನ ಕೊಡುತ್ತಿದ್ದರೋ ಆದರಂತೆ ಈಗ್ಯೂ ದರ್ಶನ ಕೊಡುತ್ತಾರೆ. ॥ ೧೬ ॥ ಈ ಅವತರಣಿಕೆ ಎಂಬ ಸಿದ್ಧಮಾಲೆಯನ್ನು ನಿತ್ಯ ಯಾರು ಜಪಿಸುವರೋ ಅವರಿಗೆ ಶ್ರೀ ಗುರುಗಳು ದರ್ಶನ ಕೊಡುವರು. ಅವರ ಭಾವದಂತೆ ಕಾರ್ಯವು ಸಾಧಿಸುವದು. ॥ ೧೭ ॥ ಎಲೈ ನಾಮಧಾರಕಾ, ನೀನು ಶ್ರೇಷ್ಠನು. ನೀನು ಅವತರಣಿಕೆಯ ಪ್ರಶ್ನೆ ಮಾಡಿದ್ದರಿಂದ ಕಥೆಯ ಸಾರಾಂಶವನ್ನು ಪುನಃ ನಿನಗೆ ಹೇಳಿದೆನು. ॥ ೧೮ ॥ ಇದರಿಂದ ಪೂರ್ವದಲ್ಲಿ ಕೇಳಿದ್ದೆಲ್ಲ ಕೂಡಲೆ ಧ್ಯಾನದಲ್ಲಿ ಬರುವದು. ಈ ಅವತರಣಿಕೆಯ ಶ್ರವಣದಿಂದ ಇತರ ಜನರಿಗೆ ಗುರುಚರಿತ್ರೆಯನ್ನು ಪೂರ್ಣವಾಗಿ

ಕೇಳಬೇಕೆಂಬ ಇಚ್ಛೆಯಾಗುವದು. ॥ ೭೯ ॥ ಈ ಪ್ರಕಾರ ಈ ಅವತರಣಿಕೆಯು ಇರುತ್ತದೆಂದು ತಿಳಿ. ಕಥೆಯು ನೆನಪಾಗುವ ರೀತಿಯನ್ನು ಹೇಳಿದೆನು. ಇದನ್ನು ಪತಿತನು ಸ್ಮರಿಸಿದರೆ ಕಥೆಯು ಅನುಕ್ರಮವಾಗಿ ಸ್ಮರಣೆಗೆ ಬರುವದು. ॥ ೮೦ ॥ ಈ ಪ್ರಕಾರ ಸಿದ್ಧರು ಹೇಳಲು ನಾಮಧಾರಕನು ಅವರ ಚರಣಕ್ಕೆರಗಿ ವಿನಯದಿಂದ ಕೈಮುಗಿದು— ಸ್ವಾಮೀ, ತಮ್ಮ ವಚನವೇ ಸರ್ವ ಸಿದ್ಧಿಕರವಾಗಿದೆ. ॥ ೮೧ ॥ ಶ್ರೀ ಗುರುರಾಯರೇ ನನ್ನದು ಮತ್ತೊಂದು ವಿನಂತಿಯದೆ. ಶ್ರೀ ಗುರುಚರಿತ್ರ ಸಪ್ತಾಹ ಪಾರಾಯಣದಲ್ಲಿ ಪ್ರತಿ ದಿನ ಎಷ್ಟು ಓದಬೇಕು ? ಇದನ್ನು ನನಗೆ ಹೇಳಿರಿ ಎಂದರು. ॥ ೮೨ ॥ ಆಗ ಸಿದ್ಧರು— ಎಲೈ ನಾಮಧಾರಕನೇ, ನೀನು ಒಳ್ಳೇ ಪ್ರಶ್ನೆ ಮಾಡಿದೆ. ಅದು ಲೋಕೋಪಕಾರಕವಾಗುವದು. ॥ ೮೩ ॥ ಅಂತಃಕರಣವು ಪವಿತ್ರವಾಗಿರುವಾಗ ಸದಾ ಗುರುಚರಿತ್ರೆಯನ್ನು ಓದಬೇಕು. ಅದರಿಂದ ಇಹ-ಪರಗಳಲ್ಲಿ ಸುಖವಾಗುವದು. ಇನ್ನು ೨ನೇ ಪ್ರಕಾರ ಹ್ಯಾಗಂದರೆ— ॥ ೮೪ ॥ ಇನ್ನು ನಿನಗೆ ಸಪ್ತಾಹದ ಪ್ರಕಾರವನ್ನು ಹೇಳುವೆನು ಕೇಳು. ಶುಚಿರ್ಭೂತನಾಗಿ ಶಾಸ್ತ್ರ ರೀತಿಯಾಗಿ ಸಪ್ತಾಹ ಪಾರಾಯಣ ಮಾಡಲು ಬಹು ಪುಣ್ಯವುಂಟು. ॥ ೮೫ ॥ ಶುಭ ದಿವಸಗಳನ್ನು ನೋಡಿ ಸ್ನಾನ ಸಂಧ್ಯಾದಿ ನಿತ್ಯಕರ್ಮ ಮಾಡಿಕೊಂಡು ಪಾರಾಯಣ ಮಾಡುವ ಸ್ಥಳವನ್ನು ಸಾರಿಸಿ ರಂಗವಲ್ಯಾದಿಗಳಿಂದ ಅಲಂಕರಿಸಿ ॥ ೮೬ ॥ ಪುಸ್ತಕರೂಪಿಯಾದ ಶ್ರೀ ಗುರುವನ್ನು ಒಂದು ಶುದ್ಧ ಸ್ಥಳದಲ್ಲಿಟ್ಟು, ಸಂಕಲ್ಪ ಮಾಡಿ ಷೋಡಶೋಪಚಾರದಿಂದ ಬ್ರಾಹ್ಮಣರು ಸಹಿತವಾಗಿ ಪೂಜಿಸಬೇಕು. ॥ ೮೭ ॥ ಮೊದಲಿನ ದಿನದಿಂದಲೂ ಒಂದೇ ಸ್ಥಳದಲ್ಲಿ ಕೂತು ವ್ಯವಹಾರದ ಮಾತಾಡದೆ ಮೌನದಿಂದಿದ್ದು, ಇಂದ್ರಿಯ ನಿಗ್ರಹ ಮಾಡಿ ॥ ೮೮ ॥ ಸಪ್ತಾಹ ಮುಗಿಯುವ ವರೆಗೆ ಶೋಭಾಯಮಾನವಾದ ದೀಪವನ್ನಿಟ್ಟು, ದೇವರಿಗೆ ಬ್ರಾಹ್ಮಣರಿಗೆ ಮನೆಯಲ್ಲಿರುವ ಹಿರಿಯರಿಗೆ ನಮಿಸಿ ಪೂರ್ವ ಅಥವಾ ಉತ್ತರ ಮುಖವಾಗಿ ಕುಳಿತು ಪಾರಾಯಣವನ್ನು ಪ್ರಾರಂಭಿಸಬೇಕು. ॥ ೮೯ ॥ ಮೊದಲನೇ ದಿನ ೯ ಅಧ್ಯಾಯ, ೨ನೇ ದಿನ ೨೧ ಅಧ್ಯಾಯ, ೩ನೇ ದಿನ ೨೯ ಅಧ್ಯಾಯ, ೪ನೇ ದಿನ ೩೫ ಅಧ್ಯಾಯ ॥ ೯೦ ॥ ೫ನೇ ದಿನ ೩೮ ಅಧ್ಯಾಯ, ೬ನೇ ದಿನ ೪೩ ಅಧ್ಯಾಯ, ೭ನೇ ದಿನ ೫೩ ಅಧ್ಯಾಯ

ಅವತರಣಿಕಾ ಸಹಿತ ಓದಬೇಕು. ಈ ಪ್ರಕಾರ ಪಾರಾಯಣ ಮಾಡಬೇಕು. || ೯೧ || ನಿತ್ಯ ಪಾರಾಯಣ ಮುಗಿದ ಮೇಲೆ ಉತ್ತರಪೂಜೆ ಮಾಡಿ ಶ್ರೀ ಗುರುಗಳಿಗೆ ನಮಸ್ಕರಿಸಿ ಏನಾದರೂ ಉಪಹಾರ ಮಾಡಬೇಕು. || ೯೨ || ರಾತ್ರಿಯಲ್ಲಿ ಭೂಶಯನ ಮಾಡಿ ಶಾಸ್ತ್ರದಂತೆ ಶುಚಿಯಾಗಿರಬೇಕು. || ೯೩ || ಈ ಪ್ರಕಾರ ೭ ದಿವಸ ಮಾಡಿ ಬ್ರಾಹ್ಮಣ ಸುವಾಸಿನಿಯರಿಗೆ ಭೋಜನ ಮಾಡಿಸಿ ಅವರಿಗೆ ಯಥಾಶಕ್ತಿ ದಕ್ಷಿಣೆ ತಾಂಬೂಲಗಳನ್ನು ಕೊಟ್ಟು ಸಂತೋಷಪಡಿಸಬೇಕು. || ೯೪ || ಹೀಗೆ ಸಪ್ತಾಹ ಅನುಷ್ಠಾನ ಮಾಡಲು ಶ್ರೀ ಗುರುಗಳ ದರ್ಶನವಾಗುವದು. ಮತ್ತು ಭೂತ ಪ್ರೇತಾದಿಗಳ ಬಾಧೆಯು ನಾಶವಾಗಿ ಸುಖವಾಗುವದು. ಎಂದು ಸಿದ್ಧರು ಹೇಳಿದರು. || ೯೫ || ಆಗ ನಾಮಧಾರಕನು ಸಿದ್ಧರ ಚರಣಕ್ಕೆ ನಮಸ್ಕರಿಸಿ— ಸ್ವಾಮೀ ಗುರುರಾಯರೇ, ಈ ಬಾಲಕನ ಇಷ್ಟವನ್ನು ಪೂರ್ಣ ಮಾಡಿ ಕೃತಕೃತ್ಯನನ್ನಾಗಿ ಮಾಡಿದಿರಿ. ಎಂದು ಅಂದನು. || ೯೬ || ಇತ್ತ ಶ್ರೋತೃಗಳು ಶ್ರೀ ಗುರುಗಳ ಪಾದಕ್ಕೆ ನಮಸ್ಕಾರ ಮಾಡಿ— ಶ್ರೀ ಗುರುಗಳು ಬಹಳ ಆಶ್ಚರ್ಯಕರವಾಗಿ ಮಾಡಿದರು. ತಾಯಿಯು ಕೂಸಿಗೆ ಅಮೃತಕ್ಕೆ ಸಮಾನವಾದ ಮೊಲೆಹಾಲನ್ನು ಕುಡಿಸಿದಂತೆ ನಮಗೆ ಶ್ರೀ ಗುರುಚರಿತ್ರಾಮೃತವನ್ನು ಪಾನ ಮಾಡಿಸಿದರು. || ೯೭ || ಶ್ರೀ ಗುರುಚರಿತ್ರೆಯ ಪ್ರತಿಯೊಂದು ಅಧ್ಯಾಯದ 'ಓವಿ' ಎಂಬ ರತ್ನಮಾಲೆಯನ್ನು ಕಟ್ಟಿ ಮನಸ್ಸೆಂಬ ಕಂಠದಲ್ಲಿ ಧರಿಸಿದರೆ ಇಷ್ಟಾರ್ಥಗಳು ಸಿದ್ಧಿಸುವವು || ೯೮ || ನಾಮಧಾರಕನು ಸಿದ್ಧರ ವಚನವೆಂಬ ಖನಿಯೊಳಗಿಂದ ೫೨ ಅಧ್ಯಾಯಗಳೆಂಬ ರತ್ನಗಳನ್ನು ತೆಗೆದು ಕಡಾಯಿಯಲ್ಲಿ ತುಂಬಿ ತಂದು ಯಾಚಕ ಭಕ್ತರನ್ನು ಆನಂದಪಡಿಸಿದನು. || ೯೯ || ಅಥವಾ ಸಿದ್ಧರೆಂಬ ಕಲ್ಪತರುವಿಗೆ ನಾಮಧಾರಕನು ಕೈ ಒಡ್ಡಿ ಭಕ್ತ ಜನರ ಸಲುವಾಗಿ ಪರೋಪಕಾರ ಮಾಡಿದನು. || ೧೦೦ || ಮೇಘವು ಚಾತಕದ ಬಾಯಿಯಲ್ಲಿ ಮೊದಲು ಒಂದೊಂದೇ ಹನಿಯನ್ನು ಹಾಕಿ ಹಿಂದಿನಿಂದ ಅಪಾರವಾಗಿ ವರ್ಷಿಸುವಂತೆ ಸಿದ್ಧರೆಂಬ ಮೇಘವು ಬಾಯಿ ತಕ್ಕೊಂಡು ಕೂತ ನಾಮಧಾರಕನೆಂಬ ಚಾತಕನಿಗೆ ಮೊದಲು ಸ್ವಲ್ಪ ಸ್ವಲ್ಪ ಕಥೆಯನ್ನು ಹೇಳಿ ಹಿಂದಿನಿಂದ ವಿಸ್ತಾರವಾಗಿ ಗುರುಚರಿತ್ರೆಯನ್ನು ಹೇಳಿ ಆನಂದಪಡಿಸಿದರು. || ೧೦೧ || ಆದರಿಂದ ಭಕ್ತರು ಹಾಗು ಅಭಕ್ತರಿಗೂ ಸಹ ತನ್ನಿಂದ ತಾನೇ

ಅಮೃತಪಾನದ ಲಾಭವಾಯಿತು. ದುಷ್ಟ ಜನರ ಅಂತಃಕರಣಕ್ಕೆ ಕಲ್ಲು ಬಿದ್ದಂತಾಯಿತು. || ೧೦೨ || ಎಲೈ ನಾರಾಯಣನೇ ನಮಗೆ ಶ್ರೀ ಗುರುಮೂರ್ತಿಯ ಚರಣಗಳನ್ನು ಹಿಡಿಯುವಂತೆ, ಸಿದ್ಧರಿಗೆ ವಂದಿಸುವಂತೆ ಮತ್ತು ನಾಮಧಾರಕನಿಗೆ ವಂದಿಸುವಂತೆ ಮನಸ್ಸು ಕೊಡು. || ೧೦೩ || ಎಲೈ ಗುರುರೂಪಿಯಾದ ನಾರಾಯಣನೇ, ದೀನ ರಕ್ಷಕನೇ, ವಿಶ್ವಂಬರನೇ ನಿನ್ನಿಷ್ಟಕ್ಕೆ ನೀನೇ ನಿನ್ನ ಗುರ್ತು ತೋರಿಸಿ ಗುರು-ಶಿಷ್ಯ ರೂಪದಿಂದ ಕ್ರೀಡಿಸುವಿ ಎಂದು ಅಂದರು. || ೧೦೪ ||

ಇತಿ ಶ್ರೀ ಗುರುಚರಿತ್ರ ಪರಮ ಕಥಾಕಲ್ಪತರೌ ಶ್ರೀ ನರಸಿಂಹಸರಸ್ವತ್ಯುಪಾಖ್ಯಾನೇ ಸಿದ್ಧನಾಮಧಾರಕ ಸಂವಾದೇ ದ್ವಿಪಂಚಾಶತ್ ಅಧ್ಯಾಯಸಾರೇ ಅವತರಣಿಕಾನಾಮ ತ್ರಿಪಂಚಾಶತ್ತಮೋಽಧ್ಯಾಯಃ || ೫೩ || ಶ್ರೀ ದತ್ತಾತ್ರೇಯಾರ್ಪಣಮಸ್ತು ||

— ೫೩ನೇ ಅಧ್ಯಾಯ ಸಮಾಪ್ತ —

: ಶ್ರೀ ಗುರುಚರಿತ್ರ ಸಪ್ತಾಹ ಸಮಾಪ್ತಂ :